॥ ಶ್ರೀಃ ॥

'ಶ್ರೀಶಸ್ತೇ ಸುಶ್ರಿಯಂ ದದ್ಯಾತ್'

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತಾ

# ಯುಕ್ತಿಮಲ್ಲಿಕಾ

ಶ್ರೀ ಶ್ರೀ ಸುರೋತ್ತಮತೀರ್ಥಶ್ರೀಪಾದವಿರಚಿತಾ

## ಭಾವವಿಲಾಸಿನೀ

ಸಂಸ್ಕೃತ ವ್ಯಾಖ್ಯಾನ ಹಾಗೂ ಸಮಗ್ರ ಕನ್ನಡಾನುವಾದ

## ಫಲಸೌರಭಮ್ - ೫

## ಸಂಪುಟ - ೬

ಅನುಗ್ರಹ :

**ಪರಮಪೂಜ್ಯ ಶ್ರೀ ಶ್ರೀ ವಿಶ್ವವಲ್ಲಭತೀರ್ಥಶ್ರೀಪಾದರು**

ಪ್ರಥಮಪರ್ಯಾಯ. ಸೋದೆ ಶ್ರೀವಾದಿರಾಜಮಠ, ಉಡುಪಿ

ಸಂಪಾದಕರು :

ಪಿ. ಎಸ್. ಶೇಷಗಿರಿ ಆಚಾರ್ಯ

ಪ್ರಕಾಶಕರು :

ಶ್ರೀಮದ್ವೃಂದಾವನಾಚಾರ್ಯ ಸಂಶೋಧನ ಹಾಗೂ ಪ್ರಕಾಶನಕೇಂದ್ರ

ಸೋದೆ ಶ್ರೀವಾದಿರಾಜ ಮಠ, ರಥಬೀದಿ, ಉಡುಪಿ.

ಶ್ರೀಭಾವಿಸಮೀರವಾದಿರಾಜಭಗವತ್ಪಾದಾಚಾರ್ಯವಿರಚಿತ ಯುಕ್ತಿಮಲ್ಲಿಕಾ-
ಶ್ರೀ ಸುರೋತ್ತಮತೀರ್ಥವಿರಚಿತ ಭಾವವಿಲಾಸಿನೀ ವ್ಯಾಖ್ಯಾನ ಮತ್ತು ಕನ್ನಡ ಅನುವಾದ ಸಹಿತ
**ಫಲಸೌರಭ - ಭಾಗ ೧.**



ಪುಟಗಳು - LXIV + 431 = 495

ಸಂಪುಟ - ೯(೧೦)

ಮುದ್ರಿತ ಪ್ರತಿಗಳು - ೧೦೦೦

ಪ್ರಕಾಶಕರು - ಶ್ರೀಮದ್ ವೃಂದಾವನಾಚಾರ್ಯ ಸಂಶೋಧನ
ಹಾಗೂ ಪ್ರಕಾಶನ ಕೇಂದ್ರ,
ಸೋದೆ ಶ್ರೀವಾದಿರಾಜಮಠ, ರಥಬೀದಿ, ಉಡುಪಿ.

ಪುಟ ಸಂಯೋಜನೆ : ಬದರಿನಾರಾಯಣಾಚಾರ್ಯ ಎಸ್. ಕಡ್ಡಿ

ಅಕ್ಷರ ಜೋಡಣೆ : ಕೆ. ಗಣಪತಿ ಭಟ್
ಶ್ರೀಮತಿ ನಾಗಲತಾ (ಸುಧಾ),
ಎಂ. ಶರತ್ ಚಂದ್ರ

ಮುದ್ರಕರು : ಪವನ್ ಗ್ರಾಫಿಕ್ಸ್ ಮತ್ತು ಪ್ರಿಂಟರ್ಸ್
ಮೈಸೂರು. ✆ : 7899779255

ಗ್ರಂಥಪ್ರಾಪ್ತಿ : ಸೋದೆ ಶ್ರೀವಾದಿರಾಜಮಠ, ಉಡುಪಿ.

# ಉತ್ತರಕಲ್ಪಸಮೀರರ ಪರಾಕು



★ ''ಉದ್ದಂಡೋದ್ದಂಡ, ಪರವಾದಿ ಪ್ರಚಂಡ, ಗಂಡಭೇರುಂಡ, ಮಾಯಿಮತ ವಿಧ್ವಂಸಕ, ಮಧ್ವಮತೋದ್ಧಾರಕ, ಸುಧಾರಸ ಆಸ್ವಾದ, ದಿಗ್ವಿಜಯೀಕೃತ ಆಸೇತುಮರ್ಯಾದ, ಭಾವಿಹನುಮಚ್ಚಕ್ರವರ್ತಿನ್, ಗುರುಸಾರ್ವಭೌಮ ಹಂಸಾರೂಢವಾದಿರಾಜ ಭೋ ಪರಾಕ್!''

★ ''ಮಧ್ವಾಗಮ ಸಿದ್ಧಾಗಮ. ಈ ಮಧ್ವಮತವೆ ಸಕಲಮತಕೆ ಮೇಲೆನಿಸಿದ ಮತ. ಈ ಮಧ್ವಮತವನು ಪಿಡಿದು ಅಬದ್ಧಮತವನು ತ್ಯಜಿಸಿ ನಡೆದರೆ (ಜಯಿಸಿದರೆ) ಮುಕ್ತಿಗೈವುದಾ ಸುಕೃತವು (ಸುಕೃತಂ) ಒಂದು ಕ್ಷಣದಲ್ಲಿ ವಾದಿರಾಜರ ದ್ವಂದ್ವಪದವನು ಭಜಿಸಿದವರಿಗೆ ಬೆಂದು ಹೋಗ್ವುದು ಪೂರ್ವಜನ್ಮದ ದುರಿತಕಾನನವು; ಈ ಮಂದಮತಿಗಳು ಬಲ್ಲರೇ ಗೋವಿಂದ ಭಕ್ತಮಹಿಮೆಯನು ಪುರಂದರಾದಿಗಳು ಅರಿವರಲ್ಲದೇ ಮಿಕ್ಕವರರಿಯಬಹುದೇ! ಪಾರಮೇಷ್ಠಿ ಪದಾಧಿಕಾರಿ ಋಜುಗಣಸ್ಥ (ಪದಸ್ಥ) ಗುರುರಾಜ ಪಟ್ಟಭದ್ರವ್ಯಾಖ್ಯಾನಸಿಂಹಾಸನಾಧೀಶ್ವರ ಅಜ್ಞಾನತಿಮಿರಮಾರ್ತಾಂಡ ಸುಜ್ಞಾನ ತೇಜೋಮಯ!''



# ರಾಜರ ಸಂದೇಶ

## ಸೋऽಹಂ ಎನ್ನದಿರಿ

ಯೋ ಸೋಹಂಭಾವನಾಮೂಲಾಸ್ತೇ
ಬಾಲಾಃ ಕಿಲ ಸರ್ವಶಃ ।
ವಂಚನಂ ಕಿಲ ತತ್‌ಜ್ಞಾನಂ
ಕತ್ಥನಂ ಕಿಲ ತದ್ವಚಃ ॥

ಯಾರು ಅಹಂಕಾರ ಮೂಲಕವಾದ ನಾನೇ ಬ್ರಹ್ಮನೆಂಬ ಭಾವನೆಯನ್ನು ಹೊಂದಿರುತ್ತಾರೆಯೋ ಅವರೆಲ್ಲರೂ ಖಲರಷ್ಟೆ. ಅವರ ಜ್ಞಾನವು ವಂಚನೆಯಷ್ಟೆ! ಅವರ ಮಾತುಗಳು ನಿಂದನೀಯ ಮಾತುಗಳಷ್ಟೆ!

## ಸೂತ್ರವಿರೋಧಿಮತಗಳ ನಂಬದಿರಿ

ಸೂಕ್ತಿರತ್ನಸ್ವಭಾವಾಭಾ ಪೂಜ್ಯಾ-
ತ್ಯಾಜ್ಯಾ ನ ಕೋವಿದೈಃ ।
ಗುಣೇಮಣೇರ್ಹಿ ಮಾತ್ಸರ್ಯಂ-
ನಾರ್ಯೈಃ ಕಾರ್ಯಂ ಕದಾಚನ ॥

ಸಹಜವಾದ ಸೂಕ್ತಿರತ್ನಗಳೆಂಬ ಸೊಬಗಿನ ಗ್ರಂಥ ಯುಕ್ತಿಮಲ್ಲಿಕಾ. ಇದು ಪೂಜ್ಯವೇ ವಿನಾ ತ್ಯಾಜ್ಯವಲ್ಲ. ಗುಣಮಣಿಯ ಸೊಬಗಿನಲ್ಲಿ ಮಾತ್ಸರ್ಯವು ಆರ್ಯರಿಗೆ ಎಂದೂ ಶೋಭಿಸುವುದಿಲ್ಲ.




# ಪ್ರಕಾಶಕರ ನುಡಿ

ಅನೇಕ ವೇದಮಂತ್ರಗಳ ವ್ಯಾಖ್ಯಾನವನ್ನು ರಾಜರು ಈ ಫಲಸೌರಭದಲ್ಲಿ ನಡೆಸಿಕೊಟ್ಟಿರುತ್ತಾರೆ. ವಿನೂತನವಾಗಿ ವೇದಗಳಿಗೆ ಸುರೋತ್ತಮತೀರ್ಥರು ವ್ಯಾಖ್ಯಾನಿಸಿದ್ದಾರೆ. ಇದೆಲ್ಲವೂ ರಾಜರು ಅನುಗ್ರಹದಿಂದಲೇ ಬರೆದದ್ದು ಎಂದು ತಿಳಿಸಿದ್ದಾರೆ. ಬಹುತೇಕ ಐದುಸೌರಭಗಳಲ್ಲಿ ಮೂಲದಲ್ಲಿ ಅನೇಕ ಭಾಗಗಳು ಬಿಟ್ಟುಹೋಗಿರುವ ಸೌರಭ ಫಲಸೌರಭ ಎನಿಸಿದೆ. ಫಲಸೌರಭದ ಪಾಠಶೋಧನೆಯಲ್ಲಿ ಬಹಳ ಶ್ರಮವೇ ಆಗಿದೆ. ಇನ್ನು ಎರಡು ಪ್ರತಿಗಳು ಸಿಕ್ಕಿದ್ದಲ್ಲಿ ವಿಶೇಷವಾಗಿ ಶೋಧಿಸ ಬಹುದಾಗಿತ್ತು. ಫಲಸೌರಭದ ಪೂರ್ಣ ಟೀಕೆಯು ನಮಗೆ ಉಪಲಬ್ಧವಾಗಿಲ್ಲ. ಸಿಕ್ಕಿರುವಷ್ಟು ಭಾಗವನ್ನು ಸರಿಯಾಗಿ ಶೋಧಿಸಿದ್ದೇವೆ. ಗುಣಸೌರಭ, ಶುದ್ಧಿಸೌರಭ, ವಿಶ್ವಸೌರಭಗಳು ಪರಿಪೂರ್ಣವಾಗಿ ಉಪಲಬ್ಧವಾಗಿವೆ. ಸುಮಾರು 500 ಶ್ಲೋಕಗಳನ್ನು ಬಿಟ್ಟು ಉಳಿದಂತೆ ಎಲ್ಲ ಶ್ಲೋಕಗಳೂ ಶೋಧಿಸಲ್ಪಟ್ಟಿದೆ. ಭೇದಸೌರಭ, ಫಲಸೌರಭಗಳು ಪೂರ್ಣವಾಗಿ ಉಪಲಬ್ಧಿಯಿಲ್ಲ. ವೇದವ್ಯಾಖ್ಯಾನಗಳು ಅನೇಕಾಂಶಗಳು ಮುದ್ರಿತವಾದ ಪುಸ್ತಕಗಳಲ್ಲಿ ಬಿಟ್ಟುಹೋಗಿದ್ದಾವೆ. ಸುಮಾರು 10 ಪುಟಕ್ಕೂ ಅಧಿಕವಾದ ವ್ಯಾಖ್ಯಾನವನ್ನು ಮೂಲಪ್ರತಿಯ ಆಧಾರದಲ್ಲಿ ಸೇರಿಸಿದ್ದೇವೆ. ಓದುಗರು ಇವುಗಳನ್ನು ಅಲ್ಲಲ್ಲಿ ಗಮನಿಸಬಹುದು. ಫಲಸೌರಭದಲ್ಲಿ ಬಿಟ್ಟುಹೋದ ಕೆಲವು ಅನುವಾದದ ಭಾಗಗಳನ್ನು ಪರಮಪೂಜ್ಯ ಶ್ರೀ ಶ್ರೀ ವಿಶ್ವನಂದನತೀರ್ಥರು (ಹನಸೋಗೆ-ಮಧ್ವಮಠ) ಅನುವಾದಿಸಿಕೊಟ್ಟಿದ್ದಾರೆ. ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಸಮಗ್ರ ಫಲಸೌರಭದ ಪರಿಶೀಲನೆ ನಡೆಸಿಕೊಟ್ಟಿದ್ದಾರೆ. ವಿದ್ವಾನ್ ತುಮಕೂರು ರಮೇಶಾಚಾರ್ಯರು ಫಲಸೌರಭದ ರಾಜರ ಮಾತಿನಲ್ಲಿರುವ ವೈಶಿಷ್ಟ್ಯಗಳನ್ನು ಅರ್ಥಪೂರ್ಣವಾಗಿ ಸಂಗ್ರಹಿಸಿಕೊಟ್ಟಿದ್ದಾರೆ. ಇದರಂತೆ ಶ್ರೀಯುತ ವ್ಯಾಸಾಚಾರ್ಯ, ಉಡುಪಿ ಇವರು ವಾದಿರಾಜರ ಋಜುತ್ವಕ್ಕೆ ಸಂಬಂಧಿಸಿದ ಪ್ರಮಾಣ ವಾಕ್ಯಗಳನ್ನು ಸಂಗ್ರಹಿಸಿಕೊಟ್ಟಿದ್ದಾರೆ. ಈ ಪ್ರತಿಶೋಧನೆಯಲ್ಲಿ ಅನುವಾದದ ಕೆಲಸದಲ್ಲಿ ಸಂಶೋಧನೆಯಲ್ಲಿ ಭಾಗವಹಿಸಿದ ಎಲ್ಲ ವಿದ್ವಾಂಸರಿಗೂ ಕೃತಜ್ಞತೆಗಳು.

ಪ್ರಕಾಶರು
**ಶ್ರೀಮದ್‌ವೃಂದಾವನಾಚಾರ್ಯ ಸಂಶೋಧನ**
**ಹಾಗೂ ಪ್ರಕಾಶನ ಕೇಂದ್ರ,**
ಸೋದೆ ಶ್ರೀವಾದಿರಾಜಮಠ,
ರಥಬೀದಿ, ಉಡುಪಿ.

|| ಶ್ರೀ ವಾದಿರಾಜಗುರುಭ್ಯೋ ನಮಃ ||

# ಉಪೋದ್ಘಾತ

ಫಲಸೌರಭದಲ್ಲಿ ಮೋಕ್ಷರೂಪವಾದ ಫಲಕ್ಕೆ ಅಂತರಂಗಸಾಧನಗಳಾದ ಶ್ರವಣ-ಮನನ-ನಿದಿಧ್ಯಾಸನ-ಅಪರೋಕ್ಷಜ್ಞಾನ-ಭಕ್ತಿ-ಭಗವತ್ಪ್ರಸಾದಗಳನ್ನು ಉಪೋದ್ಘಾತರೂಪವಾಗಿ ನಿರೂಪಿಸಿ ಜ್ಞಾನಸ್ವಭಾವದಿಂದಲೇ ಮೋಕ್ಷವೆಂಬ ಪರಪ್ರಕ್ರಿಯೆಯನ್ನು ನಿರಾಕರಿಸಿ ಭಗವತ್ಪ್ರಸಾದವೇ ಮೋಕ್ಷಕ್ಕೆ ಮುಖ್ಯಕಾರಣವೆಂದು ಸಮರ್ಥಿಸುತ್ತಾರೆ.

## ಜ್ಞಾನಸ್ವಭಾವದಿಂದಲೇ ಅಜ್ಞಾನನಿವೃತ್ತಿ ಇಲ್ಲ :

ಭಾವರೂಪಾಜ್ಞಾನವು ಮನೋವೃತ್ತಿಗೆ ಪ್ರತಿಬಂಧಕವಲ್ಲದಿದ್ದರೆ ಯಾವಾಗಲೂ ಮನಸ್ಸಿಗೆ ಬ್ರಹ್ಮಸಾಕ್ಷಾತ್ಕಾರವಾಗಲಿ ಎಂಬ ಆಪತ್ತಿಯು ಬರುತ್ತದೆ. ಕೊನೆಗಾದರೂ ಮನಸ್ಸಿನಿಂದಲೇ ಬ್ರಹ್ಮಸಾಕ್ಷಾತ್ಕಾರವು ಬರುವುದಷ್ಟೆ? ಆದ್ದರಿಂದ ಮನಸ್ಸಿಗೆ ಯೋಗ್ಯವಾದ ವಸ್ತುವಿನ ಸಾಕ್ಷಾತ್ಕಾರವು ಈಗ ಇಲ್ಲದಿರುವುದು ಪ್ರತಿಬಂಧ ಪ್ರಯುಕ್ತವಾಗಿ ಎಂದು ಹೇಳಬೇಕು. ಮನಸ್ಸಿನಿಂದ ಈಗಲೂ ಪರೋಕ್ಷಜ್ಞಾನವು ಬರುವುದರಿಂದಲೂ 'ಮನಸೇವೈನಂ ಪಶ್ಯತಿ' ಎಂಬ ಶ್ರುತಿ ಇರುವುದರಿಂದಲೂ ಅಜ್ಞಾನವು ಮನಸ್ಸಿನಿಂದ ಉಂಟಾಗುವ ಸಾಕ್ಷಾತ್ಕಾರಕ್ಕೇ ಪ್ರತಿಬಂಧಕವೆಂದು ಹೇಳಬೇಕು. ಆಗ ಪ್ರತಿಬಂಧನಿವೃತ್ತಿಗಾಗಿ ಶ್ರವಣಾದಿಗಳು ಅಪೇಕ್ಷಿತವಾಗುತ್ತವೆ. ಮನಸ್ಸಿಗೆ ಹೀಗೆ ಪ್ರತಿಬಂಧವನ್ನು ಒಪ್ಪಿದರೂ ಅನ್ಯೋನ್ಯಾಶ್ರಯವು ಬರುತ್ತದೆ. ಏಕೆಂದರೆ ಪ್ರತಿಬಂಧ ನಿವೃತ್ತಿಯಾದ ಮೇಲೆ ಸಾಕ್ಷಾತ್ಕಾರವು ಉಂಟಾಗಬೇಕು. ನೀನಾದರೂ ಸಾಕ್ಷಾತ್ಕಾರದಿಂದಲೇ ಪ್ರತಿಬಂಧನಿವೃತ್ತಿಯನ್ನು ಅಂಗೀಕರಿಸುತ್ತೀಯೆ. ಸಾಕ್ಷಾತ್ಕಾರಕ್ಕೆ ಅಜ್ಞಾನವು ಪ್ರತಿಬಂಧಕವಾಗಿರುವುದರಿಂದ ಸಾಕ್ಷಾತ್ಕಾರವೇ ಹೇಗೆ ಅಜ್ಞಾನವನ್ನು

ನಿವೃತ್ತಿಮಾಡಲು ಸಾಧ್ಯ? ಆದ್ದರಿಂದ ಜ್ಞಾನಸ್ವಭಾವದಿಂದಲೇ ಅಜ್ಞಾನ ನಿವೃತ್ತಿರೂಪವಾದ ಮೋಕ್ಷವುಂಟಾಗುವುದೆಂದು ಹೇಳಲು ಸಾಧ್ಯವಿಲ್ಲ. ರಾಜನಿಂದ ಉಂಟಾದ ನಿಗಡಬಂಧವು ರಾಜನ ಸಾಕ್ಷಾತ್ಕಾರದಿಂದ ನಿವೃತ್ತವಾಗುವುದಿಲ್ಲ. ಆದರೆ ರಾಜನು ಪ್ರಸನ್ನನಾಗಿ ನಿಗಡಬಂಧವನ್ನು ಪರಿಹರಿಸಿದರೆ ಅನಂತರವೇ ರಾಜಸಾಕ್ಷಾತ್ಕಾರವುಂಟಾಗುತ್ತದೆ. ಆದ್ದರಿಂದ ಪ್ರಕೃತದಲ್ಲಿಯೂ ಅಜ್ಞಾನರೂಪವಾದ ಪರದೆಯನ್ನು ತೆಗೆಯಲು ಪ್ರಭುವಾದ ಭಗವಂತನನ್ನೇ ಆಶ್ರಯಿಸಬೇಕು. ಜ್ಞಾನಸ್ವಭಾವದಿಂದಲೇ ಮೋಕ್ಷವೆಂಬುದು ಅಜ್ಞಾನದ ಪ್ರತಿಬಂಧಕಸ್ವಭಾವಕ್ಕೇ ವಿರುದ್ಧವಾದುದು. ಶ್ರವಣ ಮನನ ಧ್ಯಾನಗಳು ಪರೋಕ್ಷಜ್ಞಾನರೂಪವಾದುವುಗಳು. ಅವುಗಳಿಗೆ ಅಜ್ಞಾನಪ್ರತಿಬಂಧವಿಲ್ಲ. ಆದ್ದರಿಂದ ಪ್ರಯತ್ನಪೂರ್ವಕವಾಗಿ ಪರೋಕ್ಷಜ್ಞಾನವನ್ನು ಸಂಪಾದಿಸಿದರೆ ಅದರಿಂದ ಪ್ರಸನ್ನನಾದ ಭಗವಂತನು ತಾನೇ ಅಜ್ಞಾನದ ಪರದೆಯನ್ನು ತೆಗೆದು ತನ್ನ ದರ್ಶನವನ್ನು ಕೊಡುತ್ತಾನೆ. 'ಜಯ ಜಯ ಜಹ್ಯಜಾಂ' ಎಂಬ ಶ್ರುತಿಯೂ ಭಗವತ್ಪ್ರಸಾದದಿಂದಲೇ ಮೋಕ್ಷವನ್ನು ಹೇಳುತ್ತದೆ. ಆದ್ದರಿಂದ ಜ್ಞಾನ ಸ್ವಭಾವದಿಂದಲೇ ಮೋಕ್ಷವೆಂಬುದು ಎಂದಿಗೂ ಕೂಡುವುದಿಲ್ಲ.

ಪ್ರಸನ್ನನಾದ ಭಗವಂತನು ಅಜ್ಞಾನದ ಪರದೆಯನ್ನು ತೆಗೆಯುವುದರಲ್ಲಿಯೂ ಒಂದು ವಿಶೇಷವಿದೆ. ಜೀವನಿಗೆ ಜೀವಾಚ್ಛಾದಿಕಾ ಮತ್ತು ಪರಮಾಚ್ಛಾದಿಕಾ ಎಂಬ ಎರಡು ಆವರಣಗಳು ಇವೆ. ತನ್ನ ಸಾಕ್ಷಾತ್ಕಾರವಾದಾಗ ಭಗವಂತನು ಜೀವಾಚ್ಛಾದಿಕೆಯನ್ನು ನಾಶಮಾಡುತ್ತಾನೆ. ಪರಮಾಚ್ಛಾದಿಕೆಯನ್ನು ನಾಶಮಾದುವುದಿಲ್ಲ. ಸ್ವಲ್ಪ ಸರಿಸುತ್ತಾನೆ. ಪರಮಾಚ್ಛಾದಿಕೆಯು ಜೀವನಿಗೆ ಪರಮಾತ್ಮನ ಸಾಕ್ಷಾತ್ಕಾರ ಉಂಟಾಗುವುದಕ್ಕೆ ಪ್ರತಿಬಂಧಕವಾಗಿರುವುದು. ಅದು ಅಲ್ಲಿಯೇ ಇರುವುದರಿಂದ ಪರಮಾತ್ಮನು ತನ್ನ ಇಚ್ಛೆಯಿಂದ ಒಮ್ಮೊಮ್ಮೆ ಪುನಃ ಪರಮಾಚ್ಛಾದಿಕೆಯಿಂದ ಜೀವನನ್ನು ಮುಚ್ಚುತ್ತಾನೆ. ಆಗ ಪರಮಾತ್ಮನ ಸಾಕ್ಷಾತ್ಕಾರವು ಉಂಟಾಗುವುದಿಲ್ಲ. ಹೀಗೆ ಪರೋಕ್ಷಜ್ಞಾನವಾದ ಮೇಲೂ ಪರಮಾತ್ಮನು ಕೆಲವೊಮ್ಮೆ ದೃಶ್ಯನಾಗುತ್ತಾನೆ. ಕೆಲವೊಮ್ಮೆ ದೃಶ್ಯನಾಗುವುದಿಲ್ಲ. ಈ ಅವಸ್ಥೆಯೇ ಜೀವನ್ಮುಕ್ತಿ ಎಂದು ಕರೆಯಲ್ಪಡುತ್ತದೆ.

ಜ್ಞಾನಸ್ವಭಾವದಿಂದಲೇ ಅಜ್ಞಾನನಿವೃತ್ತಿರೂಪವಾದ ಮೋಕ್ಷ ಉಂಟಾಗುವುದಾದರೆ ಅಪರೋಕ್ಷಜ್ಞಾನವು ಬಂದ ತಕ್ಷಣ ಅಜ್ಞಾನವೂ ಅಜ್ಞಾನ

ಕಾರ್ಯವೂ ನಾಶಹೊಂದುವುದರಿಂದ ಜೀವನ್ಮುಕ್ತಿದಶೆಯೇ ಅನುಪಪನ್ನವಾಗುತ್ತದೆ. ಆಗಲೇ ಮೋಕ್ಷವುಂಟಾಗಲಿ ಎಂಬ ಆಪತ್ತಿ ಬರುತ್ತದೆ. ಆದರೆ ಜೀವನ್ಮುಕ್ತಿದಶೆಯನ್ನು ನೀನೂ ಅಂಗೀಕರಿಸುತ್ತೀಯೆ. ಆದ್ದರಿಂದ ಮಧ್ಯದಲ್ಲಿ ಸ್ವತಂತ್ರನಾದ ಪ್ರಭುವನ್ನು ಒಪ್ಪಿದರೆ ಮಾತ್ರ ಅವನ ಇಚ್ಛೆಗೆ ಅನುಗುಣವಾಗಿ ಜೀವನ್ಮುಕ್ತಿಯನ್ನು ಕೂಡಿಸಬಹುದು. ಮೋಕ್ಷದಲ್ಲಿ ಮಾತ್ರ ಈ ಪರಮಾಚ್ಛಾದಿಕೆಯನ್ನು ಸಂಪೂರ್ಣವಾಗಿ ಪರಿಹರಿಸುತ್ತಾನೆ. ಆದ್ದರಿಂದ ಅನಂತರ ಯಾವಾಗಲೂ ಪರಮಾತ್ಮನ ಸಾಕ್ಷಾತ್ಕಾರವಿರುತ್ತದೆ.

## ಶಬ್ದದಿಂದ ಅಪರೋಕ್ಷಜ್ಞಾನವುಂಟಾಗುವುದಿಲ್ಲ :

ಮಾಯಾವಾದಿಗಳು ಶ್ರವಣವೇ ಸಾಕ್ಷಾತ್ಕಾರಕ್ಕೆ ಪ್ರಧಾನವಾದ ಕಾರಣ. ಅದರಿಂದಲೇ ಸಾಕ್ಷಾತ್ಕಾರವು ಉಂಟಾಗುತ್ತದೆ. ಸಾಕ್ಷಾತ್ಕಾರದನಂತರ ಮನನ ನಿಧಿಧ್ಯಾಸನಗಳು ಅಸಂಭಾವನಾನಿವೃತ್ತಿ ಮತ್ತು ವಿಪರೀತ ಸಂಭವನಾನಿವೃತ್ತಿಯನ್ನು ಮಾಡುತ್ತವೆ ಎಂದು ಹೇಳುತ್ತಾರೆ. ಅದು ಸರಿಯಲ್ಲ. ಶ್ರವಣವೆಂದರೆ ಶ್ರುತಿಗಳಿಗೆ ಬ್ರಹ್ಮನಲ್ಲಿ ತಾತ್ಪರ್ಯನಿಶ್ಚಯ. ತಾತ್ಪರ್ಯ ನಿಶ್ಚಯರೂಪವಾದ ಜ್ಞಾನವಾದರೂ ಸ್ಥಿರವಲ್ಲ ತ್ರಿಕ್ಷಣಾವಸ್ಥಾಯಿ. ಆ ಜ್ಞಾನ ಬಂದ ಕೂಡಲೇ ಸಾಕ್ಷಾತ್ಕಾರವಾಗುವುದಾದರೆ ಮನನಧ್ಯಾನಗಳಿಗೆ ಅಂತ್ಯವೇ ಕೂಡುವುದಿಲ್ಲ. ಏಕೆಂದರೆ ಪೂರ್ವಭಾವಿಯಾದ ಶ್ರವಣವೇ ತನ್ನ ಫಲವನ್ನು ಉಂಟುಮಾಡಿದೆ. ಅದರಲ್ಲಿ ಮನನ ನಿಧಿಧ್ಯಾಸನಗಳಿಗೆ ಯಾವ ಕೃತ್ಯವೂ ಇಲ್ಲ. ಮತ್ತು ಮನನನಿಧಿಧ್ಯಾಸನಗಳಿಗೆ ಬೇರೆ ಫಲವೇ ಇದೆ. ಆದ್ದರಿಂದ 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯಲ್ಲಿ ಹೇಳಿದ ಅಂಗಾಂಗಿಭಾವವು ಅನುಪಪನ್ನವಾಗುತ್ತದೆ.

ಶ್ರವಣದಿಂದಲೇ ಸಾಕ್ಷಾತ್ಕಾರವುಂಟಾಗುವುದೆಂಬ ಪಕ್ಷದಲ್ಲಿ ಈ ದೋಷವನ್ನು ಹೇಳಿದ್ದಾಯಿತು. ಆದರೆ ವಸ್ತುತಃ ಶ್ರವಣದಿಂದ ಸಾಕ್ಷಾತ್ಕಾರವೇ ಉಂಟಾಗುವುದಿಲ್ಲ. ಸಾಕ್ಷಾತ್ಕಾರಕ್ಕೆ ಯೋಗ್ಯವಾದ ಅರ್ಥದಲ್ಲಿ ಪ್ರಯೋಗಿಸಲ್ಪಟ್ಟ ಶಬ್ದವು ಸಾಕ್ಷಾತ್ಕಾರವನ್ನೇ ಉಂಟುಮಾಡುವುದಾದರೆ 'ಗೇಹೇ ಘಟಃ' ಎಂಬ ಶಬ್ದದಿಂದ ಮನೆಯ ಹೊರಗಿದ್ದವನಿಗೂ ಮನೆಯೊಳಗಿರುವ ಘಟದಜ್ಞಾನವು ಬರಬೇಕಾದೀತು. ಪ್ರತ್ಯಕ್ಷವಾಗಿರುವ ವಸ್ತುವಿನಲ್ಲಿ ಪ್ರಯೋಗಿಸಿದ ಶಬ್ದವು ಸಾಕ್ಷಾತ್ಕಾರವನ್ನೇ ಉಂಟುಮಾಡುತ್ತದೆ ಎಂದಾದರೆ ಆಗ ಪ್ರತ್ಯಕ್ಷದಿಂದಲೇ ವಸ್ತುವು

ಸಿದ್ಧವಾಗಿರುವಾಗ ಶಬ್ದವು ವ್ಯರ್ಥವೇ ಆಗುತ್ತದೆ. 'ದಶಮಸ್ತ್ವಮಸಿ' ಎಂಬ ವಾಕ್ಯಶ್ರವಣದಿಂದಲೂ ಶಾಬ್ದಬೋಧವೇ ಉಂಟಾಗಿ ಮನಸ್ಸಿನಲ್ಲಿ ಅವಧಾನವುಂಟಾಗುತ್ತದೆ. ಅನಂತರ 'ಅಹಂ ದಶಮಃ' ಎಂಬ ಮಾನಸಪ್ರತ್ಯಕ್ಷವು ಉಂಟಾಗುತ್ತದೆ. ತ್ವಂ ಎಂಬ ಶಬ್ದದಿಂದ ಅಹಂತ್ವಪ್ರಕಾರಕವಾದ ಬೋಧವು ಎಂದೂ ಬರುವುದಿಲ್ಲ. ಆದ್ದರಿಂದ ಶಕ್ತಿಗ್ರಹಕ್ಕೆ ಅನುಗುಣವಾಗಿ ತ್ವಂ ಪದದಿಂದ ತ್ವಂತ್ವಪ್ರಕಾರಕ ಬೋಧವೇ ಬರುತ್ತದೆ. ಶಕ್ತಿಗ್ರಹವೇ ಇಲ್ಲದವನಿಗೆ 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಯಾವ ಬೋಧವೂ ಬರುವುದಿಲ್ಲ.

## ಶ್ರವಣವು ಮನನಕ್ಕೇ ಕಾರಣ :

ಹೀಗೆ ಶಬ್ದದಿಂದ ಪ್ರತ್ಯಕ್ಷಾತ್ಮಕಜ್ಞಾನವುಂಟಾಗುವುದು ಲೋಕಾನುಭವ ಸಿದ್ಧವಲ್ಲವಾದ್ದರಿಂದ 'ಆತ್ಮಾವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂದು ದರ್ಶನೋದ್ದೇಶದಿಂದ ಶ್ರವಣವನ್ನು ವಿಧಾನಮಾಡಿರುವುದರಿಂದ ಶ್ರುತಿಯೇ ಈ ವಿಷಯದಲ್ಲಿ ಪ್ರಮಾಣವೆಂದು ನೀನು ಹೇಳಬೇಕು. ಶ್ರುತಿಯಾದರೋ ಶ್ರವಣ, ಅನಂತರ ಮನನ ಮತ್ತು ಅನಂತರ ಧ್ಯಾನವನ್ನು ಹೇಳಿ ಧ್ಯಾನವೇ ಅಪರೋಕ್ಷಕ್ಕೆ ಮುಖ್ಯಕಾರಣವೆಂದು ತಿಳಿಸುತ್ತದೆ. ಪರಂಪರೆಯಿಂದ ಶ್ರವಣವೂ ಕಾರಣವಾಗುತ್ತದೆ ಎಂದು ಹೇಳುವುದಾದರೆ 'ಕರ್ಮಣಾಜ್ಞಾನಮಾತನೋತಿ' ಎಂದು ಶ್ರುತಿ ಇರುವುದರಿಂದ ಕರ್ಮಕ್ಕೂ ಅಪರೋಕ್ಷಜ್ಞಾನ ಕಾರಣತ್ವವನ್ನು ಒಪ್ಪ ಎಂಬ ಆಪತ್ತಿಯು ಬರುತ್ತದೆ. ಆಗ ಕರ್ಮವನ್ನು ನಿಂದಿಸಬೇಕಾದ ಅಗತ್ಯವಿಲ್ಲ. ಶ್ರವಣದಿಂದಲೇ ಎಲ್ಲರಿಗೂ ಬ್ರಹ್ಮದರ್ಶನವಾಗುವುದಾದರೆ ಶುಕಾದಿಯೋಗಿಗಳು ಮಾತ್ರ ಜೀವನ್ಮುಕ್ತರಾಗಿ ಸಂಸಾರದಲ್ಲಿ ಏಕೆ ಉಳಿಯುತ್ತಾರೆ? ಮಂದರಿಗೂ ಶಬ್ದದಿಂದ ಬ್ರಹ್ಮದರ್ಶನವಾಗುವುದರಿಂದ ಮಂದರೂ ಜೀವನ್ಮುಕ್ತರಾಗಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಶಬ್ದದಿಂದ ಅಪರೋಕ್ಷಜ್ಞಾನವು ಉಂಟಾಗುವುದಿಲ್ಲ. ಇನ್ನು ನಿರ್ವಿಕಲ್ಪಕಜ್ಞಾನದ ಉತ್ಪತ್ತಿಯಂತೂ ದೂರತೋ ಅಪಾಸ್ತವಾಗುತ್ತದೆ. 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಬಂದ ಜ್ಞಾನವೂ ದಶಮತ್ವಪ್ರಕಾರಕವೇ ಆಗಿರುವುದಷ್ಟೆ? ಶಬ್ದಗಳಿಗೆ ಅನ್ವಿತಾರ್ಥಬೋಧಕತ್ವ ಇರುವುದರಿಂದ ಮುಖ್ಯಾರ್ಥವಾಗಲೀ ಅಥವಾ ಅಮುಖ್ಯವಾದ ಅರ್ಥವಾಗಲೀ ಅನ್ವಯವಿಶಿಷ್ಟವಾಗಿಯೇ ತೋರುವುದರಿಂದ ನಿರ್ವಿಕಲ್ಪಕಜ್ಞಾನಕ್ಕೆ ಅವಕಾಶವೇ ಇಲ್ಲ.

## ಧ್ಯಾನವೇ ಸಾಕ್ಷಾತ್ಕಾರಕ್ಕೆ ಕಾರಣ :

ಧ್ಯಾನವೆಂದರೆ ಹರಿಯ ಗುಣಗಳನ್ನು ಮನಸ್ಸಿನಲ್ಲಿ ಅವಿಚ್ಛಿನ್ನತೈಲಧಾರೆಯಂತೆ ಚಿಂತನೆ ಮಾಡುವುದು. ಹೀಗೆ ಮಾಡಿದಾಗ ಹರಿಯ ಇಚ್ಛೆಯಿಂದಲೇ ಹರಿಯರೂಪವು ಮನಸ್ಸಿಗೆ ಗೋಚರವಾಗುತ್ತದೆ. ಹೀಗೆ ಧ್ಯಾನವೇ ದರ್ಶನವನ್ನು ಕುರಿತು ಕಾರಣ. '**ಯದಂಘ್ರ್ಯಭಿಧ್ಯಾನಸಮಾಧಿ ಧೌತಯಾಧಿಯಾ ಅನುಪಶ್ಯಂತಿ ಹಿ ತತ್ತ್ವಮಾತ್ಮನಃ**' ಎಂಬ ಭಾಗವತಶ್ಲೋಕವೂ ಧ್ಯಾನಕ್ಕೇ ದರ್ಶನಹೇತುತ್ವವನ್ನು ಹೇಳುತ್ತದೆ. '**ದಿವ್ಯಂ ದದಾಮಿ ತೇ ಚಕ್ಷುಃ**' ಎಂಬ ಗೀತಾವಾಕ್ಯದಿಂದಲೂ ಇದು ಸಿದ್ಧವಾಗುತ್ತದೆ. ದೇವರು ಅನುಗ್ರಹವನ್ನು ಮಾಡಿದರೂ ತನ್ನ ಐಶ್ವರ್ಯದರ್ಶನದ ಸಲುವಾಗಿ ಸಾಕ್ಷಾತ್ಕಾರಸಾಧನವಾದ ದಿವ್ಯವಾದ ಚಕ್ಷುಸ್ಸನ್ನೇ ಕರುಣಿಸಿದ್ದಾನೆ. ಮತ್ತು ದಕ್ಷಾಧ್ವರಪ್ರಸಂಗದಲ್ಲಿ '**ಶಸ್ತ್ರೈರಸ್ತ್ರಾನ್ವಿತೈರೇನಮನಿರ್ಭಿನ್ನತ್ವಚಂ ಹರಃ । ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿಶ್ಚಿರಂ । ದೃಷ್ಟ್ವಾ ಸಂಜ್ಞಪನೇ ಯೋಗಂ**' ಎಂಬಲ್ಲಿ ಅಸ್ತ್ರಶಸ್ತ್ರಗಳಿಂದಲೂ ದಕ್ಷಪ್ರಜಾಪತಿಯ ಚರ್ಮವೂ ಗಾಯಗೊಳ್ಳದಿರಲು ಪಶುಪತಿಯು ಆಶ್ಚರ್ಯಗೊಂಡು ಬಹಳ ಹೊತ್ತುಧ್ಯಾನಮಾಡಿದನು. ಅನಂತರ ಉಪಾಯವನ್ನು ನೋಡಿ ದಕ್ಷಶಿರಸ್ಸನ್ನು ಛೇದಿಸಿದನು' ಎಂದು ಧ್ಯಾನದಿಂದಲೇ ಉಪಾಯದ ಸಾಕ್ಷಾತ್ಕಾರವುಂಟಾಯಿತು ಎಂದು ಹೇಳಿದ್ದಾರೆ. ಆದ್ದರಿಂದ ಶ್ರವಣ ಮನನ ಧ್ಯಾನಗಳು ಪ್ರಧಾನವಾದ ಅಂಗಗಳು. ಮನಸ್ಸು ಕರಣ. ಪ್ರತಿಬಂಧಕವಿರುವಾಗ ದರ್ಶನವಾಗುವುದಿಲ್ಲ. ಪ್ರತಿಬಂಧಕವು ನಿವೃತ್ತವಾದರೆ ದರ್ಶನವುಂಟಾಗುತ್ತದೆ. ಆದ್ದರಿಂದಲೇ ಶ್ರುತಿಯು '**ಮನಸೈವೇದಮನು ಪಶ್ಯತಿ**' ಎಂದು ಅವಧಾರಣೆಯನ್ನು ಮಾಡುತ್ತದೆ. ಆದರೆ ಇವೆಲ್ಲಕ್ಕಿಂತಲೂ ಹರಿಯ ಅನುಗ್ರಹವೇ ಸಾಕ್ಷಾತ್ಕಾರವನ್ನು ಕುರಿತು ಮುಖ್ಯಕಾರಣವೆಂದು '**ಯಮೈವೇಷ ವೃಣುತೇ ತೇನ ಲಭ್ಯಃ**' ಎಂಬ ಶ್ರುತಿಯು ಹೇಳುತ್ತದೆ. '**ತಸ್ಯೈಷ ಆತ್ಮಾವಿವೃಣುತೇ ತನೂಂ ಸ್ವಾಂ**' ಎಂಬ ಇದೇ ಮಂತ್ರದ ಉತ್ತರಾರ್ಧದಲ್ಲಿ ತನ್ನ ತನುವನ್ನು ತೋರಿಸುತ್ತಾನೆ ಎಂದು ಹರಿಗೆ ಶರೀರವನ್ನು ಹೇಳುವುದರಿಂದ ಹರಿಗೆ ನಿತ್ಯಶರೀರವಿದೆಯೆಂದೂ, ಅದು ಚಿದಾನಂದಾತ್ಮಕವಾದ ಶಿರಃಪಾಣ್ಯಾದಿ ಅವಯವಗಳಿಂದ ಕೂಡಿದೆ ಎಂದೂ ಅವನಿಗೂ ಸದೃಶರಾದ ಮುಕ್ತರಿಗೂ ಸಹ ಅಂತಹದೇ ಶರೀರವಿದೆಯೆಂದೂ ಸಿದ್ಧವಾಗುತ್ತದೆ.

## ದ್ವೇಷವು ಮುಕ್ತಿಸಾಧನವಲ್ಲ :

**'ಗೋಪ್ಯಃ ಕಾಮಾದ್ ಭಯಾತ್ ಕಂಸಃ ದ್ವೇಷಾಚ್ಚೈದ್ಯಾದಯೋ ನೃಪಾಃ'** ಎಂಬ ಭಾಗವತ ಶ್ಲೋಕವು ಶಿಶುಪಾಲಾದಿಗಳಿಗೆ ದ್ವೇಷದಿಂದ ಮುಕ್ತಿಯಾಯಿತೆಂದು ಹೇಳುವಂತೆ ತೋರುತ್ತವೆ. ಆದರೆ ನಿಜವಾದ ಅಭಿಪ್ರಾಯವು ಅದಲ್ಲ. ಶಿಶುಪಾಲ ಮೊದಲಾದವರು ಶಾಪಗ್ರಸ್ತ ಜಯ ಮೊದಲಾದವರು. ಶಾಪಪ್ರಾಪ್ತಿಗಿಂತ ಮೊದಲು ಅವರು ಮಹತ್ತಾದ ಜ್ಞಾನಭಕ್ತಿ ವೈರಾಗ್ಯಗಳಿಂದ ಯುಕ್ತರಾಗಿ ಶ್ರೇಷ್ಠವಾದ ರೀತಿಯಲ್ಲಿ ಹರಿಯ ಸೇವೆಯನ್ನು ಮಾಡಿದವರು. ಅಂತಹ ತನ್ನ ಸ್ವಾಭಾವಿಕಭಕ್ತರು ಕ್ವಚಿತ್ ಅಪರಾಧವನ್ನು ಮಾಡಿ ಶಾಪಗ್ರಸ್ತರಾಗಿ ಹರಿಯನ್ನು ದ್ವೇಷಿಸಿದರೆ ಭಕ್ತಾಪರಾಧಸಹಿಷ್ಣುವಾದ ಹರಿಯು ಅವರ ಆ ದ್ವೇಷದೋಷವನ್ನು ಮನ್ನಿಸಿ ಅವರು ಭಕ್ತಿಯಿಂದ ಮಾಡಿದ ಸೇವೆಗೇ ಒಲಿದು ಮೋಕ್ಷವನ್ನು ಕರುಣಿಸಿದನೆಂದೇ ಅಭಿಪ್ರಾಯ. ಕೇವಲ ದ್ವೇಷವು ಮೋಕ್ಷಕ್ಕೆ ಸಾಧನವಲ್ಲವೆಂದು **'ಕತಮೋಪಿ ನ ವೇನಸ್ಯ ಪಂಚಾನಾಂ ಪುರುಷಂ ಪ್ರತಿ'** ಎಂಬ ಶ್ಲೋಕದಲ್ಲಿ ಅಲ್ಲಿಯೇ ಭಕ್ತಿಯಮಿಶ್ರಣವಿಲ್ಲದ ಶುದ್ಧದ್ವೇಷಿಗಳಾದ ವೇನಾದಿಗಳಿಗೆ ತಮಸ್ಸೇ ಆಯಿತು ಎಂದು ಹೇಳಿದೆ. **'ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ। ವಿವಿಕ್ಷುಃ'** ಎಂಬಲ್ಲಿಯೂ **'ನಿಂದಾಂ ಭಗವತಃ ಶೃಣ್ವನ್ ತತ್ಪರಸ್ಯ ಜನಸ್ಯ ವಾ । ತತೋ ನಾಪೈತಿ ಯಃ ಸೋಪಿ ಯಾತ್ಯಧಃ ಸುಕೃತಾತ್‌ಚ್ಯುತಃ'** ಎಂಬಲ್ಲಿಯೂ ದ್ವೇಷಕಾರ್ಯವಾದ ನಿಂದೆಯಿಂದ ತಮೋರೂಪವಾದ ಅನರ್ಥವೇ ಹೇಳಲ್ಪಟ್ಟಿದೆ. ಆದ್ದರಿಂದ ಗ್ರಂಥದ ಪೂರ್ವಾಪರವಿಮರ್ಶೆಯುಳ್ಳವರು ದ್ವೇಷಕ್ಕೆ ಮೋಕ್ಷಸಾಧನತ್ವವನ್ನು ಹೇಳಬಾರದು. ಸೂತ್ರಕಾರರೂ ಸಹ **'ವಿದ್ಯೈವ ತು ನಿರ್ಧಾರಣಾತ್'** ಎಂಬ ಸೂತ್ರದಲ್ಲಿ ಜ್ಞಾನವೇ ಮೋಕ್ಷಕ್ಕೆ ಸಾಧನವೆಂದು ನಿರ್ಣಯಿಸಿರುವುದರಿಂದ ದ್ವೇಷವು ಜ್ಞಾನವಲ್ಲವಾದ್ದರಿಂದ ದ್ವೇಷಕ್ಕೆ ಮೋಕ್ಷಸಾಧನತ್ವವನ್ನು ಹೇಳಬಾರದು. ಆದ್ದರಿಂದ ಶ್ರವಣ, ಮನನ, ಧ್ಯಾನ, ಅಪರೋಕ್ಷ, ವಿಶೇಷಭಕ್ತಿ, ಹರಿಯ ಅನುಗ್ರಹ ಇವು ಮೋಕ್ಷದ ಸೋಪಾನ ಪಂಕ್ತಿಗಳೆಂದು ಸಿದ್ಧವಾಗುತ್ತದೆ.

## ಮೋಕ್ಷಪ್ರಾಪ್ತಿಕ್ರಮ :

**'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ'** ಎಂಬ ಶ್ರುತಿಯು ಜಗತ್ಕರ್ತೃವಾದ, ಸರ್ವೇಶ್ವರನಾದ, ಬ್ರಹ್ಮದೇವರ ತಂದೆಯಾದ, ಪರಾತ್ಪರನಾದ,

ಸುವರ್ಣವರ್ಣೋಪೇತನಾದ ಪದ್ಮನಾಭನನ್ನು ಜೀವನು ಯಾವಾಗ ನೋಡುವನೋ ಆಗ ಪುಣ್ಯಪಾಪನಿರ್ಮುಕ್ತನಾಗಿ ನಿರ್ದುಃಖತ್ವಾದಿರೂಪದಿಂದ ಹರಿಯ ಉತ್ತಮವಾದ ಸಾಮ್ಯವನ್ನು ಪಡೆಯುವನೆಂದು ಸಪ್ರಕಾರಕ ಜ್ಞಾನದಿಂದಲೇ ಮೋಕ್ಷವನ್ನೂ, ಮೋಕ್ಷದಲ್ಲಿಯೂ ಸಾಮ್ಯವನ್ನು ಹೇಳುತ್ತದೆ. ಇದಕ್ಕಿಂತ ಭಿನ್ನವಾದ ಮಾರ್ಗವಿಲ್ಲವೆಂದು ನಿಷೇಧಿಸುತ್ತದೆ.

ಸ್ವತಃ ಅಥವಾ ಹಿರಿಯರ ಉಪದೇಶದಿಂದ ಸ್ವಲ್ಪ ವೈರಾಗ್ಯವನ್ನು ಮತ್ತು ವಿಷ್ಣುಭಕ್ತಿಯನ್ನು ಹೊಂದಿದ ಅಧಿಕಾರಿಯು ಸಾರಾಸಾರವಿವೇಕವುಳ್ಳವನಾಗಿ ಮೋಕ್ಷವನ್ನು ಬಯಸಿ ಮೊದಲು ಬ್ರಹ್ಮಸೂತ್ರದ ಮೊದಲಿನ ಎರಡು ಅಧ್ಯಾಯಗಳ ಶ್ರವಣಮಾಡಬೇಕು. ಜಿಜ್ಞಾಸ್ಯವಾದ ಬ್ರಹ್ಮರೂಪವಾದ ವಿಷಯಸ್ವರೂಪವನ್ನು ನಿರ್ಧಾರಮಾಡುವುದರಿಂದ ಇದೇ ಮುಖ್ಯವಾದ ಶಾಸ್ತ್ರಭಾಗ. ಅನಂತರ ವೈರಾಗ್ಯಭಕ್ತಿಪಾದಗಳನ್ನು ಶ್ರವಣಮಾಡಿ ಪೂರ್ಣಾಧಿಕಾರಸಂಪನ್ನನಾಗಿ ಉಪಾಸನಾಪಾದದಲ್ಲಿ ಹೇಳಿದ ಶಾಸ್ತ್ರಾಭ್ಯಾಸರೂಪವಾದ ಮನನಾತ್ಮಕವಾದ ಜಿಜ್ಞಾಸೆಯನ್ನು ಮಾಡಬೇಕು. ಮನನದ ಪರಿಪಾಕಾವಸ್ಥೆಯೇ ಧ್ಯಾನ. ಧ್ಯಾನದ ಪರಿಪಾಕಾವಸ್ಥೆಯಲ್ಲಿ ಭಗವಂತನ ದರ್ಶನವಾಗುತ್ತದೆ. ಅದರ ಫಲವಾಗಿ ಫಲಾಧ್ಯಾಯದಲ್ಲಿ ಹೇಳಿದ ಫಲವುಂಟಾಗುತ್ತದೆ. ಆ ಫಲವು ಉತ್ಕ್ರಾಂತಿ, ಮಾರ್ಗ, ಗಮ್ಯ ಮತ್ತು ಭೋಗವೆಂದು ನಾಲ್ಕುವಿಧವಾದುದು. ಜ್ಞಾನಿಯು ಬ್ರಹ್ಮನಾಡಿಯಿಂದ ದೇಹದಿಂದ ನಿಷ್ಕ್ರಾಂತನಾಗಿ ಅರ್ಚಿರಾದಿಮಾರ್ಗದಿಂದ ಬ್ರಹ್ಮಲೋಕಕ್ಕೆ (ಸತ್ಯಲೋಕಕ್ಕೆ) ಹೋಗಿ ಅಲ್ಲಿ ಬಹುಕಾಲ ವಾಸಿಸುತ್ತಾನೆ. ಇದು ಜೀವನ್ಮುಕ್ತಿದೆಶೆ. ಬ್ರಹ್ಮದೇವರ ದ್ವಿಪರಾರ್ಧಾಂತಕಾಲದಲ್ಲಿ ಭಗವತ್ಸಾಕ್ಷಾತ್ಕಾರವನ್ನು ಪಡೆದವರೆಲ್ಲರಿಗೂ ಬ್ರಹ್ಮದೇವರ ಜೊತೆಯಲ್ಲಿಯೇ ಪರಮಮೋಕ್ಷ ಉಂಟಾಗುತ್ತದೆ. **'ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ'** ಎಂಬ ಶ್ರುತಿಯು ಈ ವಿಷಯವನ್ನು ಸ್ಪಷ್ಟಪಡಿಸುತ್ತದೆ. ಆಗ ಬ್ರಹ್ಮದೇವರು ಮುಕ್ತಿಯೋಗ್ಯರಾದ ಜೀವರೆಲ್ಲರನ್ನೂ ವಾಸುದೇವನ ಉದರದಲ್ಲಿಟ್ಟು ಅಲ್ಲಿಂದ ಅವರನ್ನು ಕರೆದುಕೊಂಡು ವೈಕುಂಠದಲ್ಲಿರುವ ವಿರಜಾನದಿಗೆ ಹೋಗುತ್ತಾರೆ. ಆ ನದಿಯು ಚಿದ್ರೂಪವಾದ ಜಲದಿಂದ ಕೂಡಿ ಜೀವರ ಲಿಂಗದೇಹವನ್ನು ನಾಶಮಾಡಲು ಬಹಳ ಸಮರ್ಥವಾಗಿದೆ. ಬ್ರಹ್ಮದೇವರ ಜೊತೆಯಲ್ಲಿ ಎಲ್ಲಾ ಜೀವರೂ ವಿರಜಾಸ್ನಾನವನ್ನು ಮಾಡಿ ಲಿಂಗದೇಹವನ್ನು ಕಳೆದುಕೊಂಡಮೇಲೆ ಬ್ರಹ್ಮದೇವರು ಹಿಂದಿನ ಕಲ್ಪದಲ್ಲಿ ಮುಕ್ತರಾದ ಮತ್ತು ಈ ಕಲ್ಪದಲ್ಲಿ ಮುಕ್ತರಾದ ಜೀವರ ಜೊತೆಯಲ್ಲಿ ವಾಸುದೇವನ

ಉದರವನ್ನು ಪ್ರವೇಶಿಸುತ್ತಾರೆ. ಅನಂತರ ಪ್ರಳಯವುಂಟಾಗಿ ಎಲ್ಲವೂ ಚಿದ್ರೂಪವಾದ ಜಲದಿಂದ ತುಂಬಿಹೋಗುತ್ತದೆ. ಆಗ ಪರಮಾತ್ಮನು ವಟಪತ್ರದಲ್ಲಿ ಶಯನಮಾಡುತ್ತಾನೆ. ಆಗ ಪೃಥಿವಿಮೊದಲಾದ ಭೂತ, ಭೌತಿಕ ವಸ್ತುಗಳು ವ್ಯುತ್ಕ್ರಮದಿಂದ ಲಯವನ್ನು ಹೊಂದಿ ಮೂಲಪ್ರಕೃತಿಯ ರೂಪದಲ್ಲಿರುತ್ತವೆ. ಜಡವಾದ ಮೂಲಪ್ರಕೃತಿಯು ನಿತ್ಯವಾದುದು. ಅದಕ್ಕೆ ಲಯವಿಲ್ಲ. ಆದ್ದರಿಂದಲೇ ಅದಕ್ಕೆ ಪ್ರಕೃತಿ ಎಂದು ಹೆಸರು. ಹೀಗೆ ಶ್ರುತಿಪುರಾಣಾದಿಗಳಲ್ಲಿ ಲಯವನ್ನು ಹೇಳಿರುವುದರಿಂದ ಜ್ಞಾನದಿಂದ ನಾಶ ಎಂಬ ಅದ್ವೈತಿಗಳ ವಾದವು ಅಪ್ರಾಮಾಣಿಕವಾದುದು.

## ಜ್ಞಾನದಿಂದ ಅಶೇಷನಾಶವೆಂಬ ಪರಪ್ರಕ್ರಿಯಾನಿರಾಸ :

ಪ್ರಳಯದಲ್ಲಿರುವ ಜಗದಭಾವವು ಧ್ವಂಸರೂಪವಾದುದು. ಅದು ಜ್ಞಾನಜನ್ಯವಲ್ಲ. ಜ್ಞಾನಿಯದೇಹವೂ ಕೂಡ ಅಗ್ನಿಯಿಂದ ನಾಶಹೊಂದುತ್ತದೆಯೋ ಹೊರತು ಜ್ಞಾನದಿಂದ ನಾಶಹೊಂದುವುದಿಲ್ಲ. ಇನ್ನು ಬೇರೆ ಯಾವುದು ಜ್ಞಾನದಿಂದ ನಾಶಹೊಂದುತ್ತದೆ? ಮತ್ತು ಅನುಭವಸಿದ್ಧವಾದ ಎಲ್ಲಾ ನಾಶಗಳೂ ಸಶೇಷವಾದುವುಗಳು. ಎಂದರೆ ಸ್ಥೂಲರೂಪದಿಂದ ವಸ್ತುವು ನಾಶಹೊಂದಿದರೂ ಸೂಕ್ಷ್ಮರೂಪದಿಂದ ಅದು ಉಳಿಯುತ್ತದೆ. ಆದರೆ ನೀನು ಹೇಳುವ ಜ್ಞಾನಪ್ರಯುಕ್ತವಾದ ನಿಶ್ಶೇಷನಾಶವು ಎಲ್ಲಿಯೂ ಕಂಡಿಲ್ಲ. ಅದು ಅದೃಷ್ಟಕಲ್ಪನೆ. ಮತ್ತು ಎಲ್ಲಾ ವಸ್ತುಗಳಿಗೆ ನಾಶವುಂಟಾದರೂ ಈ ನಾಶಕ್ಕೆ ನಾಶವಿಲ್ಲವಷ್ಟೆ. ಆಗ ಸರ್ವನಾಶವನ್ನು ಹೇಗೆ ಸಮರ್ಥಿಸುತ್ತೀಯೆ? ಸರ್ವನಾಶವೆಂದರೆ ಭಾವರೂಪವಾದ ಸರ್ವವಸ್ತುಗಳ ನಾಶವೆಂದು ಹೇಳಿದರೆ ಆಗಬ್ರಹ್ಮನಿಗೂ ನಾಶವಾಗಬೇಕಾಗುತ್ತದೆ. ಬ್ರಹ್ಮಭಿನ್ನಸರ್ವಭಾವನಾಶವೆಂದು ಹೇಳಿದರೆ ಜೀವನಿಗೂ ನಾಶವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಬ್ರಹ್ಮನಿಂದ ಪಾರಮಾರ್ಥಿಕಭೇದವುಳ್ಳ ಸರ್ವಭಾವನಾಶವೆಂದು ಹೇಳಿದರೆ ಆಗ ಘಟಾದಿನಾಶವೂ ಆಗಲಾರದು. ಏಕೆಂದರೆ ನೀನು ಪಾರಮಾರ್ಥಿಕ ಭೇದವನ್ನೇ ಒಪ್ಪಿಲ್ಲವಷ್ಟೆ? ಕಾರ್ಯವಾದ ಸರ್ವಭಾವನಾಶವೆಂದು ಹೇಳಿದರೆ ಅನಾದಿಭಾವಗಳಾದ ಕಾಲ, ಆಕಾಶ, ಜೀವ, ಜೀವಧರ್ಮಗಳು ಇವುಗಳ ನಾಶವು ನಿರ್ನಿಮಿತ್ತವೆಂದಾಗುತ್ತದೆ. ಬ್ರಹ್ಮಭಿನ್ನವಾದ ಅನಾದಿಭಾವನಾಶವೆಂದು ಹೇಳಿದರೆ ಉಳಿದ ಅನಾದಿಭಾವಕ್ಕೆ ನಾಶವಾದಂತೆ ಬ್ರಹ್ಮನಿಗೂ ನಾಶವುಂಟಾಗಲಿ ಎಂಬ ಆಪತ್ತಿಯು ಬರುತ್ತದೆ. ಅನಾದಿಭಾವ

ರೂಪವಾದ ವಸ್ತುಗಳು ಅಜ್ಞಾನವೂ ಅಲ್ಲ, ಅಜ್ಞಾನದ ಕಾರ್ಯವೂ ಅಲ್ಲ. ಆದ್ದರಿಂದ ಅವುಗಳಿಗೆ ಮಿಥ್ಯಾತ್ವವು ನಿರ್ನಿಮಿತ್ತವಾಗುತ್ತದೆ. ಇನ್ನು ಕಾರ್ಯಮಾತ್ರದ ನಾಶವಾಗುವಾಗ ಅದೃಷ್ಟವೂ ನಾಶವಾಗುವುದರಿಂದ ಮುಂದಿನ ಸೃಷ್ಟಿಗೆ ಕಾರಣವಾದ ಅದೃಷ್ಟವು ಇಲ್ಲದಿರುವುದರಿಂದ ಪುನಃ ಮುಂದೆ ಸೃಷ್ಟಿ ಇಲ್ಲವೆಂಬುದು ಪ್ರತಿಕರ್ತಪರಾಹತವಾಗುತ್ತದೆ. ಬ್ರಹ್ಮದೇವರ ನೂರುವರ್ಷಗಳ ನಂತರ ಉಂಟಾಗುವುದೇ ಮಹಾಪ್ರಳಯ. ಆಗ ಎಲ್ಲಾ ಕಾರ್ಯಗಳೂ ನಷ್ಟವಾದರೂ ಅದೃಷ್ಟವು ನಾಶಹೊಂದುವುದಿಲ್ಲ. ಏಕೆಂದರೆ ಪುನಃ ಸೃಷ್ಟಿಯಾಗುತ್ತದೆ. ಶ್ರುತಿಪುರಾಣಾದಿಗಳಲ್ಲಿ ಇಂತಹ ಲಯವೇ ಸಿದ್ಧವಾಗಿರುವಾಗ ನೀನು ಅಂಗೀಕರಿಸುವ ಲಯದಲ್ಲಿ ಮಾತ್ರ ಹೇಗೆ ಅದೃಷ್ಟನಾಶವಾಗುತ್ತದೆ? ಈ ಲಯಗಳ ದೃಷ್ಟಾಂತದಿಂದ ನಿನಗೆ ಅಭಿಮತವಾದ ಲಯದಲ್ಲಿಯೂ ಅದೃಷ್ಟದ ಅನುವೃತ್ತಿಯೇ ಸಿದ್ಧವಾಗುವುದಷ್ಟೆ? ಮತ್ತು ನಿನಗೆ ಅಭಿಮತವಾದ ಅಂತ್ಯಸೃಷ್ಟಿಯೂ ಈಗಿನ ಸೃಷ್ಟಿಗಳಿಗೆ ಸದೃಶವಾಗಿಯೇ ಇರುವುದಷ್ಟೆ? ಆದ್ದರಿಂದ ಈಗಿನ ಸೃಷ್ಟಿಯಲ್ಲಿ ಜ್ಞಾನಿಗಳ ಜೊತೆಯಲ್ಲಿ ಪಶುಪಕ್ಷಿವೃಕ್ಷಗಳೂ ಇರುತ್ತವೆ. ಆ ಸೃಷ್ಟಿಯ ಕೊನೆಯಲ್ಲಿ ಎಲ್ಲಾ ಜ್ಞಾನಿಗಳ ಅದೃಷ್ಟವು ನಾಶವಾಗಲಿ. ಆದರೆ ಪಶುಪಕ್ಷ್ಯಾದಿಗಳ ಅದೃಷ್ಟನಾಶಕ್ಕೆ ಏನು ಕಾರಣ? ಆದ್ದರಿಂದ ಸರ್ವಾದೃಷ್ಟನಾಶವು ಅಪ್ರಾಮಾಣಿಕವಾದುದು.

## ಶ್ರುತ್ಯಾದಿಗಳಿಂದ ಜಗತ್ಪ್ರವಾಹನಿತ್ಯತ್ವದ ಸಮರ್ಥನೆ :

**'ಸೂರ್ಯಾಚಂದ್ರಮಸೌ ಧಾತಾ ಯಥಾಪೂರ್ವಮಕಲ್ಪಯತ್'** ಎಂಬ ಶ್ರುತಿಯು ಜಗತ್ಪ್ರವಾಹಕ್ಕೆ ಅನಾದಿನಿತ್ಯತ್ವವನ್ನು ಹೇಳುತ್ತದೆ. **'ತತೋ-ವೈಕುಂಠಮಗಮತ್ ಭಾಸ್ವರಂ ತಮಸಃ ಪರಮ್'** ಇತ್ಯಾದಿ ಭಾಗವತ ಶ್ಲೋಕಗಳು ವೈಕುಂಠಲೋಕವು ತಮಃ ಶಬ್ದದಿಂದ ಹೇಳಲ್ಪಟ್ಟ ಅಜ್ಞಾನವನ್ನು ಮೀರಿದುದೆಂದೂ, ಪ್ರಕಾಶರೂಪವೆಂದೂ, ಪುನರಾವೃತ್ತಿಶೂನ್ಯವೆಂದೂ, ಶಾಶ್ವತವಾದ ಪರಮಗತಿ ಎಂದೂ ಹೇಳುತ್ತವೆ. ಇದಕ್ಕಿಂತ ಭಿನ್ನವಾದ ಪರಮಮೋಕ್ಷವು ಯಾವುದಿದೆ? **'ಮರ್ತ್ಯೋ ಮೃತ್ಯುವ್ಯಾಲಭೀತಃ ಪಲಾಯನ್'** ಎಂಬ ಭಾಗವತದಲ್ಲಿನ ದೇವಕೀವಾಕ್ಯವೂ ಕೃಷ್ಣಚರಣಪ್ರಾಪ್ತಿಯನ್ನೇ ಪರಮಮೋಕ್ಷವೆಂದು ಹೇಳುತ್ತದೆ. **'ಆ ಬ್ರಹ್ಮಭವನಾಲ್ಲೋಕಾಃ ಪುನಾರವರ್ತಿನೋಽರ್ಜುನ । ಮಾಮುಪೇತ್ಯತು ಕೌಂತೇಯ ಪುನರ್ಜನ್ಮ ನ ವಿದ್ಯತೇ'** ಎಂಬ ಗೀತಾವಾಕ್ಯವು ಕೃಷ್ಣಪ್ರಾಪ್ತಿಯೇ

ಪರಮಮೋಕ್ಷವೆಂದು ಹೇಳುತ್ತದೆ. ಜೀವನ್ಮುಕ್ತಿಯಲ್ಲಿಯೂ ಪುನರ್ಜನ್ಮ ಇರುವುದರಿಂದ ಪುನರ್ಜನ್ಮವಿಲ್ಲದ ಈ ಸ್ಥಿತಿಯು ಪರಮಮೋಕ್ಷವೇ ಆಗುತ್ತದೆ. ಆದ್ದರಿಂದ ಪರಮಮೋಕ್ಷದಲ್ಲಿಯೂ ಕೂಡ ಬ್ರಹ್ಮಪ್ರಾಪ್ತಿಯೇ ಹೊರತು ಬ್ರಹ್ಮೈಕ್ಯವಿಲ್ಲವೆಂದು ಸಿದ್ಧವಾಗುತ್ತದೆ. '**ಜ್ಯೋತಿಷ್ಮಂತೋ ಯತ್ರ ಲೋಕಾಸ್ತತ್ರಮಾಮಮೃತಂ ಕೃಧಿ**' ಎಂಬ ಪೂಯಮಾನಸೂಕ್ತದ ಮಂತ್ರವೂ ಲೋಕಾಃ ಎಂಬಲ್ಲಿ ಬಹುವಚನದಿಂದ ಶ್ವೇತದ್ವೀಪ, ಅನಂತಾಸನ, ವೈಕುಂಠರೂಪವಾದ ವಿಷ್ಣುಲೋಕವೇ ಅಮೃತಶಬ್ದೋದಿತವಾದ ಪರಮಮೋಕ್ಷವೆಂದು ಹೇಳುತ್ತದೆ. ಆದ್ದರಿಂದಲೂ ಮೋಕ್ಷವೆಂದರೆ-ಸಾಲೋಕ್ಯ-ಬ್ರಹ್ಮನ ಜೊತೆಯಲ್ಲಿ ಒಂದೇ ಲೋಕದಲ್ಲಿರುವುದೇ ಹೊರತು ಬ್ರಹ್ಮನೇ ಆಗುವುದಲ್ಲ ಎಂದು ತಿಳಿಯುತ್ತದೆ. ಹೀಗೆ ಈ ಪ್ರಕರಣದಲ್ಲಿ ಇನ್ನೂ ಅನೇಕಾನೇಕ ಶ್ರುತಿಸ್ಮೃತಿಗಳನ್ನು ಉದಾಹರಿಸಿ ಯುಕ್ತಿಗಳನ್ನೂ ಹೇಳಿ ಪರಮಮೋಕ್ಷವೂ ಸಹ ಭಗವತ್ಪ್ರಾಪ್ತಿರೂಪವಾದುದೇ ಎಂದು ಸಮರ್ಥಿಸಿದ್ದಾರೆ.

## ಸರ್ವಮೋಕ್ಷವು ಅಪ್ರಾಮಾಣಿಕ :

'**ಶೃಣ್ವೇ ವೀರಮುಗ್ರಮುಗ್ರಂ ದಮಾಯನ್**', '**ಪರಾಪೂರ್ವೇಷಾಂ ಸಖ್ಯಾ ವೃಣಕ್ತಿ**' ಎಂಬ ಎರಡು ಮಂತ್ರಗಳು ಸ್ಪಷ್ಟವಾಗಿ ಹರಿಯು ದೈತ್ಯರನ್ನು ದಮನ ಮಾಡುತ್ತಾನೆಂದೂ, ಅವರಿಗೆ ಅಧೋಗತಿಯನ್ನು ಕೊಡುತ್ತಾನೆಂದೂ ಹೇಳುವುದರಿಂದ ಎಲ್ಲರಿಗೂ ಮೋಕ್ಷವುಂಟಾಗುವುದೆಂಬುದು ಅಪ್ರಾಮಾಣಿಕವಾದುದು. '**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ । ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವಯೋನಿಷು । ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ । ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್**' ಎಂಬ ಗೀತಾವಚನವೂ ಸಹ ಅಸುರರಿಗೆ ಭಗವತ್ಪ್ರಾಪ್ತಿ ರೂಪವಾದ ಮೋಕ್ಷವು ಎಂದಿಗೂ ಆಗುವುದಿಲ್ಲವೆಂದು ಸ್ಪಷ್ಟವಾಗಿ ಹೇಳುತ್ತದೆ. ಮತ್ತು ಮುಕ್ತಿಯೋಗ್ಯರಿಗೂ ಸಹ ಒಂದೇ ಸಮಯದಲ್ಲಿ ಎಲ್ಲರಿಗೂ ಮೋಕ್ಷವಾಗುವುದೆಂಬುದೂ ಪ್ರಮಾಣವಿರುದ್ಧವಾದುದು. '**ತೇಹ ನಾಕಂ ಮಹಿಮಾನಂ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ**' ಎಂದು ದೇವತೆಗಳ ಮೋಕ್ಷವನ್ನು ಹೇಳುತ್ತಿದೆ. '**ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಣಃ ಜ್ಞಾತಿಭಿರ್ವಾ ಅಜ್ಞಾತಿಭಿರ್ವಾ**' ಎಂಬ ಉಪನಿಷದ್ವಾಕ್ಯವು ತನ್ನ

ಜೊತೆಯಲ್ಲಿ ಮುಕ್ತರಾದವರನ್ನು ಜ್ಞಾತಿಗಳೆಂದೂ ಬೇರೆಯ ಕಲ್ಪದಲ್ಲಿ ಮುಕ್ತರಾದವರನ್ನೂ ಅಜ್ಞಾತಿಗಳೆಂದೂ ಹೇಳಿ ಕ್ರಮಮೋಕ್ಷವನ್ನೇ ಹೇಳುತ್ತದೆ. **'ಅಕ್ಷಣ್ವಂತಃ ಕರ್ಣವಂತಃ'** ಎಂಬ ಮಂತ್ರವು ಮೋಕ್ಷದಲ್ಲಿ ತಾರತಮ್ಯವನ್ನೂ ಹೇಳುತ್ತದೆ. ಅಂತಹ ಪರಮಮೋಕ್ಷದಲ್ಲಿ ರಥವನಿತಾದಿಗಳಿಂದ ಭೋಗವನ್ನೇ ಹೇಳಿರುವುದರಿಂದ ಶೂನ್ಯವಾದಿಗಳ ಮೋಕ್ಷಕ್ಕೆ ಸದೃಶವಾದ ದ್ವಿತೀಯಶೂನ್ಯತ್ವರೂಪವಾದ ಮೋಕ್ಷವನ್ನು ಶ್ರುತಿಯು ಎಂದೂ ಅಂಗೀಕರಿಸುವುದಿಲ್ಲ. ಆದ್ದರಿಂದ ಅಲ್ಲೊಂದು ಇಲ್ಲೊಂದು ಐಕ್ಯವಾಕ್ಯಗಳಂತೆ ಕಾಣುವ ವಾಕ್ಯಗಳಿಗೆ ಇಷ್ಟು ಪ್ರಮಾಣಗಳನ್ನು ಬಾಧಿಸಿ ಐಕ್ಯಪರವಾಗಿ ಅರ್ಥಮಾಡಬಾರದು. ಹಿಂದೆ ತಿಳಿಸಿದಂತೆ ಅನೇಕ ವಿಧವಾದ ಐಕ್ಯವು ಕೂಡುವುದರಿಂದ ಅದನ್ನು ಸಾವಕಾಶವನ್ನಾಗಿ ಮಾಡಿ ಅನ್ಯಾರ್ಥವನ್ನೇ ಹೇಳಬೇಕು.

## ಸಾಧನತಾರತಮ್ಯದಿಂದ ಮೋಕ್ಷದಲ್ಲಿ ತಾರತಮ್ಯಸಿದ್ಧಿ :

ಸಾಧನತಾರತಮ್ಯದಿಂದಲೂ ಮೋಕ್ಷದಲ್ಲಿ ತಾರತಮ್ಯವು ಸಿದ್ಧವಾಗುತ್ತದೆ. ಸಾಧನತಾರತಮ್ಯವಿರುವಾಗ ಫಲದಲ್ಲಿಯೂ ತಾರತಮ್ಯವು ಇರಲೇಬೇಕಷ್ಟೆ? ಇಲ್ಲದಿದ್ದರೆ ಮಹಾಪ್ರಯತ್ನವನ್ನು ಮಾಡಿ ಮೋಕ್ಷವನ್ನು ಪಡೆಯುವ ಮಹಾಯೋಗಿಗಳಿಗೂ ಸಾಧಾರಣಜೀವರಷ್ಟೇ ಆನಂದವು ಮೋಕ್ಷದಲ್ಲಿ ಇರುವುದಾದರೆ ಆ ಮಹಾಯೋಗಿಗಳು ಭ್ರಾಂತರೆಂದೇ ಹೇಳಬೇಕಾಗುತ್ತದೆ. ಅದರಿಂದ ಉತ್ತಮಾಧಿಕಾರಿಗಳಿಗೆ ಕೃತಹಾನಿ ಎಂಬ ದೋಷವೂ ಮಂದಾಧಿ ಕಾರಿಗಳಿಗೆ ಅಕೃತಾಗಮರೂಪವಾದ ದೋಷವೂ ಉಂಟಾಗುತ್ತದೆ ಮತ್ತು ಸ್ವರೂಪಾನಂದದ ವೈಚಿತ್ರ್ಯವನ್ನು ವಿಮರ್ಶೆಮಾಡುವ ಶ್ರುತಿಯು ಮೋಕ್ಷದಲ್ಲಿ ಆನಂದಾದಿಗುಣಗಳಲ್ಲಿ ತಾರತಮ್ಯವಿಲ್ಲದಿದ್ದರೆ ವಿರುದ್ಧವಾಗುತ್ತದೆ. **'ಯತೋ ವಾಚೋ ನಿವರ್ತಂತೇ... ಆನಂದಂ ಬ್ರಹ್ಮಣೋ ವಿದ್ವಾನ್'** ಎಂಬ ಉಪಕ್ರಮವಿರುವುದರಿಂದ ಇಲ್ಲಿ ಮಾಡಿರುವ ಮೀಮಾಂಸೆಯು ಸ್ವರೂಪಾನಂದ ಮೀಮಾಂಸೆ ಎಂದೇ ತಿಳಿಯುತ್ತದೆ. ಏಕೆಂದರೆ ಬ್ರಹ್ಮನಿಗೆ ಸ್ವರೂಪಾನಂದ ವ್ಯತಿರಿಕ್ತವಾದ ಆನಂದವು ಇಲ್ಲವಷ್ಟೆ? ಆದ್ದರಿಂದ ಆ ಪ್ರಕರಣದಲ್ಲಿ ಪಠಿತವಾದ ಎಲ್ಲಾ ಆನಂದಗಳೂ ಸ್ವರೂಪಾನಂದಗಳೇ ಆಗಬೇಕು ಸಂಸಾರಾನಂದ ಮೀಮಾಂಸೆಯನ್ನು ಮಾಡುವುದು ಶ್ರುತಿಗೆ ಅನುಚಿತವಾಗುತ್ತದೆ. ಸಂಸಾರಾನಂದದ ಮೀಮಾಂಸೆಯೂ ಶ್ರುತಿಯಲ್ಲಿದೆ. ಆದರೆ ಅದನ್ನು ಪ್ರತಿಪಾದನೆ ಮಾಡುವುದೇ

ಶ್ರುತಿಯ ಉದ್ದೇಶವಲ್ಲ. ಅದನ್ನು ದೃಷ್ಟಾಂತವನ್ನಾಗಿ ಇಟ್ಟುಕೊಂಡು ಮುಕ್ತಿಸುಖದ ಮೀಮಾಂಸೆಯನ್ನು ಮಾಡುವುದು ಶ್ರುತಿಯ ಉದ್ದೇಶ. ಜೀವಸ್ವರೂಪ ಸುಖದಲ್ಲಿಯೇ ಈ ವೈಚಿತ್ರ್ಯವು ಇಲ್ಲದಿದ್ದರೆ ಬಾಹ್ಯಸುಖದಲ್ಲಾದರೂ ಈ ವೈಚಿತ್ರ್ಯವು ಬರಲು ಏನು ಕಾರಣ? ಇನ್ನು ವಾಕ್ ಮತ್ತು ಮನಸ್ಸುಗಳಿಗೆ ಅಗೋಚರವಾದ ಬ್ರಹ್ಮಸುಖವಾದರೂ ಜೀವರಿಗೆ ಎಂದೂ ಬರುವುದಿಲ್ಲ. ಜೀವರ ಸ್ವರೂಪದಲ್ಲಿಯೇ ಸುಖವಿಲ್ಲದಿದ್ದರೆ ಆ ಜೀವರು ತಾರ್ಕಿಕರ ಜೀವರಂತೆ ಜ್ಞಾನಾನಂದರಹಿತರಾದ ಮುಂಡಿತವಾದ ವ್ಯಕ್ತಿಗಳಾಗುತ್ತಾರೆ ಮತ್ತು **'ಯಶ್ಚ ಶ್ರೋತ್ರಿಯೋ ಅವೃಜಿನೋಽಕಾಮಹತಶ್ಚ'** ಎಂಬ ಕಾಣ್ವಶ್ರುತಿಯಲ್ಲಿಯೂ **'ಶ್ರೋತ್ರಿಯಸ್ಯ ಚಾಕಾಮಹತಸ್ಯ'** ಎಂಬ ತೈತ್ತಿರೀಯ ಶ್ರುತಿಯಲ್ಲಿಯೂ ಶ್ರೋತ್ರೀಯ, ಅಕಾಮಹತ, ಅವೃಜಿನ ಎಂಬ ಶಬ್ದಗಳಿವೆ. ಶ್ರೋತ್ರಿಯ ಎಂದರೆ ಶ್ರವಣಫಲವನ್ನು ಪಡೆದವನು ಎಂದು ಅರ್ಥ. ಅವನು ಮುಕ್ತನೇ ಆಗುತ್ತಾನೆ. ಅವೃಜಿನಃ ಎಂದರೆ ದುಃಖರಹಿತ ಎಂದು ಅರ್ಥ. ಸಂಸಾರದಲ್ಲಿಯೂ ಜೀವನ್ಮುಕ್ತ್ಯವಸ್ಥೆಯಲ್ಲಿಯೂ ದುಃಖವಿರುವುದು ಸರ್ವವಾದಿಸಮ್ಮತವಾಗಿದೆ. ಆದ್ದರಿಂದ ದುಃಖರಾಹಿತ್ಯ ಎಂಬುದು ಪರಮಮೋಕ್ಷದಲ್ಲಿಯೇ ಉಪಪನ್ನವಾಗುವ ಧರ್ಮ. ಅಕಾಮಹತ ಶಬ್ದಕ್ಕೆ ಕಾಮದ ಹತಿ ಇಲ್ಲದವನು ಎಂದು ಅರ್ಥ. ಯಾರಿಗೆ ಕಾಮವಿದ್ದರೂ ಕಾಮಿತವಾದ ವಸ್ತುವು ದೊರೆಯುವುದಿಲ್ಲವೋ ಅಥವಾ ದೊರೆತರೂ ವಿಲಂಬವಾಗಿ ದೊರೆಯುತ್ತದೆಯೋ ಅವರಿಬ್ಬರೂ ಕಾಮಹತರು. ಕಾಮಹತಿ ಇಲ್ಲದ ಸ್ಥಳವೆಂದರೆ ಅದು ಪರಮಮೋಕ್ಷವೇ. **'ಸ ಯದಿ ಪಿತೃಲೋಕಕಾಯೋ ಭವತಿ'** ಎಂಬ ಶ್ರುತಿಯೂ **'ಸಂಕಲ್ಪಾದೇವತಚ್ಛ್ರುತೇಃ'** ಎಂಬ ಸೂತ್ರವೂ ಸಂಕಲ್ಪಮಾಡಿದತಕ್ಷಣವೇ ಕಾಮಿತವಸ್ತುಗಳು ಮುಕ್ತರಿಗೆ ಬಂದೊದಗುತ್ತವೆ ಎಂದು ಹೇಳಿರುವುದರಿಂದ ಅಕಾಮಹತತ್ವವು ಮುಕ್ತರ ಧರ್ಮ ಎಂದೇ ತಿಳಿಯುತ್ತದೆ. ಆದ್ದರಿಂದ ಅಂತಹ ಮುಕ್ತರ ಸ್ವರೂಪಾನಂದವನ್ನು ವಿಮರ್ಶೆಮಾಡುವ ಈ ಪ್ರಕರಣಗಳಲ್ಲಿ ಒಬ್ಬರ ಆನಂದಕ್ಕಿಂತ ಇನ್ನೊಬ್ಬರ ಆನಂದವು ಇಷ್ಟುಪಟ್ಟು ಅಧಿಕವಾಗಿದೆ ಎಂದು ತಾರತಮ್ಯವನ್ನು ಹೇಳುತ್ತಿದ್ದಾರೆ. ಆದ್ದರಿಂದ ಇದು ಸ್ವರೂಪಾನಂದದ ಮೀಮಾಂಸೆಯೇ ಆಗಿದೆ. ನೀಚಪದಕಾಮನಾರಹಿತನಿಗಿಂತ ಉಚ್ಚಪದಕಾಮನಾರಹಿತನಿಗೆ ನೂರುಪಟ್ಟು ಹೆಚ್ಚು ಆನಂದವೆಂದು ಪರವಾದಿಗಳು ಹೇಳುವ ವಾಕ್ಯಾರ್ಥವು ಅನುಭವವಿರುದ್ಧ ಮತ್ತು ಯುಕ್ತಿವಿರುದ್ಧವಾದುದು. ಭಾವಿಯ ನೀರಿನ ಕಾಮನೆ ಇಲ್ಲದವನಿಗಿಂತ

ತಟಾಕಜಲದ ಕಾಮನೆ ಇಲ್ಲದವನಿಗೆ ನೂರುಪಟ್ಟು ಹೆಚ್ಚು ಸುಖವಾಗುತ್ತದೆಯೇ? ಈ ಎಲ್ಲಾ ವಿಷಯಗಳ ವಿಸ್ತಾರವಾದ ಚರ್ಚೆಯನ್ನು ಆಕರಗ್ರಂಥಗಳಲ್ಲಿಯೇ ನೋಡಬೇಕು. ಸ್ಥೂಲರೂಪದಲ್ಲಿ ಬುದ್ಧಿಯಲ್ಲಿ ನಿಲ್ಲಲು ಈ ವಿಷಯಗಳನ್ನು ಇಲ್ಲಿ ಚರ್ಚಿಸಿದ್ದೇವೆ ಎಂದು ರಾಜರು ಹೇಳುತ್ತಾರೆ. **'ಸಂಸೇವಯಾ ಸುರತರೋರಿವ ತೇ ಪ್ರಸಾದಃ । ಸೇವಾನುರೂಪ ಉದಯೋ ನ ಪರಾವರತ್ವಮ್'** ಎಂಬ ಭಾಗವತದಲ್ಲಿನ ಪ್ರಹ್ಲಾದರಾಜರ ವಚನವೂ ಭಗವತ್ಪ್ರಸಾದದಲ್ಲೂ ಅದರಿಂದ ಲಭ್ಯವಾದ ಮೋಕ್ಷಾದಿ ಎಲ್ಲಾ ಫಲಗಳಲ್ಲೂ ತಾರತಮ್ಯವನ್ನೇ ಹೇಳುತ್ತದೆ. ಮೋಕ್ಷದಲ್ಲಿ ಹೇಳುವ ಹರಿಯ ಸಾಮ್ಯವು ನಿರ್ದುಃಖತ್ವಾದಿಸಾಮ್ಯವೇ ಹೊರತು ಆನಂದಸಾಮ್ಯವಲ್ಲ. ನಿರ್ದುಃಖತ್ವರೂಪವಾದ ಸಾಮ್ಯವು ಸಂಸಾರದಲ್ಲಿರಲಿಲ್ಲ. ಮೋಕ್ಷದಲ್ಲಿ ಮಾತ್ರ ಉಂಟಾಗುವುದರಿಂದ ಅದು ಪರಮಸಾಮ್ಯವೆಂದು ಹೇಳಲ್ಪಡುತ್ತದೆ.

## ಅದ್ವಿತೀಯತ್ವವು ಪುರುಷಾರ್ಥವಲ್ಲ :

ಗುರುವಿಗೆ, ದಾರಿಹೋಕನಿಗೆ, ಸಕಲಪ್ರಾಣಿಗಳಿಗೆ ದ್ವಿತೀಯ ವಸ್ತುವಿನ ಆಸೆಯೇ ಕಂಡುಬರುವಾಗ ಅದ್ವಿತೀಯತ್ವವು ಯಾರಿಗೆ ಪುರುಷಾರ್ಥವಾಗುತ್ತದೆ? ನಶ್ವರವಾದ ಭೂಲೋಕಸಂಪತ್ತನ್ನು ತಿರಸ್ಕರಿಸಿ ಯಾಗಮಾಡುವವನು ಅನಶ್ವರವಾದ ಸ್ವರ್ಗಸಂಪತ್ತನ್ನು ಬಯಸುತ್ತಾನೆ. ಒಂದು ವಸ್ತುವು ಕಳೆದುಹೋದರೆ ಮನುಷ್ಯನು ಇನ್ನೊಂದು ವಸ್ತುವನ್ನು ಸಂಪಾದಿಸುತ್ತಾನೆ. ಒಬ್ಬ ಪತ್ನಿಯು ನಾಶವಾದರೆ ಇನ್ನೊಬ್ಬ ಪತ್ನಿಯಲ್ಲಿ ಆಸೆಮಾಡುತ್ತಾನೆ ಒಂದು ಮನೆಯು ಸುಟ್ಟುಹೋದರೆ ಇನ್ನೊಂದು ಮನೆಗೆ ಆಸೆಮಾಡುತ್ತಾನೆ. ಅದ್ವಿತೀಯತ್ವವು ಯಾರಿಗೆ ಸುಖವನ್ನು ಕೊಡುತ್ತದೆ? ಮುಕುಂದನು ತೊಡೆಯಮೇಲೆ ಪತ್ನಿಯನ್ನು ಧರಿಸಿದ್ದಾನೆ. ಶಿವನು ದೇಹಾರ್ಧದಲ್ಲಿಯೇ ಪಾರ್ವತಿಯನ್ನು ಧರಿಸಿದ್ದಾನೆ ಸ್ನೇಹಿತರ ಜೊತೆಯಲ್ಲಿ ಸ್ನೇಹಿತರು ಸಂತೋಷಪಡುತ್ತಾರೆ. ಅದ್ವಿತೀಯತ್ವವು ಯಾರಿಗೆ ಬೇಕಾಗಿದೆ?

**'ಯತ್ರ ಹಿ ದ್ವೈತಮಿವ ಭವತಿ'** ಎಂಬ ಶ್ರುತಿಯೂ ಇದನ್ನೇ ಹೇಳುತ್ತದೆ. ಸಂಸಾರದಲ್ಲಿರುವಂತೆ ಮೋಕ್ಷದಲ್ಲಿಯೂ ಭೇದವಿದ್ದರೆ ಅನ್ಯೋನ್ಯದರ್ಶನಸ್ಪರ್ಶನ ಸಖ್ಯಾದಿಗಳು ಉಂಟಾಗುತ್ತವೆ. ವಿಷಯಭೋಗ ಉಂಟಾಗುತ್ತದೆ. ಮೋಕ್ಷದಲ್ಲಿ ಆತ್ಮನು ಒಬ್ಬನೇ ಉಳಿದರೆ, ಆತ್ಮಾತಿರಿಕ್ತವಾದ ಯಾವುದೂ ಇಲ್ಲದಿದ್ದರೆ ಮುಕ್ತನು

ಯಾವುದರಿಂದ ಏನನ್ನು ನೋಡುತ್ತಾನೆ, ಯಾವುದರಿಂದ ಯಾವ ವಾಸನೆಯನ್ನು ತಿಳಿಯುತ್ತಾನೆ? ಯಾವುದೇ ಕರಣವಿಲ್ಲದುದರಿಂದ ಯಾವ ಜ್ಞಾನವೂ ಉಂಟಾಗುವುದಿಲ್ಲ. ಆಗ ಮೋಕ್ಷವು ಪುರುಷಾರ್ಥವೇ ಆಗುವುದಿಲ್ಲ. ಆದ್ದರಿಂದ ಮೋಕ್ಷದಲ್ಲಿ ಕರಣ, ವಸ್ತುಗಳು, ಬೇರೆ ಜೀವ ಇವುಗಳನ್ನು ಒಪ್ಪಬೇಕು. ಆಗ ಜ್ಞಾನವೂ ಭೋಗವೂ ಉಂಟಾಗುತ್ತದೆ ಎಂದು ಶ್ರುತಿಯು ತರ್ಕಶೈಲಿಯನ್ನನುಸರಿಸಿ ಮೋಕ್ಷದಲ್ಲಿ ದ್ವೈತವನ್ನೇ ಸಾಧಿಸುತ್ತದೆ. ಇದು ತರ್ಕವಲ್ಲ ಕೇವಲ ವಸ್ತುಸ್ಥಿತಿ ಕಥನ ಎಂದು ಹೇಳಿದರೆ **'ವಿಜ್ಞಾತಾರಮರೇ ಕೇನ ವಿಜಾನೀಯಾತ್'** ಎಂಬ ವಾಕ್ಯಕ್ಕೆ ಮುಕ್ತನಿಗೆ ತನ್ನ ಜ್ಞಾನವೂ ಇಲ್ಲವೆಂದು ಅರ್ಥವಾಗುವುದರಿಂದ ಮುಕ್ತನು ತಾರ್ಕಿಕರ ಜೀವನಂತೆ ಸರ್ವಧರ್ಮಮುಂಡಿತನಾಗುತ್ತಾನೆ. ನೀನು ನನ್ನ ಪಕ್ಷಸಾಧನೆಗಾಗಿ ಬಳಸಿದ ವೇದವಾಣಿಯು ನಿನಗೇ ಕೃಪಾಣಿಯಂತೆ ಮಾರಕವಾಗುತ್ತದೆ.

**'ನ ಪ್ರೇತ್ಯ ಸಂಜ್ಞಾಽಸ್ತಿ'** ಎಂಬ ವಾಕ್ಯವೂ ಸಹ ಪ್ರಾಕೃತಜ್ಞಾನಶೂನ್ಯತ್ವವನ್ನೇ ಹೇಳುತ್ತದೆ. ಸರ್ವಜ್ಞಾನಶೂನ್ಯತ್ವವನ್ನು ಹೇಳಿದರೆ ತಾರ್ಕಿಕಬಾಲಕರೇ ನಿನ್ನನ್ನು ಪರಾಭವಗೊಳಿಸುತ್ತಾರೆ ಮತ್ತು **'ನ ಪ್ರೇತ್ಯ ಸಂಜ್ಞಾಽಸ್ತಿ'** ಎಂಬ ವಾಕ್ಯವನ್ನು ಕೇಳಿದ ತಕ್ಷಣವೇ ಮೈತ್ರೇಯಿಯು **'ಅತ್ರೈವ ಮಾ ಭಗವಾನ್ ಮೋಹಾಂತ ಮಾಪಿಪತ್'** ಎಂದು ನನ್ನನ್ನು ಭ್ರಾಂತಿಯಲ್ಲಿ ಕೆಡವಿದಿರಿ ಎಂದು ಯಾಜ್ಞವಲ್ಕ್ಯರನ್ನು ಕುರಿತು ಹೇಳುತ್ತಾಳೆ. ಆದ್ದರಿಂದ ಮೋಕ್ಷದಲ್ಲಿ ಸರ್ವಜ್ಞಾನರಾಹಿತ್ಯವನ್ನು ಒಪ್ಪಿದರೆ ಅದು ಭ್ರಾಂತಿ ಎಂದು ಉಪನಿಷತ್ತಿನ ಅಭಿಪ್ರಾಯ.

**'ಯತ್ರ ಹಿ ದ್ವೈತಮಿವ ಭವತಿ'** ಎಂಬ ಶ್ರುತಿಯು ವಸ್ತುವಿನ ದ್ವೈತ ಎಂದರೆ ವೈಚಿತ್ರ್ಯವಿರುತ್ತದೆಯೋ ಅಲ್ಲಿ ಮನಸ್ಸು ಬೇರೆ ಬೇರೆ ವಸ್ತುಗಳಲ್ಲಿ ಲಗ್ನವಾಗುವುದರಿಂದ ಜೀವನು ಇಷ್ಟವಾದ ಇತರವಾದ ಅರ್ಥಗಳನ್ನು ನೋಡುತ್ತಾನೆ. ಆದರೆ ಯೋಗಿಯ ಮನಸ್ಸು ಇಷ್ಟವಾದ ಭಗವಂತನಲ್ಲಿ ಮಾತ್ರ ಲಗ್ನವಾದಾಗ ಯೋಗಿಯು ಪರಮಾತ್ಮನಿಗಿಂತ ಭಿನ್ನವಾದ ಯಾವುದನ್ನು ನೋಡುತ್ತಾನೆ ಯಾವುದನ್ನು ಕೇಳುತ್ತಾನೆ? ಯಾವ ಗುರುವಿನ ಉಪದೇಶ ಮತ್ತು ಅನುಗ್ರಹದಿಂದ ಈ ಸ್ಥಿತಿಯನ್ನು ತಲುಪಿದ್ದಾನೆಯೋ ಅಂತಹ ಗುರುವನ್ನಾದರೂ ಯಾವುದರಿಂದ ನೋಡುತ್ತಾನೆ ಎಂದು ಶ್ರುತಿಯು ಆತ್ಮರ ತನನ್ನೇ ಪ್ರಶಂಸೆ ಮಾಡುತ್ತದೆ ಎಂದೂ ಹೇಳಬಹುದು. ಪಗಡೆಯಾಡುವವನ ಕಿವಿಗೆ ತಾಯಿಯ

ಮರಣವಾರ್ತೆಯೂ ಕೇಳುವುದಿಲ್ಲ ಎಂಬ ಗಾದೆಯನ್ನು ಸ್ಮರಿಸಿಕೊಳ್ಳಬಹುದು. ತಲೆಯ ಮೇಲೆ ಕಲಶವನ್ನು ಇಟ್ಟುಕೊಂಡು ನರ್ತನವನ್ನು ಮಾಡುವ ಕಲಶದಲ್ಲಿಯೇ ನೆಟ್ಟಮನಸ್ಸುಳ್ಳ ನಟಿಯು ಏನನ್ನು ನೋಡುತ್ತಾಳೆ? ಬಾಣವನ್ನು ಮಾಡುವವನು ರಾಜನಸೈನ್ಯವು ಹೋದರೂ ಗಮನಿಸಲಿಲ್ಲ ಎಂಬ ಭಾಗವತೋಕ್ತಿ ಇದೆಯಷ್ಟೆ? ಹೀಗೆ ಆತ್ಮರತನಾದ ಜ್ಞಾನಿಯನ್ನು ಪ್ರಶಂಸ್ಸಿಸಿದರೆ ಇದರಲ್ಲಿ ಅಸಂಭಾವಿತವಾದುದು ಏನಿದೆ? ಅಥವಾ ದ್ವೈತ ಎಂದರೆ ಎರಡರಿಂದ ಕೂಡಿರುವುದು ಎಂದು ಅರ್ಥ. ಎಂದರೆ ಜೀವನು ಸಂಸಾರದಲ್ಲಿ ಅಪ್ರಾಕೃತ ಮತ್ತು ಪ್ರಾಕೃತವಾದ ಎರಡು ಇಂದ್ರಿಯಗಳಿಂದಲೂ ಕೂಡಿರುತ್ತಾನೆ. ಪ್ರಾಕೃತವಾದುದು ಬಾಹ್ಯೇಂದ್ರಿಯ. ಅಪ್ರಾಕೃತವಾದುದು ಸ್ವರೂಪೇಂದ್ರಿಯ. ಸಂಸಾರಾವಸ್ಥೆಯಲ್ಲಿ ಬಾಹ್ಯೇಂದ್ರಿಯಗಳು ಇರುವುದರಿಂದ ಚಕ್ಷುರಾದಿಬಾಹ್ಯೇಂದ್ರಿಯಗಳಿಂದ ಬಾಹ್ಯಪದಾರ್ಥದರ್ಶನಾದಿಗಳನ್ನು ಮಾಡುತ್ತಾನೆ. ಮೋಕ್ಷದಲ್ಲಿ ಬಾಹ್ಯೇಂದ್ರಿಯಗಳೆಲ್ಲವೂ ನಷ್ಟವಾಗಿರುವುದರಿಂದ ಯಾವ ಬಾಹ್ಯೇಂದ್ರಿಯದಿಂದ ಯಾವ ಬಾಹ್ಯವಸ್ತುವಿನ ಜ್ಞಾನವನ್ನು ಪಡೆಯುತ್ತಾನೆ ಎಂದು ಆಕ್ಷೇಪರೂಪವಾಗಿಯೂ ಶ್ರುತಿಗೆ ಅರ್ಥವನ್ನು ಮಾಡಬಹುದು.

**'ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ'** ಎಂಬ ಕಾಠಕಶ್ರುತಿಯೂ ಸಹ ಮೋಕ್ಷದಲ್ಲಿ ತಾದೃಕ್ತ್ವ ಎಂದರೆ ಸಾದೃಶ್ಯವನ್ನು ಹೇಳುತ್ತದೆಯೇ ಹೊರತು ತಾದಾತ್ಮ್ಯ ಎಂದರೆ ಅಭೇದವನ್ನು ಹೇಳುವುದಿಲ್ಲ. **'ಪರಮಂ ಸಾಮ್ಯಮುಪೈತಿ'** ಎಂಬ ಆಥರ್ವಣಶ್ರುತಿಯೂ ಸಾಮ್ಯವನ್ನೇ ಹೇಳುತ್ತದೆ. **'ಸೋಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ'** ಎಂಬ ತೈತ್ತಿರೀಯ ಶ್ರುತಿಯೂ ಜ್ಞಾನದ ಫಲವಾಗಿ ಕಾಮಭೋಗವನ್ನು ಹೇಳುತ್ತಾ **'ಬ್ರಹ್ಮಣಾ ಸಹ'** ಎಂದು ಬ್ರಹ್ಮನ ಸಹಭಾವವನ್ನೇ ಹೇಳುತ್ತದೆ. ಅಭೇದವನ್ನು ಹೇಳುವುದಿಲ್ಲ. ಅಲ್ಲಿಯೇ **'ಆನಂದಮಯಮಾತ್ಮಾನಮುಪಸಂಕ್ರಮ್ಯ'**, **'ಆನಂದಮಯಮಾತ್ಮಾನ- ಮುಪಸಂಕ್ರಾಮತಿ'** ಎಂದು ಮೋಕ್ಷಸ್ಥಿತಿಯನ್ನು ಹೇಳುವ ವಾಕ್ಯಗಳು ಸಮೀಪಪ್ರಾಪ್ತಿಯನ್ನು ಹೇಳುತ್ತವೆಯೇ ಹೊರತು ಅಭೇದವನ್ನು ಹೇಳುವುದಿಲ್ಲ.

ನಾವು ಉದಾಹರಿಸಿದ ಈ ಶ್ರುತಿಗಳೆಲ್ಲವೂ ಜೀವನ್ಮುಕ್ತಿಯನ್ನು ಮಾತ್ರ ಹೇಳುತ್ತವೆ ಪರಮಮೋಕ್ಷವನ್ನಲ್ಲ ಎಂದು ನೀನು ಹೇಳುವುದಾದರೆ, ಪರಮಮೋಕ್ಷಪರವೆಂದು ನೀನು ಹೇಳುವ **'ಯತ್ರ ಹಿ ದ್ವೈತಮಿವ ಭವತಿ'** ಎಂಬ

ವಾಕ್ಯವೂ ಸುಷ್ಟಿಪರವೆಂದು ನಾವು ಹೇಳುತ್ತೇವೆ. ಸುಷ್ಟಿಯಲ್ಲಿ ಬಾಹ್ಯೇಂದ್ರಿಯಗಳೆಲ್ಲವೂ ಉಪರತವಾಗಿ ಕೇವಲ ಆತ್ಮನು ಮಾತ್ರ ಪ್ರಕಾಶಮಾನನಾಗಿ ಉಳಿದಿರುವುದರಿಂದ ಆಗ ಯಾವ ಬಾಹ್ಯೇಂದ್ರಿಯಗಳ ವ್ಯಾಪಾರವೂ ಇಲ್ಲ. ಆದ್ದರಿಂದ ಯಾವುದರಿಂದ ನೋಡುತ್ತಾನೆ ಯಾವುದ್ರಿಂದ ಕೇಳುತ್ತಾನೆ ಇತ್ಯಾದಿ ಆಕ್ಷೇಪಗಳು ಬಹಳ ಶ್ಲಿಷ್ಟವಾಗುತ್ತದೆ. **'ವಿಜ್ಞಾತಾರಮರೇ ಕೇನ ವಿಜಾನೀಯಾತ್'** ಎಂಬ ವಾಕ್ಯಕ್ಕೂ ಪಕ್ಕದಲ್ಲಿ ನಿಂತು ಸುಪ್ತನಾದ ತನ್ನನ್ನು ನೋಡುತ್ತಿರುವ ಇನ್ನೊಬ್ಬ ವ್ಯಕ್ತಿಯನ್ನಾದರೂ ಹೇಗೆ ತಿಳಿದುಕೊಳ್ಳುತ್ತಾನೆ ಎಂಬ ಸ್ವರಸವಾದ ಅರ್ಥವನ್ನೇ ಹೇಳಬಹುದು.

ಈ ವಾಕ್ಯವು ಪರಮಮುಕ್ತಿಪರವಾದುದು ಎಂದು ಹೇಳಿದರೂ ಆಗಲೂ ಬೇರೆ ಅರ್ಥವನ್ನು ಹೇಳಬಹುದು. **'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ'** ಎಂಬ ಶ್ರುತಿಯು ಕ ಎಂದರೆ ಸುಖ ಎಂದು ಹೇಳುತ್ತದೆ. ಮೋಕ್ಷದಲ್ಲಿ ತನ್ನ ದೇಹೇಂದ್ರಿಯಾದಿಗಳೂ, ಪರವ್ಯಕ್ತಿಯ ದೇಹೇಂದ್ರಿಯಾದಿಗಳೂ ಸುಖರೂಪವಾಗಿರುವುದರಿಂದ ಸುಖರೂಪವಾದ ಇಂದ್ರಿಯದಿಂದ ಸುಖರೂಪವಾದ ಇನ್ನೊಂದು ವ್ಯಕ್ತಿಯನ್ನು ನೋಡುತ್ತಾನೆ ಎಂದು ಆಕ್ಷೇಪಾಂಶರಹಿತವಾದ ಸರಳವಾದ ಅರ್ಥವನ್ನು ಹೇಳಬಹುದು.

## 'ಸರ್ವ ಏಕೀಭವಂತಿ' ಇತ್ಯಾದಿ ಶ್ರುತ್ಯರ್ಥವಿಚಾರ :

**'ಪರೇऽವ್ಯಯೇ ಸರ್ವ ಏಕೀ ಭವಂತಿ'** ಎಂಬ ಶ್ರುತಿಗೆ ಭೇದಪರವಾದ ಅನೇಕ ಅರ್ಥಗಳನ್ನು ಹಿಂದೆ ಹೇಳಿದ್ದಾಗಿದೆ. ಈ ವಾಕ್ಯಕ್ಕೂ ಸುಷ್ಟಿಪರವಾಗಿಯೂ ಅರ್ಥವನ್ನು ಮಾಡಬಹುದು. ಸುಪ್ತರೆಲ್ಲರೂ ಹೃದಯಗತನಾದ ಪ್ರಾಜ್ಞನಾಮಕ ಪರಮಾತ್ಮನ ಉದರದಲ್ಲಿ ಪ್ರವೇಶಿಸಿ ಕ್ಷೀರನೀರಗಳಂತೆ ಮಿಶ್ರಿತರಾಗಿರುತ್ತಾರೆ. **'ಸತಾ ಸೋಮ್ಯ ತದಾ ಸಂಪನ್ನೋ ಭವತಿ', 'ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದನಾಂತರಂ'** ಇತ್ಯಾದಿ ಶ್ರುತಿಗಳು ಸುಷ್ಟಿಯಲ್ಲಿ ಜೀವರಿಗೆ ಹರಿಯ ಉದರಪ್ರವೇಶವನ್ನು ಹೇಳುತ್ತದೆ. ಹೀಗೆ ಮುಕ್ತಿಯನ್ನು ಹೇಳಲು ಹೊರಟ ನಿನ್ನ ವಾಕ್ಯಗಳೆಲ್ಲವೂ ಹಿಂದಿರುಗಿ ಒಂದು ಸಂಸಾರವನ್ನೇ ಹೇಳುತ್ತವೆ. ನಮ್ಮ ವಾಕ್ಯಗಳಾದರೋ ಆಯಾ ಪ್ರಕರಣಗಳಲ್ಲಿ ಹೇಳಿದ ಅಸಾಧಾರಣ ಫಲಗಳ ಬಲದಿಂದ ಮೋಕ್ಷಕಥನವನ್ನು ಬಿಟ್ಟು ಎಂದೂ ಹಿಂದಿರುಗಿ ಬರುವುದಿಲ್ಲ. **'ನ ಚ ಪುನರಾವರ್ತತೇ'** ಎಂಬುದು ನಮಗೇ ಸಲ್ಲುತ್ತದೆ. ನಿನಗೆ ಸಲ್ಲುವುದಿಲ್ಲ.

**'ಜಕ್ಷನ್ ಕ್ರೀಡನ್ ರಮಮಾಣಃ'** ಎಂಬ ವಾಕ್ಯವು ಸಂಸಾರಸುಖವನ್ನು ಹೇಳುತ್ತದೆ ಎಂದು ಹೇಳುವುದಾದರೆ ಅಸಂಗತವಾಗುತ್ತದೆ. ಸಂಸಾರದಲ್ಲಿ ದುಃಖಮಿಶ್ರಿತಸುಖದಲ್ಲಿ ವಿರಕ್ತನಾದ ಮುಮುಕ್ಷುವಿಗೆ ಸಂಸಾರಸುಖವನ್ನು ಹೇಳುವುದಕ್ಕೆ ಏನು ಸಂಗತಿ? ಆದ್ದರಿಂದ ಇದು ಸಂಸಾರಾವಸ್ಥೆಯೂ ಅಲ್ಲ ಜೀವನ್ಮುಕ್ತ್ಯವಸ್ಥೆಯೂ ಅಲ್ಲ. ನಿರಂಜನ ಶಬ್ದವು ಹೇಳುವ ಅಜ್ಞಾನನಾಶ, ಪುಣ್ಯಪಾಪವಿನಿರ್ಮುಕ್ತಿ, ಕಾಮಾನ್ನಿತ್ವ, ಸ್ವರೂಪಾಭಿವ್ಯಕ್ತಿ ಇವೆಲ್ಲಾ ಜೀವನ್ಮುಕ್ತಿದಶೆಯಲ್ಲಿ ಉಂಟಾಗಲು ಸಾಧ್ಯವಿಲ್ಲ. ಜೀವನ್ಮುಕ್ತಿದಶೆಯಲ್ಲಿ ಇನ್ನೂ ಕರ್ಮಶೇಷವಿರುವುದರಿಂದ ಕರ್ಮಫಲಗಳು ಇದ್ದೇ ಇರುತ್ತವೆ. ದೇವತೆಗಳು ಜೀವನ್ಮುಕ್ತರು. ಅವರಿಗೆ ಕಾಮಾನ್ನಿತ್ವವು ಇರುವುದಾದರೆ ಅಮೃತಪ್ರಾಪ್ತಿಗಾಗಿ ಕ್ಷೀರಸಾಗರವನ್ನು ಏಕೆ ಮಥನ ಮಾಡಿದರು? ಯಜ್ಞಭಾಗದ ಸಲುವಾಗಿ ಶ್ರುತಿಸ್ಮೃತಿಗಳಲ್ಲಿ ಕಂಡುಬರುವ ಕಲಹವು ಅವರಿಗೆ ಹೇಗೆ ಉಪಪನ್ನವಾಗುತ್ತದೆ? ಇನ್ನು ನಾರದಾದಿ ಋಷಿಗಳನ್ನು ತೆಗೆದುಕೊಂಡರೆ, ಅವರೂ ಅಪರೋಕ್ಷಜ್ಞಾನವನ್ನು ಪಡೆದು ಜೀವನ್ಮುಕ್ತರಾಗಿದ್ದಾರೆ. ಆದರೆ ಅವರು ಜಲವಾಯುಪರ್ಣತೃಣಾಶನರಾಗಿ ಶರೀರವನ್ನು ಸಂತಾಪಗೊಳಿಸಿ ತಪಸ್ಸಿನಲ್ಲಿಯೇ ಇನ್ನೂ ನಿರತರಾಗಿದ್ದಾರೆ. ಅವರಿಗಾದರೂ ಕಾಮಾನ್ನಿತ್ವವು ಎಲ್ಲಿದೆ? ಜೀವನ್ಮುಕ್ತಿಯಲ್ಲಿ ಪರಮಸಾಮ್ಯವಾದರೂ ಎಲ್ಲಿದೆ? ಜೀವನ್ಮುಕ್ತರಿಗೂ ದುಃಖವಿರುವುದು ಪ್ರಸಿದ್ಧವಾಗಿರುವುದರಿಂದ ನಿರ್ದುಃಖವಾದ ಬ್ರಹ್ಮನ ಜೊತೆಯಲ್ಲಿ ಅವರಿಗೆ ಹೇಗೆ ಪರಮಸಾಮ್ಯವು ಉಂಟಾಗುತ್ತದೆ? ಸಂಸಾರದಲ್ಲಿದ್ದ ಚೇತನತ್ವಾದಿನಾ ಸಾಮ್ಯವು ಮಾತ್ರ ಆಗ ಇರುತ್ತದೆಯಷ್ಟೆ? ಮತ್ತು ಜೀವನ್ಮುಕ್ತರಿಗೂ ಜನನಮರಣಗಳಿವೆ. ಗೀತೆಯಲ್ಲಿ **'ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ । ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ'** ಎಂದು ಜನನಮರಣಗಳಿಲ್ಲದ ದಶೆಯಲ್ಲಿಯೂ 'ಸಾಧರ್ಮ್ಯ'ವನ್ನು ಮಾತ್ರ ಹೇಳಿದ್ದಾರಷ್ಟೆ. ಇದು ಪರಮಮೋಕ್ಷಸ್ಥಿತಿಯೇ ಆಗಬೇಕು. **'ಶರವತ್ ತನ್ಮಯೋ ಭವೇತ್'** ಎಂಬ ಉಪನಿಷದ್ವಾಕ್ಯವು ಬಾಣದಂತೆ ಪರಮಾತ್ಮನನ್ನು ಪ್ರವೇಶಿಸಬೇಕು ಎಂದು ಹೇಳುತ್ತದೆ. ಆದ್ದರಿಂದಲೂ ಪರಮಮೋಕ್ಷದಲ್ಲಿ ಪರಮಾತ್ಮನಲ್ಲಿ ಪ್ರವೇಶವೋ ಹೊರತು ಪರಮಾತ್ಮನಿಂದ ಏಕೀಭಾವವನ್ನು ಹೊಂದುವುದಲ್ಲ ಎಂದು ತಿಳಿಯುತ್ತದೆ. 'ದ್ವಾಸುಪರ್ಣಾ' ಶ್ರುತಿಯಂತೂ ಅತ್ಯಂತ ಸ್ಪಷ್ಟವಾಗಿ ಜೀವೇಶಭೇದವನ್ನು ಹೇಳುವುದರಿಂದ ಎಲ್ಲಾ ಶ್ರುತಿಗಳಿಗೂ ಜೀವೇಶಭೇದದಲ್ಲಿಯೇ ಮಹಾತಾತ್ಪರ್ಯವು ಸಿದ್ಧಿಸುತ್ತದೆ.

## 'ತ್ವಮೇವಾಹಂ ವಿಚಕ್ಷ್ವ ಭೋ' ಇತ್ಯಾದಿ ವಾಕ್ಯಗಳ ವಿಮರ್ಶೆ :

ರಾಜನು ತನ್ನ ಮಂತ್ರಿಯನ್ನಾಗಲೀ ಭೃತ್ಯನನ್ನಾಗಲೀ ಕುರಿತು ನಾನೇ ನೀನು ಎಂದು ಹೇಳಿದರೆ ಆಪ್ತತೆಯು ಗೊತ್ತಾಗುವುದಷ್ಟೆ? ರಾಜನಿಗೂ ಮಂತ್ರಿಗೂ ಭೃತ್ಯನಿಗೂ ಎಂದೂ ಅಭೇದವಿಲ್ಲ. ಅದರಂತೆ ಪುರಂಜನೋಪಾಖ್ಯಾನದಲ್ಲಿರುವ ಹಂಸವಾಕ್ಯಕ್ಕೂ ಪುರಂಜನನಲ್ಲಿ ಅವಿಜ್ಞಾತಸಖನಾದ ಹಂಸಕ್ಕೆ ಬಹಳ ಪ್ರೀತಿ ಇದೆ ಎಂದೇ ಅರ್ಥವಾಗುತ್ತದೆ. ಮೋಕ್ಷದಲ್ಲಿ ದರ್ಶನಾದ್ಯಭಾವವು ಸುಖರೂಪವೆಂಬುದು ನಮ್ಮ ಅನುಭವಬಾಧಿತವಾದುದು. ಬೇರೆಯವರ ಮೇಲಿನ ದ್ವೇಷದಿಂದ ತಮ್ಮ ಅನಿಷ್ಟವನ್ನೂ ಲೆಕ್ಕಿಸದವರು ಮಾತ್ರ ಹೀಗೆ ಅಂಗೀಕಾರವನ್ನು ಮಾಡುತ್ತಾರೆ. ಬೇರೆಯವರ ದರ್ಶನ ಸ್ಪರ್ಶನಾದಿಗಳನ್ನು ಪರಿಹರಿಸಿ ಕತ್ತಲೆಯಲ್ಲಿ ಕಳ್ಳನು ಅಡಗಿ ಕುಳಿತಂತೆ. ಪೂರ್ವೋತ್ತರವಿರುದ್ಧಾರ್ಥವನ್ನು ಮತ್ತರು ಹೇಳಬಹುದೇ ಹೊರತು ವಿವೇಕಿಗಳು ಹೇಳುವುದಿಲ್ಲ. **'ಏಕಾಕೀ ನರಮತೇ'** ಎಂದು ಶ್ರುತಿಯು ಗರ್ಜಿಸುತ್ತಿದ್ದರೂ ದ್ವಿತೀಯಾಭಾವವನ್ನು ಪುರುಷಾರ್ಥವೆಂದು ಹೇಗೆ ಹೇಳುತ್ತಾರೆ? **'ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ'** ಎಂಬ ಶ್ರುತಿಯೂ ಮೋಕ್ಷದಲ್ಲಿ ಪರಂಜ್ಯೋತಿಯಾದ ಪರಮಾತ್ಮನ ಉಪಸಂಪತ್ತಿ ಎಂದರೆ ಪ್ರಾಪ್ತಿಯನ್ನೇ ಹೇಳುತ್ತದೆ. **'ಸಂಪದ್ಯಾವಿಹಾಯ ಸ್ವೇನ ಶಬ್ದಾತ್'** ಎಂಬ ಬ್ರಹ್ಮಸೂತ್ರದಲ್ಲಿಯೂ ಮೋಕ್ಷದಲ್ಲಿಯೂ ಬ್ರಹ್ಮಸಂಪತ್ತಿ ಮತ್ತು ಜೀವಭಾವನಪಗಮವನ್ನೇ ನಿರ್ಣಯಿಸಿದ್ದಾರೆ. **'ಬ್ರಹ್ಮಪ್ರಧಾನಮುಪಯಂತ್ಯ-ಗತಾಭಿಮಾನಾಃ'** ಎಂಬ ಭಾಗವತವಾಕ್ಯವೂ ಮೋಕ್ಷದಲ್ಲಿ ಜೀವಭಾವದ ಅನುವೃತ್ತಿಯನ್ನೇ ಹೇಳುತ್ತದೆ. ರಾಜನು ಇನ್ನೊಬ್ಬನ ಮೇಲೆ ಎಷ್ಟೇ ಸಂತೋಷಗೊಂಡರೂ ತನ್ನ ಪತ್ನಿಯನ್ನು ಅವನಿಗೆ ಕೊಡುವುದಿಲ್ಲ. ಅದರಂತೆ ಹರಿಯೂ ತನಗೆ ಶರಣಾಗತನಾದವನಿಗೆ ತನ್ನ ಐಕ್ಯವನ್ನು ಕೊಡುವುದಿಲ್ಲ. ರಾಜವಾಹನವನ್ನಾಗಲೀ ರಾಜಸಿಂಹಾಸನವನ್ನಾಗಲೀ ಬಯಸಬಾರದೆಂದು ಲೋಕನೀತಿ. ಐಕ್ಯವನ್ನು ಆಶಿಸುವುದು ಗರುಡವಾಹನ, ಶೇಷಶಯನಗಳನ್ನು ಬಯಸಿದಂತೆಯೇ ಸರಿ. ಗರುಡಶೇಷರು ದೇವೋತ್ತಮರು. ಅವರೇ ಐಕ್ಯವನ್ನು ಬಯಸದೆ ವಾಹನ ಶಯನಗಳಾಗಿ ಸೇವೆಯನ್ನು ಸಲ್ಲಿಸುವಾಗ ಅಲ್ಪನಾದ ನರನಿಗೆ ಎಲ್ಲಿಯ ಐಕ್ಯದ ಆಸೆ? **'ನ ಯತ್ರಮಾಯಾ ಕಿಮುತಾಪರೇ'** ಎಂಬ ವೈಕುಂಠವರ್ಣನೆಯ ಪ್ರಕರಣದಲ್ಲಿರುವ ಭಾಗವತ ವಾಕ್ಯವು ವೈಕುಂಠದಲ್ಲಿ ಮಾಯಾಸಾಮಾನ್ಯಾಭಾವವನ್ನು ಹೇಳಿ ಮಾಯಾಕಾರ್ಯವಾದ

ಕಾಮಕ್ರೋಧಾದಿಗಳು ಇಲ್ಲವೆಂದು ಕೈಮುತ್ಯನ್ಯಾಯದಿಂದ ಹೇಳುತ್ತಿದೆ. ವೈಕುಂಠ ಲೋಕವೂ ಮಾಯಾಮಯವಲ್ಲ ಎಂದು ಸಿದ್ಧವಾಗುತ್ತದೆ. ಜಡವೆಲ್ಲವೂ ಮಾಯಾಮಯವಾದುದು. ಆದ್ದರಿಂದ ಮಾಯಾಮಯವಲ್ಲದ ಲೋಕವು ಚಿನ್ಮಯವೇ ಆಗಬೇಕು. ಆದ್ದರಿಂದಲೇ ಅದು ಲಕ್ಷ್ಮ್ಯಾತ್ಮಕವಾದುದೆಂದು ಶ್ರುತಿಸ್ಮೃತಿಗಳು ಹೇಳುತ್ತವೆ. ಆದ್ದರಿಂದಲೇ ಪ್ರಳಯಕಾಲದಲ್ಲಿ ಸರ್ವನಾಶವಾದರೂ ವೈಕುಂಠಲೋಕವು ನಾಶವನ್ನು ಹೊಂದದೆ ನಿತ್ಯವಾಗಿ ಉಳಿಯುತ್ತದೆ. 'ವೈಕುಂಠಲೋಕವು ದಿವ್ಯವಾದುದು, ಗುಣತ್ರಯವರ್ಜಿತವಾದುದು, ಅವೈಷ್ಣವರಿಗೆ ಅಗಮ್ಯವಾದುದು, ನಿತ್ಯವೂ ಸಿದ್ದರಿಂದ ತುಂಬಿರುವಂತಹದು, ಸಭಾಪ್ರಸಾದಾದಿಗಳಿಂದಲೂ, ವಾಪೀಕೂಪಾದಿಗಳಿಂದಲೂ ಅಲಂಕೃತವಾದುದು, ಅಪ್ರಾಕೃತವಾದುದು, ದೇವತೆಗಳಿಂದ ವಂದ್ಯವಾದುದು, ಸಹಸ್ರಾರು ಸೂರ್ಯರ ಕಾಂತಿಯುಳ್ಳದ್ದು' ಎಂದು ಬ್ರಹ್ಮದೇವರು ವೈಕುಂಠಲೋಕವನ್ನು ವರ್ಣಿಸಿದ್ದಾರೆ. ವಾಸುದೇವಸಹಸ್ರನಾಮವನ್ನು ಉಪದೇಶಿಸುತ್ತಾ ರುದ್ರದೇವರು ಅದರಲ್ಲಿ **'ಶಂಭುಬ್ರಹ್ಮೋರ್ಧ್ವಧಾಮಗಃ'** ಎಂದು ಒಂದು ನಾಮವನ್ನು ಹೇಳಿದ್ದಾರೆ. ಇಲ್ಲಿ ರುದ್ರ ಮತ್ತು ಬ್ರಹ್ಮರಿಗಿಂತ ಮೇಲಿರುವ ವೈಕುಂಠಲೋಕದಲ್ಲಿರುವವನು ಎಂದು ಅರ್ಥವಲ್ಲ. ಏಕೆಂದರೆ ವೈಕುಂಠಲೋಕದ ಮೇಲೆಯೂ ರುದ್ರಬ್ರಹ್ಮರ ವ್ಯಾಪ್ತಿ ಇದೆ. ವೈಕುಂಠಲೋಕವು ಬ್ರಹ್ಮಾಂಡದ ಒಳಗಿದೆ. ಅಹಂಕಾರತತ್ವ ಮತ್ತು ಮಹತ್ತತ್ವಗಳು ಬಹಿರಾವರಣಗಳವರೆಗೂ ಇವೆಯಷ್ಟೆ? ಆದ್ದರಿಂದ್ರ ರುದ್ರಬ್ರಹ್ಮರ ಲೋಕಕ್ಕಿಂತ ಶ್ರೇಷ್ಠವಾದ ಲೋಕದಲ್ಲಿರುವವನು ಎಂದೇ ಅರ್ಥ. ಅದರಿಂದ ವೈಕುಂಠಲೋಕವು ಸರ್ವಶ್ರೇಷ್ಠವೆಂದು ಸಿದ್ಧವಾಗುತ್ತದೆ. ಸರ್ವೋತ್ತಮನು ಇರುವ ಲೋಕವು ಸರ್ವಶ್ರೇಷ್ಠವಾಗಿಯೇ ಇರಬೇಕಷ್ಟೆ? ಅದರಂತೆ ಬ್ರಹ್ಮರುದ್ರರಿಗಿಂತ ಗುಣಗಳಲ್ಲಿ ಶ್ರೇಷ್ಠಳಾದ ಲಕ್ಷ್ಮೀರೂಪವಾದ ಧಾಮದಲ್ಲಿ ನೆಲೆಸಿರುವವನು ಎಂದು ಅರ್ಥ.

ಹಾಗೆಯೇ ಭಾಗವತದಲ್ಲಿ ಬರುವ-

**ನ ವರ್ತತೇ ಯತ್ರ ರಜಸ್ತಮಸ್ತಯೋಃ**
**ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।**
**ನ ಯತ್ರ ಮಾಯಾ ಕಿಮುತಾಪರೇ**
**ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ ।**
**ಶ್ಯಾಮಾವದಾತಾಃ ಶತಪತ್ರಲೋಚನಾಃ**
**ಪಿಶಂಗವಸ್ತ್ರಾಃ ಸುರುಚಃ ಸುಪೇಶಸಃ ।**

ಸರ್ವೇ ಚತುರ್ಬಾಹವ ಉನ್ಮಿಷನ್ಮಣಿ
ಪ್ರವೇಕನಿಷ್ಕಾಭರಣಾಃ ಸುವರ್ಚಸಃ ।
ಪ್ರವಾಳವೈಡೂರ್ಯ ಮೃಣಾಲವರ್ಚಸಾಂ
ಪರಿಸ್ಫುರತ್‌ಕುಂಡಲ ಮೌಲಿಮಾಲಿನಾಂ।
ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜತೇ
ಲಸದ್ವಿಮಾನಾವಲಿಭಿರ್ಮಹಾತ್ಮನಾಂ ।
ವಿದ್ಯೋತಮಾನ ಪ್ರಮದೋತ್ತಮಾಭಿಃ
ಸವಿದ್ಯುದಭ್ರಾವಲಿಭಿರ್ಯಥಾ ನಭಃ ।
ಶ್ರೀರ್ಯತ್ರ ರೂಪಿಣ್ಯುರುಗಾಯಪಾದಯೋಃ
ಕರೋತಿ ಮಾನಂ ಬಹುಧಾ ವಿಭೂತಿಭಿಃ

ಎಂಬ ಶ್ಲೋಕಗಳನ್ನು ವಿಮರ್ಶೆಮಾಡಿ ಮುಕ್ತರೆಲ್ಲರೂ ಹರಿಗೆ ಅನುವ್ರತರು ಎಂದರೆ ದಾಸರೆಂದೂ ಚತುರ್ಬಾಹುಗಳಿಂದಲೂ ನಿಷ್ಕಾಭರಣಗಳಿಂದಲೂ ಪೀತಾಂಬರಗಳಿಂದಲೂ ಹರಿಗೆ ಸದೃಶರಾಗಿದ್ದರೂ ಶ್ರೀವತ್ಸಕೌಸ್ತುಭರಹಿತರಾಗಿ ಹರಿಗೆ ವಿಸದೃಶರಾಗಿ ಆದ್ದರಿಂದಲೇ ಭಿನ್ನರಾಗಿ ಇದ್ದಾರೆಂದೂ ಸಮರ್ಥಿಸಿದ್ದಾರೆ. **'ಜಗದ್‌ವ್ಯಾಪಾರವರ್ಜಂ'** ಎಂಬ ಬ್ರಹ್ಮಸೂತ್ರವು ಮುಕ್ತರಿಗೆ ಜಗತ್ಸೃಷ್ಟ್ಯಾದಿ ಸಾಮರ್ಥ್ಯವಿಲ್ಲವೆಂದು ಹರಿಯಿಂದ ಭೇದವನ್ನೇ ಹೇಳುತ್ತದೆ. ಹಾಗೆಯೇ ಗೀತೆಯಲ್ಲಿ **'ಮಮ ಸಾಧರ್ಮ್ಯಮಾಗತಾಃ । ಸರ್ಗೇಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ'** ಎಂದು ಮುಕ್ತರಿಗೆ ಸಾಧರ್ಮ್ಯವನ್ನೇ ಹೇಳಿದ್ದಾರೆ. ಹೀಗೆ ಮುಕ್ತರು ಜನನಮರಣರಹಿತರಾಗಿ, ಜಡದೇಹಾದಿರಹಿತರಾಗಿ, ದುಃಖರಹಿತರಾಗಿ, ಜ್ಞಾನಾನಂದಾಕಾರವನ್ನು ಹೊಂದಿ, ನಿತ್ಯವೂ ಸುಖವನ್ನೇ ಅನುಭವಿಸುವುದರಿಂದ ಈ ಮುಕ್ತಿಯು ಸಂಸಾರಕ್ಕಿಂತ ಅತ್ಯಂತವಿಲಕ್ಷಣವಾದುದು. ಸಂಸಾರದಲ್ಲಿ ತ್ರಿವಿಧ ಜೀವರೂ ಇರುತ್ತಾರೆ. ಮುಕ್ತಿಯಲ್ಲಿ ಮಾತ್ರ ಶುದ್ಧಜೀವರೇ ಇರುತ್ತಾರೆ.

ದೇವತೆಗಳ ಅಶ್ವವು ಮಾನ್ಯವಾದುದು, ಗಜವು ಮಾನ್ಯವಾದುದು, ಧೇನುವು ಮಾನ್ಯವಾದುದು, ವೃಕ್ಷವಾದ ಕಲ್ಪವೃಕ್ಷವೂ ಮಾನ್ಯವಾದುದು, ಹರಿಪ್ರಿಯವಾದ ಸರ್ಪವೂ ಮಾನ್ಯವಾದುದು. ಹರಿವಾಹನವಾದ ಪಕ್ಷಿಯೂ ಮಾನ್ಯವಾದುದು, ಸ್ತ್ರೀಯರಾದ ಅಪ್ಸರೆಯರು ಮಾನ್ಯರು, ದೇವತೆಗಳ ಶ್ವಾನಗಳಾದ ಶ್ಯಾಮಶಬಲಗಳೂ ಮಾನ್ಯವಾದುವು. ಸ್ವರ್ಗಲೋಕದಲ್ಲಿರುವ ಇವುಗಳೆಲ್ಲಾ ಪ್ರಾಕೃತವಾದರೂ ಭೂಲೋಕದಲ್ಲಿ ಇರುವವರಿಂದ ಮಾನ್ಯವಾಗುತ್ತವೆ. ಇನ್ನು ಅಪ್ರಾಕೃತವಾದ ವೈಕುಂಠಲೋಕದಲ್ಲಿರುವ ಸಕಲವಸ್ತುಗಳೂ ಮತ್ತು

ವೈಕುಂಠಲೋಕವೂ ಮಾನ್ಯವಾಗುವುದಕ್ಕೆ ವಂದ್ಯವಾಗುವುದಕ್ಕೆ ಏನು ಅನುಪಪತ್ತಿ ಇದೆ? ಆದ್ದರಿಂದಲೇ 'ಅಪ್ರಾಕೃತಂ ಸುರೈರ್ವಂದ್ಯಂ' ಎಂದು ಬ್ರಹ್ಮದೇವರು ಹೇಳಿದ್ದಾರೆ. ವೈಕುಂಠಲೋಕದಲ್ಲಿ ಜ್ಞಾನಾನಂದಾತ್ಮಕ ದೇಹವುಳ್ಳ ಅನೇಕ ಪಶುಪಕ್ಷ್ಯಾದಿ ಜೀವರಿದ್ದಾರೆ, ತೃಣಗುಲ್ಮಾದಿ ಜೀವರೂ ಇದ್ದಾರೆ. ಎಲ್ಲರೂ ತತ್ತದ್ರೂಪನಾದ ಹರಿಯ ಪ್ರತಿಬಿಂಬಗಳು. ವೈಕುಂಠಲೋಕವನ್ನು ಶ್ರುತಿಯು **'ತದಪರಾಜಿತಾಃ ಪೂಃ'** ಎಂದು ಅಪರಾಜಿತನಾಮಕವಾದ ಪಟ್ಟಣವೆಂದು ಕರೆಯುತ್ತದೆ. ಆದ್ದರಿಂದ ಪಟ್ಟಣದಲ್ಲಿರಬೇಕಾದ ಎಲ್ಲಾ ವಸ್ತುಗಳೂ ಅಲ್ಲಿ ಇವೆ. **'ಪ್ರಕೃಷ್ಟಸತ್ವರಾಶಿಂ ತ್ವಾಂ ಕದಾ ದ್ರಕ್ಷ್ಯಾಮಿ ಚಕ್ಷುಷಾ'** ಎಂದು ಬ್ರಹ್ಮದೇವರ ಪ್ರಾರ್ಥನೆ ಇದೆಯಷ್ಟೆ. ಇಲ್ಲಿ ಪ್ರಕೃಷ್ಟಸತ್ವರಾಶಿಂ ಎಂಬುದು ಬಹುವ್ರೀಹಿ ಸಮಾಸ. ಸತ್ವರಾಶಿ ಎಂದರೆ ಪ್ರಾಣಿಗಳ ಸಮೂಹ. ಅದು ಮೇಲೆ ಹೇಳಿದಂತೆ ಸಂಸಾರದಲ್ಲಿರುವುದಕ್ಕಿಂತ ಅತ್ಯಂತ ವಿಲಕ್ಷಣವಾಗಿರುವುದರಿಂದ ಪ್ರಕೃಷ್ಟವಾಗಿದೆ. ಅಲ್ಲದೆ ಸಂಸಾರದಲ್ಲಿ ಒಂದೇ ಜೀವರಿಗೆ ಬೇರೆ ಬೇರೆ ಜನ್ಮಗಳಲ್ಲಿ ಬೇರೆ ಬೇರೆ ಯೋನಿಗಳು ಬರುತ್ತವೆ. ಮೋಕ್ಷದಲ್ಲಿ ಅಂತಹ ವ್ಯತ್ಯಾಸವು ಇಲ್ಲವಾದ್ದರಿಂದಲೂ ಅದು ಪ್ರಕೃಷ್ಟವಾಗಿದೆ. ಇಂತಹ ಪ್ರಮಾಣಪ್ರಮಿತವಾದ ಮೋಕ್ಷಸ್ವರೂಪವನ್ನು ಅಂಗೀಕರಿಸಲು ನಿನಗೆ ಏಕೆ ದ್ವೇಷವೆಂದು ರಾಜರು ಅಪಹಾಸಮಾಡುತ್ತಾರೆ.

## 'ರೂಪಂ ರೂಪಂ ಪ್ರತಿರೂಪೋ ಬಭೂವ' ಶ್ರುತ್ಯರ್ಥವಿಚಾರ :

ಇನ್ನು ಜೀವಸ್ವರೂಪದಲ್ಲಿಯೇ ವೈಚಿತ್ರ್ಯವನ್ನು ಸಾಧಿಸುವ **'ರೂಪಂ ರೂಪಂ ಪ್ರತಿರೂಪೋ ಬಭೂವ । ತದಸ್ಯರೂಪಂ ಪ್ರತಿಚಕ್ಷಣಾಯ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ । ಯುಕ್ತಾ ಹ್ಯಸ್ಯಹರಯಃ ಶತಾ ದಶ'** ಎಂಬ ಶ್ರುತ್ಯರ್ಥವನ್ನು ವಿಮರ್ಶೆಮಾಡುತ್ತಾರೆ. ಪುರುರೂಪ ಎಂದರೆ ಅನಂತರೂಪಗಳುಳ್ಳವನು ಎಂದು ಅರ್ಥ. ಅನಂತರೂಪಗಳುಳ್ಳವನು ವಿಷ್ಣುವೇ. ಏಕೆಂದರೆ ಯಾವ ವಾದಿಗಳೂ ಜೀವರು ಇಂದ್ರನ ಪ್ರತಿಬಿಂಬಗಳೆಂದು ಅಂಗೀಕರಿಸುವುದಿಲ್ಲ. ಇನ್ನು ನಿರ್ಗುಣಬ್ರಹ್ಮನನ್ನು ತೆಗೆದುಕೊಂಡರೆ ಅವನಿಗೆ ರೂಪವೇ ಇಲ್ಲವಾದ್ದರಿಂದ ಪುರುರೂಪವು ಸುತರಾಂ ಇಲ್ಲ. ಆದ್ದರಿಂದ ಇಂದ್ರ ಶಬ್ದವಾಚ್ಯನಾದವನು ಇಲ್ಲಿ ವಿಷ್ಣುವೇ. ಮಾಯಾ ಎಂದರೆ ಇಚ್ಛೆ ಎಂತಲೂ, ಲಕ್ಷ್ಮೀ ಎಂತಲೂ ಅರ್ಥ. ಎರಡೂ ಅರ್ಥಗಳನ್ನು ತೆಗೆದುಕೊಂಡು ತನ್ನ ಇಚ್ಛೆಯಿಂದಲೇ ವಿಷ್ಣುವು ಲಕ್ಷ್ಮೀಸಹಿತವಾದ ಅನಂತರೂಪಗಳನ್ನು ಧರಿಸಿದ್ದಾನೆ ಎಂದು

ಅರ್ಥವಾಗುತ್ತದೆ. ಅನಂತ ಜೀವರು ಅವನ ಅನಂತರೂಪಗಳಿಗೆ ಪ್ರತಿಬಿಂಬರಾಗಿದ್ದಾರೆ. ಆದ್ದರಿಂದ ಜೀವರ ನಾನಾರೂಪವಾದ ವೈಚಿತ್ರ್ಯವೂ ಶ್ರುತಿಸಿದ್ಧವಾಗಿದೆ. ಆ ಪರಮಾತ್ಮನ ರೂಪಗಳು 'ಹರಯಃ' – ದುರಿತಹರಣಸ್ವಭಾವವನ್ನು ಹೊಂದಿರುವುದರಿಂದ ಹರಿಶಬ್ದವಾಚ್ಯನಾಗುತ್ತವೆ. ಅನೇಕ ರೂಪಗಳಿರುವುದರಿಂದ ಬಹುವಚನದಿಂದ ಹೇಳಲ್ಪಡುತ್ತವೆ. ಆ ರೂಪಗಳು 'ಶತಾದಶ' ನಾರಾಯಣಾದಿ ಶತಮೂರ್ತಿಗಳು ಮತ್ತು ಮತ್ಸ್ಯಾದಿ ದಶಮೂರ್ತಿಗಳು. 'ಯುಕ್ತಾಃ' ಎಂದರೆ ವಿಚಿತ್ರವಾದ ಆಕಾರ ಮತ್ತು ಆಯುಧಗಳಿಂದ ಕೂಡಿವೆ ಎಂದು ಅರ್ಥ. ಎಲ್ಲ ರೂಪಗಳೂ ಇಂದ್ರಶಬ್ದವಾಚ್ಯವಾದ್ದರಿಂದ ಪರಮೈಶ್ವರ್ಯಸಂಪನ್ನವಾದವುಗಳು. ಅವನು ತನ್ನ ಇಚ್ಛೆಯಿಂದಲೇ ನಾನಾರೂಪಗಳನ್ನು ಸ್ವೀಕರಿಸಿದ್ದಾನೆ ಎಂಬುದು **'ಸ್ವಚ್ಛಂದೋಪಾತ್ತದೇಹಾಯ', 'ತಸ್ಯೇಚ್ಛಯಾಽಽತ್ತವಪುಷಃ ಕುತ ಏವ ಬಂಧಃ'** ಇತ್ಯಾದಿ ಭಾಗವತವಚನಗಳಿಂದ ಸಿದ್ಧವಾಗುತ್ತದೆ. ತತ್ತತ್ಕಾಲದಲ್ಲಿ ಭಕ್ತರ ಅನಿಷ್ಟವನ್ನು ಪರಿಹರಿಸಲು ಮತ್ತು ಅಭೀಷ್ಟವನ್ನು ಪೂರಣಮಾಡಲು ನರಸಿಂಹಾದಿರೂಪಗಳನ್ನು ಹರಿಯು ತೆಗೆದುಕೊಳ್ಳುತ್ತಾನೆ. **'ತಾಂ ರುಗ್ಮಿಣೀಂ ಶ್ರಿಯಮನನ್ಯಗತಿಂ ನಿರೀಕ್ಷ್ಯಯಾ ಲೀಲಯಾಧೃತತನೋರನುರೂಪರೂಪಾ'** ಎಂಬ ಭಾಗವತ ವಚನದಂತೆ ಲಕ್ಷ್ಮೀದೇವಿಯು ದೇವರ ಅವತಾರಗಳ ಜೊತೆಯಲ್ಲಿ ತಾನೂ ಅವತಾರ ಮಾಡುತ್ತಾಳೆ ಎಂದು ಸಿದ್ಧವಾಗುವುದರಿಂದ 'ಮಾಯಾಭಿಃ' ಎಂಬ ಪದಕ್ಕೆ ಲಕ್ಷ್ಮೀರೂಪಗಳ ಜೊತೆಯಲ್ಲಿ ಎಂದೂ ಅರ್ಥವನ್ನು ಮಾಡಬಹುದಾಗಿದೆ. **'ತದಸ್ಯರೂಪಂ ಪ್ರತಿಚಕ್ಷಣಾಯ'** ಎಂದರೆ ಆ ಬಿಂಬನಾದ ಹರಿಯರೂಪವು ಜೀವರ ಅಪರೋಕ್ಷಜ್ಞಾನಕ್ಕಾಗಿ ಇದೆ ಎಂದು ಅರ್ಥ. ಪುರುರೂಪ ಎಂಬಲ್ಲಿ ಪುರು ಎಂದರೆ ಪೂರ್ಣ ಎಂಬ ಅರ್ಥವೂ ಇರುವುದರಿಂದ ಬಿಂಬನಾದ ಹರಿಯ ರೂಪಗಳೆಲ್ಲವೂ ಪೂರ್ಣವಾದವುಗಳು. ಜೀವರ ಸ್ವರೂಪಗಳು ಪ್ರತಿಬಿಂಬಗಳಾದ ಕಾರಣದಿಂದಲೇ ಅಪೂರ್ಣವಾದವುಗಳು ಎಂದೂ ಸಿದ್ಧವಾಗುತ್ತದೆ.

ಇಲ್ಲಿ ಇಂದ್ರಶಬ್ದವು ಐಶ್ವರ್ಯವನ್ನು ಹೇಳುವುದರಿಂದ ನಿರ್ಗುಣವನ್ನು ತೆಗೆದುಕೊಳ್ಳಲು ಬರುವುದಿಲ್ಲ. 'ಮಾಯಾಭಿಃ' ಎಂದು ಬಹುವಚನವಿರುವುದರಿಂದ ಪರವಾದಿಗಳಿಗೆ ಅಭಿಮತವಾದ ಜಗದುಪಾದಾನವಾದ ಏಕಾಜ್ಞಾನವನ್ನು ತೆಗೆದುಕೊಳ್ಳಲು ಬರುವುದಿಲ್ಲ. 'ರೂಪಂ ಪ್ರತಿಚಕ್ಷಣಾಯ' ಎಂದು ಪರಮಾತ್ಮನರೂಪಗಳಿಗೆ ಮೋಕ್ಷೋದ್ದೇಶವಾದ

ಅಪರೋಕ್ಷಪ್ರಮಾವಿಷಯತ್ವವನ್ನು ಹೇಳಿರುವುದರಿಂದ ಆ ರೂಪಗಳು ಮಾಯಾಮಯವಲ್ಲ ಎಂದರೆ ಭ್ರಾಂತಿಕಲ್ಪಿತವಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಬಹುವಚನಾಂತಮಾಯಾಶಬ್ದವು ಪರಮಾತ್ಮನ ಮಹಿಮೆಗಳನ್ನೇ ಹೇಳುತ್ತದೆ. 'ಶತಾದಶ' ಎಂದು ಹೇಳಿರುವುದರಿಂದಲೂ ಇಂದ್ರ (ಪುರಂದರ)ನನ್ನು ತೆಗೆದುಕೊಳ್ಳಲು ಬರುವುದಿಲ್ಲ. ಪುರಂದರನಿಗೆ ನೂರು ರೂಪಗಳಾಗಲೀ ಹತ್ತು ರೂಪಗಳಾಗಲೀ ಎಲ್ಲಿಯೂ ಶ್ರುತವಾಗಿಲ್ಲ. 'ಯುಕ್ತಾಹಿ' ಎಂಬಲ್ಲಿರುವ ಯುಕ್ತಾ ಎಂಬ ಪದವು ಈ ಮಂತ್ರವು ಹೇಳುವ ಪ್ರಮೇಯಗಳೆಲ್ಲವೂ ಯುಕ್ತಿಯುಕ್ತವಾದವುಗಳೆಂದೂ, ಹಿ ಶಬ್ದವು ಈ ವಿಷಯದಲ್ಲಿ ವಿದ್ವತ್ ಪ್ರಸಿದ್ಧಿ ಇದೆಯೆಂದೂ ಸೂಚಿಸುತ್ತದೆ.

## ಭಾಗವತದಲ್ಲಿ ವೈಕುಂಠವರ್ಣನೆ :

ಭಾಗವತ ತೃತೀಯಸ್ಕಂಧದಲ್ಲಿ ಸನಕಾದಿಗಳಿಗೂ ಜಯವಿಜಯರಿಗೂ ಘರ್ಷಣೆಯಾದ ಸಂದರ್ಭದಲ್ಲಿ ಹರಿಯು ಸನಕಾದಿಗಳನ್ನು ಸಮಾಧಾನಪಡಿಸಲು ತನ್ನ ಗೃಹದಿಂದ ಹೊರಗೆ ಬಂದ ಸಂದರ್ಭದಲ್ಲಿ ವೈಕುಂಠವರ್ಣನೆಯಿದೆ. ಇದು ಹದಿನೈದನೆಯ ಅಧ್ಯಾಯದ ೩೭-೪೧ ವರೆಗಿನ ಶ್ಲೋಕಗಳು. ಅಲ್ಲಿ ಸುಂದರವಾದ ಪಾದಾದಿ ಸಕಲಾವಯವವುಳ್ಳ, ನಾಲ್ಕುಬಾಹುಗಳಿಂದ ಯುಕ್ತನಾದ, ಅಮಂದಸೌಂದರ್ಯನಿಧಿಯಾದ, ಕಿರೀಟಹಾರ ಕೇಯೂರಾದಿ ಸಕಲಾಭರಣಭೂಷಿತನಾದ, ಛತ್ರಚಾಮರವ್ಯಜನಗೀತೆಗಳಿಂದ ಸೇವಿತನಾದ, ದುಃಖದೂರರಾದ ಅಸಂಖ್ಯದೇವತೆಗಳಿಂದ ಸೇವಿತನಾದ, ಹೆಜ್ಜೆಹೆಜ್ಜೆಗೂ ಅನೇಕ ಮುಕ್ತರಿಂದ ಪೂಜ್ಯಮಾನನಾದ ಹರಿಯು ಗರುಡಾರೂಢನಾಗಿ ಲಕ್ಷ್ಮೀಸಹಿತನಾಗಿ, ಹಸ್ತದಲ್ಲಿದ್ದ ಕಮಲವನ್ನು ಲೀಲೆಯಿಂದ ತಿರುಗಿಸುತ್ತಾ ಸನಕಾದಿಗಳು ಇದ್ದ ಕಡೆಗೆ ಚಿತ್ತೈಸಿದನು ಎಂಬ ವರ್ಣನೆ ಇದೆ. ಹೀಗೆ ವರ್ಣಿಸಲ್ಪಟ್ಟ ಸ್ಥಾನವು ವೈಕುಂಠಪುರಿಯೇ. ಅದು ಅಮುಕ್ತಸ್ಥಾನವಾಗಿದ್ದರೆ ಸನಕಾದಿಗಳನ್ನು ಅಲ್ಲಿಗೇ ಬರಮಾಡಿಕೊಂಡು ಅವರಿಗೆ ಸಮಾಧಾನವನ್ನು ಮಾಡಬಹುದಾಗಿದ್ದಿತು. ಆದರೆ ಅದು ವೈಕುಂಠದ ಮುಕ್ತಸ್ಥಾನವಾದುದರಿಂದ ಅಲ್ಲಿ ಅಮುಕ್ತರಾದ ಸನಕಾದಿಗಳಿಗೆ ಪ್ರವೇಶವಿಲ್ಲವಾದ್ದರಿಂದ ಹರಿಯೇ ಸನಕಾದಿಗಳು ಇದ್ದಲ್ಲಿಗೆ ಬಂದು ಅವರಿಗೆ ಸಮಾಧಾನಮಾಡಬೇಕಾಯಿತು. ಸನಕಾದಿಗಳು ಈಗ ಹೋಗಲು ಸಾಧ್ಯವಿಲ್ಲದ ಯಾವ ವೈಕುಂಠಸ್ಥಾನವಿದೆಯೋ ಅದೇ ಪರಮಮೋಕ್ಷಸ್ಥಾನವೆಂದು ಸಿದ್ಧವಾಗುತ್ತದೆ. ಅದರ ವರ್ಣನೆಯಲ್ಲಿಯೂ ಮನುಷ್ಯಋಷಿದೇವತಾದಿ ಅನೇಕ

ಜೀವರನ್ನೂ, ದೇವರ ಸಾಕಾರಸುಂದರವಿಗ್ರಹವನ್ನೂ, ದೇವರು ಅಲಂಕರಿಸಿರುವ ಆಭರಣಾದಿಗಳನ್ನೂ, ಗೀತವಾದಿತ್ರಾದಿಸ್ಥಿತಿಯನ್ನೂ ಹೇಳಿರುವುದರಿಂದ ಪರಮಮೋಕ್ಷದಲ್ಲಿಯೂ ಜೀವೇಶ್ವರಭೇದಾದಿ ಪಂಚಭೇದಗಳೂ, ಸುಖಾಭಿವ್ಯಂಜಕವಾದ ಸಕಲವಸ್ತುಗಳೂ ಇವೆಯೆಂದು ಸಿದ್ಧವಾಗುತ್ತದೆ. ಆದ್ದರಿಂದ ಅದ್ವಿತೀಯತ್ವರೂಪವಾದ ಪರರಿಗೆ ಅಭಿಮತವಾದ ಪರಮಮೋಕ್ಷವು ಶಶವಿಷಾಣದಂತೆ ಅಪ್ರಾಮಾಣಿಕವೆಂದು ಸಿದ್ಧವಾಗುತ್ತದೆ.

ಮೋಕ್ಷದಲ್ಲಿರುವ ಪದಾರ್ಥಗಳೂ ನಿತ್ಯವಾದುವು. ಅವು ವಿಕಾರವನ್ನು ಹೊಂದುವುದಿಲ್ಲ. ವಾತಾಪಿಯ ದೇಹವನ್ನು ಛಿನ್ನಭಿನ್ನವಾಗಿ ಮಾಡಿ ತರಕಾರಿಯಂತೆ ಬೇಯಿಸಿದರೂ ರಾಕ್ಷಸಶಕ್ತಿಯಿಂದ ಅವೆಲ್ಲವೂ ತಿಂದ ಮೇಲೆಯೂ ಒಂದಾಗಿ ಮೊದಲಿನ ದೇಹವೇ ಬರುತ್ತಿತ್ತೆಂದು ಪುರಾಣಗಳಲ್ಲಿ ಪ್ರಸಿದ್ಧವಾಗಿದೆಯಷ್ಟೆ. ಅದರಂತೆ ಮುಕ್ತರು ಭೋಗಿಸುವ ಪದಾರ್ಥಗಳೂ ಕೂಡ ಮುಕ್ತರು ಎಷ್ಟು ಭೋಗಿಸಿದರೂ ಅವು ದೇವರ ಅಘಟಿತಘಟನಾಶಕ್ತಿಯಿಂದ ವಿಕಾರವನ್ನು ಹೊಂದದೇ ಮೊದಲಿನಂತೆಯೇ ಉಳಿಯುವುದರಿಂದ ನಿತ್ಯವಾಗುತ್ತವೆ. ಈಶ್ವರನ ಅಚಿಂತ್ಯವಾದ ಶಕ್ತಿಯಿಂದ ಜೀವೈಕ್ಯವೂ ನಿರ್ಗುಣತ್ವವೂ ಘಟನೆಯಾಗಲಿ ಎಂದು ಶಂಕಿಸುವಂತಿಲ್ಲ. ಈಶ್ವರನು ಯಾವುದು ತನ್ನ ಐಶ್ವರ್ಯಕ್ಕೆ ವಿರೋಧಿಯಲ್ಲವೋ ಅಂತಹ ಪ್ರಮಾಣಸಿದ್ಧವಾದ ವಸ್ತುವನ್ನೇ ತನ್ನ ಅಘಟಿತಘಟನಾಶಕ್ತಿಯಿಂದ ಘಟನೆ ಮಾಡುತ್ತಾನೆ. ಜೀವೈಕ್ಯವನ್ನಾಗಲೀ, ನಿರ್ಗುಣತ್ವವನ್ನಾಗಲೀ ಘಟನೆ ಮಾಡಿದರೆ ತನ್ನ ಐಶ್ವರ್ಯಕ್ಕೇ ಲೋಪವುಂಟಾಗುವುದರಿಂದ ಅವುಗಳನ್ನು ಎಂದೂ ಘಟನೆ ಮಾಡುವುದಿಲ್ಲ. ತನ್ನ ಸರ್ವೋತ್ತಮತ್ವವನ್ನು ಸ್ಥಾಪಿಸುವ ಸಲುವಾಗಿ ಬ್ರಾಹ್ಮಣನ ಪಾದತಾಡನವನ್ನೂ ಸಹಿಸಿದ ಹರಿಗೆ, ಭಕ್ತರು ಸ್ತೋತ್ರಮಾಡಿ ಬೇಡಿದ ಇಷ್ಟಾರ್ಥಗಳನ್ನೆಲ್ಲಾ ಕೊಡುವ ಹರಿಗೆ ತನ್ನ ಮಹಿಮೆಯನ್ನು ರಕ್ಷಿಸಿಕೊಳ್ಳುವುದರಲ್ಲಿ ಮಹಾತಾತ್ಪರ್ಯವಿದೆ. ವಿವೇಕಿಗಳಲ್ಲಿ ಅಗ್ರಗಣ್ಯನಾದ ಅವನು ಎಂದೂ ತನ್ನ ಮಹಿಮಾಲೋಪವನ್ನು ಮಾಡಿಕೊಳ್ಳುವುದಿಲ್ಲ.

ಆದ್ದರಿಂದ ಮೋಕ್ಷದಲ್ಲಿ ನಿನಗೆ ಅಭಿಮತವಾದ ಜೀವೇಶ್ವರಾಭೇದವಾಗಲೀ, ಜೀವಾಭೇದವಾಗಲೀ, ನಿರಾಕಾರತ್ವವಾಗಲೀ, ದ್ವಿತೀಯಾಶೂನ್ಯತ್ವವಾಗಲೀ, ನಿರ್ಗುಣತ್ವವಾಗಲೀ ಎಲ್ಲವೂ ಅಪ್ರಾಮಾಣಿಕವೆಂದು ಸಿದ್ಧವಾಯಿತು. ಪರಮ ಮೋಕ್ಷದಲ್ಲಿಯೂ ಇಲ್ಲದಿರುವ ಈ ವಸ್ತುಗಳು ಇನ್ನೆಲ್ಲಿ ಇರಲು ಸಾಧ್ಯ? ಆದ್ದರಿಂದ ದುರಾಶೆಯನ್ನು ಬಿಟ್ಟು ಕೃಷ್ಣನ ಪಾದಾಂಬುಜವನ್ನು ಭಜಿಸು ಅಥವಾ ನರಕದಲ್ಲಿ

ಬೀಳು. ಇದೆರಡೇ ನಿನಗಿರುವ ದಾರಿ ಎಂದು ಪರವಾದಿಯನ್ನು ಅಪಹಾಸಮಾಡುತ್ತಾರೆ.

**ವಿಸ್ತರಸ್ತ್ವಸ್ಯ ಸರ್ವಸ್ಯ ಮೂಲಶಾಸ್ತ್ರಮಹಾರ್ಣವೇ ।**
**ದ್ರಷ್ಟವ್ಯ ಶ್ಚಿತ್ತಶುದ್ಧ್ಯರ್ಥಮೇತಾವತ್ ಚರ್ಚಿತಂ ಮಯಾ ॥**

ಈ ಎಲ್ಲಾ ಪ್ರಮಾಣಗಳ ಮತ್ತು ಉಪಪಾದನೆಯ ವಿಸ್ತಾರವನ್ನು ಮೂಲಶಾಸ್ತ್ರದಲ್ಲಿಯೇ ನೋಡಬೇಕು. ಕೇವಲ ನನ್ನ ಚಿತ್ತಶುದ್ಧಿಗಾಗಿ ಇಷ್ಟು ಚರ್ಚೆಯನ್ನು ಮಾಡಿದ್ದೇನೆಂದು ಈ ಪ್ರಕರಣವನ್ನು ಉಪಸಂಹಾರ ಮಾಡುತ್ತಾರೆ.

## 'ಯತ್ರ ಹಿ ದ್ವೈತಮಿವ ಭವತಿ' ಎಂಬ ಶ್ರುತಿಯಿಂದಲೇ ವಿಶೇಷಸಿದ್ಧಿ :

**'ಯತ್ರ ಹಿ ದ್ವೈತಮಿವ ಭವತಿ'** ಎಂಬ ಶ್ರುತಿಗೆ ಯತ್ರ= ಯಾವ ಮೋಕ್ಷದಲ್ಲಿ ದ್ವೈತಮಿವ= ದ್ವೈತದಂತಿರುವ ವಿಶೇಷವಾದರೂ ಇರುತ್ತದೆಯೋ ತತ್ರ= ಆ ಮೋಕ್ಷದಲ್ಲಿ ಇತರಃ= ಮುಕ್ತನು ಇತರಾನ್= ತನ್ನ ಗುಣಗಳನ್ನೂ, ಪಶ್ಯತಿ= ನೋಡುತ್ತಾನೆ. ಅನ್ಯರನ್ನೂ ನೋಡುತ್ತಾನೆ. ಭೋಗಗಳನ್ನು ಭೋಗಿಸುತ್ತಾನೆ. ತನ್ನ ಆನಂದವನ್ನು ಅನುಭವಿಸುತ್ತಾನೆ. ಅನೇಕರೂಪಗಳನ್ನು ತೆಗೆದುಕೊಳ್ಳುತ್ತಾನೆ. ಪುನಃ ಆ ರೂಪಗಳನ್ನೆಲ್ಲಾ ಒಂದುಗೂಡಿಸುತ್ತಾನೆ. ವಾಹನಗಳಲ್ಲಿ ಸಂಚಾರಮಾಡುತ್ತಾನೆ ಹೀಗೆ ಎಲ್ಲವೂ ಕೂಡುತ್ತದೆ. ಯತ್ರತ್ವಸ್ಯ ಆತ್ಮೈವಾಭೂತ್= ಒಂದುಪಕ್ಷ ಮೋಕ್ಷದಲ್ಲಿ ಕೇವಲ ಆತ್ಮನೇ ಉಳಿದಿದ್ದರೆ, ಎಂದರೆ ಭೇದಕಾರ್ಯಕಾರಿಯಾದ ವಿಶೇಷವೂ ಇಲ್ಲದಿದ್ದರೆ, ಆಗ ಅವನು ಯಾವ ಕಾರಣದಿಂದ ಯಾವ ಜ್ಞಾನವನ್ನು ಸಂಪಾದಿಸುತ್ತಾನೆ? ಅವನಿಗೆ ತನ್ನ ಆನಂದಾನುಭವವಾದರೂ ಹೇಗೆ ಆಗುತ್ತದೆ? ತನ್ನ ಜ್ಞಾನವಾದರೂ ಹೇಗೆ ಬರುತ್ತದೆ? ಆಗ ಜ್ಞಾನವೇ ಇಲ್ಲದಿದ್ದರೆ ಮೋಕ್ಷವು ಅವಿದ್ಯಾಸ್ತಮಯವಲ್ಲ. ವಿದ್ಯಾಮಸ್ತಮಯವೇ ಆಗುತ್ತದೆ ಎಂದೂ ಅರ್ಥವನ್ನು ಮಾಡಬಹುದು. ಆಗ ದುಃಖದ ಧ್ವಂಸವಲ್ಲ, ಸುಖದ ಧ್ವಂಸವೇ ಆಗುತ್ತದೆ ಎಂದು ಈ ರೀತಿ ಆಕ್ಷೇಪಿಸುವ ಶ್ರುತಿಯೇ 'ದ್ವೈತಮಿವ' ಎಮ್ಬ ಶಬ್ದದಿಂದ ದ್ವೈತದಂತಿರುವ ವಿಶೇಷವನ್ನು ಸಮರ್ಥನೆ ಮಾಡುತ್ತದೆ. ವಿಶೇಷಕ್ಕೆ ಭೇದಸಾದೃಶ್ಯವೆಂದರೆ ಭೇದಕಾರ್ಯನಿರ್ವಾಹಕತ್ವ. ಎಲ್ಲಿ ಭೇದವು ನಿಷಿದ್ಧವಾಗಿ ಅಭೇದವು ಪ್ರಮಿತವಾಗಿದ್ದರೂ, ಭೇದಕಾರ್ಯವೂ ಪ್ರಮಿತವಾಗಿರುತ್ತದೆಯೋ ಅಲ್ಲಿಯೇ ಇಂತಹ ವಿಶೇಷವನ್ನು ಅಂಗೀಕರಿಸಬೇಕಷ್ಟೆ.

ಪಂಚಮಸ್ಕಂಧದಲ್ಲಿ ಕೇತುಮಾಲಾಖಂಡದಲ್ಲಿ ರಮಾದೇವಿಯ ಉಪಾಸನೆಯನ್ನು ಹೇಳುತ್ತಾ '**ನಮೋ ಭಗವತೇ ಹೃಷಿಕೇಶಾಯ ಸರ್ವವಿಶೇಷ ವೀಕ್ಷಿತಾತ್ಮನೇ ಆಕೂತೀನಾಂ ಚಿತ್ತಾನಾಂ ಚೇತಸಾಂ ವಿಶೇಷಾಣಾಮಧಿಪತಯೇ**' ಎಂದು ಹೇಳಿದ್ದಾರೆ. ಇಲ್ಲಿ ವಿಶೇಷವೀಕ್ಷಿತಾತ್ಮನೇ ಎಂದರೆ ವಿಶೇಷಬಲದಿಂದ ತನ್ನನ್ನು ನೋಡುವ ಪರಮಾತ್ಮನಿಗೆ ಎಂದು ಅರ್ಥ. ದರ್ಶನರೂಪವಾದ ಒಂದೇ ಕ್ರಿಯೆಯಲ್ಲಿ ಒಬ್ಬನಿಗೇ ಕರ್ತೃತ್ವ ಮತ್ತು ಕರ್ಮತ್ವಗಳನ್ನು ವಿಶೇಷವನ್ನು ಅಂಗೀಕರಿಸಿಯೇ ಸಮರ್ಥಿಸಬೇಕು. ಅಂತಹ ವಿಶೇಷಗಳು ಪರಮಾತ್ಮನಲ್ಲೂ, ಜೀವರಲ್ಲೂ ಮತ್ತು ಜಡದಲ್ಲಿಯೂ ಇವೆ. ಅಂತಹ ಎಲ್ಲ ವಿಶೇಷಗಳಿಗೆ ನಿಯಾಮಕನಾದವನು ಹರಿ ಎಂದು '**ವಿಶೇಷಣಾಮಧಿಪತಯೇ**' ಎಂಬುದಾಗಿ ರಮಾದೇವಿಯು ಸ್ತೋತ್ರಮಾಡುತ್ತಾಳೆ ಎಂದು ಅರ್ಥವಾಗುವುದರಿಂದ ಅದರಿಂದಲೂ ವಿಶೇಷವು ಸಿದ್ಧವಾಗುತ್ತದೆ.

## ಮೋಕ್ಷದ ಎಲ್ಲಾ ಪ್ರಭೇದಗಳೂ ಭೇದಸಾಪೇಕ್ಷವಾಗಿವೆ :

ಮೋಕ್ಷವು ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಎಂದು ನಾಲ್ಕು ವಿಧ. ಸಾಯುಜ್ಯವೇ ಕೆಲವು ಸಲಯೋಗವೆಂದೂ ಕೆಲವು ಸಲ ಐಕ್ಯವೆಂದೂ ಹೇಳಲ್ಪಡುತ್ತದೆ. ಐಕ್ಯಶಬ್ದದ ಪ್ರಯೋಗವೂ ಇರುವ ಸಾಯುಜ್ಯಶಬ್ದವನ್ನೇ ಮೊದಲು ವಿಚಾರಮಾಡಬೇಕು. ಯುಜಿರ್‌ಯೋಗೇ ಎಂಬ ಧಾತುವಿನಿಂದ ಸಾಯುಜ್ಯಶಬ್ದವು ನಿಷ್ಪನ್ನವಾಗುತ್ತದೆ. ಯೋಗ ಎಂದರೆ ಪರಸ್ಪರಸಂಬಂಧ ಎಂದು ಅರ್ಥ. ಆದ್ದರಿಂದ ಸಾಯುಜ್ಯವೆಂದರೆ ಜೊತೆಯಲ್ಲಿರುವ ಎರಡು ವಸ್ತುಗಳ ಭಾವವೆಂದು ಸಿದ್ಧವಾಗುತ್ತದೆ. ಇಲ್ಲಿ ಅಭೇದಕ್ಕೆ ಪ್ರಸಕ್ತಿಯು ಎಲ್ಲಿದೆ? ಐಕ್ಯಪದ ಪ್ರಯೋಗವು ಕೆಲವು ಕಡೆ ಇದೆ. ಆದರೆ ಐಕ್ಯಪದಪ್ರಯೋಗವು ಎರಡು ವಸ್ತುಗಳಿಗಿರುವ ವ್ಯಾಪ್ತ್ಯಾದಿಧರ್ಮಗಳಿಂದ ಉಪಪನ್ನವಾಗುವುದೆಂದು ಮೊದಲೇ ಹೇಳಿದ್ದೇವೆ. ಅಲ್ಲದೆ ಏಕಶಬ್ದಕ್ಕೆ ಮುಖ್ಯ, ಅನ್ಯ, ಕೇವಲ ಎಂದೂ ಅರ್ಥವಿರುವುದರಿಂದ ಬ್ರಹ್ಮನಲ್ಲಿ ಐಕ್ಯವನ್ನು ಹೇಳುವ ಶಬ್ದಗಳು ಮುಖ್ಯತ್ವವನ್ನೂ, ಭೇದವನ್ನೂ, ಜಡದ ಅಮಿಶ್ರಣವನ್ನೂ ಹೇಳುತ್ತವೆ. ಕೇವಲ ಐಕ್ಯಶಬ್ದದಿಂದ ನಿನಗೆ ಯಾವ ಉಪಕಾರವೂ ಆಗುವುದಿಲ್ಲ. ಇಂತಹ ಸಾಯುಜ್ಯಮೋಕ್ಷವು ಪರಮಾತ್ಮನ ಅಂಗಾಶ್ರಿತರಾದ ದೇವತೆಗಳಿಗೆ ಮಾತ್ರ ದೊರೆಯುತ್ತದೆ. ಆ ದೇವತೆಗಳು ಸಂಸಾರಾವಸ್ಥೆಯಲ್ಲಿಯೂ ಮೋಕ್ಷದಲ್ಲಿಯೂ ಪರಮಾತ್ಮನ ಅಂಗಾಶ್ರಿತರಾಗಿಯೇ

ಇರುತ್ತಾರೆ. ಸಾರೂಪ್ಯವೆಂದರೆ ಸಮಾನವಾದ ರೂಪವನ್ನು ಧರಿಸುವಿಕೆ ಎಂದು ಅರ್ಥ. ಸಾಲೋಕ್ಯವೆಂದರೆ ಒಂದೇ ಲೋಕದಲ್ಲಿರುವುದು ಎಂದು ಅರ್ಥ. ಸಾಮೀಪ್ಯವೆಂದರೆ ಹರಿಯ ಸಮೀಪದಲ್ಲಿರುವುದು ಎಂದು ಅರ್ಥ. ಈ ಮೋಕ್ಷಗಳನ್ನು ಪಡೆಯುವ ಜೀವರು ಹರಿಯದೇಹಕ್ಕಿಂತ ಹೊರಗೇ ಇರುತ್ತಾರೆ. ಇವರು ಯಾರೂ ಹರಿಯ ಅಂಗಾಶ್ರಿತರಲ್ಲ. ಆದ್ದರಿಂದ ಅಭೇದದ ಪ್ರಸಕ್ತಿಯೇ ಇಲ್ಲ. ಅನಿತ್ಯಮುಕ್ತರಾಗಿ ಸಾಯುಜ್ಯವನ್ನು ಪಡೆಯುವ ದೇವತೆಗಳಿಗಿಂತ ನಿತ್ಯಮುಕ್ತಳಾದ ಲಕ್ಷ್ಮೀದೇವಿಯು ಶ್ರೇಷ್ಠಳಾದವಳು. ಅವಳೂ ಸಹ ಹರಿಯ ವಕ್ಷಃ ಸ್ಥಳದಲ್ಲಿ ಶ್ರೀವತ್ಸರೂಪಳಾಗಿದ್ದು ಹರಿಯ ಅಂಗಸಂಗವನ್ನು ಪಡೆದಿದ್ದಾಳೆಯೇ ಹೊರತು ಐಕ್ಯವನ್ನು ಪಡೆದಿಲ್ಲ. ಹೀಗಿರುವಾಗ ಬೇರೆ ಯಾವ ಮುಕ್ತನು ಹರಿಯ ಐಕ್ಯವನ್ನು ಪಡೆಯಲು ಸಾಧ್ಯ?

ರಮಾನಾರಾಯಣರು ಪ್ರಳಯಕಾಲದಲ್ಲಿಯೂ ಇರುತ್ತಾರೆ. ಆದ್ದರಿಂದ ಅವರಿಗೆ ನಾಶವಿಲ್ಲ. ಆದ್ದರಿಂದಲೇ ಸೃಷ್ಟಿಕಾಲದಲ್ಲಿ ಉತ್ಪತ್ತಿಯೂ ಇಲ್ಲ. ಆದ್ದರಿಂದ ಅವರಿಬ್ಬರೂ ನಿತ್ಯಮುಕ್ತರು. ಅಂತಹ ರಮಾದೇವಿಗೂ ಸಾಯುಜ್ಯವೇ ಇದೆ. **'ಭೇಜೇ ಖಗೇಂದ್ರಧ್ವಜಪಾದಮೂಲಮ್'** ಎಂಬ ಸ್ಮೃತಿಯೂ **'ಸಹ ಬ್ರಹ್ಮಣಾ ವಿಪಶ್ಚಿತಾ'** ಎಂಬ ಶ್ರುತಿಯೂ ಸಹಸ್ಪಷ್ಟವಾಗಿ ಭೇದವನ್ನೇ ಹೇಳುತ್ತಿವೆ. **'ಮುಕ್ತಾಶ್ರಯಃ ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ'** ಎಂಬ ವಾಸುದೇವ ಸಹಸ್ರನಾಮವೂ ಸಹ ಮುಕ್ತರಿಗೆ ಆಶ್ರಯನೆಂದೇ ಹೇಳುತ್ತದೆ. **'ಮುಕ್ತಾನಾಂ ಪರಮಾಗತಿಃ'** ಎಂದು ವಿಷ್ಣುಸಹಸ್ರನಾಮವೂ ಮುಕ್ತಪ್ರಾಪ್ಯತ್ವವನ್ನೇ ಹೇಳುತ್ತದೆ. ಆದ್ದರಿಂದ ಮೋಕ್ಷಪ್ರಭೇದಗಳನ್ನು ವಿಚಾರಮಾಡಿದರೂ ಬ್ರಹ್ಮಾಭೇದವು ಜೀವರಿಗೆ ಎಂದೂ ಇಲ್ಲ ಎಂದು ಸಿದ್ಧವಾಗುತ್ತದೆ.

## 'ದ್ವಿತೀಯಾದ್ ವೈ ಭಯಂ ಭವತಿ' ಶ್ರುತ್ಯರ್ಥವಿಚಾರ :

**'ದ್ವಿತೀಯಾದ್ ವೈ ಭಯಂ ಭವತಿ'** ಎಂಬ ಶ್ರುತಿಯು ಸದೃಶವಾದ ದ್ವಿತೀಯದಿಂದ ಭಯವುಂಟಾಗುತ್ತದೆ ಎಂದು ಹೇಳುತ್ತದೆ. **'ಅಸ್ಯ ಗೋರ್ದ್ವಿತೀಯೇನ ಭವಿತವ್ಯಮಿತ್ಯುಕ್ತೇ ಸದೃಶೋ ಗೌರೇವಾ ನೀಯತೇ ನಾಶ್ವೋ ನ ಗರ್ದಭಃ'** ಎಂಬ ಮಹಾಭಾಷ್ಯವಚನದಿಂದ ದ್ವಿತೀಯಶಬ್ದಕ್ಕೆ ಸದೃಶವಾದ ದ್ವಿತೀಯದಲ್ಲಿಯೇ ಶಕ್ತಿ ಇದೆ ಎಂದು ತಿಳಿಯುತ್ತದೆ. ಆದ್ದರಿಂದ ಯಾವ ದ್ವಿತೀಯವಸ್ತುವೂ ಇಲ್ಲ ಎಂದು ಅರ್ಥವಾಗುವುದಿಲ್ಲ. **'ಏಕಾಕೀ ನ ರಮತೇ'**

ಎನ್ನುವುದು ನಿರವಕಾಶವಾದ ವಾಕ್ಯ. ಯಾವ ದ್ವಿತೀಯವಸ್ತುವೂ ಇಲ್ಲವೆಂದು ನಿಷೇಧಮಾಡಿದರೆ **'ಏಕಾಕೀ ನ ರಮತೇ'** ಒಬ್ಬನ್ನೇ ಇದ್ದರೆ ಸುಖವಿರುವುದಿಲ್ಲ ಎಂಬ ವಾಕ್ಯದ ವಿರೋಧವು ಬರುತ್ತದೆ. ಏಕೆಂದರೆ ಆಗ ಮೋಕ್ಷಕ್ಕೆ ಪುರುಷಾರ್ಥತ್ವವೇ ಕೂಡುವುದಿಲ್ಲ. ಅಥವಾ ಬ್ರಹ್ಮಚರ್ಯ, ಗಾರ್ಹಸ್ಥ್ಯ, ವಾನಪ್ರಸ್ಥ ಮತ್ತು ಸಂನ್ಯಾಸ ಎಂದು ನಾಲ್ಕು ಆಶ್ರಮಗಳು. ಅದರಲ್ಲಿ ಎರಡನೆಯದು ಗೃಹಸ್ಥಾಶ್ರಮ. ಅದು ಪತ್ನೀಪುತ್ರಾದಿಗಳಲ್ಲಿ ಅಭಿಮಾನವನ್ನು ಹುಟ್ಟಿಸಿ ಅನರ್ಥಕ್ಕೆ ಕಾರಣವಾಗುತ್ತದೆ. ಆದ್ದರಿಂದ ಬ್ರಹ್ಮಚರ್ಯಾಶ್ರಮದಿಂದ ನೇರವಾಗಿ ವಾನಪ್ರಸ್ಥ ಅಥವಾ ಸಂನ್ಯಾಸಾಶ್ರಮಕ್ಕೆ ಹೋಗಬೇಕು ಎಂದೂ ಅರ್ಥವನ್ನು ಮಾಡಬಹುದು. ಅಥವಾ ಧರ್ಮಾಧರ್ಮಗಳು ಎರಡು ಪದಾರ್ಥಗಳು. ಅದರಲ್ಲಿ ದ್ವಿತೀಯವಾದುದು ಅಧರ್ಮ. ಅದು ನರಕಾದಿಭಯಕ್ಕೆ ಕಾರಣವಾದುದರಿಂದ ಧರ್ಮವನ್ನೇ ಆಚರಿಸಬೇಕು ಎಂದೂ ಅರ್ಥವನ್ನು ಮಾಡಬಹುದು. ಅಥವಾ ಸತ್ಸಂಗ ಮತ್ತು ದುಸ್ಸಂಗಗಳು ಮನುಷ್ಯನಿಗೆ ದೊರೆಯುವ ಎರಡು ಪದಾರ್ಥಗಳು. ಅವುಗಳಲ್ಲಿ ಮೊದಲನೆಯದಾದ ಸತ್ಸಂಗದಿಂದ ಯಾವ ಭಯವೂ ಇಲ್ಲ. ದ್ವಿತೀಯವಾದ ದುಸ್ಸಂಗವೇ ಭಯಕ್ಕೆ ಕಾರಣ. ಆದ್ದರಿಂದ ಅದನ್ನು ಪರಿಹರಿಸಿಕೊಳ್ಳಬೇಕು ಎಂದೂ ಅರ್ಥವನ್ನು ಮಾಡಬಹುದು. ಅಥವಾ ಪ್ರಥಮನಾದವನು ಪುರುಷೋತ್ತಮ. ಅವನಿಂದ ದ್ವಿತೀಯವಾದುದು ಜಗತ್ತು. ಈ ಜಗತ್ತಿನ ಅಭಿಮಾನವು ಭಯಕ್ಕೆ ಕಾರಣವಾದುದರಿಂದ ಅದನ್ನು ತೊರೆದು ಭಕ್ತಿಯಿಂದ ಪುರುಷೋತ್ತಮನನ್ನು ಆರಾಧಿಸು ಎಂದು ಅರ್ಥ ಎಂದೂ ಹೇಳಬಹುದು. ಯಾವುದರಿಂದ ದ್ವಿತೀಯ ಎಂದು ಹೇಳದೆ ಕೇವಲ ದ್ವಿತೀಯ ಎಂದಿಷ್ಟೇ ಹೇಳಿರುವುದರಿಂದ ಶಾಸ್ತ್ರಸಮ್ಮತವಾದ ಬೇರೆಬೇರೆ ಅರ್ಥಗಳನ್ನು ತೆಗೆದುಕೊಂಡು ಶ್ರುತಿಗೆ ತಾತ್ಪರ್ಯವನ್ನು ಹೇಳುವುದು ಉಚಿತವಾಗುತ್ತದೆ. ಆದ್ದರಿಂದ ಈ ಶ್ರುತಿಯು ವೈರಾಗ್ಯ, ಸತ್ಸಂಗ, ಧರ್ಮಾಚರಣೆ, ಅಭಿಮಾನತ್ಯಾಗ ಮೊದಲಾದ ಮೋಕ್ಷಸಾಧನ ಪರಂಪರೆಯನ್ನೇ ಹೇಳುತ್ತದೆ. ಅಥವಾ **'ದ್ವಿತೀಯದ್ ವೈ ಭಯಂ ಭವತಿ'** ಎಂಬ ವಾಕ್ಯಕ್ಕೆ ಅನಂತರ ಬರುವ **'ಏಕಾಕೀ ನ ರಮತೇ'** ಎಂಬ ವಾಕ್ಯವು ದ್ವಿತೀಯವಾದುದು. ನೀವು ಹೇಳುವ ಅರ್ಥವನ್ನು ಅಂಗೀಕರಿಸಿದರೆ ದ್ವಿತೀಯವಾದ **'ಏಕಾಕೀ ನ ರಮತೇ'** ಎಂಬ ವಾಕ್ಯದ ವಿರೋಧವು ಬರುತ್ತದೆ ಎಂದೂ ಅರ್ಥಮಾಡಬಹುದು. ಅಥವಾ ದ್ವಿತೀಯಾದ್ ಎಂಬಲ್ಲಿರುವ ಏಕವಚನವು ಜಾತ್ಯೇಕವಚನ. **'ಏಕಾಕೀ ನ ರಮತೇ'** ಎಂಬ ಒಂದೇ ವಾಕ್ಯದ ವಿರೋಧವಲ್ಲ. ಭೇದಪ್ರತಿಪಾದಕವಾಕ್ಯಸಮೂಹದಿಂದಲೇ

ವಿರೋಧವು ಬರುತ್ತದೆ ಎಂದೂ ಅರ್ಥಮಾಡಬಹುದು. ಅಥವಾ ಚಿದಚಿದ್ರೂಪವಾದ ಜಗತ್ತಿನಲ್ಲಿ ಜಡವು ದ್ವಿತೀಯವಾದುದು. ಜಡವು ಮಿಥ್ಯಾಭೂತವಾದುದರಿಂದ ಸರ್ವಜಗದೈಕ್ಯವನ್ನು ಹೇಳಿದರೆ ಮಿಥ್ಯಾಭೂತವಾದ ಜಡದ ಐಕ್ಯವು ವಿರುದ್ಧವಾಗುವುದರಿಂದ ಆದರಿಂದ ಭಯವುಂಟಾಗುತ್ತದೆ ಎಂದೂ ಅರ್ಥಮಾಡಬಹುದು. ಅಥವಾ '**ಏಕಾಕೀ ನ ರಮತೇ**' ಎಂಬ ದ್ವಿತೀಯವಾಕ್ಯದಿಂದ ವಿರೋಧಬರುತ್ತದೆ. ಏಕೆಂದರೆ ದೇವದತ್ತನು ಏಕಾಕಿಯಾಗಿ ಹೋಗುತ್ತಾನೆ ಎಂಬ ಪ್ರಯೋಗವು ಅವನು ಅಶ್ವದ ಮೇಲೆ ಹೋಗುವಾಗಲೂ ಇರುವುದರಿಂದ ಸದೃಶವಾದ ಇನ್ನೊಬ್ಬ ಮನುಷ್ಯನಿದ್ದರೆ ಮಾತ್ರ ಏಕಾಕಿತ್ವವು ಕೂಡುತ್ತದೆ. ದ್ವಿತೀಯಸಾಮಾನ್ಯಾಭಾವವನ್ನು ಹೇಳಿದರೆ ಸದೃಶದ್ವಿತೀಯಸತ್ವವನ್ನು ಹೇಳುವ 'ಏಕಾಕೀ' ವಾಕ್ಯದಿಂದ ವಿರೋಧಬರುತ್ತದೆ ಎಂದೂ ಅರ್ಥವನ್ನು ಮಾಡಬಹುದು. ಅಥವಾ ಸರ್ವಜಗದೈಕ್ಯವನ್ನು ಹೇಳುವುದಾದರೆ ಚೇತನಕ್ಕೆ ಅಭೇದವನ್ನು ಜಡಕ್ಕೆ ಬ್ರಹ್ಮವ್ಯತಿರೇಕೇಣ ಅಸತ್ತ್ವರೂಪವಾದ ಅರ್ಥವನ್ನು ಹೇಳಬೇಕು. ಹೀಗೆ ಹೇಳುವಾಗ ದ್ವಿತೀಯಾರ್ಥವನ್ನು ಅಂಗೀಕರಿಸಿದರೆ ಶಬ್ದರೂಪವಾದ ಕರಣಕ್ಕೆ ವಿರಮ್ಯವ್ಯಾಪಾರ ರೂಪವಾದ ದೋಷವು ಬರುವುದರಿಂದ ಶಬ್ದವು ಯಾವ ಅರ್ಥವನ್ನೂ ಹೇಳದೆ ಮೊದಲನೆಯ ಅರ್ಥವೂ ಸಿದ್ಧವಾಗುವುದಿಲ್ಲ ಎಂದೂ ಅರ್ಥಮಾಡಬಹುದು. ಅಥವಾ ಜೀವೇಶ್ವರದ್ವಯದಲ್ಲಿ ಮೋಕ್ಷವನ್ನು ಪಡೆಯುವವನು ಅಣುವಾದ ಜೀವ. ಅವನಿಂದ ದ್ವಿತೀಯನಾದವನು ವ್ಯಾಪ್ತನಾದ ಈಶ್ವರ. ಅಂತಹ ಈಶ್ವರನಿಂದ ಅಭೇದವನ್ನು ಹೇಳಿದರೆ ವಿರೋಧರೂಪವಾದ ಭಯವುಂಟಾಗುತ್ತದೆ ಎಂದೂ ಅರ್ಥಮಾಡಬಹುದು. ಅಥವಾ ಪರವಾದಿಗಳು ಪಾರಮಾರ್ಥಿಕಸತ್ತ್ವ, ವ್ಯಾವಹಾರಿಕಸತ್ವ ಮತ್ತು ಪ್ರಾತಿಭಾಸಿಕಸತ್ವವೆಂದು ಮೂರು ಸತ್ವಗಳನ್ನು ಒಪ್ಪುತ್ತಾರೆ. ಅದರಲ್ಲಿ ಪಾರಮಾರ್ಥಿಕಸತ್ವವೆಂಬುದು ನಾವು ಒಪ್ಪುವ ಸತ್ವರೂಪವಾದುದು. ಪ್ರಾತಿಭಾಸಿಕಸತ್ವವಂತೂ ಅಸತ್ವದಲ್ಲಿಯೇ ಪರ್ಯವಸಾನವನ್ನು ಹೊಂದುತ್ತದೆ. ಎರಡನೆಯದು ವ್ಯಾವಹಾರಿಕಸತ್ವ. ಜಗತ್ತಿಗೆ ಅದನ್ನು ಅಂಗೀಕರಿಸಿದರೆ ಜಗತ್ತಿನಂತೆ ಬ್ರಹ್ಮನಿಗೂ ವ್ಯಾವಹಾರಿಕಸತ್ವವೇ ಇರಲಿ ಎಂಬ ಆಪತ್ತಿಯು ಬರುತ್ತದೆ ಎಂದು ಒಂದು ಭಯ. ವ್ಯಾವಹಾರಿಕಸತ್ವವೆಂಬಲ್ಲಿ ವ್ಯಾವಹಾರಿಕ ಎಂದರೆ ಬಾಧ್ಯ, ಸತ್ವ ಎಂದರೆ ಅಬಾಧ್ಯ ಎಂದು ಅರ್ಥವಾಗುವುದರಿಂದ ವ್ಯಾಹತಿರೂಪವಾದ ಇನ್ನೊಂದು ಭಯ, ಸತ್ತೈವಿಧ್ಯವನ್ನು ಅಂಗೀಕಾರಮಾಡದೆ ಪಾರಮಾರ್ಥಿಕ ಮತ್ತು

ಪ್ರಾತಿಭಾಸಿಕ ಎರಡೇ ಸತ್ವಗಳನ್ನು ಅಂಗೀಕಾರ ಮಾಡಿದರೆ ಜಗತ್ತಿಗೆ ಅಸತ್ವವೇ ಉಂಟಾಗುವುದರಿಂದ ವಿಶ್ವಸತ್ಯಂ ಇತ್ಯಾದಿ ಶ್ರುತಿಗಳಿಂದ ಸತ್ಯತ್ವವನ್ನು ಸಾಧಿಸುವ ಪ್ರತಿಪಾದಿಗಳಾದ ನಮ್ಮಿಂದ ಭಯ. ಹೀಗೆ ಅನೇಕ ಅರ್ಥಗಳನ್ನು ಮಾಡಬಹುದು. ಆದ್ದರಿಂದ ದ್ವಿತೀಯವೆಂದರೆ ದೇಹಗೇಹಾದಿಗಳು. ಅವುಗಳಲ್ಲಿ ಅಭಿಮಾನ ಮಾಡುವುದರಿಂದ ಭಯವುಂಟಾಗುತ್ತದೆ. ಆದ್ದರಿಂದ ಅಭಿಮಾನವನ್ನು ತ್ಯಜಿಸಿ ಗುರೂಪಸತ್ತಿಯನ್ನು ಮಾಡಿ ಬ್ರಹ್ಮಜ್ಞಾನವನ್ನು ಸಂಪಾದಿಸು ಎಂಬ ಅರ್ಥವನ್ನೇ ಶ್ರುತಿಗೆ ಹೇಳಬೇಕು. ಅಲ್ಲದೆ **'ದ್ವಿತೀಯಾದ್ ವೈ ಭಯಂ ಭವತಿ'** ಎಂಬ ವಾಕ್ಯದ ಹಿಂದುಮುಂದಿನ ವಾಕ್ಯಗಳನ್ನು ನೋಡು. ಇದು ಬ್ರಹ್ಮದೇವರ ವಾಕ್ಯ. ಅನಂತರ **'ಕಸ್ಮಾತ್ ನು ಅಹಂ ಬಿಭೇಮಿ'** ನಾನು ಏತಕ್ಕೆ ಹೆದರುತ್ತಿದ್ದೇನೆ ಎಂದು ಅವರು ವಿಮರ್ಶೆಮಾಡಿದರು. ಅನುಕೂಲವಾದ ದ್ವಿತೀಯದಿಂದ ಎಂದೂ ಭಯವಿಲ್ಲ. ಪ್ರತಿಕೂಲರಾದ ರಾಕ್ಷಸಪಿಶಾಚಾದಿಗಳಿಂದ ಭಯವಿದೆ. ಆದರೆ ಅವರು ಇನ್ನೂ ಸೃಷ್ಟರಾಗಿಲ್ಲ. ಸೃಷ್ಟರಾದರೂ ನನ್ನ ವಶದಲ್ಲಿಯೇ ಇರುವವರು. ನನಗಿಂತ ಮೊದಲೇ ಇರುವ ನಾರಾಯಣನಂತೂ ಯಾವಾಗಲೂ ಅನುಕೂಲವಾಗಿಯೇ ಇದ್ದಾನೆ. ಆದ್ದರಿಂದ ನಾನು ಭಯಪಡುವ ಕಾರಣವಿಲ್ಲ ಎಂದು ನಿರ್ಧರಿಸಿದರು ಎಂದಿರುವುದರಿಂದ ದ್ವಿತೀಯಮಾತ್ರಕ್ಕೆ ಭಯಜನಕತ್ವವಿಲ್ಲ. ಪ್ರತಿಕೂಲವಾದ ದ್ವಿತೀಯಕ್ಕೆ ಮಾತ್ರ ಭಯಜನಕತ್ವವಿದೆ ಎಂದು ತಿಳಿಯುವುದರಿಂದ ನಿನಗೆ ಅಭಿಮತವಾದ ದ್ವಿತೀಯರಾಹಿತ್ಯಕ್ಕೆ ಎಂದೂ ಪುರುಷಾರ್ಥತ್ವವು ಸಿದ್ಧಿಸುವುದಿಲ್ಲ. ಆದ್ದರಿಂದಲೇ ಬ್ರಹ್ಮದೇವರು ದ್ವಿತೀಯಳಾದ ಪತ್ನಿಯನ್ನು ಅಪೇಕ್ಷಿಸಿ ಸರಸ್ವತೀದೇವಿಯನ್ನು ಪತ್ನಿಯಾಗಿ ಪಡೆದರು ಎಂದು ಅದೇ ಪ್ರಕರಣದಲ್ಲಿರುವ ಉತ್ತರವಾಕ್ಯಗಳಿಂದ ತಿಳಿಯುತ್ತದೆ. ಆದ್ದರಿಂದ ಈ ಪ್ರಕರಣವು ನಿನಗೆ ಪ್ರತಿಕೂಲವಾಗಿದೆ. ಹೂವಿನಮಾಲೆ ಎಂದು ಭ್ರಮಿಸಿ ನೀನು ಹಾವನ್ನು ಹಿಡಿದಿದ್ದೇಯೆ ಎಂದು ಹಾಸ್ಯಪೂರ್ವಕವಾಗಿ ರಾಜರು ಈ ಪ್ರಕರಣದ ವಿಮರ್ಶೆಯನ್ನು ಮುಗಿಸಿದ್ದಾರೆ.

## ಮೋಕ್ಷದಲ್ಲಿ ಐಕ್ಯವನ್ನು ನಿರಾಕರಿಸಲು ನಾವು ಪ್ರಯತ್ನಪಡಬೇಕಾಗಿಲ್ಲ :

ಮತ್ತು ಪರವಾದಿಯು ಅಖಂಡಾರ್ಥವಾದಿ. ವೇದಗಳಿಂದ ಕೇವಲ ಅಖಂಡ ಚೈತನ್ಯದ ಬೋಧವು ಬರುತ್ತದೆಯೇ ಹೊರತು ಅಭೇದದ ಜ್ಞಾನವಾಗಲೀ ದ್ವಿತೀಯಾಭಾವದ ಜ್ಞಾನವಾಗಲೀ ಬರುವುದಿಲ್ಲವೆಂದು ಅವನ ಅಂಗೀಕಾರ.

ಆದ್ದರಿಂದ ಅವನಿಗೆ ಅಭೇದ ಅಥವಾ ದ್ವಿತೀಯಾಭಾವವನ್ನು ಸಾಧಿಸಲು ಪ್ರಮಾಣವೇ ಇಲ್ಲದಿರುವುದರಿಂದ ನಾವು ಅವನನ್ನು ನಿರಾಕರಿಸುವ ಪ್ರಯತ್ನವನ್ನು ಮಾಡಬೇಕಾದ ಅವಶ್ಯಕತೆಯೇ ಇಲ್ಲ. ಕೇವಲ ನಮ್ಮ ಶಿಷ್ಯರ ಬುದ್ಧಿಶುದ್ಧಿಗಾಗಿ ಭಕ್ತಿಗಾಗಿ ಮತ್ತು ಮುಕ್ತಿಗಾಗಿ ನಾವು ಇಲ್ಲಿ ವಿಚಾರಮಾಡಿದ್ದೇವೆ ಎಂದು ರಾಜರು ಹೇಳುತ್ತಾರೆ. ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವರೂಪವಾದ ವಿರುದ್ಧ ಧರ್ಮಗಳಿರುವುದರಿಂದ ಜೀವೇಶ್ವರರಿಗೆ ಐಕ್ಯವಿಲ್ಲ ಎಂದು ಹೇಳುವ ನಮ್ಮನ್ನು ಕುರಿತು ಐಕ್ಯವು ಬ್ರಹ್ಮಸ್ವರೂಪವೆಂದು ಹೇಳುವುದು ಅಸಂಗತವಾದುದು. ಐಕ್ಯವಿದ್ದರಷ್ಟೇ ಅದು ಯಾವ ರೂಪ ಎಂಬ ಪ್ರಶ್ನೆ? ಬುಡವೇ ಇಲ್ಲದ ಮರ ಇದ್ದಂತೆ ಅದ್ವೈತಿಗಳ ಪ್ರಕ್ರಿಯೆಯಾಗಿದೆ. ಇಲ್ಲದಿದ್ದರೆ ಶಶಶೃಂಗವು ಸ್ವಪ್ರಕಾಶಚಿದ್ರೂಪವಾದುದರಿಂದ ವೇದಗಳಿಗೆ ಶಶಶೃಂಗದಲ್ಲಿಯೇ ತಾತ್ಪರ್ಯ ಎಂದು ನಿನ್ನ ಪ್ರತಿವಾದಿಯು ಹೇಳಿದರೆ ಅದಕ್ಕೆ ನಿನ್ನ ಉತ್ತರವೇನು?

ಆದ್ದರಿಂದ ಮುಕ್ತನೂ ಸರ್ವಗುಣಪೂರ್ಣನಾಗಿರುವುದಿಲ್ಲ. ಆದ್ದರಿಂದ ಐಕ್ಯವಿಲ್ಲ. ಸಾಮ್ಯವಾದರೂ ಅಲ್ಪಸಾಮ್ಯಮಾತ್ರ ಇದೆ. **'ಅಮೃತಸ್ಯೈಷ ಸೇತುಃ', 'ಉತಾಮೃತತ್ವಸ್ಯೇಶಾನಃ', 'ಮುಕ್ತಾನಾಂ ಪರಮಾಗತಿಃ', 'ಕೃಷ್ಣೋ ಮುಕ್ತೈರಿಜ್ಯತೇ ಸೋಮಪೂತೈಃ', 'ಸೋಮೃತಸ್ಯಾಭಯಸ್ಯೇಶೋಮರ್ತ್ಯಮನ್ನಂ ಯದತ್ಯಗಾತ್'** ಮೊದಲಾದ ಶ್ರುತಿಸ್ಮೃತಿಗಳು ಹರಿಗೆ ಮುಕ್ತಸ್ವಾಮಿತ್ವವನ್ನೇ ಹೇಳುತ್ತವೆ. **'ನ ತೇ ಮಹಿತ್ವಮನ್ವಶ್ನುವಂತಿ', 'ಅಪ್ಯರ್ವಾಗ್‌ವೃತ್ತಯೋ ಯಸ್ಯ ಮಹಿತ್ವೇಸ್ವಭುವಾದಯಃ', 'ಬ್ರಹ್ಮೇಶಾನಾದಿಭಿರ್ದೇವೈಃ ಯತ್ ಪ್ರಾಪ್ತುಂ ನೈವ ಶಕ್ಯತೇ । ತದ್ ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರೇ'** ಇತ್ಯಾದಿ ಶ್ರುತಿಸ್ಮೃತಿಗಳು ಬ್ರಹ್ಮರುದ್ರಾದಿ ದೇವತೆಗಳೂ ಹರಿಯ ಮಹಿಮೆಯನ್ನು ಪಡೆಯಲಾರರು ಎಂದು ಹೇಳುತ್ತಿವೆ. ಆದ್ದರಿಂದ ಇನ್ನು ಯಾವ ಮನುಷ್ಯನು ಹರಿಯ ಅಭೇದವನ್ನು ಆಶಿಸಬಹುದು?

ಆದ್ದರಿಂದ ಸರ್ವೇಶ್ವರನೂ ಭೂತಭವ್ಯಭವತ್ಪ್ರಭುವೂ ಮುಕ್ತಾಮುಕ್ತ ಜಗನ್ನಾಥನೂ ಆದ ಹರಿಯು ಭಕ್ತಿಯಿಂದ ಆರಾಧಿಸಲ್ಪಡಬೇಕು. ಬ್ರಹ್ಮಾದಿಜೀವರನ್ನು ಪೋಷಿಸುವ, ಅವರಿಂದ ವಂದಿತಳಾದ, ವಿಶ್ವವಿಖ್ಯಾತಳಾದ ಮುಕ್ತಾಮುಕ್ತಜಗನ್ಮಾತೆಯಾದ ಮಂಗಳದೇವತೆಯಾದ ಲಕ್ಷ್ಮೀದೇವಿಯೂ ಹರಿಯ ಜೊತೆಯಲ್ಲಿ ವಂದಿಸಲ್ಪಡಬೇಕು. ಭಕ್ತರ ಭಯವನ್ನು ಪರಿಹಾರಮಾಡುವ

ಸ್ವತಃ ಭಯರಹಿತರಾದ ಮಧ್ವಾಚಾರ್ಯರೂ ಸನ್ಮಾನಿಸಲ್ಪಡಬೇಕೆಂದು ಈ ಪ್ರಕರಣವನ್ನು ಉಪಸಂಹಾರಮಾಡುತ್ತಾರೆ.

**ಜಯತಿ ಶ್ರೀರಮಾಕಾಂತೋ ಜಯತಿ ಶ್ರೀಶ್ಚ ತತ್ಪ್ರಿಯಾ ।**
**ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧ್ವಸಃ ॥**

ಇನ್ನು ಫಲಸೌರಭದ ಉಳಿದ ಭಾಗದಲ್ಲಿ, ಎಂದರೆ ಸಮವಾದ ಅರ್ಧಭಾಗದಲ್ಲಿ ವಾಯುದೇವರ ಅವತಾರಗಳು, ವಿಶೇಷವಾಗಿ ಮಧ್ವಾವತಾರವು ವೇದಪ್ರತಿಪಾದ್ಯವೆಂದು ಅನೇಕ ವೇದಮಂತ್ರಗಳಿಗೆ ಅರ್ಥವನ್ನು ಹೇಳಿ ಸಮರ್ಥಿಸಿದ್ದಾರೆ.

## ವೇದಗಳಲ್ಲಿ ವಾಯುದೇವರ ಮಹಿಮೆ :

ಋಗ್ವೇದದ ಆರನೆಯ ಅಷ್ಟಕದಲ್ಲಿ ಹದಿನೈದು ವರ್ಗಗಳ ನಂತರ ಪ್ರಾರಂಭವಾಗುವ 'ಸ್ವಾದಿಷ್ಠಯಾಮದಿಷ್ಠಯಾ' ಇತ್ಯಾದಿ ಸಪ್ತಮಾಧ್ಯಾಯಭಾಗ, ಅಷ್ಟಮಾಧ್ಯಾಯ ಮತ್ತು ಸಪ್ತಮಾಷ್ಟಕದಲ್ಲಿ ಐದುವರ್ಗಗಳನ್ನು ಬಿಟ್ಟು ಉಳಿದ ಐದು ಅಧ್ಯಾಯಗಳ, ಒಟ್ಟು ಏಳು ಅಧ್ಯಾಯಗಳಿಗೆ ಸ್ವಲ್ಪ ಕಡಿಮೆಯಾಗುತ್ತದೆ. ಇಷ್ಟರಲ್ಲಿ ವಾಯುದೇವರು ಪವಮಾನ, ಪೂಯಮಾನ, ಸೋಮ ಎಂಬುದಾಗಿ ಸ್ತೋತ್ರಮಾಡಲ್ಪಡುತ್ತಾರೆ. ವಾಯು ಎಂದರೆ ಗಮನಶೀಲ ಎಂದು ಅರ್ಥ. ಪವಮಾನಶಬ್ದಕ್ಕೂ ಅದೇ ಅರ್ಥ. ಪೂಯಮಾನ ಎಂದರೆ ಪವಿತ್ರೀಕರಿಸುವವರು ಎಂದು ಅರ್ಥ. **'ವಾಯುರ್ವಹ್ನಿಃ ಶುಚಿಃ ಶ್ರೇಷ್ಠಃ'** ಎಂಬ ಸ್ಮೃತಿಯು ಈ ಅರ್ಥವನ್ನು ಪುಷ್ಟೀಕರಿಸುತ್ತದೆ. ಆದ್ದರಿಂದಲೇ **'ಪಾಂಸವೋ ಅಸ್ಮಾನ್ ಪುನಂತು'** ಎಂದು ಪ್ರಾಚೀನರು ಶುದ್ಧಿಪ್ರಾರ್ಥನೆಯನ್ನು ಮಾಡಿದ್ದಾರೆ. ಜಾಗ್ರದಾದಿ ಅವಸ್ಥಾತ್ರಯದಲ್ಲಿ ಶ್ವಾಸರೂಪದಿಂದ ಸರ್ವಜೀವರಲ್ಲಿ ಇರುವುದರಿಂದ ಸೋಮ ಎನಿಸುತ್ತಾರೆ. ನಿರುಕ್ತದ ನಿಯಮದಂತೆ ಶ್ವಾಸ ಎಂಬ ಶಬ್ದವು ಸೋಮ ಎಂದಾಗುತ್ತದೆ. ಅಥವಾ **'ಷು ಪ್ರಸವೈಶ್ವರ್ಯಯೋಃ'** ಎಂದು ಧಾತುವಿರುವುದರಿಂದ ಸೋಮ ಎಂದರೆ ಜಗತ್ಪ್ರಸವವನ್ನು ಮಾಡುವವನು, ಐಶ್ವರ್ಯಶಾಲಿ ಎಂದು ಅರ್ಥ. ಆದ್ದರಿಂದಲೇ **'ಪಿತರತುಲಗುರೋ'**, **'ಪೀಠೋ ರತ್ನೋಪಕೢಪ್ತೇ ರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಂ'** ಎಂದು ಹೇಳಿದ್ದಾರೆ.

**ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ**
**ಶ್ಯೇನೋ ಮಥಾಯದಿಷಿತಸ್ತಿರೋ ರಜಃ ।**
**ಸ ಮಧ್ವ ಆ ಯುಫತೇ ವೇವಿಜಾನ**
**ಇತ್ ಕೃಶಾನೋರಸ್ತುರ್ಮನಸಾ ಹ ಬಿಭ್ಯುಷಾ ।** -(ಋಗ್ವೇದ ೯-೭೭-೨)

**ತೇನಃ ಪೂರ್ವಾಸ ಉಪರಾಸ ಇಂದವೋ**
**ಮಹೇವಾಜಾಯ ಧನ್ವಂತು ಗೋಮತೇ ।**
**ಈಕ್ಷೇಣ್ಯಾಸೋ ಅಹ್ಯೋ ನ ಚಾರವೋ**
**ಬ್ರಹ್ಮಬ್ರಹ್ಮಯೇ ಜುಜುಷುರ್ಹವಿರ್ಹವಿಃ ॥** - (ಋಗ್ವೇದ ೯-೭೭-೩)

ಪೂರ್ವ್ಯ ಎಂದರೆ ಎಲ್ಲಾ ಜೀವರಿಗಿಂತ ಮೊದಲು ಉತ್ಪನ್ನರಾಗಿರುವುದರಿಂದ ಸರ್ವಜೀವರಲ್ಲಿ ಜ್ಯೇಷ್ಠರಾದವರು ಎಂದು ಅರ್ಥ. **'ವಂದ್ಯಂ ಚಂದ್ರೇಂದ್ರರುದ್ರದ್ಯುಮಣಿಫಣಿವಯೋ ನಾಯಕಾದ್ಯೈರಿಹಾದ್ಯ'** ಎಂಬ ವಚನವು ಇದರ ವ್ಯಾಖ್ಯಾನರೂಪವಾಗಿದೆ. ಆ ಪವಮಾನನು ಶ್ವಾಸರೂಪದಿಂದ ಪವತೇ ನಮ್ಮ ಬಳಿಗೆ ಬರುತ್ತಾರೆ. **'ಆನಂದಾನ್ ಮಂದಮಂದಾ ದದತಿ ಹಿ ಮರುತಃ'** ಎಂಬ ವಚನವು ಇದನ್ನೇ ಹೇಳುತ್ತದೆ. ಶ್ಯೇನ ಎಂದರೆ ನಿರವಧಿ ಕಸುಖರೂಪಿಯಾದ ನಾರಾಯಣನನ್ನು ಸ್ವಾಮಿಯಾಗಿ ಹೊಂದಿರುವವನು ಎಂದು ಅರ್ಥ. **'ತ್ರಾತಾಯಸ್ಯ ತ್ರಿಧಾಮಾ'** ಎಂಬ ವಚನವು ಇದನ್ನು ಹೇಳುತ್ತದೆ. ಇಷಿತ ಎಂದರೆ ಸರ್ವಸಜ್ಜನರಿಗೂ ಇಷ್ಟನಾದವನು ಎಂದು ಅರ್ಥ. **'ಭ್ರಾತರಿಷ್ಟಾಪ್ತ ಬಂಧೋ'** ಎಂಬ ವಚನವು ಇದರ ವ್ಯಾಖ್ಯಾನವಾಗಿದೆ. ಅಂತಹ ಪವಮಾನನು ರಜೋಗುಣ ಮತ್ತು ತಮೋಗುಣಮೂಲವಾದ ದುಶ್ಶಾಸ್ತ್ರಗಳನ್ನು ತಿರಸ್ಕರಿಸಿ ವೇದಾದಿಶಾಸ್ತ್ರವಿಚಾರ ಮಂಥನವನ್ನು ಮಾಡಿದನು. **'ದುರ್ಭಾಷ್ಯಂ ವ್ಯಸ್ಯ ದಸ್ಯೋಃ' ಎಂಬ ವಚನವೂ 'ಅಸುಕರಮಕರೋಃ ಬ್ರಹ್ಮಸೂತ್ರಸ್ಯ ಭಾಷ್ಯಂ'** ಎಂಬ ವಚನವೂ ಇದನ್ನು ವಿವರಿಸುತ್ತವೆ. ವೇವಿಜಾನ ಎಂದರೆ ಪೃಥಕ್ಕರಿಸುವವನು ಎಂದು ಅರ್ಥ. ತಿರೋಹಿತವಾದ ಪಂಚಭೇದವಿದ್ಯೆಯನ್ನು ಮಧ್ವರಾಗಿ ಸ್ಥಾಪನೆಮಾಡುತ್ತಾರೆ ಎಂದು ತಾತ್ಪರ್ಯ. ಯು ಮಿಶ್ರಣಾಮಿಶ್ರಣಯೋಃ ಎಂದು ಧಾತುವಿದೆ. ಆಯುತೇ ಎಂದರೆ ಸಜ್ಜನರ ಜೊತೆಯಲ್ಲಿ ಮಿಶ್ರಿತರಾಗುತ್ತಾರೆ ದುರ್ಜನರ ಜೊತೆಯಲ್ಲಿ ಮಿಶ್ರಿತರಾಗುವುದಿಲ್ಲ ಎಂದು ಅರ್ಥ. **'ಸಜ್ಜನಾನ್ ಮೋದಯಂತಂ', 'ದ್ವೈತ್ಯನಾಮಾರ್ತಿಮಂಧೇತಮಸಿ ವಿದಧತಾಂ', 'ಪ್ರಮದದ ಸುಧಿಯಾಂ ಮೋಹಕ ದ್ವೇಷಭಾಜಾಂ'** ಎಂಬ ವಚನಗಳು ಇದರ ವ್ಯಾಖ್ಯಾನರೂಪವಾಗಿವೆ. ಯೌತಿ ಎಂದು ಏಕವಚನವಿರಬೇಕಾದ ಸ್ಥಳದಲ್ಲಿ

ಯುವತೇ ಎಂದು ಬಹುವಚನವಿದೆ. ಅದು ಅನೇಕ ಸಜ್ಜನರಿಗೆ ಜ್ಞಾನದಾನವನ್ನು ಮಾಡಲು, ಹಾಗೆಯೇ ಸಜ್ಜನರ ಹೃದಯದಲ್ಲಿರುವ ದುಷ್ಟರಾದ ಅಸುರರನ್ನು ಪರಾಭವಗೊಳಿಸಲು ವಾಯುದೇವರು ತೆಗೆದುಕೊಂಡ ರೂಪಬಾಹುಲ್ಯದ ದೃಷ್ಟಿಯಿಂದ ಉಪಪನ್ನವಾಗುತ್ತದೆ. **'ವಾಯೋರ್ದಿವ್ಯಾನಿ ರೂಪಾಣಿ ಪದ್ಮತ್ರಯಯುತಾನಿ ಚ'** ಎಂಬ ಸ್ಮೃತಿವಚನವು ಈ ಶಬ್ದಾರ್ಥದ ಉಪಬೃಂಹಣರೂಪವಾಗಿದೆ. **'ಸ್ವಾಮಿನ್ ಸರ್ವಾಂತರಾತ್ಮನ್'** ಎಂಬ ವಚನವೂ ಇದನ್ನು ಪೋಷಿಸುತ್ತದೆ. ಕೃಶಾನೋರಸ್ತುಃ ಎಂದರೆ ತನ್ನ ತೇಜಸ್ಸಿನಿಂದ ಅಗ್ನಿಯನ್ನು ಮೀರುವವನು ಎಂದು ಅರ್ಥ. ಅಥವಾ ಅಗ್ನಿಯನ್ನು ಸಂಹರಿಸುವವನು ಎಂದು ಅರ್ಥ. ಪ್ರಲಯಕಾಲದಲ್ಲಿ ಅಗ್ನಿಯು ವಾಯುವಿನಲ್ಲಿ ಲೀನವಾಗುತ್ತದೆ ಎಂಬುದು ಪ್ರಸಿದ್ಧ. ಆ ತೇಜಸ್ಸಂಹಾರಕವಾದ ವಾಯುರೂಪವು ಸಂಹಾರೇಚ್ಛೆಯನ್ನು ಹೊಂದಿರುವುದರಿಂದ ಬಿಭ್ಯುಷಾ ಭಯಂಕರವಾದ ಮನಸ್ಸಿನಿಂದ ಕೂಡಿದುದಾಗಿ ಆಯುವತೇ ಬ್ರಹ್ಮಾಂಡದ ಅಗ್ನ್ಯಾವರಣದ ಹೊರಗೆ ಸುತ್ತಲೂ ಸಂಚರಿಸುತ್ತದೆ. **'ಅಭೇದಿ ಬಭ್ರೇ ಬಭೂವೇ ಯೇನ ಭ್ರೂವಿಭ್ರಮಸ್ತೇ'** ಎಂಬ ವಚನವು ಈ ಅರ್ಥವನ್ನು ವಿವರಿಸುತ್ತದೆ.

ಇಂದು ಎಂದರೆ ಭಕ್ತರ ಇಷ್ಟದಾನಶೀಲವಾದುದು ಎಂದು ಅರ್ಥ. ರೂಪಬಹುತ್ವದ ವಿವಕ್ಷೆಯಿಂದ ಬಹುವಚನ. ಆ ರೂಪಗಳು ನಮಗೆ ಉಪದೇಶಗಳೂ ಮತ್ತು ಪ್ರೇರಕಗಳಾಗಿರುವುದರಿಂದ ಪೂರ್ವಾಸಃ ಜ್ಞಾನೋದಯಕ್ಕಿಂತ ಮೊದಲೇ ಇರುವಂತಹವು. ಉಪರಾಸಃ ಎಂದರೆ ಜ್ಞಾನೋದಯಾನಂತರದಲ್ಲಿಯೂ ಇರುವಂತಹವು. **'ಅಸ್ಯಾವಿಷ್ಕರ್ತುಕಾಮಂ', 'ಪಿತರತುಲಗುರೋ', 'ತತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋ'** ಮುಂತಾದ ವಚನಗಳು ಇದನ್ನು ಸ್ಪಷ್ಟಪಡಿಸುತ್ತವೆ. ಜ್ಞಾನಪ್ರಚುರವಾದ ಉತ್ಸವಗಳಲ್ಲಿ ಹೋತೃಗಳಿಗೆ ಮತ್ತು ವ್ಯಾಖ್ಯಾತೃಗಳಿಗೆ ಯಜ್ಞಯೋಗ್ಯವಾದ ಅನ್ನವನ್ನು ಕೊಡಲು ಧನ್ವಂತು ಧನವನ್ನು ಕೊಡುವಂತಹವುಗಳಾಗಲಿ. **'ಭೂರಿ ಮೇ ಭೂತಿಹೇತುಃ'** ಎಂಬ ವಚನವು ಇದನ್ನು ಸ್ಪಷ್ಟಪಡಿಸುತ್ತದೆ. ಅಹ್ಯೋ ನ ಈಕ್ಷೇಣ್ಯಾಸಃ ಎಂದರೆ ನಾಗರತ್ನಗಳ ಪ್ರಭೆಯಂತೆ ಹೊಳೆಯುವ ರೂಪಗಳು ಎಂದು ಅರ್ಥ. **'ನಿಜರುಚಿನಿಕರವ್ಯಾಪ್ತಲೋಕಾವಕಾಶಃ'** ಇತ್ಯಾದಿ ವಚನಗಳು ಇದರ ವ್ಯಾಖ್ಯಾನರೂಪವಾಗಿದೆ. ಚಾರವಃ ಎಂದರೆ ಸುಂದರವಾಗಿರುವುವು ಎಂದು ಅರ್ಥ. **'ಸಂದ್ರಕ್ಷ್ಯೇಸುಂದರಂ'** ಎಂಬ ವಚನವು ಇದರದೇ ವಿವರಣೆ.

**'ಬ್ರಹ್ಮಬ್ರಹ್ಮಜುಜುಷುಃ'** ಎಂದರೆ ಬೇರೆ ಬೇರೆ ಯುಗಗಳಲ್ಲಿ ಅವತರಿಸುವ ಪರಮಾತ್ಮನ ರಾಮಕೃಷ್ಣವೇದವ್ಯಾಸಾದಿ ಎಲ್ಲಾ ರೂಪಗಳನ್ನು ಸೇವಿಸಿದವು ಎಂದು ಅರ್ಥ. **'ತಯೋರ್ಜುಷ್ಟಿಂ ಮಾತರಿಶ್ವಾಜಗಾಮ'** ಎಂಬ ಶ್ರುತಿಯೂ **'ಆಸೇವೋದ್ಯದ್‌ದಯಾರ್ದ್ರಃ', 'ಯಾಭ್ಯಾಂ ಶುಶ್ರೂಷುರಾಸೀಃ, ಭಕ್ತಿಮದ್ಯಾಪಿ ರಾಮೇ'** ಮುಂತಾದ ವಚನಗಳೂ ಇದನ್ನು ಸ್ಪಷ್ಟಪಡಿಸುತ್ತವೆ. 'ಹನಿರ್ಹವಿಃ' ಎಂದರೆ ಪ್ರತಿಯಜ್ಞದಲ್ಲಿ ಭಕ್ತರು ವಾಯವೇ ಸ್ವಾಹಾ ಎಂದು ಕೊಡುವ ಯಜ್ಞಭಾಗಗಳನ್ನು, ಅಥವಾ ಭಕ್ತರು ಕೊಡುವ ಪ್ರಾಣಾದಿ ಪಂಚ ಆಹುತಿಗಳನ್ನು, ಅಥವಾ ಏಕಚಕ್ರಾನಗರದಲ್ಲಿ ಬಕನಿಗೆ ಕಳುಹಿಸಿದ ಸಕಲ ಅನ್ನವನ್ನೂ ಜುಜುಷುಃ ಪ್ರೀತಿಯಿಂದ ಸೇವಿಸಿದರು ಎಂದು ಅರ್ಥ. ಹೀಗೆ ಈ ಮಂತ್ರವೆಲ್ಲವೂ ವಾಯುದೇವರ ಮೂಲರೂಪ ಮತ್ತು ಅವತಾರಗಳ ಮಹಿಮೆಯನ್ನು ಹೇಳುತ್ತದೆ.

**ಅಜೀತಯೇಽಹತಯೇ ಪವಸ್ವ ಸ್ವಸ್ತಯೇ ಸರ್ವತಾತಯೇ ಬೃಹತೇ ।**
**ತದುಶಂತಿ ವಿಶ್ವ ಇಮೇ ಸಖಾಯಸ್ತದಯಂ ವಶ್ಮಿ ಪವಮಾನ ಸೋಮ ॥**

(ಋಗ್ವೇದ ೯-೯೬=೪)

ಎಲೈ ಸೋಮಪವಮಾನನಾಮಕ ಮುಖ್ಯವಾಯುವೇ, ಅಜೀತಯೇ ದೈತ್ಯರಿಂದ ಪರಾಭವವನ್ನು ಹೊಂದದಿರುವುದಕ್ಕಾಗಿ ಅಹತಯೇ ದೈತ್ಯರಿಂದ ಹನನವನ್ನು ಹೊಂದದಿರುವುದಕ್ಕಾಗಿ ಪವಸ್ವ ನಮ್ಮ ಕಡೆಗೆ ಸಂಚಾರಮಾಡು. ಸರ್ವತಾತಯೇ ಬೃಹತೇ ವ್ಯಾಪ್ತನಾದ ಸರ್ವಗುಣಪೂರ್ಣನಾದ ಹರಿಯಸೇವೆಯನ್ನು ಉದ್ದೇಶಿಸಿ ಪವಸ್ವಸಂಚಾರ ಮಾಡು. ಇಮೇ ವಿಶ್ವೇ ಸಖಾಯಃ ಈ ಎಲ್ಲಾ ವೈಷ್ಣವ ಸ್ನೇಹಿತರು ತದುಶಂತಿ ನಿನ್ನ ಸಂಚಾರವನ್ನು ಬಯಸುತ್ತಾರೆ. ತದಹಂ ವಶ್ಮಿ. ನಾನೂ ಆ ಫಲಕ್ಕಾಗಿ ನಿನ್ನ ಸಂಚಾರವನ್ನು ಇಚ್ಛಿಸುತ್ತೇನೆ ಮತ್ತು ಹೇಳುತ್ತೇನೆ ಎಂದು ಸಾಮಾನ್ಯವಾದ ಅರ್ಥ. ಭಗವತ್ಸೇವಾರ್ಥವಾಗಿ ವಾಯುದೇವರ ಸಂಚಾರವು ಪ್ರಸಿದ್ಧವಾಗಿದೆ. ಹನುಮದವತಾರದಲ್ಲಿ ರಾಮನನ್ನು ಹೊತ್ತು ಸುಗ್ರೀವನ ಬಳಿಗೆ ಗಮನ, ಏಕಚಕ್ರಾನಗರದಲ್ಲಿ ಬಕವಧೆಗಾಗಿ ಗಮನ, ಕೃಷ್ಣನ ಜೊತೆಯಲ್ಲಿ ಜರಾಸಂಧನ ವಧೆಗಾಗಿ ಗಮನ, ವನವಾಸದಲ್ಲಿ ಸೌಗಂಧಿಕಾಪುಷ್ಪವನ್ನು ತರಲು ಗಮನ, ಯುದ್ಧದಲ್ಲಿ ಗದೆಯನ್ನು ಹಿಡಿದು ಗಮನ, ಈ ಎಲ್ಲಾ ಗಮನಗಳೂ ಸಜ್ಜನರಿಗೆ ದುರ್ಜನರಿಂದ ಪರಾಭವ ಅಥವಾ ಘಾತವಾಗದೆ ಸಜ್ಜನರ ಕ್ಷೇಮಕ್ಕಾಗಿ ಮಾಡಿದ ಗಮನಗಳು. ಮಧ್ವಾವತಾರದಲ್ಲಿ ಬಾಲ್ಯದಲ್ಲಿ ವಿಮಾನಗಿರಿಯಿಂದ ಮನೆಗೆ ಗಮನ, ಗೋರಕ್ಷಣೆಗಾಗಿ ಗಮನ, ರಾಮೇಶ್ವರವನ್ನು ಕುರಿತು ಗಮನ,

ವ್ಯಾಸಸೇವಾರ್ಥವಾಗಿ ಬದರಿಕಾಶ್ರಮಗಮನ, ಸಜ್ಜನರಿಗೆ ಉಪದೇಶಮಾಡಲು ಮತ್ತು ದುರ್ಮತಗಳನ್ನು ನಿರಾಕರಿಸಲು ದೇಶದೇಶಗಳಲ್ಲಿ ಗಮನ, ಇವೆಲ್ಲವೂ **'ಅಜೀತಯೇ ಅಹತಯೇ ಸ್ವಸ್ತಯೇ ಸರ್ವತಾತಯೇ ಬೃಹತೇ ಪವಸ್ವ'** ಎಂಬುದರಿಂದ ಸೂಚಿಸಲ್ಪಡುತ್ತವೆ. **'ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ಕು ಕಲೌಯುಗೇ । ವಾಯುಶ್ಚ ಯತಿರೂಪೇಣ ಕೃತ್ವಾ ದುಶ್ಶಾಸ್ತ್ರಖಂಡನಮ್'** ಎಂಬ ವಾಯುಪುರಾಣವಚನವೂ **'ಪ್ರಾಕ್‌ಪಂಚಾಶತ್ಸಹಸ್ರೈರ್ವ್ಯವಹಿತಮಮಿತಂ ಯೋಜನೈಃ ಪರ್ವತಂ ತ್ವಂ, ಮುಷ್ಟಿರಿಷ್ಟಂ ಪ್ರದೇಷ್ಟುಂ ಕಿಂ ನೇಷ್ಟೇ, ದೇವ್ಯಾದೇಶಪ್ರಣೇತಿ'** ಇತ್ಯಾದಿ ವಾಯುಸ್ತುತಿ ವಚನಗಳಿಂದಲೂ **'ಜಘ್ನೇ ನಿಘ್ನೇನ ವಿಘ್ನಃ, ಕ್ಷ್ವೇಲಾಕ್ಷೀಣಾಟ್ಟಹಾಸಂ ತವರಣಮರಿಹನ್ ಉದ್ಗದೋದ್ದಾಮ ಬಾಹೋಃ, ಗಚ್ಛನ್ ಸೌಗಂಧಿಕಾರ್ಥಂ ಪಥಿ, ಬಹ್ವೀಃ ಕೋಟೀರಟೀಕಃ'**, ಇತ್ಯಾದಿ ವಚನಗಳಿಂದಲೂ **'ಬ್ರಹ್ಮಾಹಂ ನಿರ್ಗುಣೋಹಂ ವಿತಥಮಿದಮಿತಿ ಹ್ಯೇಷ ಪಾಷಂಡವಾದಃ । ತದ್ಯುಕ್ತ್ಯಾಭಾಸಜಾಲಪ್ರಸರವಿಷತರೂದ್ದಾಹದಕ್ಷಪ್ರಮಾಣ ಜ್ವಾಲಾಮಾಲಾಧರೋಗ್ನಿಃ, ಸ್ವಚ್ಛಃ ಸ್ವಚ್ಛಂದಮೃತ್ಯುಃ ಸುಖಯಸಿ ಸುಜನಂ, ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯಕೃಷ್ಣಂ ಚ ನತ್ವಾಕ್ಕತ್ವಾಭಾಷ್ಯಾಣಿ'** ಇತ್ಯಾದಿ ವಚನಗಳಿಂದಲೂ ಸ್ಪಷ್ಟವಾಗುತ್ತವೆ. ಆದ್ದರಿಂದ ಮೂಲರೂಪದಲ್ಲಿ ಮತ್ತು ಅವತಾರರೂಪಗಳಲ್ಲಿ ಸಜ್ಜನರ ಕ್ಷೇಮ ಮತ್ತು ಜ್ಞಾನಲಾಭಗಳಿಗಾಗಿ ದುರ್ಜನರ ನಾಶ ಹಾಗೂ ದುರ್ಮತಗಳ ನಿರಾಕರಣೆಗಾಗಿ ವಾಯುದೇವರ ಸಂಚಾರವು ಮಂತ್ರದ್ರಷ್ಟ್ರುವಾದ ಋಷಿಯಿಂದ ಪ್ರಾರ್ಥಿಸಲ್ಪಡುತ್ತದೆ ಎಂದು ತಿಳಿಯುತ್ತದೆ.

**ಪ್ರಸೇನಾನೀಃ ಶೂರೋ ಅಗ್ರೇ ರಥಾನಾಂ ಗವ್ಯನ್ನೇತಿ ಹರ್ಷತೇ ಅಸ್ಯ ಸೇನಾ ।**
**ಭದ್ರಾನ್ ಕೃಣ್ವನ್ ಇಂದ್ರಹವಾನ್ ಸಖಿಭ್ಯ ಆ ಸೋಮೋ ವಸ್ತ್ರಾಭಸಾನಿ ದತ್ತೇ॥**

(ಋಗ್ವೇದ ೯-೯೬-೧)

ಈ ಮಂತ್ರದಲ್ಲಿ ಭೀಮಸೇನನ ಮತ್ತು ಹನುಮಂತನ ಕಥೆಯು ಸ್ಪಷ್ಟವಾಗಿ ನಿರೂಪಿತವಾಗಿದೆ. ಶೂರಃ ಶೌರ್ಯವುಳ್ಳ ಗವ್ಯನ್ ರಥವನ್ನು ಬಿಟ್ಟು ಭೂಮಿಯ ಮೇಲೆ ನಡೆಯುವ- ಇದು ಹನುಮಂತ ಮತ್ತು ಭೀಮಸೇನ ಇಬ್ಬರಿಗೂ ಅನ್ವಯಿಸುತ್ತದೆ. ಸೇನಾನೀಃ ಪಾಂಡವಸೇನಾನಾಯಕನಾದ ಭೀಮಸೇನನು- ಭಯಂಕರವಾದ ಸೇನೆಯುಳ್ಳವನು, ಸೇನಾನಾಯಕನಾದವನು ಎಂದು ಭೀಮಸೇನ ಮತ್ತು ಸೇನಾನೀಶಬ್ದಗಳು ಒಂದೇ ಅರ್ಥವನ್ನು ಹೇಳುತ್ತವೆ. ರಥಾನಾಮಗ್ರೇ ಏತಿ ಶತ್ರುಗಳ ರಥದ ಎದುರಿನಲ್ಲಿ ಯುದ್ಧಮಾಡಲು

ಹೋಗುತ್ತಾನೆ. ಅಸ್ಯಸೇನಾ ಹರ್ಷತೇ ಆಗ ಭೀಮಸೇನನ ಸೈನ್ಯವು ಸಂತೋಷಗೊಳ್ಳುತ್ತದೆ. ಇಂದ್ರಹವಾನ್ ಕೃಷ್ಣ ಮತ್ತು ವೇದವ್ಯಾಸರ ಹೊಗಳಿಕೆಯ ಮಾತುಗಳಿಗೆ ಪಾತ್ರವಾದ ಭದ್ರಾನ್ ಕೃಣ್ವಾನ್ ಶೋಭನವಾದ ಪರಾಕ್ರಮಗಳನ್ನು ಮಾಡುತ್ತಾ ಸೋಮಃ ಸೋಮಕುಲದಲ್ಲಿ ಜನಿಸಿದ ಭೀಮಸೇನನು ಧರ್ಮರಾಜನಿಗೆ ಪಟ್ಟಾಭಿಷೇಕವಾದಾಗ ಯುವರಾಜ ಪಟ್ಟದಲ್ಲಿ ಕುಳಿತು ಆ ಸಖಿಭ್ಯಃ ಎಲ್ಲಾ ಕಡೆಗಳಿಂದ ಬಂದ ತನ್ನ ವೈಷ್ಣವಸ್ನೇಹಿತರಿಗೆ ರಭಸಾನಿ ವಸ್ತ್ರಾಸಂಭ್ರಮದಿಂದ ಅಥವಾ ಚಿತ್ರಗಳಿಂದ ಕೂಡಿದ ವಸ್ತ್ರಗಳನ್ನೂ, ಉಪಲಕ್ಷಣದಿಂದ ಆಭರಣ, ಧನ, ಭೂಮಿಗಳನ್ನೂ ದತ್ತೇ ಕೊಡುತ್ತಾನೆ.

ಅದರಂತೆ ಶೂರನಾದ ಹನುಮಂತನು ಕಪಿಸೇನಾನಾಯಕನಾಗಿ ರಾಕ್ಷಸರ ಸೇನೆಯ ಮುಂದೆ ನಿಂತು ಯುದ್ಧಮಾಡಲು ಹೋದಾಗ ಕಪಿಸೈನ್ಯವು ಹರ್ಷಪಡುತ್ತದೆ. ಇಂದ್ರಹವಾನ್ ಸೀತೆಯ ಪ್ರತಿಕೃತಿಯಲ್ಲಿದ್ದ ಇಂದ್ರನಿಂದ ಸ್ತೋತ್ರಮಾಡಲು ಯೋಗ್ಯವಾದ ಭದ್ರಾನ್ ಸಮುದ್ರಲಂಘನ ವನಭಂಗ ಲಂಕಾದಹನ ಮೊದಲಾದ ಪರಾಕ್ರಮಗಳನ್ನು ಮಾಡುತ್ತಾ ಸೋಮಃ ಹನುಮಂತನೆಂಬ ಹೆಸರಿನವಾಯುವು ರಭಸಾನಿವಸ್ತ್ರಾ ತನ್ನ ಬಾಲಕ್ಕೆ ರಾಕ್ಷಸರು ಸುತ್ತಿದ ಚಿತ್ರವಿಚಿತ್ರವಾದ ವಸ್ತ್ರಗಳನ್ನು ಸಖಿಭ್ಯಃ ತನ್ನ ಸ್ನೇಹಿತನಾದ ಅಗ್ನಿಗೆ, ಅನೇಕ ಜ್ವಾಲೆಗಳಿರುವುದರಿಂದ ಬಹುವಚನ, ಅಗ್ನ್ಯಂತರ್ಗತನಾದ ವಿಷ್ಣುವಿನರೂಪಕ್ಕೆ ದತ್ತೇ ಆಹುತಿಯಾಗಿ ಕೊಡುತ್ತಾನೆ ಎಂದು ಇನ್ನೊಂದು ಅರ್ಥ.

**ಸೋಮಃ ಪವತೇ ಜನಿತಾ ಮತೀನಾಂ**
**ಜನಿತಾ ದಿವೋ ಜನಿತಾ ಪೃಥಿವ್ಯಾಃ ।**
**ಜನಿತಾಽಗ್ನೇರ್ಜನಿತಾ ಸೂರ್ಯಸ್ಯ**
**ಜನಿತೇಂದ್ರಸ್ಯ ಜನಿತೋತ ವಿಷ್ಣೋಃ ।** **-(ಋಗ್ವೇದ ೯-೯೬-೫)**

**ಬ್ರಹ್ಮಾ ದೇವಾನಾಂ ಪದವೀಃ ಕವೀನಾಂ**
**ಋಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಮ್ ।**
**ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವನಾನಾಂ**
**ಸೋಮಃ ಪವಿತ್ರಮತ್ಯೇತಿ ರೇಭನ್ ॥** **-(ಋಗ್ವೇದ ೯-೯೬-೬)**

ಮತೀನಾಂ ಜನಿತಾ ಉಪದೇಶಮಾಡುವುದರಿಂದ ಬುದ್ಧಿಗಳಿಗೆ ಜನಕನಾದವನು. **'ಅಯಮಿಹ ಸುಮತಿಂ ವಾಯುದೇವೋ ವಿದಧ್ಯಾತ್'** ಎಂಬ ವಚನವು ಇದನ್ನು ಸ್ಪಷ್ಟಪಡಿಸುತ್ತದೆ. ಜನಿತಾದಿವೋ ಜನಿತಾ ಪೃಥಿವ್ಯಾಃ ದ್ಯುಲೋಕಕ್ಕೆ

ಮತ್ತು ಭೂಮಿಗೆ ಜನಕನಾದವನು. ಭೂಲೋಕದಿಂದ ಹಿಡಿದು ದ್ಯುಲೋಕದವರೆಗಿರುವ ಎಲ್ಲಾ ವಸ್ತುಗಳಿಗೆ ಮಿಥ್ಯಾತ್ವವನ್ನು ಹೇಳುವ ವಾದಿಗಳನ್ನು ನಿಗ್ರಹಿಸಿ ಸತ್ಯತ್ವವನ್ನು ಸ್ಥಾಪಿಸಿ ಎಲ್ಲಾ ಪದಾರ್ಥಗಳನ್ನೂ ಉಳಿಸುವುದರಿಂದ ಮಧ್ವರೂಪದ ವಾಯುದೇವರು ಜನಕರಾಗಿದ್ದಾರೆ. ಅದರಂತೆ ಅಗ್ನಿಗೆ ಸೂರ್ಯನಿಗೆ ಇಂದ್ರನಿಗೆ ಮತ್ತು ವಿಷ್ಣುವಿಗೂ ಜನಕರಾಗಿದ್ದಾರೆ. **'ಉನ್ಮಥ್ಯಾತಥ್ಯಮಿಥ್ಯಾತ್ವವಚನಾನುತ್ವಥಸ್ಥಾನ್'** ಎಂಬ ವಾಯುಸ್ತುತಿಯು ಇದನ್ನು ಸ್ಪಷ್ಟಪಡಿಸುತ್ತದೆ. ಯದ್ಯಪಿ ವಿಷ್ಣುವು ಜನಕರಹಿತನಾದವನು. ಆದರೂ **'ಯಸ್ತಾವಿಜಾನಾತ್ ಸಪಿತುಷ್ಪಿತಾಽಸತ್'** ಎಂದು ಯಾವನು ವಿಷ್ಣುವನ್ನು ತಿಳಿಯುತ್ತಾನೆಯೋ ಅವನು ಸಕಲ ಜಗತ್ತಿಗೆ ತಂದೆಯಾದ ವಿಷ್ಣುವಿಗೂ ತಂದೆ ಎಂದು ಶ್ರುತಿ ಇರುವುದರಿಂದ ವಿಷ್ಣುವಿನ ಯಥಾರ್ಥಸ್ವರೂಪವನ್ನು ಉಪದೇಶಿಸಿ ಪ್ರಕಟಗೊಳಿಸುವುದರಿಂದ ವಾಯುದೇವರು ವಿಷ್ಣುವಿಗೂ ಜನಕರಾಗುತ್ತಾರೆ. ಸಾಮಾನ್ಯ ಜ್ಞಾನಿಯನ್ನೇ ಶ್ರುತಿಯು ವಿಷ್ಣುವಿಗೆ ಜನಕನೆಂದು ಕರೆಯುವಾಗ ವಾಯುದೇವರ ಜನಕತ್ವದಲ್ಲಿ ಯಾವ ಅನುಪಪತ್ತಿ ಇದೆ? **'ಬ್ರಹ್ಮಾಣಂ ಭಾವಿನಂತ್ವಾಂ'** ಎಂಬ ವಚನದಿಂದ ಭಾವಿಬ್ರಹ್ಮರಾದ ವಾಯುದೇವರಿಗೆ ದ್ಯುಭ್ವಾದಿ ಜನಕತ್ವವು ಕೂಡುತ್ತದೆ. **'ಸಾಭ್ರೋಷ್ಣಾಭೀಷುಶುಭ್ರ'** ಎಂಬ ವಚನದಿಂದಲೂ **'ವಾಯುನಾ ವೈ ಗೌತಮ'** ಎಂಬ ಬೃಹದಾರಣ್ಯಕ ಶ್ರುತಿಯಿಂದಲೂ ವಾಯುದೇವರಿಗೆ ಸಕಲಲೋಕಸೃಷ್ಟಿಕರ್ತೃತ್ವವನ್ನೂ ಸಕಲ ಲೋಕಧಾರಕತ್ವವನ್ನೂ ತಿಳಿಯಬೇಕು. ಅಂತಹ ಸೋಮಃ ಪವತೇ ವಾಯುದೇವರು ಹರಿಯಸೇವಾರ್ಥವಾಗಿ ಎಲ್ಲ ಕಡೆಯಲ್ಲಿಯೂ ಸಂಚಾರಮಾಡುತ್ತಾರೆ ಎಂದು ಅರ್ಥ.

ಎರಡನೆಯ ಮಂತ್ರದ ಅರ್ಥ. ಸೋಮಃ ವಾಯುದೇವರು ದೇವಾನಾಂ ದೇವತೆಗಳ ಮಧ್ಯದಲ್ಲಿ ಬ್ರಹ್ಮಾ ಬ್ರಹ್ಮದೇವರಾಗುತ್ತಾರೆ. ವಿಪ್ರಾಣಾಂ ಬ್ರಾಹ್ಮಣರ ಮಧ್ಯದಲ್ಲಿ ಋಷಿಃ ಜ್ಞಾನೋಪದೇಶಕರಾದ ಗುರುಗಳು. ಮೃಗಾಣಾಂ ಮಹಿಷಃ ಬಲದೇವತೆಯಾದ್ದರಿಂದ ಪ್ರಾಣಿಗಳಲ್ಲಿ ಮಹಿಷರಲ್ಲಿ ಬಲದಾಯಕರಾಗಿದ್ದಾರೆ. ಗೃಧ್ರಾಣಾಂ ಶ್ಯೇನಃ ಪಕ್ಷಿಗಳ ಮಧ್ಯದಲ್ಲಿ ಬಲಿಷ್ಠವಾದ ಶ್ಯೇನದಲ್ಲಿದ್ದಾರೆ. ವನಾನಾಂ ಸ್ವಧಿತಿಃ ವನಗಳನ್ನು ಭೇದಿಸುವ ವಿಷಯದಲ್ಲಿ ಬಲದಾಯಕರಾಗಿ ಕೊಡಲಿಯಲ್ಲಿದ್ದಾರೆ. ಸೋಮಃ ಶೈತ್ಯದಾಯಕರಾಗಿ ಚಂದ್ರನಲ್ಲಿ ಸೋಮನಾಮಕರಾಗಿರುವ ವಾಯುದೇವರು ರೇಭನ್ ಗರ್ಜನೆ ಮಾಡುತ್ತಾ ಕವೀನಾಂ ಪದವೀಃ ಜ್ಞಾನಿಗಳ ಮೋಕ್ಷಮಾರ್ಗದಲ್ಲಿರುವ ಎಲ್ಲಾ ಲೋಕಗಳನ್ನೂ

ಪವಿತ್ರಂ ಜ್ಯೋತಿಶ್ಚಕ್ರವನ್ನೂ ಅತ್ಯೇತಿ ಮೀರಿದವರಾಗಿದ್ದಾರೆ. ಈ ಎಲ್ಲಾ ಲೋಕಗಳಿಗಿಂತ ಶ್ರೇಷ್ಠವಾದ ಲೋಕದ ಅಧಿಪತಿಗಳಾಗಿದ್ದಾರೆ ಎಂದು ಅಭಿಪ್ರಾಯ. **'ತತ್ಪುರುಷೋಮಾನವಃ, ಸ ಏನಾನ್ ಬ್ರಹ್ಮಗಮಯತಿ'** ಎಂಬ ಶ್ರುತಿಗಳೂ **'ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾಃ'** ಎಂಬ ವಾಯುಸ್ತುತಿವಚನವೂ ಇದನ್ನು ಸ್ಪಷ್ಟಪಡಿಸುತ್ತದೆ.

**ಪ್ರಾವೀವಿಪದ್ ವಾಚ ಊರ್ಮಿಂ ನ ಸಿಂಧುಃ**
**ಗಿರಃ ಸೋಮಃ ಪವಮಾನೋ ಮನೀಷಾಃ ।**
**ಅಂತಃ ಪಶ್ಯನ್ ವೃಜನೇ ಮಾ ವರಾಣ್ಯೆ**
**ಆ ತಿಷ್ಠತಿ ವೃಷಭೋ ಗೋಷು ಜಾನನ್ ॥** - **(ಋಗ್ವೇದ ೯-೯೬-೭)**

ಗಿರಃ ಕ್ಷಣಕ್ಷಣದಲ್ಲಿಯೂ ತಮ್ಮ ಮುಖದಿಂದ ಅಲೆಗಳಂತೆ ಹೊರಹೊಮ್ಮುವ ವಾಕ್ಯಸಮುದಾಯಕ್ಕೆ ಸಿಂಧುಃ ಸಮುದ್ರದಂತಿರುವ - **'ಸದ್ಯೋಽರಚನಪಟುಮಥಾಪಾದ್ಯ ವಿದ್ಯಾಸಮುದ್ರ'** ಎಂಬ ವಚನವು ಇದನ್ನು ಸಂಗ್ರಹಿಸುತ್ತದೆ - ಇರುವ ಸೋಮಃ ಸೋಮನಾಮಕ ಪವಮಾನನಾದ ಮಧ್ವರೂಪಿ ವಾಯುದೇವರು ಮನೀಷಾವಾಚಃ ಮನಸ್ಸಿಗೆ ಇಷ್ಟವಾದ ವೇದಬ್ರಹ್ಮಸೂತ್ರಾದಿ ವಾಕ್ಯಗಳನ್ನು ಊರ್ಮಿಂ ನ ತರಂಗಗಳಂತೆ ಪ್ರಾವೀವಿಪತ್ ಸಜ್ಜನರಲ್ಲಿ ಪ್ರವರ್ತಿಸಿದರು. ಸೋಮರಸಜನಕನಾದ ಸೋಮಶಬ್ದವಾಚ್ಯನಾದ ಚಂದ್ರನಿಗೆ ಮಧ್ವಸಮುದ್ರದಲ್ಲಿ ವಾಕ್ಯದ ಅಲೆಗಳನ್ನು ಉದ್ಬೋಧನೆ ಮಾಡಲು ಶಕ್ತಿ ಇಲ್ಲವಾದ್ದರಿಂದ ಸಕಲಸಚ್ಛಾಸ್ತ್ರಗಳನ್ನು ಪ್ರಸವಿಸುವುದರಿಂದ ಮಧ್ವರೇ ಸೋಮಶಬ್ದವಾಚ್ಯರೆಂದು ಶ್ರುತಿಯು ಹೇಳುತ್ತದೆ. **'ತ್ವದ್ವ್ಯಾಖ್ಯಾ ಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಸ್ತೇ'**, **'ವೈದಿಕಾದ್ಯಾ ಹಿ ವಿದ್ಯಾಃ ಸೇವಂತೇ'** ಎಂಬ ವಚನಗಳು ಈ ಶ್ರುತಿಯ ಅರ್ಥವನ್ನು ಸಂಗ್ರಹಿಸುತ್ತವೆ. ಗೋಷು ವಿದ್ಯೆಗಳಲ್ಲಿ ವೃಜನಾ ಇಮಾ ಅವರಾಣಿ ಸಜ್ಜನರಿಂದ ಸ್ವೀಕರಿಸಲ್ಪಡದೆ ಬೇರೆಯವರಿಂದ ಸ್ವೀಕರಿಸಲ್ಪಟ್ಟ ಅಧಮವಾದ ಪುರಾಣಶಾಸ್ತ್ರಗಳನ್ನೂ ಜಾನನ್ ಮಧ್ಯಮ ಅಧಮಗಳೆಂದು ಸ್ವೀಕರಿಸಬೇಕೆಂದು ತಿಳಿಯುತ್ತಾ ಅಂತಃಪಶ್ಯನ್ ಅವುಗಳ ಒಳಗಿರುವ ವಿರೋಧಾದಿ ದೋಷಗಳನ್ನು ನೋಡುವವರಾಗಿ, ಅಥವಾ ತಮ್ಮ ಹೃದಯದಲ್ಲಿ ಒಳಗೆ ಪರಮಾತ್ಮನನ್ನು ನೋಡುತ್ತಾ ವೃಷಭಃ ಅಧಿಕಾರಿವರ್ಗದಲ್ಲಿ ಶ್ರೇಷ್ಠರಾದ ಪವಮಾನಃ ಮಧ್ವರು ಆ ತಿಷ್ಠತಿ ಸಕಲ ಸಜ್ಜನರ ಹೃದಯದಲ್ಲಿ ಸದ್ಬುದ್ಧಿ ಪ್ರೇರಕರಾಗಿ ನೆಲೆಸಿದ್ದಾರೆ. ಇಲ್ಲಿ ಮಧ್ವರಲ್ಲಿ ಸೋಮಪದವನ್ನು ಪ್ರಯೋಗಮಾಡಿರುವುದರಿಂದ ಸೋಮಕ್ಕೂ

ಯಜ್ಞಾದಿಕರ್ಮಗಳಿಗೂ ಸಂಬಂಧವಿರುವುದರಿಂದ ಮಧ್ವರು ಕರ್ಮ-ಮೀಮಾಂಸೆಯನ್ನು ಮಾಡುವ ವಾಕ್ಯಗಳಿಗೂ ಪ್ರವರ್ತಕರೆಂಬ ಸೂಚನೆ ಇದೆ.

**ಉನ್ಮಧ್ವ ಊರ್ಮಿರ್ವನನಾ ಅತಿಷ್ಠದಪೋ**
**ವಸಾನೋ ಮಹಿಷೋ ವಿಗಾಹತೇ ।**
**ರಾಜಾಪವಿತ್ರರಥೋ ವಾಜಮಾರುಹತ್**
**ಸಹಸ್ರಭೃಷ್ಟಿರ್ಜಯತಿ ಶ್ರವೋ ಬೃಹತ್ ॥** **- (ಋಗ್ವೇದ ೯-೮೬-೪೦)**

ವಸಾನಃ ಸತ್ಯಲೋಕದಿಂದ ಒಂದು ಭೂಮಿಯಲ್ಲಿ ವಾಸಮಾಡುವ ಊರ್ಮಿಃ ಉತ್ಕೃಷ್ಟವಾದ ವಿಸ್ತೃತವಾದ ಮತಿಯುಳ್ಳ ಮಹಿಷಃ ಅಧಿಕಾರಿವರ್ಗದಲ್ಲಿ ಶ್ರೇಷ್ಠರಾದ ಮಧ್ವರು ವನನಾ ಅಪಃ ಭಜನೀಯವಾದ ಋಗಾದಿವಿದ್ಯೆಗಳನ್ನು ವಿಗಾಹತೇ ನೀರನ್ನು ಪ್ರವೇಶಿಸಿದಂತೆ ಪ್ರವೇಶಿಸುತ್ತಾರೆ. ಸಕಲವಿದ್ಯೆಗಳಲ್ಲೂ ಸಂಚರಿಸಿ ಅನಾಯಾಸವಾಗಿ ವಿಚಾರಮಾಡುತ್ತಾರೆ ಎಂದು ತಾತ್ಪರ್ಯ. ಪವಿತ್ರರಥಃ ಸುದರ್ಶನ ಚಕ್ರವನ್ನೇ ರಥದಂತೆ ಇದ್ದು ಆದರಲ್ಲಿ ಅಧಿಷ್ಠಿತವಾದ ಸಹಸ್ರಭೃಷ್ಟಿಃ ಚಕ್ರದ ಸಹಸ್ರದಳಗಳಲ್ಲಿ ಸಹಸ್ರಜ್ವಾಲೆಗಳಿಂದ ಕೂಡಿದ ಕರಚರಣಾದಿ ಅವಯವಗಳುಳ್ಳ ಪರಮಾತ್ಮನು ರಾಜಾ ಯಾವ ಮಧ್ವರಿಗೆ ಸ್ವಾಮಿಯಾಗಿದ್ದಾನೆಯೋ ಅಂತಹ ಮಧ್ವರು ಬೃಹತ್ ವಾಜಃಶ್ರವಃ ಅಂತಹ ಶ್ರೇಷ್ಠವಾದ ಅನ್ನದಂತೆ ಅತಿಪ್ರಿಯವಾದ ದೇವರ ಮುಖದಿಂದಲೇ ಕೇಳಿದ ವೇದಪಂಚರಾತ್ರಾದಿಶ್ರವಣವನ್ನು ಆರುಹತ್ ಹತ್ತಿದರೋ, ಅಲ್ಲಿ ಸಂಬದ್ಧರಾಗಿ ಯಾವಾಗಲೂ ಅವರ ವಿದ್ಯೆಯಲ್ಲಿ ಸನ್ನಿಹಿತನಾಗಿರುವರೋ ಅಂತಹ ನಾರಾಯಣನು ಜಯತಿ ಉತ್ಕೃಷ್ಟನಾಗಿದ್ದಾನೆ ಮತ್ತು ಶತ್ರುಗಳನ್ನು ಪರಾಭವಗೊಳಿಸುತ್ತಾನೆ. ತಾವು ಮಾಡಿದ ಶ್ರವಣದಿಂದ ಪರಿತುಷ್ಟನಾದ ಸುದರ್ಶನನಾಮಕ ಹರಿಯ ಕೃಪೆಯಿಂದ ಮಧ್ವರಿಗೆ ಸಕಲವಿದ್ಯೋದ್ಧಾರಸಾಮರ್ಥ್ಯವೂ ಸಕಲದುರ್ಮತಭಂಜನ ಸಾಮರ್ಥ್ಯವೂ ಪ್ರಾಪ್ತವಾಗಿದೆ ಎಂದು ಅಭಿಪ್ರಾಯ.

**ಸಪ್ತಸ್ವಸ್ಣರರುಷೀರ್ವಾವಸಾನೋ ವಿದ್ವಾನ್**
**ಮಧ್ವರ ಆಜಭಾರಾ ದೃಶೇ ಕಮ್ ।**
**ಅಂತರ್ಯೇಮೇ ಅಂತರಿಕ್ಷೇ ಪುರಾಜಾ**
**ಇಚ್ಛನ್ ವವ್ರಿಮವಿದತ್ ಪೂಷಣಸ್ಯ ॥** **- (ಋಗ್ವೇದ ೧೦-೫-೫)**

ವಾವಶಾನಃ= ಅತಿಶಯವಾಗಿ ದೀಪ್ಯಮಾನವಾದ ಕಂ ಆನಂದರೂಪನಾದ ಬ್ರಹ್ಮನನ್ನು ವಿದ್ವಾನ್ ಮಧ್ವಃ ನೇರವಾಗಿ ನೋಡುತ್ತಾ, ಸಕಲವೇದಾರ್ಥಗಳನ್ನು ತಿಳಿಯುತ್ತಾ ಮಧ್ವರು ಅರುಷೀಃ ಶಾಂತ್ಯಾದಿಗುಣದಾಯಕವಾದ, ಅಥವಾ ಹಯಗ್ರೀವರೂಪಿಯಾದ ಪರಮಾತ್ಮನನ್ನು ಋಷಿಯಾಗಿ ಹೊಂದಿರುವ ಸಪ್ತಸ್ವಸೄಃ ಭಗವಂತನಿಂದ ನಿಃಸೃತವಾದ ಋಗಾದಿನಾಲ್ಕುವೇದಗಳು ಪಂಚರಾತ್ರ ಭಾರತ ಪುರಾಣಗಳನ್ನು ದೃಶೇ ಯಥಾರ್ಥಜ್ಞಾನವನ್ನು ಉಂಟುಮಾಡುವ ಸಲುವಾಗಿ ಉಜ್ಜಭಾರ ಪರವಾದಿಗಳು ಅಪ್ರಾಮಾಣ್ಯಾದಿ ದೋಷಗಳನ್ನು ಹೇಳಿದಾಗ ಆ ದೋಷಗಳನ್ನು ಪರಿಹರಿಸಿ ಆ ಸಪ್ತವಿದ್ಯೆಗಳನ್ನು ಮೇಲಕ್ಕೆತ್ತಿದರು. ಅವುಗಳನ್ನು ಉದ್ಧಾರಮಾಡಿ ಪೂಷಣಸ್ಯ ಪೂರ್ಣಾನಂದವುಳ್ಳ ಪರಮಾತ್ಮನ ವವ್ರಿಃ ಎಂದರೆ ವರಣವನ್ನು, ಪ್ರಸಾದವನ್ನು ಇಚ್ಛನ್ ಬಯಸುವವರಾಗಿ- **'ನಿಖಿಲಮುಖಭುಜಂ ತರ್ಪಯಾಮಾಸಿಥಾಸೌ'** ಎಂಬ ವಚನವು ಇದನ್ನು ಸ್ಪಷ್ಟಪಡಿಸುತ್ತದೆ. ಅಂತರಿಕ್ಷೇ ಪುರಾಜಾಃ ಕರ್ತೃವಿಲ್ಲದಿರುವುದರಿಂದ ಆಕಾಶದಲ್ಲಿ ಅಶರೀರವಾಣಿಯಂತೆ ಸೃಷ್ಟಿಗಿಂತಲೂ ಮೊದಲೇ ಅಭಿವ್ಯಕ್ತವಾದ ವೇದಗಳನ್ನು ಅವಿದತ್ ಉಪಕ್ರಮಾದಿತಾತ್ಪರ್ಯ ಲಿಂಗಗಳಿಂದ ಚೆನ್ನಾಗಿ ತಿಳಿದರು ಮತ್ತು ಸಜ್ಜನರ ಹೃದಯದಲ್ಲಿದ್ದು ಆ ವಿದ್ಯೆಗಳನ್ನು ನಿಯಮನಮಾಡಿದರು, ಪ್ರೇರಿಸಿದರು. **'ಸ್ವಾಮಿನ್ ಸರ್ವಾಂತರಾತ್ಮನ್'**, **'ಶ್ರಾವಯಾಸ್ಮಾಂಶ್ಚ ಕಿಂಚಿತ್'** ಎಂಬ ವಾಯುಸ್ತುತಿವಚನಗಳು ಈ ಮಂತ್ರದ ವಿವರಣರೂಪವಾಗಿವೆ. ಸಮಸ್ತತತ್ವಜ್ಞಾನವು ವೇದಾದಿಗಳನ್ನು ಆಶ್ರಯಿಸಿರುವುದರಿಂದ ವಿಷ್ಣುಪ್ರೀತ್ಯರ್ಥವಾಗಿ ಅವುಗಳನ್ನು ಅಧ್ಯಯನಮಾಡಿ ತಮ್ಮ ಭಾಷ್ಯಗಳಲ್ಲಿ ಉದ್ಧರಿಸಿ ಸಕಲಸಜ್ಜನರಿಗೆ ಉಪದೇಶವನ್ನು ಮಾಡಿದರು ಎಂದು ಅಭಿಪ್ರಾಯ.

**ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ**
**ವಿಶ್ವಾ ಉತ ಕ್ಷಿತಯೋ ಹಸ್ತೇ ಅಸ್ಯ ।**
**ಅಸತ್ತ ಉತ್ಸೋ ಗೃಣತೇ ನಿಯುತ್ವಾನ್**
**ಮಧ್ವೋ ಅಂಶುಃ ಪವತ ಇಂದ್ರಿಯಾಯ ॥** - **(ಋಗ್ವೇದ ೯-೮೯-೬)**

ಎಲ್ಲೈ ಪವಮಾನನೇ ದಿವಃ ವಿಷ್ಟಂಭಃ ಸ್ವರ್ಗಲೋಕಕ್ಕೆ ಆಧಾರಭೂತನಾಗಿ ಪೃಥಿವ್ಯಾಃ ಧರುಣಃ ಭೂಲೋಕಕ್ಕೆ ಧಾರಣಶೀಲನಾಗಿ – ಎರಡು ಲೋಕಗಳಿಗೂ ಮಿಥ್ಯಾತ್ವವನ್ನು ಹೇಳುವ ವಾದಿಗಳನ್ನು ನಿರಾಕರಿಸಿ ಸತ್ಯತ್ವವನ್ನು ಸ್ಥಾಪನೆ ಮಾಡುವುದರಿಂದ ಎರಡು ಲೋಕಗಳನ್ನೂ ಧರಿಸಿದವರಾಗುತ್ತಾರೆ, **'ಶ್ರೀಮದಾನಂದತೀರ್ಥತ್ರೈಲೋಕ್ಯಾಚಾರ್ಯಪಾದ'** ಎಂಬ ವಚನವು ಇದನ್ನು

ಪುಷ್ಟೀಕರಿಸುತ್ತದೆ. ಉತ್ಸಃ ಹರಿಸ್ತೋತ್ರ ಮಾಡುವುದರಲ್ಲಿ ಯಾವಾಗಲೂ ಉತ್ಸುಕರಾದಂತಹ ನಿಯುತ್ವಾನ್ ಹರಿಯ ಜೊತೆಯಲ್ಲಿ ಯಾವಾಗಲೂ ಯೋಗವುಳ್ಳಂತಹ ಎಲ್ಲೈ ವಾಯುದೇವರೇ ತೇ ಅಂಶುಃ ನಿಮ್ಮ ಅಂಶವಾದ ಮಧ್ವಃ ಮಧ್ವಾಚಾರ್ಯರು ಅಸತ್ ದುರ್ಜನರಿಗೆ ಅಜ್ಞೇಯನಾದ ಪರಮಾತ್ಮನನ್ನು ಗೃಣತೇ ಸ್ವಯಂ ಅನೇಕರೂಪಗಳಿಂದ ಸ್ತೋತ್ರಮಾಡುತ್ತಾರೆ. ಇಂದ್ರಿಯಾಯ ಸಜ್ಜನರ ವಾಗೀಂದ್ರಿಯವನ್ನು ಕುರಿತು ಹರಿಯಸ್ತೋತ್ರವನ್ನು ಮಾಡುವಂತೆ ಪ್ರೇರಿಸಲು ಪವತೇ ಸಂಚರಿಸುತ್ತಾರೆ ಎಂದು ಅರ್ಥ. **'ರಚನಪಟುಮಥಾಪಾದ್ಯ ವಿದ್ಯಾಸಮುದ್ರ', 'ವಾಗ್ದೇವೀ ಸಾ ಸುವಿದ್ಯಾದ್ರವಿಣದ', 'ಕೇಸವಾನಂದತೀರ್ಥ ಶ್ರೀಮತ್ಪಾದಾಬ್ಜಭಕ್ತಃ ಸ್ತುತಿಮಕೃತಹರೇಃ'** ಎಂಬ ವಚನಗಳು ಈ ಅರ್ಥವನ್ನೇ ಸ್ಪಷ್ಟಪಡಿಸುತ್ತವೆ. ಆ ಕಾರಣದಿಂದಲೇ ಅಸ್ಯಹಸ್ತೇ ಈ ಮಧ್ವರ ಹಸ್ತದಲ್ಲಿ ಸಮಸ್ತಾಃ ಕ್ಷಿತಯಃ ಎಲ್ಲಾ ಲೋಕಗಳೂ ತಿಷ್ಠಂತಿ ಇವೆ. ಸಕಲ ದೇಶದಲ್ಲಿರುವ ಸಜ್ಜನರಿಗೆ ಗುರುಗಳಾದುದರಿಂದ ಎಲ್ಲಾ ಲೋಕಗಳೂ ಅವರ ಹಸ್ತಗತವಾಗಿವೆ ಎಂದು ಅಭಿಪ್ರಾಯ. **'ಜಗದುತವಶಗಂ'** ಎಂಬ ವಚನವು ಈ ಅರ್ಥವನ್ನು ಸ್ಪಷ್ಟಪಡಿಸುತ್ತದೆ.

**ಸಿಂಹಂ ನಸಂತ ಮಧ್ವೋ ಅಯಾಸಂ ಹರಿಮರುಷಂ ದಿವೋ ಅಸ್ಯ ಪತಿಂ ।**
**ಶೂರೋ ಯುತ್ಸು ಪ್ರಥಮಃ ಪೃಚ್ಛತೇಗಾ ಅಸ್ಯ ಚಕ್ಷಸಾ ಪರಿಪಾತ್ಯುಗ್ರಾ ॥**

(ಋಗ್ವೇದ ೯-೮೯-೩)

ವಾಗ್ಯುದ್ಧದಲ್ಲಿ ಶೂರರಾದ, ನರಸಿಂಹದೇವರ ಭಕ್ತರಲ್ಲಿ ಶ್ರೇಷ್ಠರಾದ, ಸಜ್ಜನವರ್ಗದ ಜ್ಞಾನಕ್ಕೆ ಅಧಿಪತಿಯಾದ, ಸಜ್ಜನರ ವಿಷಯದಲ್ಲಿ ಕೋಪರಹಿತರಾದ, ದುರ್ಜನಸಂಹಾರಕರಾದ್ದರಿಂದ ಹರಿಶಬ್ದವಾಚ್ಯನಾದ ನರಸಿಂಹದೇವರ ಶಿಷ್ಯರಾಗಿ ವಿದ್ಯೆಯನ್ನು ಸಂಪಾದಿಸುವ, ನರಸಿಂಹದೇವರಿಂದ ಉಪದಿಷ್ಟವಾದ ಜ್ಞಾನಧಾರೆಯನ್ನೇ ಸಜ್ಜನರ ಮೇಲೆ ಪ್ರೋಕ್ಷಣೆ ಮಾಡುತ್ತಾ ವಾಯುದೇವರು-ಮಧ್ವಾಚಾರ್ಯರು ಸಜ್ಜನರನ್ನು ಪರಿಪಾಲನೆ ಮಾಡುತ್ತಾರೆ ಎಂದು ಮಂತ್ರದ ಸ್ಥೂಲವಾದ ಅರ್ಥ. ಈ ಮಂತ್ರದ ಬಲದಿಂದಲೇ **'ನೃಸಿಂಹೋऽಖಿಲಾಜ್ಞಾನ ಮತಧ್ವಾಂತ ದಿವಾಕರಃ'** ಎಂಬ ವಚನವಿದೆ. **'ಜಯತ್ಯಾನಂದತೀರ್ಥೇಷ್ಟ ದೇವತಾನರತೇಸರೀ'** ಎಂಬ ವಚನವೂ **'ಪಾಂತ್ವಸ್ಮಾನ್'** ಎಂಬ ಪ್ರಾರ್ಥನೆಯೂ **'ದೂರಪ್ರಧ್ವಸ್ತಧ್ವಾಂತಶಾಂತಪ್ರವಿತತಮನಸಾ ಭಾವಿತಾ ಭೂರಿಭಾಗ್ಯೈಃ'** ಎಂಬ ವಚನವೂ ಉಪಪನ್ನವಾಗಿದೆ.

**ಪ್ರಧಾರಾ ಮಧ್ವೋ ಅಗ್ರಿಯೋ ಮಹೀರಪೋ ವಿಗಾಹತೇ ।**
**ಹವಿರ್ಹವಿಷ್ಷು ವಂದ್ಯಃ ॥**

(ಋಗ್ವೇದ ೯-೭-೨)

ಶ್ರೇಷ್ಠರಾದಂತಹ (ಮಧ್ವರು), ವಿಷ್ಣುವಿಗೆ ಹವಿಸ್ಸಿನಂತೆ ಪ್ರಿಯರಾದ, ಅಥವಾ ಪ್ರಲಯಕಾಲದಲ್ಲಿ ವಿಷ್ಣುವಿಗೆ ಹವಿಸ್ಸಾಗಿರುವ, ದೇವತೆಗಳಿಂದ ಸ್ತುತ್ಯರಾದ, ಜ್ಞಾನಯಜ್ಞದಲ್ಲಿ ವಿಷ್ಣುವಿನ ಪರಿವಾರರಾಗಿ ಧ್ಯಾನಾರ್ಥವಾಗಿ ಆಹ್ವಾನಿಸಲ್ಪಡುವ, ಅಥವಾ ಎಲ್ಲಾ ದೇವತೆಗಳಲ್ಲಿ ಶ್ರೇಷ್ಠರಾದ ಮಧ್ವಾಚಾರ್ಯರು ಜ್ಞಾನಸಾಧನವಾದ ಋಗಾದಿಸಪ್ತವಿದ್ಯಾನದಿಗಳಲ್ಲಿ ಅವಗಾಹನೆಮಾಡುತ್ತಾರೆ. ಸೂತ್ರಭಾಷ್ಯಾದಿಗಳನ್ನು ರಚಿಸಲು ಎಲ್ಲವನ್ನೂ ವಿಮರ್ಶೆಮಾಡುತ್ತಾರೆ ಎಂದು ಅರ್ಥ. ಅಥವಾ ಬದರಿಕಾಶ್ರಮದ ಯಾತ್ರೆಯನ್ನು ಮಾಡುತ್ತಾ ತಾವೇ ಅಗ್ರೇಸರರಾಗಿ ಅಪಾರವಾದ ಗಂಗಾಪ್ರವಾಹವನ್ನು ತಮ್ಮ ಶಿಷ್ಯರನ್ನೆಲ್ಲಾ ಹಿಡಿದುಕೊಂಡು ದಾಟಿಸುತ್ತಾರೆ ಎಂದು ಅರ್ಥ. ಅಥವಾ ಬದರಿಕಾಶ್ರಮಕ್ಕೆ ಹೋಗುತ್ತಾ ವಿಷಮವಾದ ಭೂಮಿಯನ್ನೂ, ಅಲ್ಲಲ್ಲಿ ಹರಿಯುವ ನದಿಗಳನ್ನೂ ತಾವು ದಾಟುತ್ತಾರೆ, ಶಿಷ್ಯರನ್ನು ದಾಟಿಸುತ್ತಾರೆ ಎಂದು ಅರ್ಥ. '**ವಾರಯತ ವಾರಯತ ವೈರಿಸುಹೃದೋಮೂನ್**' ಇತ್ಯಾದಿ ಮಧ್ವವಿಜಯವಚನವೂ '**ಸಾಗಸ್ತ್ವಾದೀಶದೇವಂ ಪರವಶಖನನಂ ಯೋ ವ್ಯಧಾದಪ್ಲವಃ ಸ್ವೈಃ । ಗಂಗಾತಾರೀ ಸ್ವನೀತ್ಯಾ ವಶಿತಯವನ ರಾಟ್ ವರ್ತ್ಮನಿ ಕ್ವಾಪಿ ಚೋರಾನ್**' ಎಂಬ ಅಣುಮಧ್ವವಿಜಯದ ವಚನವೂ ಈ ಮಂತ್ರದ ಅರ್ಥವನ್ನೇ ಪೋಷಿಸುತ್ತದೆ.

**ಅಸ್ಮಭ್ಯಮಿಂದವಿಂದ್ರಯುಃ ಮಧ್ವಃ ಪವಸ್ವ ಧಾರಯಾ ।**
**ಪರ್ಜನ್ಯೋ ವೃಷ್ಟಿಮಾನಿವ ॥**

(ಋಗ್ವೇದ ೯-೨-೯)

ಎಲೈ ಭಕ್ತೇಷ್ಟದಾನಶೀಲನಾದ್ದರಿಂದ ಇಂದುನಾಮಕನಾದ ಪವಮಾನನೇ, ಪರಮೈಶ್ವರ್ಯಶಾಲಿಯಾದ್ದರಿಂದ ಇಂದ್ರನಾಮಕನಾದ ಹರಿಯಯೋಗವನ್ನು ಸದಾ ಹೊಂದಿರುವ ನಿನ್ನ ಮಧ್ವಾಖ್ಯ ಅವತಾರವು ಯಾವುದಿದೆಯೋ ಆದರಿಂದ ಮಳೆಯನ್ನು ಸುರಿಸುವ ಪರ್ಜನ್ಯನಂತೆ ನಿನ್ನ ಜ್ಞಾನಧಾರೆಯನ್ನು ನಮ್ಮ ಮೇಲೆ ಸುರಿಸುತ್ತಾ ನಮ್ಮ ಕಡೆಗೆ ದಯಮಾಡಿಸು. ಮಧ್ವರೂಪದಿಂದ ಜ್ಞಾನೋಪದೇಶವನ್ನು ಮಾಡುತ್ತಾ ನಮ್ಮ ಕಡೆಗೆ ಬಾ ಎಂದು ಅರ್ಥ.

**ತಪ್ತಮುದ್ರಾಧಾರಣೆಯು ಶ್ರುತಿಸಮ್ಮತವಾದುದು :**

**ಯೇನ ದೇವಾಃ ಪವಿತ್ರೇಣಾತ್ಮಾನಂ ಪುನತೇ ಸದಾ ।**
**ತೇನ ಸಹಸ್ರಧಾರೇಣ ಪಾವಮಾನ್ಯಃ ಪುನಂತು ಮಾಂ ॥**
**ಪ್ರಾಜಾಪತ್ಯಂ ಪವಿತ್ರಂ ಶತೋದ್ಯಾಮಂ ಹಿರಣ್ಮಯಂ ।**
**ತೇನ ಬ್ರಹ್ಮವಿದೋ ವಯಂ ಪೂತಂ ಬ್ರಹ್ಮ ಪುನೀಮಹೇ ॥**

(ಋಗ್ವೇದ ಖಿಲ)

ಬ್ರಹ್ಮಾದಿದೇವತೆಗಳು ಪವಿತ್ರವೆಂಬ ಹೆಸರುಳ್ಳ ಯಾವ ತಪ್ತಸುದರ್ಶನದಿಂದ ತಮ್ಮ ದೇಹವನ್ನು ಪವಿತ್ರೀಕರಿಸಿಕೊಳ್ಳುತ್ತಾರೆಯೋ ಅಂತಹ ಸಹಸ್ರಧಾರವುಳ್ಳ ಸುದರ್ಶನ ಚಕ್ರದಿಂದ ಗುರುಗಳಲ್ಲಿ ಸನ್ನಿಹಿತವಾದ ಪವಮಾನನ ಮೂರ್ತಿಗಳು ನನ್ನನ್ನು ಪವಿತ್ರೀಕರಿಸಲಿ. ಪ್ರಜಾಪತಿಯಾದ ವಿಷ್ಣುವಿಗೆ ಸಂಬಂಧಿಸಿದ ನೂರು ಅಲಗುಗಳನ್ನುಳ್ಳ ಸುವರ್ಣಮಯವಾದ ಯಾವ ಸುದರ್ಶನಚಕ್ರವಿದೆಯೋ ಅದರಮಹಿಮೆಯನ್ನು ವೇದದಿಂದ ತಿಳಿದ ನಾವು ಆ ಚಕ್ರದಿಂದ ಪವಿತ್ರರಾಗಿ ನಾವು ಅಧ್ಯಯನಮಾಡುವ ವೇದವನ್ನೂ ಪವಿತ್ರೀಕರಿಸುತ್ತೇವೆ ಎಂಬ ಅರ್ಥದ ಈ ಎರಡು ಮಂತ್ರಗಳ ಅರ್ಥವನ್ನು ರಾಜರು ವಿಶ್ಲೇಷಣೆ ಮಾಡುತ್ತಾರೆ. ನಾವು ನಿತ್ಯವೂ ಗೋಪೀಚಂದನದಿಂದ ಮಾಡಿಕೊಳ್ಳುವ ಸುದರ್ಶನಾಂಕನ ಒಂದು. ಅದನ್ನು ನಾವೇ ಮಾಡಿಕೊಳ್ಳುವುದರಿಂದ ಅದರ ಸಲುವಾಗಿ ಪ್ರಾರ್ಥನೆ ಇಲ್ಲ. ಗುರುಗಳಲ್ಲಿ ಸನ್ನಿಹಿತನಾದ ಪವಮಾನಮೂರ್ತಿಗಳಿಂದ ಅಂಕನ ಪ್ರಾರ್ಥನೆಯು ತಪ್ತಸುದರ್ಶನದ್ದೇ ಆಗಬೇಕು. ಪ್ರಾಜಾಪತ್ಯ, ಶತೋದ್ಯಾಮ, ಹಿರಣ್ಮಯ ಈ ವಿಶೇಷಣಗಳೆಲ್ಲವೂ ವಿಷ್ಣುಸುದರ್ಶನಚಕ್ರಕ್ಕೆ ಸಲ್ಲುತ್ತವೆಯೇ ಹೊರತು ಬೇರೆ ಯಾವುದಕ್ಕೂ ಸಲ್ಲುವುದಿಲ್ಲ. ಆದ್ದರಿಂದ ದೇವತೆಗಳೂ ಮಾಡಿಕೊಳ್ಳುವ ತಪ್ತಮುದ್ರಾಂಕನವನ್ನು ಯಾವ ಮನುಷ್ಯನು ನಿರಾಕರಿಸಲು ಸಾಧ್ಯ?

**ಪವಿತ್ರಂ ತೇ ವಿತತಂ ಬ್ರಹ್ಮಣಸ್ಪತೇ ಪ್ರಭುರ್ಗಾತ್ರಾಣಿ ಪರ್ಯೇಷಿ ವಿಶ್ವತಃ ।**
**ಅತಪ್ತತನೂರ್ನತದಾಮೋಽಶ್ನುತೇ ಶೃತಾಸ ಇದ್ ವಹಂತಃ ತತ್ಸಮಾಶತ ॥**

(ಋಗ್ವೇದ ೯-೮೩-೧)

ಈ ಮಂತ್ರವೂ ಪವಿತ್ರಶಬ್ದದಿಂದ ಸುದರ್ಶನಚಕ್ರವನ್ನೇ ಹೇಳುತ್ತದೆ. ಅತಪ್ತತನೂಃ ಎಂದರೆ ತಪ್ತಸುದರ್ಶನದಿಂದ ಚಿಹ್ನಿತನಲ್ಲದವನು ಆಮಃ ಹಸಿಯಾದವನು ನ ತದ್ ಅಶ್ನುತೇ ಆ ವಿಷ್ಣುವನ್ನು ಹೊಂದುವುದಿಲ್ಲ ಎಂದು

ಹೇಳುವುದರಿಂದ ಮತ್ತು ಶೃತಾಸಃ ತಪ್ತಮುದ್ರೆಯನ್ನು ಧರಿಸಿದವರು ವಹಂತಃ ಪ್ರತಿದಿನವೂ ಗೋಪಿಚಂದನಾದಿಗಳಿಂದ ಮುದ್ರೆಯನ್ನು ಧರಿಸಿದವರು ಇತ್ ಮಾತ್ರ ತತ್ಸಮಾಶತ ಅವನನ್ನು ಹೊಂದುತ್ತಾರೆ ಎಂದು ಹೇಳಿರುವುದರಿಂದ ಪ್ರತಿದಿನವೂ ಗೋಪೀಚಂದನದಿಂದ ಮುದ್ರಾಧಾರಣೆಯೂ ಶಾಸ್ತ್ರೋಕ್ತವಿಶೇಷದಿನದಲ್ಲಿ ಮಹಾತ್ಮರ ಹಸ್ತದಿಂದ ತಪ್ತಮುದ್ರಾಧಾರಣೆಯೂ ವಿಹಿತವಾಗಿದೆಯೆಂದು ತಿಳಿಯುತ್ತದೆ.

ರುದ್ರದೇವರು ಸುದರ್ಶನದ ನಾಮಗಳನ್ನು ಉಪದೇಶಮಾಡುತ್ತಾ ಪಾದ್ಮಪುರಾಣದಲ್ಲಿ ಹೀಗೆ ಹೇಳಿದ್ದಾರೆ -

**ಪವಿತ್ರಂ ಚರಣಂ ನೇಮಿರರಿಶ್ಚಕ್ರಂ ಸುದರ್ಶನಂ ।**
**ಸಹಸ್ರಾರಂ ಪ್ರಾಕೃತಘ್ನಂ ಲೋಕದ್ವಾರಂ ಮಹೌಜಸಂ ।**
**ವಿಷ್ಣುಚಕ್ರಸ್ಯ ನಾಮಾನಿ ಪರ್ಯಾಯೇಣ ನಿಬೋಧ ಮೇ ॥**

ರುದ್ರದೇವರು ಹೇಳಿರುವುದರಿಂದ ಇದು ಮಹಾಲಿಂಗಾನುಶಾಸನ. ಪುರಾಣದಲ್ಲಿರುವುದರಿಂದ ವೇದವ್ಯಾಸರ ನಿಘಂಟೂ ಹೌದು. ಆದ್ದರಿಂದ ಹಿಂದಿನ ಮಂತ್ರಗಳಲ್ಲಿ ಪವಿತ್ರಶಬ್ದದಿಂದ ಹೇಳಿದುದು ಸುದರ್ಶನಚಕ್ರವೆಂದು ಸಿದ್ಧವಾಗುವುದಲ್ಲದೆ **'ಚರಣಂ ಪವಿತ್ರಂ ವಿತತಂ ಪುರಾಣಂ ಲೋಕಸ್ಯ ದ್ವಾರಮರ್ಚಿಷ್ಮತ್ ಪವಿತ್ರಂ'** ಎಂಬ ಮಂತ್ರದಲ್ಲಿ ಚರಣಶಬ್ದದಿಂದ ಹೇಳಿದುದೂ ಸುದರ್ಶನವೆಂದೇ ಸಿದ್ಧವಾಗುತ್ತದೆ.

ಪಾವಮಾನ್ಯಃ ಪುನಂತು ಮಾಂ ಎಂದು ಹೇಳಿದ ರೂಪಗಳು ಗುರುಗಳಲ್ಲಿ ಸನ್ನಿಹಿತವಾದ ಮಧ್ವರರೂಪಗಳೇ ಆಗಿವೆ. ಹನುಮದ್‌ಭೀಮಾವತಾರಗಳಲ್ಲಿ ವಾಯುದೇವರ ಬಲಕಾರ್ಯವು ಪ್ರಸಿದ್ಧವಾಗಿದೆ. ಮಧ್ವಾವತಾರದಲ್ಲಿಯೇ ಅಸಾಧಾರಣವಾದ ಜ್ಞಾನಕಾರ್ಯವು ನಡೆಯುವುದು. ಮಧ್ವರೂ ಇನ್ನೂ ಬದರಿಯಲ್ಲಿ ವೇದವ್ಯಾಸದೇವರ ಸನ್ನಿಧಿಯಲ್ಲಿ ಜ್ಞಾನಕಾರ್ಯದಲ್ಲಿಯೇ ನಿರತರಾಗಿದ್ದಾರೆ. ವೇದದ ಪಾವಿತ್ರ್ಯವನ್ನು ತಂದುಕೊಡಬೇಕಾದ ರೂಪವು ಮಧ್ವರ ರೂಪವೇ ಆಗಿರುವುದರಿಂದ ಋಷಿಗಳು ಪ್ರಾರ್ಥನೆಮಾಡುವ ಈ ರೂಪಗಳು ಮಧ್ವರದ್ದೇ ಎಂದು ಸಿದ್ಧವಾಗುತ್ತದೆ.

ಹೀಗೆ ಇನ್ನೂ ಅನೇಕ ಮಂತ್ರಗಳನ್ನು ಉದಾಹರಿಸಿ ಯುಕ್ತಿಗಳನ್ನು ಉಪನ್ಯಾಸಮಾಡಿ ತಪ್ತಮುದ್ರಾಧಾರಣೆಯು ವೇದವಿಹಿತವಾದದ್ದು ಎಂದು ಸಮರ್ಥಿಸಿದ್ದಾರೆ.

## 'ಇದಂ ತೇ ಪಾತ್ರಂ' ಮಂತ್ರಾರ್ಥ :

ಹೀಗೆ ಇದುವರೆಗೆ ಮಧ್ವನಾಮಾಂಕಿತವಾದ ಏಳು ಮಂತ್ರಗಳು– **'ಸ ಮಧ್ವ ಆಯುವತೇ, ಉನ್ಮಧ್ವ ಊರ್ಮಿಂ, ವಿದ್ವಾನ್ ಮಧ್ವೋ ಅಂಶುಃ, ಸಿಂಹಂ ನಸಂತಂ ಮಧ್ವೋ ಅಯಾಸಂ, ಪ್ರಧಾರಾಮಧ್ವಃ, ಅಸ್ಮಭ್ಯಮಿಂದ ವಿಂದ್ರಯುಃ ಮಧ್ವಃ ಪವಸ್ವ ಧಾರಯಾ'** - ಇವುಗಳನ್ನು ವಿಚಾರಮಾಡಿ, ಮಧ್ವರ ಚರಿತ್ರೆಯನ್ನೊಳಗೊಂಡ ಎಂಟುಮಂತ್ರಗಳು - **ಪ್ರಸೇನಾನೀಃ, ಪ್ರಾವೀವಿಪತ್, ಸೋಮಃ ಪವತೇ, ಬ್ರಹ್ಮಾದೇವಾನಾಂ, ಯೇನ ದೇವಾಃ ಪವಿತ್ರೇಣ, ಯತ್ತೇ ಪವಿತ್ರಮರ್ಚಿಷಿ, ಚಮೂಷತ್ ಶ್ಯೇನಃ, ಪವಿತ್ರಂ ತೇ** ಎಂಬ ಪ್ರಧಾನವಾದ ಈ ಎಂಟು ಮಂತ್ರಗಳನ್ನು ವಿಚಾರಮಾಡಿದ್ದಾಯಿತು. ಪವಮಾನ ಪೂಯಮಾನ ಸೂಕ್ತಗಳಲ್ಲಿ ಏಳುಮಂತ್ರಗಳಲ್ಲಿ ಮಧ್ವನಾಮವಿದೆ. ಆದ್ದರಿಂದ ಇದು ಒಂದೇ ಬಾರಿ **'ಮಧ್ವಾಖ್ಯಂ ಮಂತ್ರಸಿದ್ಧಂ'** ಎಂದು ಮಧ್ವನಾಮವಿರುವ ವಾಯುಸ್ತುತಿಗಿಂತ ಬಹಳ ಶ್ರೇಷ್ಠವಾದ ವಾಯುಸ್ತುತಿ ಎಂದು ರಾಜರು ಹೇಳುತ್ತಾರೆ. ಈ ಸೂಕ್ತಗಳಲ್ಲದೆ ಋಗ್ವೇದದಲ್ಲಿ ಇನ್ನೂ ನಾಲ್ಕುಮಂತ್ರಗಳಲ್ಲಿ ಮಧ್ವನಾಮದ ಉಲ್ಲೇಖವಿದೆ– ಒಟ್ಟು ಹನ್ನೊಂದು ಉಲ್ಲೇಖಗಳು ಎಂದು ತಿಳಿಸಿದ್ದಾರೆ.

**ಇದಂ ತೇ ಪಾತ್ರಂ ಸನವಿತ್ತಮಿಂದ್ರ**
**ಪಿಬಾ ಸೋಮಮೇನಾ ಶತಕ್ರತೋ ।**
**ಪೂರ್ಣ ಆಹಾವೋ ಮದಿರಸ್ಯ ಮಧ್ವೋ**
**ಯಂ ವಿಶ್ವ ಇದಭಿ ಹರ್ಯಂತಿ ದೇವಾಃ ॥** - **(ಋಗ್ವೇದ ೧೦-೧೧೨-೬)**

ಎಲೈ ಪರಿಪೂರ್ಣಜ್ಞಾನಸಂಪನ್ನನಾದ ಪರಮೈಶ್ವರ್ಯಸಂಪನ್ನನಾದ ಇಂದ್ರ ನಾಮಕನಾದ ಪರಮಾತ್ಮನೇ, ಜ್ಞಾನಭಕ್ತ್ಯಾದಿ ಸಂಪದ್ಭರಿತರಾದ ಮಧ್ವರು ನಿನ್ನ ಸನ್ನಿಧಾನಕ್ಕೆ ಪೂರ್ಣಪಾತ್ರರು. ಆ ವಾಯುದೇವರು ಕೊಟ್ಟ ಸೋಮರಸವನ್ನು ನೀನು ಪಾನಮಾಡು ಎಂದರೆ ಸೋಮಪಾನ ಮಾಡುವವರ ಮುಖದಲ್ಲಿದ್ದು ಅಲ್ಲಿ ಪ್ರವಿಷ್ಟವಾದ ವಾಯುರೂಪದಿಂದ ನೀಡಿದ ಸೋಮರಸವನ್ನು ಪಾನಮಾಡು. ಈ ಅರ್ಥವು **'ಸರ್ವಂ ಸ ಪೂತಮಶ್ನಾತಿ ಸ್ವದಿತಂ ಮಾತರಿಶ್ವನಾ'** ಎಂಬ ಮಂತ್ರಕ್ಕೆ ಸಂವಾದಿಯಾಗಿದೆ. ಇದಂ ಶಬ್ದದಿಂದ ಮಧ್ವರನ್ನೇ ಪರಾಮರ್ಶೆಮಾಡುವುದಕ್ಕೆ ಕಾರಣವನ್ನು ಶ್ರುತಿಯೇ ಉತ್ತರಾರ್ಧದಲ್ಲಿ ಹೇಳುತ್ತದೆ ಮದಿರಸ್ಯಪೂರ್ಣಃ ಎಂದು. ಮತ್ ಇರಸ್ಯ ಎಂದು ಪದಚ್ಛೇದ. ನನ್ನಿಂದ (ವೇದಪುರುಷನಿಂದ) ಉಂಟಾದ ಜ್ಞಾನದಿಂದ ಪೂರ್ಣರಾದವರು ಎಂದು ಒಂದು ಅರ್ಥ. ಅಥವಾ ಮತ್ ಎಂದರೆ

ವೇದಶಾಸ್ತ್ರಗಳ ಮಥನದಿಂದ ಉಂಟಾದ ಇರಸ್ಯ ಜ್ಞಾನದಿಂದ (ಋ ಗತೌ ಧಾತುವಿನಿಂದ ನಿಷ್ಪನ್ನವಾಗಿದೆ) ಪೂರ್ಣರಾದವರು ಎಂದು ಅರ್ಥ. ಆಹಾವಃ ಎಂದರೆ ಎಲ್ಲ ಕಡೆಗಳಲ್ಲಿದ್ದು ಆಯಾ ಜೀವರಯೋಗ್ಯತೆಗೆ ಅನುಗುಣವಾಗಿ ಹಾವ ಎಂದಾರೆ ಹವನ ಎಂದರೆ ದಾನ, ವೇದೋತ್ಪನ್ನ ಜ್ಞಾನವನ್ನು ದಾನಮಾಡುವವರು ಎಂದು ಅರ್ಥ. ಮಧ್ವರು ಭೂಮಿಯ ಮೇಲಿರುವ ಶಿಷ್ಯರಿಗೆ ಮಾತ್ರ ಜ್ಞಾನದಾತೃಗಳಲ್ಲ. ಸ್ವರ್ಗವಾಸಿಗಳಾದ ದೇವತೆಗಳಿಗೂ ಜ್ಞಾನದಾತೃಗಳೆಂದು '**ಯಂ ವಿಶ್ವ ಇದಭಿ ಹರ್ಯಂತಿ ದೇವಾಃ**' ಎಂಬ ಭಾಗದಿಂದ ಹೇಳುತ್ತಾರೆ. ಯಾವ ಮಧ್ವರನ್ನು ದೇವತೆಗಳೂ ಸಹ ಋಷಿಗಳಂತೆ ಸುತ್ತುವರಿದು ಜ್ಞಾನೋಪದೇಶದ ಸಲುವಾಗಿ ಬಂದು ನೆರೆದಿದ್ದಾರೆಯೋ ಅಂತಹ ಮಧ್ವರು ನಿನ್ನ ಸನ್ನಿಧಾನಕ್ಕೆ ಪೂರ್ಣಪಾತ್ರರು ಎಂದು ಅನ್ವಯ.

ಇದರಂತೆ ಪವಮಾನಸೂಕ್ತದ ಹೊರಗೆ ಇರುವ '**ಮಧ್ವೋ ವೋ ನಾಮ ಮಾರುತಂ ಯಜತ್ರಾಃ ಪ್ರಯಜ್ಞೇಷು ಶವಸಾ ಮಾದಯಂತಿ । ಯೇ ರೇಜಯಂತಿ ರೇಜಸೀ ಚಿದುರ್ವೀ ಪಿನ್ವಂತ್ಯುತ್ಸಂ ಯದಯಾಸುರುಗ್ರಾಃ ॥**' (೭-೫೭-೧), '**ತದಸ್ಯ ಪ್ರಿಯಮಭಿಪಾಥೋ ಅಶ್ಯಾಂ ನರೋ ಯತ್ರ ದೇವಯವೋ ಮದಂತಿ। ಉರುಕ್ರಮಸ್ಯ ಸಹಿ ಬಂಧುರಿತ್ಥಾ ವಿಷ್ಣೋಃ ಪದೇ ಪರಮೇ ಮಧ್ವ ಉತ್ಸಃ**' (೧-೧೫೪-೫) ಮತ್ತೂ ಬಳಿತ್ಥಾಸೂಕ್ತದ '**ಯದೀಮನು ಪ್ರದಿವೋ ಮಧ್ವ ಆಧವೇ ಗುಹಾಸಂತಂ ಮಾತರಿಶ್ವಾಮಥಾಯತಿ**' (೧-೧೪೧-೩) ಈ ಮೂರು ಮಂತ್ರಗಳೂ ಮಧ್ವನಾಮಾಂಕಿತವಾಗಿ ಮಧ್ವರ ಚರಿತ್ರೆಯನ್ನು ಹೇಳುತ್ತವೆ.

## ಬಳಿತ್ಥಾಸೂಕ್ತಾರ್ಥ :

ಬಳಿತ್ಥಾಸೂಕ್ತವು ಋಗ್ವೇದ ಪ್ರಥಮಮಂಡಲದ ೧೪೧ನೆಯ ಪ್ರಸಿದ್ಧವಾದ ಸೂಕ್ತ. ಅದು ವಾಯುದೇವರ ಪ್ರಥಮ ದ್ವಿತೀಯ ತೃತೀಯ ಅವತಾರಶರೀರಗಳನ್ನು ಕ್ರಮವಾಗಿ ಮೂರುಮಂತ್ರಗಳಲ್ಲಿ ಹೇಳುತ್ತದೆ. ಆ ಮೂರುರೂಪಗಳು ಬೇರೆ ಯಾವುವೂ ಪ್ರಸಿದ್ಧವಿಲ್ಲದಿರುವುದರಿಂದ ತತ್ತ್ವವಾದಿಗಳು ಹೇಳುವ ಹನುಮದಾದಿ ರೂಪತ್ರಯವೇ ಆಗಬೇಕು. ಹನುಮಂತ ಮತ್ತು ಭೀಮಸೇನರು ವಿಷ್ಣುಕಿಂಕರರೆಂದು ಪ್ರಸಿದ್ಧವಾದುದು. ಆದ್ದರಿಂದ ಮೂರನೆಯ ರೂಪವೂ ವಿಷ್ಣುದಾಸರೂಪವೇ ಆಗಬೇಕು. ಮೊದಲನೆಯ ಎರಡುರೂಪಗಳು ಸೇನಾನಾಯಕರೆಂದು ಸಜ್ಜನರಿಗೆ ಸಮ್ಮತವಾಗಿದೆ. ಆದ್ದರಿಂದ ಮೂರನೆಯ ರೂಪವೂ ವೈಷ್ಣವಾಗ್ರೇಸರವೇ ಆಗಬೇಕು.

ಮೊದಲನೆಯ ರೂಪವು ತ್ರೇತಾಯುಗದಲ್ಲಿ, ಎರಡನೆಯ ರೂಪವು ದ್ವಾಪರಯುಗದಲ್ಲಿ ಇರುವುದರಿಂದ ಮೂರನೆಯ ರೂಪವು ಕಲಿಯುಗದಲ್ಲಿರುವ ರೂಪವೇ ಆಗಬೇಕು. ಅದು ಸಜ್ಜನ ಪ್ರಸಿದ್ಧಿಯಿಂದ ಮಧ್ವರೂಪವೇ ಆಗುತ್ತದೆ. ವಿಷ್ಣುವಿನ ಬಲಕಾರ್ಯದಲ್ಲಿ ಮೊದಲಿನ ಎರಡು ರೂಪಗಳು ಸಾಚಿವ್ಯವನ್ನು ಮಾಡಿದವು.

ಆದ್ದರಿಂದ ಮೂರನೆಯರೂಪವು ವೇದವ್ಯಾಸರಿಗೆ ಜ್ಞಾನಕಾರ್ಯದಲ್ಲಿ ಸಾಚಿವ್ಯವನ್ನು ಆಚರಿಸುವ ಮಧ್ವರೂಪವೇ ಆಗಬೇಕು. ಬಲಕಾರ್ಯದಲ್ಲಿ ದಾನವಮರ್ದನರಾದ ಮೊದಲಿನ ಎರಡು ರೂಪಗಳು ಸಚಿವರಾದರೆ ಜ್ಞಾನಕಾರ್ಯದಲ್ಲಿ ದುರ್ಭಾಷ್ಯಗಳನ್ನು ನಿರಾಕರಿಸಿ ವೇದವ್ಯಾಸರಿಗೆ ಸಮ್ಮತವಾದ ಸೂತ್ರಭಾಷ್ಯವನ್ನು ರಚಿಸಿ ಅವರ ಸೇವೆಯನ್ನು ಮಾಡಿದ ಮಧ್ವರೇ ಸಚಿವರು. ಅಲ್ಲದೆ ನಾಲ್ಕು ಆಶ್ರಮಗಳ ಧರ್ಮವನ್ನೂ ಆಚರಿಸುವ ವಾಯುದೇವರಿಗೆ ಮೊದಲನೆಯ ಅವತಾರವು ಬ್ರಹ್ಮಚರ್ಯಾಶ್ರಮವನ್ನು ಆಚರಿಸಿತು. ಎರಡನೆಯ ರೂಪವು ಗೃಹಸ್ಥಾಶ್ರಮಧರ್ಮವನ್ನು ಆಚರಿಸಿತು. ಆದ್ದರಿಂದ ಮೂರನೆಯ ರೂಪವು ಯತ್ಯಾಶ್ರಮಧುರಂಧರರೂಪವೇ ಆಗಬೇಕು. ಆದ್ದರಿಂದ ಅದು ಮಧ್ವರೂಪವೇ ಆಗುತ್ತದೆ. ಭಾಷ್ಯಾಕಾರನಾದವನು ದಾನವನಾಗಬೇಕು ಅಥವಾ ದೇವನಾಗಬೇಕು. ಮಾನವನಂತೂ ಎಂದೂ ಭಾಷ್ಯಕಾರನಾಗುವುದಿಲ್ಲ. ದೇವತೆಗಳ ಲಕ್ಷಣ ವಿಷ್ಣುಭಕ್ತಿ. ಆದ್ದರಿಂದ ಭಾಷ್ಯಕಾರರಾದ ಮಧ್ವರು ದೇವತೆಗಳೆಂದೇ ಸಿದ್ಧವಾಗುತ್ತದೆ. ಸೂಜಿಯ ಮೊನೆಯಷ್ಟು ಭೂಮಿಯನ್ನು ಕೊಡುವುದಿಲ್ಲವೆಂದು ಸಡ್ಡುಹೊಡೆದವನು ಭೀಮನ ಪರಾಕ್ರಮದಿಂದ ಭೀಮನ ಗದೆಯಿಂದಲೇ ಶಾಂತನಾಗಬೇಕಾಯಿತು. ಆದ್ದರಿಂದ ಅಂತಹವರಿಂದ ಪ್ರೇರಿತವಾದ ದುರ್ಭಾಷ್ಯಗಳ ನಿರಾಕರಣೆಯು ಭೀಮಪರಾಕ್ರಮದಿಂದಲೇ ಆಗಬೇಕಾದ್ದರಿಂದ ಮಧ್ವರು ಭೀಮನದೇ ರೂಪ ಎಂದು ಹೇಳುವುದು ಯುಕ್ತಿಯುತವಾಗುತ್ತದೆ.

ಶ್ರುತಿಯಲ್ಲಿ ಮತಿಪದವು ಹನುಮಂತನನ್ನು ಹೇಳುತ್ತದೆ. ಏಕೆಂದರೆ ಮತಿ ಎಂದರೆ ಜ್ಞಾನ. ಹನಧಾತುವಿಗೆ ಗತಿ ಎಂದು ಅರ್ಥ. ಗತಿ ಎಂದರೆ ಅವಗತಿ, ಜ್ಞಾನವೆಂದೂ ಅರ್ಥ. ಹನುಮಾನ್ ಎಂದರೆ ಜ್ಞಾನಶೀಲನಾದವನು ಎಂದು ಅರ್ಥ. ಒಳ್ಳೆಯ ಬುದ್ಧಿ ಇದ್ದವರನ್ನು ಬುದ್ಧಿವಂತ ಎಂದು ಹೇಳದೇ ಈಗಲೂ ಬುದ್ಧಿ ಎಂದೇ ಸಂಬೋಧಿಸುತ್ತಾರಷ್ಟೆ? ಆದ್ದರಿಂದ ಶ್ರುತಿಯು ಮತಿಮಾನ್ ಎಂಬ ಅರ್ಥದಲ್ಲಿ ಮತಿ ಎಂದಿಷ್ಟೇ ಹೇಳಿತು. ಆದ್ದರಿಂದ ಮತಿಶಬ್ದವಾಚ್ಯನಾದವನು ಹನುಮಂತನೇ.

ಎರಡನೆಯ ರೂಪವನ್ನು ಶ್ರುತಿಯು ಪಿತುಮಾನ್ ಎಂದು ಕರೆಯುತ್ತದೆ. ಪಿತು ಎಂದರೆ ಅನ್ನ ಎಂದು ಬ್ರಾಹ್ಮಣದಲ್ಲಿದೆ. ಮತುಪ್ ಪ್ರತ್ಯಯವು ಅತಿಶಯವನ್ನು ಹೇಳುತ್ತದೆ. ಆದ್ದರಿಂದ ಪಿತುಮಾನ್ ಎಂದರೆ ಅತಿಶಯಿತವಾದ ಅನ್ನವುಳ್ಳವನು ಎಂದು ಅರ್ಥವಾಗುತ್ತದೆ. ಅವನು ಭೀಮನೇ ಆಗುವನಷ್ಟೆ? ಆ ರೂಪವನ್ನು ಪೃಕ್ಷ ಎಂದೂ ಶ್ರುತಿಯು ವರ್ಣನೆ ಮಾಡಿದೆ. ಪೃಕ್ಷ ಎಂದರೆ ಪೃತ್ ಸೈನ್ಯವನ್ನು ಕ್ಷ ನಾಶಮಾಡುವವನು ಎಂದು ಅರ್ಥ. ಆದ್ದರಿಂದಲೂ ಅದು ಭೀಮಸೇನನ ರೂಪವೆಂದು ತಿಳಿಯುತ್ತದೆ.

ತೃತೀಯರೂಪವನ್ನು ಸೂಕ್ತವು ದಶಪ್ರಮತಿ ಎಂದು ಕರೆಯಿತು. ದಶಪ್ರಮತಿ ಶಬ್ದವು ಪೂರ್ಣಪ್ರಜ್ಞಶಬ್ದಕ್ಕೆ ಸಮಾನಾರ್ಥಕವಾದುದು. ದಶಪ್ರಮತಿನಾಮವು ಪ್ರಪಂಚದಲ್ಲಿ ಬೇರೆ ಯಾರಿಗೂ ಇಲ್ಲ. ಆದ್ದರಿಂದ ಪೂರ್ಣಪ್ರಜ್ಞರೇ ದಶಪ್ರಮತಿನಾಮಕರು. ಅಲ್ಲಿಯೇ ಮುಂದೆ 'ಮಧ್ವೋ ಮಾತರಿಶ್ವಾ ಗುಹಾಸಂತಂ ಮಥಾಯತಿ' ಎಂದು ಸ್ಪಷ್ಟವಾಗಿ ಮಧ್ವ ಎಂದೂ ಮಾತರಿಶ್ವಾ ಎಂದೂ ಹೇಳಿರುವುದರಿಂದ ದಶಪ್ರಮತಿನಾಮಕರು ಮಧ್ವಾಚಾರ್ಯರೇ ಸರಿ. ಶ್ರೇಷ್ಠರಾದ ಈ ವಾಯುದೇವರ ಮೂರನೆಯ ದೇಹವನ್ನು ಹರಿಯ ಪತ್ನಿಯರಾದ ಶ್ರೀಭೂದುರ್ಗೆಯರು ತಮ್ಮ ಆಮ್ನಾಯವನ್ನು ರಕ್ಷಣೆಮಾಡಿ ಜ್ಞಾನದೋಹನವನ್ನು ಮಾಡಲು ಉತ್ಪಾದಿಸಿದರು. ಆ ರೂಪಕ್ಕೆ ದಶಪ್ರಮತಿ ನಾಮಕರಾದ ವಾಯುದೇವರು ಪ್ರಕೃಷ್ಟವಾದ ಜಯಶಕ್ತಿಯುಳ್ಳ ಮೇಧಾವಿಗಳು. ಜನನಾನಂತರದಲ್ಲಿ ದೇವತಾಜನರನ್ನು ಉದ್ದೇಶಿಸಿ ಹೃದ್ಗುಹೆಯಲ್ಲಿರುವ ಪುರುಷೋತ್ತಮನ ಸರ್ವೋತ್ತಮತ್ವವನ್ನು ಸ್ಥಾಪನೆಮಾಡಲು ವೇದಶಾಸ್ತ್ರಗಳನ್ನು ಮಥನಮಾಡುತ್ತಾರೆ. ಬಹುಕಾಲಸ್ಥಾಯಿಯಾದ ಆ ಮಥನದಿಂದ ರುದ್ರಾದಿದೇವತೆಗಳು ಜ್ಞಾನವನ್ನು ಪಡೆಯುತ್ತಾರೆ. ಇತ್ಯಾದಿಯಾಗಿ ಮಧ್ವರ ಮಹಿಮೆಯನ್ನೇ ಈ ಬಳಿತ್ಥಾಸೂಕ್ತವು ಕೊಂಡಾಡುತ್ತದೆ. ಈ ಸೂಕ್ತವ್ಯಾಖ್ಯಾನವನ್ನು ಮಾಡುತ್ತಾ ಸುರೋತ್ತಮತೀರ್ಥರು ಇನ್ನೂ ಬಹಳ ವಿಷಯಗಳನ್ನು ಬರೆದಿದ್ದಾರೆ (ಶ್ಲೋಕ ೭೧೨) ಜಿಜ್ಞಾಸುಗಳು ಅಲ್ಲಿಯೇ ಅದನ್ನು ನೋಡಬೇಕು.

ಈ ತಮ್ಮ ವ್ಯಾಖ್ಯಾನಕ್ಕೆ ಪೋಷಕವಾಗಿ ರಾಜರು ವಾಯುಪುರಾಣದ ವಚನಗಳನ್ನು ಉಲ್ಲೇಖಿಸಿದ್ದಾರೆ. ವಾಯುದೇವರಿಗೆ ಮೂರುಪದ್ಮರೂಪಗಳಿವೆ (ಲಕ್ಷ, ಕೋಟಿ, ಶಂಖ, ಪದ್ಮ, ಮಹಾಪದ್ಮ ಇತ್ಯಾದಿಗಳು ಸಂಖ್ಯೆಗಳು). ಅವರು

ತ್ರೇತಾಯುಗದಲ್ಲಿ ಮೂರುಕೋಟಿರೂಪಗಳನ್ನು ಧರಿಸಿ ಹನುಮಂತನೆಂದು ಪ್ರಖ್ಯಾತರಾಗಿ ರಾಮಕಾರ್ಯಧುರಂಧರರಾದರು. ಅದೇ ವಾಯುದೇವರು ಸ್ವಾಪರದ ಕೊನೆಯ ಭಾಗದಲ್ಲಿ ಕುರುಕುಲದಲ್ಲಿ ಭೀಮಸೇನನಾಗಿ ಜನಿಸಿ ದುರ್ಯೋಧನಾದಿಗಳನ್ನು ಸಂಹರಿಸಿ ಕೃಷ್ಣಪೂಜೆಯನ್ನು ಮಾಡಿದರು. ಕಲಿಯುಗದಲ್ಲಿ ವೇದವ್ಯಾಸರ ಸೇವೆಗಾಗಿ ಅವತಾರಮಾಡಿ ಯತಿರೂಪವನ್ನು ಧರಿಸಿ ದುಶ್ಶಾಸ್ತ್ರಗಳನ್ನು ನಿರಾಕರಿಸುತ್ತಾರೆ. ಇತ್ಯಾದಿ ವಾಯುಪುರಾಣ ವಚನಗಳು ಬಳಿತ್ಥಾಸೂಕ್ತದ ಅರ್ಥವನ್ನೇ ಸ್ಪಷ್ಟಪಡಿಸುತ್ತವೆ. ಆದ್ದರಿಂದ ಮಧ್ವಾಚಾರ್ಯರು ಶ್ರುತಿಸ್ಮೃತಿಗಳಿಂದ ಸ್ತುತ್ಯವಾದ ಚರಿತ್ರೆಯುಳ್ಳವರಾದ್ದರಿಂದ ಅವರ ಮತವೇ ಯುಕ್ತಿಯುಕ್ತವಾದುದೆಂದು ಸಿದ್ಧವಾಗುತ್ತದೆ.

## ಯುಕ್ತಿಗಳಿಂದ ವಿಷ್ಣುಸರ್ವೋತ್ತಮತ್ವ ಸಮರ್ಥನೆ :

ಜಗತ್ತಿಗೆ ಸಂಬಂಧಿಸಿದ ಮೂರು ದೊಡ್ಡ ವ್ಯಾಪಾರಗಳೆಂದರೆ ಸೃಷ್ಟಿಸ್ಥಿತಿ ಸಂಹಾರಗಳು. ಅದರಲ್ಲಿ ಬ್ರಹ್ಮನು ಸೃಷ್ಟಿಕರ್ತಾ, ವಿಷ್ಣುವು ಸ್ಥಿತಿಕರ್ತಾ ಎಂದರೆ ಪಾಲಕ, ರುದ್ರದೇವರು ಸಂಹಾರಕರೆಂದು ಪ್ರಸಿದ್ಧವಾಗಿದೆ. ಸೃಷ್ಟಿಕರ್ತನ ವಶದಲ್ಲಿ ಸೃಷ್ಟಿಸಲ್ಪಡುವ ವಸ್ತುಗಳು ಮಾತ್ರ ಇರುತ್ತವೆ. ಸೃಷ್ಟಿ ಇಲ್ಲದ ನಿತ್ಯವಾದ ವಸ್ತುಗಳು ಅವನ ಅಧೀನವಲ್ಲ. ಸಂಹಾರಕರ್ತನ ಅಧೀನದಲ್ಲಿ ನಾಶವಾಗುವ ವಸ್ತುಗಳು ಮಾತ್ರ ಇರುತ್ತವೆ. ನಾಶವನ್ನು ಹೊಂದದ ವಸ್ತುಗಳು ಅವನ ಅಧೀನವಲ್ಲ. ಆದರೆ ಪಾಲಕನ ವಶದಲ್ಲಿ ನಿತ್ಯವಾದುದು ಅನಿತ್ಯವಾದುದು ಎಲ್ಲವೂ ಇರುತ್ತದೆ. ಸೃಷ್ಟಿಕರ್ತನಿಗೂ ಸಂಹಾರಕರ್ತನಿಗೂ ಸ್ಥಿತಿಯ ಅಪೇಕ್ಷೆ ಇದೆ. ತಾನೇ ಇಲ್ಲದಿದ್ದರೆ ಸೃಷ್ಟಿಯನ್ನಾಗಲೀ ಸಂಹಾರವನ್ನಾಗಲೀ ಮಾಡಲು ಸಾಧ್ಯವಿಲ್ಲ. ಆದ್ದರಿಂದ ಬ್ರಹ್ಮರುದ್ರರೂ ಸ್ಥಿತಿಕರ್ತನಾದ ವಿಷ್ಣುವಿನ ಅಧೀನವೆಂದು ಸಿದ್ಧವಾಗುತ್ತದೆ. ಹರಿಯ ಸ್ಥಿತಿಯಾದರೋ ಹರಿಯ ವ್ಯಾಪಾರವೇ ಆಗಿರುವುದರಿಂದ ಹರಿಗೆ ಸ್ವಾತಂತ್ರ್ಯವು ಸಿದ್ಧವಾಗುತ್ತದೆ. ಅಲ್ಲದೆ ಬ್ರಹ್ಮರುದ್ರರಿಗೆ ಸರ್ವಸೃಷ್ಟಿಕರ್ತೃತ್ವವಾಗಲೀ, ಸರ್ವಸಂಹಾರಕರ್ತೃತ್ವವಾಗಲೀ ಇಲ್ಲ. ಅಹಂಕಾರತತ್ವಾಭಿಮಾನಿಯಾದ ಶಿವನು ಅಹಂಕಾರತತ್ವವನ್ನು ಸಂಹಾರಮಾಡುವುದಿಲ್ಲ. ಅದನ್ನು ವಿಷ್ಣುವೇ ಸಂಹಾರಮಾಡುತ್ತಾನೆ. ಮಹತ್ತತ್ವವನ್ನೂ ಶಿವನು ಸಂಹಾರಮಾಡುವುದಿಲ್ಲ. ಅಹಂಕಾರತತ್ವದ ನಾಶವಾದ ಮೇಲೆ ಮಹತ್ತತ್ವದ ನಾಶವಾಗುತ್ತದೆ. ಅಹಂಕಾರತತ್ವದ ನಾಶವಾದಾಗಲೇ ಶಿವನೂ ನಾಶವನ್ನು ಹೊಂದಿರುತ್ತಾನೆ.

ಆದ್ದರಿಂದ ಬ್ರಹ್ಮನಿಗೂ ಸೃಷ್ಟಿಕರ್ತನಾದ, ಶಿವನಿಗೂ ಸಂಹಾರಕರ್ತನಾದ ವಿಷ್ಣುವೇ ಅವರಿಬ್ಬರಿಗಿಂತ ಉತ್ತಮನೆಂದು ಸಿದ್ಧವಾಗುತ್ತದೆ. ಮನುಷ್ಯರಿಗೆ ಸೃಷ್ಟಿಕರ್ತನಾದ ತಂದೆಯು ಅಧಿಪತಿಯಲ್ಲ. ಸಂಹಾರಕರಾದ ರಾಜಭಟರು ಅಧಿಪತಿಗಳಲ್ಲ. ರಕ್ಷಕನಾದ ರಾಜನೇ ಅಧಿಪತಿ. ಅದರಂತೆ ಸರ್ವರಕ್ಷಕನಾದ ವಿಷ್ಣುವೇ ಅಧಿಪತಿ. ಬ್ರಹ್ಮಾದಿದೇವತೆಗಳು ಊರ್ಧ್ವಾದಿ ಹತ್ತು ದಿಕ್ಕುಗಳಿಗೆ ಅಧಿಪತಿಗಳಾದ್ದರಿಂದ ಖಂಡಪತಿಗಳೆನಿಸುತ್ತಾರೆ. ವಿಷ್ಣುವು ಅಖಂಡಾಧಿಪತಿ.

**ಅಂತರ್ಬಹಿಶ್ಚಾಖಿಲಲೋಕಪಾಲಕೈ**
**ರದೃಷ್ಟರೂಪೋ ವಿಚರಸ್ಯುರುಸ್ವನಃ ।**
**ಸ ಈಶ್ವರಸ್ತ್ವಂ ಯ ಇದಂ ವಶೇ ನಯನ್ನಾತ್ಮಾ**
**ಯಥಾ ದಾರುಮಯೀಂ ನರಃ ಸ್ತ್ರಿಯಮ್ ॥**
**ಯಲ್ಲೋಕಪಾಲಾ ಕಿಲ ಮತ್ಸರಜ್ವರಾ**
**ಹಿತ್ವಾ ಯತಂತೋಽಪಿ ಪೃಥಕ್ ಸಮೇತ್ಯ ಚ ।**
**ಪಾತುಂ ನ ಶೇಕುದದ್ವಿಪದಶ್ಚತುಶ್ಪದಃ**
**ಸರೀಸೃಪಸ್ಥಾಸ್ನು ಯದತ್ರ ದೃಶ್ಯತೇ ॥**

ಎಂಬ ಪಂಚಮಸ್ಕಂಧದ ಮನುವಚನಗಳು ಈ ಅರ್ಥವನ್ನು ಸ್ಪಷ್ಟೀಕರಿಸುತ್ತವೆ.

**ತಚ್ಛ್ರುತ್ವಾ ಮುನಯಃ ಸರ್ವೇ ವಿಸ್ಮಿತಾ ಮುಕ್ತಸಂಶಯಾಃ ।**
**ಭೂಯಾಂಸಂ ಶ್ರದ್ದಧುರ್ವಿಷ್ಣುಂ ಯತಃ ಶಾಂತಿರ್ಯತೋಽಭಯಮ್ ॥**

ಎಂಬ ಭಾಗವತಶ್ಲೋಕವು ಭೃಗುಋಷಿಗಳ ಮಾತನ್ನು ಕೇಳಿ ವಿಸ್ಮಿತರಾದ ಮುನಿಗಳು ಸರ್ವಭಯನಿವಾರಕನಾದ ಸುಖಪ್ರದನಾದ ವಿಷ್ಣುವನ್ನೇ ಬ್ರಹ್ಮರುದ್ರರಿಗಿಂತ ಶ್ರೇಷ್ಠನೆಂದು ನಿಸ್ಸಂಶಯವಾಗಿ ತಿಳಿದರು ಎಂದು ಹೇಳುತ್ತದೆ.

**ಅಸ್ಯ ದೇವಸ್ಯಮೀಹ್ಳುಷೋ ವಯಾ ವಿಷ್ಣೋರೇಷಸ್ಯ ಪ್ರಭೃಥೇ ಹವಿರ್ಭಿಃ ।**
**ವಿದೇ ಹಿ ರುದ್ರೋ ರುದ್ರಿಯಂ ಮಹಿತ್ವಂ ಯಾಸಿಷ್ಟಮಶ್ವಿನಾವಿರಾವತ್ ॥**
**- (ಋಗ್ವೇದ ೭-೪೦-೫)**

ಎಂಬ ಮಂತ್ರವು ರುದ್ರನು ವಿಷ್ಣುವಿನ ಅನುಗ್ರಹದಿಂದ ರುದ್ರಪದವಿಯನ್ನು ಪಡೆದನು. ಅಶ್ವಿನೀ ದೇವತೆಗಳೂ ಹರಿಯ ಅನುಗ್ರಹದಿಂದಲೇ ಯಜ್ಞಭಾಗವನ್ನು ಪಡೆದಿದ್ದಾರೆ ಎಂದು ಹೇಳುತ್ತದೆ. ರುದ್ರನಿಗೆ ಯಜ್ಞಭಾಗವಿದ್ದರೂ ಅದು ಉಚ್ಛಿಷ್ಟಭಾಗ. ಆದ್ದರಿಂದಲೇ ರುದ್ರಾಹುತಿಯನ್ನು ಕೊಟ್ಟ ಮೇಲೆ ಯಾಜ್ಞಿಕರೆಲ್ಲರೂ

ಈಗಲೂ ಹಸ್ತಪ್ರಕ್ಷಾಲನೆಯನ್ನು ಮಾಡಿಕೊಳ್ಳುತ್ತಾರೆ. ವಿಷ್ಣುವು ಸರ್ವಯಜ್ಞ ಭೋಕ್ತಾ. ಆದ್ದರಿಂದ ಅವನೇ ಪ್ರಭು.

ಪ್ರಳಯಕಾಲದಲ್ಲಿ ವಿಷ್ಣುವು ವಟಪತ್ರಶಾಯಿಯಾಗಿ ಮಲಗಿರುವಾಗ ಬ್ರಹ್ಮನೂ ಇಲ್ಲ, ರುದ್ರನೂ ಇಲ್ಲ. ಅಲ್ಲದೆ ಗೀತೆಯಲ್ಲಿ ಪುರುಷೋತ್ತಮ ಯೋಗದಲ್ಲಿ ಲಕ್ಷ್ಮಿಯಿಂದ ಆರಂಭಿಸಿ ಬ್ರಹ್ಮಾದಿ ಜೀವರನ್ನೆಲ್ಲಾ ಕ್ಷರಾಕ್ಷರ ವಿಭಾಗದಲ್ಲಿ ಸೇರಿಸಿ **'ಉತ್ತಮಃ ಪುರುಷಸ್ತ್ವನ್ಯಃ'** ಎಂದು ವಿಷ್ಣುವು ಅವರೆಲ್ಲರಿಗಿಂತ ಶ್ರೇಷ್ಠನಾದವನು ಮತ್ತು ಭಿನ್ನನಾದವನೆಂದು ಹೇಳಿದ್ದಾರೆ. ರಾಮಾವತಾರದಲ್ಲಿ ರಾಮನೇ ಪ್ರಭು ಎಲ್ಲಾ ದೇವತೆಗಳೂ ರಾಮಭೃತ್ಯರು. ಕೃಷ್ಣಾವತಾರದಲ್ಲಿ ಕೃಷ್ಣನೇ ಪ್ರಭು. ಎಲ್ಲಾ ದೇವತೆಗಳೂ ಕೃಷ್ಣಭೃತ್ಯರು. ಧರ್ಮರಾಜನ ಅಗ್ರಪೂಜೆಯಲ್ಲಿ ಕೃಷ್ಣನೇ ಪೂಜಾರ್ಹನಾದವನು. ಆದ್ದರಿಂದ ಈ ಎಲ್ಲಾ ಯುಕ್ತಿಗಳೂ ಶ್ರುತಿಸ್ಮೃತಿಗಳೂ ವಿಷ್ಣುಪಾರಮ್ಯವನ್ನೇ ಸಾಧಿಸುತ್ತವೆ.

ಇಷ್ಟು ವಿಷಯಗಳನ್ನು ನಿರೂಪಿಸಿ ರಾಜರು ಭಾವುಕತೆಯಿಂದ ಈ ಪ್ರಕರಣವನ್ನು ಉಪಸಂಹಾರಮಾಡುತ್ತಾರೆ.

**ತಸ್ಮಾತ್ ಸರ್ವೇಶ್ವರೋ ವಿಷ್ಣುಃ ಸರ್ವಂ ಸರ್ವತ್ರ ಸರ್ವದಾ ।**
**ಪ್ರವರ್ತಯತಿ ಸರ್ವಜ್ಞಃ ಸರ್ವಶಕ್ತಿಃ ಸನಾತನಃ ॥**
**ತದ್‌ಭೂತಂ ಭೂತಮೇತಸ್ಮಾದ್ ಭವಚ್ಚ ಭವತಿ ಪ್ರಭೋಃ ।**
**ಭಾವ್ಯಂ ಭವಿಷ್ಯತಿ ಹ್ಯಸ್ಯ ಕೃಪಯಾ ನಾನ್ಯತಃ ಕ್ವಚಿತ್ ॥**
**ಅತಃ ಸರ್ವೇಷ್ಟಲಾಭಾಯ ಸರ್ವಾನಿಷ್ಟನಿವೃತ್ತಯೇ ।**
**ತಮರ್ಚ್ಯಮರ್ಚಯ ಸ್ತುತ್ಯಂ ಸ್ತುಹಿ ನಮ್ಯಂ ನಮಾಚ್ಯುತಮ್ ॥**

'ಆದ್ದರಿಂದ ವಿಷ್ಣುವು ಸರ್ವೇಶ್ವರನಾದವನು. ಅವನು ಸರ್ವತ್ರ ಸರ್ವದಾ ಸರ್ವವನ್ನೂ ಪ್ರವರ್ತಿಸುತ್ತಾನೆ. ಅವನು ಸರ್ವಜ್ಞ ಸರ್ವಶಕ್ತ ಸರ್ವವೇದ ಪ್ರತಿಪಾದ್ಯನಾದವನು. ಹಿಂದಿದ್ದ ಜಗತ್ತೆಲ್ಲವೂ ಅವನ ಅಧೀನವಾಗಿದ್ದಿತು. ಈಗ ಇರುವುದೆಲ್ಲಾ ಅವನ ಅಧೀನವಾಗಿದೆ. ಮುಂದೆ ಬರುವುದೆಲ್ಲಾ ಅವನಿಗೆ ಅಧೀನವಾಗಿರುವುದು. ಎಲ್ಲವೂ ಅವನ ಕೃಪೆಯಿಂದ ಉಂಟಾಗುತ್ತದೆ. ಬೇರೆ ಯಾರೂ ಯಾವುದಕ್ಕೂ ಕರ್ತರಲ್ಲ. ಆದ್ದರಿಂದ ಸರ್ವಾನಿಷ್ಟನಿವೃತ್ತಿಗಾಗಿ ಸರ್ವೇಷ್ಟಪ್ರಾಪ್ತಿಗಾಗಿ ಅರ್ಚನೀಯನಾದ ಅವನನ್ನು ಅರ್ಚಿಸು. ಸ್ತುತ್ಯನಾದ ಅವನನ್ನು ಸ್ತೋತ್ರಮಾಡು. ನಮ್ಯವಾದ ಅವನನ್ನು ನಮಸ್ಕರಿಸು'.

## ಸಿಂಹಾವಲೋಕನ :

ಹೀಗೆ ಫಲಸೌರಭದ ಪ್ರಧಾನವಿಷಯವನ್ನು ಉಪಸಂಹಾರ ಮಾಡಿ ಅನಂತರ ಸುಮಾರು ಇನ್ನೂರು ಶ್ಲೋಕಗಳಿಂದ (೭೭೦-೯೭೦) ಸಿಂಹಾವಲೋಕನ ನ್ಯಾಯದಿಂದ ಗುಣಸೌರಭದಿಂದ ಆರಂಭಿಸಿ ಐದುಸೌರಭಗಳಲ್ಲಿ ಇದುವರೆಗೆ ನಿರೂಪಿಸಿದ ಪ್ರಮೇಯಗಳನ್ನು ಸಂಕ್ಷೇಪವಾಗಿ ನಿರೂಪಿಸುತ್ತಾರೆ. ಹಾಗೆ ಮಾಡುತ್ತಾ ಹಿಂದೆ ಹೇಳಿದ ವಿಷಯಗಳೇ ಅಲ್ಲದೆ ಎಷ್ಟೋ ಹೊಸಪ್ರಮಾಣಗಳನ್ನೂ ಹೊಸ ಯುಕ್ತಿಗಳನ್ನೂ ಹೇಳುತ್ತಾರೆ. ಇದರ ಮಧ್ಯದಲ್ಲಿ **'ನಾನಾನಂ ವಾ ಉ ನೋ ಧಿಯಃ'** ಎಂದು ಪ್ರಾರಂಭವಾಗುವ ಪವಮಾನಮಂಡಲದ ಕೊನೆಯ ಮೂರು ಸೂಕ್ತಗಳನ್ನು ವ್ಯಾಖ್ಯಾನಮಾಡುತ್ತಾರೆ. ಇವು ಒಟ್ಟು ಹತ್ತೊಂಬತ್ತು ಮಂತ್ರಗಳಾಗುತ್ತವೆ. ಜೊತೆಗೆ ಇದೇ ಗುಂಪಿಗೆ ಸೇರಿದ ಇನ್ನೊಂದು ಮಂತ್ರವು ಖಿಲದಲ್ಲಿದೆ. ಒಟ್ಟು ಈ ಇಪ್ಪತ್ತು ಮಂತ್ರಗಳು ಮಧ್ವರಿಗೆ ಬಹಳ ಪ್ರಿಯವಾದ ಮಂತ್ರಗಳು. ಮೋಕ್ಷದಲ್ಲಿ ಜೀವರ ಪರಿಸ್ಥಿತಿಯನ್ನು ವಿಸ್ತಾರವಾಗಿ ವಿವರಿಸಿ ಎಲೈ ಪವಮಾನನೇ ಇಂತಹ ಮೋಕ್ಷವನ್ನು ನನಗೆ ಕರುಣಿಸು ಎಂಬ ಪ್ರಾರ್ಥನೆ ಇದೆ. ಎಲ್ಲಾ ಮಂತ್ರಗಳೂ **'ಇಂದ್ರಾಯೇಂದೋ ಪರಿಸ್ರವ'** – ನನ್ನನ್ನು ಪರಮೇಶ್ವರನಾದ ವಿಷ್ಣುವಿನ ಬಳಿಗೆ ಕರೆದುಕೊಂಡು ಹೋಗು ಎಂಬ ಪ್ರಾರ್ಥನೆಯಲ್ಲಿ ಕೊನೆಗೊಳ್ಳುತ್ತವೆ.

**ಯತ್ರಾನಂದಾಶ್ಚ ಮೋದಾಶ್ಚ ಮುದಃ ಪ್ರಮುದ ಆಸತೇ ।**
**ಕಾಮಸ್ಯ ಯತ್ರಾಪ್ತಾಃ ಕಾಮಾಸ್ತತ್ರ ಮಾಮಮೃತಂ**
**ಕೃಧೀಂದ್ರಾಯೇಂದೋ ಪರಿಸ್ರವ ॥**

'ಎಲ್ಲಿ ಸುಖಪ್ರಭೇದಗಳಾದ ಆನಂದ, ಮೋದ, ಮುತ್, ಪ್ರಮೋದಗಳು ಇವೆಯೋ, ಕಾಮ್ಯಮಾನವಾದ ವಿಷಯಗಳು ಎಲ್ಲಿ ತಕ್ಷಣದಲ್ಲಿಯೇ ಪ್ರಾಪ್ತವಾಗುತ್ತವೆಯೋ ಅಂತಹ ಸ್ಥಳದಲ್ಲಿ ಎಲೈ ಇಷ್ಟದಾನಶೀಲನಾದ್ದರಿಂದ ಇಂದು ನಾಮಕನಾದ ಪವಮಾನನೇ, ನನ್ನನ್ನು ಮುಕ್ತನನ್ನಾಗಿ ಮಾಡಿ ಪರಮೇಶ್ವರನಾದ ವಿಷ್ಣುವಿನ ಬಳಿಗೆ ಕರೆದುಕೊಂಡು ಹೋಗು' ಮುಂತಾದ ಪ್ರಾರ್ಥನೆಗಳೂ ಮುಕ್ತಜೀವರ ವೈಭವ ವಿಲಾಸಗಳೂ ಈ ಸೂಕ್ತದಲ್ಲಿ ಪ್ರತಿಪಾದಿತವಾಗಿದೆ.

**ಉಪಸಂಹಾರ :**

ಹೀಗೆ ಐದುಸೌರಭಗಳಲ್ಲಿ ತಮಗೆ ಅಭಿಮತವಾದ ಪ್ರಮೇಯಗಳನ್ನು ಹೃದಯಂಗಮವಾಗಿ ಪ್ರತಿಪಾದನೆ ಮಾಡಿ ಕೊನೆಯ ಸುಮಾರು ಇಪ್ಪತ್ತೈದು ಶ್ಲೋಕಗಳಲ್ಲಿ ತಮ್ಮ ಆರಾಧ್ಯಮೂರ್ತಿಯ ಸ್ತೋತ್ರಪೂರ್ವಕವಾಗಿ ಗ್ರಂಥವನ್ನು ಹರಿಗೆ ಸಮರ್ಪಣೆ ಮಾಡುತ್ತಾರೆ.

**ಅತಃ ಶುಭಗುಣಾಂಭೋಧಿಃ ಶುದ್ಧಃ ಸರ್ವವಿಲಕ್ಷಣಃ ।**
**ಸತ್ಯವಿಶ್ವಾಶ್ರಯೋ ಮುಕ್ತಾಮುಕ್ತೇಶೋ ಜಯತಿ ಪ್ರಭುಃ ॥**

ಆದ್ದರಿಂದ ಶುಭಗುಣಸಮುದ್ರನೂ, ಸರ್ವದೋಷದೂರನೂ, ಸರ್ವಾತ್ಯಂತ ವಿಲಕ್ಷಣನೂ, ಸತ್ಯವಾದ ಜಗತ್ತಿಗೆ ಆಶ್ರಯನೂ, ಮುಕ್ತಾಮುಕ್ತನಿಯಾಮಕನೂ ಆದ ಪ್ರಭುವಾದ ವಿಷ್ಣುವು ಉತ್ಕೃಷ್ಟನಾಗಿದ್ದಾನೆ ಎಂದು ಐದು ಸೌರಭಗಳ ಅರ್ಥವನ್ನೂ ಸಂಗ್ರಹಿಸಿದ್ದಾರೆ.

**ತತ್ ಸಂಪತ್ತೌ ವಿಪತ್ತೌ ಚ ಗತಿಃ ಶ್ರೀಪತಿರೇವ ನಃ ।**
**ಯೋ ಬ್ರಹ್ಮರುದ್ರವೀಂದ್ರೇಂದ್ರಚಂದ್ರಾದೀನಾಮಧೀಶ್ವರಃ ॥**

ಆದ್ದರಿಂದ ನಮಗೆ ಸಂಪತ್ತಿನಲ್ಲಿಯೂ ಬ್ರಹ್ಮ, ರುದ್ರ, ಗರುಡ, ಇಂದ್ರ, ಚಂದ್ರರಿಗೆ ಒಡೆಯನಾದ ಶ್ರೀಪತಿಯೇ ಗತಿಯಾದವನು.

**ನಾನ್ಯಂ ಭಜಾಮಿ ನ ಸ್ತೌಮಿ ನಾನುಯಾಮಿ ಕದಾಚನ ।**
**ಹರಿಂ ಚ ಹರಿಪತ್ನೀಂ ಚ ಸುರಾದೀಂಶ್ಚ ಗುರೂನ್ ವಿನಾ ॥**

ಹರಿಯನ್ನೂ ಹರಿಪತ್ನಿಯನ್ನೂ ದೇವತೆಗಳನ್ನೂ ನನ್ನ ಗುರುಗಳನ್ನೂ ಬಿಟ್ಟು ಬೇರೆ ಯಾರನ್ನೂ ಎಂದೂ ನಾನು ಭಜಿಸುವುದಿಲ್ಲ, ಸ್ತೋತ್ರಮಾಡುವುದಿಲ್ಲ, ಅನುಸರಿಸುವುದಿಲ್ಲ.

**ಭಕ್ತಿಃ ಸ್ಯಾತ್ ತ್ವಯಿ ಗೋವಿಂದ ತೃಪ್ತಿಃ ಸ್ಯಾತ್ ತ್ವನ್ನಿಷೇವಯಾ ।**
**ತ್ವತ್ತೋಽನ್ಯತ್ರ ವಿರಕ್ತಿಃ ಸ್ಯಾನ್ಮುಕ್ತಿಶ್ಚ ಸ್ಯಾನ್ಮುಕುಂದ ಮೇ ॥**

ಗೋವಿಂದನೇ ನನಗೆ ನಿನ್ನಲ್ಲಿ ಭಕ್ತಿ ಇರಲಿ. ನಿನ್ನ ಸೇವೆಯಿಂದ ತೃಪ್ತಿ ಇರಲಿ. ನಿನ್ನನ್ನು ಬಿಟ್ಟು ಅನ್ಯತ್ರ ವೈರಾಗ್ಯವಿರಲಿ. ನನಗೆ ಮುಕ್ತಿಯೂ ಆಗಲಿ.

**ಅಸ್ಮಿನ್ ಭವೇ ಭವೇಽನ್ಯಸ್ಮಿನ್ ಭವಾಂತೇ ಚ ಭವಾಮ ತೇ ।**
**ದಾಸಾನುದಾಸಾಃ ಶ್ರೀನಾಥ ತ್ರಾತಾ ತ್ವಂ ನಃ ಸದಾ ಭವ ॥**

ಶ್ರೀನಾಥನೇ, ಈ ಜನ್ಮದಲ್ಲಿ ಮುಂದಿನ ಜನ್ಮದಲ್ಲಿ ಜನ್ಮಗಳ ಕೊನೆಗೆ ನಾವು ನಿನ್ನ ದಾಸಾನುದಾಸರಾಗಿರುತ್ತೇವೆ. ನೀನು ನಮ್ಮನ್ನು ಸದಾ ರಕ್ಷಿಸು.

**ಹಯಗ್ರೀವಪದಾಂಭೋಜಮಧುಮತ್ತಮಧುವ್ರತೈಃ ।**
**ಸದಾ ಸೇವ್ಯಾ ವಾದಿರಾಜರಚಿತಾ ಯುಕ್ತಿಮಲ್ಲಿಕಾ ॥**

ಹಯಗ್ರೀವನ ಪಾದಕಮಲಮಕರಂದದಿಂದ ಹರ್ಷಗೊಂಡ ದುಂಬಿಗಳಂತಹ ಸಜ್ಜನರು ವಾದಿರಾಜರು ರಚಿಸಿದ ಈ ಯುಕ್ತಿಮಲ್ಲಿಕೆಯನ್ನು ಸದಾ ಸೇವಿಸಬೇಕು.

**ಬೀಜಾವಾಪಃ ಪ್ರರೋಹಶ್ಚ ಪಲ್ಲವಃ ಪ್ರಸವಾನಿ ಚ ।**
**ಯತ್ರಬಂಧಃ ಪ್ರಚಾರಶ್ಚ ವಿದ್ವನ್ಮಧ್ವಸ್ಯ ಶಕ್ತಿತಃ ॥**

ಈ ಯುಕ್ತಿಮಲ್ಲಿಕೆಯ ಬೀಜಾರೋಪ, ಅಂಕುರೋದ್ಭೇದ, ಎಳೆಯ ಚಿಗುರುಗಳು, ಪುಷ್ಪಗಳು ಪುಷ್ಪಮಾಲೆಯ ರಚನೆ ಆದರ ಪ್ರಚಾರ ಎಲ್ಲವೂ ವಿದ್ವಾಂಸರಾದ ಮಧ್ವರ ಶಕ್ತಿಯಿಂದ.

'ಈ ಪುಷ್ಪಮಾಲೆಯನ್ನು ವಿಕ್ರಯಮಾಡುವುದರಿಂದ ಉಂಟಾದ ಧನವು ಮಧ್ವರಿಗೇ ಇರಲಿ. ಎಂದರೆ ಸಜ್ಜನರಿಗೆ ಈ ಜ್ಞಾನವನ್ನು ದಾನಮಾಡಿದ ಪುಣ್ಯಕ್ಕೆ ಮಧ್ವರೇ ಭಾಜನರಾಗಲಿ. ನಾನು ಅವರು ಕೊಟ್ಟು ವಿತ್ತದಿಂದ ಉಪಜೀವನವನ್ನು ಮಾಡುತ್ತಾ ಅವರ ಪರಿಚಾರಕನಾಗಿರುತ್ತೇನೆ. ಅವರ ಮನೆಯಲ್ಲಿ ಮನೆಗೆಲಸವನ್ನು ಮಾಡಿಕೊಂಡು ಅವರು ನಡೆಯುವ ದಾರಿಯಲ್ಲಿ ಅವರ ಸೇವೆಯನ್ನು ಮಾಡಿಕೊಂಡು ಅವರಿಂದಲೇ ಪರಮಾತ್ಮನ ಸಮೀಪಕ್ಕೆ ಕರೆದೊಯ್ಯಲ್ಪಟ್ಟು ನಾನು ಅವರ ಸೇವಕರಲ್ಲಿ ಅಗ್ರಗಣ್ಯನಾದವನು. ಅವರ ಗ್ರಂಥಗಳಲ್ಲಿ, ಅವರ ಆವಾಸಸ್ಥಾನವಾದ ನನ್ನ ಶರೀರದಲ್ಲಿ, ಅವರ ರಾಜಪುರಿಯಾದ ವೈಕುಂಠದಲ್ಲಿ ಅವರೇ ನನ್ನ ರಕ್ಷಕರು. ಅವರು ಶ್ರುತಿಸ್ಮೃತಿಗಳೆಂಬ ಬತ್ತಳಿಕೆಗಳಲ್ಲಿದ್ದ ಮಂತ್ರಗಳು ಮತ್ತು ಶ್ಲೋಕಗಳೆಂಬ ಅಸ್ತ್ರಗಳಿಂದ ಹಿಮಾಲಯದಿಂದ ದಕ್ಷಿಣದ ಮಲಯ ಪರ್ವತದವರೆಗೆ ಇರುವ ಎಲ್ಲಾ ಖಳರನ್ನೂ ಜಯಿಸಿದರು. ಅಂತಹ ಅವರು, ನನ್ನ ಮಹಾರಾಜರು, ದುಶ್ಶಾಸ್ತ್ರಪಟ್ಟಣದ ಒಳಗೆ ಪ್ರವೇಶಿಸಿ ಅದನ್ನು ಶೋಧನೆ ಮಾಡುವುದು ತಮ್ಮ ಘನತೆಗೆ ಕಡಿಮೆಯೆಂದು ಅದನ್ನು ಉದಾಸೀನ ಮಾಡಿದರು. ವಿದ್ಯೆಯಿಂದ ದರಿದ್ರನೂ ಅದರಿಂದ ಅತೃಪ್ತನೂ ಆದ ನಾನು ಏನನ್ನಾದರೂ ಸಾಧನೆಮಾಡುವ ಆತುರತೆಯಿಂದ ಮಧ್ವರ ಸೈನಿಕರ ಜೊತೆಯಲ್ಲಿ

ದುಶ್ಶಾಸ್ತ್ರಪುರವನ್ನೂ ಪ್ರವೇಶಮಾಡಿದೆ. ಮಧ್ವಭಟರೇ (ಮಧ್ವರು ಉದಾಹರಿಸಿದ ಶ್ರುತಿಸ್ಮೃತಿ ಮತ್ತು ಯುಕ್ತಿಗಳೇ) ಅಲ್ಲಲ್ಲಿ ಪರವಾದಿಗಳ ದುಸ್ತರ್ಕವನ್ನು ನಾಶಮಾಡಿದರು. ನಾನು ಸಂತೋಷದಿಂದ ಕೇಕೆ ಹಾಕುತ್ತಾ ಅವುಗಳನ್ನು ಜೋಡಿಸಿದೆ ಅಷ್ಟೆ. ತಮ್ಮ ಪತಿಗಳಾದ ದುಸ್ತರ್ಕಗಳು ನಾಶಹೊಂದುತ್ತಿರಲು ದುರ್ವಾಕ್ಯಗಳೆಂಬ ವನಿತೆಯರು ಪರಸ್ಪರವಾಗಿ ತಮ್ಮತಮ್ಮ ಅರ್ಥಗಳಿಂದ ಹೊಡೆದಾಡಿ ಅವರೂ ಸತ್ತರು. ನಾನು ಅದೆಲ್ಲವನ್ನೂ ನೋಡಿ ಆ ಪ್ರಯೋಜನರಹಿತವಾದ ಪಟ್ಟಣದಿಂದ ಹೊರಗೆ ಬಂದು ನನ್ನ ಗುರುಗಳಿಗೆ (ಮಧ್ವರಿಗೆ) ಅಲ್ಲಿ ನಡೆದುದನ್ನೆಲ್ಲಾ ಹೇಳಿದೆ. ನನ್ನ ಮಾತುಗಳನ್ನು ಅವರೇ ಒಂದು ಪ್ರಬಂಧವಾಗಿ ಹೆಣೆದರು'' ಹೀಗೆ ಅನನ್ಯಭಕ್ತಿಯಿಂದ ಮಧ್ವರನ್ನು ಕೊಂಡಾಡಿ ತಮ್ಮ ವಿನಯವನ್ನು ಮೆರೆಸುತ್ತಾರೆ.

**ನ ಶಾಸ್ತ್ರಾಭಿಜ್ಞಾ ನಚ ನಿಯಮಯುಕ್ತಾ ನ ಯಮಿನೋ**
**ನ ಮಂತ್ರಾನುಷ್ಠಾನ ವ್ರತಚರಣಚಿತ್ತಾ ಅಪಿ ವಯಮ್ ।**
**ನ ತದ್ಯತ್ನೋಪೇತಾಸ್ತದಪಿ ಚತುರಾ ಏವ ನಿತರಾಂ**
**ವದಾಮೋ ಯದ್ದಿಷ್ಟ್ಯಾ ಹಯವದನ ತುಭ್ಯಂ ನಮ ಇತಿ ॥**

ನಾನು ಶಾಸ್ತ್ರಾಭಿಜ್ಞನಲ್ಲ. ಯಮನಿಯಮಯುಕ್ತನಾದವನಲ್ಲ. ಮಂತ್ರಾನುಷ್ಠಾನದಲ್ಲಾಗಲೀ ವ್ರತಚರ್ಯೆಯಲ್ಲಾಗಲೀ ಮನಸ್ಸಿದ್ದವನಲ್ಲ. ಅಂತಹ ಪ್ರಯತ್ನವೂ ಇಲ್ಲ. ಆದರೂ ಹಯವದನೇ ನಿನ್ನ ಅನುಗ್ರಹದಿಂದಲೇ ಪರವಾದಿಗಳನ್ನು ಚೆನ್ನಾಗಿ ನಿರಾಕರಿಸಿದ್ದೇನೆ. ಹಯವದನನೇ ನಿನಗೆ ನಮಸ್ಕಾರಗಳು ಎಂದು ಹೇಳುವುದೂ ನಿನ್ನ ಅನುಗ್ರಹವೇ.

**ಆಚಾರ್ಯಃ ಪವನೋಽಸ್ಮಾಕಮಾಚಾರ್ಯಾನೀ ಚ ಭಾರತೀ ।**
**ದೇವೋ ನಾರಾಯಣಃ ಶ್ರೀಶಃ ದೇವೀ ಮಂಗಳದೇವತಾ ॥**

ವಾಯುದೇವರು ನಮ್ಮ ಆಚಾರ್ಯರು. ಭಾರತೀದೇವಿಯು ಆಚಾರ್ಯಪತ್ನಿ. ಲಕ್ಷ್ಮೀಪತಿಯಾದ ನಾರಾಯಣನೇ ದೇವನು. ಮಂಗಳದೇವತೆಯಾದ ಲಕ್ಷ್ಮಿಯೇ ದೇವಿಯು.

**ವಾದಿರಾಜಾಖ್ಯಯತಿನಾ ಸಾಧಿತಾ ಯುಕ್ತಿಮಲ್ಲಿಕಾ ।**
**ಮುಕ್ತಿಸೌರಭ ಸರ್ವಸ್ವ ಮಿತ್ಥಂ ಸತ್ಸು ನ್ಯವೇದಯತ್ ॥**

ಎಂಬ ಈ ಶ್ಲೋಕದೊಂದಿಗೆ ಗ್ರಂಥವನ್ನು ಸಮಾಪ್ತಿ ಮಾಡಿದ್ದಾರೆ.

ವಾದಿರಾಜರು ಬಹಳ ದೊಡ್ಡ ಜ್ಞಾನಿಗಳು. ಸುರೋತ್ತಮತೀರ್ಥರು ಅವರ ಪೂರ್ವಾಶ್ರಮದ ತಮ್ಮಂದಿರು ಮತ್ತು ವಿದ್ಯಾಶಿಷ್ಯರು. ವಾದಿರಾಜರ ಪೂರ್ಣ ಅಭಿಪ್ರಾಯವನ್ನಾಗಲೀ ಅಥವಾ ವ್ಯಾಖ್ಯಾನವನ್ನು ಬರೆದ ಸುರೋತ್ತಮತೀರ್ಥರ ಅಭಿಪ್ರಾಯವನ್ನಾಗಲೀ ಪೂರ್ಣವಾಗಿ ತಿಳಿಯುವುದು ನಮ್ಮಂತಹ ಅಲ್ಪರಿಗೆ ಸಾಧ್ಯವಿಲ್ಲ. ಆದರೂ ಶ್ರೀವಿಶ್ವವಲ್ಲಭತೀರ್ಥರ ಆಜ್ಞಾಬಲದಿಂದ ನಾನು ಈ ಕಾರ್ಯದಲ್ಲಿ ಪ್ರವೃತ್ತನಾಗಿ ನನಗೆ ಸಾಧ್ಯವಿದ್ದಷ್ಟು ಅನುವಾದಗಳನ್ನು ಮಾಡಿದ್ದೇನೆ. ಮೂಲಕಾರರ ಮತ್ತು ವ್ಯಾಖ್ಯಾನಕಾರರ ಪೂರ್ಣ ಅಭಿಪ್ರಾಯವು ನನ್ನ ಅನುವಾದದಲ್ಲಿ ಬರದಿದ್ದರೂ ಅವರ ಅಭಿಪ್ರಾಯಕ್ಕೆ ವಿರುದ್ಧವಾದ ಅಭಿಪ್ರಾಯವು ನನ್ನ ಅನುವಾದದಲ್ಲಿ ಬರದಿದ್ದರೆ ನಾನು ನನ್ನನ್ನು ಕೃತಾರ್ಥನೆಂದು ಭಾವಿಸುತ್ತೇನೆ. ವಸ್ತುತಃ ಸಂಸ್ಕೃತದಲ್ಲಿ ಮೂಲವನ್ನು ವ್ಯಾಖ್ಯಾನವನ್ನು ತಾಳೆಗರಿಗಳ ಆಧಾರದಿಂದ ಶೋಧಿಸಿ ಒಂದು ಶುದ್ಧಪ್ರತಿಯನ್ನು ಮಾಡಬೇಕೆಂಬುದೇ ನನ್ನ ಉದ್ದೇಶವಾಗಿದ್ದಿತು. ಈ ಕನ್ನಡದ ಅನುವಾದವು ಶ್ರೀವಿಶ್ವವಲ್ಲಭರ ಪ್ರೇರಣೆ ಮತ್ತು ಅನುಗ್ರಹವಾಗಿದೆ.

ನನಗೆ ಅನೇಕ ಮಹನೀಯರಾದ ಪೀಠಾಧಿಪತಿಗಳು ಮತ್ತು ಆಚಾರ್ಯವರ್ಯರು ಪಾಠವನ್ನು ಹೇಳಿದ್ದಾರೆ. ಈ ಅನುವಾದವನ್ನು ಮಾಡಲು ಅವರು ನನ್ನನ್ನು ಅನುಗ್ರಹಿಸಿ ಪಾಠವನ್ನು ಹೇಳಿ ಪ್ರೋತ್ಸಾಹಿಸಿರುವುದೇ ಮುಖ್ಯವಾದ ಬಲ. ಈ ಸಂದರ್ಭದಲ್ಲಿ ಅವರೆಲ್ಲರನ್ನೂ ಪ್ರಣಾಮಪೂರ್ವಕವಾಗಿ ಸ್ಮರಣೆಮಾಡುತ್ತೇನೆ.

ನಾನು ಮೊದಲೇ ಹೇಳಿದಂತೆ ಅಲ್ಪಜ್ಞನಾದ ನನ್ನ ಬರವಣಿಗೆಯಲ್ಲಿ ಮತ್ತು ಸಂಶೋಧನೆಯಲ್ಲಿ ಅನೇಕ ಲೋಪದೋಷಗಳಿರುತ್ತವೆ. ವಾದಿರಾಜರ ಭಕ್ತರಾದ ಅಧ್ಯೇತೃಗಳು ಆ ದೋಷಗಳನ್ನು ತಿದ್ದಿ ನನಗೂ ತಿಳಿಸಿ ನನ್ನನ್ನು ಅನುಗ್ರಹಿಸಬೇಕೆಂದು ಬೇಡಿಕೊಳ್ಳುತ್ತೇನೆ.

ಶ್ರೀ ವಿಶ್ವವಲ್ಲಭರ ಚರಣಕಮಲಗಳಿಗೆ ಮತ್ತೊಮ್ಮೆ ನಮಸ್ಕರಿಸಿ ಶ್ರೀವಾದಿರಾಜರ, ಭೂತರಾಜರ ಅನುಗ್ರಹವು ನನ್ನ ಮೇಲೆ ಆಗುವಂತೆ ಪ್ರಾರ್ಥಿಸಬೇಕೆಂದು ಕೇಳಿಕೊಳ್ಳುತ್ತಾ ಈ ಮುನ್ನುಡಿಯನ್ನು ಸಮಾಪ್ತಿಗೊಳಿಸುತ್ತಿದ್ದೇನೆ. ಶ್ರೀಕೃಷ್ಣಾರ್ಪಣಮಸ್ತು.

**- ಪಿ.ಎಸ್. ಶೇಷಗಿರಿ ಆಚಾರ್ಯ**



# ಫಲಸೌರಭದ ಲೇಖನಯಜ್ಞದಲ್ಲಿ ಭಾಗವಹಿಸಿದ ವಿದ್ವಾಂಸರುಗಳು

★ ಪರಮಪೂಜ್ಯ ಶ್ರೀ ಶ್ರೀ ವಿಶ್ವನಂದನತೀರ್ಥರು (ಹನಸೋಗೆ, ಮಧ್ವಮಠ)
★ ಡಾ|| ಎಚ್. ಸತ್ಯನಾರಾಯಣಾಚಾರ್ಯ, ಬೆಂಗಳೂರು
★ ವಿದ್ವಾನ್ ಜಿ.ಪಿ. ನಾಗರಾಜಾಚಾರ್ಯ, ಬೆಂಗಳೂರು
★ ವಿದ್ವಾನ್ ಕೆ. ಸುರೇಶಾಚಾರ್ಯ, ಮೈಸೂರು
★ ವಿದ್ವಾನ್ ಶ್ರೀಕಾಂತಾಚಾರ್ಯ ಪುರೋಹಿತ್, ಆದಿಚುಂಚನಗಿರಿ
★ ವಿದ್ವಾನ್ ಭಾರತೀರಮಣಾಚಾರ್ಯ, ಬೆಂಗಳೂರು
★ ವಿದ್ವಾನ್ ಆನಂದತೀರ್ಥಾಚಾರ್ಯ ಪಂಚಮುಖಿ, ಧಾರವಾಡ
★ ವಿದ್ವಾನ್ ಎನ್. ಪಾಂಡುರಂಗಾಚಾರ್ಯ ಪಾಂಡುರಂಗಿ
★ ಡಾ|| ಆನಂದತೀರ್ಥಾಚಾರ್ಯ ಮಾಳಗಿ, ಬೆಂಗಳೂರು
★ ವಿದ್ವಾನ್ ಕೆ. ಸುಮನ ಆಚಾರ್ಯ, ಬೆಂಗಳೂರು
★ ವಿದ್ವಾನ್ ಎಂ. ರಾಘವೇಂದ್ರ ಭಟ್, ಉಜಿರೆ
★ ಡಾ|| ವಾದಿರಾಜಾಚಾರ್ಯ, ಮಂತ್ರಾಲಯ
★ ವಿದ್ವಾನ್ ವಿಟ್ಠಲಾಚಾರ್ಯ ನವಲಗುಂದ, ಧಾರವಾಡ
★ ವಿದ್ವಾನ್ ವಂಶಿಕೃಷ್ಣಾಚಾರ್ಯ, ಉಡುಪಿ
★ ವಿದ್ವಾನ್ ಗೊಗ್ಗಿ ಸುಶೀಲೇಂದ್ರಾಚಾರ್ಯ, ಬೆಂಗಳೂರು
★ ವಿದ್ವಾನ್ ವೇಣುಗೋಪಾಲಾಚಾರ್ಯ ಪುರೋಹಿತ್, ಬೆಂಗಳೂರು
★ ವಿದ್ವಾನ್ ಕೆ.ಆರ್. ಜನಾರ್ದನಾಚಾರ್ಯ, ಬೆಂಗಳೂರು
★ ವಿದ್ವಾನ್ ಜೆ. ಗೋಪಾಲಕೃಷ್ಣಾಚಾರ್ಯ, ಬೆಂಗಳೂರು
★ ವಿದ್ವಾನ್ ಸಂಜೀವಾಚಾರ್ಯ, ಬೆಂಗಳೂರು
★ ಡಾ|| ಎಂ. ನಾರಾಯಣಾಚಾರ್ಯ, ತಿರುಪತಿ
★ ವಿದ್ವಾನ್ ಶಂಕರನಾರಾಯಣಾಚಾರ್ಯ, ಪಲಿಮಾರು

**ಮೂಲಪ್ರತಿಶೋಧಕರು :-**

★ ವಿದ್ವಾನ್ ಬಿ.ಎನ್. ಮಾಧವಾಚಾರ್ಯ, ಬೆಂಗಳೂರು
ವಿದ್ವಾನ್ ತಾಮ್ರಪರ್ಣಿ ಶ್ರೀನಿವಾಸಾಚಾರ್ಯರ ಶಿಷ್ಯರು

★ ಫಲಸೌರಭದ ಅನೇಕ ಭಾಗಗಳನ್ನು ವಿದ್ವಾನ್ ಪಿ.ಎಸ್. ಶೇಷಗಿರಿ ಆಚಾರ್ಯರು ಅನುವಾದ ಮಾಡಿರುತ್ತಾರೆ.

# ಫಲಸೌರಭಮ್ - ಸಂಪುಟ - ೯

## ವಿಷಯಾನುಕ್ರಮಣಿಕೆ



—೦—

॥ ಶ್ರೀಮದ್‌ಹನುಮದ್ಭೀಮಮಧ್ವಾಂತರ್ಗತರಾಮಕೃಷ್ಣವೇದವ್ಯಾಸಾತ್ಮಕ-
ಲಕ್ಷ್ಮೀಹಯಗ್ರೀವಾಯನಮಃ ॥

# — ಪೀಠಿಕೆ —

ಪಂಚಸೌರಭಗಳ ಮೂಲಕ ಪ್ರಪಂಚದಲ್ಲಿ ತತ್ವಜ್ಞಾನಸೌರಭವನ್ನು ಹರಡುವ ಸುರಭಿತಮ ಮಲ್ಲಿಗೆ ಈ ಯುಕ್ತಿಮಲ್ಲಿಕೆ. ಇಲ್ಲಿ ಮೊದಲ ಎರಡು ಸೌರಭಗಳಲ್ಲಿ ಭಗವಂತನ ಸ್ವರೂಪ ಹಾಗೂ ಮಹಿಮೆಗಳನ್ನು ನಿರೂಪಿಸಿ ಆಗಿದೆ. ಮುಂದಿನ ಎರಡು ಸೌರಭಗಳಲ್ಲಿ ಅಂತಹ ಭಗವಂತನನ್ನು ಪಡೆಯುವುದಕ್ಕಾಗಿ ಭಕ್ತಿ-ವಿರಕ್ತಿ ಮೊದಲಾದ ಸಾಧನಗಳ ಬಗೆಗೆ ನಿರೂಪಣೆಯೂ ನಡೆದಿದೆ. ಇದೀಗ ಫಲಸೌರಭದಲ್ಲಿ ಮೋಕ್ಷಫಲದ ಬಗೆಗಿನ ನಿರೂಪಣೆಯಿದೆ.

ಈ ಸೌರಭದಲ್ಲಿ ಒಂದು ಸಾವಿರ ಶ್ಲೋಕಗಳಿವೆ. ಇಲ್ಲಿ ಶ್ರೀಮದ್ವಾದಿರಾಜತೀರ್ಥರು ನಮ್ಮೆಲ್ಲರ ಸರ್ವ ಸಾಧನೆಗಳಿಗೂ ಚರಮ ಫಲವೆನಿಸಿದ ಮೋಕ್ಷದ ಬಗೆಗೆ ಸರಳ ಸುಂದರ ಯುಕ್ತಿಗಳನ್ನು ಬಳಸಿ ಸಹೃದಯಹೃದಯಸ್ಪರ್ಶಿಯಾಗಿ ನಿರೂಪಿಸಿದ್ದಾರೆ. ಪ್ರಾಸಂಗಿಕವಾಗಿ ನಿರೂಪಿತವಾದ ವಿಷಯಗಳೆಂದರೆ:

ಪ್ರಸನ್ನನಾದ ಭಗವಂತನೇ ಮೋಕ್ಷಸಾಧನ. ಭಗವಂತನ ಪ್ರಸಾದಕ್ಕೆ ಭಕ್ತಿ ಬಿಟ್ಟು ಬೇರೆ ಮಾರ್ಗವಿಲ್ಲ. ಕಾಮದ್ವೇಷಾದಿಗಳೆಂದೂ ಭಗವಂತನನ್ನು ಪ್ರಸನ್ನನನ್ನಾಗಿಸಲಾರವು. ಕೇವಲ ಜ್ಞಾನವೂ ತನ್ನ ಸ್ವಭಾವಮಾತ್ರದಿಂದ ಸಂಸಾರಬಂಧವನ್ನು ಬಿಡಿಸಲಾರದು. ಹಾಗಾಗಿ ಭಕ್ತಿಯಿಂದ ಭಗವಂತನನ್ನು ಒಲಿಸಿಕೊಂಡು ಅವನ ಅನುಗ್ರಹದಿಂದಷ್ಟೇ ಆತನನ್ನು ಕಾಣಬೇಕು. ಈ ಅಪರೋಕ್ಷದರ್ಶನದಿಂದ ಪುಳಕಿತನಾಗಿ ಪರಮ ಭಕ್ತಿಯಿಂದ ದೇವನನ್ನು ಭಜಿಸಿದರೆ ಅವನ ಪರಮಪ್ರಸಾದದಿಂದ ಮೋಕ್ಷ ದೊರಕುತ್ತದೆ. ಈ ವಿಷಯಗಳನ್ನು ಮೊದಲ ನೂರು ಶ್ಲೋಕಗಳಲ್ಲಿ ಯುಕ್ತಿಯುಕ್ತವಾಗಿ ಸಮರ್ಥಿಸಲಾಗಿವೆ.

ಮುಂದೆ ಐದುನೂರುಶ್ಲೋಕಗಳ ತನಕ ಉತ್ಕ್ರಾಂತಿಕ್ರಮ, ಮುಕ್ತಸ್ಥಾನ-ಅಮುಕ್ತಸ್ಥಾನಗಳ ಸ್ವರೂಪ, ಮುಕ್ತಸ್ಥಾನದ ಲಕ್ಷ್ಮೀಮಯತ್ವ, ಮುಕ್ತಿಯಲ್ಲಿ ಪಶು-ಪಕ್ಷ್ಯಾದಿಗಳ ಇರುವಿಕೆ, ಅಲ್ಲಿನ ಭೋಗ್ಯ ವಸ್ತುಗಳಾದ ಅನ್ನ-ಪಾಯಸಾದಿಗಳ ಸ್ವರೂಪ, ಅಲ್ಲಿಗೆ ಅಮುಕ್ತರಿಗೆ ಪ್ರವೇಶರಾಹಿತ್ಯ ಮುಂತಾದ ವಿಷಯಗಳ ಉಪಪಾದನೆಯಿದೆ.

ಕೊನೆಯ ಐದುನೂರು ಶ್ಲೋಕಗಳಲ್ಲಿ ಶ್ರೀಮನ್ಮಧ್ವಾಚಾರ್ಯರು ವಾಯುದೇವರ ಮೂರನೆಯ ಅವತಾರವಾಗಿದ್ದಾರೆಂಬ ಸಮರ್ಥನೆಯಿದೆ. ಅದಕ್ಕಾಗಿ ಪುಂಖಾನು-ಪುಂಖವಾಗಿ ಶ್ರುತಿಗಳನ್ನು ಉದಾಹರಿಸಿ, ಅರ್ಥವಿವರಣೆಯನ್ನು ನೀಡಿದ್ದಾರೆ. ಪುರಾಣ ವಚನಗಳನ್ನು ಉಲ್ಲೇಖಿಸಿದ್ದಾರೆ. ಕೊನೆಯ ಸೋಮಸೂಕ್ತದಲ್ಲಿನ ಮಂತ್ರಗಳಿಂದ ಮುಕ್ತಿಸ್ವರೂಪವನ್ನು ನಿರ್ಧರಿಸಿದ್ದಾರೆ.

ಮೋಕ್ಷ ಪಡೆಯುವುದಕ್ಕೆ ಭಗವಂತನ ಪ್ರಸಾದವೇ ಬೇಕಾಗಿಲ್ಲ. ಜ್ಞಾನವೊಂದೇ ಸಾಕು. ಅಜ್ಞಾನಕಲ್ಪಿತ ಬಂಧವನ್ನು ಜ್ಞಾನವು ತನ್ನ ಸ್ವಭಾವದಿಂದಲೇ ನಿವೃತ್ತಿಗೊಳಿಸಿ ಮೋಕ್ಷವಿತ್ತು ಬಿಡುತ್ತದೆ ಎಂಬ ಮಾಯಾವಾದದ ವಾದವನ್ನು ನಿರಾಕರಿಸುವುದಕ್ಕಾಗಿ ಆರಂಭದ ಆರು ಶ್ಲೋಕಗಳು.

**ಜ್ಞಾನವು ಸಾಕ್ಷಾತ್ತಾಗಿ ಮೋಕ್ಷಸಾಧನವೆಂಬ ಮತದಲ್ಲಿ ಅನ್ಯೋನ್ಯಾಶ್ರಯದೋಷ ಬರುತ್ತದೆಂದು ಈ ಮುಂದಿನ ಶ್ಲೋಕದಲ್ಲಿ ಹೇಳುತ್ತಿದ್ದಾರೆ-**

**ಯದ್ಯಜ್ಞಾನಂ ಮನೋವೃತ್ತಿಪ್ರತಿಬಂಧಕಮೇವ ನ ।**
**ಮನಸಾ ಬ್ರಹ್ಮಣಸ್ತರ್ಹಿ ಸಾಕ್ಷಾತ್ಕಾರಃ ಸದಾ ಭವೇತ್ ॥ ೧ ॥**

**ಅರ್ಥ** – ಯದಿ=ಒಂದು ವೇಳೆ, ಅಜ್ಞಾನಂ=ಅಜ್ಞಾನವು, ಮನೋವೃತ್ತಿಪ್ರತಿ-ಬಂಧಕಮೇವ ನ=ಮನೋವೃತ್ತಿಗೆ ಪ್ರತಿಬಂಧಕವೇ ಅಲ್ಲವಾದರೆ, ತರ್ಹಿ= ಆ ಪಕ್ಷದಲ್ಲಿ, ಮನಸಾ=ಮನಸ್ಸಿನಿಂದ, ಬ್ರಹ್ಮಣಃ ಸಾಕ್ಷಾತ್ಕಾರಃ=ಬ್ರಹ್ಮನ ಸಾಕ್ಷಾತ್ಕಾರವು, ಸದಾ ಭವೇತ್= ಎಂದೆಂದೂ ಆಗುತ್ತಿರಬೇಕಾದೀತು.

**ಅನುವಾದ**– 'ಈಶ್ವರಪ್ರಸಾದದ ಅಪೇಕ್ಷೆಯೇ ಇಲ್ಲ, ಜ್ಞಾನವೇ ಮೋಕ್ಷಸಾಧನ' ಎಂಬುದು ಅದ್ವೈತವಾದ. ಇದರ ಅಭಿಪ್ರಾಯದಂತೆ ಈ ಬಂಧ(ಸಂಸಾರ)ವು ಅಜ್ಞಾನಕಲ್ಪಿತ. ಅಜ್ಞಾನವು ಹೋಗಿ ಜ್ಞಾನ ಬಂದರೆ ತಾನಾಗಿ ಬಂಧವೂ ಹೋಗಿಬಿಡುತ್ತದೆ. ಬೆಳಕು ಚೆಲ್ಲಿದ ಮೇಲೆ ಕತ್ತಲೆಯು ಹೋಗುವುದಕ್ಕೆ ಯಾರದಾದರೂ ಅಪೇಕ್ಷೆಯಿದೆಯೇನು? ಅದರಂತೆ, ಜ್ಞಾನವು ತನ್ನ ಸ್ವಭಾವದಿಂದಲೇ ಸಂಸಾರನಿವೃತ್ತಿಗೆ ಅಥವಾ ಮೋಕ್ಷಕ್ಕೆ ಕಾರಣವಾಗಿದೆ. ಅಲ್ಲಿ ಈಶ್ವರಪ್ರಸಾದ ಬೇಕಿಲ್ಲ.

ಪ್ರಕೃತಿಬಂಧವು ಅಜ್ಞಾನಕಲ್ಪಿತವಾಗಿದ್ದರೆ, ಈ ವಾದವು ಯುಕ್ತಿಯುಕ್ತ ಎನ್ನಬಹುದಿತ್ತು. ಆದರೆ, ಸ್ವರೂಪಾಚ್ಛಾದಿಕೆ, ಪರಮಾಚ್ಛಾದಿಕೆಗಳೆಂಬ ಈ ಪ್ರಕೃತಿಯ ಬಂಧವು ವಾಸ್ತವವಾಗಿದ್ದು ಪ್ರಸನ್ನನಾಗಿ ಭಗವಂತನೇ ಸರಿಸಬೇಕಾಗಿದೆ. ಅದಕ್ಕಾಗಿ ಮೋಕ್ಷಕ್ಕೆ ಭಗವತ್‌ಪ್ರಸಾದವು ಅಪೇಕ್ಷಿತ.

ಅಲ್ಲದೇ, ಮನೋವೃತ್ತಿರೂಪವಾದ ಬ್ರಹ್ಮಜ್ಞಾನದಿಂದ ಅಜ್ಞಾನವು ನಿವೃತ್ತವಾಗುತ್ತದೆ ಎಂದು ಈ ಶ್ಲೋಕದಲ್ಲಿ ಯುಕ್ತಿಯಿಂದ ಸಮರ್ಥಿಸಲಾಗಿದೆ.

**ಸಂಸಾರಕಾರಣವಾದ ಅನಾದಿಯಾದ ಅಜ್ಞಾನವು 'ಚರಮವೃತ್ತಿ' ಎಂದು ಕರೆಸಿಕೊಳ್ಳುವ ಭಗವತ್‌ಸಾಕ್ಷಾತ್ಕಾರಕ್ಕೆ ಪ್ರತಿಬಂಧಕವಾಗಿದೆಯೆಂದು ಮಾಯಾ-ವಾದಿಗಳೂ ಅವಶ್ಯ ಅಂಗೀಕರಿಸಲೇಬೇಕು. ಇಲ್ಲವಾದರೆ, ಮನಸ್ಸಿನಿಂದ, ಈ ಬ್ರಹ್ಮಸಾಕ್ಷಾತ್ಕಾರವು ಎಂದೆಂದೂ ಬರುತ್ತಿರಬೇಕಾಗುತ್ತದೆ.**

**ಭಾವವಿಲಾಸಿನೀ–** ಇದಾನೀಂ ಮೋಕ್ಷಾಖ್ಯಫಲಸ್ಯಾತ್ಯಂತರಂಗಸಾಧನತ್ವಾತ್ ಶ್ರವಣಮನನ-ನಿದಿಧ್ಯಾಸನಾಪರೋಕ್ಷಜ್ಞಾನಭಕ್ತಿಭಗವತ್‌ಪ್ರಸಾದಾಖ್ಯ ಮೋಕ್ಷಸಾಧನಾನ್ಯುಪೋದ್ಘಾತ ಸಂಗತ್ಯಾ ಫಲಸೌರಭಸ್ಯಾದೌ ನಿರೂಪ್ಯ ಜ್ಞಾನಸ್ವಭಾವಾದೇವ ಮೋಕ್ಷ ಇತಿ ಯತ್ಪರೋದೀರಿತಂ ಭಗವತ್ ಪ್ರಸಾದಾದ್ಯನಪೇಕ್ಷಜ್ಞಾನಸ್ವಭಾವಾಖ್ಯ ಮೋಕ್ಷಸಾಧನಂ ತತ್ರಾವರಕಾಜ್ಞಾನನಿವೃತ್ತ್ಯಾಖ್ಯ-ಮೋಕ್ಷಂ ಪ್ರತ್ಯಾವ್ರಿಯಮಾಣಬ್ರಹ್ಮಾಪರೋಕ್ಷಜ್ಞಾನಸ್ಯೈವ ಹೇತುತ್ವೇಽನ್ಯೋನ್ಯಾಶ್ರಯ-ಪ್ರಸಂಗಾದನ್ಯದೇವಾವರಣನಿವರ್ತಕಂ ವಕ್ತವ್ಯಮಿತಿಭಾವೇನ ತತ್ತಾವತ್ ದೂಷಯತಿ– **ಯದೀತ್ಯಾದಿನಾ** ॥ ೧ ॥

**ವಿವರಣೆ–** ಫಲಸೌರಭದಲ್ಲಿ ವಸ್ತುತಃ ಫಲವೆನಿಸಿದ ಮೋಕ್ಷದ ಬಗೆಗೆ ನಿರೂಪಿಸಬೇಕು. ಹೊರತು, ಮೋಕ್ಷಸಾಧನವನ್ನಲ್ಲ. ಆದರೆ, ಇಲ್ಲಿ ಹಲವು ಶ್ಲೋಕಗಳಲ್ಲಿ ಶ್ರವಣ, ಮನನ, ಧ್ಯಾನ, ಅಪರೋಕ್ಷಜ್ಞಾನ, ಭಕ್ತಿ, ಭಗವತ್‌ಪ್ರಸಾದಗಳೆಂಬ ಮೋಕ್ಷಸಾಧನಗಳನ್ನು ನಿರೂಪಿಸತೊಡಗಿದ್ದಾರೆ. ಇದು ಅಸಂಗತವಲ್ಲವೇ ಎಂಬ ಪ್ರಶ್ನೆಗೆ ಶ್ರೀಸುರೋತ್ತಮ ತೀರ್ಥರು ಹೀಗೆ ಉತ್ತರಿಸುತ್ತಾರೆ. ಮೋಕ್ಷಕ್ಕೆ ಸಾಧನಗಳು ಹಲವಿವೆ. ಅವುಗಳಲ್ಲಿ ಶ್ರವಣಮನನಾದಿಗಳು ಅಂತರಂಗಸಾಧನಗಳು. ಮೋಕ್ಷನಿರೂಪಣೆಗೆ ಉಪೋದ್ಘಾತ ರೂಪವಾಗಿ ಫಲಸೌರಭದ ಆದಿಯಲ್ಲಿ ಶ್ರವಣಮನನ ಈಶ್ವರಪ್ರಸಾದ ರೂಪವಾದ ಅಂತರಂಗ ಸಾಧನಗಳನ್ನು ನಿರೂಪಿಸುತ್ತಿದ್ದಾರೆ.

ಅದರಲ್ಲೂ ಮೊತ್ತ ಮೊದಲಿಗೆ ಭಗವತ್‌ಪ್ರಸಾದನಿರಪೇಕ್ಷವಾಗಿ ಜ್ಞಾನ-ಸ್ವಭಾವದಿಂದಲೇ ಮೋಕ್ಷವೆಂಬ ಪರಕೀಯರ ವಾದವನ್ನು ನಿರಾಕರಿಸುತ್ತಿದ್ದಾರೆ. ಪರಕೀಯರ ಸಿದ್ಧಾಂತದಲ್ಲಿ ಬ್ರಹ್ಮನನ್ನು ಅಜ್ಞಾನವು ಮುಚ್ಚಿದೆ. ಇದೇ ಸಂಸಾರಬಂಧ. ಇಲ್ಲಿ ಅಜ್ಞಾನವು ಆವರಕ. ಬ್ರಹ್ಮನು ಆವ್ರಿಯಮಾಣ. ಆವರಕವೆನಿಸಿದ ಅಜ್ಞಾನದ ನಿವೃತ್ತಿಯೇ ಮೋಕ್ಷ. ಈ ಅಜ್ಞಾನನಿವೃತ್ತಿಗೆ ಬ್ರಹ್ಮನ ಅಪರೋಕ್ಷಜ್ಞಾನವು ಕಾರಣವೆಂದು ಹೇಳಿದರೆ ಅನ್ಯೋನ್ಯಾಶ್ರಯ ದೋಷವು ಬರುತ್ತದೆ. ಹೇಗೆಂದರೆ ಬ್ರಹ್ಮನ ಅಪರೋಕ್ಷ ಜ್ಞಾನವಾಗದೇ ಅಜ್ಞಾನನಿವೃತ್ತಿಯಾಗದು. ಅಜ್ಞಾನನಿವೃತ್ತಿಯಾಗದೇ (ಪ್ರತಿಬಂಧಕ ಇರುವುದರಿಂದ) ಬ್ರಹ್ಮಾಪರೋಕ್ಷವಾಗಲಾರದು. ಹಾಗಾಗಿ, ಆವರಣವೆನಿಸಿದ ಅಜ್ಞಾನದ ನಿವೃತ್ತಿಗೆ ಬ್ರಹ್ಮಾಪರೋಕ್ಷಕ್ಕಿಂತ ಬೇರೆಯಾದ ಒಂದು ಕಾರಣವನ್ನು ಅವಶ್ಯ ಹೇಳಲೇಬೇಕು. ಅದೇ ಭಗವತ್‌ಪ್ರಸಾದ.

**ಬ್ರಹ್ಮಜ್ಞಾನಕ್ಕೆ ಅಜ್ಞಾನವು ಪ್ರತಿಬಂಧಕವೆಂದು ಒಪ್ಪಲೇಬೇಕು ಎಂಬುದಾಗಿ ರಾಜರು ಇಲ್ಲಿ ಸಮರ್ಥಿಸುತ್ತಿದ್ದಾರೆ -**

**ಯೋಗ್ಯಸ್ಯಾನಾಪರೋಕ್ಷ್ಯಂ ಹಿ ಪ್ರತಿಬಂಧನಿಬಂಧನವಮ್ ।**
**ಯೋಗ್ಯಂ ಚ ಮನಸೋ ಬ್ರಹ್ಮ ದೃಶ್ಯತೇಽಂತೇ ಕಥಂ ನ ಚೇತ್॥ ೨ ॥**

**ಅರ್ಥ–** ಯೋಗ್ಯಸ್ಯ=ಪ್ರತ್ಯಕ್ಷಕ್ಕೆ ಯೋಗ್ಯವಾದ ವಸ್ತುವಿನ, ಅನಪರೋಕ್ಷ್ಯಂ= ಅಪರೋಕ್ಷಜ್ಞಾನ ಬರದೇ ಇರುವುದು, ಪ್ರತಿಬಂಧನಿಬಂಧನಂ ಹಿ= ಪ್ರತಿಬಂಧಕ-ನಿಮಿತ್ತವಾಗಿ ಎಂಬುದು ಸರ್ವವಿದಿತ, ಬ್ರಹ್ಮ ಚ=ಬ್ರಹ್ಮನಾದರೋ, ಮನಸೋ ಯೋಗ್ಯಂ ನ ಚೇತ್=ಮನಸ್ಸೆಂಬ ಇಂದ್ರಿಯದಿಂದ ಗ್ರಹಿಸುವುದಕ್ಕೆ ಅಯೋಗ್ಯವಾಗಿದ್ದಿದ್ದರೆ, ಅಂತೇ=ಕೊನೆಗಾದರೂ (ಚರಮವೃತ್ತಿಕಾಲದಲ್ಲಾದರೂ), ಬ್ರಹ್ಮ=ಬ್ರಹ್ಮನು, ಕಥಂ=ಹೇಗೆ, ದೃಶ್ಯತೇ=ಮನಸ್ಸಿನಿಂದ ಗ್ರಾಹ್ಯವಾಗಲು ಸಾಧ್ಯ?

**ಅನುವಾದ-** **ಇಂದ್ರಿಯ ಯೋಗ್ಯವಾದ ವಸ್ತುವು ಅಪರೋಕ್ಷವಾಗದಿರಬೇಕಾದರೆ ಇಂದ್ರಿಯಕ್ಕೆ ಏನಾದರೂ ಪ್ರತಿಬಂಧಕ ಇದೆ ಎಂದು ಕಲ್ಪಿಸಬೇಕು. ಬ್ರಹ್ಮವಾದರೋ ಮನ ಇಂದ್ರಿಯಕ್ಕೆ ಯೋಗ್ಯನಾಗಿದ್ದಾನೆ. ಇಲ್ಲದಿದ್ದಲ್ಲಿ ಚರಮವೃತ್ತಿಗಾದರೂ ಅವನು ವಿಷಯನಾಗುವುದು ಹೇಗೆ? ಆದ್ದರಿಂದ ಅಜ್ಞಾನವು ಮನಸ್ಸಿಗೇ ಪ್ರತಿಬಂಧಕ ಎನ್ನಬೇಕು.**

**ಭಾವವಿಲಾಸಿನೀ–ಅಜ್ಞಾನಂ ಭಾವರೂಪಾಜ್ಞಾನಂ । ಅನಾಪರೋಕ್ಷ್ಯಂ ಅಪರೋಕ್ಷಾಭಾವಃ । ದೃಶ್ಯತೇ ಮನೋವೃತ್ತ್ಯಾ । ಅಂತೇ ಚರಮಾಪರೋಕ್ಷಜ್ಞಾನದಶಾಯಾಂ । ನಚೇತ್ । ಯೋಗ್ಯಂ ನಚೇತ್ ॥ ೨ ॥**

**ವಿವರಣೆ-** ಕಣ್ಣು ಬಣ್ಣಗಳನ್ನು ಗ್ರಹಿಸುವಲ್ಲಿ ಯೋಗ್ಯವಾಗಿದೆ. ಬೆಳಕು ಇಲ್ಲದಾದಾಗ ಕಗ್ಗತ್ತಲೆಯಲ್ಲಿ ಕಣ್ಣು ರೂಪವನ್ನು ಗ್ರಹಿಸುತ್ತಿಲ್ಲ. ಇದರಿಂದಾಗಿ ಕತ್ತಲೆಯು ರೂಪಜ್ಞಾನಕ್ಕೆ ಪ್ರತಿಬಂಧಕವೆಂದು ನಿರ್ಧರಿಸುತ್ತೇವೆ. ಚರ್ಮದಿಂದಲೋ ಮೂಗಿನಿಂದಲೋ ರೂಪಗ್ರಹಣವಾಗುತ್ತಿಲ್ಲವೆಂಬ ಕಾರಣದಿಂದ ಕತ್ತಲೆಯನ್ನು ಮೂಗಿಗೆ ಪ್ರತಿಬಂಧಕ-ವೆನ್ನುವುದಿಲ್ಲ. ಏಕೆಂದರೆ, ಮೂಗಿಗಾಗಲಿ, ಚರ್ಮಕ್ಕಾಗಲೀ ರೂಪವನ್ನು ಗ್ರಹಿಸುವ ಸಾಮರ್ಥ್ಯವೇ ಇಲ್ಲ. ಚಕ್ಷುರ್ಗ್ರಹಣಯೋಗ್ಯವಾಗಿದ್ದೂ ಗ್ರಾಹ್ಯವಾಗದಿದ್ದಾಗ ಪ್ರತಿಬಂಧಕವೊಂದನ್ನು ಒಪ್ಪಲೇಬೇಕಾಗುತ್ತದೆ. ಅಂತೆಯೇ, ಮನಸ್ಸಿನಿಂದ ಬರುವ ಮನೋವೃತ್ತಿಯೆನಿಸುವ (ಚರಮವೃತ್ತಿ) ಬ್ರಹ್ಮಜ್ಞಾನಕ್ಕೆ ಪ್ರತಿಬಂಧಕವಾಗಿ ಒಂದನ್ನು ಒಪ್ಪಲೇಬೇಕು.

ಬ್ರಹ್ಮನು ಮನಸ್ಸಿಗೆ ಯೋಗ್ಯವೇ ಅಲ್ಲವಾದ್ದರಿಂದ ಪ್ರತಿಬಂಧಕಕಲ್ಪನೆಯು ಬೇಕಾಗಿಲ್ಲವೆಂಬ ವಾದ ಸರಿಯಲ್ಲ. ಏಕೆಂದರೆ, ಅದ್ವೈತವಾದದಲ್ಲಿ ಬ್ರಹ್ಮನು ಮನಸ್ಸಿಗೆ

ಯೋಗ್ಯವೇ ಆಗಿದೆ. ಹೀಗಿಲ್ಲವಾಗಿದ್ದರೆ, ಎಂದೆಂದೂ ಮನಸ್ಸಿಗೆ ಬ್ರಹ್ಮಗ್ರಹಣ-ಸಾಮರ್ಥ್ಯವಿಲ್ಲವೆನ್ನ ಬೇಕಾಗುತ್ತದೆ. ಆದರೆ, ಬ್ರಹ್ಮಾಪರೋಕ್ಷವೆಂದು ಪರರು ವ್ಯವಹರಿಸುವ ಚರಮವೃತ್ತಿಯು ಮನೋವೃತ್ತಿಯೇ ಆಗಿದೆ. ಹಾಗಾಗಿ, ಬ್ರಹ್ಮವು ಮನಸ್ಸಿನಿಂದ ಗ್ರಹಣಕ್ಕೆ ಯೋಗ್ಯವಾಗಿದೆ. ಅಪರೋಕ್ಷ ಜ್ಞಾನಕ್ಕೆ ಬೇಕಾದ ಸನ್ನಿಕರ್ಷಾದಿ-ಗಳೆಲ್ಲವೂ ಇವೆ. ಹೀಗಿದ್ದೂ ಸದಾ ಬ್ರಹ್ಮಾಪರೋಕ್ಷವು ಉಂಟಾಗದಿರುವುದರಿಂದ ಪ್ರತಿಬಂಧಕವಾಗಿ ಅಜ್ಞಾನವನ್ನು ಒಪ್ಪಲೇಬೇಕು.

ಇಲ್ಲಿ ಪ್ರತಿಬಂಧಕವಾಗಿ ಒಪ್ಪಬೇಕಾಗಿರುವ ಅಜ್ಞಾನವೆಂದರೆ ಜ್ಞಾನದ ಅಭಾವವಲ್ಲ. ಹೊರತು, ಭಾವರೂಪವಾದ ಅಜ್ಞಾನವೆಂದಿದ್ದಾರೆ ಸುರೋತ್ತಮತೀರ್ಥರು 'ಅಜ್ಞಾನಂ= ಭಾವರೂಪಾಜ್ಞಾನಮ್'.

ಬ್ರಹ್ಮನು ಮನೋಯೋಗ್ಯ ಎಂದಿದೆ ಶ್ರುತಿ-

**ಶ್ರುತಿಶ್ಚ ಮನಸೈವೈನಂ ಪಶ್ಯತೀತ್ಯಾಹ ಯೋಗ್ಯತಾಮ್ ।**
**ರುಣದ್ಧಿ ನ ಪರೋಕ್ಷಂ ತತ್ ಸಾಕ್ಷಾತ್ಕಾರಂ ರುಣದ್ಧಿ ಚ ॥ ೩ ॥**

**ಅರ್ಥ–** ಮನಸಾ ಏವ= ಮನಸ್ಸಿನಿಂದಲೇ, ಏನಂ= ಪರಮಾತ್ಮನನ್ನು, ಪಶ್ಯತಿ= ನೋಡುತ್ತಾನೆ, ಇತಿ= ಎಂಬ, ಶ್ರುತಿಃ ಚ= ಮನಸೈವಾನು ದ್ರಷ್ಟವ್ಯಂ ಇತ್ಯಾದಿ ವೇದವಾಕ್ಯವು ಕೂಡ, ಯೋಗ್ಯತಾಂ= ಮನಸ್ಸಿಗೆ ಬ್ರಹ್ಮದರ್ಶನ ಯೋಗ್ಯತೆಯನ್ನು, ಆಹ= ಹೇಳುತ್ತಿದೆ. (ಆದ್ದರಿಂದ ಪ್ರತಿಬಂಧಕವಾದ ಅಜ್ಞಾನವನ್ನು ಒಪ್ಪಲೇಬೇಕು), ತತ್= ಅಜ್ಞಾನವು (ಪ್ರತಿಬಂಧಕವು), ಪರೋಕ್ಷಂ=ಆ ಪರೋಕ್ಷಜ್ಞಾನವನ್ನು, ನ ರುಣದ್ಧಿ=ತಡೆಯುವುದಿಲ್ಲ. ಸಾಕ್ಷಾತ್ಕಾರಂ ಚ=ಅಪರೋಕ್ಷಜ್ಞಾನವನ್ನು (ಬ್ರಹ್ಮಸಾಕ್ಷಾತ್ಕಾರವನ್ನು), ರುಣದ್ಧಿ=ತಡೆಯುತ್ತದೆ.

**ಅನುವಾದ–** 'ಮನಸೈವಾನುದ್ರಷ್ಟವ್ಯಂ' ಎಂಬ ಶ್ರುತಿಯು ಬ್ರಹ್ಮನು ಮನೋಗ್ರಾಹ್ಯ ಎಂದಿದೆ. ಅಜ್ಞಾನವಾದರೋ ಮನಸ್ಸಿನಿಂದ ಬರುವ ಬ್ರಹ್ಮನ ಪರೋಕ್ಷಜ್ಞಾನವನ್ನು ತಡೆಯುವುದಿಲ್ಲ. ಆದ್ದರಿಂದ ಅದು ಅಪರೋಕ್ಷಜ್ಞಾನಕ್ಕೇ ಪ್ರತಿಬಂಧಕ.

**ಭಾವವಿಲಾಸಿನೀ–** ತತ್ ಪ್ರತಿಬಂಧಕಭೂತಮಜ್ಞಾನಂ ॥ ೩ ॥

**ವಿವರಣೆ–** ಮನಸ್ಸಿಗೆ ಬ್ರಹ್ಮವನ್ನು ಸಾಕ್ಷಾತ್ಕರಿಸಿಕೊಳ್ಳುವ ಯೋಗ್ಯತೆಯಿದೆ ಎಂಬುದನ್ನು ಶ್ರುತಿಯ ಮೂಲಕ ರಾಜರು ಇಲ್ಲಿ ಸಮರ್ಥಿಸಿದ್ದಾರೆ. 'ಏಷೋಽಣುರಾತ್ಮಾ ಚೇತಸಾ ವೇದಿತವ್ಯಃ', 'ಮನಸೈವಾನುದ್ರಷ್ಟವ್ಯಃ' ಮುಂತಾದ ಶ್ರುತಿಗಳು ಮನಸ್ಸಿನಿಂದ ಬ್ರಹ್ಮವನ್ನು ತಿಳಿಯಬೇಕೆನ್ನುತ್ತಿರುವುದರಿಂದ ಮನಸ್ಸಿಗೆ ಬ್ರಹ್ಮಸಾಕ್ಷಾತ್ಕಾರವನ್ನು ಹುಟ್ಟಿಸುವ ಸಾಮರ್ಥ್ಯವಿದೆಯೆಂದಾಯಿತು. ಹಾಗಿದ್ದೂ, ಬ್ರಹ್ಮಸಾಕ್ಷಾತ್ಕಾರವಾಗುತ್ತಿಲ್ಲವಾದ್ದರಿಂದ,

ಪ್ರತಿಬಂಧಕವನ್ನು (ಅಜ್ಞಾನವನ್ನು) ಒಪ್ಪಲೇಬೇಕು. ಈ ಪ್ರತಿಬಂಧಕವು ಅಪರೋಕ್ಷಜ್ಞಾನವನ್ನು ಮಾತ್ರ ತಡೆಯುತ್ತದೆಯೇ ಹೊರತು, ಪರೋಕ್ಷವೃತ್ತಿಯನ್ನು ತಡೆಯುವುದಿಲ್ಲ. ಹಾಗಾಗಿ, ವೇದಾದಿಶ್ರವಣದಿಂದ ಬ್ರಹ್ಮನ ಬಗೆಗೆ ಪರೋಕ್ಷಜ್ಞಾನ ಬರುವುದಕ್ಕೇನೂ ತೊಂದರೆಯಿಲ್ಲ.

**ಮನಸಃ ಪ್ರತಿರೋಧೇ ಹಿ ಶ್ರವಣಾದ್ಯಪಿ ಮೃಗ್ಯತೇ ।**
**ಪ್ರತಿಬಂಧನಿರಾಸಾಯ ನ ಚೇತ್ ಸ್ವಾರ್ಥಂ ಸ್ಪೃಶೇದ್ ಬಲಾತ್ ॥ ೪ ॥**

**ಅರ್ಥ–** ಮನಸಃ= ಮನಸ್ಸಿಗೆ, ಪ್ರತಿರೋಧೇ ಹಿ= ಅಜ್ಞಾನದಿಂದ ತಡೆಯಿದ್ದಾಗ ಮಾತ್ರ (ಅಜ್ಞಾನವೆಂಬ ಪ್ರತಿಬಂಧಕವನ್ನು ಒಪ್ಪಿದಾಗ ಮಾತ್ರ), ಪ್ರತಿಬಂಧನಿರಾಸಾಯ=ಆ ತಡೆಯನ್ನು ತೆರವು ಮಾಡುವುದಕ್ಕಾಗಿ, ಶ್ರವಣಾದಿ ಅಪಿ= ಶ್ರವಣ ಮೊದಲಾದದ್ದು, ಮೃಗ್ಯತೇ= (ಅನ್ವೇಷಿಸಲ್ಪಡುತ್ತದೆ) ಮಾಡಲ್ಪಡುತ್ತದೆ. ನ ಚೇತ್ (ಮನಃ)=ಅಂತಹ ಪ್ರತಿಬಂಧವೇ ಇಲ್ಲವಾಗಿದ್ದರೆ ಶ್ರವಣಾದಿಗಳಿಲ್ಲದಿದ್ದಾಗಲೂ ಮನಸ್ಸು, ಸ್ವಾರ್ಥಂ=ತನ್ನ ವಿಷಯವಾದ ಬ್ರಹ್ಮವನ್ನು, ಬಲಾತ್=ಅನಿವಾರ್ಯವಾಗಿ, ಸ್ಪೃಶೇತ್= ತಿಳಿಸಿಕೊಡಲೇ ಬೇಕಾಗುತ್ತದೆ.

**ಅನುವಾದ– ಅಜ್ಞಾನವು ಮನಸ್ಸಿಗೆ ಪ್ರತಿಬಂಧಕವಾದಲ್ಲಿ ಮಾತ್ರ ಅಂತಹ ಪ್ರತಿಬಂಧಕದ ನಾಶಕ್ಕಾಗಿ ಶ್ರವಣಾದಿ ಸಾಧನಗಳನ್ನು ಅರಸುವುದು ಉಚಿತವಾಗುತ್ತದೆ. ಪ್ರತಿಬಂಧಕವೇ ಇಲ್ಲವಾದಲ್ಲಿ ಮನಸ್ಸು ಬ್ರಹ್ಮನನ್ನು ಅಪರೋಕ್ಷೀಕರಿಸಲೇಬೇಕು.**

**ಭಾವವಿಲಾಸಿನೀ–** ಪ್ರತಿರೋಧೇ ಅಜ್ಞಾನೇನ ಪ್ರತಿರೋಧೇ ಸತಿ । ಶ್ರವಣಾದ್ಯಪಿ ಪ್ರತಿಬಂಧನಿರಾಸಾಯ ಮೃಗ್ಯತ ಇತಿ ಸಂಬಂಧಃ । ನಚೇತ್ ಪ್ರತಿಬಂಧಕಂ ನಾಸ್ತಿ ಚೇತ್ । ಸ್ವಾರ್ಥಂ ಬ್ರಹ್ಮ ॥ ೪ ॥

**ವಿವರಣೆ–** 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂಬ ಶ್ರುತಿಯು 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂದು ಆದೇಶಿಸುತ್ತಿದೆ. ಬ್ರಹ್ಮನನ್ನು ಕಾಣು. ಅದಕ್ಕಾಗಿ ಶ್ರವಣ-ಮನನ-ಧ್ಯಾನಗಳನ್ನು ಮಾಡು ಎಂಬ ಈ ಆದೇಶ ಮನೋವೃತ್ತಿಗೆ ಪ್ರತಿಬಂಧಕವಾಗಿ ಅಜ್ಞಾನವಿಲ್ಲದಿದ್ದರೆ ವ್ಯರ್ಥವಾಗುತ್ತದೆ. ಅಜ್ಞಾನವೆಂಬ ಪ್ರತಿಬಂಧಕವಿದ್ದಾಗ ಆ ಅಜ್ಞಾನದ ನಿರಾಸಕ್ಕಾಗಿ ಶ್ರವಣಾದಿಗಳಲ್ಲಿ ತೊಡಗುವುದು ಸರಿಯೆನಿಸುತ್ತದೆ.

ಶ್ಲೋಕದಲ್ಲಿ 'ಸ್ವಾರ್ಥಂ' ಎಂದರೆ ಬ್ರಹ್ಮವನ್ನು ಎಂದರ್ಥ ವಿವಕ್ಷಿತ. 'ಮನಃ ಸ್ವಾರ್ಥಂ ಬಲಾತ್ ಸ್ಪೃಶೇತ್' ಎಂದು ಅನ್ವಯ. ಮನಸ್ಸು ತನಗೆ ವಿಷಯವಾದ ಬ್ರಹ್ಮವನ್ನು ಗತ್ಯಂತರವಿಲ್ಲದೇ ಗ್ರಹಿಸಲೇಬೇಕಾಗುತ್ತದೆಯೆಂದರ್ಥ.

ಅನ್ಯೋನ್ಯಾಶ್ರಯ ಅನಿವಾರ್ಯ ಎನ್ನುತ್ತಾರೆ -

**ಮನಸಃ ಪ್ರತಿರೋಧೇ ಹಿ ಸ್ಯಾದನ್ಯೋನ್ಯಾಶ್ರಯೋ ಧ್ರುವಮ್ ।**
**ಮನಸೋಽಪ್ರತಿರೋಧೇಽಪಿ ಸ್ಯಾದನ್ಯೋನ್ಯಾಶ್ರಯೋ ಧ್ರುವಮ್ ॥ ೫ ॥**

**ಅರ್ಥ–** ಮನಸಃ=ಮನೋವೃತ್ತಿಗೆ, ಪ್ರತಿರೋಧೇ= ಅಜ್ಞಾನವು ಪ್ರತಿಬಂಧಕವೆಂದು ಒಪ್ಪಿದಾಗ, ಅನ್ಯೋನ್ಯಾಶ್ರಯಃ= ಅನ್ಯೋನ್ಯಾಶ್ರಯದೋಷವು, ಧ್ರುವಂ= ನಿಶ್ಚಿತ-ವಾಗಿಯೂ, ಸ್ಯಾತ್= ಬಂದೇ ಬರುತ್ತದೆ, ಮನಸಃ ಅಪ್ರತಿರೋಧೇಽಪಿ= ಅಜ್ಞಾನವು ಪ್ರತಿಬಂಧಕವೆಂದು ಒಪ್ಪದಿದ್ದರೂ, ಅನ್ಯೋನ್ಯಾಶ್ರಯಃ=ಮನಸ್ಸಿಗೂ ಬ್ರಹ್ಮನಿಗೂ ಅನ್ಯೋನ್ಯವಾದ ಆಶ್ರಯವು (ಸಂಬಂಧವು), ಧ್ರುವಂ ಸ್ಯಾತ್=ಇದ್ದೇ ಇರುತ್ತದೆ. ಆದ್ದರಿಂದ ಸಾಕ್ಷಾತ್ಕಾರವು ಸರ್ವದಾ ಇರಬೇಕಾಗುತ್ತದೆ.

**ಅನುವಾದ–** ಅಜ್ಞಾನವು ಮನೋವೃತ್ತಿಗೆ ಪ್ರತಿಬಂಧಕ ಎಂದರೂ ಅನ್ಯೋನ್ಯಾಶ್ರಯ. ಪ್ರತಿಬಂಧಕವಲ್ಲ ಎಂದರೂ ಅನ್ಯೋನ್ಯಾಶ್ರಯ.

**ಭಾವವಿಲಾಸಿನೀ–** ಏವಂಚ ಪರಸ್ಯೋಭಯತಃ ಪಾಶಾರಜ್ಜುರಿತ್ಯಾಹ – **ಮನಸ ಇತಿ ॥** ಪ್ರತಿರೋಧೇ ಅಜ್ಞಾನೇನ ಪ್ರತಿರೋಧೇ । ಪ್ರತಿಬಂಧಕಜ್ಞಾನಾಪಗಮೇ ಮನೋವೃತ್ಯಾ ತತ್ ಸಾಕ್ಷಾತ್ಕಾರಃ । ಸಾಕ್ಷಾತ್ಕಾರೇಣೈವ ಚ ಪ್ರತಿಬಂಧಕಾಜ್ಞಾನನಿವೃತ್ತಿರಿತಿ ಪರೇಣಾಂಗೀಕಾರೇಽ-ನ್ಯೋನ್ಯಾಶ್ರಯಃ । ಅಪ್ರತಿರೋಧೇ ಅಜ್ಞಾನೇನ ಪ್ರತಿರೋಧಾಭಾವೇ । ಅನ್ಯೋನ್ಯಾಶ್ರಯಃ ಯೋಗ್ಯಮನಸಃ ಯೋಗ್ಯಬ್ರಹ್ಮಣಶ್ಚಾನ್ಯೋನ್ಯಮಾಶ್ರಯಃ ಸಂಬಂಧಃ। ಅಜ್ಞಾನಸ್ಯ ಪ್ರತಿಬಂಧಕತ್ವೇ ಪ್ರಾಗುಕ್ತಾನ್ಯೋನ್ಯಾಶ್ರಯಃ ಸ್ಯಾತ್ । ಅಪ್ರತಿಬಂಧಕತ್ವೇ ಸರ್ವದಾಪ್ಯಪರೋಕ್ಷೀ-ಕರಣಾಖ್ಯಾನ್ಯೋನ್ಯಾಶ್ರಯಃ । ಏವಂಚ ದರ್ಶಸ್ಯ ಶ್ರವಣಾದಿಸಾಧ್ಯತ್ವಬೋಧಕಶ್ರುತಿವಿರೋಧಃ ಸ್ಯಾತ್ । ತಸ್ಮಾತ್ ಅಜ್ಞಾನಪ್ರತಿಬಂಧಾನ್ನ ಸರ್ವದಾ ಸಾಕ್ಷಾತ್ಕಾರ ಇತ್ಯೇವ ವಕ್ತವ್ಯಮ್ । ತಥಾ ಚ ಪ್ರತಿಬಂಧೇ ಸತಿ ಸಾಕ್ಷಾತ್ಕಾರಾಯೋಗಾತ್ ಸಾಕ್ಷಾತ್ಕಾರಪ್ರತಿಬಂಧಕಾಜ್ಞಾನನಿವೃತ್ತಿರೂಪ-ಮೋಕ್ಷೋತ್ತರಕಾಲೀನಸಾಕ್ಷಾತ್ಕಾರಸ್ಯ ಕಥಮವಿದ್ಯಾನಿವರ್ತಕತ್ವಾಪರಪರ್ಯಾಯಮೋಕ್ಷ-ಸಾಧನತ್ವಂ ಸ್ವಸ್ವಭಾವೇನೈವಸ್ಯಾತ್ । ಸ್ವಪ್ರತಿಬಂಧಕನಿವೃತ್ತೇಃ ಸ್ವೇನೈವಕರ್ತ್ಯಮಶಕ್ಯತ್ವಾತ್ । ನಹಿ ರಾಜಸಾಕ್ಷಾತ್ಕಾರಪ್ರತಿಬಂಧಕರಾಜಗೃಹದ್ವಾರಪಿಧಾನಂ ರಾಜಸಾಕ್ಷಾತ್ಕಾರೇಣೈವ ಮೋಚ-ಯಿತುಂ ಶಕ್ಯಮ್ । ಕಿಂತು ಪ್ರಸನ್ನೇನ ರಾಜ್ಞಾ ರಾಜಭಟೈರ್ವಾ ಪ್ರತಿಬಂಧಕಕವಾಟೋದ್ಘಾಟನೇ ಕೃತೇ ಸತ್ಯೇವ ರಾಜಸಾಕ್ಷಾತ್ಕಾರಃ । ಅತೋಽತ್ರಾಪಿ ಸ್ವಸಾಕ್ಷಾತ್ಕಾರ ಪ್ರತಿಬಂಧಕಾಜ್ಞಾನ-ರೂಪಯವನಿಕಾವಿಮೋಚನಾಯ ಸ ಏವ ಪ್ರಭುರನುಸರ್ತವ್ಯಃ। ಜ್ಞಾನಸ್ವಭಾವಾದೇವ ಮೋಕ್ಷಂ ತು ತತ್ ಪ್ರತಿಬಂಧಕಜ್ಞಾನಸ್ವಭಾವಾ ಏವ ನಿರುಣದ್ಧೀತಿ ಭಾವಃ ॥ ೫ ॥

**ವಿವರಣೆ–** ಪರವಾದಿಯು ಅಜ್ಞಾನವೆಂಬ ಪ್ರತಿಬಂಧಕವನ್ನು ಒಪ್ಪಲೇಬೇಕಾದ ಅನಿವಾರ್ಯತೆಯನ್ನು ಹಿಂದಿನ ನಾಲ್ಕು ಶ್ಲೋಕಗಳಲ್ಲಿ ತೋರಿಸಿ ಆಗಿದೆ. ಇದೀಗ, ಆ

ಪ್ರತಿಬಂಧಕವನ್ನು ಅವನು ಒಪ್ಪುವಂತೆಯೂ ಇಲ್ಲ, ಬಿಡುವಂತೆಯೂ ಇಲ್ಲ. ಇದು ಅವನಿಗೆ ಉಭಯತಃ ಪಾಶಾ ರಜ್ಜುವಿನಂತಾಗಿದೆಯೆಂದು ನಿರೂಪಿಸುತ್ತಿದ್ದಾರೆ.

ಪ್ರತಿಬಂಧಕವಾದ ಅಜ್ಞಾನವು ಹೋದರೆ ಮಾತ್ರ ಮನೋವೃತ್ತಿಯಾದ ಬ್ರಹ್ಮಸಾಕ್ಷಾತ್ಕಾರವಾಗುವುದು ಸಾಧ್ಯ. ಈ ಬ್ರಹ್ಮಸಾಕ್ಷಾತ್ಕಾರದಿಂದಲೇ ಅಜ್ಞಾನವು ನಿವೃತ್ತಿಯಾಗುವುದೆಂಬುದು ಪರವಾದಿಯ ಸಿದ್ಧಾಂತವಾಗಿದೆ. ಹೀಗಾದಲ್ಲಿ ಬ್ರಹ್ಮಸಾಕ್ಷಾತ್ಕಾರ ಇಲ್ಲದೇ ಅಜ್ಞಾನನಿವೃತ್ತಿಯಿಲ್ಲ. ಅಜ್ಞಾನನಿವೃತ್ತಿಯಿಲ್ಲದೇ ಬ್ರಹ್ಮಸಾಕ್ಷಾತ್ಕಾರವಿಲ್ಲವೆಂಬ ಅನ್ಯೋನ್ಯಾಶ್ರಯದೋಷವು ಅಪರಿಹಾರ್ಯವಾಗುತ್ತದೆ. ಇದನ್ನೇ 'ಧ್ರುವಂ' ಹಾಗು 'ಹಿ' ಎಂಬ ಶಬ್ದಗಳಿಂದ ರಾಜರು ದೃಢಪಡಿಸಿದ್ದಾರೆ.

ಈಗ ಪರವಾದಿಯು ಹೀಗೆ ಪ್ರಶ್ನಿಸಬಹುದು. ಅಜ್ಞಾನವನ್ನು ಪ್ರತಿಬಂಧಕವಾಗಿ ಒಪ್ಪಿದರಲ್ಲವೇ ಈ ಅನ್ಯೋನ್ಯಾಶ್ರಯದೋಷ. ನಾನು ಪ್ರತಿಬಂಧಕವನ್ನೇ ಒಪ್ಪುವುದಿಲ್ಲ. ಹೀಗಾಗಿ ದೋಷವಿಲ್ಲ ಎಂದು. ಇದಕ್ಕುತ್ತರವಾಗಿ ಶ್ಲೋಕದ ಉತ್ತರಾರ್ಧವಿದೆ. ಮನಸ್ಸಿಗೆ ಪ್ರತಿಬಂಧಕವನ್ನು ಒಪ್ಪದಿದ್ದರೂ ಅನ್ಯೋನ್ಯಾಶ್ರಯವಿದ್ದೇ ಇದೆ.

ಇಲ್ಲಿ ಎರಡನೆಯ ಅನ್ಯೋನ್ಯಾಶ್ರಯವೆಂಬ ಶಬ್ದವನ್ನು ರಾಜರು ಕಾವ್ಯಮಯವಾಗಿ ಚಮತ್ಕಾರದಿಂದ ಬಳಸಿದ್ದಾರೆ. ಅನ್ಯೋನ್ಯಾಶ್ರಯವೆಂಬ ದೋಷವನ್ನು ಇಲ್ಲಿ ಹೇಳುತ್ತಿಲ್ಲ. ಅನ್ಯೋನ್ಯಾಶ್ರಯವೆಂದರೆ 'ಪರಸ್ಪರ ಸಂಬಂಧ' ಎಂದರ್ಥ. ಬ್ರಹ್ಮಗ್ರಹಣಯೋಗ್ಯತೆಯುಳ್ಳ ಮನಸ್ಸಿಗೂ ಬ್ರಹ್ಮನಿಗೂ ಸನ್ನಿಕರ್ಷವು ಇದ್ದೇ ಇದೆಯೆಂದರ್ಥ. ಈ ಸನ್ನಿಕರ್ಷದಿಂದಾಗಿ ಮನೋವೃತ್ತಿರೂಪವಾದ ಬ್ರಹ್ಮಾಪರೋಕ್ಷವೂ ಎಂದೆಂದೂ ಬರಬೇಕಾಗುತ್ತದೆಯೆಂಬ ಪೂರ್ವೋಕ್ತ ಆಕ್ಷೇಪವು ಇಲ್ಲಿ ವಿವಕ್ಷಿತವಾಗಿದೆ. ಅದನ್ನೇ ಸುರೋತ್ತಮತೀರ್ಥರು ಸ್ಫುಟಪಡಿಸಿದ್ದಾರೆ. 'ಅನ್ಯೋನ್ಯಾಶ್ರಯಃ=ಯೋಗ್ಯಮನಸೋ ಯೋಗ್ಯಬ್ರಹ್ಮಣಶ್ಚ ಅನ್ಯೋನ್ಯಮ್ ಆಶ್ರಯಃ ಸಂಬಂಧಃ' ಎಂಬುದಾಗಿ. ಇದನ್ನು ರಾಜದೃಷ್ಟಾಂತದಿಂದ ಅವರು ವಿವರಿಸಿದ್ದಾರೆ.

ಅಜ್ಞಾನವನ್ನು ಮನಸ್ಸಿಗೆ ಪ್ರತಿಬಂಧಕವನ್ನಾಗಿ ಒಪ್ಪಿದರೆ, ಅನ್ಯೋನ್ಯಾಶ್ರಯದೋಷವಿದೆ. ಪ್ರತಿಬಂಧಕವೆಂದು ಒಪ್ಪದೇ ಹೋದರೆ, ಸರ್ವದಾ ಬ್ರಹ್ಮಾಪರೋಕ್ಷವಾಗುವಿಕೆಯೆಂಬ ಅನ್ಯೋನ್ಯಾಶ್ರಯವಿದೆ. ಅಲ್ಲದೆ, ಭಗವದ್ದರ್ಶನಕ್ಕಾಗಿ ಶ್ರವಣಾದಿಗಳನ್ನು ವಿಧಿಸುವ 'ಶ್ರೋತವ್ಯಃ' ಮೊದಲಾದ ಶ್ರುತಿಗಳ ವಿರೋಧವೂ ಉಂಟಾಗುತ್ತದೆ. ಆದ್ದರಿಂದ, ಅಜ್ಞಾನವೆಂಬ ಪ್ರತಿಬಂಧಕವನ್ನು ಒಪ್ಪಿ, ಅದರಿಂದಾಗಿ ಈಗ ನಮಗೆ ಬ್ರಹ್ಮಸಾಕ್ಷಾತ್ಕಾರವು ಉಂಟಾಗುತ್ತಿಲ್ಲವೆಂದು ಸಮರ್ಥಿಸುವ ಅನಿವಾರ್ಯತೆಯಿದೆ. ಹೀಗಾದಲ್ಲಿ ಬ್ರಹ್ಮಸಾಕ್ಷಾತ್ಕಾರವು ಅಜ್ಞಾನನಿವರ್ತಕವೆಂಬ ವಿಚಾರವನ್ನು ಬಿಟ್ಟು ಬಿಡಬೇಕಾಗುತ್ತದೆ. ಏಕೆಂದರೆ, ಸಾಕ್ಷಾತ್ಕಾರಕ್ಕೆ ಪ್ರತಿಬಂಧಕವಾದ ಅಜ್ಞಾನವಿರುವವರೆಗೆ, ಸಾಕ್ಷಾತ್ಕಾರ ವಾಗುವಂತಿಲ್ಲ. ಎಂದರೆ, ಅಜ್ಞಾನನಿವೃತ್ತಿಯಾದ ಮೇಲೆಯೇ ಬ್ರಹ್ಮಸಾಕ್ಷಾತ್ಕಾರ

ವಾಗಬೇಕು. ಅಜ್ಞಾನನಿವೃತ್ತಿಯೆಂಬ ಮೋಕ್ಷಾನಂತರ ಹುಟ್ಟುವ ಬ್ರಹ್ಮಸಾಕ್ಷಾತ್ಕಾರವು ಮೊದಲೇ ನಿವೃತ್ತವಾದ ಅಜ್ಞಾನಕ್ಕೆ ನಿವರ್ತಕವೆಂದು ಹೇಗೆ ತಾನೇ ಹೇಳುವುದು? ಆದ್ದರಿಂದ, ಬ್ರಹ್ಮಸಾಕ್ಷಾತ್ಕಾರವು ಅವಿದ್ಯಾನಿವೃತ್ತಿಯೆಂಬ ಮೋಕ್ಷಕ್ಕೆ ತನ್ನ ಸ್ವಭಾವದಿಂದಲೇ ಕಾರಣವಾಗಿರುತ್ತದೆ ಎಂಬ ವಾದದಲ್ಲಿ ಹುರುಳಿಲ್ಲ. ತನ್ನ ಪ್ರತಿಬಂಧಕವನ್ನು ತಾನೇ ನಾಶ ಮಾಡುತ್ತದೆಯೆಂಬ ಈ ವಾದ ಅಪ್ರಬುದ್ಧವಾದುದು.

ಆಸ್ಥಾನದ್ವಾರದ ಒಳಗಿನ ಸಿಂಹಾಸನದಲ್ಲಿ ರಾಜನಿದ್ದಾನೆ. ಮುಚ್ಚಿದ ದ್ವಾರದಿಂದ ರಾಜದರ್ಶನವಾಗುತ್ತಿಲ್ಲ. ಮುಚ್ಚಿದ ಬಾಗಿಲು ಪ್ರತಿಬಂಧಕ. ರಾಜನ ದರ್ಶನದಿಂದಲೇ ಈ ಬಾಗಿಲು ತೆರೆಯುತ್ತದೆಯೆಂಬ ವಾದ ಅಯುಕ್ತ. ಹೊರತಾಗಿ, ಬಾಗಿಲ ಹೊರಗೆ ನಿಂತುಕೊಂಡು ಉಚ್ಚಕಂಠದಿಂದ ರಾಜನನ್ನು ಸ್ತುತಿಸಿದಾಗ ರಾಜನು ಪ್ರಸನ್ನನಾಗುತ್ತಾನೆ. ಪ್ರಸನ್ನನಾದ ರಾಜನು ತನ್ನ ಭಟರ ಮೂಲಕ ಬಾಗಿಲು ತೆರೆಸಿ ತನ್ನ ದರ್ಶನ ವನ್ನೀಯುತ್ತಾನೆ. ಅಂತೆಯೇ, ಇಲ್ಲಿಯೂ ಬ್ರಹ್ಮದರ್ಶನಕ್ಕೆ ಪ್ರತಿಬಂಧಕವಾದ ಅಜ್ಞಾನದ ಬಾಗಿಲನ್ನು ತೆರೆಯುವುದಕ್ಕಾಗಿ ಆ ಬ್ರಹ್ಮನನ್ನೇ ಶರಣು ಹೊಂದಬೇಕು. ಅವನ ಪ್ರಸಾದದಿಂದ ಮಾತ್ರ ಈ ಪ್ರತಿಬಂಧಕವು ದೂರವಾಗಿ ಬ್ರಹ್ಮದರ್ಶನವಾಗಲು ಸಾಧ್ಯವೆಂದು ತಿಳಿಯಬೇಕು.

ಈ ವಿಷಯವನ್ನು ಶ್ರೀವ್ಯಾಸರಾಜರು ನ್ಯಾಯಾಮೃತಗ್ರಂಥದಲ್ಲೂ ವಿವರಿಸಿದ್ದಾರೆ. 'ಅವಿದ್ಯಾನಿವರ್ತಕಭಂಗ' ಎಂಬ ಪ್ರಕರಣದಲ್ಲಿ, ಈ ದೋಷದೊಂದಿಗೆ ಸ್ವಯಂ ಅಜ್ಞಾನಕಾರ್ಯವಾದ ಮನೋವೃತ್ತಿಯು ತನಗೆ ಉಪಾದಾನವೆನಿಸಿದ ಅಜ್ಞಾನವನ್ನು ನಿವೃತ್ತಿಯಾಗಿಸುವುದು ಅಸಾಧ್ಯವೆಂಬ ದೋಷವನ್ನೂ ಹೇಳಿದ್ದಾರೆ. ಶ್ರೀವಾದಿರಾಜರು ಈ ಶ್ಲೋಕದಲ್ಲಿ ಬಳಸಿದ 'ಹಿ, ಧ್ರುವಮ್' ಎಂಬ ಶಬ್ದಗಳು 'ಇಂತಹ ಹಲವು ದೋಷಗಳು ಮೋಕ್ಷವು ಜ್ಞಾನಸ್ವಭಾವದಿಂದ ಎಂಬ ಮತದಲ್ಲಿ ಇವೆ' ಎಂಬುದನ್ನು ಸೂಚಿಸುತ್ತಿವೆ.

**ಹೀಗೆ ಐದು ಶ್ಲೋಕಗಳಲ್ಲಿ ಮಾಯಾವಾದಿಯು ಹೇಳುವ ಬ್ರಹ್ಮಸಾಕ್ಷಾತ್ಕಾರವೇ ಸಾಕ್ಷಾತ್ ಮೋಕ್ಷಸಾಧನವೆಂಬ ವಾದವನ್ನು ದೋಷಗಳನ್ನು ತೋರಿಸಿ ನಿರಾಕರಿಸಿದ್ದಾಯಿತು. ಈಗ ಸ್ವಸಿದ್ಧಾಂತದಲ್ಲಿ ಅವನಿಗೆ ಹೇಳಿದ ದೋಷಗಳಿಲ್ಲವೆಂದು ನಿರೂಪಿಸುತ್ತಿದ್ದಾರೆ-**

ಶ್ರವಣಂ ಮನನಂ ಚೈವ ಧ್ಯಾನಂ ಚೇತಿ ಕ್ರಮಾತ್ ತ್ರಯಮ್ ।
ಪ್ರಧಾನಾಂಗಂ ಹಿ ಮನಸೋ ದ್ರಷ್ಟವ್ಯೇ ಪರಮಾತ್ಮನಿ ॥ ೬ ॥

ಪ್ರತಿಬಂಧನಿರುದ್ಧಂ ಹಿ ಮನೋ ದ್ರಷ್ಟುಂ ನ ಶಕ್ನುತೇ ॥ ೭ ॥

**ಅರ್ಥ–** ಪರಮಾತ್ಮನಿ= ಪರಮಾತ್ಮನು, ದೃಷ್ಟವ್ಯೇ= ಕಾಣಲ್ಪಡಬೇಕಾದರೆ, ಶ್ರವಣಂ= ಶ್ರವಣವು, ಮನನಂ ಚ= ಮನನವೂ ಕೂಡ, ಚ= ಮತ್ತು, ಧ್ಯಾನಂ ಚ ಏವ= ಧ್ಯಾನವೂ ಕೂಡ, ಇತಿ= ಎಂಬುದಾಗಿ, ಕ್ರಮಾತ್= ಕ್ರಮವಾಗಿ= ಮೂರೂ, ಮನಸಃ= ಮನಸ್ಸಿಗೆ,

ಪ್ರಧಾನಾಂಗಂ ಹಿ= ಪ್ರಧಾನ ಅಂಗಗಳಾಗಿವೆ. ಪ್ರತಿಬಂಧನಿರುದ್ಧಂ=ಪ್ರತಿಬಂಧಕದಿಂದ ತಡೆಯಲ್ಪಟ್ಟಿರುವ, ಮನಃ= ಮನಸ್ಸು ದ್ರಷ್ಟುಂ=ಬ್ರಹ್ಮನನ್ನು ಕಾಣುವಲ್ಲಿ, ನ ಶಕ್ನುತೇ ಹಿ=ಅಸಮರ್ಥವಾಗಿದೆ. ಈ ಪ್ರತಿಬಂಧಕದ ನಿವೃತ್ತಿಗಾಗಿ ಶ್ರವಣಾದಿಗಳು ಅಪೇಕ್ಷಿತ.

**ಅನುವಾದ–** ಶ್ರವಣ-ಮನನ-ಧ್ಯಾನ ಇವುಗಳು ಮನಸ್ಸಿನಿಂದ ಭಗವದ್ದರ್ಶನ-ವಾಗಲು ಕ್ರಮವಾಗಿ ಒಂದರ ನಂತರ ಮತ್ತೊಂದು ಸಾಧನವಾಗುತ್ತವೆ. ಇವುಗಳು ಇಲ್ಲದಿದ್ದಾಗ ಅಜ್ಞಾನದಿಂದ ಪ್ರತಿಬದ್ಧವಾದ ಮನಸ್ಸು ಪರಮಾತ್ಮನನ್ನು ನೋಡಲು ಸಮರ್ಥವಾಗದು.

**ಭಾವವಿಲಾಸಿನೀ–** ಪರೋಕ್ತಮೋಕ್ಷಸಾಧನಂ ನಿರಾಕೃತ್ಯ ಸ್ವಾಭಿಮತಮೋಕ್ಷಸಾಧನಾನಿ ಪರಂ ಪ್ರತ್ಯುಕ್ತದೋಷಸ್ಯ ಸ್ವಪಕ್ಷೇ ಯಥಾನವಕಾಶಸ್ತಥಾ ದರ್ಶಯತಿ – **ಶ್ರವಣಮಿತ್ಯಾದಿನಾ** ॥ ೬ ॥

ಪ್ರಧಾನಾಂಗತಾಮೇವೋಪಪಾದಯತಿ – **ಪ್ರತಿಬಂಧೇತಿ** ॥ ಪ್ರತಿಬಂಧನಿರುದ್ಧಂ ಪ್ರತಿಬಂಧೇನ ಯವನಿಕಾಸದೃಶಪ್ರಕೃತ್ಯಂಶಾಖ್ಯಪ್ರತಿಬಂಧೇನ ನಿರುದ್ಧಂ । ಪ್ರತಿಬಂಧನಿವೃತ್ತೌ ಶ್ರವಣಾದೀ-ನಾಮಂಗತೇತಿ ಭಾವಃ ॥ ೭ ॥

**ವಿವರಣೆ–** ಮನಸ್ಸೇ ಬ್ರಹ್ಮದರ್ಶನವನ್ನು ಮಾಡಬಲ್ಲದು. ಆದರೆ, ಅದು ಭಾವರೂಪವಾದ ಅಜ್ಞಾನದಿಂದ ಪ್ರತಿಬದ್ಧವಾಗಿದೆ. ಶ್ರವಣ, ಮನನ, ಧ್ಯಾನಗಳಿಂದ ಅಜ್ಞಾನ ನಾಶವಾದಾಗ ಮನಸ್ಸು ಬ್ರಹ್ಮಪರೋಕ್ಷವನ್ನು ಉಂಟು ಮಾಡುತ್ತದೆ.

ಪರೋಕ್ಷ ಜ್ಞಾನಾತ್ಮಕವಾದ ನಿರಂತರ ಧ್ಯಾನದಿಂದ ಪ್ರಸನ್ನನಾದ ಪರಮಾತ್ಮನು ಪ್ರತಿಬಂಧಕವಾದ ಅಜ್ಞಾನವನ್ನು ನಾಶಮಾಡಿ ಭಕ್ತನಿಗೆ ತನ್ನ ದರ್ಶನವನ್ನು ಕೊಡುತ್ತಾನೆ. ಪ್ರಸನ್ನನಾದ ಭಗವಂತನೇ ಸಾಕ್ಷಾತ್ಕಾರಸಾಧನ -

**ಪರೋಕ್ಷಜ್ಞಾನರೂಪಾತ್ತು ಸದಾ ಧ್ಯಾನಾತ್ ಪ್ರಸನ್ನಧೀಃ ।**
**ಅಪಸಾರ್ಯ ನಿರೋಧಂ ತಂ ಸ್ವಾತ್ಮಾನಂ ದರ್ಶಯೇತ್ ಪ್ರಭುಃ ॥ ೮ ॥**

**ಅರ್ಥ–** ಪರೋಕ್ಷಜ್ಞಾನರೂಪಾತ್=ಪರೋಕ್ಷಜ್ಞಾನರೂಪವಾದ, ಸದಾ ಧ್ಯಾನಾತ್= ನಿರಂತರ ಧ್ಯಾನದಿಂದ, ಪ್ರಸನ್ನಧೀಃ ಪ್ರಭುಃ=ಪ್ರಸನ್ನಮನಸ್ಕನಾದ ಭಗವಂತನು, ತಂ ನಿರೋಧಂ= ಪ್ರಕೃತ್ಯಂಶವೆಂಬ ಪ್ರತಿಬಂಧಕವನ್ನು, ಅಪಸಾರ್ಯ=ಸರಿಸಿ, ಸ್ವಾತ್ಮಾನಂ=ತನ್ನನ್ನು ತಾನೇ, ದರ್ಶಯೇತ್=ದರ್ಶನ ಮಾಡಿಸುತ್ತಾನೆ.

**ಅನುವಾದ–** ಬ್ರಹ್ಮಸಾಕ್ಷಾತ್ಕಾರಕ್ಕೆ ಶ್ರವಣ-ಮನನ-ಧ್ಯಾನಗಳು ಅಂಗಗಳು. ಮನಸ್ಸು ಅಂಗಿ. ಬ್ರಹ್ಮಸೂತ್ರಗಳು ನಿರೂಪಿಸಿದ ತಾತ್ಪರ್ಯನಿರ್ಣಾಯಕಗಳನ್ನು ಅನುಸರಿಸಿ ಭಗವನ್ಮಹಿಮಾಪ್ರತಿಪಾದಕಗಳಾದ ಉಪನಿಷದಾದಿವಾಕ್ಯಗಳ ಅರ್ಥಗಳನ್ನು ಗುರುಮುಖದಿಂದ ಕೇಳುವುದಕ್ಕೆ ಶ್ರವಣವೆಂದು ಹೆಸರು. ಹೀಗೆ ಕೇಳಿದುದನ್ನು

ಶಾಸ್ತ್ರಾಧ್ಯಯನದಿಂದ ಅಥವಾ ಸಹಾಧ್ಯಾಯಿಗಳೊಂದಿಗೆ ಯುಕ್ತ್ಯನುಸಂಧಾನದೊಂದಿಗೆ ಮೆಲುಕು ಹಾಕುವುದು ಮನನ, ತತ್ವನಿರ್ಣಾಯಕವಾದ ವಾದಕಥೆಯೆನಿಸುವ.ಚರ್ಚೆಯೂ ಮನನವೆನಿಸಿದೆ. 'ತದಂಗಂ ಧಾರಣಾದಿಕಂ' ಎಂಬ ಮಾತಿನಂತೆ ಗುರುಗಳು ಹೇಳಿದ ಹಾಗೂ ತಾನು ಓದಿದ ಶಾಸ್ತ್ರಾರ್ಥವಿಷಯಗಳನ್ನು ಮನಸ್ಸಿನಲ್ಲಿ ಧಾರಣೆ ಮಾಡಿಕೊಂಡು ಮತ್ತೆ ಮತ್ತೆ ಚಿಂತಿಸುವುದೂ ಮನನವೆನಿಸಿದೆ. ಇಂತಹ ಶ್ರವಣ ಹಾಗೂ ಮನನಗಳಿಂದ ನಿಶ್ಚಯ ಮಾಡಿಕೊಂಡ ಭಗವಂತನ ಗುಣಮಹಿಮೆಗಳನ್ನು ತೈಲಧಾರೆಯಂತೆ ಅವಿಚ್ಛಿನ್ನವಾದ ಹಾಗು ಭಗವಂತನಿಗಿಂತ ಬೇರೆಡೆ ವಿರಕ್ತಿಯುಳ್ಳ, ಭಗವಂತನಲ್ಲಿ ನಿರಂತರ ಪ್ರೇಮವುಳ್ಳ ಮನೋವೃತ್ತಿಯಿಂದ ನಿರಂತರ ಧ್ಯಾನಿಸುವುದು ನಿದಿಧ್ಯಾಸನ.

ಇಲ್ಲಿ ಹೇಳಿದ ಶ್ರವಣವನ್ನು ಒಂದು ಬಾರಿ ಮಾಡಿದರೆ ಸಾಕಾಗುವುದಿಲ್ಲ. 'ಆವೃತ್ತಿರಸಕೃದುಪದೇಶಾತ್' ಎಂಬ ಸೂತ್ರದಲ್ಲಿ ಹೇಳಿರುವಂತೆ ಮನಸ್ಸಿನಲ್ಲಿ ಮನನಶಕ್ತಿಯು ಸುದೃಢವಾಗುವ ತನಕವೂ ಶ್ರವಣವನ್ನು ಮತ್ತೆ ಮತ್ತೆ ಮಾಡುತ್ತಿರಬೇಕು. ಮನನವನ್ನೂ ಕೂಡ ನಿದಿಧ್ಯಾಸನಶಕ್ತಿಯು ಉದಿಸುವ ತನಕ ನಿರಂತರ ಮಾಡುತ್ತಿರಬೇಕು. ನಿದಿಧ್ಯಾಸನವನ್ನೂ ಅಪರೋಕ್ಷಜ್ಞಾನದ ತನಕವೂ ಪುನರಾವೃತ್ತಿಸುತ್ತಿರಬೇಕು. ಇವುಗಳೆಲ್ಲವೂ ಭಗವಂತನ ಪ್ರಸಾದಕ್ಕೆ ಕಾರಣಗಳು. ಅದರಲ್ಲೂ ಶ್ರವಣಕ್ಕಿಂತ ಮನನ, ಮನನಕ್ಕಿಂತ ನಿದಿಧ್ಯಾಸನವು ಹೆಚ್ಚು ಭಗವಂತನಿಗೆ ಪ್ರಿಯ. ಈ ಶ್ರವಣ-ಮನನ-ನಿದಿಧ್ಯಾಸನಗಳೆಂಬ ಮೂರೂ ಭಗವದ್ವಿಷಯಕ ಪರೋಕ್ಷಜ್ಞಾನಗಳು. ಭಗವದಪರೋಕ್ಷಜ್ಞಾನಕ್ಕೆ ಮನಸ್ಸು ಕರಣ. ಮನಸ್ಸಿಗೆ ಈ ಶ್ರವಣ-ಮನನ-ನಿದಿಧ್ಯಾಸನಗಳೆಂಬ ಪರೋಕ್ಷಜ್ಞಾನಗಳು ಸಹಕಾರಿಗಳು. ಈ ಮೂರು ಸಹಕಾರಿಗಳಿಂದಾಗಿ ಮನಸ್ಸು ಕ್ರಮೇಣ ಭಗವಂತನಲ್ಲಿ ಹೆಚ್ಚು ಹೆಚ್ಚು ಭಕ್ತಿಯುಳ್ಳದ್ದಾಗುತ್ತದೆ. ಅಲ್ಲದೆ ವಿಷಯಪದಾರ್ಥಗಳಲ್ಲಿ ವಿರಕ್ತಿಯು ಹೆಚ್ಚುತ್ತದೆ. ಅದರಲ್ಲೂ ಭಗವಂತನ ಗುಣಗಣಗಳ ನಿರಂತರ ಸ್ಮರಣರೂಪವಾದ ನಿದಿಧ್ಯಾಸನೆಯಿಂದ ಅಥವಾ ಸದಾ ಧ್ಯಾನದಿಂದ ಭಗವಂತನು ಪ್ರಸನ್ನನಾಗಿ 'ನನ್ನ ಸ್ಮರಣೆಯಲ್ಲೇ ಮುಳುಗಿ ಬೇರೆಲ್ಲವನ್ನೂ ತೊರೆದು ನನ್ನನ್ನು ಕಾಣುವ ತವಕದಿಂದ ಭಕ್ತಿಯಿಂದ ಪುಳಕಿತನಾಗಿರುವ ಇವನಿಗೆ ನನ್ನನ್ನು ತೋರಿಸಿಬಿಡುತ್ತೇನೆ' ಎಂದು ಇಚ್ಛಿಸುತ್ತಾನೆ. ಇದೇ ಭಗವಂತನ ಮಹಾಪ್ರಸಾದ. ಪ್ರಸನ್ನನಾದ ಭಗವಂತನು ಈ ಭಕ್ತನಿಗೆ ತನ್ನ ಅಪರೋಕ್ಷಜ್ಞಾನಕ್ಕೆ ಪ್ರತಿಬಂಧಕವಾಗಿದ್ದ ಪ್ರಕೃತ್ಯಂಶವನ್ನು ಬದಿಗೊತ್ತಿ ತನ್ನನ್ನು ತೋರಿಸುತ್ತಾನೆ. ಇದೇ ಅಪರೋಕ್ಷಜ್ಞಾನ.

ಬಟ್ಟೆಯಿಂದ ಆವರಿಸಲ್ಪಟ್ಟ ವಸ್ತುವಿನ ಅಪರೋಕ್ಷಜ್ಞಾನವು ಆವರಣ ಹೋಗದೇ ಬರದು. ಆದರೆ ಪರೋಕ್ಷಜ್ಞಾನವು ಆವರಣವಿದ್ದಾಗಲೂ ಶಬ್ದದಿಂದಲೋ ಗ್ರಂಥಾಧ್ಯಯನದಿಂದಲೋ ಬರಬಹುದು. ಅದರಂತೆ, ಪ್ರಕೃತಿ (ಮಾಯೆ)ಯೆಂಬ

ಪ್ರತಿಬಂಧಕವಿದ್ದಾಗ ಭಗವಂತನ ಅಪರೋಕ್ಷಜ್ಞಾನವು ಬರಲಾರದು. ಹಾಗಿದ್ದೂ ಶ್ರವಣ-ಮನನ-ನಿದಿಧ್ಯಾಸನಗಳೆಂಬ ಪರೋಕ್ಷಜ್ಞಾನವು ಬರುವುದಕ್ಕೇನೂ ತೊಂದರೆಯಿಲ್ಲ. ಹಾಗಾಗಿ ಅನ್ಯೋನ್ಯಾಶ್ರಯವಿಲ್ಲ. ಪರೋಕ್ಷಜ್ಞಾನದಿಂದ ಪ್ರಸನ್ನನಾದ ಭಗವಂತನು ಮಾಯೆಯನ್ನು ತಾನೇ ಸರಿಸಿ ತನ್ನನ್ನು ತೋರಿಸುತ್ತಾನೆ. ಅಪರೋಕ್ಷಜ್ಞಾನವೇ ತನ್ನ ಸಾಮರ್ಥ್ಯದಿಂದ ಆವರಣವಾದ ಮಾಯೆಯನ್ನು ನಾಶ ಮಾಡುವುದೆಂಬ ಪಕ್ಷದಲ್ಲಿ ಅನ್ಯೋನ್ಯಾಶ್ರಯವು ಅಪರಿಹಾರ್ಯ. ಹೀಗೆ ಪ್ರತಿಬಂಧಕವನ್ನು ಪರಿಹರಿಸಿ ದರ್ಶನವೀಯುವ ಭಗವಂತನು ಅನ್ಯೋನ್ಯಾಶ್ರಯ ದೋಷವನ್ನೂ ಪರಿಹರಿಸಿದ್ದಾನೆಂದು ಸುರೋತ್ತಮತೀರ್ಥರು ಸ್ವಾರಸ್ಯದ ಮಾತನ್ನಾಡಿದ್ದಾರೆ.

**ಭಾವವಿಲಾಸಿನೀ–** ಏತದೇವ ದರ್ಶಯತಿ – **ಪರೋಕ್ಷೇತಿ ॥** ಭಗವನ್ಮಹಿಮಪ್ರತಿಪಾದಕೋಪನಿಷದ್ವಾಕ್ಯಾನಾಂ ಬ್ರಹ್ಮಮೀಮಾಂಸಾಪ್ರದರ್ಶಿತೋಪಕ್ರಮಾದಿಲಿಂಗೈರ್ಗುರುಮುಖಾದರ್ಥಶ್ರವಣಂ, ತಸ್ಯೈವಾರ್ಥಸ್ಯ ತಾಭಿರೇವ ಯುಕ್ತಿಭಿಃ ಪುನಃ ಪುನಃ ಸ್ವಯಮೇವ ಶಾಸ್ತ್ರಾಭ್ಯಾಸೇನ ವಾ ತತ್ವನಿರ್ಣಯಫಲಕವಾದಕಥಯಾ ವಾ ತದಂಗಧಾರಣಾದಿಕಮಿತಿ ವಚನಾತ್ ಶಾಸ್ತ್ರಾರ್ಥಧಾರಣಾವತಾ ಸ್ವಮನಸಾ ವಾ ಕ್ಷಣೇ ಕ್ಷಣೇಽನುಚಿಂತನಂ ಮನನಮ್ । ಏತಾಭ್ಯಾಂ ಶ್ರವಣಮನನಾಭ್ಯಾಂ ನಿರ್ಣೀತಭಗವದ್ಗುಣಾನಾಂ ತೈಲಧಾರಾವದವಿಚ್ಛಿನ್ನಯಾ ಭಗವತೋಽನ್ಯತ್ರಾಸಾರಬುದ್ಧ್ಯಾ ತತೋ ನಿವೃತ್ತಯಾ ಭಗವತ್ಯೇವ ಸಸ್ನೇಹ ಮನುವೃತ್ತಯಾ ಚ ಮನೋವೃತ್ತ್ಯಾ ನಿರಂತರಧ್ಯಾನಂ ನಿದಿಧ್ಯಾಸನಂ । ಆವೃತ್ತಿರಸಕೃದುಪದೇಶಾದಿತಿ ಸೂತ್ರಾದಿದಂ ಶ್ರವಣಂ ಯಾವನ್ಮನನಶಕ್ತ್ಯುದಯಂ ಪೌನಃಪುನ್ಯೇನ ಕಾರ್ಯಂ । ಮನನಂ ಚ ಯಾವನ್ನಿದಿಧ್ಯಾಸನಶಕ್ತ್ಯುದಯಂ ಕಾರ್ಯಂ । ತಚ್ಚ ಯಾವದಪರೋಕ್ಷಂ ಕಾರ್ಯಂ । ಇಮಾನಿ ಚ ಕ್ರಮೇಣೋತ್ತರತ್ರ ಪ್ರಚುರಭಗವತ್ಪ್ರಸಾದಸಾಧನಾನಿ ತತ್ಪರೋಕ್ಷಜ್ಞಾನರೂಪಾಣಿ ತ್ರೀಣಿ ಮನಸಃ ಸಹಕಾರಿಭೂತಸಾಧನಾನಿ । ಮನಸ್ತು ಸರ್ವತ್ರಾಂಗಿ । ಕರಣರೂಪತ್ವಾತ್ । ತಚ್ಚ ಸಹಕಾರಿಭಿರೇತೈಃ ಕ್ರಮೇಣಾನ್ಯತ್ರೋಪೋದ್ಬಲಿತವಿರಕ್ತಿಭಗವತ್ಯಭಿವೃದ್ಧಭಕ್ತಿ ಚ ಭವತಿ । ತತ್ರ ನಿರಂತರಭಗವದ್ಗುಣಗಣಸ್ಮರಣರೂಪತಯಾ ಭಗವತೋಽತಿ ಪ್ರೇಮಹೇತುಭೂತಾತ್ ಸದಾಧ್ಯಾನಾತ್ಸದಾಧ್ಯನಾಖ್ಯಾನಿದಿಧ್ಯಾಸನಾತ್ ಪ್ರಧಾನಾಂಗಾತ್ ಪ್ರಸನ್ನಧೀಃ ಮಮ ಗುಣಗಣಸ್ಮರಣ ಏವ ಲಾಲಸಾಂತಃ ಕರಣಸ್ಯಾನ್ಯತ್ರ ವಿರಕ್ತಸ್ಯ ಮಯ್ಯೇವ ಚಾನುರಕ್ತಸ್ಯ ಮದ್ದರ್ಶನಕಾಮುಕಸ್ಯ ಚಾಸ್ಯ ಮಾಂ ದರ್ಶಯಾಮೀತಿ ಮಹಾಪ್ರಸಾದಸಂಪನ್ನಕರುಣಾರ್ದ್ರಧೀಃ । ತಂ ನಿರೋಧಂ ಸ್ವಾಪರೋಕ್ಷಪ್ರತಿಬಂಧಕಪ್ರಕೃತ್ಯಂಶಂ । ಏವಂಚ ನಿದಿಧ್ಯಾಸನಪರ್ಯಂತ ಪರೋಕ್ಷಜ್ಞಾನಪರಂಪರಾಯಾಃ ಸಾಕ್ಷಾತ್ಕಾರಪ್ರತಿಬಂಧೇಸತ್ಯಪಿ ಸಂಭವಾನ್ನಾನ್ಯೋನ್ಯಾಶ್ರಯಃ । ಆವೃತ ಘಟಾದಾವಪಿ ಶಬ್ದಾದಿನಾಜ್ಞಾನದರ್ಶನಾತ್ । ಅಪರೋಕ್ಷಜ್ಞಾನೇ ಚ ಪ್ರತಿಬಂಧಕೀಭೂತಪ್ರಕೃತ್ಯಂಶರೂಪಮಾಯಾಂ ಭಗವಾನೇವಾಪಸಾರಯತಿ ಸ್ವಾತ್ಮಾನಂ ದರ್ಶಯತಿ ಚ । ನತು ದರ್ಶನ ಶಕ್ತ್ಯೈವ ತಪದಸರಣಂ। ಯೇನಾನ್ಯೋನ್ಯಾಶ್ರಯ ದೋಷಃ ಸ್ಯಾತ್। ಅತಃ ಪ್ರತಿಬಂಧಕ-

ಶಾಸ್ತ್ರಾಧ್ಯಯನದಿಂದ ಅಥವಾ ಸಹಾಧ್ಯಾಯಿಗಳೊಂದಿಗೆ ಯುಕ್ತ್ಯನುಸಂಧಾನ ದೊಂದಿಗೆ ಮೆಲುಕು ಹಾಕುವುದು ಮನನ, ತತ್ವನಿರ್ಣಾಯಕವಾದ ವಾದಕಥೆಯೆನಿಸುವ ಚರ್ಚೆಯೂ ಮನನವೆನಿಸಿದೆ. 'ತದಂಗಂ ಧಾರಣಾದಿಕಂ' ಎಂಬ ಮಾತಿನಂತೆ ಗುರುಗಳು ಹೇಳಿದ ಹಾಗೂ ತಾನು ಓದಿದ ಶಾಸ್ತ್ರಾರ್ಥವಿಷಯಗಳನ್ನು ಮನಸ್ಸಿನಲ್ಲಿ ಧಾರಣೆ ಮಾಡಿಕೊಂಡು ಮತ್ತೆ ಮತ್ತೆ ಚಿಂತಿಸುವುದೂ ಮನನವೆನಿಸಿದೆ. ಇಂತಹ ಶ್ರವಣ ಹಾಗೂ ಮನನಗಳಿಂದ ನಿಶ್ಚಯ ಮಾಡಿಕೊಂಡ ಭಗವಂತನ ಗುಣಮಹಿಮೆಗಳನ್ನು ತೈಲಧಾರೆಯಂತೆ ಅವಿಚ್ಛಿನ್ನವಾದ ಹಾಗು ಭಗವಂತನಿಗಿಂತ ಬೇರೆಡೆ ವಿರಕ್ತಿಯುಳ್ಳ, ಭಗವಂತನಲ್ಲಿ ನಿರಂತರ ಪ್ರೇಮವುಳ್ಳ ಮನೋವೃತ್ತಿಯಿಂದ ನಿರಂತರ ಧ್ಯಾನಿಸುವುದು ನಿದಿಧ್ಯಾಸನ.

ಇಲ್ಲಿ ಹೇಳಿದ ಶ್ರವಣವನ್ನು ಒಂದು ಬಾರಿ ಮಾಡಿದರೆ ಸಾಕಾಗುವುದಿಲ್ಲ. 'ಆವೃತ್ತಿರಸಕೃದುಪದೇಶಾತ್' ಎಂಬ ಸೂತ್ರದಲ್ಲಿ ಹೇಳಿರುವಂತೆ ಮನಸ್ಸಿನಲ್ಲಿ ಮನನಶಕ್ತಿಯು ಸುದೃಢವಾಗುವ ತನಕವೂ ಶ್ರವಣವನ್ನು ಮತ್ತೆ ಮತ್ತೆ ಮಾಡುತ್ತಿರಬೇಕು. ಮನನವನ್ನೂ ಕೂಡ ನಿದಿಧ್ಯಾಸನಶಕ್ತಿಯು ಉದಿಸುವ ತನಕ ನಿರಂತರ ಮಾಡುತ್ತಿರಬೇಕು. ನಿದಿಧ್ಯಾಸನವನ್ನೂ ಅಪರೋಕ್ಷಜ್ಞಾನದ ತನಕವೂ ಪುನರಾವೃತ್ತಿಸುತ್ತಿರಬೇಕು. ಇವುಗಳೆಲ್ಲವೂ ಭಗವಂತನ ಪ್ರಸಾದಕ್ಕೆ ಕಾರಣಗಳು. ಅದರಲ್ಲೂ ಶ್ರವಣಕ್ಕಿಂತ ಮನನ, ಮನನಕ್ಕಿಂತ ನಿದಿಧ್ಯಾಸನವು ಹೆಚ್ಚು ಭಗವಂತನಿಗೆ ಪ್ರಿಯ. ಈ ಶ್ರವಣ-ಮನನ-ನಿದಿಧ್ಯಾಸನಗಳೆಂಬ ಮೂರೂ ಭಗವದ್ವಿಷಯಕ ಪರೋಕ್ಷಜ್ಞಾನಗಳು. ಭಗವದಪರೋಕ್ಷಜ್ಞಾನಕ್ಕೆ ಮನಸ್ಸು ಕರಣ. ಮನಸ್ಸಿಗೆ ಈ ಶ್ರವಣ-ಮನನ-ನಿದಿಧ್ಯಾಸನಗಳೆಂಬ ಪರೋಕ್ಷಜ್ಞಾನಗಳು ಸಹಕಾರಿಗಳು. ಈ ಮೂರು ಸಹಕಾರಿಗಳಿಂದಾಗಿ ಮನಸ್ಸು ಕ್ರಮೇಣ ಭಗವಂತನಲ್ಲಿ ಹೆಚ್ಚು ಹೆಚ್ಚು ಭಕ್ತಿಯುಳ್ಳದ್ದಾಗುತ್ತದೆ. ಅಲ್ಲದೆ ವಿಷಯಪದಾರ್ಥಗಳಲ್ಲಿ ವಿರಕ್ತಿಯು ಹೆಚ್ಚುತ್ತದೆ. ಅದರಲ್ಲೂ ಭಗವಂತನ ಗುಣಗಣಗಳ ನಿರಂತರ ಸ್ಮರಣರೂಪವಾದ ನಿದಿಧ್ಯಾಸನೆಯಿಂದ ಅಥವಾ ಸದಾ ಧ್ಯಾನದಿಂದ ಭಗವಂತನು ಪ್ರಸನ್ನನಾಗಿ 'ನನ್ನ ಸ್ಮರಣೆಯಲ್ಲೇ ಮುಳುಗಿ ಬೇರೆಲ್ಲವನ್ನೂ ತೊರೆದು ನನ್ನನ್ನು ಕಾಣುವ ತವಕದಿಂದ ಭಕ್ತಿಯಿಂದ ಪುಳಕಿತನಾಗಿರುವ ಇವನಿಗೆ ನನ್ನನ್ನು ತೋರಿಸಿಬಿಡುತ್ತೇನೆ' ಎಂದು ಇಚ್ಛಿಸುತ್ತಾನೆ. ಇದೇ ಭಗವಂತನ ಮಹಾಪ್ರಸಾದ. ಪ್ರಸನ್ನನಾದ ಭಗವಂತನು ಈ ಭಕ್ತನಿಗೆ ತನ್ನ ಅಪರೋಕ್ಷಜ್ಞಾನಕ್ಕೆ ಪ್ರತಿಬಂಧಕವಾಗಿದ್ದ ಪ್ರಕೃತ್ಯಂಶವನ್ನು ಬದಿಗೊತ್ತಿ ತನ್ನನ್ನು ತೋರಿಸುತ್ತಾನೆ. ಇದೇ ಅಪರೋಕ್ಷಜ್ಞಾನ.

ಬಟ್ಟೆಯಿಂದ ಆವರಿಸಲ್ಪಟ್ಟ ವಸ್ತುವಿನ ಅಪರೋಕ್ಷಜ್ಞಾನವು ಆವರಣ ಹೋಗದೇ ಬರದು. ಆದರೆ ಪರೋಕ್ಷಜ್ಞಾನವು ಆವರಣವಿದ್ದಾಗಲೂ ಶಬ್ದದಿಂದಲೋ ಗ್ರಂಥಾಧ್ಯಯನದಿಂದಲೋ ಬರಬಹುದು. ಅದರಂತೆ, ಪ್ರಕೃತಿ (ಮಾಯೆ)ಯೆಂಬ

ಪ್ರತಿಬಂಧಕವಿದ್ದಾಗ ಭಗವಂತನ ಅಪರೋಕ್ಷಜ್ಞಾನವು ಬರಲಾರದು. ಹಾಗಿದ್ದೂ ಶ್ರವಣ-ಮನನ-ನಿದಿಧ್ಯಾಸನಗಳೆಂಬ ಪರೋಕ್ಷಜ್ಞಾನವು ಬರುವುದಕ್ಕೇನೂ ತೊಂದರೆಯಿಲ್ಲ. ಹಾಗಾಗಿ ಅನ್ಯೋನ್ಯಾಶ್ರಯವಿಲ್ಲ. ಪರೋಕ್ಷಜ್ಞಾನದಿಂದ ಪ್ರಸನ್ನನಾದ ಭಗವಂತನು ಮಾಯೆಯನ್ನು ತಾನೇ ಸರಿಸಿ ತನ್ನನ್ನು ತೋರಿಸುತ್ತಾನೆ. ಅಪರೋಕ್ಷಜ್ಞಾನವೇ ತನ್ನ ಸಾಮರ್ಥ್ಯದಿಂದ ಆವರಣವಾದ ಮಾಯೆಯನ್ನು ನಾಶ ಮಾಡುವುದೆಂಬ ಪಕ್ಷದಲ್ಲಿ ಅನ್ಯೋನ್ಯಾಶ್ರಯವು ಅಪರಿಹಾರ್ಯ. ಹೀಗೆ ಪ್ರತಿಬಂಧಕವನ್ನು ಪರಿಹರಿಸಿ ದರ್ಶನವೀಯುವ ಭಗವಂತನು ಅನ್ಯೋನ್ಯಾಶ್ರಯ ದೋಷವನ್ನೂ ಪರಿಹರಿಸಿದ್ದಾನೆಂದು ಸುರೋತ್ತಮತೀರ್ಥರು ಸ್ವಾರಸ್ಯದ ಮಾತನ್ನಾಡಿದ್ದಾರೆ.

**ಭಾವವಿಲಾಸಿನೀ–** ಏತದೇವ ದರ್ಶಯತಿ – ಪರೋಕ್ಷೇತಿ ॥ ಭಗವನ್ಮಹಿಮಪ್ರತಿಪಾದಕೋಪನಿಷದ್ವಾಕ್ಯಾನಾಂ ಬ್ರಹ್ಮಮೀಮಾಂಸಾಪ್ರದರ್ಶಿತೋಪಕ್ರಮಾದಿಲಿಂಗೈರ್ಗುರುಮುಖಾದರ್ಥಶ್ರವಣಂ, ತಸ್ಯೈವಾರ್ಥಸ್ಯ ತಾಭಿರೇವ ಯುಕ್ತಿಭಿಃ ಪುನಃ ಪುನಃ ಸ್ವಯಮೇವ ಶಾಸ್ತ್ರಾಭ್ಯಾಸೇನ ವಾ ತತ್ವನಿರ್ಣಯಫಲಕವಾದಕಥಯಾ ವಾ ತದಂಗಧಾರಣಾದಿಕಮಿತಿ ವಚನಾತ್ ಶಾಸ್ತ್ರಾರ್ಥಧಾರಣಾವತಾ ಸ್ವಮನಸಾ ವಾ ಕ್ಷಣೇ ಕ್ಷಣೇಽನುಚಿಂತನಂ ಮನನಮ್ । ಏತಾಭ್ಯಾಂ ಶ್ರವಣಮನನಾಭ್ಯಾಂ ನಿರ್ಣೀತಭಗವದ್ಗುಣಾನಾಂ ತೈಲಧಾರಾವದವಿಚ್ಛಿನ್ನಯಾ ಭಗವತೋಽನ್ಯತ್ರಾಸಾರಬುದ್ಧ್ಯಾ ತತೋ ನಿವೃತ್ತಯಾ ಭಗವತ್ಯೇವ ಸಸ್ನೇಹ ಮನುವೃತ್ತಯಾ ಚ ಮನೋವೃತ್ತ್ಯಾ ನಿರಂತರಧ್ಯಾನಂ ನಿದಿಧ್ಯಾಸನಂ । ಆವೃತ್ತಿರಸಕೃದುಪದೇಶಾದಿತಿ ಸೂತ್ರಾದಿದಂ ಶ್ರವಣಂ ಯಾವನ್ಮನನಶಕ್ತ್ಯುದಯಂ ಪೌನಃಪುನ್ಯೇನ ಕಾರ್ಯಂ । ಮನನಂ ಚ ಯಾವನ್ನಿದಿಧ್ಯಾಸನಶಕ್ತ್ಯುದಯಂ ಕಾರ್ಯಂ । ತಚ್ಚ ಯಾವದಪರೋಕ್ಷಂ ಕಾರ್ಯಂ । ಇಮಾನಿ ಚ ಕ್ರಮೇಣೋತ್ತರತ್ರ ಪ್ರಚುರಭಗವತ್‌ಪ್ರಸಾದಸಾಧನಾನಿ ತತ್ಪರೋಕ್ಷಜ್ಞಾನರೂಪಾಣಿ ತ್ರೀಣಿ ಮನಸಃ ಸಹಕಾರಿಭೂತಸಾಧನಾನಿ । ಮನಸ್ತು ಸರ್ವತ್ರಾಂಗಿ । ಕರಣರೂಪತ್ವಾತ್ । ತಚ್ಚ ಸಹಕಾರಿಭಿರೇತೈಃ ಕ್ರಮೇಣಾನ್ಯತ್ರೋಪೋದ್ಬಲಿತವಿರಕ್ತಿಭಗವತ್ಯಭಿವೃದ್ಧಭಕ್ತಿ ಚ ಭವತಿ । ತತ್ರ ನಿರಂತರಭಗವದ್ಗುಣಗಣಸ್ಮರಣರೂಪತಯಾ ಭಗವತೋಽತಿ ಪ್ರೇಮಹೇತುಭೂತಾತ್ ಸದಾಧ್ಯಾನಾತ್ಸದಾಧ್ಯನಾಖ್ಯಾನಿದಿಧ್ಯಾಸನಾತ್ ಪ್ರಧಾನಾಂಗಾತ್ ಪ್ರಸನ್ನಧೀಃ ಮಮ ಗುಣಗಣಸ್ಮರಣ ಏವ ಲಾಲಸಾಂತಃ ಕರಣಸ್ಯಾನ್ಯತ್ರ ವಿರಕ್ತಸ್ಯ ಮಯ್ಯೇವ ಚಾನುರಕ್ತಸ್ಯ ಮದ್ದರ್ಶನಕಾಮುಕಸ್ಯ ಚಾಸ್ಯ ಮಾಂ ದರ್ಶಯಾಮೀತಿ ಮಹಾಪ್ರಸಾದಸಂಪನ್ನಕರುಣಾರ್ದ್ರಧೀಃ । ತಂ ನಿರೋಧಂ ಸ್ವಾಪರೋಕ್ಷಪ್ರತಿಬಂಧಕಪ್ರಕೃತ್ಯಂಶಂ । ಏವಂಚ ನಿದಿಧ್ಯಾಸನಪರ್ಯಂತ ಪರೋಕ್ಷಜ್ಞಾನಪರಂಪರಾಯಾಃ ಸಾಕ್ಷಾತ್ಕಾರಪ್ರತಿಬಂಧೇಸತ್ಯಪಿ ಸಂಭವಾನ್ನಾನ್ಯೋನ್ಯಾಶ್ರಯಃ । ಆವೃತ ಘಟಾದಾವಪಿ ಶಬ್ದಾದಿನಾಜ್ಞಾನದರ್ಶನಾತ್ । ಅಪರೋಕ್ಷಜ್ಞಾನೇ ಚ ಪ್ರತಿಬಂಧಕೀಭೂತಪ್ರಕೃತ್ಯಂಶರೂಪಮಾಯಾಂ ಭಗವಾನೇವಾಪಸಾರಯತಿ ಸ್ವಾತ್ಮಾನಂ ದರ್ಶಯತಿ ಚ । ನತು ದರ್ಶನ ಶಕ್ತ್ಯೈವ ತಪದಸರಣಂ । ಯೇನಾನ್ಯೋನ್ಯಾಶ್ರಯ ದೋಷಃ ಸ್ಯಾತ್ । ಅತಃ ಪ್ರತಿಬಂಧಕ-

ಮಪಸಾರಯನ್ನೇವ ಭಗವಾನ್ ದೋಷಮಪೀಮಮಸ್ಮನ್ಮತಾತ್ ಬಹಿರೇವಾಪಸಾರಯಾಮಾಸೇತಿ ಭಾವಃ ॥ ೮ ॥

ಭಾಗವತದ ಸಮ್ಮತಿ-

ಜಹ್ಯಜಾಮಜಿತೇತ್ಯಾಹ ತಸ್ಮಾದ್ ಭಾಗವತೇ ಶ್ರುತಿಃ ॥ ೯ ॥

ದೃಷ್ಟಶ್ಚ ಭಗವಾನೇಕಂ ಹೃದ್ಗ್ರಂಥಿಂ ಸ್ವಂ ಭಿನತ್ತ್ಯದಃ ।
ಅನ್ಯಂ ಚಾಪಸೃತಂ ಕುರ್ಯಾತ್ ತೇನಾಚ್ಛಾದಯತಿ ಕ್ವಚಿತ್ ॥ ೧೦ ॥

**ಅರ್ಥ–** ತಸ್ಮಾತ್= ಆದ್ದರಿಂದ, ಭಾಗವತೇ= ಭಾಗವತದಲ್ಲಿ, ಶ್ರುತಿಃ= ವೇದವು, ಜಹ್ಯಚಾಮಜಿತ ಇತಿ= ಎಲೈ ಅಜಿತನೇ ಪ್ರಕೃತಿಯನ್ನು ನಾಶಮಾಡು ಎಂದು, ಆಹ= ಹೇಳುತ್ತದೆ, ಭಗವಾನ್ ಚ= ಭಗವಂತನಾದರೂ, ಸ್ವಂ= ತನ್ನ ಏಕಂ ಹೃದ್ಗ್ರಂಥಿಂ= ಒಂದು ಪ್ರಕೃತ್ಯಂಶವನ್ನು, ಭಿನತ್ತಿ= ನಾಶಮಾಡುತ್ತಾನೆ. ಸಃ= ಆ, ಅಜಃ= ಪರಮಾತ್ಮನು, ಅನ್ಯಂ ಹೃದ್ಗ್ರಂಥಿಂ ಚ= ಪರಮಾಚ್ಛಾದಿಕೆಯೆಂಬ ಇನ್ನೊಂದು ಪ್ರಕೃತ್ಯಂಶವನ್ನೂ, ಅಪಸೃತಂ ಕುರ್ಯಾತ್= ಸ್ವಲ್ಪ ಸರಿಸುತ್ತಾನೆ. ಚ= ಮತ್ತು, ಕ್ವಚಿತ್= ಕೆಲವೆಡೆ, ತೇನ= ಆ ಪರಮಾಚ್ಛಾದಿಕೆಯಿಂದ, ಅಚ್ಛಾದಯತಿ= ಸ್ವಲ್ಪಭಾಗವನ್ನು ಮುಚ್ಚುತ್ತಾನೆ.

**ಅನುವಾದ–** ಆದ್ದರಿಂದಲೇ ಭಾಗವತದಲ್ಲಿ ಶ್ರುತಿಗೀತೆಯು 'ಜಹ್ಯಜಾಂ ಅಜಿತ' ಎಂದು ಹೇಳುತ್ತದೆ. ಭಗವದ್ದರ್ಶನವಾದಾಗ ಜೀವಾಚ್ಛಾದಕಾಜ್ಞಾನವು ನಾಶವಾಗುತ್ತದೆ. ಪರಮಾಚ್ಛಾದಕಅಜ್ಞಾನವನ್ನು ಪರಮಾತ್ಮನು ಅಪಸರಣ ಮಾಡುತ್ತಾನೆ. ಕೆಲವರಿಗೆ, ಈ ಅಚ್ಛಾದಕವನ್ನು ಸ್ವಲ್ಪವೇ ಸರಿಸುತ್ತಾನೆ. ಜೀವನಿಗೆ ಎರಡು ಬಗೆಯ ಆಚ್ಛಾದಿಕೆಯಿದೆ. ಇದನ್ನು ಸ್ವರೂಪಾಚ್ಛಾದಿಕೆ (ಜೀವಾಚ್ಛಾದಿಕೆ) ಮತ್ತು ಪರಮಾಚ್ಛಾದಿಕೆಯೆಂದು ಕರೆಯುತ್ತಾರೆ. ಇದರಲ್ಲಿ ಸ್ವರೂಪಾಚ್ಛಾದಿಕೆಯನ್ನು ನಾಶ ಮಾಡಿ, ಪರಮಾಚ್ಛಾದಿಕೆಯನ್ನು ಸ್ವಲ್ಪ ಮಾತ್ರ ಸರಿಸಿ ಪರಮಾತ್ಮನು ಮೋಕ್ಷವನ್ನು ನೀಡುತ್ತಾನೆ. 'ಸ್ವರೂಪಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ । ವ್ಯಾಘುಟ್ಯ ಮೋಕ್ಷಪದವೀಂ ದದಾತಿ ಪುರುಷೋತ್ತಮಃ ॥' ಎಂಬ ಪುರಾಣವಚನವು ಇದನ್ನು ತಿಳಿಸುತ್ತದೆ. ಅಲ್ಲದೇ, ಭಾಗವತದ ದಶಮಸ್ಕಂಧದ ಶ್ರುತಿಗೀತೆಯಲ್ಲಿ ಶ್ರುತಿಗಳೇ ಹಾಡಿದ ಮಾತೊಂದು ಹೀಗಿದೆ. 'ಜಯ ಜಯ ಜಹ್ಯಜಾಮಜಿತ ದೋಷಗೃಹೀತ-ಗುಣಾಮ್' ಎಂದು. ಇಲ್ಲಿ ಎರಡು ಬಾರಿ ಜಯ ಜಯ ಎಂದೆನ್ನುತ್ತಾ ಎರಡು ಬಗೆಯ ಆಚ್ಛಾದಿಕೆಯನ್ನು ತೆರವುಗೊಳಿಸುವಂತೆ ಪ್ರಾರ್ಥಿಸಲಾಗಿದೆ. 'ಓ ಅಜಿತನೇ, ನೀನು ಸರ್ವೋತ್ಕೃಷ್ಟನಾಗಿದ್ದಿ. ಸಂಸಾರಕಾರಣವಾದ ಈ ಪ್ರಕೃತಿಯ ಆಚ್ಛಾದನೆಯನ್ನು ತೆಗೆದುಹಾಕು, ಅಲ್ಲದೇ ಈ ಎರಡನೆಯ ಆಚ್ಛಾದನೆಯನ್ನು ಸರಿಸಿಬಿಡು ಎಂಬುದು ಈ ಶ್ರುತಿಗೀತೆಯ ಪ್ರಾರ್ಥನೆ.

'ಜಹ್ಯಜಾಮಜಿತ' ಎಂಬುದು ಶ್ರುತಿಯಲ್ಲ. ಭಾಗವತದ ಶ್ರುತಿಗೀತೆಯ ಮಾತು. ಆದರೂ, ಶ್ರುತಿದೇವಿಯರು ಭಗವಂತನನ್ನು ಹಾಡಿ ಎಬ್ಬಿಸುತ್ತಿರುವುದರಿಂದ 'ಶ್ರುತಿಃ ಭಾಗವತೇ ಆಹ' ಎಂದಿದ್ದಾರೆ ರಾಜರು.

'ಭಿದ್ಯತೇ ಹೃದಯಗ್ರಂಥಿಃ...ತಸ್ಮಿನ್ ದೃಷ್ಟೇ ಪರಾವರೇ' ಎಂಬ ಶ್ರುತಿಯಲ್ಲೂ ಇದೇ ವಿಷಯವನ್ನು ಹೇಳಲಾಗಿದೆ ಎಂಬುದು ಹೃದಯಗ್ರಂಥಿಪದವನ್ನು ಬಳಸಿದ ರಾಜರ ಭಾವ.

**ಭಾವವಿಲಾಸಿನೀ–** ಉಕ್ತಾರ್ಥೇ ಪ್ರಮಾಣಂ ಚಾಹ – ಜಹೀತಿ ॥ ಅನೇನ ಜಯ ಜಯ ಜಹ್ಯಜಾಮಜಿತದೋಷಗೃಹೀತಗುಣಾಮಿತಿ ಶ್ರುತಿಗೀತಾವಾಕ್ಯಂ ಸಂಗೃಹ್ಣಾತಿ । ಜಹಿಶಬ್ದಶ್ಚಾತ್ರ ಶ್ರುತಿಗೀತಾವಾಕ್ಯಸ್ಥಜಯಶಬ್ದದ್ವಯಸ್ಯಾಪ್ಯುಪಲಕ್ಷಃ । ಹೇ ಅಜಿತ ಪರಮಾತ್ಮನ್ । ಜಯ ಉತ್ಕೃಷ್ಟೋ ವರ್ತಸ್ವ । ತ್ವಮೇವ ಅಜಾಂ ಜ್ಞಾನಪ್ರತಿಬಂಧಪ್ರಕೃತಿಂ ಜಹಿ ನಾಶಯ । ಜಯ ಅಪಸಾರಯ ಚೇತ್ಯಾಹೇತಿ ಸಂಬಂಧಃ । ತಸ್ಮಾತ್ ಜ್ಞಾನೇನೈವಾಜ್ಞಾನ ನಿವೃತ್ತಾವನ್ಯೋ-ನ್ಯಾಶ್ರಯಾತ್ । ಶ್ರುತಿಃ ಭಗವತೇ ಶ್ರುತಿಗೀತಾವಾಕ್ಯಂ । ಶ್ರುತಿಪ್ರತಿರೂಪತ್ವಾಚ್ಛ್ರುತಿರಿತ್ಯುಕ್ತಂ । ಭಾಗವತ ಇತ್ಯುಪಲಕ್ಷಣಮ್ । ''ಸ್ವರೂಪಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಃ । ವ್ಯಾಘುಟ್ಯಮೋಕ್ಷಪದವೀಂ ದದಾತಿ ಪುರುಷೋತ್ತಮ'' ಇತಿ ಪುರಾಣಾಂತರವಚನಮಪಿ ದ್ರಷ್ಟವ್ಯಂ ॥ ೯ ॥

ಏತದೇವ ವಿಶದಯತಿ – ದ್ರಷ್ಟುಶ್ಚೇತಿ ॥ ಭಿನತ್ತಿ ದಗ್ಧಪಟಾಯಿತಾಂ ಕರೋತಿ । ಅಪಸೃತಂ ಈಷದಪಸೃತಮ್ । ಸರ್ವಥಾ ನಾಶೋಪಸರಂ ಚ ಪರಮಮುಕ್ತಿ ದಶಾಯಾಮೇವೇತಿ ದ್ರಷ್ಟವ್ಯಂ ॥ ೧೦ ॥

ಜೀವನ್ಮುಕ್ತಿ ಎಂದರೆ-

**ಅತಃ ಕದಾಚಿದ್ ದೃಶ್ಯೋऽಸಾವದೃಶ್ಯೋऽಪಿ ಕದಾಚನ ।**
**ಆಮುಕ್ತೇಶ್ಚ ವ್ಯವಸ್ಥೇಯಂ ಜೀವನ್ಮುಕ್ತಿಶ್ಚ ಸಾ ಮತಾ ॥ ೧೧ ॥**

**ಅರ್ಥ–** ಅತಃ=ಹೀಗೆ ಮನಸ್ಸಿಗೆ ಪ್ರಕೃತಿ (ಮಾಯೆ)ಯೆಂಬ ಪ್ರತಿಬಂಧಕವಿದ್ದು ಅದು ಭಗವತ್‌ಪ್ರಸಾದದಿಂದ ನಿವೃತ್ತವಾಗುತ್ತದೆಯೆಂದು ಒಪ್ಪಿರುವುದರಿಂದ, ಅಸೌ=ನಮ್ಮ ಸಿದ್ಧಾಂತದಲ್ಲಿ ಭಗವಂತನು, ಕದಾಚಿತ್=ಕೆಲಕಾಲದ ತನಕ, ದೃಶ್ಯ=ದೃಶ್ಯನಾಗಿದ್ದು, ಕದಾಚನ ಅದೃಶ್ಯೋऽಪಿ=ಕೆಲಕಾಲದಲ್ಲಿ ಅದೃಶ್ಯನಾಗಬಹುದು. ಇಯಂ ಚ= ಇದಾದರೂ, ಆಮುಕ್ತೇಃ= ಮುಕ್ತಿಯವರೆಗಿನ, ವ್ಯವಸ್ಥಾ= ವ್ಯವಸ್ಥೆಯಾಗಿದೆ. ಸಾಚ= ಭಗವದಪರೋಕ್ಷವಾಗಿ, ಪ್ರಾರಬ್ಧ ಕರ್ಮಾವಸಾನಪರ್ಯಂತವಾದ ಅವಸ್ಥೆಯಾದರೂ, ಜೀವನ್ಮುಕ್ತಿಃ= ಜೀವನ್ಮುಕ್ತಿಯೆಂದು, ಮತಾ= ಕರೆಯಲ್ಪಟ್ಟಿದೆ.

**ಅನುವಾದ–** ಹೀಗೆ ಅಜ್ಞಾನ ಪ್ರತಿಬಂಧಕವಿರುವ ಕಾರಣ ಬ್ರಹ್ಮನು ಕೆಲವು ಸಮಯದಲ್ಲಿ ಮಾತ್ರ ಕಾಣುತ್ತಾನೆ. ಮತ್ತು ಕೆಲವು ಸಮಯದಲ್ಲಿ ಕಾಣುವುದಿಲ್ಲ. ಮೋಕ್ಷ-ವಾಗುವವರೆಗೂ ಇದೇ ಸ್ಥಿತಿಯು ಇರುವುದು. ಅನಂತರ ಸದಾ ಬ್ರಹ್ಮದರ್ಶನ-ವಾಗುವುದು. ಮೋಕ್ಷಕ್ಕಿಂತ ಪೂರ್ವದ ಈ ಸ್ಥಿತಿಯೇ ಜೀವನ್ಮುಕ್ತಿ ಎನಿಸಿದೆ.

**ಭಾವವಿಲಾಸಿನೀ–** ಸಾ ವ್ಯವಸ್ಥಾ ॥ ೧೧ ॥

**ವಿವರಣೆ–** 'ಮನಸಃ ಪ್ರತಿರೋಧೇ ಹಿ' ಎಂಬ ಶ್ಲೋಕದಲ್ಲಿ ಪರವಾದಿಗಳ ಮತದಲ್ಲಿ ಅನ್ಯೋನ್ಯಾಶ್ರಯದೋಷವನ್ನು ಹೇಳುತ್ತಾ ಎಂದೆಂದೂ ಬ್ರಹ್ಮನ ಅಪರೋಕ್ಷ-ವಿರಬೇಕಾಗುತ್ತದೆ ಎಂದು ಆಕ್ಷೇಪಿಸಿದ್ದೇವೆ. ನಮ್ಮ ಮತದಲ್ಲಿ ಆ ದೋಷವಿಲ್ಲವೆಂದು ಇಲ್ಲಿ ತಿಳಿಸಲಾಗಿದೆ. ಪ್ರತಿಬಂಧಕವಾದ ಪ್ರಕೃತಿಯ ಆಚ್ಛಾದನೆಯು ಇರುವಾಗ ದೇವನು ಅದೃಶ್ಯನಾಗಿದ್ದು ಆಚ್ಛಾದನೆಯನ್ನು ದೇವನು ಸರಿಸಿದಾಗ ದೃಶ್ಯನೂ ಆಗುತ್ತಾನೆ. ಭಗವದ್ದರ್ಶನದ ನಂತರದಲ್ಲಿ ಆತ ಜೀವನ್ಮುಕ್ತನೆನಿಸುತ್ತಾನೆ.

**ಯದಿ ಜ್ಞಾನೇನೈವ ಕಾರ್ಯೈಃ ಸಹಾಜ್ಞಾನಂ ನಿವರ್ತತೇ ।**
**ತದಾ ಮೋಕ್ಷವಿಲಂಬಸ್ಯ ನ ಕಿಂಚಿತ್ ಕಾರಣಂ ತವ ॥ ೧೨ ॥**

**ಅರ್ಥ–** ಯದಿ= ಒಂದು ವೇಳೆ, ಜ್ಞಾನೇನೈವ= ಅಪರೋಕ್ಷಜ್ಞಾನದಿಂದಲೇ, ಕಾರ್ಯೈಃ ಸಹ= ತನ್ನ ಕಾರ್ಯಗಳೊಂದಿಗೆ, ಅಜ್ಞಾನಂ ನಿವರ್ತತೇ= ಅಜ್ಞಾನವು ನಾಶ-ವಾಗುವುದಾದಲ್ಲಿ, ತದಾ= ಆಗ, ತವ= ಅದ್ವೈತವಾದಿಯಾದ ನಿನಗೆ, ಮೋಕ್ಷವಿಲಂಬಸ್ಯ= ಮೋಕ್ಷವು ವಿಲಂಬವಾಗಿ ದೊರೆಯುವುದಕ್ಕೆ, ನ ಕಿಂಚಿತ್ ಕಾರಣಂ= ಯಾವ ಕಾರಣವೂ ಇಲ್ಲ.

**ಅನುವಾದ–** ಅಪರೋಕ್ಷಜ್ಞಾನದಿಂದಲೇ ಅಜ್ಞಾನವೂ ಅಜ್ಞಾನದ ಕಾರ್ಯವೆನಿಸಿದ ಸಂಸಾರಬಂಧವೂ ನಿವೃತ್ತಿಯಾಗುವುದೆಂಬ ಅದ್ವೈತ ಮತದಲ್ಲಿ ಅಪರೋಕ್ಷಜ್ಞಾನಿಗೆ ಮೋಕ್ಷವಿಲಂಬವಾಗುವುದಕ್ಕೆ ಕಾರಣವಿಲ್ಲವಾಗುತ್ತದೆ. ಇದರಿಂದ ಜೀವನ್ಮುಕ್ತ್ಯ-ವಸ್ಥೆಯೇ ಇಲ್ಲವಾಗಬೇಕಾಗುತ್ತದೆ.

**ಭಾವವಿಲಾಸಿನೀ–** ಜ್ಞಾನಸ್ವಭಾವೇನೈವಮುಕ್ತಿರಿತಿ ಪಕ್ಷೇ ದೋಷಾಂತರಂ ಚಾಹ – **ಯದೀತಿ** ॥ ಕಾರ್ಯೈಃ ಕಾಮಕರ್ಮಾದಿಭಿಃ । ತ್ರಿಕ್ಷಣಾವಸ್ಥಾಯಿಜ್ಞಾನಸ್ವಭಾವೇನೈವಮುಕ್ತಿರಿತಿ ಮತೇ ಜ್ಞಾನೋತ್ತರಕ್ಷಣ ಏವ ಮೋಕ್ಷಸ್ಯಾದಿತಿ ಭಾವಃ ॥ ೧೨ ॥

**ವಿವರಣೆ–** ಬ್ರಹ್ಮಸಾಕ್ಷಾತ್ಕಾರವಿದ್ದೂ ಶರೀರಯಾತ್ರೆಯನ್ನು ನಡೆಸುವ ವಸಿಷ್ಠ-ವಾಮದೇವಾದಿಗಳ ಬಗ್ಗೆ ಶಾಸ್ತ್ರಗಳು ನಿರೂಪಿಸುತ್ತಿವೆ. ಇವರನ್ನು ಜೀವನ್ಮುಕ್ತರೆನ್ನಲಾಗುತ್ತದೆ. ಅದ್ವೈತವಾದದಲ್ಲಿ ಇಂತಹ ಜೀವನ್ಮುಕ್ತರಿರುವುದು ಅಸಾಧ್ಯ.

ಸಾಕ್ಷಾತ್ಕಾರವು ತನ್ನ ಸ್ವಭಾವದಿಂದಲೇ ಅಜ್ಞಾನವನ್ನೂ ಅಜ್ಞಾನಕಾರ್ಯವೆನಿಸಿದ ಶರೀರಾದಿ ಪ್ರಪಂಚವನ್ನೂ ನಿವೃತ್ತಿ ಮಾಡಿದರೆ ಜ್ಞಾನೋತ್ತರಕ್ಷಣದಲ್ಲೇ ಮೋಕ್ಷವಾಗಬೇಕಾಗುತ್ತದೆ. ಇದನ್ನೇ ಟೀಕಾಕೃತ್ಪಾದರು ನ್ಯಾಯಸುಧಾದಲ್ಲಿ ಹೀಗೆ ಹೇಳಿ 'ಯದಿ ಚ ಜ್ಞಾನಮಾತ್ರಾದ್ ಬಂಧಬಾಧಃ ತದಾ ಜ್ಞಾನೇ ಸತಿ ಕಿಮಪಿ ಮುಕ್ತಿರ್ನ್ಯವಾಪೇಕ್ಷತೇ ಇತಿ ಸದ್ಯ ಏವ ಸಾಕ್ಷಾತ್ಕೃಬ್ರಹ್ಮಣಾಂ ಶರೀರಾದಿನಿವೃತ್ತಿಃ ಪ್ರಸಜ್ಯೇತ'

ದ್ವೈತದರ್ಶನದಲ್ಲಿ ಜೀವನ್ಮುಕ್ತಿಯನ್ನು ಸಮರ್ಥಿಸಬಹುದು-

ಸ್ವತಂತ್ರಶ್ಚೇತ್ ಪ್ರಭುರ್ಮಧ್ಯೇ ಸ್ವೇಚ್ಛಯಾ ಸ ನಿವರ್ತಯೇತ್ ।
ಸ್ವತಂತ್ರಶ್ಚ ನಿಯೋಗಾರ್ಹೋ ನೇತ್ಯಾಹುರ್ಹಿ ಮನೀಷಿಣಃ ॥ ೧೩ ॥

**ಅರ್ಥ–** ಸ್ವತಂತ್ರಃ ಪ್ರಭುಃ= ಸ್ವತಂತ್ರನಾದ ಸ್ವಾಮಿಯು, (ಅಸ್ತಿ) ಚೇತ್= ಇದ್ದರೆ, ಮಧ್ಯೇ= ಅಪರೋಕ್ಷ ಮತ್ತು ಮೋಕ್ಷಗಳ ಮಧ್ಯದ ಸಮಯದಲ್ಲಿ, ಸಃ= ಅವನು, ಸ್ವೇಚ್ಛಯಾ= ತನ್ನಿಚ್ಛೆಯಿಂದ (ಬಂಧಂ) ನಿವರ್ತಯೇತ್= ಬಂಧವನ್ನು ನಾಶ ಮಾಡಿಯಾನು. ಸ್ವತಂತ್ರಶ್ಚ= ಸ್ವತಂತ್ರನಾದವನು, ನಿಯೋಗಾರ್ಹಃ ನ= ನಿರ್ಬಂಧಕ್ಕೆ ಯೋಗ್ಯನಲ್ಲ, ಇತಿ= ಹೀಗೆ, ಮನೀಷಿಣಃ= ಜ್ಞಾನಿಗಳು, ಆಹುಃ= ಹೇಳುತ್ತಾರೆ.

**ಅನುವಾದ–** ಸ್ವತಂತ್ರನಾದ ಒಬ್ಬ ಪ್ರಭುವಿದ್ದರೆ ಅವನು ಅಪರೋಕ್ಷಜ್ಞಾನ ಮತ್ತು ಮೋಕ್ಷಗಳ ಮಧ್ಯದ ಸಮಯದಲ್ಲಿ ತನ್ನ ಇಚ್ಛೆಗನುಗುಣವಾಗಿ ಅಪಸರಣವನ್ನು ಹಿಂದೆಗೆಯಬಹುದು ಸ್ವತಂತ್ರನಾದವನ ಇಚ್ಛೆಯನ್ನು ನಿಯಂತ್ರಿಸಲು ಸಾಧ್ಯವಿಲ್ಲವೆಂದು ಜ್ಞಾನಿಗಳು ಹೇಳುತ್ತಾರೆ.

**ಭಾವವಿಲಾಸಿನೀ–**ಸ್ವಮತೇ ತು ನಾಯಂ ದೋಷ ಇತ್ಯಾಹ–ಸ್ವತಂತ್ರ ಇತಿ ॥ ಚೇತ್ ಅಸ್ತಿಚೇತ್ । ಸಃ ಸ್ವತಂತ್ರಪುರುಷಃ ॥ ೧೩ ॥

**ವಿವರಣೆ–** ಪರಮಾಚ್ಛಾದಿಕವನ್ನು ಅಪಸರಣವನ್ನು ಮಾಡಿದಾಗ ಹರಿಯು ದೃಶ್ಯನಾಗುತ್ತಾನೆ. ಅಪಸರಣವನ್ನು ಹಿಂದೆ ತೆಗೆದುಕೊಂಡರೆ ಹರಿಯು ಅದೃಶ್ಯ-ನಾಗುತ್ತಾನೆ. ಅವನ ಇಚ್ಛೆಯನ್ನು ಪ್ರಶ್ನಿಸುವಂತಿಲ್ಲ. ಹೀಗೆ ಜೀವನ್ಮುಕ್ತವಸ್ಥೆಯಲ್ಲಿ ಆಗಾಗ ದೇವರದರ್ಶನ ಮತ್ತು ಅದರ್ಶನಗಳು ಕೂಡುತ್ತವೆ ಎಂದು ಅಭಿಪ್ರಾಯ.

ಮುಕುಂದನೊಬ್ಬನೇ ಮೋಕ್ಷದಾನಸಮರ್ಥ-

ವರಂ ವರಯ ಭದ್ರಂ ತೇ ಋತೇ ಕೈವಲ್ಯಮಾತ್ಮನಃ ।
ಏಕ ಏವೇಶ್ವರಸ್ತಸ್ಯ ಭಗವಾನ್ ವಿಷ್ಣುರಚ್ಯುತಃ ॥
ಇತಿ ಭಾಗವತೇ ಪ್ರೋಕ್ತಂ ತದ್ಧಿ ದೇವಾನುಶಾಸನಮ್ ॥ ೧೪ ॥

**ಅರ್ಥ**– ತೇ= ನಿನಗೆ, ಭದ್ರಮಸ್ತು= ಮಂಗಳವಾಗಲಿ, ಆತ್ಮನಃ= ನಿನಗೆ, ಕೈವಲ್ಯಂಋತೇ= ಮೋಕ್ಷವನ್ನು ಹೊರತು ಬೇರೆಯಾದ, ವರಂ= ವರವನ್ನು, ವರಯ= ಕೇಳು, ತಸ್ಯ= ಆ ಮೋಕ್ಷದಾನಕ್ಕೆ, ಭಗವಾನ್ ಅಚ್ಯುತಃ ವಿಷ್ಣುಃ ಏಕ ಏವ ಈಶ್ವರಃ= ಭಗವಂತನಾದ ನಾಶರಹಿತನಾದ ವಿಷ್ಣು ಒಬ್ಬನೇ ಸಮರ್ಥ, ಇತಿ= ಹೀಗೆ, ಭಾಗವತೇ ಪ್ರೋಕ್ತಂ= ಭಾಗವತದಲ್ಲಿ ಹೇಳಲ್ಪಟ್ಟಿದೆ, ತತ್= ಅದು, ದೇವಾನುಶಾಸನಂ ಹಿ= ದೇವತೆಗಳೇ ಹೇಳಿದ್ದಷ್ಟೇ.

**ಅನುವಾದ**– ಭಾಗವತದಲ್ಲಿ ಮುಚುಕುಂದನನ್ನು ಕುರಿತು ದೇವತೆಗಳು ಹೇಳುತ್ತಾ, 'ಮುಚುಕುಂದನೇ! ನಿನಗೆ ಮಂಗಳವಾಗಲಿ. ಮೋಕ್ಷವೊಂದನ್ನು ಹೊರತು ಬೇರೆ ವರವನ್ನು ಕೇಳು. ಮೋಕ್ಷ ಕೊಡುವುದಕ್ಕೆ ಪೂರ್ಣನಾದ ಭಗವಾನ್ ವಿಷ್ಣುವೊಬ್ಬನೇ ಸಮರ್ಥ.' ಹೀಗೆಂದು ಭಾಗವತದಲ್ಲಿ ಹೇಳಿದೆ. ಈ ಮಾತು ದೇವತೆಗಳೆಂದುದು.

**ಭಾವವಿಲಾಸಿನೀ**– ಭಗವತ ಏವ ಮೋಕ್ಷದಾತೃತ್ವೇ ನಿರವಕಾಶಪ್ರಮಾಣಮಾಹ– **ವರಮಿತಿ** ॥ ಆತ್ಮನಃ ಸ್ವಸ್ಯ । ಕೈವಲ್ಯಂ ಮೋಕ್ಷಮೃತ ಇತಿಸಂಬಂಧಃ । ತಸ್ಯ ಕೈವಲ್ಯಸ್ಯ । ಈಶ್ವರಃ ದಾನೇ ಸಮರ್ಥಃ । ಸಾವಧಾರಣತಯಾ ವಿಷ್ಣೋರೇವ ಕೈವಲ್ಯದಾತೃತ್ವಕಥನಾನ್ನಿರವಕಾಶಮಿದಂ ವಾಕ್ಯಮ್ । ಕೇಷಾಮಿದಂ ವಚನಮಿತ್ಯತ ಆಹ–ತದ್ವಿತಿ ॥ ತತ್ ವಾಕ್ಯಮ್ । ದೇವಾನುಶಾಸನಂ ಮುಚುಕುಂದಂ ಪ್ರತಿ ದೇವಾನಾಮನುಷಾಸನಮ್ । ಸ್ವಜ್ಞಾನಮಹಿಮ್ನೈವಮೋಕ್ಷಸ್ಯಸ್ವ ಸಂಬಂಧಿತ್ವಾಭಾವಂ ಸೂಚಯಿತುಂ ಸ್ವಪ್ರತಿಪಾದಕಕೈವಲ್ಯ ಪ್ರತಿಪಾದಕಪಾದಯೋರ್ವಿಸಂಧಿ ಕರಣಮ್ । ''ವರಂ ವರಯೇತಿ ಭದ್ರಂ ತೇ'' ಇತಿ ಚ ದೇವೈಸ್ಸ್ವೋಪಕಾರಕಮುಚುಕುಂದಂ ಪ್ರತ್ಯಾಶೀರ್ದಾನೇನ ಸ್ವೋಪಕಾರವಿಮೋಚನೇಽಪ್ಯಸಮರ್ಥಾ ವಯಂ ನ ಕೈವಲ್ಯದಾನೇ ಸಮರ್ಥಾ ಇತಿ ಸೂಚಯತಿ । ಅತ ಏವ ಋತೇ ಕೈವಲ್ಯಮಿತ್ಯಾಹುಃ । ಅನೇನೈವೇಷ್ಟದಾಯಕತ್ವ-ರೂಪಮಿಷ್ಟ ದೈವತ್ವಂ ಚ ನ ಸ್ವೇಷಾಮಿತಿ ಸೂಚಯಂತಿ । ಏತಾವತೈವ ಸ್ವವಕ್ತವ್ಯಾರ್ಥಸ್ಯ ಪೂರ್ಣತ್ವೇಽಪಿ ಪುನರುತ್ತರಾರ್ಧೇ ವ್ಯಾಪ್ತತ್ವಾತ್ ವಿಶಿಷ್ಟಬಲನಿಯಮನಶೀಲತ್ವ-ಸಮಗ್ರೈಶ್ವರ್ಯಾದಿಗುಣಭರಿತತ್ವಾತ್ ದೇಹಾದೇರಪಿಚ್ಯುತಿರಹಿತತ್ವೇನ ನಿತ್ಯಮುಕ್ತತ್ವಾಚ್ಚಾ ಮೋಕ್ಷದಾನಸಮರ್ಥಮ್, ಅತ ಏವ ಪರಮೇಷ್ಟದೈವರೂಪಮನೀದೃಶಂ ಸ್ವಭಿನ್ನಂ ಚ ಭಗವಂತಮುಪದಿಶಂತಸ್ಸ್ವಜಗದ್ಗುರುತಾಂ ಚ ಸೂಚಯಂತಿ । ಸಾಕ್ಷಾದ್ದೇವೈರೇವೇತ್ಥ-ಮನುಶಾಸನಾಚ್ಚ ವಿಷ್ಣೋರನ್ಯದೇವನಾಂ ನ ಕೈವಲ್ಯದಾತೃತ್ವಮಿತಿ ಭಾವಃ ॥ ೧೪ ॥

**ವಿವರಣೆ**– ವಿಷ್ಣುವೊಬ್ಬನೇ ಮೋಕ್ಷವನ್ನು ಕೊಡುವವ. ಇತರ ದೇವತೆಗಳು ಮೋಕ್ಷವನ್ನು ಕೊಡಲಾರರು. ಇನ್ನು ಅಚೇತನವಾದ ಜ್ಞಾನವು ಮೋಕ್ಷವನ್ನು ಕೊಡುವುದೆಂತು ಎಂಬ ಅಭಿಪ್ರಾಯದಿಂದ ಭಾಗವತದ ಮಾತನ್ನು ರಾಜರು ಇಲ್ಲಿ ಉದಾಹರಿಸಿದ್ದಾರೆ.

ರಾಜಾ ಮುಚುಕುಂದನು ದೈತ್ಯಸಂಹಾರದಲ್ಲಿ ದೇವತೆಗಳಿಗೆ ಉಪಕರಿಸಿದ. ಉಪಕೃತರಾದ ದೇವತೆಗಳು ಅವನಿಗೆ ಮಂಗಳವನ್ನು ಹಾರೈಸಿ ವರವನ್ನು ಬೇಡುವಂತೆ ಕೇಳುತ್ತಾರೆ. ಮೋಕ್ಷವೊಂದನ್ನು ಕೇಳಬೇಡ. ಅದನ್ನು ಕೊಡುವುದಕ್ಕೆ ನಮಗೆ ಸಾಮರ್ಥ್ಯವಿಲ್ಲ. ಏಕೆಂದರೆ, ನಾವು ಅಚ್ಯುತರಲ್ಲ. ಶರೀರನಾಶವುಳ್ಳವರು. ನಿತ್ಯಶರೀರದಿಂದ ನಿತ್ಯಮುಕ್ತನಾದ್ದರಿಂದಲೇ ಅಚ್ಯುತನೆನಿಸಿದ ಭಗವಂತ ವಿಷ್ಣುವೊಬ್ಬನೇ ಮೋಕ್ಷದಾನದಲ್ಲಿ ಸಮರ್ಥ ಎಂಬುದು ದೇವತೆಗಳ ಮಾತು.

ಇಲ್ಲಿ ಸುರೋತ್ತಮತೀರ್ಥರೆನ್ನುತ್ತಾರೆ - ಈ ದೇವತೆಗಳ ಮಾತಿನಿಂದ 'ಇಷ್ಟಂ ದೈವಂ ಶ್ರಿಯಃ ಪತಿಃ' ಎಂಬುದು ಸ್ಪಷ್ಟವಾಯಿತು. ಇಷ್ಟವಾದುದನ್ನು ಕೊಡುವ ದೇವತೆಗೆ ಇಷ್ಟದೇವತೆಯೆಂದು ಹೆಸರು. ಪರಮೇಷ್ಟವಾದ ಮೋಕ್ಷವನ್ನು ಕೊಡಲಾರದ ದೇವತೆಗಳು ಇಷ್ಟದೇವತೆಗಳಾಗಲಾರರು. ಶ್ರೀಪತಿಯೊಬ್ಬನೇ ಇಷ್ಟದೇವತೆ.

ಹಿಂದೆ ಜೀವನ್ಮುಕ್ತಿಯನ್ನು ನಿರೂಪಿಸಲಾಗಿದೆ. ಇದೀಗ ಪರಮ ಮುಕ್ತಿಪ್ರದಾನವೆಂಬ ಭಗವನ್ಮಹಿಮೆಯನ್ನು ವಿವರಿಸುತ್ತಿದ್ದಾರೆ.

**ಮುಕ್ತೌ ಗ್ರಂಥಿದ್ವಯಂ ಸಮ್ಯಜ್ ಮೋಚಯೇತ್ ಮುಕ್ತಚೇತನಾತ್ ।**
**ಬಂಧಂ ಮನೋಮಾನಲಿಂಗದೇಹಾತ್ಮಾನಂ ಚ ಮೋಚಯೇತ್ ॥**
**ಮುಕ್ತೌ ಸ್ವರೂಪನಿಷ್ಪತ್ತ್ಯಾ ತಸ್ಯ ಸ್ವಚ್ಛಂದದರ್ಶನಮ್ ॥ ೧೫ ॥**

**ಅರ್ಥ–** ಮುಕ್ತೌ= ಮೋಕ್ಷದಲ್ಲಿ, ಮುಕ್ತಚೇತನಾತ್= ಮುಕ್ತರಾದ ಆತ್ಮರಿಂದ, ಗ್ರಂಥಿದ್ವಯಂ= ಜೀವಾಚ್ಛಾದಕ ಮತ್ತು ಪರಮಾಚ್ಛಾದಕ ಎಂಬ ಎರಡೂ ಅಜ್ಞಾನಗಳನ್ನು, ಸಮ್ಯಕ್= ಚೆನ್ನಾಗಿ, ಮೋಚಯೇತ್= ವಿಷ್ಣುವು ಬಿಡುಗಡೆಗೊಳಿಸುತ್ತಾನೆ. ಮನೋಮಾನ-ಲಿಂಗದೇಹಾತ್ಮಾನಂ, ಬಂಧಂ ಚ= ಮನಸ್ಸು, ನಾನಾವಿಧವಾದ ಅಭಿಮಾನ ಹಾಗೂ ಲಿಂಗದೇಹ ರೂಪವಾದ ಬಂಧವನ್ನೂ, ಮೋಚಯೇತ್= ಬಿಡುಗಡೆಗೊಳಿಸುತ್ತಾನೆ. ಮುಕ್ತೌ= ಮೋಕ್ಷದಲ್ಲಿ, ಸ್ವರೂಪನಿಷ್ಪತ್ತ್ಯಾ= ಸ್ವಸ್ವರೂಪದ ಆವಿರ್ಭಾವವಾಗುವ ಕಾರಣದಿಂದಾಗಿ, ತಸ್ಯ ಮುಕ್ತಸ್ಯ= ಆ ಮುಕ್ತನಿಗೆ, ಸ್ವಚ್ಛಂದ ದರ್ಶನಂ ಚ ಭವತಿ= ಸ್ವಚ್ಛಂದವಾಗಿ, ಯಾವ ತಡೆಯೂ ಇಲ್ಲದ ಬ್ರಹ್ಮದರ್ಶನವಾಗುತ್ತದೆ.

**ಅನುವಾದ–** ಭಗವಂತನು ಪರಮಮುಕ್ತಿಯ ಕಾಲದಲ್ಲಿ ಮುಕ್ತನಾಗುವ ಜೀವನ ಸ್ವರೂಪಾಚ್ಛಾದಿಕೆ ಪರಮಾಚ್ಛಾದಿಕೆಗಳೆಂಬ ಎರಡೂ ಹೃದಯಗ್ರಂಥಿಗಳನ್ನು ಸರಿಯಾಗಿ ಬಿಡಿಸುತ್ತಾನೆ. ಅಲ್ಲದೇ, ನಾನಾಬಗೆಯ ಮನೋಭಿಮಾನ ಮತ್ತು ಲಿಂಗದೇಹರೂಪವಾದ ಬಂಧವನ್ನೂ ಬಿಡಿಸುತ್ತಾನೆ. ಈ ಮುಕ್ತಿಯಲ್ಲಿ ಸ್ವರೂಪದ ಪೂರ್ಣಾಭಿವ್ಯಕ್ತಿಯಿರುವುದರಿಂದ ಎಂದೆಂದೂ ಭಗವಂತನ ದರ್ಶನವಿರುತ್ತದೆ.

**ಭಾವವಿಲಾಸಿನೀ–** ಪ್ರಾಕ್ ಜೀವನ್ಮುಕ್ತಿದಾನಂ ವರ್ಣಿತಮ್ । ಇದಾನೀಂ ಪರಮ-ಮುಕ್ತಿದಾನಪ್ರಕಾರಮಪಿ ವರ್ಣಯತಿ – **ಮುಕ್ತಾವಿತಿ** ॥ ಪರಮಮುಕ್ತಾವಿತ್ಯರ್ಥಃ । ಗ್ರಂಥಿದ್ವಯಂ

**ಸ್ವಾಚ್ಛಾದಕಪರಮಾಚ್ಛಾದಕಪ್ರಕೃತ್ಯಂಶಾಖ್ಯಹೃದ್ಗ್ರಂಥಿದ್ವಯಮ್ । ಮನೋಮಾನಲಿಂಗ-ದೇಹಾತ್ಮಾನಂ ಬಂಧಂ ಮಾನೋಽಭಿಮಾನಃ । ಅವಿದ್ಯಾನಿಮಿತ್ತಕತದತಿರಿಕ್ತಬಂಧಸ್ವರೂಪ-ನಿರೂಪಣಾರ್ಥಮಿದಮ್ । ತಸ್ಯ ಮುಕ್ತಸ್ಯ ॥ ೧೫ ॥**

**ವಿವರಣೆ–** ಅಪರೋಕ್ಷಜ್ಞಾನಕಾಲದಲ್ಲಿ ಭಗವಂತನು ಜೀವನ ಸ್ವರೂಪಾಚ್ಛಾದಿಕೆಯನ್ನು ದಗ್ಧಪಟಾಯಿತವನ್ನಾಗಿಸಿದ್ದ. ಎಂದರೆ, ಅದು ಇದ್ದೂ ಇಲ್ಲದಂತೆ ಮಾಡಿದ್ದ. ಪೂರ್ತಿ ನಾಶವನ್ನು ಮಾಡಿರಲಿಲ್ಲ. ಹಾಗೆಯೇ, ಪರಮಾಚ್ಛಾದಿಕೆಯನ್ನು ಸ್ವಲ್ಪ ಮಾತ್ರ ಸರಿಸಿದ್ದ. ಇದೀಗ ಪ್ರಾರಬ್ಧಭೋಗಾನಂತರ ಈಗಾಗಲೇ ನಿಸ್ಸತ್ವವಾಗಿ ಸುಟ್ಟ ಬಟ್ಟೆಯಂತಿರುವ ಸ್ವರೂಪಾಚ್ಛಾದಿಕೆಯನ್ನು ಪೂರ್ತಿಯಾಗಿ ನಾಶಮಾಡುತ್ತಾನೆ. ಪರಮಾಚ್ಛಾದಿಕೆಯನ್ನು ಇನ್ನೂ ಜಾಸ್ತಿ ಸರಿಸುತ್ತಾನೆ. ಇದನ್ನು ಸುರೋತ್ತಮತೀರ್ಥರು ಹಿಂದೆ 'ದೃಷ್ಟಶ್ಚ ಭಗವಾನೇಕಂ ಹೃದ್ಗ್ರಂಥಿಂ ಸ್ವಂ ಭಿನತ್ತ್ಯಜಃ । ಅನ್ಯಂ ಚಾಪಸೃತಂ ಕುರ್ಯಾತ್' ಎಂಬ ಶ್ಲೋಕದ ವ್ಯಾಖ್ಯಾನದಲ್ಲಿ ಬರೆದಿದ್ದಾರೆ. ಅಲ್ಲಿ ಅವರ ವಾಕ್ಯ 'ಭಿನತ್ತಿ=ದಗ್ಧಪಟಾಯಿತಾಂ ಕರೋತಿ । ಅಪಸೃತಂ=ಈಷದಪಸೃತಂ । ಸರ್ವಥಾ ನಾಶಃ ಅಪಸರಣಂ ಚ ಪರಮಮುಕ್ತಿದಶಾಯಾಮೇವೇತಿ ದ್ರಷ್ಟವ್ಯಮ್'

ಹಿಂದೆ ಜೀವನ್ಮುಕ್ತಿಕಾಲದಲ್ಲಿ ಅವಿದ್ಯೆಯೆಂಬ ಬಂಧದ ನಿವೃತ್ತಿಯಾಗಿದೆ. ಮತ್ತೆ ಇದೀಗ ಇನ್ನೊಮ್ಮೆ ನಿವೃತ್ತಿಯಾಗುವ ಬಂಧದ ಸ್ವರೂಪವೇನು ಎಂಬ ಪ್ರಶ್ನೆಗೆ ಉತ್ತರವಾಗಿ 'ಮನೋಮಾನಲಿಂಗದೇಹಾತ್ಮಾನಂ ಬಂಧಂ' ಎನ್ನಲಾಗಿದೆ. ತನ್ನ ಸ್ವರೂಪವಲ್ಲದ ಲಿಂಗದೇಹದಲ್ಲಿರುವ ಮನಸ್ಸು ಮಾನವೆಂದರೆ ಅಭಿಮಾನ ಇವುಗಳೂ ಬಂಧಗಳು. ಜೀವ ರೂಪದೊಂದಿಗೆ ಅನಾದಿಕಾಲದಿಂದ ಅಂಟಿ ಬಂದ ಪ್ರಕೃತಿ ಬಂಧಕ್ಕೆ ಲಿಂಗದೇಹವೆಂದು ಹೆಸರು. ಈ ಪ್ರಾಕೃತ ಮನಸ್ಸು, ಅಭಿಮಾನ ಲಿಂಗದೇಹಗಳೆಂಬ ಬಂಧ ಕಳೆಯುವುದು ಪರಮಮುಕ್ತಿಯಲ್ಲಿ.

ಲಿಂಗಭಂಗವಾದ ಮೇಲೆ ಮುಕ್ತಿಯಲ್ಲಿ ಭಗವಂತನ ಸ್ವಚ್ಛಂದದರ್ಶನವುಂಟಾಗುತ್ತದೆ. ಎಂದರೆ, ಎಂದೆಂದೂ ಭಗವದ್ದರ್ಶನವಿರುತ್ತದೆ. ವಸ್ತುತಃ, ಸ್ವಚ್ಛಂದದರ್ಶನವೆಂದರೆ, ಇಚ್ಛಿಸಿದಾಗಲೇ ದರ್ಶನವೆಂದರ್ಥ. ಮುಕ್ತಿಯಲ್ಲಿ ಭಗವದ್ದರ್ಶನೇಚ್ಛೆ ನಿತ್ಯವೆಂಬ ಕಾರಣದಿಂದ ಮಧ್ವವಿಜಯದಲ್ಲಿ 'ಸಕಲಸ್ಯ ಮುಕ್ತನಿಕರಸ್ಯ ದೃಶಾಂ। ವಪುರಿಂದಿರಾಪತಿರಮಂದರಸಂ ಅತಿಸುಂದರಂ ಪ್ರಕಟಯತ್ಯನಿಶಂ' ಎಂಬಲ್ಲಿ 'ಅನಿಶಂ=ಎಂದೆಂದೂ' ಎಂಬ ಶಬ್ದವನ್ನು ಬಳಸಿದ್ದಾರೆ.

**ಪ್ರತಿಬಂಧನಿವೃತ್ತಿಶ್ಚ ಪ್ರತಿಬದ್ಧೇನ ಕೇವಲಮ್ ।**
**ಯಸ್ಯಾನ್ಯಾನ್ಯೋಽಶ್ರಯಸ್ತಂ ತ್ವಾಂ ಮುಕ್ತಂ ಚಾಪಿ ನ ಮುಂಚತಿ ॥ ೧೬ ॥**

**ಅರ್ಥ–** ಕೇವಲಂ ಪ್ರತಿಬದ್ಧೇನ= ಪ್ರತಿಬದ್ಧವಾದ ಬ್ರಹ್ಮಸಾಕ್ಷಾತ್ಕಾರದಿಂದಲೇ, ಪ್ರತಿಬಂಧ ನಿವೃತ್ತಿಃ= ಪ್ರತಿಬಂಧಕವಾದ ಅಜ್ಞಾನದ ನಾಶವು ಯಸ್ಯ (ಮತಂ)= ಯಾರ

ಮತವೋ, ತಂ ತ್ವಾಂ= ಅಂತಹ ನಿನ್ನನ್ನು, ಮುಕ್ತಂ ಚಾಪಿ= ಮುಕ್ತನಾದರೂ, ಅನ್ಯೋನ್ಯಾಶ್ರಯಃ= ಅನ್ಯೋನ್ಯಾಶ್ರಯ ದೋಷವು, ನ ಮುಂಚತಿ= ಬಿಡುವುದಿಲ್ಲ.

**ಅನುವಾದ–** ಪ್ರತಿಬಧ್ಯವಾದ ಬ್ರಹ್ಮಸಾಕ್ಷಾತ್ಕಾರದಿಂದಲೇ ಪ್ರತಿಬಂಧಕವಾದ ಅಜ್ಞಾನದ ನಿವೃತ್ತಿಯೆಂಬ ವಾದವನ್ನು ಮಂಡಿಸುವ ನೀನು ಮುಕ್ತನಾದರೂ ಅನ್ಯೋನ್ಯಾಶ್ರಯವು ನಿನ್ನನ್ನು ಬಿಡುವುದಿಲ್ಲ.

**ಭಾವವಿಲಾಸಿನೀ–** ಪರಸ್ಯತು ಪ್ರಾಗುಕ್ತಾನ್ಯೋನ್ಯಾಶ್ರಯಾನ್ಮುಕ್ತಿರೇವ ನ ಸ್ಯಾದಿತಿ ಸಾಹಿತ್ಯ-ಮುದ್ರಯಾಽಽಹ – **ಪ್ರತಿಬಂಧೇತಿ** ॥ ಪ್ರತಿಬಂಧೇನ ಅಪರೋಕ್ಷಜ್ಞಾನೇನ । ಯಸ್ಯ ಮತೇ । ಬಧ್ಯೇನೈವ ಬಂಧನಿವೃತ್ತೇಃ ಕ್ವಾಪ್ಯದರ್ಶನಾದಸಂಭವಂ ಸ್ಫೋರಯಿತುಮೇವಮುಕ್ತಿಮ್ । ಮುಕ್ತಂ ಸರ್ವಸ್ಮಾನ್ಮುಕ್ತೋಽಹಮಿತ್ಯಭಿಮಾನವಂತಮಪಿ ತ್ವಾಮನ್ಯೋನ್ಯಾಶ್ರಯೋನ ಮುಂಚತಿ । ಯದ್ಯಪಿ ಮುಕ್ತಸ್ಯ ಪುನರ್ಮೋಚನಾಭಾವೋ ಸಂಭಾವಿತ ಏವ । ತಥಾಪ್ಯಯಂ ದೋಷೋ ನ ಮುಂಚತೀತಿ ವಿನೋದೋಕ್ತ್ಯಾ ಮಹಾನದೀಪ್ರವಾಹೇ ಮಜ್ಜತ ಉನ್ಮಜ್ಜತಶ್ಚ ದ್ರಾವಿಡಸ್ಯ ಗಲಬದ್ಧಕಂಬಲವದಪರಿಹಾರ್ಯತ್ವಾತ್ । ವಾಙ್ಮಾತ್ರೇಣ ತ್ವಯಾ ತ್ಯಕ್ತೋಽಪ್ಯಯಂ ದೋಷಃ ತದ್ದೋಷಾನ್ಮುಕ್ತ ಇತ್ಯಭಿಮಾನಿನಂ ತ್ವಾಂ ನ ಮುಂಚತೀತಿ ಸೂಚಯತಿ । ಏವಂ ವದತೋ ಮರಣೇಽಪ್ಯನ್ಯೋನ್ಯಾಶ್ರಯಾನ್ಮುಕ್ತಿರ್ನಭವತೀತಿ ಭಾವಃ ॥ ೧೬ ॥

**ವಿವರಣೆ–** ಆಲಂಕಾರಿಕ ಭಾಷೆಯಲ್ಲಿ ಶ್ರೀರಾಜರು ಪರಮತನಿರಾಕರಣೆಯ ಒಂದು ವಿಷಯವನ್ನು ಉಪಸಂಹರಿಸುತ್ತಿದ್ದಾರೆ. ಬ್ರಹ್ಮಸಾಕ್ಷಾತ್ಕಾರಕ್ಕೆ ಅವಿದ್ಯೆಯು ಪ್ರತಿಬಂಧಕವೆಂದು ಒಪ್ಪಿ 'ಬ್ರಹ್ಮಸಾಕ್ಷಾತ್ಕಾರದಿಂದಲೇ ಅವಿದ್ಯೆಯ ನಿವೃತ್ತಿ' ಎಂದೂ ಒಪ್ಪಿದಾಗ ಹಿಂದೆ ಹೇಳಿದ ಅನ್ಯೋನ್ಯಾಶ್ರಯ ದೋಷವಿದ್ದೇ ಇದೆ. ಎಲ್ಲದರಿಂದ ಮುಕ್ತನೆಂದು ನಿನ್ನನ್ನು ನೀನು ಭಾವಿಸಿದರೂ ಅನ್ಯೋನ್ಯಾಶ್ರಯದಿಂದ ಮುಕ್ತಿಯಿಲ್ಲ.

'ಮುಕ್ತಂ ಚಾಪಿ ನ ಮುಂಚತಿ' 'ನೀನು ಮುಕ್ತನಾದರೂ ದೋಷದಿಂದ ಮುಕ್ತನಾಗಲಾರೆ' ಎಂಬುದು ಚಮತ್ಕಾರದ ಮಾತು. ಇದನ್ನು ವ್ಯಾಖ್ಯಾನಕಾರರು ಹಲವು ಬಗೆಯಿಂದ ವ್ಯಾಖ್ಯಾನಿಸಿದ್ದಾರೆ. ಅವಿದ್ಯೆಯನ್ನು ಪ್ರತಿಬಂಧಕವನ್ನಾಗಿ ಒಪ್ಪಿರುವುದರಿಂದ ಅದ್ವೈತ ಸಿದ್ಧಾಂತಕ್ಕೆ ಬಂದಿದ್ದ ಶಾಸ್ತ್ರವೈಯರ್ಥ್ಯಾದಿ ದೋಷಗಳಿಂದ ನೀನು ಮುಕ್ತನಾದರೂ ಅನ್ಯೋನ್ಯಾಶ್ರಯದಿಂದ ಮುಕ್ತನಾಗಿಲ್ಲ ಎಂಬುದು ಒಂದು ಅಭಿಪ್ರಾಯ. ಮುಕ್ತಂ ಚಾಪಿ=ಸತ್ತರೂ ಕೂಡ, ನೀನು ದೇಹಮುಕ್ತನಾಗಿ ಸತ್ತರೂ ಈ ದೋಷ ಹೋಗುವುದಿಲ್ಲ ಎಂಬುದು ದೇಶೀಯ ಭಾಷೆಯ ಹೇಳಿಕೆ. ಅಥವಾ ಮುಕ್ತಂ ಚಾಪಿ=ಲಿಂಗಭಂಗವಾದರೂ ಈ ದೋಷ ಹೋಗಲಾರದು ಎಂಬ ಭಾವ ಈ ಮಾತಿನಲ್ಲಿದೆ.

ಬ್ರಹ್ಮಸಾಕ್ಷಾತ್ಕಾರಕ್ಕೆ ಶ್ರವಣವೇ ಮುಖ್ಯ ಕಾರಣ ಎಂಬ ಪೂರ್ವಪಕ್ಷ -

**ಸಾಕ್ಷಾತ್ಕಾರೇ ತು ಕರಣಂ ಶ್ರವಣಂ ಕಿಲ ಕೇವಲಮ್ ।**
**ಶ್ರವಣೇಽಂಗಿನ್ಯುತ್ತರಾಂಗಂ ಮನನಾದೀತಿ ಕಶ್ಚನ ॥ ೧೭ ॥**

**ಅರ್ಥ–** ಸಾಕ್ಷಾತ್ಕಾರೇ ತು= ಸಾಕ್ಷಾತ್ಕಾರಕ್ಕಾದರೂ, ಕೇವಲಂ ಶ್ರವಣಂ= ಶ್ರವಣವೊಂದೇ, ಕರಣಂ ಕಿಲ= ಕರಣವಾಗಿದೆಯಷ್ಟೆ? ಅಂಗಿನಿ= ಮುಖ್ಯಕಾರಣವಾದ, ಶ್ರವಣೇ=ಶ್ರವಣಕ್ಕೆ, ಮನನಾದಿ= ಮನನ ಮೊದಲಾದದ್ದು, ಉತ್ತರಾಂಗಂ= ಉತ್ತರಾಂಗವಾಗಿದೆಯೆಂದು, ಕಶ್ಚನ= ಮಾಯಾವಾದಿಯು ಹೇಳುತ್ತಾನೆ.

**ಅನುವಾದ–** ಬ್ರಹ್ಮಸಾಕ್ಷಾತ್ಕಾರಕ್ಕೆ ಕೇವಲ ಶ್ರವಣವೊಂದೇ ಕರಣವಾಗಿದೆ. ಶ್ರವಣವೆಂಬ ಕರಣಕ್ಕೆ ಉತ್ತರಾಂಗಗಳಾಗಿ ಮನನ-ನಿದಿಧ್ಯಾಸನಗಳು ಇವೆಯೆಂದು ಕೆಲವೊಬ್ಬರ (ಮಾಯಾವಾದಿಗಳ) ಅಭಿಪ್ರಾಯವಾಗಿದೆ.

**ಭಾವವಿಲಾಸಿನೀ– ಪರಪ್ರಕ್ರಿಯಾಂತರಂ ದೂಷಯಿತುಮನುವದತಿ – ಸಾಕ್ಷಾತ್ಕಾರೇ ತ್ವಿತಿ ॥ ಆದಿಪದೇನ ನಿದಿಧ್ಯಾಸನಂ ಗೃಹ್ಯತೇ । ಶ್ರವಣಮೇವಾಂಗಿ ತೇನೈವಾಪರೋಕ್ಷಜ್ಞಾನಾಖ್ಯಫಲಂ ಚ ಭವತಿ । ಮನಮನಿಧ್ಯಾಸನೇ ತು ಫಲೋತ್ಪತ್ತ್ಯನಂತರಂ ಕ್ರಿಯಮಾಣೇ ಅಸಂಭಾವನಾ-ವಿಪರೀತಭಾವನಾನಿವೃತ್ತ್ಯಾಖ್ಯಫಲಾಂತರಜನಕೇ ಶ್ರವಣಾಖ್ಯಪೂರ್ವಾಂಗಿನ ಉತ್ತರಾಂಗೇ ಇತಿ ಮಾಯಾವಾದಿನೋ ವದಂತೀತಿ ಭಾವಃ ॥ ೧೭ ॥**

**ವಿವರಣೆ–** ಜ್ಞಾನಸ್ವಭಾವದ ಬಗೆಗೆ ಪರಮತವನ್ನು ಇಲ್ಲಿಯವರೆಗೆ ನಿರಾಕರಿಸಿದ್ದಾಯಿತು. ಈಗ ಇನ್ನೊಂದು ವಿಷಯವನ್ನು ಎತ್ತಿಕೊಳ್ಳುತ್ತಿದ್ದಾರೆ.

ಅಪರೋಕ್ಷಜ್ಞಾನಕ್ಕೆ ಶ್ರವಣ-ಮನನ-ಧ್ಯಾನಗಳು ಸಾಧನಗಳಾಗಿವೆ. ಈ ಮೂರರಲ್ಲಿ ಧ್ಯಾನವೇ ಪ್ರಧಾನವಾಗಿದ್ದು ಅದಕ್ಕೆ ಶ್ರವಣ-ಮನನಗಳು ಅಂಗಗಳಾಗಿವೆಯೆಂಬುದು ಸಿದ್ಧಾಂತ. ಆದರೆ ಮಾಯಾವಾದಿಗಳಲ್ಲಿ ವಿವರಣಕಾರರು ಶ್ರವಣವೇ ಅಪರೋಕ್ಷ ಜ್ಞಾನಕ್ಕೆ ಪ್ರಧಾನಕಾರಣವೆಂದೂ ಅದಕ್ಕೆ ಮನನ-ಧ್ಯಾನಗಳು ಸಹಕಾರಿಗಳಾಗಿ ಅಂಗಗಳೆನಿಸುತ್ತವೆಂದೂ ಉಪಪಾದಿಸಿದ್ದಾರೆ. 'ಮನನನಿದಿಧ್ಯಾಸನೇ ತು ಚಿತ್ತಸ್ಯ ಪ್ರತ್ಯಗಾತ್ಮಪ್ರವಣಸಂಸ್ಕಾರ ಪರಿನಿಷ್ಪನ್ನತದೇಕಾಗ್ರವೃತ್ತಿ ಕಾರ್ಯದ್ವಾರೇಣ ಬ್ರಹ್ಮಾನುಭವ-ಹೇತುತಾಂ ಪ್ರತಿಪದ್ಯೇತೇ ಇತಿ ಫಲೋಪಕಾರ್ಯಂಗೇ' ಎಂಬ ವಿವರಣವಾಕ್ಯದಲ್ಲಿ ಇದು ಸ್ಪಷ್ಟವಿದೆ. ಹಾಗಾಗಿ ಶ್ರವಣದಿಂದಲೇ ಅಪರೋಕ್ಷಜ್ಞಾನವೆಂಬ ಫಲವುಂಟಾಗುತ್ತದೆ. ಮನನನಿದಿಧ್ಯಾಸನಗಳು ಅಪರೋಕ್ಷ ಜ್ಞಾನಾನಂತರದಲ್ಲಿ ನಡೆಸಲ್ಪಡಬೇಕಾದವು. ಅಸಂಭಾವನಾ ನಿವೃತ್ತಿ ವಿಪರೀತ ಭಾವನಾನಿವೃತ್ತಿಯೇ ಈ ಮನನ- ನಿದಿಧ್ಯಾಸನೆಗಳ ಫಲ. ಶ್ರವಣವೆಂಬ ಪೂರ್ವಾಂಗಿಗೆ ಮನನ- ನಿದಿಧ್ಯಾಸನಗಳು ಉತ್ತರಾಂಗಗಳು. ಇದು ವಿವರಣಕಾರರ ಮತ.

ಶ್ರವಣಕ್ಕೆ ಮನನಾದಿಗಳು ಅಂಗಗಳಾಗಲಾರವು -

**ಶ್ರುತೇರ್ಬ್ರಹ್ಮಣಿ ತಾತ್ಪರ್ಯಾವಧೃತಿಃ ಶ್ರವಣಂ ಮತಮ್ ।**
**ತ್ರಿಕ್ಷಣಸ್ಥಾಯಿವಿಜ್ಞಾನರೂಪತ್ವಾತ್ ನ ಸ್ಥಿರಂ ಹಿ ತತ್ ॥ ೧೮ ॥**

**ಅರ್ಥ–** ಶ್ರುತೇಃ= ವೇದಕ್ಕೆ, ಬ್ರಹ್ಮಣಿ= ಪರಬ್ರಹ್ಮನಲ್ಲಿ, ತಾತ್ಪರ್ಯಾವಧೃತಿಃ= ತಾತ್ಪರ್ಯವನ್ನು ನಿಶ್ಚಯಿಸಿಕೊಳ್ಳುವುದು, ಶ್ರವಣಂ= ಶ್ರವಣವೆಂಬುದಾಗಿ, ಮತಂ= ಮಾಯಾವಾದಿ ಮತದಲ್ಲಿ ಕರೆಯಲ್ಪಟ್ಟಿದೆ. ತತ್= ಆ ಶ್ರವಣವು, ತ್ರಿಕ್ಷಣ= ಮೂರು ಕ್ಷಣಗಳಷ್ಟು ಮಾತ್ರ ಅವಸ್ಥಾಯಿ= ಇರುವ ವಿಜ್ಞಾನರೂಪತ್ವಾತ್= ಜ್ಞಾನದ ಸ್ವರೂಪವಾದ್ದರಿಂದ, ಸ್ಥಿರಂ= ಸ್ಥಿರವಾದದ್ದು, ನ ಹಿ= ಅಲ್ಲವಷ್ಟೆ?

**ಅನುವಾದ– ಶ್ರುತಿಗೆ ಬ್ರಹ್ಮನಲ್ಲಿ ತಾತ್ಪರ್ಯವನ್ನು ನಿಶ್ಚಯಿಸಿಕೊಳ್ಳುವುದೇ ಮಾಯಾವಾದಿಮತದಲ್ಲಿ 'ಶ್ರವಣ' ಎಂದು ಕರೆಸಿಕೊಳ್ಳುತ್ತದೆ. ಇಂತಹ ಶ್ರವಣವು ಮೂರು ಕ್ಷಣಗಳಷ್ಟು ಮಾತ್ರವಿರುವ ಜ್ಞಾನವಾಗಿರುವುದರಿಂದ ಸ್ಥಿರವಲ್ಲವಷ್ಟೇ?**

**ವಿವರಣೆ–** ಬ್ರಹ್ಮಸಾಕ್ಷಾತ್ಕಾರಸಾಧನಗಳಲ್ಲಿ ಶ್ರವಣವು ಅಂಗಿಯಾಗಿದ್ದು ಮನನ-ಧ್ಯಾನಗಳು ಅಂಗಗಳೆನ್ನುವುದು ಪರಮತನಲ್ಲಿ ಅಯುಕ್ತವಾಗುತ್ತದೆ. ಏಕೆಂದರೆ, ಅವರ ಮತದಲ್ಲಿ ಶ್ರುತಿವಾಕ್ಯಗಳಿಗೆ ಪರಬ್ರಹ್ಮನಲ್ಲೇ ತಾತ್ಪರ್ಯವಿದೆಯೆಂಬುದರ ನಿಶ್ಚಯವನ್ನೇ 'ಶ್ರವಣ'ವೆನ್ನಲಾಗಿದೆ. ನಿಶ್ಚಯವೆಂದರೆ ಸುದೃಢವಾದ ಜ್ಞಾನ. ಜ್ಞಾನವು ಕ್ಷಣಿಕವಾದುದು. ಮೊದಲು ಹುಟ್ಟಿದ ಜ್ಞಾನವು ಮುಂದೆ ಹುಟ್ಟುವ ಜ್ಞಾನಾದಿಗಳಿಂದ ನಾಶವಾಗುವುದರಿಂದ ಎಲ್ಲಾ ಜ್ಞಾನವೂ ಎರಡು ಕ್ಷಣವಿರುತ್ತದೆ. ಹೆಚ್ಚೆಂದರೆ ಮೂರು ಕ್ಷಣವಿರುತ್ತದೆ. ಹೀಗೆ ಶ್ರವಣವು ಕ್ಷಣಭಂಗುರವಾದ ಜ್ಞಾನರೂಪವಾಗಿರುವುದರಿಂದ ಅಂಗಿಯೆನಿಸಲಾರದು.

'ಶ್ರವಣವು ಸ್ಥಿರವಾಗಿದ್ದು ಮನನ-ನಿದಿಧ್ಯಾಸನೆಗಳು ನಡೆಯುವಾಗಲೂ ಇದ್ದಿದ್ದರೆ ಶ್ರವಣಕ್ಕೆ ಮನನ-ನಿದಿಧ್ಯಾಸನೆಗಳು ಅಂಗಗಳೆನಿಸಬಹುದಿತ್ತು. ಏಕೆಂದರೆ, ಯಾವುದು ಪ್ರತ್ಯೇಕ ಫಲವನ್ನು ಹುಟ್ಟಿಸದೇ ಫಲವನ್ನು ಹುಟ್ಟಿಸುವ ಸಾಧನಕ್ಕೆ ಸಹಕಾರಿಯಾಗಿ ಇರುತ್ತದ್ದೋ, ಅದೇ ಅಂಗವೆನಿಸುತ್ತದೆ. ಇಲ್ಲಿ ಶ್ರವಣದಿಂದ ಸಾಕ್ಷಾತ್ಕಾರವೆಂಬ ಫಲವು ಹುಟ್ಟುವಾಗ ಶ್ರವಣವೆಂಬ ಸಾಧನಕ್ಕೆ ಮನನನಿದಿಧ್ಯಾಸನಗಳು ಸಹಕಾರಿಗಳಾಗಬೇಕು. ಹೀಗಾಗಬೇಕಾದರೆ, ಶ್ರವಣವು ಸಾಕ್ಷಾತ್ಕಾರದ ತನಕವೂ ಸ್ಥಾಯಿಯಾಗಿದ್ದು ಸಾಕ್ಷಾತ್ಕಾರಕ್ಕೆ ಮುಂಚೆಯೇ ಮನನ-ನಿದಿಧ್ಯಾಸನಗಳೂ ಇರಬೇಕು. ಆದರೆ ಪರಮತದಲ್ಲಿ ಇದಕ್ಕೆ ಅವಕಾಶವಿಲ್ಲ. ಶ್ರವಣದಿಂದ (ವೇದತಾತ್ಪರ್ಯನಿಶ್ಚಯ)ದಿಂದ ಮೊದಲು ಬ್ರಹ್ಮ-ಸಾಕ್ಷಾತ್ಕಾರವಾಗುತ್ತದೆ. ಅನಂತರ ಮನನ-ನಿದಿಧ್ಯಾಸನಗಳು ಪ್ರವೃತ್ತವಾಗುತ್ತವೆ. ಸಾಕ್ಷಾತ್ಕಾರಕ್ಕೆ ಮುಂಚೆ ಮನನ-ನಿದಿಧ್ಯಾಸನಗಳು ಬೇಕಾಗಿಯೇ ಇಲ್ಲ.

ಸಾಕ್ಷಾತ್ಕಾರಾನಂತರ ಶ್ರವಣವು (ತಾತ್ಪರ್ಯಾವಧೃತಿಯು) ಇರುವುದಿಲ್ಲ. ಒಟ್ಟಿಗಿಲ್ಲದಿರುವ ಒಂದೇ ಫಲದ ಸಿದ್ಧಿಗೆ ಪ್ರಯೋಜಕಗಳಲ್ಲದ ಶ್ರವಣ-ಮನನಾದಿಗಳಿಗೆ ಅಂಗಾಂಗಿ-ಭಾವವು ಅಸಾಧ್ಯವಾಗಿದೆ. ಶ್ರವಣದ ಫಲವು ಮೊದಲೇ ಸಿದ್ಧವಾಗಿರುವಾಗ ಮನನ-ನಿದಿಧ್ಯಾಸನಗಳು ಅಂಗಗಳೆನಿಸುವುದೇ ಅಸಾಧ್ಯ. ಶ್ರವಣವು ಅಂಗಿಯಾಗುವುದು ದುಸ್ಸಾಧ್ಯವೆಂದು ಅಭಿಪ್ರಾಯ.

ಶ್ರವಣಾನಂತರಂ ದೃಷ್ಟಿರ್ಯದಿ ಜ್ಞಾನಾಂಗತಾ ಗತಾ ।
ಏಕಸ್ಮಿನ್ ಹಿ ಫಲೇ ಹೇತ್ವೋರ್ದ್ವಯೋರಂಗಾಂಗಿತಾ ಮತಾ ॥ ೧೯ ॥

**ಅರ್ಥ–** ಯದಿ= ಒಂದು ವೇಳೆ, ಶ್ರವಣಾನಂತರಂ= ಶ್ರವಣದ ಅನಂತರದಲ್ಲಿಯೇ, ದೃಷ್ಟಿಃ= ಅಪರೋಕ್ಷಜ್ಞಾನವು, ಜಾತಾ= ಹುಟ್ಟಿದರೆ, ತರ್ಹಿ= ಆ ಪಕ್ಷದಲ್ಲಿ, ಅಂಗತಾ= ಶ್ರವಣವನ್ನು ಕುರಿತು ಮನನಾದಿಗಳ ಅಂಗತ್ವವು, ಗತಾ= ಹೊರಟು ಹೋಯಿತು, ಏಕಸ್ಮಿನ್= ಒಂದು, ಫಲೇ= ಫಲವನ್ನು ಕುರಿತು, ದ್ವಯೋಃ= ಎರಡು, ಹೇತ್ವೋಃ= ಕಾರಣಗಳಿಗೆ, ಅಂಗಾಂಗಿತಾ= ಅಂಗಾಗಿಭಾವವು, ಮತಾ ಹಿ= ಸ್ವೀಕರಿಸಲ್ಪಟ್ಟಿದೆಯಷ್ಟೆ?

**ಅನುವಾದ–** ಶ್ರವಣದ ನಂತರದಲ್ಲೇ ಅಪರೋಕ್ಷಜ್ಞಾನವು ಉಂಟಾದರೆ ಮನನನಿದಿಧ್ಯಾಸನಗಳು ಶ್ರವಣಕ್ಕೆ ಅಂಗಗಳಾಗಲಾರವು. ಏಕೆಂದರೆ ಒಂದೇ ಫಲವನ್ನು ಕುರಿತು ಕಾರಣಗಳಾದ ಎರಡು ಅಥವಾ ಹೆಚ್ಚು ಹೇತುಗಳಿಗೆ ಪರಸ್ಪರ ಅಂಗಾಂಗಿಭಾವವು ಪ್ರಾಮಾಣಿಕವಾಗಿದೆಯಲ್ಲವೇ?

**ಭಾವವಿಲಾಸಿನೀ–** ತದಭಿಮತಶ್ರವಣಸ್ವರೂಪಂ ಚ ನಿರೂಪಯನ್ನನೂದಿತಪರಪ್ರಕ್ರಿಯಾಂ ದೂಷಯತಿ – **ಶ್ರುತೇರಿತ್ಯಾದಿನಾ** ॥ ಅವಧೃತಿರವಧಾರಣಂ । ತತ್ ಶ್ರವಣಮ್ । ಶ್ರವಣಸ್ಯ ಸ್ಥಿರತ್ವೇ ಮನನನಿದಿಧ್ಯಾಸನಾನಂತರಂ ಸ್ವಫಲಜನಕತ್ವೇ ಚಾದೃಷ್ಟದ್ವಾರಾ ಕಾಲಾಂತರ-ಭಾವಿಸ್ವರ್ಗಾಖ್ಯಫಲಜನಕ ಯಜ್ಞಸ್ಯೋಪರಿ ಕ್ರಿಯಮಾಣೇಷ್ಟ್ಯಾದಿವಚ್ಛ್ರವ- ಣೋತ್ತರಮನನ-ನಿದಿಧ್ಯಾಸನಯೋರಪಿಫಲವತ್ಸನ್ನಿಧಾವಫಲತ್ವರೂಪಾ ಸ್ಯಾದಪ್ಯುತ್ತರಾಂಗತಾ । ನ ಚೈತದಸ್ತಿ । ಜ್ಞಾನರೂಪತಯಾಽಸ್ಥಿರಸ್ಯ ಯಜ್ಞವದದೃಷ್ಟಾದಿದ್ವಾರರಹಿತಸ್ಯ ಸ್ವೋತ್ಪತ್ತ್ಯನಂತರಮೇವ ಸ್ವಫಲೀಭೂತಾಪರೋಕ್ಷಜ್ಞಾನಜನಕಸ್ಯ ಚ ಶ್ರವಣಸ್ಯ ಸ್ವಾಜನ್ಯಫಲಾಂತರಜನಕೇ ಉತ್ತರ-ಕಾಲೀನತಯಾ ಪೂರ್ವಕಾಲೀನಸ್ವಫಲಾ ಜನಕೇ ಚ ಮನನನಿಧ್ಯಾಸನೇ ಅಂಗೇ ಏವ ನ ಭವತಃ ಫಲವತೋಽಂಗಿ ನಸ್ಸನ್ನಿಧೌ ತತ್ಫಲೇನೈವ ಸಫಲಸ್ಯ ಫಲಾಂತರರಹಿತಸ್ಯ ಚ ಸಹಕಾರಿ-ಣೋಽಂಗತ್ವಾತ್ । ಏತಯೋಶ್ಚ ತ್ವದ್ರೀತ್ಯೈವ ತದಭಾವಾತ್ಕಥಮಂಗತಾ । ಉತ್ತರಾಂಗತಾ ತು ದೂರಾಪಾಸ್ತೇತಿ ಅಂಗಾಂಗಿತಾಮತೇತ್ಯಂತಗ್ರಂಥಸಮುದಾಯಸ್ಯಾಭಿಪ್ರಾಯಃ ॥೧೮-೧೯॥

**ವಿವರಣೆ–** ಅದ್ವೈತ ಮತದಲ್ಲಿ ಶ್ರವಣವು ಸಾಕ್ಷಾತ್ಕಾರಕ್ಕೆ ಸಾಧನ. ಮನನ-ನಿದಿಧ್ಯಾಸನಗಳು ಅಸಂಭಾವನಾ-ವಿಪರೀತಭಾವನಾನಿವೃತ್ತಿಗೆ ಕಾರಣ.

ಯಾವುದಕ್ಕೆ ಶ್ರವಣವು ಹೇತುವೋ, ಅದಕ್ಕೆ ಹೇತುವಲ್ಲದ ಮನನಾದಿಗಳು ಶ್ರವಣಾಂಗವಾಗುವುದು ಹೇಗೆ ಸಾಧ್ಯ? ಶ್ರವಣಕ್ಕೂ ಮನನಾದಿಗಳಿಗೂ ಅಂಗಾಂಗಿಭಾವವು ಅಸಾಧ್ಯ. 'ಫಲವತ್ಸನ್ನಿಧೌ ಅಫಲಂ ತದಂಗಮ್' ಎಂಬುದು ಅಂಗದ ಲಕ್ಷಣ. ಸಫಲವಾದ ಸಾಧನವು ಫಲವನ್ನು ಉಂಟುಮಾಡಲು ಬೇಕಾದ, ಸ್ವತಂತ್ರವಾದ ಫಲವಿಲ್ಲದ ಸಾಧನವು ಅಂಗ. ಇಲ್ಲಿ ಅಫಲಂ ಎಂದರೆ ಅಂಗಿಯಿಂದ ಹುಟ್ಟುವ ಫಲಕ್ಕೆ ಉಪಕಾರಕವಾಗುತ್ತದೆಯೇ ಹೊರತು, ಬೇರೆ ಫಲವುಳ್ಳದ್ದಲ್ಲವೆಂದರ್ಥ. ಮನನಾದಿಗಳು ಶ್ರವಣದಿಂದ ಹುಟ್ಟುವ ಫಲಕ್ಕೆ ಉಪಕಾರಕಗಳಾಗಿಲ್ಲ. ಅಲ್ಲದೆ, ವಿಪರೀತಭಾವನಾ-ನಿವರ್ತನೆಯೆಂಬ ಬೇರೆ ಫಲವುಳ್ಳದ್ದಾಗಿವೆ. ಇವು ಅಂಗಾಂಗಿ ಗಳಾಗಲಾರವು.

**ನ ಜಾತಾ ಚೇತ್ ಯತಃ ಸಾ ಸ್ಯಾತ್ ತದೇವ ಕರಣಂ ಭವೇತ್ ।**
**ಶ್ರವಣಂ ಮನನಾತ್ಪೂರ್ವಂ ಶ್ರುತಂ ನ ಧ್ಯಾನತಃ ಪರಮ್ ॥ ೨೦ ॥**

**ಅರ್ಥ–** ಯದಿ= ಒಂದು ಪಕ್ಷ, ಶ್ರವಣಾನಂತರಂ= ಶ್ರವಣದ ಅನಂತರದಲ್ಲಿ, ದೃಷ್ಟಿಃ= ಅಪರೋಕ್ಷಜ್ಞಾನವು, ನ ಜಾತಾ ಚೇತ್= ಹುಟ್ಟದಿದ್ದರೆ, ಯತಃ= ಯಾವುದರಿಂದ, ಸಾ= ಅಪರೋಕ್ಷಜ್ಞಾನವು, ಸ್ಯಾತ್= ಹುಟ್ಟುತ್ತದೋ, ತತ್ ಏವ= ಅದೇ, ತಸ್ಯಾಃ= ಅಪರೋಕ್ಷಜ್ಞಾನಕ್ಕೆ, ಕರಣಂ= ಕರಣವು, ಭವೇತ್= ಆಗುತ್ತದೆ. ಶ್ರವಣಂ= ಶ್ರವಣವು, ಮನನಾತ್= ಮನನ ನಿದಿಧ್ಯಾಸನಗಳಿಗಿಂತ, ಪೂರ್ವಂ= ಮೊದಲೇ, ಶ್ರುತಂ= ಮಾಡಬೇಕೆಂದು ಶ್ರುತವಾಗಿದೆ ಹೊರತು, ಧ್ಯಾನತಃ= ಧ್ಯಾನಕ್ಕಿಂತ, ಪರಂ= ಅನಂತರ, ನ ಶ್ರುತಂ= ಮಾಡಬೇಕೆಂದು ಶ್ರುತವಾಗಿಲ್ಲ.

**ಅನುವಾದ–** **ಶ್ರವಣಾನಂತರದಲ್ಲಿ ಅಪರೋಕ್ಷಜ್ಞಾನವು ಆಗಿಲ್ಲವೆಂದು ಹೇಳುವುದಾದರೆ, ಯಾವುದರಿಂದ ಅಪರೋಕ್ಷ ಜ್ಞಾನವಾಗುವುದೋ, ಅದನ್ನೇ ಸಾಧನವೆನ್ನಬೇಕು. ಹೊರತು, ಶ್ರವಣವನ್ನಲ್ಲ. ಮನನಧ್ಯಾನಗಳ ನಂತರದಲ್ಲೂ ಶ್ರವಣವನ್ನು ಕಲ್ಪಿಸುವುದು ಸಾಧ್ಯವಿಲ್ಲ. ಏಕೆಂದರೆ 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯಲ್ಲಿ ಶ್ರವಣವು ಮನನಾದಿಗಳಿಗೆ ಮುಂಚೆ ಮಾಡತಕ್ಕದ್ದಾಗಿ ಶ್ರುತವಾಗಿದೆ. ಹೊರತು, ನಿದಿಧ್ಯಾಸನದ ನಂತರದಲ್ಲಲ್ಲ.**

**ಭಾವವಿಲಾಸಿನೀ–** ಉಕ್ತಮಿದಮೇವ ಮಾಯಿನಾಂ ಮತಮ್ । ಸಂಭವಿತ ಪಕ್ಷಾಂತರಂ ಚೋತ್ಥಾಪ್ಯ ದೂಷಯತಿ – **ನಜಾತೇತಿ** ॥ ನ ಜಾತಾ ಚೇತ್ ಶ್ರವಣಾನಂತರಮೇವ ತತ್ಫಲತಯಾಽಭಿಮತದೃಷ್ಟಿರ್ನ ಜಾತಾ ಚೇದಿತ್ಯರ್ಥಃ । ಯತಃ ಯಸ್ಮಾತ್ಕರಣಾತ್ । ಸಾ ದೃಷ್ಟಿಃ । ಶ್ರವಣಸ್ಯ ಜ್ಞಾನರೂಪತಯಾ ತದೈವ ನಷ್ಟತ್ವೇನ ಕಾಲಂತರಭಾವಿದೃಷ್ಟಿರ್ಯತೋ ಭವತಿ । ತದೇವ ಕರಣಂ ಸ್ಯಾನ್ನ ತು ಶ್ರವಣಮಿತಿಭಾವಃ । ನನು ನಿದಿಧ್ಯಾಸನಾನಂತರಂ ಪುನಃ ಶ್ರವಣಾಂತರ-ಮಂಗೀಕ್ರಿಯತ ಇತ್ಯತ ಆಹ – **ಶ್ರವಣಮಿತಿ** ॥ ೨೦ ॥

ನಿದಿಧ್ಯಾಸನೆಯಾದ ಮೇಲೂ ಶ್ರವಣವನ್ನು ಒಪ್ಪಿ ಪೂರ್ವೋಕ್ತ ದೋಷವನ್ನು ಪರಿಹರಿಸಿಕೊಳ್ಳುವ ಪ್ರಯತ್ನವನ್ನು ಮಾಯಾವಾದಿಗಳು ಮಾಡಿದಾಗ ಶ್ರುತಿಯಲ್ಲಿ ಹಾಗೆ ಕಂಡಿಲ್ಲವೆಂದು ಹೇಳಿದ್ದಾಯಿತು. ಅದನ್ನೇ ವಿವರಿಸುತ್ತಾ ಇಲ್ಲಿ ಶ್ರುತಹಾನ-ಅಶ್ರುತಕಲ್ಪನಾ ದೋಷವನ್ನು ಪೂರ್ವಾರ್ಧದಲ್ಲಿ ಹೇಳುತ್ತಿದ್ದಾರೆ-

ಮಧ್ಯೇ ಕಲ್ಪಾಂತರಂ ಕಲ್ಪ್ಯಂ ಮನನಾದೌ ನ ಕಶ್ಚನ ।
ತಚ್ಚೈಕವಾಕ್ಯೇಽಪಠನಾತ್ ತ್ರಯಂ ಕ್ರಮಿಕಕಾರಣಮ್ ॥ ೨೧ ॥

**ಅರ್ಥ–** ಮ್ಯಧ್ಯೇ= ನಿದಿಧ್ಯಾಸನ ಮತ್ತು ಅಪರೋಕ್ಷಜ್ಞಾನಗಳ ನಡುವೆ, ಕಲ್ಪಾಂತರಂ= ಶ್ರವಣವೆಂಬ ಕಲ್ಪಾಂತರವು, ಕಲ್ಪ್ಯಂ= ಕಲ್ಪಿಸಲ್ಪಡಬೇಕಾಗುತ್ತದೆ, ಮನನಾದ್= ಮನನಕ್ಕಿಂತ ಮುಂಚೆಯಾದರೂ, ಕಶ್ಚನ= ಯಾವುದೂ ಕೂಡ, ನ ಕಲ್ಪ್ಯ= ಕಲ್ಪಿಸಲ್ಪಡಬೇಕಾಗಿಲ್ಲ. ಏಕವಾಕ್ಯೇ= ಒಂದೇ ವೇದವಾಕ್ಯದಲ್ಲಿ, ಪಠನಾತ್= ಹೇಳಿರುವುದರಿಂದ, ತತ್= ಆ, ತ್ರಯಂ ಚ= ಶ್ರವಣ, ಮನನ, ನಿದಿಧ್ಯಾಸನವೆಂಬ ಮೂರು ಕೂಡ, ಕ್ರಮಿಕಕಾರಣಂ= ಕ್ರಮವಾಗಿ ಸಾಕ್ಷಾತ್ಕಾರಕ್ಕೆ ಕಾರಣಗಳಾಗಿವೆ.

**ಅನುವಾದ–** ಧ್ಯಾನಾನಂತರ ಮತ್ತೊಮ್ಮೆ ಶ್ರವಣವನ್ನು ಕಲ್ಪಿಸುವುದಾದರೆ ಅಶ್ರುತಕಲ್ಪನೆಯೆಂಬ ದೋಷವಿದೆ. ಮನನದ ಆರಂಭದಲ್ಲಿ ಶ್ರವಣವನ್ನು ಒಪ್ಪಿದಾಗ ಏನೂ ಕಲ್ಪಿಸಬೇಕಿಲ್ಲ. ಹಾಗಾಗಿ ಒಂದೇ ವಾಕ್ಯದಲ್ಲಿ ಶ್ರವಣ-ಮನನ-ನಿದಿಧ್ಯಾಸನೆಗಳನ್ನು ಪಠಿಸಿರುವುದರಿಂದ ಈ ಮೂರು ಕ್ರಮವಾಗಿ ಸಾಕ್ಷಾತ್ಕಾರಕ್ಕೆ ಕಾರಣಗಳಾಗಿವೆ.

**ಭಾವವಿಲಾಸಿನೀ–** ಮಧ್ಯೇ ನಿದಿಧ್ಯಾಸನಾಪರೋಕ್ಷಜ್ಞಾನಯೋರ್ಮಧ್ಯೇ । ಕಲ್ಪಾಂತರಂ ಕಾರಣತಯಾ ಕಲ್ಪ್ಯಂ ಶ್ರವಣಾಂತರಂ ಕಲ್ಪ್ಯಂ ಸ್ವಕಪೋಲೇನೈವ ಕಲ್ಪ್ಯಮ್ । ನಿದಿಧ್ಯಾಸಿತವ್ಯ ಇತ್ಯತಃ ಪರಂ ಶ್ರೋತವ್ಯ ಇತಿ ಶ್ರುತೇರಭಾವಾತ್ ಶ್ರವಣಸ್ವರೂಪಮಪಿ ಕಲ್ಪನೀಯಮ್ । ತಸ್ಯ ಕಾರಣತಾ ಚ ಕಲ್ಪನೀಯಾ । ಮನನಾದೌ ಮನನಸ್ಯ ಆದೌ ಆದಿಭಾಗೇ ನ ಕಶ್ಚನ ಕಲ್ಪ್ಯ ಇತ್ಯರ್ಥಃ । ಶ್ರೋತವ್ಯ ಇತಿ ಸಾಕ್ಷಾಚ್ಛ್ರೌತಪದಸ್ಯ ವಿದ್ಯಮಾನತ್ವಾತ್ । ಶ್ರುತಹಾನ್ಯಶ್ರುತಕಲ್ಪನಾ-ಪ್ರಸಂಗಾನ್ನಾಯಂ ಪಕ್ಷಸ್ಸಾಧೀಯಾನ್ । ಕಿಂತು ಪ್ರಾಥಮಿಕಪಕ್ಷ ಏವ ಪರೇಣಾಂಗೀಕಾರ್ಯಃ । ಸ ಚೋತ್ಕರೀತ್ಯಾಽಯುಕ್ತ ಏವೇತಿ ಭಾವಃ । ಕಸ್ತರ್ಹಿ ಶ್ರುತೇರಭಿಪ್ರಾಯ ಇತ್ಯತ ಆಹ–**ತಚ್ಚೇತಿ** । ತತ್ ತ್ರಯಂ ಶ್ರವಣ ಮನನನಿದಿಧ್ಯಾಸನಾಖ್ಯಂ ತ್ರಯಮ್ । ಕ್ರಮಿಕಕಾರಣಂ ಸಾಕ್ಷಾತ್ಸಾಕ್ಷಾತ್ಕಾರ-ಸಾಧನಂ ನಿದಿಧ್ಯಾಸನಮ್ । ತದ್ದ್ವಾರಾ ಮನನಂ । ತಯೋರ್ದ್ವಾರಾ ಚ ಶ್ರವಣಮ್ । ಏವಂ ಚ ತ್ರಯಮಪಿ ಸಾಕ್ಷಾತ್ಕಾರಂ ಪ್ರತ್ಯೇವ ಕಾರಣಮ್ । "ಆತ್ಮಾ ವಾ ಅರೇ ದ್ರಷ್ಟವ್ಯ" ಇತಿ ಪ್ರಾಗುಕ್ತದರ್ಶನಮುದ್ದಿಶ್ಯ ತ್ರಯಾಣಾಮಪ್ಯೇಕವಾಕ್ಯೇ ಸಹೈವಪಠನಾತ್ತ್ರೀಣ್ಯಪ್ಯಂಗಾನ್ಯೇವ । ಕಾರಣತ್ವಸಾಮ್ಯಾತ್ । ಅಂಗಿ ತು ಏತತ್ಸಹಕಾರೇಣ ಭಗವಂತಂ ಸಾಕ್ಷಾತ್ಕುರ್ವಾಯ್ ಕರಣರೂಪಂ ಮನ ಏವ । ಅನ್ಯಥಾ "ಕರ್ಮಣಾಜ್ಞಾನಮಾತನೋತಿ" ಇತಿ ಶ್ರುತೇಃ ಶ್ರವಣಾದಪಿ ಪೂರ್ವ-

ಕಾಲೀನಂ ಕರ್ಮೈವಾಂಗಿ ಸ್ಯಾತ್ । ಅಂತಃಕರಣಶುದ್ಧಿದ್ವಾರಾ ಪುಣ್ಯದ್ವಾರಾ ವಾ ತಜ್ಜನ್ಯಸಾಕ್ಷಾತ್ಕಾರೇ ಶ್ರವಣಾದಿತ್ರಿತಯಮುಪ್ಯುತ್ತರಾಂಗಂ ಸ್ಯಾತ್ । ಅಂತಃಕರಣಸ್ಯೈವ ಪ್ರಾಧಾನ್ಯಾದಂಗಿತ್ವಮ್ । ಕಾರಣಾನಾಂ ತು ಸರ್ವೇಷಾಂ ಸಹಕಾರಿತ್ವಲಕ್ಷಣಮಂಗತ್ವಮೇವ ನ್ಯಾಯ್ಯಮಿತಿಭಾವಃ ॥ ೨೧ ॥

**ವಿವರಣೆ–** ಶ್ರುತಿಯ ಮೊದಲು 'ಆತ್ಮಾ ವಾ ಅರೇ ದ್ರಷ್ಟವ್ಯಃ' ಎಂದು ಅವಲೋಕನವನ್ನು ಪಡೆಯುವಂತೆ ಆದೇಶಿಸಿತು. ಅದಕ್ಕಾಗಿ ಸಾಧನಗಳನ್ನು ಹೇಳಲು ಉಪಕ್ರಮಿಸಿ 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬುದಾಗಿ ಶ್ರವಣ-ಮನನ-ಧ್ಯಾನಗಳನ್ನು ಮಾಡುವಂತೆ ಆದೇಶಿಸಿತು. ಎಂದರೆ, ಶ್ರವಣ-ಮನನ-ಧ್ಯಾನಗಳು ಕ್ರಮವಾಗಿ ಸಾಕ್ಷಾತ್ಕಾರಕ್ಕೆ ಸಾಧನಗಳೆಂದರ್ಥ. ಎಂದರೆ, ಧ್ಯಾನವು ಸಾಕ್ಷಾತ್ತಾಗಿ ಸಾಕ್ಷಾತ್ಕಾರಸಾಧನ. ಮನನವು ಧ್ಯಾನದ ಮೂಲಕ ಸಾಕ್ಷಾತ್ಕಾರಸಾಧನ. ಶ್ರವಣವು ಮನನ-ಧ್ಯಾನಗಳ ಮೂಲಕ ಸಾಕ್ಷಾತ್ಕಾರಸಾಧನವೆಂದರ್ಥ. ಇದು ಶ್ರುತಿಯಿಂದ ಸ್ಪಷ್ಟವಾಗಿ ಗೋಚರಿಸುವ ಅರ್ಥ. ಇವನ್ನು ಬಿಟ್ಟು ಶ್ರವಣವು ನೇರ ಸಾಕ್ಷಾತ್ಕಾರ ಸಾಧನವೆಂದು ಹೇಳಿದರೆ, ನಿದಿಧ್ಯಾಸನ (ಧ್ಯಾನ) ಹಾಗೂ ಸಾಕ್ಷಾತ್ಕಾರಗಳ ಮಧ್ಯೆ ಶ್ರೋತವ್ಯಃ ಎಂಬ ವಾಕ್ಯವನ್ನು ಅಶ್ರುತವಾದುದನ್ನು ಕಲ್ಪಿಸಬೇಕಾಗುತ್ತದೆ. ಇದಕ್ಕೆ ಅಶ್ರುತಕಲ್ಪನೆಯೆಂದು ಹೆಸರು. ಅಲ್ಲದೇ, 'ಮಂತವ್ಯಃ' ಎಂಬ ಶ್ರುತಿಯ ಆದಿಯಲ್ಲಿ ಶ್ರುತವಾಗಿರುವ 'ಶ್ರೋತವ್ಯಃ' ಎಂಬ ಪದವನ್ನು ಬಿಟ್ಟುಬಿಡಬೇಕಾಗುತ್ತದೆ. ಇದು ಶ್ರುತಹಾನವೆಂಬ ದೋಷ. ಹೀಗೆ ಶ್ರವಣವನ್ನು ಮನನಾದಿಗಳ ಮೂಲಕ ಸಾಕ್ಷಾತ್ಕಾರಸಾಧನವೆಂದು ಒಪ್ಪದಿದ್ದರೆ ಶ್ರುತಹಾನಾಶ್ರುತಕಲ್ಪನೆಗಳು ಇರುವುದರಿಂದ ಶ್ರವಣವೇ ಸಾಕ್ಷಾತ್ಕಾರಕ್ಕೆ ನೇರ ಸಾಧನವೆಂಬ ವಾದ ಅಸಾಧುವಾಗಿದೆ.

ಈ ಶ್ಲೋಕದ ಉತ್ತರಾರ್ಧದಲ್ಲಿ ಸ್ವಸಿದ್ಧಾಂತವನ್ನು ಹೇಳಲಾಗಿದೆ. ಶ್ರವಣವೊಂದೇ ಜ್ಞಾನಸಾಧನವೆಂಬ ಪರಪಕ್ಷವು ಅಸಾಧುವಾದ್ದರಿಂದ ಶ್ರುತಿಗನುಗುಣವಾಗಿ ಶ್ರವಣ-ಮನನ-ನಿದಿಧ್ಯಾಸನಗಳು ಕ್ರಮವಾಗಿ ಸಾಕ್ಷಾತ್ಕಾರಸಾಧನಗಳು. ಇವು ಮೂರೂ ಅಂಗಗಳು. ಮನಸ್ಸು ಕರಣವಾದುದರಿಂದ ಅಂಗಿಯೆನಿಸಿದೆ.

ಶ್ಲೋಕದಲ್ಲಿ 'ಮನನಾದೌ' ಎಂದರೆ ಮನನಸ್ಯ ಆದೌ= ಮನನಕ್ಕಿಂತ ಮೊದಲು ಎಂದರ್ಥ. ಮನನಕ್ಕಿಂತ ಮೊದಲು ಶ್ರವಣವನ್ನು ಕಲ್ಪನೆ ಮಾಡುವಂತಿಲ್ಲ. ಆಗ ಶ್ರುತಹಾನಿದೋಷ ಎಂದು ಅಭಿಪ್ರಾಯ.

**ಯದಿ ಸಾಕ್ಷಾತ್ಕಾರಕಾರ್ಯಾಜ್ಞಾನನಾಶೇ ಸಹಾಯತಾ ।**
**ಜ್ಞಾನೇಽಂಗಿನ್ಯಂಗತೈವ ಸ್ಯಾತ್ ಶ್ರವಣೇಽಂಗಿನಿ ನಾಂಗತಾ ॥ ೨೨ ॥**

**ಅರ್ಥ–** ಯದಿ= ಒಂದು ಪಕ್ಷದಲ್ಲಿ, ಸಾಕ್ಷಾತ್ಕಾರ= ಭಗವತ್ಸಾಕ್ಷಾತ್ಕಾರದ ಕಾರ್ಯ= ಕಾರ್ಯವಾದ ಅಜ್ಞಾನನಾಶೇ= ಅಜ್ಞಾನದ ನಾಶವನ್ನು ಕುರಿತು, ಸಹಾಯತಾ= ಮನನ

ನಿದಿಧ್ಯಾಸನಗಳು ಸಹಾಯ ಮಾಡುತ್ತವೆಂದಾದರೆ, ತರ್ಹಿ= ಆ ಪಕ್ಷದಲ್ಲಿ, ಅಂಗಿನಿ= ಅಂಗಿಯಾದ, ಜ್ಞಾನೇ ಏವ= ಅಪರೋಕ್ಷಜ್ಞಾನವನ್ನು ಕುರಿತೇ, ಅಂಗತಾ= ಮನನ ನಿದಿಧ್ಯಾಸನಗಳಿಗೆ ಅಂಗತ್ವವು, ಸ್ಯಾತ್= ಬಂದಿತು, ತು= ಹೊರತಾಗಿ, ಅಂಗಿನಿ= ಅಂಗಿಯಾದ, ಶ್ರವಣೇ= ಶ್ರವಣವನ್ನು ಕುರಿತು, ಅಂಗತಾ= ಮನನ ನಿದಿಧ್ಯಾಸನಗಳಿಗೆ ಅಂಗತ್ವವು, ನ ಸ್ಯಾತ್= ಬರಲಾರದು.

**ಅನುವಾದ–** ಸಾಕ್ಷಾತ್ಕಾರದಿಂದ ಆಗಲಿರುವ ಅಜ್ಞಾನನಾಶದಲ್ಲಿ ಮನನ-ನಿದಿಧ್ಯಾಸನೆಗಳು ಸಹಾಯವನ್ನು ಮಾಡುವುದರಿಂದ, ಅವು ಶ್ರವಣಕ್ಕೆ ಉತ್ತರಾಂಗಗಳೆಂದು ಹೇಳಬಹುದು ಎಂಬ ಪಕ್ಷವೂ ಸರಿಯಲ್ಲ. ಏಕೆಂದರೆ, ಈ ಪಕ್ಷದಲ್ಲಿ ಜ್ಞಾನವು ಅಂಗಿಯಾಗಿದೆ. ಈ ಅಪರೋಕ್ಷಜ್ಞಾನಕ್ಕೆ ಮನನ-ನಿದಿಧ್ಯಾಸನೆಗಳು ಅಂಗಗಳಾದವು. ಹೊರತು, ಶ್ರವಣಕ್ಕೆ ಅಂಗಗಳಲ್ಲ.

**ಭಾವವಿಲಾಸಿನೀ–** ಸಂಭಾವಿತಪಕ್ಷಾಂತರಮಾಶಂಕ್ಯ ದೂಷಯತಿ – **ಯದೀತಿ** ॥ ಸಾಕ್ಷಾತ್ಕಾರಃ ಶ್ರವಣಜನ್ಯಬ್ರಹ್ಮಸಾಕ್ಷಾತ್ಕಾರಃ। ಶ್ರವಣಫಲೇ ಬ್ರಹ್ಮಸಾಕ್ಷಾತ್ಕಾರೇ ಜಾತೇಽಪಿ ಸಾಕ್ಷಾತ್ಕಾರಸ್ಯ ಫಲಭೂತಾವಿದ್ಯಾನಿವೃತ್ತಿಮೇತತ್ಸಹಾಯೇನೈವ ಕರೋತಿ । ನಾನ್ಯಥಾ । ತರ್ಹಿಜ್ಞಾನರೂಪೇಽಂಗಿನ್ಯೇವಾನಯೋರಂಗತಾ। ಶ್ರವಣೇಽಂಗಿನ್ಯಂಗತೇತಿ ಪಕ್ಷೋ ಗತ ಇತ್ಯರ್ಥಃ। ನನ್ವಸ್ತು ತರ್ಹ್ಯಯಮೇವ ಮಮಾಪಿ ಪಕ್ಷ ಇತಿ ಚೇತ್ ನ । ವಿವರಣೋಕ್ತೇಃ ಶ್ರವಣತ್ಯಾಘಾತಾತ್ । ಸಾಕ್ಷಾತ್ಕಾರಸ್ಯಾಪಿ ಜ್ಞಾನರೂಪತಯಾ ಶ್ರವಣಪಕ್ಷೋಕ್ತದೂಷಣೇನೈವ ದುಷ್ಟತ್ವಾಚ್ಚ॥ ೨೨ ॥

**ವಿವರಣೆ–** ಶ್ರವಣವು ಅಂಗಿ, ಮನನಾದಿಗಳು ಶ್ರವಣಾಂಗಗಳು ಎಂಬ ವಾದವನ್ನು ಶ್ರವಣಕ್ಕೂ ಮನನಾದಿಗಳಿಗೂ ಸಮಾನವಾದ ಒಂದು ಫಲವಿಲ್ಲದುದರಿಂದ ಇದು ಅಸಾಧ್ಯವೆಂದು ನಿರೂಪಿಸಿ ಆಗಿದೆ. ಇದೀಗ ಪರರು ಸಮಾನಫಲವನ್ನು ತೋರಿಸುತ್ತಿದ್ದಾರೆ. ಸಾಕ್ಷಾತ್ಕಾರವೂ ಶ್ರವಣಜನ್ಯ. ಸಾಕ್ಷಾತ್ಕಾರದ್ವಾರಾ ಅಜ್ಞಾನನಾಶವೂ ಶ್ರವಣಜನ್ಯ. ಈ ಅಜ್ಞಾನನಾಶಕ್ಕೆ ಮನನ-ನಿದಿಧ್ಯಾಸನಗಳು ಸಹಕರಿಸುತ್ತವೆ. ಹಾಗಾಗಿ, ಅಜ್ಞಾನನಿವೃತ್ತಿಯೆಂಬ ಏಕಕಾರ್ಯಪ್ರಯೋಜಕತ್ವವು ಶ್ರವಣಕ್ಕೂ ಮನನಾದಿಗಳಿಗೂ ಇರುವುದರಿಂದ ಅಂಗಾಂಗಿಭಾವವು ಕೂಡುವುದಲ್ಲವೇ? ಎಂಬುದು ಪೂರ್ವಪಕ್ಷ.

ಹೀಗೆ ಒಪ್ಪಿದರೆ ಜ್ಞಾನವು ಅಂಗಿಯಾಯಿತೇ ಹೊರತು ಶ್ರವಣವಲ್ಲ. ಅಪರೋಕ್ಷಜ್ಞಾನಕ್ಕೆ ಮನನಾದಿಗಳು ಅಂಗಗಳಾದವೇ ಹೊರತು, ಶ್ರವಣಕ್ಕಲ್ಲ. ಶ್ರವಣ-ಮನನಾದಿಗಳಿಗೆ ಅಂಗಾಂಗಿಭಾವವೆಂಬ ವಿವರಣಕಾರರ ಮತ ನಿರಾಕೃತವಾಗುತ್ತದೆ.

ಶ್ರವಣವು ಅಪರೋಕ್ಷಜ್ಞಾನವನ್ನು ಹುಟ್ಟಿಸದು -

**ಪರೋಕ್ಷಜ್ಞಾನಜನಕಂ ಶ್ರವಣಂ ಕೇನ ಹೇತುನಾ ।**
**ಅಪರೋಕ್ಷಫಲಂ ಕುರ್ಯಾತ್ ಸಾ ಹ್ಯದೃಷ್ಟಸ್ಯ ಕಲ್ಪನಾ ॥ ೨೩ ॥**

**ಅರ್ಥ–** ಪರೋಕ್ಷಜ್ಞಾನಜನಕಂ= ಪರೋಕ್ಷಜ್ಞಾನವನ್ನು ಹುಟ್ಟಿಸಬಲ್ಲ, ಶ್ರವಣಂ= ಶ್ರವಣವು, ಕೇನ= ಯಾವ, ಹೇತುನಾ= ಕಾರಣದಿಂದ (ರೀತಿಯಿಂದ) ಅಪರೋಕ್ಷ ಫಲಂ= ಅಪರೋಕ್ಷಜ್ಞಾನವನ್ನು, ಕುರ್ಯಾತ್= ಹುಟ್ಟಿಸೀತು? ಸಾ= ಅದು, ಅದೃಷ್ಟಸ್ಯ= ಲೋಕದಲ್ಲಿ ಎಲ್ಲಿಯೂ ಕಾಣದ ವಿಷಯದ, ಕಲ್ಪನಾ ಹಿ= ಕಲ್ಪನೆಯಾಗಿದೆಯಷ್ಟೆ?

**ಅನುವಾದ–** ಪರೋಕ್ಷಜ್ಞಾನವನ್ನು ಹುಟ್ಟಿಸಬಲ್ಲ ಶ್ರವಣವು ಹೇಗೆ ತಾನೇ ಅಪರೋಕ್ಷಜ್ಞಾನವಾದ ಚರಮಸಾಕ್ಷಾತ್ಕಾರವನ್ನು ಹುಟ್ಟಿಸುವುದಕ್ಕೆ ಸಾಧ್ಯ? ಶ್ರವಣವು ಅಪರೋಕ್ಷವನ್ನು ಹುಟ್ಟಿಸುತ್ತದೆಯೆಂಬುದು ಕೇವಲ ಅದೃಷ್ಟಕಲ್ಪನೆಯಲ್ಲವೇ?

**ಭಾವವಿಲಾಸಿನೀ–** ಪೂರ್ವಂ ಶ್ರವಣಸ್ಯ ಸಾಕ್ಷಾತ್ಕಾರಹೇತುತಾಮಂಗೀಕೃತ್ಯ ದೂಷಣಮುದಿತಮ್ । ಇದಾನೀಂ ತದೇವ ನ ಘಟತ ಇತ್ಯಾಹ – **ಪರೋಕ್ಷೇತಿ** ॥ ಸಾ ಅಪರೋಕ್ಷಜ್ಞಾನಜನನರೂಪಾ ॥ ೨೩ ॥

**ವಿವರಣೆ–** ಕಣ್ಣಿನಿಂದ ನೋಡಿ ಬರುವ ಜ್ಞಾನವನ್ನು ಅಪರೋಕ್ಷವೆನ್ನುತ್ತೇವೆ. ಹಾಗೆಯೇ ಚರ್ಮದಿಂದ ಮುಟ್ಟಿ, ಮೂಗಿನಿಂದ ಮೂಸಿ ಬಂದ ಜ್ಞಾನವೂ ಅಪರೋಕ್ಷವೇ. ಕಿವಿಯಿಂದ ಬರುವ ಶಬ್ದದ ಜ್ಞಾನವೂ ಅಪರೋಕ್ಷವೇ. ಆದರೆ, ವೇದಾಂತಶ್ರವಣದಿಂದ ಉಂಟಾಗುವ ಬ್ರಹ್ಮಜ್ಞಾನವು ಅಪರೋಕ್ಷವಲ್ಲ. ಕಿವಿಗೆ ಪದಾರ್ಥಗಳ ಅಪರೋಕ್ಷವನ್ನು ಹುಟ್ಟಿಸುವ ಸಾಮರ್ಥ್ಯವೇ ಇಲ್ಲ. ಹೀಗಿದ್ದೂ ಶ್ರವಣದಿಂದ ಅಪರೋಕ್ಷಜ್ಞಾನ ಉಂಟಾಗುವುದೆಂದು ಕಲ್ಪಿಸುವುದು ಅಪ್ರಾಮಾಣಿಕವಾಗಿದೆ.

**ಗೇಹೇ ಘಟ ಇತಿ ಪ್ರೋಕ್ತೇ ಬಹಿಃಸ್ಥಸ್ಯಾಪರೋಕ್ಷಧೀಃ ।**
**ಗೇಹಾಂತಃಸ್ಥಘಟೇಽಪಿ ಸ್ಯಾತ್ ಸಾಽಪಿ ದೃಶ್ಯಾರ್ಥದೃಙ್ ನ ಕಿಮ್ ॥ ೨೪ ॥**

**ಅರ್ಥ–** ಗೇಹೇ= ಮನೆಯಲ್ಲಿ, ಘಟಃ= ಮಡಕೆಯು, ಇದೆ ಇತಿ= ಎಂಬುದಾಗಿ, ಪ್ರೋಕ್ತೇ= ಹೇಳಲ್ಪಟ್ಟಾಗ, ಬಹಿಸ್ಥಸ್ಯ= ಹೊರಗಿರುವ ಮನುಷ್ಯನಿಗೆ, ಗೇಹ= ಮನೆಯ ಅಂತಸ್ಥ ಒಳಗಡೆ ಇರುವ, ಘಟೇ ಅಪಿ= ಗಡಿಗೆಯ ಬಗ್ಗೆಯೂ ಕೂಡ, ಅಪರೋಕ್ಷಧೀಃ= ಅಪರೋಕ್ಷ ಜ್ಞಾನವು, ಸ್ಯಾತ್= ಬರಬೇಕಾದೀತು. ಸಾ ಅಪಿ= ಅದೂ ಕೂಡ, ದೃಶ್ಯಾರ್ಥ= ಕಣ್ಣಿಗೆ ಕಾಣುವ ವಸ್ತುವಿನ, ದೃಕ್= ಜ್ಞಾನವು, ನ ಕಿಂ= ಅಲ್ಲವೇನು?

**ಅನುವಾದ–** 'ಮನೆಯಲ್ಲಿ ಮಡಕೆಯಿದೆ' ಎಂದು ಹೇಳಿದೊಡನೆಯೇ, ಹೊರಗಿದ್ದವನಿಗೆ ಮನೆಯೊಳಗಣ ಮಡಕೆಯ ಬಗೆಗೆ ಅಪರೋಕ್ಷಜ್ಞಾನವು ಬರಬೇಕಾದೀತು. ನಿನ್ನ ಮತದಂತೆ, ಶಬ್ದಜನ್ಯಪ್ರತೀತಿಯು ಅಪರೋಕ್ಷಜ್ಞಾನಕ್ಕೆ

**ಯೋಗ್ಯವಾದುದನ್ನು ಗ್ರಹಿಸಬಲ್ಲುದಲ್ಲವೇ? ಘಟವೂ ಅಪರೋಕ್ಷಯೋಗ್ಯವೇ ಆಗಿದೆಯಲ್ಲವೇ?**

**ಭಾವವಿಲಾಸಿನೀ– ನನು ಸಾಕ್ಷಾತ್ಕಾರಯೋಗ್ಯೇಽರ್ಥೇ ಪ್ರಯುಕ್ತಃ ಶಬ್ದಃ ಸಾಕ್ಷಾತ್ಕಾರಮೇವ ಜನಯತೀತ್ಯತ ಆಹ – ಗೇಹ ಇತಿ ॥ ಸಾ ಶಬ್ದಜನ್ಯಾ ಪ್ರತೀತಿಃ ॥ ೨೪ ॥**

**ವಿವರಣೆ–** ಶ್ರವಣವು (ಕಿವಿಯಿಂದ ಕೇಳಿದ ಶಬ್ದವು) ಅಪರೋಕ್ಷಜ್ಞಾನವನ್ನು ಹುಟ್ಟಿಸುವುದಿಲ್ಲ. ಏಕೆಂದರೆ, ಶಬ್ದಕ್ಕೆ ವಿಷಯವಾದ ಧರ್ಮಾದಿ ಅರ್ಥವು ಸಾಕ್ಷಾತ್ಕಾರ-ಯೋಗ್ಯವಾಗಿರುವುದಿಲ್ಲ. ಆದರೆ, ಬ್ರಹ್ಮನು ಸಾಕ್ಷಾತ್ಕಾರಯೋಗ್ಯನಾದ್ದರಿಂದ ಬ್ರಹ್ಮನ ಬಗೆಗೆ ಪ್ರಯೋಗಿಸಿದ ಶಬ್ದವು ಬ್ರಹ್ಮಸಾಕ್ಷಾತ್ಕಾರವನ್ನು ಹುಟ್ಟಿಸಬಹುದು ಎಂಬುದು ಶಬ್ದದಿಂದ ಬ್ರಹ್ಮನ ಸಾಕ್ಷಾತ್ಕಾರವುಂಟಾಗುತ್ತವೆ ಎಂದು ವಾದಿಸುವ ಪರರ ಪೂರ್ವಪಕ್ಷ.

ಶಬ್ದದಿಂದ ಪ್ರತ್ಯಕ್ಷಯೋಗ್ಯ ವಸ್ತುವಿನ ಬಗೆಗಿನ ಸಾಕ್ಷಾತ್ಕಾರವುಂಟಾಗುವುದೆಂಬ ಈ ವಾದವೂ ಸರಿಯಲ್ಲ. ಹಾಗಿದ್ದಲ್ಲಿ, ಮನೆಯೊಳಗೆ ಮಡಕೆಯಿದ್ದಾಗ 'ಗೃಹೇ ಘಟಃ' ಎಂಬ ಮಾತಿನಿಂದ ಮನೆಯ ಹೊರಗಿದ್ದವನಿಗೆ ಘಟದ ಸಾಕ್ಷಾತ್ಕಾರವಾಗಬೇಕಾದೀತು. ಏಕೆಂದರೆ, ಶಬ್ದಕ್ಕೆ ಸಾಕ್ಷಾತ್ಕಾರಜನನಸಾಮರ್ಥ್ಯವಿದೆ. ಮಡಕೆಯು ಪ್ರತ್ಯಕ್ಷಯೋಗ್ಯವೂ ಆಗಿದೆ. ಹೀಗಿದ್ದೂ, ಶಬ್ದದಿಂದ ಪ್ರತ್ಯಕ್ಷವು ಹುಟ್ಟುತ್ತಿಲ್ಲ. ಆದ್ದರಿಂದ, ಬ್ರಹ್ಮನು ಶಬ್ದಜನ್ಯ ಸಾಕ್ಷಾತ್ಕಾರಕ್ಕೆ ವಿಷಯನೆಂಬುದು ಅಯುಕ್ತವಾದುದು.

**ಸಾಕ್ಷಾತ್ಕಾರಸ್ಯ ಯೋಗ್ಯೋಽರ್ಥೋ ಯದಾ ಸಾಕ್ಷಾತ್ ಪ್ರದೃಶ್ಯತೇ ।**
**ತತ್ರ ಪ್ರಯುಕ್ತಶಬ್ದೋಽಪಿ ಸಾಕ್ಷಾತ್ಕಾರಫಲೋ ಯದಿ ॥ ೨೫ ॥**

**ತರ್ಹಿ ಸ್ಯಾದ್ ಬ್ರಹ್ಮಣಃ ಸಾಕ್ಷಾತ್ಕಾರಃ ಪ್ರಾಕ್ಕಾರಣಾಂತರಾತ್ ।**
**ತತ್ರ ಪ್ರಯುಕ್ತಶಬ್ದಸ್ತು ವ್ಯರ್ಥಃ ಸ್ಯಾದಿತಿ ಮೇ ಮತಿಃ ॥ ೨೬ ॥**

**ಅರ್ಥ–** ಸಾಕ್ಷಾತ್ಕಾರಸ್ಯ= ಅಪರೋಕ್ಷಜ್ಞಾನಕ್ಕೆ, ಯೋಗ್ಯಃ= ಯೋಗ್ಯವಾದ, ಅರ್ಥಃ= ವಿಷಯವು, ಯದಾ= ಯಾವಾಗ, ಸಾಕ್ಷಾತ್= ನೇರವಾಗಿ, ಪ್ರದೃಶ್ಯತೇ= ಕಾಣಲ್ಪಡುತ್ತಿರುತ್ತದೋ, ತತ್ರ= ಆ ವಿಷಯದ ಬಗ್ಗೆ ಪ್ರಯುಕ್ತ= ಪ್ರಯೋಗಿಸಲ್ಪಟ್ಟ, ಶಬ್ದಃ ಅಪಿ= ವಾಕ್ಯವೂ ಕೂಡ, ಸಾಕ್ಷಾತ್ಕಾರ ಫಲಃ= ಸಾಕ್ಷಾತ್ಕಾರವನ್ನು ಹುಟ್ಟಿಸುವಂತಹದು, ಇತಿ= ಎಂಬುದಾಗಿ, ಯದಿ= ಒಂದು ಪಕ್ಷದಲ್ಲಿ, ಉಚ್ಯತೇ= ಹೇಳಲ್ಪಟ್ಟರೆ, ತರ್ಹಿ= ಆ ಪಕ್ಷದಲ್ಲಿ, ಬ್ರಹ್ಮಣಃ= ಪರಬ್ರಹ್ಮನ, ಸಾಕ್ಷಾತ್ಕಾರಃ= ಅಪರೋಕ್ಷಜ್ಞಾನವು, ಪ್ರಾಕ್= ಮೊದಲೇ, ಕಾರಣಾಂತರಾತ್= ಬೇರೊಂದು ಕಾರಣದಿಂದ, ಸ್ಯಾತ್= ಬಂದದ್ದು ಆಗಿರುತ್ತದೆ. ತತ್ರ= ಆ ವಿಷಯದಲ್ಲಿ, ಪ್ರಯುಕ್ತ= ಪ್ರಯೋಗಿಸಲ್ಪಟ್ಟ, ಶಬ್ದಃ ತು= ಶಬ್ದವಾದರೂ, ವ್ಯರ್ಥಃ= ವ್ಯರ್ಥವು, ಸ್ಯಾತ್= ಆದೀತು, ಇತಿ= ಎಂಬುದಾಗಿ, ಮೇ= ನಮ್ಮ ಮತಿಃ= ಅಭಿಪ್ರಾಯವಾಗಿದೆ.

**ಅನುವಾದ–** ಸಾಕ್ಷಾತ್ಕಾರಯೋಗ್ಯವಾದ ಅರ್ಥವು ಯಾವಾಗ ಕಣ್ಣಿಗೆ ಸಾಕ್ಷಾತ್ತಾಗಿ ಕಾಣುತ್ತಿರುತ್ತದೋ, ಅದೇ ಕಾಲದಲ್ಲಿ ಆ ವಸ್ತುವನ್ನು ಹೇಳುವ ಶಬ್ದವನ್ನು ಪ್ರಯೋಗಿಸಿದರೆ ಆ ಶಬ್ದವು ಸಾಕ್ಷಾತ್ಕಾರವನ್ನು ಹುಟ್ಟಿಸುತ್ತದೆ ಎಂಬುದಾಗಿ ಒಂದು ವೇಳೆ ಹೇಳಿದರೆ, ಆಗ ಬ್ರಹ್ಮಸಾಕ್ಷಾತ್ಕಾರವು ವೇದಾಂತಶ್ರವಣಕ್ಕಿಂತ ಮೊದಲೇ ಬೇರೆ ಕಾರಣಗಳಿಂದ (ಮಾನಸ ಪ್ರತ್ಯಕ್ಷಾದಿಗಳಿಂದ) ಉಂಟಾಗಬೇಕಾದೀತು. ಬ್ರಹ್ಮವಿಷಯದಲ್ಲಿ ಪ್ರಯುಕ್ತವಾದ ಎಲ್ಲಾ ಶಬ್ದಗಳೂ (ಸರ್ವಶಾಸ್ತ್ರಗಳೂ) ವ್ಯರ್ಥಗಳಾಗಬೇಕಾದೀತೆಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಪಕ್ಷಾಂತರಮಾಶಂಕತೇ – **ಸಾಕ್ಷಾತ್ಕಾರಸ್ಯೇತಿ** ॥ ಯೋಗ್ಯತಾಮಾತ್ರಮೇವ ನಾಲಂ ಕಿಂತು ತದ್ದರ್ಶನಸಮಯೇ ಪ್ರಯುಕ್ತಃ ಶಬ್ದಸ್ಸಾಕ್ಷಾತ್ಕಾರಮೇವ ಜನಯತೀತಿ ಶಂಕಾಭಿಪ್ರಾಯಃ । ಯದ್ಯಪೀಯಂ ಶಂಕಾ ಪ್ರಕೃತಾನುಪಯುಕ್ತಾ । ಘಟಸ್ಯೇವ ಬ್ರಹ್ಮಣಃ ಶ್ರವಣದಶಾಯಾಮೇವ ಚಕ್ಷುರಾದಿನಾ ಮನಸಾ ವಾ ದರ್ಶನಾಭಾವಾತ್ । ತಥಾಪಿ ಘಟಾದೌ ಚೇಮಾಂ ಶಂಕಾಂ ಪರಿಹರ್ತುಮಿಯಮಶಂಕಾ । ದೂಷಯತಿ – **ತರ್ಹೀತಿ** ॥ ೨೫-೨೬ ॥

**ವಿವರಣೆ–** ಪ್ರತ್ಯಕ್ಷಯೋಗ್ಯ ವಸ್ತುಗಳೆಲ್ಲಾ ಶಬ್ದದಿಂದ ಸಾಕ್ಷಾತ್ಕೃತಗಳಾಗಲಾರವು. ಶಾಬ್ದಪ್ರಯೋಗವಾದ ಕಾಲದಲ್ಲೇ ಇಂದ್ರಿಯಸನ್ನಿಕರ್ಷವುಳ್ಳ ವಸ್ತುಗಳು ಮಾತ್ರ ಶಾಬ್ದಸಾಕ್ಷಾತ್ಕಾರಕ್ಕೆ ವಿಷಯ. ಎಂದರೆ, ಕಣ್ಣಿಗೆ ವಸ್ತುವು ಕಾಣುತ್ತಿರುವಂತೆ ಶಬ್ದವನ್ನು ಪ್ರಯೋಗಿಸಿದರೆ, ಆ ಶಬ್ದದಿಂದ ವಸ್ತುವಿನ ಸಾಕ್ಷಾತ್ಕಾರವುಂಟಾಗುತ್ತದೆ. ಮನೆಯ ಹೊರಗಿರುವವನಿಗೆ ಗೃಹಾಂತಸ್ಥ ಘಟವು ಕಣ್ಣಿಗೆ ಕಾಣಿಸುತ್ತಿಲ್ಲವಾದ್ದರಿಂದ, ಅಲ್ಲಿಯ ಶಬ್ದದಿಂದ ಘಟಪ್ರತ್ಯಕ್ಷಕ್ಕೆ ಅವಕಾಶವಿಲ್ಲ. ಸ್ವಪ್ರಕಾಶವಾದ ಬ್ರಹ್ಮವು ಸಾಕ್ಷಾತ್ ಕಾಣಿಸುತ್ತಿರುವುದರಿಂದ ಇಲ್ಲಿ ಶಾಬ್ದಸಾಕ್ಷಾತ್ಕಾರವು ಯುಕ್ತವೇ ಆಗಿದೆ ಎಂಬುದು ಪೂರ್ವಪಕ್ಷ.

ಹಾಗಿದ್ದರೆ, ಬ್ರಹ್ಮನನ್ನು ಹೇಳುವ ಶಾಸ್ತ್ರವಾಕ್ಯಗಳೆಲ್ಲವೂ ವ್ಯರ್ಥವಾಗಬೇಕಾದೀತು. ಕಣ್ಣಾರೆ ಕಾಣಿಸುವ ಘಟದ ಕುರಿತಾಗಿ ಬಳಸಿದ ಶಬ್ದಗಳೆಲ್ಲವೂ ವ್ಯರ್ಥ. ಆ ಶಬ್ದವಿಲ್ಲದಿದ್ದರೂ ಘಟದ ಪ್ರತ್ಯಕ್ಷ ಬಂದೇ ಬರುತ್ತದೆಯಲ್ಲವೇ? ಹಾಗೆಯೇ, ಬ್ರಹ್ಮನೂ ಮಾನಸಪ್ರತ್ಯಕ್ಷವಿಷಯನಾಗಿರುವುದರಿಂದಲೇ, ಅವನ ಸಾಕ್ಷಾತ್ಕಾರವುಂಟಾಗುತ್ತಿರುವಾಗ ಅದೇ ವಿಷಯದಲ್ಲಿ ಬಳಸಿದ ಶಬ್ದಗಳು ವ್ಯರ್ಥಗಳು.

**ಕಿಂಚ ಪೂತ್ಕಾರ(ಫಟ್‌ಕಾರ)ಲಿಂಗೇನ ದೃಶ್ಯಮಾನೇಽಪಿ ಹಸ್ತಿನಿ ।**
**ಜಾಯಮಾನಾನುಮಾಽಪಿ ಸ್ಯಾತ್ ಸಾಕ್ಷಾತ್ಕಾರಾತ್ಮಿಕಾ ತವ ॥ ೨೭ ॥**

**ಅರ್ಥ–** ಕಿಂಚ= ಅದಲ್ಲದೆ, ಹಸ್ತಿನಿ= ಆನೆಯು, ದೃಶ್ಯಮಾನೇ ಅಪಿ= ಕಾಣಲ್ಪಡುತ್ತಿರುವಾಗಲೂ ಕೂಡ, ಪೂತ್ಕಾರ= ಘೀಳಿಡುವಿಕೆಯೆಂಬ, ಲಿಂಗೇನ=

ಅನುಮಾನದಿಂದ, ಜಾಯಮಾನಾ= ಹುಟ್ಟುವ ಅನುಮಾ ಅಪಿ= ಅನುಮಾನವೂ ಕೂಡ (ಅನುಮಿತಿಯೂ ಕೂಡ) ತವ= ನಿನ್ನ ಮತದಲ್ಲಿ, ಸಾಕ್ಷಾತ್ಕಾರಾತ್ಮಿಕಾ= ಅಪರೋಕ್ಷ ಜ್ಞಾನರೂಪವಾದದ್ದು, ಸ್ಯಾತ್= ಆದೀತು.

**ಅನುವಾದ–** **ಅಲ್ಲದೇ, ಆನೆಯು ಕಣ್ಣಾರೆ ಕಾಣುತ್ತಿರುವಾಗ ಘೀಳಿಡುವಿಕೆಯಿಂದ ಉಂಟಾಗುವ ಅನುಮಿತಿಯೂ ನಿನ್ನ ಮತದಲ್ಲಿ ಸಾಕ್ಷಾತ್ಕಾರವೆನಿಸಬೇಕಾದೀತು.**

**ಭಾವವಿಲಾಸಿನೀ–** **ಫೂತ್ಕಾರಃ ವೇತಂಡಶುಂಡಾದಂಡೋತ್ಥಸ್ವನವಿಶೇಷಃ । ತವ ಮತೇ । ದೃಶ್ಯಮಾನಾರ್ಥೇ ಜ್ಞಾನಕರಣತ್ವಸ್ಯೋಭಯತ್ರ ಸಾಮ್ಯಾದಿತಿ ಭಾವಃ ॥ ೨೭ ॥**

**ವಿವರಣೆ–** ಒಂದು ವಸ್ತು ಪ್ರತ್ಯಕ್ಷವಾಗಿ ಕಾಣಿಸುತ್ತಿದ್ದರೂ ಸಿಷಾಧಯಿಷೆ ಇದ್ದಾಗ (ಸಾಧ್ಯವನ್ನು ಹೇತುವಿನಿಂದ ಸಾಧಿಸುವ ಬಯಕೆಯಿದ್ದಾಗ) ಅನುಮಿತಿಯು ಬರುತ್ತದೆ ಎಂಬುದು ನ್ಯಾಯಸಿದ್ಧಾಂತ. ಆನೆಯು ಪ್ರತ್ಯಕ್ಷ ಕಾಣಿಸುತ್ತಿರುವಾಗಲೂ ಘೀಳಿಡುವ ಶಬ್ದದಿಂದ ಆನೆಯನ್ನು ಸಾಧಿಸಿದರೆ, ಅಲ್ಲಿ ಆನೆಯ ಅನುಮಿತಿಯುಂಟಾಗುತ್ತದೆಯೇ, ಹೊರತು ಸಾಕ್ಷಾತ್ಕಾರವಲ್ಲ. ಹಾಗೆಯೇ, ಪ್ರತ್ಯಕ್ಷಗೋಚರ ವಸ್ತುವಿನ ವಿಷಯದಲ್ಲಿ 'ಅಲ್ಲಿ ಆನೆಯಿದೆ' ಎಂಬ ಶಬ್ದವನ್ನು ಪ್ರಯೋಗಿಸಿದರೂ, ಅಲ್ಲಿ ಶಾಬ್ದಬೋಧವುಂಟಾಗುವುದೇ ಹೊರತು, ಸಾಕ್ಷಾತ್ಕಾರವಲ್ಲ. ಇಲ್ಲಿ ಸಾಕ್ಷಾತ್ಕಾರವನ್ನು ಒಪ್ಪುವವನು ಆನೆಯ ವಿಷಯದಲ್ಲೂ ಅನುಮಿತಿಯನ್ನು ಸಾಕ್ಷಾತ್ಕಾರವೆನ್ನಬೇಕಾದೀತು.

ಆನೆಯು ಸೊಂಡಲಿನಿಂದ ಗಾಳಿಯೂದಿ ಮಾಡುವ ಶಬ್ದಕ್ಕೆ ಸಂಸ್ಕೃತದಲ್ಲಿ ಫೂತ್ಕಾರವೆನ್ನುತ್ತಾರೆ. ಘೀಳಿಡುವಿಕೆ ಎಂಬುದು ಕನ್ನಡ ಶಬ್ದ. ಸುರೋತ್ತಮತೀರ್ಥರು 'ಫೂತ್ಕಾರಃ=ವೇತಂಡಶುಂಡಾದಂಡೋತ್ಥಸ್ವನವಿಶೇಷಃ' ಎಂದಿದ್ದಾರೆ. ಘಟ್ಕಾರವೆಂಬ ಪಾಠಾಂತರವಿದೆ. ಆನೆಯು ಕಿವಿಯನ್ನು ಹೊಡೆಯುವಾಗ ಉಂಟಾಗುವ ಶಬ್ದ ಘಟ್‌ಕಾರ.

**ಏಕಗೋಷ್ಠಪ್ರವಿಷ್ಟಾಃ ಕಿಂ ಮಹಿಷೀಧೇನುಪೂರ್ವಕಾಃ ।**
**ಏಕಾಕಾರಫಲಂ ದದ್ಯುರಿದಂ ಚಾದೃಷ್ಟಕಲ್ಪನಮ್ ॥ ೨೮ ॥**

**ಅರ್ಥ–** ಇದಂ ಚ= ಶಬ್ದವು ಪ್ರತ್ಯಕ್ಷಕರಣದೊಂದಿಗೆ ಸೇರಿದಾಗ, ಅಪರೋಕ್ಷಜ್ಞಾನವನ್ನು ಹುಟ್ಟಿಸುತ್ತದೆಂಬುದು, ಅದೃಷ್ಟಕಲ್ಪನಂ= ಎಲ್ಲೂ ಕಾಣದ ಸಂಗತಿಯ ಕಲ್ಪನೆಯಾಗಿದೆ. ಏಕ= ಒಂದು, ಗೋಷ್ಠ= ಹಟ್ಟಿಯನ್ನು, ಪ್ರವಿಷ್ಟಾಃ= ಸೇರಿದ, ಮಹಿಷೀಧೇನು ಪೂರ್ವಕಾಃ= ಎಮ್ಮೆ, ಆಕಳು ಮೊದಲಾದವುಗಳು, ಏಕಾಕಾರ= ಒಂದೇ ರೀತಿಯ, ಫಲಂ= ಫಲವನ್ನು, ದದ್ಯುಃ ಕಿಂ= ಕೊಡುತ್ತವೇನು?

**ಅನುವಾದ–ಪರೋಕ್ಷಜ್ಞಾನಜನಕವಾಗಿ ಲೋಕಸಿದ್ಧವಾದ ಶಬ್ದವು ಪ್ರತ್ಯಕ್ಷಕರಣದ ಜೊತೆ ಸೇರಿದಾಗ ಅಪರೋಕ್ಷಜ್ಞಾನವನ್ನು ಹುಟ್ಟಿಸುತ್ತದೆಯೆಂಬುದು ಎಲ್ಲೂ**

ಕಂಡಿಲ್ಲದ ಅಪ್ರಾಮಾಣಿಕ ಕಲ್ಪನೆಯಾಗಿದೆ. ಒಂದೇ ಹಟ್ಟಿ(ಕೊಟ್ಟಿಗೆ)ಯನ್ನು ಪ್ರವೇಶಿದ್ದಾವೆ ಎಂಬ ಕಾರಣದಿಂದ ಎಮ್ಮೆ, ಹಸು ಮುಂತಾದವು ಒಂದೇ ರೀತಿಯ ಫಲವನ್ನು ಕೊಡುತ್ತವೆಯೇನು? ಇಲ್ಲವಲ್ಲ.

**ಭಾವವಿಲಾಸಿನೀ– ದೂಷಣಾಂತರಂ ಚಾಹ – ಏಕಗೋಷ್ಠೇತಿ ॥** ಇದಂ ವಿಜಾತೀಯಕರಣಾನಾಮೇಕತ್ರ ಸನ್ನಿವೇಶೇ ಸ್ವಜಾತಿವಿರುದ್ಧಫಲಜನಕತ್ವಮ್ । ಕಿಂಚ ಚಕ್ಷುಃಕರಣಕ ಏವಾಪರೋಕ್ಷಜ್ಞಾನೇ ಶಬ್ದಸ್ಯಾಪಿ ಕರಣತೋಚ್ಯತೇ । ಉತ ತದಜನ್ಯಸಾಕ್ಷಾತ್ಕಾರಾಂತರೇ । ನಾದ್ಯಃ । ಏಕಜ್ಞಾನೇ ಕರಣದ್ವಯಾನಪೇಕ್ಷಣೇನ ಸಂಶಯೋತ್ತರಪ್ರತ್ಯಕ್ಷೇ ವ್ಯಾಪ್ತಿದರ್ಶನಸ್ಯೇವ ಸಹಕಾರಿತ್ವಸ್ಯೈವ ಪ್ರಾಪ್ತೇಃ । ನ ದ್ವಿತೀಯಃ । ಕೇವಲಶಬ್ದಾದೇವಾನ್ಯತ್ರಾಪಿ ತದುದಯಪ್ರಸಂಗಾತ್ ॥ ೨೮ ॥

**ವಿವರಣೆ–** ಇಂದ್ರಿಯಸನ್ನಿಕರ್ಷವು ಪ್ರತ್ಯಕ್ಷಕ್ಕೆ ಸಾಧನ. ಶಬ್ದವು ಪರೋಕ್ಷಜ್ಞಾನಕ್ಕೆ ಸಾಧನ. ಆದರೆ, ಇವೆರಡೂ ಒಂದೇ ವಿಷಯದಲ್ಲಿ ಸಮಾವೇಶಗೊಂಡಾಗ, ಶಬ್ದವೂ ಪ್ರತ್ಯಕ್ಷವನ್ನೇ ಹುಟ್ಟಿಸುತ್ತದೆಯೆಂಬ ಪರಪ್ರಕ್ರಿಯೆಯನ್ನು ಒಂದೇ ಹಟ್ಟಿಯಲ್ಲಿ ಸೇರಿದ ಹಸು-ಎಮ್ಮೆಗಳ ದೃಷ್ಟಾಂತದಿಂದ ನಿರಾಕರಿಸಿದ್ದಾರೆ. ವಿಜಾತೀಯ ಕರಣಗಳು ಒಂದೆಡೆ ಸಮಾವಿಷ್ಟಗಳಾದಾಗ ಸ್ವಜಾತಿವಿರುದ್ಧ ಫಲವನ್ನು ಕೊಡುತ್ತವೆ ಎಂಬುದು ಎಲ್ಲೂ ಕಂಡಿಲ್ಲದ ಕಲ್ಪನೆ.

'ದಶಮಸ್ತ್ವಮಸಿ' ಎಂಬ ವಾಕ್ಯವೂ ಮಾನಸಬೋಧಜನಕ, ಪ್ರತ್ಯಕ್ಷಜನಕವಲ್ಲ.

ದಶಮಸ್ತ್ವಮಸೀತ್ಯುಕ್ತಿರಪಿ ಶಾಬ್ದ್ಯಾ ಧಿಯಾ ಸ್ವಯಾ ।
ಚಿತ್ತವ್ಯಾಕ್ಷೇಪಹಂತ್ರ್ಯೇವ ದಶಮೋಽಹಮಿತಿ ಪ್ರಮಾ ॥ ೨೯ ॥

ತತ್ರಾಪಿ ಮಾನಸೀ ನೋ ಚೇದ್ ಅಹಂತ್ವೋಲ್ಲೇಖಿನೀ ಕಥಮ್ ।
ದಶಮಸ್ತ್ವಸೀತ್ಯತ್ರ ಹ್ಯಹಂಶಬ್ದೋ ನ ವಿದ್ಯತೇ ॥ ೩೦ ॥

**ಅರ್ಥ–** ತ್ವಂ= ನೀನು, ದಶಮಃ= ಹತ್ತನೆಯವನು, ಅಸಿ= ಆಗಿರುವಿ, ಇತಿ= ಎಂಬ, ಉಕ್ತಿಃ ಅಪಿ= ಮಾತೂ ಕೂಡ, ಸ್ವಯಾ= ತಾನು ಹುಟ್ಟಿಸಿದ, ಶಾಬ್ದ್ಯಾಧಿಯಾ= ಶಬ್ದಜನ್ಯವಾದ, ಪರೋಕ್ಷಜ್ಞಾನದ ಮೂಲಕ, ಚಿತ್ತ= ಮನಸ್ಸಿನ, ವ್ಯಾಕ್ಷೇಪ= ಅನ್ಯಾಸಕ್ತತೆಯನ್ನು, ಹಂತ್ರೀ ಏವ= ನಾಶಮಾಡುವಂತಹದೇ ಆಗಿದೆ. ತತ್ರ ಅಪಿ= ಅಲ್ಲಿಯೂ ಕೂಡ, ಅಹಂ= ನಾನು, ದಶಮಃ= ಹತ್ತನೆಯವನು, ಇತಿ= ಎಂಬುದು, ಮಾನಸೀ= ಮನೋವೃತ್ತಿರೂಪವಾದ, ಪ್ರಮಾ= ಯಥಾರ್ಥಜ್ಞಾನವು, ನೋ ಚೇತ್= ಅಲ್ಲವಾದರೆ, ಅಹಂತ್ವ= ಅಹಂ ಎಂಬ ಅಂಶವನ್ನು, ಉಲ್ಲೇಖಿನೀ= ಉಲ್ಲೇಖ ಮಾಡುವಂತಹದು, ಕಥಂ= ಹೇಗೆ, ಸ್ಯಾತ್= ಆಗುತ್ತಿತ್ತು? ದಶಮಃ ತ್ವಂ ಅಪಿ ಇತಿ ಅತ್ರ= ನೀನು ಹತ್ತನೆಯವನು ಎಂಬ ವಾಕ್ಯದಲ್ಲಿ, ಅಹಂ ಶಬ್ದಃ= ನಾನು ಎಂಬ ಶಬ್ದವು, ನ ವಿದ್ಯತೇ ಹಿ= ಇಲ್ಲವಷ್ಟೆ.

**ಅನುವಾದ–** 'ನೀನು ಹತ್ತನೆಯವನು' ಎಂಬ ಮಾತೂ ಕೂಡ ತಾನು ಹುಟ್ಟಿಸಿದ ಶಾಬ್ದಬುದ್ಧಿಯ (ಪರೋಕ್ಷಜ್ಞಾನದ) ಮೂಲಕ ಬೇರೆಡೆ ಆಸಕ್ತವಾಗಿದ್ದ ಮನಸ್ಸನ್ನು ಅಂತರ್ಮುಖಗೊಳಿಸುತ್ತದೆ. ಹೊರತು, ಅಪರೋಕ್ಷಜ್ಞಾನವನ್ನು ಹುಟ್ಟಿಸುವುದಿಲ್ಲ. ಅಲ್ಲಿ ಬಂದಿರುವ 'ನಾನು ಹತ್ತನೆಯವನಾಗಿದ್ದೇನೆ' ಎಂಬ ಜ್ಞಾನವು ಮಾನಸಜ್ಞಾನ. ಹಾಗಲ್ಲದಿದ್ದರೆ, ಆ ಜ್ಞಾನವು 'ಅಹಂ' ಎಂಬ ಅಂಶವನ್ನು ಉಲ್ಲೇಖಿಸುವುದು ಹೇಗೆ ಸಾಧ್ಯ? 'ನೀನು ಹತ್ತನೆಯವನು' ಎಂಬ ವಾಕ್ಯದಲ್ಲಿ 'ನಾನು' ಎಂಬ ಪದವಿಲ್ಲವಷ್ಟೆ.

**ಭಾವವಿಲಾಸಿನೀ–** ಪ್ರಮೇಯಂ ದೂಷಯಿತ್ವಾ ದೃಷ್ಟಾಂತಂ ಚ ದೂಷಯತಿ – **ದಶಮ ಇತಿ** ॥ ಸ್ವಾತ್ಮನಾ ಸಹ ದಶಸಂಖ್ಯಾಕಜನೇಷು ಸತ್ಸು ಸ್ವಾನವಲೋಕಿನೋ ಬಹಿರ್ಮುಖಸ್ಯ ದಶಮಃ ಕ ಇತಿ ಶಂಕಾಯಾಂ ಪ್ರಯುಕ್ತಾ 'ದಶಮಸ್ತ್ವಮಸಿ' ಇತ್ಯುಕ್ತಿರಿತ್ಯರ್ಥಃ। ಶಾಬ್ದ್ಯಾ ಶಬ್ದಕರಣಿಕಯಾ। ಧಿಯಾ ಪರೋಕ್ಷಜ್ಞಾನೇನ। ಚಿತ್ತವ್ಯಾಕ್ಷೇಪಹಂತ್ರೀ ಅನ್ಯತ್ರೈವಾಸಕ್ತಂ ತಚ್ಚಿತ್ತಂ ತ್ವಂತ್ವಪ್ರಕಾರೇಣೈವ ತತ್ಸ್ವರೂಪಂ ಪ್ರಬೋಧ್ಯ ಸ್ವಸ್ವರೂಪಾಭಿಮುಖಂ ವಿದಧತ್ಯೇವೇತ್ಯರ್ಥಃ ॥ ೨೯ ॥

ಮಾನಸೀತ್ಯುಪಲಕ್ಷಣಮ್। ಸಾಕ್ಷಿರೂಪಿಣೀವಾ। ನೋ ಚೇತ್ ಮನಃಕರಣಿಕಾ ನೋ ಚೇತ್। ಅಹಮಿತ್ಯುಲ್ಲೇಖಸ್ಯ ಮನಃಕರಣಕೇ ಸಾಕ್ಷಿರೂಪೇ ಚ ಜ್ಞಾನ ಏವ ದರ್ಶನಾತ್। ನನ್ವಹಂ ಶಬ್ದಪ್ರಯೋಗೇ ಶಾಬ್ದ್ಯಾಮಪಿ ಪ್ರತೀತೌ ಅಹಂ ತ್ವೋಲ್ಲೇಖೋऽಸ್ತೀತಿ ಚೇತ್। ಸತ್ಯಮ್। ಪ್ರಕೃತೇ ಸೋऽಪಿ ನಾಸ್ತೀತ್ಯಾಹ – **ದಶಮ ಇತಿ** ॥ ಶಕ್ತಿಗ್ರಹಪ್ರಕಾರೇಣೈವ ಜ್ಞಾನಜನಕತ್ವ-ನಿಯಮಾದಿತಿ ಭಾವಃ ॥ ೩೦ ॥

**ವಿವರಣೆ–** ಹತ್ತು ಮಂದಿ ಒಂದು ಕಡೆ ಹೋಗಿದ್ದಾರೆ. ಹಿಂತಿರುಗುವಾಗ ನಾವು ಹತ್ತು ಮಂದಿಯೂ ಜೊತೆಗೇ ಇದ್ದೇವೋ, ಅಥವಾ ಯಾರಾದರೊಬ್ಬರು ಕಳೆದು ಹೋಗಿದ್ದಾರೋ ಎಂದು ನಿರ್ಣಯಿಸಲು ಒಬ್ಬ ಲೆಕ್ಕ ಮಾಡುವುದಕ್ಕೆ ಪ್ರಾರಂಭಿಸಿದ. ತನ್ನನ್ನು ಬಿಟ್ಟು ಲೆಕ್ಕ ಮಾಡಿದುದರಿಂದ ಒಂಭತ್ತು ಮಂದಿ ಮಾತ್ರ ಲೆಕ್ಕಕ್ಕೆ ಸಿಕ್ಕಿದರು. ಇನ್ನೋರ್ವನೇನಾದ? ಎಂಬ ಚಿಂತೆಯಿಂದ ಆತ ಕುಳಿತಿದ್ದಾಗ ಬುದ್ಧಿವಂತನೊಬ್ಬ 'ಹತ್ತನೆಯವ ನೀನೇ' ಎಂದು ತಿಳಿಹೇಳಿದ. 'ದಶಮಸ್ತ್ವಮಸಿ' ಎಂಬ ಈ ಮಾತಿನಿಂದ ಅವನಿಗೆ 'ನಾನು ಹತ್ತನೆಯವನು' ಎಂಬುದಾಗಿ ಅಪರೋಕ್ಷಜ್ಞಾನವುಂಟಾಗುತ್ತದೆ. ಇದೇ ಶಾಬ್ದಾಪರೋಕ್ಷ. ಇದರಂತೆ, 'ತತ್ವಮಸಿ' 'ನೀನು ಬ್ರಹ್ಮನಾಗಿದ್ದೀಯೆ' ಎಂಬ ವೇದವಾಕ್ಯದಿಂದಲೂ ಶಾಬ್ದಾಪರೋಕ್ಷಜ್ಞಾನವುಂಟಾಗುವುದು ಎಂಬುದಾಗಿ ಅದ್ವೈತವು ಸಮರ್ಥಿಸಿದೆ. ಇದನ್ನು ನಿರಾಕರಿಸುವುದಕ್ಕಾಗಿ ದೃಷ್ಟಾಂತವಾಗಿ ನಿರೂಪಿಸಿದ 'ದಶಮಸ್ತ್ವಮಸಿ' ಎಂಬಲ್ಲಿ ಅಪರೋಕ್ಷಜ್ಞಾನವುಂಟಾಗುವುದಿಲ್ಲ. ಹೊರತಾಗಿ, ಮಾನಸಬೋಧವೋ ಸಾಕ್ಷಿಜ್ಞಾನವೋ ಉಂಟಾಗುತ್ತದೆ ಎಂದು ನಿರೂಪಿಸುತ್ತಿದ್ದಾರೆ.

'ನೀನು ದಶಮ' ಎಂಬ ವಾಕ್ಯದಿಂದ 'ನಾನು ದಶಮ' ಎಂಬ ಜ್ಞಾನವುಂಟಾಗಿದೆ. ಹೊರತು, ನೀನು ದಶಮನೆಂದಲ್ಲ. 'ನಾನು' ಎಂಬ ಶಬ್ದ ವಾಕ್ಯದಲ್ಲಿಲ್ಲದಿದ್ದರೂ

ಬೋಧವು 'ನಾನು' ಎಂಬುದನ್ನು ಉಲ್ಲೇಖಿಸಿದೆ. ಹಾಗಾಗಿ, ಇದು ಶಾಬ್ದಬೋಧವೂ ಅಲ್ಲ. ಏಕೆಂದರೆ, ಶಬ್ದವು ಶಬ್ದಶಕ್ತಿಯಿಂದ ಬೋಧವನ್ನು ಹುಟ್ಟಿಸುವಾಗ 'ತ್ವಂ'ಶಬ್ದದಿಂದ 'ಅಹಂ' ಎಂಬ ಅರ್ಥವನ್ನು ತಿಳಿಸಲಾರದು. ಹಾಗಾಗಿ, ಇದು ಮಾನಸಬೋಧ ಅಥವಾ ಸಾಕ್ಷಿಜ್ಞಾನ. 'ಅಹಂ' ಎಂಬ ಉಲ್ಲೇಖವು ಮನಃಕರಣಕಜ್ಞಾನ ಅಥವಾ ಸಾಕ್ಷಿಜ್ಞಾನದಲ್ಲಿ ಮಾತ್ರ ದೃಷ್ಟವಾಗಿದೆ. 'ದಶಮಸ್ತ್ವಮಸಿ' ಎಂಬ ಶಬ್ದವು 'ನೀನು ದಶಮ' ಎಂಬ ಜ್ಞಾನವನ್ನೇ (ಶಾಬ್ದಬೋಧವನ್ನೇ) ಹುಟ್ಟಿಸಿದೆ. ಈ ಬೋಧದಿಂದಾಗಿ ದಶಮನೆಲ್ಲಿ? ಎಂಬ ಚಿಂತೆಯಿಂದಾಗಿ ಬಹಿರ್ಮುಖವಾಗಿದ್ದ ಮನಸ್ಸು 'ನೀನು' ಎಂದುದರಿಂದ ತನ್ನ ಸ್ವರೂಪದ ಕಡೆ ಮುಖ ಮಾಡುತ್ತದೆ. ಆಗ, 'ನಾನು ದಶಮ' ಎಂಬ ಜ್ಞಾನವುಂಟಾಗುತ್ತದೆ. ಆದ್ದರಿಂದ ಶಾಬ್ದಬೋಧವು ಚಿತ್ತವ್ಯಾಕ್ಷೇಪನಿವೃತ್ತಿಯನ್ನಷ್ಟೇ ಮಾಡುತ್ತದೆ. 'ಅಹಂ ದಶಮಃ' ಎಂಬ ಬೋಧವು ಮನಸ್ಸಿನಿಂದ ಅಥವಾ ಸಾಕ್ಷಿಯಿಂದ ಉಂಟಾಗುತ್ತದೆ. ಈ ಜ್ಞಾನಕ್ಕೆ ಶಬ್ದವು ಕರಣವಲ್ಲ. ಮನಸ್ಸು ಕರಣ. ಹಾಗಾಗಿ, ಶಬ್ದಕರಣಕವಾದ ಅಪರೋಕ್ಷಜ್ಞಾನವೆಂಬುದು ಎಂದಿಗೂ ಇಲ್ಲ.

**ತ್ವಂತಾಮೇವ ಜ್ಞಾಪಯೇತ್ ಸಾ ನಾಹಂತಾಂ ಜ್ಞಾಪಯೇದ್ಧಿ ವಾಕ್ ।**
**ಶಬ್ದೋ ವದೇತ್ ಸ್ವಶಕ್ಯಾರ್ಥಮಶಕ್ಯಾರ್ಥಂ ಕಥಂ ವದೇತ್ ॥ ೩೧ ॥**

**ಅರ್ಥ–** ಸಾ ವಾಕ್= ನೀನು ಹತ್ತನೆಯವನು ಎಂಬ ವಾಕ್ಯವು, ತ್ವಂತಾಂ ಏವ= ನೀನು ಎಂಬ ಅಂಶವನ್ನು ಮಾತ್ರ, ಜ್ಞಾಪಯೇತ್= ತಿಳಿಸಬಲ್ಲುದು, ಅಹಂತಾಂ= ಅಹಂ ಎಂಬ ಅಂಶವನ್ನು, ನ ಜ್ಞಾಪಯೇತ್ ಹಿ= ತಿಳಿಸಲಾರದಷ್ಟೆ? ಶಬ್ದಃ= ಶಬ್ದವು, ಸ್ವಶಕ್ಯಾರ್ಥಂ= ಶಕ್ತಿವೃತ್ತಿಯಿಂದ ಲಭ್ಯವಾದ ತನ್ನ ಅರ್ಥವನ್ನು, ವದೇತ್= ಹೇಳುತ್ತದೆ, ಅಶಕ್ಯಾರ್ಥಂ= ಶಕ್ತಿವೃತ್ತಿಯಿಂದ ಲಭ್ಯವಲ್ಲದ ಅರ್ಥವನ್ನು ಕಥಂ= ಹೇಗೆ, ವದೇತ್= ಹೇಳುತ್ತದೆ.

**ಅನುವಾದ–** 'ದಶಮಸ್ತ್ವಮಸಿ' ಎಂಬ ಮಾತು ನೀನು ಹತ್ತನೆಯವನು ಎಂದಷ್ಟೇ ತಿಳಿಸಬಲ್ಲುದು. ನಾನು ಹತ್ತನೆಯವನೆಂದು ತಿಳಿಸಲಾರದಷ್ಟೆ. ಏಕೆಂದರೆ, ಶಬ್ದವು ತನ್ನ ಶಕ್ತಿಗನುಗುಣವಾದ್ದನ್ನೇ (ಸ್ವಶಕ್ಯಾರ್ಥವನ್ನೇ) ತಿಳಿಸಬಲ್ಲುದು. ಸ್ವಶಕ್ತಿಗೆ ಮೀರಿದುದನ್ನು (ಅಶಕ್ಯಾರ್ಥವನ್ನು) ಹೇಗೆ ತಾನೇ ತಿಳಿಸೀತು?

**ವಿವರಣೆ–** 'ಘಟ' ಎಂಬ ಶಬ್ದವು ಮಡಕೆಯನ್ನು ತಿಳಿಸುತ್ತದೆ. ಬಟ್ಟೆಯನ್ನು ತಿಳಿಸುವುದಿಲ್ಲ. ಇದಕ್ಕೆ ಕಾರಣ 'ಘಟ' ಎಂಬ ಶಬ್ದಕ್ಕೂ, ಮಡಕೆಯೆಂಬ ಅರ್ಥಕ್ಕೂ ವಾಚ್ಯವಾಚಕಭಾವಸಂಬಂಧವಿದೆ. ಈ ಪದ ಹಾಗೂ ಪದಾರ್ಥಗಳ ಸಂಬಂಧವನ್ನು ಶಾಸ್ತ್ರಗಳಲ್ಲಿ ಪದಶಕ್ತಿ ಎಂದು ವ್ಯವಹರಿಸುತ್ತಾರೆ. ಶಕ್ತಿಯು ಯಾವ ಅರ್ಥದಲ್ಲಿ ಇರುವುದೋ, ಆ ಅರ್ಥವನ್ನು 'ಶಕ್ಯಾರ್ಥ' ಎನ್ನಲಾಗುತ್ತದೆ. ಘಟಪದಶಕ್ಯಾರ್ಥ ಮಡಿಕೆ, ಹೊರತು ಬಟ್ಟೆಯಲ್ಲ. ಹಾಗಾಗಿ, ಘಟಶಬ್ದವು ಅಶಕ್ಯಾರ್ಥವಾದ ಬಟ್ಟೆಯನ್ನು

ತಿಳಿಸುವುದಿಲ್ಲ. ಅಂತೆಯೇ, ತ್ವಂಪದವು ಸ್ವಶಕ್ಯಾರ್ಥವಾದ 'ನೀನು' ಎಂದು ತಿಳಿಸಬಲ್ಲುದೇ ಹೊರತು, 'ನಾನು' ಎಂಬುದನ್ನು ತಿಳಿಸಲಾರದು. ಇದನ್ನೇ ರಾಜರು 'ಅಶಕ್ಯಾರ್ಥಂ ಕಥಂ ವದೇತ್?' ಎಂದು ಪ್ರಶ್ನಿಸಿದ್ದಾರೆ.

**ಘಟತ್ವಾಕಾರಧೀರೇವ ಘಟಶಬ್ದೇನ ಜಾಯತೇ ।**
**ದ್ರವ್ಯತ್ವಾಕಾರಧೀರ್ದ್ರವ್ಯಪದಾದುಭಯವತ್ಯಪಿ ॥**
**ದಶಮೋಽಹಂ ತ್ವಿತಿ ತು ಯಾ ಮತಿಃ ಸಾ ಮಾನಸೀ ಧ್ರುವಮ್ ॥ ೩೨ ॥**

**ಅರ್ಥ–** ಉಭಯವತಿ ಅಪಿ= ದ್ರವ್ಯತ್ವ ಹಾಗೂ ಘಟತ್ವಗಳೆಂಬ ಎರಡೂ ಧರ್ಮಗಳುಳ್ಳದ್ದಾದರೂ, ಘಟೇ= ಘಟದ ಬಗ್ಗೆ, ಘಟಶಬ್ದೇನ= ಇದು ಘಟ ಎಂಬ ವಾಕ್ಯದಿಂದ, ಘಟತ್ವಾಕಾರಧೀಃ ಏವ= ಘಟತ್ವವನ್ನು ವಿಷಯೀಕರಿಸುವ ಜ್ಞಾನವೇ, ಜಾಯತೇ= ಹುಟ್ಟುತ್ತದೆ. ಅತಃ= ಆದ್ದರಿಂದ, ದಶಮಃ ಅಹಂ ಇತಿ= ನಾನು ಹತ್ತನೆಯವನೆಂಬ, ಯಾ= ಯಾವ, ಮತಿಃ= ಜ್ಞಾನವು ಇದೆಯೋ, ಸಾ ತು= ಅದಾದರೂ, ಧ್ರುವಂ= ನಿಶ್ಚಿತವಾಗಿಯೂ, ಮಾನಸೀ= ಮನಃಪ್ರತ್ಯಕ್ಷರೂಪವಾದದ್ದು.

**ಅನುವಾದ–** ದ್ರವ್ಯತ್ವ ಹಾಗು ಘಟತ್ವಗಳೆರಡೂ ಘಟದಲ್ಲಿದ್ದರೂ 'ಘಟಃ' ಎಂಬ ಶಬ್ದದಿಂದ ಘಟತ್ವಪ್ರಕಾರಕ ಬುದ್ಧಿಯುಂಟಾಗುತ್ತದೆಯೇ ಹೊರತು, ದ್ರವ್ಯತ್ವಪ್ರಕಾರಕ ಬುದ್ಧಿಯುಂಟಾಗುವುದಿಲ್ಲ. 'ದ್ರವ್ಯಂ' ಎಂಬ ಪದದಿಂದ ದ್ರವ್ಯತ್ವವುಳ್ಳದ್ದಾಗಿ ಘಟವು ತಿಳಿಯುತ್ತದೇ ಹೊರತು, ಘಟತ್ವವುಳ್ಳದ್ದಾಗಿ ಅಲ್ಲ. ಆದ್ದರಿಂದ, 'ನಾನು ಹತ್ತನೆಯವನು' ಎಂಬ ಜ್ಞಾನವು ನಿಶ್ಚಯವಾಗಿಯೂ ಮಾನಸ ಜ್ಞಾನ. ಶಾಬ್ದಾಪರೋಕ್ಷವಲ್ಲ. ಇದು ದಿಟ.

**ಭಾವವಿಲಾಸಿನೀ–** ನನುಸ್ವಸ್ವರೂಪೇ ಅಹಂತ್ವಸ್ಯಾಪಿ ವಿದ್ಯಮಾನತ್ವಾತ್ತ್ವಮಿತಿ ಪದೇನೈವ ತಸ್ಯಾಪಿ ಬೋಧೋಽಸ್ತ್ವಿತ್ಯತ ಆಹ – **ಘಟತ್ವೇತಿ** ॥ ಉಭಯವತ್ಯಪಿ ದ್ರವ್ಯತ್ವಘಟತ್ವವತ್ಯಪಿ ॥ ೩೨ ॥

**ವಿವರಣೆ–** 'ದಶಮಸ್ತ್ವಮಸಿ' ಎಂಬ ವಾಕ್ಯದಲ್ಲಿ 'ಅಹಂ'ಶಬ್ದವಿಲ್ಲದಿದ್ದರೂ ಆ ವಾಕ್ಯವನ್ನು ಕೇಳಿದ ವ್ಯಕ್ತಿಯಲ್ಲಿ ಅಹಂತ್ವವು ಇರುವುದರಿಂದ 'ಅಹಂ ದಶಮಃ' ಎಂಬ ಜ್ಞಾನ ಬರಬಹುದಲ್ಲವೇ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಶಬ್ದಶಕ್ತಿಗೆ ವಿಷಯವಲ್ಲದ್ದೂ ಅಲ್ಲಿ ಇದೆ ಎಂಬ ಏಕೈಕಕಾರಣದಿಂದ ಶಾಬ್ದಬೋಧದಲ್ಲಿ ಕಾಣಿಸುತ್ತದೆಯೆಂದಾದರೆ 'ಘಟ' ಎಂಬ ಶಬ್ದದಿಂದ 'ದ್ರವ್ಯತ್ವವುಳ್ಳದ್ದು ಘಟ' ಎಂಬ ಬೋಧವೂ ಬರಬೇಕಾಗುತ್ತದೆ. ಏಕೆಂದರೆ, ಘಟದಲ್ಲಿ ಘಟತ್ವವೂ ಇದೆ. ದ್ರವ್ಯತ್ವವೂ ಇದೆ. ಆದರೂ ಘಟವೆಂಬ ಪದದಿಂದ 'ಘಟತ್ವವಾನ್' ಎಂಬ ಜ್ಞಾನವುಂಟಾಗುತ್ತದೆ. ದ್ರವ್ಯವೆಂಬ ಶಬ್ದದಿಂದ ದ್ರವ್ಯತ್ವವಾನ್ ಎಂಬ ಬೋಧವುಂಟಾಗುತ್ತದೆ. ಇದಕ್ಕೆ ಕಾರಣ, ಘಟಶಬ್ದಕ್ಕೆ ಘಟತ್ವವತ್‌ನಲ್ಲಿ ಶಕ್ತಿ. ದ್ರವ್ಯಶಬ್ದಕ್ಕೆ ದ್ರವ್ಯತ್ವವತ್‌ನಲ್ಲಿ ಶಕ್ತಿ ಎಂಬುದು. ಹಾಗಾಗಿ

'ದಶಮಸ್ತ್ವಮಸಿ' ಎಂಬ ವಾಕ್ಯದಿಂದ 'ದಶಮೋऽಹಮಸ್ಮಿ' ಎಂಬ ಜ್ಞಾನವು ಬರುವುದು ಅಶಕ್ಯ.

ಒಟ್ಟಭಿಪ್ರಾಯ ಇಷ್ಟು. 'ಅಹಂ ದಶಮಃ' ಎಂಬುದು ಅಪರೋಕ್ಷ ಜ್ಞಾನವೆಂಬುದರ ಬಗ್ಗೆ ವಿವಾದವಿಲ್ಲ. ಆದರೆ, ಈ ಪ್ರತ್ಯಕ್ಷಾತ್ಮಕ ಜ್ಞಾನವು 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಹುಟ್ಟಿದೆ ಎಂಬುದು ವಿವಾದಗ್ರಸ್ತ. ಹಲವು ಯುಕ್ತಿಗಳಿಂದ 'ದಶಮೋऽಹಂ' ಎಂಬುದು ವಾಕ್ಯಜನ್ಯವಲ್ಲ. ವಾಕ್ಯಜನ್ಯವಾದ ಶಾಬ್ದಬೋಧದಿಂದ ಮನಸ್ಸು ಸ್ವಸ್ವರೂಪಾಭಿಮುಖವಾಗಿ ಅಂತಹ ಮನಸ್ಸಿನಿಂದ ಬಂದ ಪ್ರತ್ಯಕ್ಷ. ಹಾಗಾಗಿ ಶಾಬ್ದಪ್ರತ್ಯಕ್ಷಕ್ಕೆ ದೃಷ್ಟಾಂತವಾಗಿ 'ದಶಮಸ್ತ್ವಮಸಿ' ಎಂಬುದನ್ನು ಬಳಸಿಕೊಂಡದ್ದು ತಪ್ಪು.

'ನಾನು ಹತ್ತನೆಯವನು' ಎಂಬ ಜ್ಞಾನವು ಮಾನಸಪ್ರತ್ಯಕ್ಷವೇ ದಿಟ. 'ಸಾ ಮಾನಸೀ ಧ್ರುವಮ್' ಎಂಬು ಶ್ರೀರಾಜರು ಒತ್ತಿ ಹೇಳಿದ್ದಾರೆ. ಸುರೋತ್ತಮತೀರ್ಥರು ವ್ಯಾಖ್ಯಾನಿಸುತ್ತಾ 'ಮಾನಸೀತ್ಯುಪಲಕ್ಷಣಂ, ಸಾಕ್ಷಿರೂಪಿಣೀ ವಾ । ಅಹಮಿತ್ಯುಲ್ಲೇಖಸ್ಯ ಮನಃಕರಣಕೇ ಸಾಕ್ಷಿರೂಪೇ ಚ ಜ್ಞಾನೇ ಏವ ಸತ್ವಾತ್' ಎಂದಿದ್ದಾರೆ. ಆದ್ದರಿಂದ, 'ಅಹಂ ದಶಮೋऽಸ್ಮಿ' ಎಂಬ ಜ್ಞಾನವು ಮಾನಸಪ್ರತ್ಯಕ್ಷವೂ ಆಗಬಹುದು. ಸಾಕ್ಷಿಪ್ರತ್ಯಕ್ಷವೂ ಆಗಬಹುದು ಎಂಬುದೇ ರಾಜರ ಅಭಿಪ್ರಾಯ. 'ಧ್ರುವಂ' (ದಿಟ) ಎಂಬ ಶಬ್ದದಿಂದ ಶಾಬ್ದಪ್ರತ್ಯಕ್ಷವಂತೂ ಸುತರಾಂ ಅಲ್ಲ ಎಂದು ಧ್ವನಿತವಾಗಿದೆ.

**ಅವ್ಯುತ್ಪನ್ನಸ್ಯ ತದ್ವಾಕ್ಯಶ್ರವಣೇऽಪಿ ಮತಿರ್ನ ಸಾ ।**
**ವ್ಯುತ್ಪತ್ತಿಃ ಶಬ್ದಜನ್ಯಾರ್ಥಜ್ಞಾನೇ ಕ್ಲೃಪ್ತಂ ಹಿ ಕಾರಣಮ್ ॥ ೩೩ ॥**

**ಅರ್ಥ–** ಅವ್ಯುತ್ಪನ್ನಸ್ಯ= ವಾಚ್ಯವಾಚಕ ಸಂಬಂಧ ಜ್ಞಾನವಿಲ್ಲದವನಿಗೆ, ತದ್ವಾಕ್ಯ= ನೀನು ಹತ್ತನೆಯವನು ಎಂಬ ವಾಕ್ಯದ ಶ್ರವಣೇ ಅಪಿ= ಶ್ರವಣವಾದರೂ, ಸಾ= ಆ, ಮತಿಃ= ನಾನು ಹತ್ತನೆಯವನು ಎಂಬ ಜ್ಞಾನವು, ನ ಭವತಿ= ಬರುವುದಿಲ್ಲ. ಶಬ್ದ= ಶಬ್ದದಿಂದ, ಜನ್ಯ= ಹುಟ್ಟುವ, ಅರ್ಥ= ವಿಷಯದ, ಜ್ಞಾನೇ= ಜ್ಞಾನಕ್ಕೆ, ವ್ಯುತ್ಪತ್ತಿಃ= ವಾಚ್ಯವಾಚಕ ಸಂಬಂಧ ಜ್ಞಾನವು, ಕ್ಲೃಪ್ತಂ= ಸರ್ವಸಮ್ಮತವಾದ, ಕಾರಣಂ ಹಿ= ಕಾರಣವಾಗಿದೆಯಷ್ಟೆ?

**ಅನುವಾದ–** ವಾಚ್ಯವಾಚಕಭಾವಸಂಬಂಧಜ್ಞಾನವು (ವ್ಯುತ್ಪತ್ತಿಯು) ಇಲ್ಲದವನಿಗೆ 'ದಶಮಸ್ತ್ವಮಸಿ' ಎಂಬ ವಾಕ್ಯದ ಶ್ರವಣವಾದರೂ 'ನಾನು ಹತ್ತನೆಯವನು' ಎಂಬ ಜ್ಞಾನವು ಬರುವುದಿಲ್ಲ. ಶಬ್ದದಿಂದ ಅರ್ಥಜ್ಞಾನವು ಬರಬೇಕಾದರೆ 'ವ್ಯುತ್ಪತ್ತಿ' ಎಂದರೆ ವಾಚ್ಯವಾಚಕಭಾವ ಸಂಬಂಧ ಜ್ಞಾನವು ಸರ್ವಸಮ್ಮತವಾದ ಕಾರಣವಲ್ಲವೇ.

**ವಿವರಣೆ–** 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಶಾಬ್ದಬೋಧವು ಬಂದು, ಅದರಿಂದ ಮನಸ್ಸು ಸ್ವಾಭಿಮುಖವಾಗಿ ಮಾನಸಪ್ರತ್ಯಕ್ಷವುಂಟಾಗುತ್ತದೆಂಬ ನಮ್ಮ

ವಿವರಣೆಯನ್ನು ಪರನು ನಿರಾಕರಿಸುತ್ತಾನೆ. ವಾಕ್ಯವನ್ನು ಕೇಳಿದವನಿಗೆ ಶಾಬ್ದಬೋಧ ಬರುವುದೇ ಇಲ್ಲ. ನೇರವಾಗಿ 'ಅಹಂ ದಶಮಃ' ಎಂಬ ಪ್ರತ್ಯಕ್ಷವೇ ಬರುತ್ತಿದೆ ಎಂದು. ಇದು ಸರಿಯಲ್ಲ. ಹಾಗಿದ್ದರೆ, ಯಾವ ವ್ಯಕ್ತಿಗೆ 'ದಶಮಃ ತ್ವಂ ಅಸಿ' ಎಂಬ ಶಬ್ದಗಳಿಗೆ ಶಕ್ತಿಜ್ಞಾನವಿಲ್ಲವೋ (ಆ ಶಬ್ದಗಳಿಗೆ ಏನರ್ಥ ಎಂದು ಗೊತ್ತಿಲ್ಲವೋ), ಅಂತಹ ಅಸಂಸ್ಕೃತಜ್ಞನಿಗೂ 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ 'ಅಹಂ ದಶಮಃ' ಎಂಬ ಪ್ರತ್ಯಕ್ಷ ಬರಬೇಕಾದೀತು. ಆದರೆ, ಶಾಬ್ದಬೋಧದ ಕಾರಣವಾದ ವ್ಯುತ್ಪತ್ತಿಯಿಲ್ಲದವನಿಗೆ ಇಲ್ಲಿ ಜ್ಞಾನವುಂಟಾಗದಿರುವುದರಿಂದ ವ್ಯುತ್ಪತ್ತಿಯಿದ್ದವನಿಗೆ ಮಾತ್ರ ಜ್ಞಾನವುಂಟಾಗುವುದರಿಂದ, 'ಅಹಂ ದಶಮಃ' ಎಂಬ ಮಾನಸಪ್ರತ್ಯಕ್ಷಕ್ಕೆ ಮೊದಲು ಶಾಬ್ದಬೋಧವೊಂದು ಬಂದಿದೆಯೆಂದು ನಿರ್ಧರಿಸಬೇಕಾಗಿದೆ.

ಇದನ್ನೇ ಮುಂದಿನ ಶ್ಲೋಕದಲ್ಲಿ ಉಪಸಂಹರಿಸುತ್ತಿದ್ದಾರೆ -

**ಅತಃ ಶಾಬ್ದಪ್ರಬೋಧೋऽಸ್ತಿ ಮಧ್ಯೇ ವ್ಯಾಸಂಗಭಂಜಕಃ ।**
**ಸಮಾಹಿತಮನಾಸ್ತು ಸ್ವಂ ದಶಮಂ ಮನಸೇಕ್ಷತೇ ॥ ೩೪ ॥**

**ಅರ್ಥ–** ಅತಃ= ಆದ್ದರಿಂದ, ಮಧ್ಯೇ= 'ನೀನು ಹತ್ತನೆಯವನು' ಎಂಬ ವಾಕ್ಯ ಹಾಗೂ 'ನಾನು ಹತ್ತನೆಯವನು' ಎಂಬ ಪ್ರತ್ಯಕ್ಷಗಳ ನಡುವೆ ವ್ಯಾಸಂಗಭಂಜಕಃ= ಮನಸ್ಸಿನ ಅನ್ಯಾಸಕ್ತತೆಯನ್ನು ದೂರ ಮಾಡುವ ಶಾಬ್ದಪ್ರಬೋಧಃ= ಶಬ್ದಜನ್ಯಜ್ಞಾನವು, ಅಸ್ತಿ= ಇದೆ, ತೇನ= ಆ ಶಾಬ್ದಬೋಧದ ಮೂಲಕ, ಸಮಾಹಿತಮನಾಃ ತು= ಏಕಾಗ್ರಮನಸ್ಕನಾದ ವ್ಯಕ್ತಿಯಾದರೂ, ಸ್ವಂ= ತನ್ನನ್ನು, ದಶಮಂ= ಹತ್ತನೆಯವನೆಂದು, ಮನಸಾ= ಮನಸ್ಸಿನಿಂದ, ಈಕ್ಷತೇ= ಕಂಡುಕೊಳ್ಳುತ್ತಾನೆ.

**ಅನುವಾದ–** ಆದ್ದರಿಂದ 'ದಶಮಸ್ತ್ವಮಸಿ' ಎಂಬ ವಾಕ್ಯ ಹಾಗೂ 'ಅಹಂ ದಶಮಃ' ಎಂಬ ಪ್ರತ್ಯಕ್ಷ ಇವೆರಡರ ಮಧ್ಯೆ ಮನಸ್ಸಿನ ಅನ್ಯತ್ರ ಆಸಕ್ತಿಯನ್ನು ದೂರ ಮಾಡುವ ಶಾಬ್ದಬೋಧವೊಂದು ಇದೆ. ಆ ಶಾಬ್ದಬೋಧದಿಂದ ಏಕಾಗ್ರ ಮನಸ್ಕನಾದ ವ್ಯಕ್ತಿಯು ನಾನೇ ಹತ್ತನೆಯವನೆಂದು ಮನಸ್ಸಿನಿಂದ ಕಂಡುಕೊಳ್ಳುತ್ತಾನೆ (ಸಾಕ್ಷಾತ್ಕರಿಸಿಕೊಳ್ಳುತ್ತಾನೆ).

**ಭಾವವಿಲಾಸಿನೀ–** ಯುಕ್ತ್ಯಂತರಮಪಿ ಸೂಚಯನ್ನೇತದೇವ ವಿಶದಯತಿ – **ಅವ್ಯುತ್ಪನ್ನಸ್ಯೇತಿ ॥** ಸಾ ವಾಕ್ಯಜನ್ಯಾ ॥ ೩೩-೩೪ ॥

**ವಿವರಣೆ–** 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಶಾಬ್ದಬೋಧವನ್ನು ಒಪ್ಪಲೇಬೇಕು. ಇಲ್ಲವಾದರೆ, ಹಿಂದಿನ ಶ್ಲೋಕದಲ್ಲಿ ಹೇಳಿದ ವ್ಯುತ್ಪತ್ತಿಯೊಂದಿಗಿನ ಅನ್ವಯ-ವ್ಯತಿರೇಕಗಳು ಕೂಡುವುದಿಲ್ಲ. ವ್ಯುತ್ಪತ್ತಿಯು ಶಾಬ್ದಬೋಧಕ್ಕೆ ಕಾರಣವೇ ಹೊರತು, ಪ್ರತ್ಯಕ್ಷಕ್ಕಲ್ಲ. 'ಅಹಂ ದಶಮಃ' ಎಂಬುದು ಶಾಬ್ದಬೋಧವಾಗಲಾರದು ಎಂದು ಹಿಂದೆಯೇ

ಉಪಪಾದಿಸಲಾಗಿದೆ. 'ಅಹಂ' ಎಂಬ ಉಲ್ಲೇಖವುಳ್ಳ ಈ ಜ್ಞಾನವು ಪ್ರತ್ಯಕ್ಷವೇ ಆಗಿದೆ. ಹಾಗಾಗಿ, ಈ ಮಾನಸಪ್ರತ್ಯಕ್ಷ ಹಾಗು 'ದಶಮಸ್ತ್ವಮಸಿ' ಎಂಬ ವಾಕ್ಯಗಳ ಮಧ್ಯೆ ಚಿತ್ತವ್ಯಗ್ರತೆಗೆ ಪರಿಹಾರಕವಾದ ಶಾಬ್ದಬೋಧವನ್ನು ಒಪ್ಪಲೇಬೇಕು. ಈ ಶಾಬ್ದಬೋಧದ ಆಕಾರ 'ನೀನು ಹತ್ತನೆಯವನಿದ್ದೀಯೆ' ಎಂಬುದಾಗಿಯೇ ಹೊರತು, ನಾನು ದಶಮನೆಂದಲ್ಲ. ಈ ಬೋಧ ಬಂದ ಮೇಲೆ, ಅದರ ಸಹಕಾರದಿಂದ 'ನಾನು ದಶಮ' ಎಂಬ ಮಾನಸಪ್ರತ್ಯಕ್ಷವು ಬರುತ್ತದೆ.

**ಕಾರುಃ ಸ್ವಕಂಠಪರಶುಂ ವಿಸ್ಮೃತ್ಯ ಬಹು ಚಿಂತಯನ್ ।**
**ಅಯಂ ಪರಶುರಿತ್ಯುಕ್ತೇ ಕಿಂ ಶಬ್ದಾದೇವ ಪಶ್ಯತಿ ॥ ೩೫ ॥**

**ಉಕ್ತಿಃ ಪರೋಕ್ಷಜ್ಞಾನೇನ ಚಿತ್ತವ್ಯಾಕ್ಷೇಪನಾಶಿನೀ ।**
**ಪಶ್ಚಾತ್ ಸ್ವಕಂಠಪರಶುಂ ಚಕ್ಷುಷೈವ ಸ ಪಶ್ಯತಿ ॥ ೩೬ ॥**

**ಅರ್ಥ–** ಸ್ವಕಂಠ= ತನ್ನ ಕುತ್ತಿಗೆ ಬಳಿ ಇರುವ, ಪರಶುಂ= ಕೊಡಲಿಯನ್ನೂ, ವಿಸ್ಮೃತ್ಯ= ಮರೆತು, ಬಹು= ಬಹಳವಾಗಿ, ಚಿಂತಯನ್= ಚಿಂತಿಸುತ್ತಿರುವ, ಕಶ್ಚನ= ಒಬ್ಬ, ಕಾರುಃ= ಬಡಗಿಯು, ಅಯಂ= ಇದು, ಪರಶುಃ= ಕೊಡಲಿಯು, ಇತಿ= ಎಂಬುದಾಗಿ, ಉಕ್ತೇ= ಮತ್ತೊಬ್ಬನಿಂದ ಹೇಳಲ್ಪಟ್ಟಾಗ, ಶಬ್ದಾತ್ ಏವ= ಇದು ಕೊಡಲಿ ಎಂಬ ಮಾತಿನಿಂದಲೇ, ಪರಶುಂ= ಕೊಡಲಿಯನ್ನು, ಪಶ್ಯತಿ ಕಿಂ= ನೋಡುತ್ತಾನೇನು? ಉಕ್ತಿಃ= ಇದು ಕೊಡಲಿ ಎಂಬ ವಾಕ್ಯವು, ಪರೋಕ್ಷಜ್ಞಾನೇನ= ಶಬ್ದಜನ್ಯವಾದ ಪರೋಕ್ಷಜ್ಞಾನದ ಮೂಲಕ, ಚಿತ್ತ= ಮನಸ್ಸಿನ ವ್ಯಾಕ್ಷೇಪ= ಪರಾಙ್ಮುಖತೆಯನ್ನು, ನಾಶಿನೀ= ನಾಶಮಾಡುವಂತಹದಾಗಿದೆ. ಪಶ್ಚಾತ್= ಪರೋಕ್ಷಜ್ಞಾನದ ಬಳಿಕ, ಸಃ= ಬಡಗಿಯು, ಸ್ವಕಂಠಪರಶುಂ= ತನ್ನ ಕುತ್ತಿಗೆಯ ಬಳಿ ಇರುವ ಕೊಡಲಿಯನ್ನು, ಚಕ್ಷುಷಾ ಏವ= ತನ್ನ ಕಣ್ಣಿನಿಂದಲೇ, ಪಶ್ಯತಿ= ನೋಡುತ್ತಾನೆ.

**ಅನುವಾದ–** ತನ್ನ ಭುಜದಲ್ಲಿರುವ ಕೊಡಲಿಯನ್ನು ಮರೆತು 'ಎಲ್ಲಿದೆ?' ಎಂದು ಬಹಳ ಚಿಂತಿಸುತ್ತಿದ್ದ ಒಬ್ಬ ಬಡಗಿಯು 'ನೋಡು, ಇಲ್ಲಿ ಕೊಡಲಿ' ಎಂದು ಮತ್ತೊಬ್ಬನೆಂದಾಗ ಆ ಮಾತಿನಿಂದಲೇ ಕೊಡಲಿಯನ್ನು ಕಾಣುತ್ತಾನೇನು? ಇಲ್ಲವಲ್ಲ. ಈ ಮಾತು ಪರೋಕ್ಷಜ್ಞಾನ (ಶಾಬ್ದಬೋಧ)ವನ್ನು ಹುಟ್ಟಿಸುವುದರ ಮೂಲಕ ಚಿತ್ತಪರಾಙ್ಮುಖತೆಯನ್ನು ನಾಶಮಾಡುತ್ತದೆ. ಅನಂತರ ಆ ಬಡಗಿಯು ತನ್ನ ಕಂಠದ ಬಳಿಯಿರುವ ಕೊಡಲಿಯನ್ನು ಕಣ್ಣಿನಿಂದಲೇ ಕಾಣುತ್ತಾನೆ.

**ಭಾವವಿಲಾಸಿನೀ–** ಶಬ್ದಪ್ರಯೋಗೇಽಪಿ ತತ್ತದರ್ಥಸಾಕ್ಷಾತ್ಕಾರಶ್ಚಕ್ಷುರಾದೀಂದ್ರಿಯೈರೇವೇತ್ಯತ್ರ ದೃಷ್ಟಾಂತಮಾಹ – ಕಾರುರಿತಿ ॥ ಶಬ್ದಪ್ರಯೋಗೇಽಪಿ ಪರಶೋಶ್ಚಕ್ಷುಷೈವ ದರ್ಶನಸ್ಯ ಸರ್ವಜನ ಸಂಪ್ರತಿಪನ್ನತ್ವಾದ್ವಿಪ್ರತಿಪನ್ನಸ್ಥಲೇಷ್ವಪ್ಯೇವಂ ಜ್ಞಾನದ್ವಯ ಮವರ್ಜನೀಯಮಿತಿ ಭಾವಃ ॥ ೩೫-೩೬ ॥

**ವಿವರಣೆ–** 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಶಾಬ್ದಾಪರೋಕ್ಷವಲ್ಲ. ಹೊರತಾಗಿ, ಮೊದಲು ಶಾಬ್ದಬೋಧ, ಅನಂತರ ಮಾನಸಪ್ರತ್ಯಕ್ಷವೆಂಬುದನ್ನು ಬುದ್ಧ್ಯಾರೂಢ-ವಾಗಿಸಲು ದೃಷ್ಟಾಂತವೊಂದನ್ನು ಈ ಶ್ಲೋಕದಲ್ಲಿ ಕೊಡುತ್ತಿದ್ದಾರೆ. ಓರ್ವ ಮರಕೆಲಸದವನು ಕೊಡಲಿಯನ್ನು ಭುಜದಲ್ಲಿಟ್ಟುಕೊಂಡು, ಅದರ ಜ್ಞಾನವಿಲ್ಲದೇ ಹುಡುಕತೊಡಗಿದ್ದಾನೆ. ಆಗ, ದಾರಿಹೋಕನೋರ್ವ 'ನೋಡು, ಇಲ್ಲಿ ಕೊಡಲಿ' ಎಂದು ಅವನ ಭುಜದೆಡೆ ತೋರಿಸುತ್ತಾನೆ. ಈ ವಾಕ್ಯದಿಂದ ಅವನಿಗೆ ಶಾಬ್ದಬೋಧ ಬರುತ್ತದೆ. ಈ ವಾಕ್ಯಾರ್ಥಬೋಧದಿಂದಾಗಿ, ಆತ ತನ್ನ ಭುಜದೆಡೆ ದೃಷ್ಟಿ ಹರಿಸಿ ಕೊಡಲಿಯನ್ನು ಕಣ್ಣಾರೆ ಕಾಣುತ್ತಾನೆ. ಇಲ್ಲಿ 'ಅಯಂ ಪರಶುಃ' ಎಂಬ ವಾಕ್ಯ 'ದಶಮಸ್ತ್ವಮಸಿ' ಎಂಬ ವಾಕ್ಯದ ಸ್ಥಾನದಲ್ಲಿದೆ. ಆ ವಾಕ್ಯದಿಂದ ಬಂದ ವಾಕ್ಯಾರ್ಥಬೋಧ(ಪರೋಕ್ಷಜ್ಞಾನ) 'ದಶಮಸ್ತ್ವಮಸಿ' ಎಂಬಲ್ಲಿ ತ್ವಮರ್ಥವನ್ನು ಉಲ್ಲೇಖಿಸಿಕೊಂಡು ಬಂದ ವಾಕ್ಯಾರ್ಥ ಬೋಧದ ಸ್ಥಾನದಲ್ಲಿದೆ. ಇಲ್ಲಿ ಆಮೇಲೆ ಚಕ್ಷುಷಂಯೋಗದಿಂದ ಬಂದ 'ಇಲ್ಲಿ ಕೊಡಲಿ' ಎಂಬ ಅಪರೋಕ್ಷಜ್ಞಾನದ ಸ್ಥಾನದಲ್ಲಿ, ಅಲ್ಲಿ 'ಅಯಂ ದಶಮಃ' ಎಂಬ ಮಾನಸ ಅಪರೋಕ್ಷಜ್ಞಾನವಿದೆ.

**ಸ್ವತಃ ಸಮಾಹಿತಮನಾ ದಶಮೋಽಹಮಿತಿ ಸ್ವಯಮ್ ।**
**ಮನಸೈವಾಭಿಪಶ್ಯೇಚ್ಚೇತ್ ಬ್ರಹ್ಮ ಪಶ್ಯೇತ್ ತಥೈವ ಹಿ ॥ ೩೭ ॥**

**ಅರ್ಥ–** ಸ್ವತಃ= ಇನ್ನೊಬ್ಬರ ಸಹಾಯವಿಲ್ಲದೆ, ಸಮಾಹಿತಮನಾಃ= ಏಕಾಗ್ರವಾದ ಮನಸ್ಸುಳ್ಳವನು, ಅಹಂ ದಶಮಃ ಇತಿ= ನಾನು ಹತ್ತನೆಯವನೆಂದು, ಸ್ವಯಂ= ತಾನಾಗಿಯೇ, ಮನಸಾ ಏವ= ಮನಸ್ಸಿನಿಂದಲೇ, ಅಭಿಪಶ್ಯೇತ್ ಚೇತ್= ತಿಳಿಯುತ್ತಾನಾದರೆ, ತಥಾ ಏವ= ತತ್ತ್ವಮಸಿ ಎಂಬ ವಾಕ್ಯದ ಅಪೇಕ್ಷೆಯಿಲ್ಲದೆ, ಮನಸಾ ಏವ= ಮನಸ್ಸಿನಿಂದಲೇ, ಬ್ರಹ್ಮ= ಪರಬ್ರಹ್ಮನನ್ನು, ಪಶ್ಯೇತ್ ಹಿ= ಅಪರೋಕ್ಷೀ ಕರಿಸಿಕೊಳ್ಳಬಹುದು.

**ಅನುವಾದ–** 'ದಶಮಸ್ತ್ವಮಸಿ' ಎಂಬ ಮಾತಿನ ಅಪೇಕ್ಷೆಯಿಲ್ಲದೆ ಸ್ವತಃ ಚಿತ್ತವಿಕ್ಷೇಪರಹಿತನಾಗಿ 'ನಾನು ಹತ್ತನೆಯವನು' ಎಂದು ಮನಸ್ಸಿನಿಂದ ತಾನೇ ತಿಳಿಯುತ್ತಾನಾದರೆ, ಹಾಗೆಯೇ 'ತತ್ ತ್ವಮಸಿ' ಎಂಬ ಶಬ್ದದ ಅಪೇಕ್ಷೆಯಿಲ್ಲದೆ ಮನಸ್ಸಿನಿಂದಲೇ ಬ್ರಹ್ಮನನ್ನೂ ಅಪರೋಕ್ಷೀಕರಿಸಿಕೊಳ್ಳಬಹುದು.

**ಭಾವವಿಲಾಸಿನೀ–** ಅಹಂ ದಶಮ ಇತಿ ಜ್ಞಾನಂ ಮಾನಸಮೇವೇತ್ಯತ್ರ ಯುಕ್ತ್ಯಂತರಮಪ್ಯಾಹ **–ಸ್ವತ ಇತಿ ॥** ಸ್ವತಃ ಶಬ್ದಪ್ರಯೋಗಂ ವಿನಾ । ಸಮಾಹಿತಮನಾಃ ಸಾವಧಾನಚಿತ್ತಃ । ಅವಿವೇಕಿನ ಏವ ಶಬ್ದಾಪೇಕ್ಷಾ । ವಿವೇಕೀ ತು ಯೂಯಂ ನವ ಅಹಂ ತು ದಶಮ ಇತಿ ಸ್ವಯಮೇವ ಪ್ರತ್ಯೇತೀತಿ ಸರ್ವಾನುಭವಸಿದ್ಧಮ್ । ತಸ್ಮಾದವಿವೇಕ್ಯಾಪಿ ಶಾಬ್ದ್ಯಾ ಪ್ರತೀತ್ಯಾ ಚಿತ್ತಂ ಸ್ವಾಭಿ-

ಮುಖೀಕರ್ತುಮೇವ ಶಬ್ದಮಪೇಕ್ಷತೇ । ತಯಾ ಸ್ವಸ್ಥಚಿತ್ತಸ್ತು ವಿವೇಕಿವತ್ಸ್ವಾತ್ಮಾನಂ ಸ್ವಮನಸೈವ ದಶವೋಽಹಮಿತಿಪಶ್ಯತಿ । ವೃಥಾಕರಣವೈಷಮ್ಯಕರಣೇ ಕಾರಣಾಭಾವಾದಿತಿಭಾವಃ । ತಥೈವೇತ್ಯನೇನಾಸಂಪ್ರಜ್ಞಾತ ಸಮಾಧಿಸ್ಥಯೋಗಿನಿ ಚಿತ್ತವ್ಯಾಕ್ಷೇಪಾಭಾವಾದ್ ಬಾಹ್ಯೇಂದ್ರಿ-ಯಾಣಾಮುಪರತತ್ವೇನ ಶಬ್ದಶ್ರವಣಾಸಂಭವಾಚ್ಚ ಸ್ವಸ್ಥಚಿತ್ತವನ್ಮನಸೈವ ಬ್ರಹ್ಮಾಪರೋಕ್ಷಜ್ಞಾನಂ ನ ತು ಶಬ್ದಸಹಾಯೇನೇತಿ ಸೂಚಯತಿ । ಏವಂ ಚ ಪರೋದೀರಿತ- ಬಹಿರ್ಮುಖದೃಷ್ಟಾಂತಃ ಕಥಂ ಪ್ರಕೃತೋಪಯೋಗೀ । ನ ಹಿ ''ಶಾಂತೋದಾಂತ ಉಪರತಸ್ತಿತಿಕ್ಷುಸ್ಸಮಾಹಿತೋ ಭೂತ್ವಾಽಽತ್ಮನ್ಯೇವಾತ್ಮಾನಂ ಪಶ್ಯೇತ್'' ಇತ್ಯುಕ್ತಬ್ರಹ್ಮಾಪರೋಕ್ಷಜ್ಞಾನಿನಃ ಕದಾಪ್ಯಸಮವ-ಧಾನಮುಚಿತಮ್ । ಏವಂ ಚ ಬ್ರಹ್ಮದರ್ಶನದಶಾಯಾಂ ಕ್ವ ಶಬ್ದಾದಪರೋಕ್ಷಜ್ಞಾನಮ್ । ಕಸ್ಯ ವೇದಂ ನಿದರ್ಶನಮಿತಿ ಭಾವಃ। ನನ್ವಸ್ತು ಯೋಗಿನಃ ಶಬ್ದಾನಪೇಕ್ಷಾ। ಇದಾನೀಂ ಬಹಿರ್ಮುಖಂ ಜನಮಭಿಮುಖೀಕರ್ತುಂ ಗುರುಣೋಪದಿಶ್ಯಮಾನ ವೇದಾಂತವಾಕ್ಯರೂಪಶಬ್ದಸ್ಯೋಪ-ಯೋಽಗೋಸ್ತೀತಿ ಚೇತ್ । ಸತ್ಯಮ್ । ತಥಾಪಿ ಗುರೂಪದಿಷ್ಟಶಬ್ದಶ್ರವಣಸಮನಂತರಮೇವ ತಸ್ಯ ಬ್ರಹ್ಮಾಪರೋಕ್ಷದರ್ಶನಾಭಾವೇನ ಪುನರ್ದೃಷ್ಟಾಂತವೈಯರ್ಥ್ಯಸ್ಯ ತದವಸ್ಥತ್ವಾತ್ । ನ ಚ ವಾಚ್ಯಮಿದಾನೀಮಪಿ ಶಬ್ದಶ್ರವಣಸಮನಂತರಮೇವ ವಾಕ್ಯಾರ್ಥವಿಶಿಷ್ಟ ಬ್ರಹ್ಮದರ್ಶನಮ-ಪ್ಯಸ್ತೀತಿ । ತ್ವದುಕ್ತಮಹಾವಾಕ್ಯಾರ್ಥೇ ಪ್ರತಿವಾದಿನಾಂವಿವಾದಾಭಾವಪ್ರಸಂಗಾತ್ । ಘಟೋ ದೃಷ್ಟ ಇತಿವದ್ದೃಷ್ಟಂ ಬ್ರಹ್ಮೇತಿ ಪ್ರತಿವಕ್ತವ್ಯತ್ವಾಚ್ಚ ॥ ೩೭ ॥

**ವಿವರಣೆ–** 'ಅಹಂ ದಶಮಃ' ಎಂಬ ಜ್ಞಾನವು ಮಾನಸವೇ ಆಗಿದೆ. ಶಾಬ್ದವಲ್ಲವೆಂಬುದಕ್ಕೆ ಇನ್ನೊಂದು ಯುಕ್ತಿಯನ್ನು ಈ ಶ್ಲೋಕದಲ್ಲಿ ನೀಡಿದ್ದಾರೆ. ಹತ್ತು ಜನರ ಮಧ್ಯೆ 'ನೀವೆಷ್ಟು ಮಂದಿ?' ಎಂದು ಪ್ರಶ್ನಿಸಿದಾಗ ವಿವೇಕಿಯಾದ ವ್ಯಕ್ತಿಯು 'ಇವರು ಒಂಭತ್ತು ಮಂದಿ, ನಾನು ಹತ್ತನೆಯವ' ಎಂಬುದಾಗಿ ತಾನೇ ತಿಳಿಯುತ್ತಾನೆ. ಇವನಿಗೆ 'ದಶಮಸ್ತ್ವಮಸಿ' ಎಂಬ ವಾಕ್ಯದ ಅಪೇಕ್ಷೆಯೇ ಇಲ್ಲ. ಇಲ್ಲಿ 'ಅಹಂ ದಶಮಃ' ಎಂಬ ಪ್ರತ್ಯಕ್ಷವು ಮಾನಸವೆಂದು ಸರ್ವಾನುಭವಸಿದ್ಧ. ಹಾಗಾಗಿ, 'ದಶಮಸ್ತ್ವಮಸಿ' ಎಂಬ ವಾಕ್ಯವನ್ನು ಪ್ರಯೋಗಿಸಿದಲ್ಲಿಯೂ 'ಅಹಂ ದಶಮಃ' ಎಂಬ ಪ್ರತ್ಯಕ್ಷವು ಮಾನಸವೇ ಆಗಿದೆ.

ಕಾರ್ಯಕಾರಣಭಾವನಿಶ್ಚಯಕ್ಕೆ ಅನ್ವಯವ್ಯತಿರೇಕಸಹಚಾರಜ್ಞಾನವು ಕಾರಣ. ಕಾರಣವಿದ್ದೂ ಕಾರ್ಯೋತ್ಪತ್ತಿಯಾಗದಿದ್ದರೆ ಅಥವಾ ಕಾರಣವಿಲ್ಲದೆಯೂ ಕಾರ್ಯವಾದರೆ ಅನ್ವಯವ್ಯತಿರೇಕವ್ಯಭಿಚಾರವೆನ್ನುವರು. ಈ ವ್ಯಭಿಚಾರಜ್ಞಾನವಿರುವಲ್ಲಿ ಸಹಚಾರಜ್ಞಾನ ಉಂಟಾಗುವುದಿಲ್ಲ. ಪ್ರಕೃತ, 'ದಶಮಸ್ತ್ವಮಸಿ' ಎಂಬ ವಾಕ್ಯವಿಲ್ಲದೆಯೂ ಸ್ವತಃ ಸಮಾಹಿತಮನುಷ್ಯನಿಗೆ 'ಅಹಂ ದಶಮಃ' ಎಂಬ ಪ್ರತ್ಯಕ್ಷವು ಬರುತ್ತದೆ. ಹಾಗೂ 'ದಶಮಸ್ತ್ವಮಸಿ' ಎಂಬ ವಾಕ್ಯವಿದ್ದೂ ವ್ಯಗ್ರಮನಸ್ಕನಿಗೆ 'ಅಹಂ ದಶಮಃ' ಎಂಬ ಜ್ಞಾನವು ಬರುವುದಿಲ್ಲ. ಹೀಗೆ ಅನ್ವಯವ್ಯಭಿಚಾರ-ವ್ಯತಿರೇಕವ್ಯಭಿಚಾರಗಳಿರುವುದರಿಂದವು

ಸಹಚಾರ ಜ್ಞಾನವಿಲ್ಲ. ಹಾಗಾಗಿ, ವಾಕ್ಯ ಹಾಗೂ ಪ್ರತ್ಯಕ್ಷಗಳಿಗೆ ಕಾರ್ಯಕಾರಣಭಾವವನ್ನು ಹೇಳುವಂತಿಲ್ಲ.

'ತಥೈವ ಹಿ ಬ್ರಹ್ಮ ಪಶ್ಯೇತ್' ಎಂಬಲ್ಲಿ 'ತಥೈವ' ಎಂದು ಬಳಸುವುದರ ಅಭಿಪ್ರಾಯ ಇಷ್ಟು. ಅಸಂಪ್ರಜ್ಞಾತ ಸಮಾಧಿಯಲ್ಲಿರುವ ಸಾಧಕನ ಇಂದ್ರಿಯಗಳೆಲ್ಲಾ ಉಪರತವಾಗಿವೆ. ಚಿತ್ತದಲ್ಲಿ ಯಾವುದೇ ಬಾಹ್ಯಾಸಂಗವಿಲ್ಲದೇ ಶಾಂತಮನಸ್ಕನಾಗಿದ್ದಾನೆ. ಇವನು ಶಬ್ದವನ್ನು ಶ್ರವಣ ಮಾಡುವುದೇ ಸಾಧ್ಯವಿಲ್ಲ. ಆದ್ದರಿಂದ, ಸಮಾಧಿಪರಿಪಕ್ವ ಸ್ಥಿತಿಯಲ್ಲಿ ಈತನಿಗೆ ಮನಸ್ಸಿನಿಂದಲೇ ಬ್ರಹ್ಮಾಪರೋಕ್ಷವುಂಟಾಗುತ್ತದೆ. ಶಬ್ದದ ಸಹಾಯವೂ ಇಲ್ಲಿ ಬೇಕಾಗಿಲ್ಲ. ಆದ್ದರಿಂದ ಶಬ್ದಶ್ರವಣವು ಮನನ-ಧ್ಯಾನ-ಸಮಾಧಿಗಳಿಗೆ ಕಾರಣವಾದೀತೇ ಹೊರತು, ಸಮಾಧಿ ಸ್ಥಿತಿಯಲ್ಲಿ ಉಂಟಾಗುವ ಬ್ರಹ್ಮದರ್ಶನಕ್ಕೆ ಅಲ್ಲವೇ ಅಲ್ಲ.

ಅಂತರ್ಮುಖಿಯ ಬ್ರಹ್ಮಾಪರೋಕ್ಷ ವಿಷಯದಲ್ಲಿ ಬಹಿರ್ಮುಖಿಯಾದ ದಶಮವ್ಯಕ್ತಿಯ ದೃಷ್ಟಾಂತ ಅನುಚಿತವಾಗಿದೆ. 'ಶಾಂತೋ ದಾಂತಃ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯೇತ್' ಎಂಬ ಶ್ರುತಿಯಲ್ಲಿ ನಿರೂಪಿಸಲ್ಪಟ್ಟ ಅಪರೋಕ್ಷಜ್ಞಾನಿಗೆ ಮಾನಸವ್ಯಗ್ರತೆ ಅನ್ಯಾಸಕ್ತಿಗಳು ಅಸಂಭಾವಿತಗಳಾಗಿವೆ. ಆದ್ದರಿಂದ, ಶಾಂತನಾಗುವುದಕ್ಕೆ ಸಮಾಹಿತನಾಗುವುದಕ್ಕೆ ಶ್ರವಣ ಬೇಕೇ ಹೊರತು, ಶಾಂತ-ದಾಂತ-ಉಪರತ-ತಿತಿಕ್ಷುವಾಗಿ ಸಮಾಹಿತನಾದವನಿಗೆ ಶ್ರವಣ ಬೇಕಿಲ್ಲ. ಅವನು ಆತ್ಮನಿಂದಲೇ (ಮನಸ್ಸಿನಿಂದಲೇ) ಆತ್ಮನನ್ನು (ಪರಮಾತ್ಮನನ್ನು) ಕಾಣುತ್ತಾನೆ.

ಶಬ್ದಸ್ತು ವ್ಯವಧಾನಸ್ಯೋಚ್ಚಿತ್ತ್ಯೈ ಕರ್ಣೇ ನಿಪಾತಿತಃ ।
ಶಾಬ್ದೀಂ ಕರಣಸಾಮರ್ಥ್ಯಾತ್ ತ್ವಮಾಕಾರಾಂ ಧಿಯಂ ದಿಶೇತ್ ॥ ೩೮ ॥

ತತಃ ಸಮಾಹಿತಮನಾಃ ಪಶ್ಯೇದಹಮಿತಿ ಸ್ವಯಮ್ ।
ಅಹಂತ್ವೋಲ್ಲೇಖಿನೀ ಶಬ್ದಾಭಾವೇ ಧೀರ್ಮನಸೈವ ಹಿ ॥ ೩೯ ॥

**ಅರ್ಥ**—ವ್ಯವಧಾನಸ್ಯ= ಮನಸ್ಸಿನ ಅನ್ಯಾಸಕ್ತತೆಯ, ಉಚ್ಚಿತ್ತ್ಯೈ= ನಿವಾರಣೆಗಾಗಿ, ಕರ್ಣೇ= ಕಿವಿಯಲ್ಲಿ, ನಿಪಾತಿತಃ= ಹಾಕಲ್ಪಟ್ಟ, ಶಬ್ದಃ ತು= ನೀನು ಹತ್ತನೆಯವನೆಂಬ ಶಬ್ದವು, ಕರಣ ಸಾಮರ್ಥ್ಯಾತ್= ಶಬ್ದರೂಪಕರಣವೆನಿಸಿದ ತನ್ನ ಸಾಮರ್ಥ್ಯದಿಂದ, ತ್ವಮಾಕಾರಾಂ= ನೀನು ಎಂಬ ಅಂಶವನ್ನು ಉಲ್ಲೇಖಿಸುವ, ಶಾಬ್ದೀಂ= ಶಬ್ದಜನ್ಯವಾದ, ಧಿಯಂ= ಜ್ಞಾನವನ್ನು, ದಿಶೇತ್= ಹುಟ್ಟಿಸುತ್ತದೆ. ತತಃ= ಆ ಪರೋಕ್ಷ ಜ್ಞಾನದಿಂದ, ಸಮಾಹಿತಮನಾಃ= ಸಮಾಧಾನಗೊಂಡ ಮನಸ್ಸುಳ್ಳ ಆ ವ್ಯಕ್ತಿಯು, ಅಹಂ ಇತಿ= ನಾನು ಹತ್ತನೆಯವನೆಂದು, ಸ್ವಯಂ= ತನ್ನ ಮನಸ್ಸಿನಿಂದಲೇ, ಪಶ್ಯೇತ್= ಸಾಕ್ಷಾತ್ಕರಿಸಿಕೊಳ್ಳುತ್ತಾನೆ. ಶಬ್ದಾಭಾವೇ= ನಾನು ಎಂಬ ಶಬ್ದವಿಲ್ಲದಿರುವಾಗ, ಅಹಂತ್ವೋಲ್ಲೇಖಿನೀ= ನಾನು ಎಂಬ ಅಂಶವನ್ನು

ಉಲ್ಲೇಖಿಸುವ, ಧೀಃ= ಜ್ಞಾನವು, ಮನಸಾ ಏವ= ಮನಸ್ಸಿನಿಂದಲೇ, ಭವತಿ ಹಿ= ಹುಟ್ಟುತ್ತದಷ್ಟೆ?

**ಅನುವಾದ–** ಚಿತ್ತವಿಕ್ಷೇಪವೆಂಬ ತಡೆಯನ್ನು ಹೋಗಲಾಡಿಸುವುದಕ್ಕಾಗಿ, ಕಿವಿಗೆ ಹಾಕಿದ ಶಬ್ದವು ತನ್ನ ಸಾಮರ್ಥ್ಯಕ್ಕೆ ಅನುಗುಣವಾಗಿ (ಶಕ್ತಿವೃತ್ತಿಯಿಂದ) ತ್ವಮಾಕಾರದ (ನೀನು ದಶಮನಿದ್ದಿ ಎಂಬ) ಶಾಬ್ದಬೋಧವನ್ನು ಉಂಟುಮಾಡುತ್ತದೆ. ಅದರಿಂದಾಗಿ, ಸಮಾಧಾನಗೊಂಡ ಚಿತ್ತವುಳ್ಳವನಾಗಿ ಆ ಪುರುಷನು 'ಅಹಂ ದಶಮಃ' ಎಂಬುದಾಗಿ ತನ್ನ ಮನಸ್ಸಿನಿಂದಲೇ ಸಾಕ್ಷಾತ್ಕರಿಸಿಕೊಳ್ಳುತ್ತಾನೆ. 'ಅಹಂ' ಎಂಬ ಶಬ್ದವಿಲ್ಲದಿರುವಾಗ ಅಹಂತ್ವವನ್ನು ಉಲ್ಲೇಖಿಸುವ ಜ್ಞಾನವು ಬಂದರೆ, ಅದು ಮಾನಸವೇ ಆಗಿರಬೇಕಲ್ಲವೇ?

**ಭಾವವಿಲಾಸಿನೀ–** ಬಹಿರ್ಮುಖೇಽಪಿ ವ್ಯಾಸಂಗನಿವರ್ತಕತ್ವೇನ ಪ್ರಾಗುಕ್ತಾಂಶಬ್ದಸ್ಯ ಸಹಕಾರಿತಾ-ಮನೂದ್ಯ ದೃಷ್ಟಾಂತಮುಖೇನಾಪ್ಯುಪಪಾದಯತಿ – **ಶಬ್ದಸ್ತ್ವಿತಿ ॥ ೩೮ ॥**

**ವಿವರಣೆ–** ಶಬ್ದಪ್ರಯೋಗಾನಂತರ ಬಂದ ಜ್ಞಾನದಲ್ಲಿ ಶಬ್ದಸಾಮರ್ಥ್ಯವನ್ನು ಮೀರಿದ ವಿಷಯಗಳು ಕಂಡರೆ, ಆ ಜ್ಞಾನವು ಶಬ್ದದಿಂದ ಹುಟ್ಟಿದುದೆಂದು ಹೇಳಲಾಗುವುದಿಲ್ಲ. ಅದು ಮನಸ್ಸಿನಿಂದ ಹುಟ್ಟಿದ 'ಪಾಶ್ಚಾತ್ಯಮಾನಸಬೋಧ' ಎಂದು ಕರೆಸಿಕೊಳ್ಳುತ್ತದೆ. 'ದಶಮಸ್ತ್ವಮಸಿ' ಎಂಬ ವಾಕ್ಯದಲ್ಲಿ 'ಅಹಂ' ಎಂಬ ಶಬ್ದವಿಲ್ಲದಿರುವುದರಿಂದ ಅದು 'ಅಹಂ ದಶಮೋಽಸ್ಮಿ' ಎಂಬ ಜ್ಞಾನವನ್ನು ಹುಟ್ಟಿಸಲಾರದು. ಹಾಗಾಗಿ, ಈ ಜ್ಞಾನವು ಪಾಶ್ಚಾತ್ಯ ಮಾನಸಪ್ರತ್ಯಕ್ಷವಾಗಿದೆ.

'ಅಹಂ ದಶಮಃ' ಎಂಬ ಮಾನಸ ಪ್ರತ್ಯಕ್ಷಕ್ಕೆ 'ದಶಮಸ್ತ್ವಮಸಿ' ಎಂಬ ವಾಕ್ಯವು ಚಿತ್ತವಿಕ್ಷೇಪನಿರಾಸಕವಾಗಿ ಸಹಕಾರಿಯಾದೀತೇ ಹೊರತು, ತಾನೇ ಕರಣವಾಗಲಾರದು ಎಂಬುದಾಗಿ ಇಲ್ಲಿಯ ತನಕ ನಿರೂಪಿಸಿದೆ. ಈ ವಿಷಯವನ್ನು ಒಂದು ದೃಷ್ಟಾಂತದ ಮೂಲಕ ರಾಜರು ಇಲ್ಲಿ ಸಮರ್ಥಿಸುತ್ತಿದ್ದಾರೆ-

**ಪ್ರತಿಬಂಧನಿರಾಸೇ ಹಿ ನಿಮಿತ್ತಾಂತರತಃ ಕೃತೇ ।**
**ದಹನಾದೇವ ದಾಹ್ಯಸ್ಯ ದಾಹಃ ಸ್ಯಾನ್ನಾನ್ಯತಃ ಕ್ವಚಿತ್ ॥ ೪೦ ॥**

**ಪ್ರತಿಬಂಧನಿರಾಸೇನ ತಸ್ಯ ಸ್ಯಾತ್ ಚರಿತಾರ್ಥತಾ ।**
**ಸಹಕಾರೀ ಭವೇದ್ ವಾಽಸೌ ಸ ಏವ ನ ಹಿ ದಾಹಕಃ ॥ ೪೧ ॥**

**ಅರ್ಥ–** ನಿಮಿತ್ತಾಂತರತಃ= ಬೇರೊಂದು ನಿಮಿತ್ತದಿಂದ, ಪ್ರತಿಬಂಧ= ಪ್ರತಿಬಂಧಕದ, ನಿರಾಸೇ= ಪರಿಹಾರವು, ಕೃತೇ= ಮಾಡಲ್ಪಟ್ಟಾಗ, ದಾಹ್ಯಸ್ಯ= ಸುಡಲ್ಪಡುವ ವಸ್ತುವಿನ, ದಾಹಃ= ಸುಡುವಿಕೆಯು, ದಹನಾತ್ ಏವ= ಬೆಂಕಿಯಿಂದಲೇ, ಸ್ಯಾತ್= ಆಗುತ್ತದೆ, ಅನ್ಯತಃ= ಬೇರೆ ಯಾವುದೇ ವಸ್ತುವಿನಿಂದ, ನ ಸ್ಯಾತ್= ಆಗುವುದಿಲ್ಲ, ತಸ್ಯ= ಆ ನಿಮಿತ್ತಾಂತರಕ್ಕೆ

ಪ್ರತಿಬಂಧವಿರಾಸೇನ ಏವ= ಪ್ರತಿಬಂಧಕವನ್ನು ಪರಿಹರಿಸುವ ಮಾತ್ರದಿಂದಲೇ, ಚರಿತಾರ್ಥತಾ= ಸಾರ್ಥಕ್ಯವು, ಸ್ಯಾತ್= ಬರುತ್ತದೆ. ವಾ= ಅಥವಾ, ಅಸೌ= ಈ ನಿಮಿತ್ತಾಂತರವು (ಪ್ರತಿಬಂಧಕವನ್ನು ನಿವಾರಿಸಿದ ಪುರುಷನು) ದಾಹಸ್ಯ= ಸುಡುವಿಕೆಗೆ, ಸಹಕಾರೀ= ಸಹಕಾರಿಯು, ಭವೇತ್= ಆದೀತು. ಕಿಂತು= ಆದರೆ, ಸ ಏವ= ಆ ಪುರುಷನೇ (ನಿಮಿತ್ತಾಂತರವೇ), ದಾಹಕಃ= ಸುಡುವಿಕೆಗೆ ಕಾರಣನು, ನ ಹಿ ಭವತಿ= ಆಗುವುದಿಲ್ಲ.

**ಅನುವಾದ–** ಬೇರೆ ನಿಮಿತ್ತದ (ಮಣಿ ಸರಿಸುವ ಪುರುಷನ) ಮೂಲಕ ಪ್ರತಿಬಂಧಕವು ನಿರಾಸವಾಗಲು ಬೆಂಕಿಯಿಂದಲೇ ಬೆಂಕಿಯಲ್ಲಿಟ್ಟ ಬಟ್ಟೆ ಮುಂತಾದ ದಾಹ್ಯವು ಸುಟ್ಟುಹೋಗುತ್ತದೆ. ಬೆಂಕಿಗಿಂತ ಭಿನ್ನನಾದ ಮಣಿಯನ್ನು ಸರಿಸಿದ ಪುರುಷಾದಿ ನಿಮಿತ್ತದಿಂದ ಎಂದೂ ಸುಟ್ಟುಹೋಗಲಾರದು. ಪ್ರತಿಬಂಧಕವಾದ ಮಣಿಯನ್ನು ಸರಿಸುವುದರಿಂದಲೇ ಆತನ ಕೆಲಸ ಮುಗಿಯಿತು. ಈತನನ್ನು ಸುಡುವಿಕೆಗೆ ಸಹಕಾರಿಯೆಂದಾದರೂ ಕರೆಯಬಹುದು. ಅವನೇ ಸುಡುವವನು ಅಲ್ಲವೇ ಅಲ್ಲ.

ಭಾವವಿಲಾಸಿನೀ– ಶಬ್ದಾಭಾವೇ ಅಹಮಿತಿ ಶಬ್ದಾಭಾವೇ ॥ ೩೯, ೪೦ ॥

ಅಸೌ ಪ್ರತಿಬಂಧನಿವರ್ತಕಃ ॥ ೪೧ ॥

**ವಿವರಣೆ–** ಉರಿಯುವ ಬೆಂಕಿಯಲ್ಲಿ ಚಂದ್ರಕಾಂತ ಮಣಿಯಿದ್ದರೆ, ಆ ಬೆಂಕಿ ಸುಡುವುದಿಲ್ಲ. ದಾಹಕ್ಕೆ ಮಣಿಯು ಪ್ರತಿಬಂಧಕ. ಮಣಿಯನ್ನು ತೆಗೆದಾಗ ಬೆಂಕಿಯು ತಾನೇ ಸುಡುತ್ತದೆ. ಈ ಸ್ಥಿತಿಯಲ್ಲಿ ಆ ಪ್ರತಿಬಂಧಕ ಮಣಿಯನ್ನು ತೆಗೆದವನು 'ದಾಹಕ' (ಸುಡುವವನು) ಎನಿಸಿಕೊಳ್ಳುವುದಿಲ್ಲ. ಬೆಂಕಿಯೇ ದಾಹಕ. ಪ್ರತಿಬಂಧಕವನ್ನು ತೆಗೆದು ಸಹಕರಿಸಿದ ಈತನನ್ನು ಸಹಕಾರಿಯೆಂದು ಬೇಕಾದರೆ ಕರೆಯಬಹುದು. ದಾಹಕಾರಣ (ದಾಹಕ)ವಂತೂ ಬೆಂಕಿಯೇ. ಇದು ಸರ್ವಪ್ರಸಿದ್ಧವೆಂಬುದನ್ನು 'ನಹಿ ದಾಹಕಃ' ಎಂಬಲ್ಲಿನ ಹಿಶಬ್ದವು ಹೇಳುತ್ತಿದೆ.

ಮಣಿಯನ್ನು ಸರಿಸಿದ ವ್ಯಕ್ತಿಯು ಹೇಗೆ ದಾಹಕನಲ್ಲವೋ (ದಾಹಕಾರಣವಲ್ಲವೋ), ಹಾಗೆಯೇ ಚಿತ್ತವ್ಯಾಕ್ಷೇಪವನ್ನು ನಿರಾಸ ಮಾಡಿದ 'ದಶಮಸ್ತ್ವಮಸಿ' ಎಂಬ ವಾಕ್ಯವು 'ಅಹಂ ದಶಮಃ' ಎಂಬ ಪ್ರತ್ಯಕ್ಷಕ್ಕೆ ಕರಣವಲ್ಲ. ಮಣ್ಯಪಸಾರಕ ವ್ಯಕ್ತಿಯು ಬೆಂಕಿಗೆ ಸಹಕಾರಿಯೆನಿಸಿದಂತೆ ಈ ವಾಕ್ಯವು ಮನಸ್ಸಿಗೆ ಪ್ರತ್ಯಕ್ಷ ಬರುವಲ್ಲಿ ಸಹಕಾರಿ ಎನಿಸಿದೆ.

'ದಶಮೋಽಹಂ' ಪ್ರತ್ಯಕ್ಷವು ಶಾಬ್ದವೆಂಬುದು ಅನುಮಾನವಿರುದ್ಧ -

**ಅಹಂಶಬ್ದಾಪ್ರಯೋಗೇಽಪಿ ಹ್ಯಹಮಾಕಾರಧೀತ್ವತಃ ।**
**ದಶಮೋಽಹಮಿತಿ ಜ್ಞಾನಂ ನ ಶಾಬ್ದಂ ಸ್ವಸ್ಥಧೀರ್ಯಥಾ ॥**
**ಪರಾಕರೋತಿ ತೇ ಪಕ್ಷಮನುಮಾನಮಪೀದೃಶಮ್ ॥ ೪೨ ॥**

**ಅರ್ಥ–** ಅಹಂ ದಶಮ ಇತಿ ಜ್ಞಾನಂ= ನಾನು ಹತ್ತನೆಯವನು ಎಂಬ ಜ್ಞಾನವು (ಪಕ್ಷ) ನ ಶಾಬ್ದಮ್= ಶಬ್ದಜನ್ಯವಲ್ಲ (ಸಾಧ್ಯ) ಅಹಂ ಶಬ್ದಾಪ್ರಯೋಗೇ ಅಪಿ ಅಹಮಾಕಾರಧೀತ್ವತಃ= ನಾನು ಎಂಬ ಪದದ ಪ್ರಯೋಗವಿಲ್ಲದಿದ್ದರೂ ನಾನು ಎಂಬ ಅಂಶವನ್ನು ಉಲ್ಲೇಖಿಸುತ್ತಿರುವ ಜ್ಞಾನವಾದ್ದರಿಂದ (ಹೇತು) ಯಥಾ ಸ್ವಸ್ಥಧೀಃ= ವಿವೇಕಿಗೆ ಬಂದಿರುವ ನಾನು ಹತ್ತನೆಯವ ಜ್ಞಾನದಂತೆ (ದೃಷ್ಟಾಂತ) ಎಂಬ ಈದೃಶಂ= ಇಂತಹ ಅನುಮಾನಂ ಅಪಿ= ಅನುಮಾನವೂ ಕೂಡ, ತೇ= ನಿನ್ನ, ಪಕ್ಷಂ= ಸಿದ್ಧಾಂತವನ್ನು, ಪರಾಕರೋತಿ ಹಿ= ನಿರಾಕರಿಸುತ್ತದಷ್ಟೆ.

**ಅನುವಾದ–** ನಾನು ಹತ್ತನೆಯವನೆಂಬ ಜ್ಞಾನವು ಶಬ್ದಕರಣಕವಲ್ಲ. 'ಅಹಂ' ಎಂಬ ಶಬ್ದದ ಪ್ರಯೋಗವಿಲ್ಲದೆಯೂ ಅಹಂ ಎಂಬುದಾಗಿ ಜ್ಞಾನವಾಗಿರುವುದರಿಂದ. ವಿವೇಕಿ ವ್ಯಕ್ತಿಗೆ ಬಂದಿರುವ 'ಅಹಂ ದಶಮಃ' ಎಂಬ ಜ್ಞಾನದಂತೆ ಎಂಬ ಅನುಮಾನವೂ ಕೂಡ 'ಅಹಂ ದಶಮಃ' ಎಂಬುದು ಶಾಬ್ದಪ್ರತ್ಯಕ್ಷವೆಂಬ ನಿನ್ನ ಪಕ್ಷವನ್ನು ನಿರಾಕರಿಸುತ್ತಿದೆ.

**ಭಾವವಿಲಾಸಿನೀ–** ಪರೋದೀರಿತದೃಷ್ಟಾಂತೇಽಪಿ ದಶಮೋಽಹಮಿತಿ ಜ್ಞಾನಸ್ಯ ಶಬ್ದಾಕರಣ-ಕತ್ವೇಽನುಮಾನಮಾಹ – **ಅಹಮಿತಿ** ॥ ಅಹಂ ದಶಮ ಇತಿ ವಾಕ್ಯಜನಿತಜ್ಞಾನೇ ವ್ಯಭಿಚಾರ-ಪರಿಹಾರಾಯ ವಿಶೇಷಣಮ್ । ಸ್ವಸ್ಥಧೀಃ ಸ್ವಸ್ಥಸ್ಯಾಹಂ ದಶಮ ಇತಿ ಧೀಃ ॥ ೪೨ ॥

**ವಿವರಣೆ–** ಪ್ರತಿಜ್ಞಾ-ಹೇತು-ಉದಾಹರಣೆಗಳಿಂದ ಕೂಡಿದ ಅನುಮಾನವನ್ನು ತೋರಿಸುತ್ತಾ ರಾಜರು ಪರಪಕ್ಷವನ್ನು ನಿರಾಕರಿಸುತ್ತಿದ್ದಾರೆ. ಚಿತ್ತವಿಕ್ಷೇಪವಿಲ್ಲದ ಸ್ವಸ್ಥ ಮನುಷ್ಯನಿಗೆ ಬಂದಿರುವ 'ಅಹಂ ದಶಮಃ' ಎಂಬ ಜ್ಞಾನವು ದೃಷ್ಟಾಂತ. ಇಲ್ಲಿ ವಾಕ್ಯಪ್ರಯೋಗವೇ ನಡೆದಿಲ್ಲವಾದ್ದರಿಂದ 'ಅಹಂಶಬ್ದಾಪ್ರಯೋಗೇಽಪಿ ಅಹಮಾಕಾರ ಧೀತ್ವ' ವೆಂಬ ಹೇತುವು ಇದೆ. ಆದ್ದರಿಂದಲೇ, ಅದು ಶಬ್ದಕರಣಕವಲ್ಲವೆಂಬುದೂ ಸರ್ವಸಮ್ಮತವಾಗಿದೆ. ಈ ದೃಷ್ಟಾಂತದಿಂದ 'ದಶಮಸ್ತ್ವಮಸಿ' ಎಂಬ ವಾಕ್ಯಾನಂತರ ಬಂದ 'ಅಹಂ ದಶಮಃ' ಎಂಬ ಜ್ಞಾನವನ್ನು ಪಕ್ಷವನ್ನಾಗಿಸಿ, ಅಲ್ಲಿ ಶಬ್ದಕರಣಕತ್ವಾಭಾವವನ್ನು ಸಾಧಿಸುತ್ತೇವೆ. ನಿರ್ದುಷ್ಟವಾದ ಈ ಅನುಮಾನವೂ 'ಅಹಂ ದಶಮಃ' ಎಂಬುದು ಶಾಬ್ದ ಪ್ರತ್ಯಕ್ಷವೆಂಬ ಪರರ ವಾದವನ್ನು ನಿರಾಕರಿಸುತ್ತಿದೆ.

**ದೃಷ್ಟಿಯೋಗ್ಯೇ ಪ್ರಯುಕ್ತೋಽಪಿ ಶಬ್ದೋ ಯದ್ಯಪರೋಕ್ಷಕೃತ್ ।**
**ಗೃಹೇ ಘಟೋಽಸ್ತೀತ್ಯುಕ್ತೇಽಪಿ ತರ್ಹಿ ಸ್ಯಾದಪರೋಕ್ಷಧೀಃ ॥ ೪೩ ॥**

**ಅರ್ಥ–** ದೃಷ್ಟಿಯೋಗ್ಯೇ= ಕಣ್ಣಿಗೆ ಕಾಣುವ ವಸ್ತುವಿನ ಬಗ್ಗೆ, ಪ್ರಯುಕ್ತಃ= ಪ್ರಯೋಗಿಸಲ್ಪಟ್ಟ ಶಬ್ದಃ ಅಪಿ= ಶಬ್ದವೂ ಕೂಡ, ಯದಿ= ಒಂದು ಪಕ್ಷದಲ್ಲಿ, ಅಪರೋಕ್ಷಕೃತ್= ಅಪರೋಕ್ಷಜ್ಞಾನವನ್ನು ಹುಟ್ಟಿಸುವುದಾದರೆ, ತರ್ಹಿ= ಆ ಪಕ್ಷದಲ್ಲಿ,

ಗೃಹೇ= ಮನೆಯಲ್ಲಿ, ಘಟಃ= ಗಡಿಗೆಯು, ಅಸ್ತಿ= ಇದೆ, ಇತಿ= ಎಂದು, ಉಕ್ತೇ ಅಪಿ= ಹೇಳಲ್ಪಟ್ಟಾಗಲೂ ಕೂಡ ಅಪರೋಕ್ಷಧೀಃ= ಅಪರೋಕ್ಷಜ್ಞಾನವು, ಸ್ಯಾತ್= ಬಂದೀತು.

**ಅನುವಾದ–** ಕಣ್ಣಿಗೆ ಕಾಣಿಸುವ ವಸ್ತುವಿನ ವಿಷಯದಲ್ಲಿ ಪ್ರಯೋಗಿಸಿದ ಶಬ್ದವೂ ಒಂದು ವೇಳೆ ಅಪರೋಕ್ಷಜ್ಞಾನವನ್ನು ಹುಟ್ಟಿಸುವುದಾದರೆ, ಆಗ 'ಮನೆಯಲ್ಲಿ ಮಡಕೆಯಿದೆ' ಎಂದು ಹೇಳಿದಾಗಲೂ ಅಪರೋಕ್ಷ ಜ್ಞಾನವುಂಟಾಗಬೇಕಾದೀತು.

**ಭಾವವಿಲಾಸಿನೀ–** ದೃಶ್ಯಮಾನೇಽರ್ಥೇ ಪ್ರಯುಕ್ತಃ ಶಬ್ದಃ ಸಾಕ್ಷಾತ್ಕಾರಮೇವ ಜನಯತೀತಿ ಮತಂ ಸಂಗ್ರಹಾಯ ಪುನರಪ್ಯನೂದ್ಯ ಪ್ರಕಾರಾಂತರೇಣ ಚ ದೂಷಯತಿ–ದೃಷ್ಟಿಯೋಗ್ಯ ಇತಿ ॥೪೩॥

**ವಿವರಣೆ–** 'ಗೇಹೇ ಘಟ ಇತಿ ಪ್ರೋಕ್ತೇ' ಎಂಬ ಇಪ್ಪತ್ತನಾಲ್ಕನೇ ಶ್ಲೋಕದಲ್ಲಿ ಇಲ್ಲಿ ಹೇಳುತ್ತಿರುವ ವಿಷಯವನ್ನೇ ಭಂಗ್ಯಂತರದಿಂದ ಹೇಳಿದ್ದಾಗಿದೆ. ಹಾಗಿದ್ದೂ ಮತ್ತೆ ಹೇಳುತ್ತಿರುವುದು ಅನುವಾದ. ಎಂದರೆ, ಅದೇ ಮತವನ್ನು ಬೇರೆ ಕ್ರಮದಿಂದ ದೂಷಿಸುವುದಕ್ಕಾಗಿ, ಹಿಂದೆ ಹೇಳಿದುದನ್ನೇ ಇಲ್ಲಿ ಅನುವಾದ ಮಾಡಲಾಗಿದೆ.

> ದೃಶ್ಯಮಾನೇ ಪ್ರಯುಕ್ತಸ್ತು ಶಬ್ದೋ ಯದ್ಯಪರೋಕ್ಷಕೃತ್ ।
> ಅಸಮಾಹಿತಚಿತ್ತಸ್ಯ ಕಥಂ ತರ್ಹ್ಯಪರೋಕ್ಷಧೀಃ ॥ ೪೪ ॥

> ನಹ್ಯಸೌ ವಿಸ್ಮೃತಸ್ವಾತ್ಮಾ ಪುರಾ ಶಬ್ದಪ್ರಯೋಗತಃ ।
> ಆತ್ಮಾನಂ ಮನಸಾ ಪಶ್ಯೇದ್ ವ್ಯಾಕ್ಷೇಪಾಕ್ಷಿಪ್ತಚೇತನಃ ॥ ೪೫ ॥

**ಅರ್ಥ–** ದೃಶ್ಯಮಾನೇ= ಪ್ರತ್ಯಕ್ಷಗೋಚರವಾಗುತ್ತಿರುವ ವಸ್ತುವಿನ ಬಗ್ಗೆ, ಪ್ರಯುಕ್ತಃ= ಪ್ರಯೋಗಿಸಲ್ಪಟ್ಟ ಶಬ್ದಃ ತು= ಶಬ್ದವಾದರೂ, ಯದಿ= ಒಂದು ಪಕ್ಷದಲ್ಲಿ, ಅಪರೋಕ್ಷಕೃತ್= ಅಪರೋಕ್ಷಜ್ಞಾನವನ್ನು ಹುಟ್ಟಿಸುತ್ತದೆಂದಾದರೆ, ತರ್ಹಿ= ಆ ಪಕ್ಷದಲ್ಲಿ, ಅಸಮಾಹಿತ ಚಿತ್ತಸ್ಯ= ಚಿತ್ತವಿಕ್ಷೇಪವುಳ್ಳ ವ್ಯಕ್ತಿಗೆ ಅಪರೋಕ್ಷಧೀಃ= ಅಪರೋಕ್ಷಜ್ಞಾನವು, ಕಥಂ= ಹೇಗೆ, ಸ್ಯಾತ್= ಬಂದೀತು. ಶಬ್ದಪ್ರಯೋಗತಃ= ನೀನು ಹತ್ತನೆಯವನು ಎಂಬ ಶಬ್ದಪ್ರಯೋಗಕ್ಕಿಂತ, ಪುರಾ= ಮೊದಲು, ವಿಸ್ಮೃತಸ್ವಾತ್ಮಾ= ತನ್ನನ್ನು ಮರೆತ, ವ್ಯಾಕ್ಷೇಪ= ಚಿಂತೆಯಿಂದ, ಆಕ್ಷಿಪ್ತ= ಕಂಗೆಟ್ಟ ಚೇತನಃ= ಮನಸ್ಸುಳ್ಳ, ಅಸೌ= ಈ ವ್ಯಕ್ತಿಯು, ಆತ್ಮಾನಂ= ತನ್ನನ್ನು, ಮನಸಾ= ಮನಸ್ಸಿನಿಂದ, ನ ಪಶ್ಯೇತ್ ಹಿ= ಕಾಣಲಾರನಷ್ಟೆ?

**ಅನುವಾದ–** ಪ್ರತ್ಯಕ್ಷಗೋಚರವಾಗುತ್ತಿರುವ ವಸ್ತುವಿನ ವಿಷಯದಲ್ಲಿ ಪ್ರಯೋಗಿಸಲ್ಪಟ್ಟ ಶಬ್ದವು ಅಪರೋಕ್ಷಜ್ಞಾನವನ್ನು ಹುಟ್ಟಿಸುವುದೆಂದು ಪರಿಷ್ಕರಿಸಿ ಹೇತುವನ್ನು ಹೇಳುವುದಾದರೆ, ಆಗ ಚಿತ್ತವಿಕ್ಷೇಪವುಳ್ಳ ತಾನು ದಶಮನೆಂದು ತಿಳಿಯದ ವ್ಯಕ್ತಿಗೆ ಶಬ್ದದಿಂದ ಹೇಗೆ ತಾನೇ ಅಪರೋಕ್ಷಜ್ಞಾನ ಬರುವುದಕ್ಕೆ ಸಾಧ್ಯ? ಇವನಾದರೋ, 'ದಶಮಸ್ತ್ವಮಸಿ' ಎಂಬ ಶಬ್ದಪ್ರಯೋಗಕ್ಕೆ ಮೊದಲು, ತನ್ನ ಬಗ್ಗೆ ಅರಿವಿಲ್ಲದೇ

ಹತ್ತನೆಯವನೆಲ್ಲಿ ಎಂಬ ಚಿಂತೆಯಿಂದ ಕಂಗೆಟ್ಟು ತನ್ನನ್ನು ಮನಸ್ಸಿನಿಂದ ಕಾಣುತ್ತಿಲ್ಲವಷ್ಟೆ.

**ಭಾವವಿಲಾಸಿನೀ–** ವ್ಯಾಕ್ಷೇಪಾಕ್ಷಿಪ್ತಚೇತನಃ ವ್ಯಾಕ್ಷೇಪನಿರಸ್ತಮನೋವ್ಯಾಪಾರ ಇತ್ಯರ್ಥಃ । ಅತ ಏತಾದೃಶೇಪ್ರಯುಕ್ತಂ ದಶಮಸ್ತ್ವಮಸೀತಿ ವಾಕ್ಯಮಪಿ ದೃಶ್ಯಮಾನೇ ಪ್ರಯುಕ್ತ ಶಬ್ದತ್ವಾಭಾವಾತ್ ತ್ವನ್ಮ್ಯಾಯೇನೈವ ನ ಸಾಕ್ಷಾತ್ಕಾರಜನಕಂ ಸ್ಯಾದಿತಿ ಭಾವಃ । ಪೂರ್ವಂ ದಾರ್ಷ್ಟಾಂತಿಕೇ ಶಬ್ದಪ್ರಯೋಗಸಮಯೇ ದೃಶ್ಯಮಾನತ್ವಾಭಾವ ಉಕ್ತಃ । ಇದಾನೀಂ ತು ದೃಷ್ಟಾಂತ ಏವೇತಿ ವಿವೇಕಃ ॥ ೪೪-೪೫ ॥

**ವಿವರಣೆ–** ದೃಷ್ಟಿಯೋಗ್ಯದಲ್ಲಿ ಪ್ರಯುಕ್ತ ಶಬ್ದವು ಅಪರೋಕ್ಷಜನಕ ಎಂಬ ಮಾತಿಗೆ 'ಗೃಹೇ ಘಟೋಽಸ್ತಿ' ಎಂಬ ವಾಕ್ಯದಿಂದ ಹೊರಗಿದ್ದವನಿಗೆ ಅಪರೋಕ್ಷಜ್ಞಾನವುಂಟಾಗ ಬೇಕಾದೀತು ಎಂದು ಬಾಧಕವನ್ನು ಹಿಂದೆ ಹೇಳಲಾಗಿದೆ. ಆಗ, ಆತ ಪ್ರತ್ಯಕ್ಷಗೋಚರ ವಾಗುತ್ತಿರುವಾಗ ಪ್ರಯುಕ್ತವಾದ ವಾಕ್ಯವು ಮಾತ್ರ ಅಪರೋಕ್ಷಜ್ಞಾನಜನಕವೆಂದು ವ್ಯಾಪ್ತಿಯನ್ನು ಪರಿಷ್ಕರಿಸಿಕೊಂಡ. ಬ್ರಹ್ಮವು ಸಾಕ್ಷಾದ್ ದೃಶ್ಯಮಾನವಾಗುತ್ತಿರುವಾಗಲೇ 'ತತ್ ತ್ವಮಸಿ' ಮುಂತಾದ ವಾಕ್ಯವು ಪ್ರಯುಕ್ತವಾಗುತ್ತಿದ್ದು ಅದು ಬ್ರಹ್ಮಾಪರೋಕ್ಷವನ್ನು ಹುಟ್ಟಿಸಬಹುದು ಎಂಬುದು ಅಭಿಪ್ರಾಯ.

ಆದರೆ, ಇದು ಸರಿಯಲ್ಲ. ಏಕೆಂದರೆ, ದೃಷ್ಟಾಂತದಲ್ಲಿ ಸಾಧನವೈಕಲ್ಯವುಂಟಾಗುತ್ತದೆ. ಎಂದರೆ, ಶಬ್ದಕರಣಕತ್ವವನ್ನು ಸಾಧಿಸುವ ಪ್ರಕೃತಹೇತುವು ದೃಷ್ಟಾಂತದಲ್ಲಿ ಬರುವುದಿಲ್ಲ. 'ತತ್ ತ್ವಮಸೀತಿ ವಾಕ್ಯಂ ಅಪರೋಕ್ಷಜ್ಞಾನಜನಕಮ್, ದೃಶ್ಯಮಾನೇ ಪ್ರಯುಕ್ತವಾಕ್ಯತ್ವಾತ್, ದಶಮಸ್ತ್ವಮಸೀತಿ ವಾಕ್ಯವತ್' ಎಂಬ ಅನುಮಾನವು ಪರನಿಗೆ ವಿವಕ್ಷಿತ. ಇಲ್ಲಿ ದೃಷ್ಟಾಂತವಾದ 'ದಶಮಸ್ತ್ವಮಸಿ' ಎಂಬ ವಾಕ್ಯದಲ್ಲಿ ದೃಶ್ಯಮಾನೇ ಪ್ರಯುಕ್ತವಾಕ್ಯತ್ವ (ದೃಷ್ಟಿಗೋಚರವಾಗುತ್ತಿರುವುದರ ಬಗೆಗೆ ಬಳಸಿದ ವಾಕ್ಯವಾಗಿರುವಿಕೆ) ಎಂಬ ಹೇತು ಇಲ್ಲ. ಏಕೆಂದರೆ, 'ದಶಮಸ್ತ್ವಮಸಿ' ಎಂಬ ವಾಕ್ಯವನ್ನು ಕೇಳುವುದಕ್ಕೆ ಮುಂಚೆ, ಆತ ತನ್ನನ್ನೇ ಮರೆತು ಹತ್ತನೆಯವನೆಲ್ಲಿದ್ದಾನೆ ಎಂಬ ಚಿಂತೆಯಲ್ಲಿ ವ್ಯಾಕುಲಗೊಂಡಿದ್ದ. ಆದ್ದರಿಂದಲೇ, ಆತನ ಮನಸ್ಸು ಕಸಿವಿಸಿಗೊಂಡು ಸ್ವಾತ್ಮನನ್ನು ಕಾಣುತ್ತಿರಲಿಲ್ಲ. ಈ ಸ್ವಾತ್ಮನ ಬಗ್ಗೆ ಬಳಸಿದ 'ದಶಮಸ್ತ್ವಮಸಿ' ಎಂಬ ವಾಕ್ಯ ಅದೃಶ್ಯಮಾನದ ಬಗೆಗಿನ ವಾಕ್ಯವೇ ಹೊರತು, ದೃಶ್ಯಮಾನಗೋಚರ ವಾಕ್ಯವಲ್ಲ.ಆದ್ದರಿಂದ, ದೃಷ್ಟಾಂತವು ಸರಿಹೊಂದುತ್ತಿಲ್ಲ.

**ದೃಶ್ಯಮಾನೇಽಪಿ ಶಬ್ದೇನ ಸಾಕ್ಷಾತ್ಕಾರಾಂತರಪ್ರಮಾ ।**
**ಅನಾನುಭವಿಕತ್ವೇನ ವೈಯರ್ಥ್ಯಾಚ್ಚ ನ ಶೋಭತೇ ॥**
**ಸೈವ ಚೇತ್ ತರ್ಹಿ ಶಬ್ದೋತ್ಥಾ ಸಾಕ್ಷಾತ್ಕಾರಪ್ರಮಾ ಕ್ವ ತೇ ॥ ೪೬ ॥**

**ಅರ್ಥ–** ಅಪಿ= ಮತ್ತು, ದೃಶ್ಯಮಾನೇ= ಪ್ರತ್ಯಕ್ಷಯೋಗ್ಯವಸ್ತುವಿನ ವಿಷಯದಲ್ಲಿ, ಶಬ್ದೇನ= ವಾಕ್ಯಪ್ರಯೋಗದಿಂದ, ಸಾಕ್ಷಾತ್ಕಾರಾಂತರ ಪ್ರಮಾ= ಎರಡನೆಯ

ಸಾಕ್ಷಾತ್ಕಾರರೂಪವಾದ ಯಥಾರ್ಥಜ್ಞಾನವು, ಅನಾನುಭವಿಕತ್ವೇನ= ಅನುಭವವಿರುದ್ಧ-ವಾದ್ದರಿಂದ, ವೈಯರ್ಥ್ಯಾತ್ ಚ= ವ್ಯರ್ಥವಾದ್ದರಿಂದ ಕೂಡ, ನ ಶೋಭತೇ= ಶೋಭಿಸುವುದಿಲ್ಲ. ಸಾ ಏವ ಚೇಶ್= ಅದೇ ಸಾಕ್ಷಾತ್ಕಾರವು ಶಬ್ದದಿಂದ ಹುಟ್ಟಿದೆಯೆಂದು ಹೇಳುವುದಾದರೆ, ತರ್ಹಿ= ಆ ಪಕ್ಷದಲ್ಲಿ, ತೇ= ನಿನ್ನ, ಶಬ್ದೋತ್ಥಾ= ಶಬ್ದಜನ್ಯವಾದ, ಸಾಕ್ಷಾತ್ಕಾರಪ್ರಮಾ= ಸಾಕ್ಷಾತ್ಕಾರರೂಪ ಯಥಾರ್ಥ ಜ್ಞಾನವು, ಕ್ವ= ಎಲ್ಲಿದೆ?

**ಅನುವಾದ–** ಪ್ರತ್ಯಕ್ಷವಿಷಯವಾಗುತ್ತಿರುವ ವಸ್ತುವಿನ ವಿಷಯದಲ್ಲಿ ಶಬ್ದದಿಂದ ಎರಡನೆಯ ಸಾಕ್ಷಾತ್ಕಾರವು ಅನುಭವಸಿದ್ಧವಿಲ್ಲದಿರುವುದರಿಂದ ಮತ್ತು ವ್ಯರ್ಥವಾದುದರಿಂದ ಶೋಭಿಸುವುದಿಲ್ಲ. ಅದೇ ಸಾಕ್ಷಾತ್ಕಾರವು ಶಬ್ದದಿಂದ ಹುಟ್ಟಿದೆಯೆಂದು ಹೇಳುವುದಾದರೆ, ನಿನ್ನ ಮತದಲ್ಲಿ ಅಂತಹ ಶಾಬ್ದಸಾಕ್ಷಾತ್ಕಾರ-ವೆಂಬುದು ಎಲ್ಲಿದೆ? ಆ ಸಾಕ್ಷಾತ್ಕಾರವು ಇಂದ್ರಿಯಕರಣದಿಂದ ಹಿಂದೆಯೇ ಹುಟ್ಟಿರುವುದರಿಂದ ಶಬ್ದದಿಂದ ಇನ್ನೊಮ್ಮೆ ಹುಟ್ಟುವುದು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಭಾವವಿಲಾಸಿನೀ–** ಕಿಂಚ ದೃಶ್ಯಮಾನೇಽಪಿ ಪ್ರಯುಕ್ತಃ ಶಬ್ದಃ ದರ್ಶನಾಂತರಂ ಸಾಧಯತಿ । ಉತ ತದೇವೇತಿ ವಿಕಲ್ಪಾದ್ಯಂ ದೂಷಯತಿ– **ದೃಶ್ಯಮಾನ ಇತಿ** ॥ ವೈಯರ್ಥ್ಯಾಚ್ಚೇತ್ಯುಪಲಕ್ಷಣಮ್ । ಅನ್ಯತ್ರಾಪಿ ತಜ್ಜನಕತ್ವಪ್ರಸಂಗಾದಿತ್ಯಪಿ ದ್ರಷ್ಟವ್ಯಮ್ । ದ್ವಿತೀಯಂ ದೂಷಯತಿ – **ಸೈವೇತಿ** ॥ ತಸ್ಯಾಶ್ಚ ಪ್ರಾಗೇವ ಸ್ವಕರಣಜನಿತಾಯಾಃ ಪುನಃಶಬ್ದೇನಾಪಿ ಜನನಾಯೋಗಾದಿತಿ ಭಾವಃ ॥೪೬॥

**ವಿವರಣೆ–** ಪ್ರತ್ಯಕ್ಷಗೋಚರವಾಗುತ್ತಿರುವ ವಸ್ತುವಿನ ಬಗ್ಗೆ ಶಬ್ದವನ್ನು ಪ್ರಯೋಗಿಸಿದಾಗ ಶಬ್ದದಿಂದಾಗಿ ಸಾಕ್ಷಾತ್ಕಾರವುಂಟಾಗುತ್ತದೆಂಬುದು ಪರರ ವಾದ. ಇಲ್ಲಿ ಶಬ್ದದಿಂದ ಹುಟ್ಟುವ ಸಾಕ್ಷಾತ್ಕಾರ ಯಾವುದು? ಮೊದಲೇ ಇಂದ್ರಿಯದಿಂದ ಹುಟ್ಟಿದ ಸಾಕ್ಷಾತ್ಕಾರವೇ ಶಾಬ್ದವೋ? ಅದಕ್ಕಿಂತ ಬೇರೆಯಾದ ಶಾಬ್ದಸಾಕ್ಷಾತ್ಕಾರ ಹುಟ್ಟುತ್ತದೋ? ಅದೇ ಸಾಕ್ಷಾತ್ಕಾರವು ಶಾಬ್ದವಾಗುವುದು ಸಾಧ್ಯವಿಲ್ಲ. ಶಾಬ್ದವೆಂದರೆ ಶಬ್ದದಿಂದ ಹುಟ್ಟುವಂಥದು. ಆ ಸಾಕ್ಷಾತ್ಕಾರವು ಇಂದ್ರಿಯಸನ್ನಿಕರ್ಷದಿಂದಾಗಿ ಈಗಾಗಲೇ ಹುಟ್ಟಿದೆ. ಸ್ವಕರಣ ಸಾಮರ್ಥ್ಯದಿಂದ ಈಗಾಗಲೇ ಹುಟ್ಟಿಯೇ ಇರುವ ಸಾಕ್ಷಾತ್ಕಾರವು ಇನ್ನೊಮ್ಮೆ ಶಬ್ದದಿಂದ ಹುಟ್ಟುವುದು ಅಸಾಧ್ಯ. ಆದ್ದರಿಂದ, ಆ ಸಾಕ್ಷಾತ್ಕಾರದಂತೆಯೇ ಇರುವ ಎರಡನೆಯ ಸಾಕ್ಷಾತ್ಕಾರವು ಹುಟ್ಟುವುದೆಂದು ಹೇಳಬೇಕು. ಆದರೆ, ಒಂದನ್ನೇ ವಿಷಯೀಕರಿಸುವ ಎರಡು ಸಾಕ್ಷಾತ್ಕಾರಗಳು ಅಂತಹ ಸ್ಥಿತಿಯಲ್ಲಿ ಬರುತ್ತದೆಂಬುದು ಅನುಭವಕ್ಕೆ ವೇದ್ಯವಾಗುತ್ತಿಲ್ಲ. ಜ್ಞಾನ ಬಂದಿದೆಯೆಂಬುದಕ್ಕೆ ಅನುಭವವನ್ನು ಬಿಟ್ಟು ಬೇರೆ ಪ್ರಮಾಣವಿಲ್ಲ. ಅನಾನುಭವಿಕವಾದ ಸಾಕ್ಷಾತ್ಕಾರಾಂತರವನ್ನು ಒಪ್ಪುವಂತಿಲ್ಲ. ಅಲ್ಲದೇ, ಮೊದಲ ಸಾಕ್ಷಾತ್ಕಾರದಿಂದಲೇ ವ್ಯವಹಾರಾದಿಗಳು ನಡೆಯುತ್ತಿರುವಾಗ, ಎರಡನೆಯ ಸಾಕ್ಷಾತ್ಕಾರವನ್ನು ಒಪ್ಪುವುದು ವ್ಯರ್ಥವೂ ಆಗುತ್ತದೆ.

**ಕರಣಸ್ಯ ಬಲಾಚ್ಚೇದ್ಧೀಸ್ತರ್ಹಿ ಶಾಬ್ದ್ಯೇವ ಸಾ ಭವೇತ್ ।**
**ದೃಷ್ಟೇಽರ್ಥೇ ತರ್ಕರಸಿಕಸ್ಯಾನುಮಾನಾದ್ ಯಥಾನುಮಾ ॥ ೪೭ ॥**

**ಅರ್ಥ–** ಕರಣಸ್ಯ= ಜ್ಞಾನಕರಣದ, ಬಲಾತ್= ಶಕ್ತಿಯಿಂದ, ಧೀಃ= ಜ್ಞಾನವು, ಭವತಿ ಚೇತ್= ಹುಟ್ಟುವುದಾದರೆ, ತರ್ಹಿ= ಆ ಪಕ್ಷದಲ್ಲಿ, ಸಾ= ಆ ಜ್ಞಾನವು, ಶಾಬ್ದೀ ಏವ= ಶಬ್ದಜನ್ಯವೇ, ಭವೇತ್= ಆಗಬೇಕು. ತತ್= ಅದು, ಯಥಾ= ಹೇಗೆಂದರೆ, ತರ್ಕರಸಿಕಸ್ಯ= ಅನುಮಾನದಲ್ಲಿ ಆದರವುಳ್ಳ ವ್ಯಕ್ತಿಗೆ, ದೃಷ್ಟೇ= ಪ್ರತ್ಯಕ್ಷದೃಷ್ಟವಾದ, ಅರ್ಥೇ= ವಸ್ತುವಿನ ಬಗ್ಗೆ, ಅನುಮಾನಾತ್= ಅನುಮಾನ ಪ್ರಯೋಗದಿಂದ, ಅನುಮಾ= ಅನುಮಿತಿಯು ಹುಟ್ಟಿದಂತೆ.

**ಅನುವಾದ– ಕರಣವಾದ ಶಬ್ದದ ಸಾಮರ್ಥ್ಯದಿಂದ ಜ್ಞಾನವು ಹುಟ್ಟುತ್ತದೆಯಾದರೆ, ಆಗ ಶಾಬ್ದಬೋಧವು ಹುಟ್ಟಬೇಕೇ, ಹೊರತು ಅಪರೋಕ್ಷವಲ್ಲ. ಅದೆಂತೆಂದರೆ, ತರ್ಕರಸಿಕನು ಕಣ್ಣಾರೆ ಕಾಣುತ್ತಿರುವ ವಿಷಯದಲ್ಲಿ ಅನುಮಾನದಿಂದ ಅನುಮಿತಿಯನ್ನು ಪಡೆದಂತೆ.**

**ಭಾವವಿಲಾಸಿನೀ– ಪಕ್ಷಾಂತರಮಾಶಂಕ್ಯ ದೂಷಯತಿ – ಕರಣಸ್ಯೇತಿ ॥ ಶಬ್ದಸ್ಯ ತತ್ರೈವ ಸಾಮರ್ಥ್ಯಾದಿತಿ ಭಾವಃ ॥ ೪೭ ॥**

**ವಿವರಣೆ–** ಇಂದ್ರಿಯ ಹಾಗೂ ಅನುಮಾನದಂತೆ ಶಬ್ದವೂ ಒಂದು ಜ್ಞಾನಕರಣ. ಕರಣಕ್ಕೆ ಜ್ಞಾನವನ್ನು ಹುಟ್ಟಿಸುವ ಸ್ವಭಾವಸಿದ್ಧ ಸಾಮರ್ಥ್ಯವಿದೆ. ಹಾಗಾಗಿ, ಪ್ರತ್ಯಕ್ಷವಿಷಯವಾದ ವಸ್ತುವಿನ ಬಗ್ಗೆ ಪ್ರಯುಕ್ತವಾದ ಶಬ್ದವು ತನ್ನ ಕರಣಸಾಮರ್ಥ್ಯದಿಂದ ಸಾಕ್ಷಾತ್ಕಾರವನ್ನು ಹುಟ್ಟಿಸಿಯೇ ತೀರುತ್ತದೆ ಎಂಬ ವಾದವನ್ನು ಇಲ್ಲಿ ನಿರಾಕರಿಸಲಾಗಿದೆ.

ಶಬ್ದವು ಕರಣಸಾಮರ್ಥ್ಯದಿಂದ ಶಾಬ್ದಬೋಧವೆಂಬ ಪರೋಕ್ಷಜ್ಞಾನವನ್ನು ಹುಟ್ಟಿಸಬೇಕೇ ಹೊರತು, ಅಪರೋಕ್ಷವನ್ನಲ್ಲ. ಅನುಮಾನಕ್ಕೂ ಶಬ್ದಕ್ಕೂ ಪರೋಕ್ಷಜ್ಞಾನವನ್ನು ಹುಟ್ಟಿಸುವ ಸಾಮರ್ಥ್ಯವಷ್ಟೇ ಸರ್ವವಿದಿತ. ಪ್ರತ್ಯಕ್ಷಗೋಚರವಾದ ವಿಷಯದಲ್ಲಿ ಅನುಮಾನವು ಪ್ರಯುಕ್ತವಾದರೆ, ಅದು ಇಂದ್ರಿಯಸಾಮರ್ಥ್ಯದಿಂದ ಹುಟ್ಟಿದ ಪ್ರತ್ಯಕ್ಷಕ್ಕಿಂತ ಬೇರೆಯಾದ ಅನುಮಿತಿಯನ್ನು ಹುಟ್ಟಿಸುತ್ತದೆ. ಅದರಂತೆ, ಪ್ರತ್ಯಕ್ಷಗೋಚರವಸ್ತುವಿನಲ್ಲಿ ಶಬ್ದವನ್ನು ಪ್ರಯೋಗಿಸಿದಾಗ, ಶಬ್ದದಿಂದ ಶಾಬ್ದವೆಂಬ ಪರೋಕ್ಷಜ್ಞಾನವೇ ಹುಟ್ಟಬೇಕಾಗುತ್ತದೆ.

**ಶಬ್ದವು ಸಾಕ್ಷಾತ್ಕಾರಜನಕವೆಂದು ಶ್ರುತಿಯೂ ಹೇಳಿಲ್ಲ -**

**ತಸ್ಮಾದ್ ದರ್ಶನಮುದ್ದಿಶ್ಯ ತಾದರ್ಥ್ಯೇನಾಸ್ಯ ಕೀರ್ತನಾತ್ ।**
**ಕರಣತ್ವಂ ಶ್ರುತಿಬಲಾದ್ ವಾಚ್ಯಂ ನಾನ್ಯಾಸ್ತಿ ತೇ ಗತಿಃ ॥ ೪೮ ॥**

**ಶ್ರುತಿಸ್ತು ಶ್ರವಣಂ ವಕ್ತಿ ಮನನಂ ಧ್ಯಾನಮಂತತಃ ।**
**ಪಾರಂಪರ್ಯಾತ್ ತು ತತ್ರಾದ್ಯೇ ಹೇತುರ್ಧ್ಯಾನಂ ತು ಮುಖ್ಯತಃ ॥ ೪೯ ॥**

**ಅರ್ಥ–** ತಸ್ಮಾತ್= ಆದ್ದರಿಂದ, ದರ್ಶನಂ= ಭಗವದ್ದರ್ಶನವನ್ನು, ಉದ್ದಿಶ್ಯ= ಉದ್ದೇಶಿಸಿಕೊಂಡು, ಅಸ್ಯ= ಈ ಶ್ರವಣವನ್ನು, ತಾದರ್ಥ್ಯೇನ= ಭಗವದಪರೋಕ್ಷಕ್ಕಾಗಿ, ಕೀರ್ತನಾತ್= ಶ್ರುತಿಯಲ್ಲಿ ಹೇಳಿರುವುದರಿಂದ, ಶ್ರುತಿಬಲಾತ್= ವೇದವಾಕ್ಯದ ಆಧಾರದಿಂದ, ಕರಣತ್ವಂ= ಶಬ್ದಕ್ಕೆ ಅಪರೋಕ್ಷಜ್ಞಾನವನ್ನು ಕುರಿತು, ಕರಣತ್ವವು, ತ್ವಯಾ= ನಿನ್ನಿಂದ, ವಾಚ್ಯಂ= ಹೇಳಲ್ಪಡಬೇಕು. ತೇ= ನಿನಗೆ, ಅನ್ಯಾ= ಬೇರೆ, ಗತಿಃ= ಮಾರ್ಗವು, ನ ಅಸ್ತಿ= ಇಲ್ಲ. ಶ್ರುತಿಃ ತು= ವೇದವಾದರೂ, ಶ್ರವಣಂ= ಶ್ರವಣವನ್ನು, ಮನನಂ= ಮನನವನ್ನು, ಅಂತತಃ= ಕೊನೆಗೆ, ಧ್ಯಾನಂ= ಧ್ಯಾನವನ್ನು, ವಕ್ತಿ= ಹೇಳುತ್ತದೆ. ತತ್ರ= ಈ ಮೂರರಲ್ಲಿ, ಆದ್ಯೇ= ಮೊದಲನೆಯವುಗಳಾದ ಶ್ರವಣಮನನಗಳು, ಪಾರಂಪರ್ಯಾತ್= (ಭಗವದಪರೋಕ್ಷಕ್ಕೆ) ಪರಂಪರೆಯಿಂದ, ಹೇತುಃ= ಕಾರಣಗಳು, ಧ್ಯಾನಂ ತು= ಧ್ಯಾನವಾದರೂ, ಮುಖ್ಯತಃ= ಪ್ರಧಾನವಾಗಿ, ಹೇತುಃ= ಕಾರಣವು.

**ಅನುವಾದ–** ಶಬ್ದಶ್ರವಣವು ಅಪರೋಕ್ಷಜ್ಞಾನಜನಕವಾಗಿ ಎಲ್ಲೂ ಕಂಡಿಲ್ಲವಾದ್ದರಿಂದ ಶ್ರವಣಾದಿಗಳನ್ನು ಭಗವದ್ದರ್ಶನಕ್ಕೆ ಕಾರಣವನ್ನಾಗಿ ಶ್ರುತಿಯಲ್ಲಿ ಹೇಳಿರುವುದರಿಂದ (ಆತ್ಮಾ ವಾ ಅರೇ...) ಈ ಶ್ರುತಿಬಲದಿಂದ ಶಬ್ದಕ್ಕೆ ಅಪರೋಕ್ಷದರ್ಶನಕರಣತ್ವವನ್ನು ನೀನು ಹೇಳಬೇಕು. ನಿನಗೆ ಬೇರೆ ಮಾರ್ಗವಿಲ್ಲ. ಆದರೆ ಶ್ರುತಿಯು ಶ್ರವಣವನ್ನೂ ಮನನವನ್ನೂ ಹೇಳಿ ಕೊನೆಗೆ ಧ್ಯಾನವನ್ನು ಭಗವದ್ದರ್ಶನಕ್ಕಾಗಿ ವಿಧಿಸಿದೆ. ಅಲ್ಲಿ ಆರಂಭದ ಶ್ರವಣ ಹಾಗೂ ಮನನಗಳು ಭಗವದಪರೋಕ್ಷಕ್ಕೆ ಪರಂಪರೆಯಿಂದ (ಧ್ಯಾನದ್ವಾರಾ) ಹೇತು. ಧ್ಯಾನವು ಸಾಕ್ಷಾತ್ತಾಗಿ ಹೇತು.

**ಭಾವವಿಲಾಸಿನೀ–** ತಸ್ಮಾತ್ ಶಬ್ದಶ್ರವಣಸ್ಯ ಕ್ವಾಪ್ಯಪರೋಕ್ಷಜ್ಞಾನಜನಕತ್ವಾದರ್ಶನಾತ್ । ಅಸ್ಯ ಶ್ರವಣಾದೇಃ । ಶ್ರುತಿಬಲಾದೇವ ಶ್ರವಣಸ್ಯಾಪರೋಕ್ಷಜ್ಞಾನಜನಕತ್ವಂ ವಕ್ತವ್ಯಮಿತಿ ಭಾವಃ ॥೪೮॥

**ವಿವರಣೆ–** ಶಬ್ದವು ಅಪರೋಕ್ಷ ಜ್ಞಾನವನ್ನು ಹುಟ್ಟಿಸುತ್ತದೆಯೆಂಬುದು ಅನುಭವವಿರುದ್ಧವೆಂದು ಅನುಮಾನವಿರುದ್ಧವೆಂದೂ ನಿರೂಪಿಸಿ ಆಗಿದೆ. ಹೀಗಿದ್ದೂ ಪರನು ಶಬ್ದಶ್ರವಣಕ್ಕೆ ಬ್ರಹ್ಮಾಪರೋಕ್ಷಜನಕತ್ವವನ್ನು ಹೇಳುತ್ತಿರುವುದಕ್ಕೆ ಕಾರಣವೇನು? ಕೇವಲ ಶ್ರುತಿವಾಕ್ಯ. 'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬ ಶ್ರುತಿಯಲ್ಲಿ ಮೊದಲು ಭಗವದ್ದರ್ಶನ (ಅಪರೋಕ್ಷ)ವನ್ನು ವಿಧಿಸಿ, ಅದಕ್ಕೆ ಹೇತುವಾಗಿ ಶ್ರವಣವನ್ನು ಹೇಳಲಾಗಿದೆ. 'ಶ್ರವಣವು ಅಪರೋಕ್ಷ-ಜ್ಞಾನಕರಣ'ವೆಂದು ಶ್ರುತಿಯು ಹೇಳುತ್ತಿರುವುದರಿಂದ, ಅದನ್ನು ಒಪ್ಪಬೇಕಾಗಿದೆಯೆಂದು ಪರವಾದಿಯು ಹೇಳಬೇಕಾಗಿದೆ. ಇದೂ ಸರಿಯಲ್ಲ.

ಶ್ರುತಿಯು ಕೇವಲ ಶ್ರವಣವನ್ನು ಹೇಳುತ್ತಿಲ್ಲ. ಮನನವನ್ನೂ ಧ್ಯಾನ (ನಿದಿಧ್ಯಾಸನ)ವನ್ನೂ ಹೇಳುತ್ತಿದೆ. ಈ ಶ್ರುತ್ಯರ್ಥವನ್ನು ಗಮನಿಸಿದಾಗ ತಿಳಿಯುವುದೇನೆಂದರೆ ಶ್ರವಣಮನನಧ್ಯಾನಗಳು ಭಗವದ್ದರ್ಶನಕ್ಕೆ ಸಹಕಾರಿಗಳು. ಅದರಲ್ಲಿ, ಶ್ರವಣಮನನಗಳು ಧ್ಯಾನದ್ವಾರಾ ಸಹಕಾರಿಗಳಾದರೆ ಧ್ಯಾನವು ಮುಖ್ಯವಾಗಿ ಸಹಕಾರಿ. ಅಪರೋಕ್ಷಜ್ಞಾನವುಂಟಾಗುವುದು ಮನಸ್ಸಿನಿಂದ. 'ಮನಸೈವೈನಂ ಪಶ್ಯತಿ' 'ಚೇತಸಾ ವೇದಿತವ್ಯಃ' 'ಮನಸೈವಾನುದ್ರಷ್ಟವ್ಯಮ್' ಎಂಬ ಶ್ರುತಿಗಳಲ್ಲಿ ಮನಸಾ, ಚೇತಸಾ ಎಂಬಲ್ಲಿನ ಕರಣಾರ್ಥಕ ತೃತೀಯಾವಿಭಕ್ತಿಯಿಂದ ಅಪರೋಕ್ಷಜ್ಞಾನಕ್ಕೆ ಮನಸ್ಸೇ ಕರಣವೆಂದು ನಿರ್ಧಾರಿತವಾಗಿದೆ. 'ಶ್ರೋತವ್ಯಃ' ಎಂಬಲ್ಲೆಲ್ಲಾ ಆವಶ್ಯಕವೆಂಬ ಅರ್ಥದ 'ತವ್ಯ'ಪ್ರತ್ಯಯವಿರುವುದರಿಂದ ಶ್ರವಣಾದಿಗಳು ಮನಸ್ಸಿಗೆ ಅಪರೋಕ್ಷಕ್ಕಾಗಿ ಸಹಕಾರಿಗಳು ಎಂಬುದು ವಿದಿತವಾಗಿದೆ.

ಅದರಲ್ಲೂ 'ತತಸ್ತು ಪಶ್ಯತೇ ನಿಷ್ಕಲಂ ಧ್ಯಾಯಮಾನಃ' ಇತ್ಯಾದಿ ಮಾತುಗಳಿಂದ ಧ್ಯಾನವು ಮುಖ್ಯಸಹಕಾರಿಯೆಂದು ನಿರ್ಧಾರಿತವಾಗಿದೆ. ಶ್ರವಣವೇ ಸಾಕ್ಷಾತ್ಕಾರಕರಣವೆಂಬ ವಿಷಯ ಈ ಶ್ರುತಿಯಲ್ಲಿಲ್ಲ.

ಅಲ್ಲದೆ ಶ್ರವಣಾದಿಗಳು ಕರಣಗಳೇ ಅಲ್ಲ. ಹಾಗಾಗಿದ್ದರೆ, ಶ್ರವಣ-ಮನನ-ನಿದಿಧ್ಯಾಸನಗಳು ಮೂರೂ ಕೂಡ ಸಾಕ್ಷಾತ್ಕಾರಕ್ಕೆ ಕರಣಗಳಾಗಬೇಕಾಗುತ್ತದೆ. ಒಂದು ಸಾಕ್ಷಾತ್ಕಾರಕ್ಕೆ ಮೂರು ಕರಣಗಳೆಂಬುದು ಅಸಾಧು. ಈ ಕಾರಣದಿಂದಲೂ ಮನಸ್ಸಿನೊಂದಿಗೆ ಶ್ರವಣವೂ ಸಾಕ್ಷಾತ್ಕಾರಕರಣವೆಂಬ ವಾದವು ತಪ್ಪು.

**ನ ಚೇತ್ ಕರ್ಮೈವ ಹೇತುಃ ಸ್ಯಾದ್ ಅಂಗಂ ಸ್ಯಾಚ್ಛ್ರವಣಾದ್ಯಪಿ ।**
**ಕರ್ಮಣಾ ಜ್ಞಾನಮಿತ್ಯಾಹ ಯತಃ ಶ್ರುತಿರಚಂಚಲಾ ॥ ೫೦ ॥**

**ಅರ್ಥ–** ನ ಚೇತ್= ಅಲ್ಲದಿದ್ದರೆ, ಜ್ಞಾನಂ ಪ್ರತಿ= ಜ್ಞಾನವನ್ನು ಕುರಿತು, ಕರ್ಮ ಏವ= ಕರ್ಮವೇ, ಹೇತುಃ= ಕಾರಣವು, ಸ್ಯಾತ್= ಆದೀತು. ಶ್ರವಣಾದಿ ಅಪಿ= ಶ್ರವಣಾದಿಗಳೂ ಕೂಡ ಕರ್ಮವನ್ನು ಕುರಿತು, ಅಂಗಂ= ಅಂಗವು, ಸ್ಯಾತ್= ಆದೀತು, ಯತಃ= ಏಕೆಂದರೆ, ಅಚಂಚಲಾ= ದೃಢವಾದ, ಶ್ರುತಿಃ= ವೇದವಾಕ್ಯವು, ಕರ್ಮಣಾ= ಕರ್ಮದಿಂದ, ಜ್ಞಾನಂ= ಜ್ಞಾನವು, ಭವತಿ= ಬರುತ್ತದೆ, ಇತಿ= ಎಂದು, ಆಹ= ಹೇಳುತ್ತದೆ.

**ಅನುವಾದ–** **'ಆತ್ಮಾ ವಾ ಅರೇ ದ್ರಷ್ಟವ್ಯಃ ಶ್ರೋತವ್ಯಃ' ಎಂಬ ಶ್ರುತಿಯಲ್ಲಿ ದರ್ಶನಶ್ರವಣಗಳ ಸನ್ನಿಧಾನಮಾತ್ರದಿಂದ ಶ್ರವಣವು ದರ್ಶನಕ್ಕೆ ಮುಖ್ಯ ಸಾಧನ (ಅಂಗಿ) ಎಂದು ಅಂಗೀಕರಿಸಿದರೆ, ಅಪರೋಕ್ಷಜ್ಞಾನವನ್ನು ಕುರಿತು ಕರ್ಮವು ಹೇತುವಾಗಬೇಕಾಗುತ್ತದೆ. ಏಕೆಂದರೆ, ನಿರ್ಧಾರಾತ್ಮಕವಾಗಿ ಹೇಳುವ ಶ್ರುತಿಯೊಂದು 'ಕರ್ಮದಿಂದ ಜ್ಞಾನವು ಲಭಿಸುತ್ತದೆ (ಕರ್ಮಣಾ**

ಜ್ಞಾನಮಾತನೋತಿ) ಎಂದು ಅರುಹಿದೆ. ಆದ್ದರಿಂದ ಶ್ರವಣಾದಿಗಳನ್ನು ಕರ್ಮಕ್ಕೇ ಅಂಗವೆಂದು ಅಂಗೀಕರಿಸು.

**ಭಾವವಿಲಾಸಿನೀ–** ತತ್ರ ಶ್ರವಣಮನನನಿದಿಧ್ಯಾಸನಾನಾಂ ಮಧ್ಯೇ । ಆದ್ಯೇ ಶ್ರವಣಮನನೇ । ಮುಖ್ಯತಃ ದ್ವಾರಾಂತರಂ ವಿನಾ । ಉಕ್ತವಿಧಯಾ ಮನಃಕರಣಕದರ್ಶನೋಪಯೋಗೀತ್ಯರ್ಥಃ । ಅಯಮಭಿಸಂಧಿಃ । ''ಮನಸೈವೈನಂ ಪಶ್ಯತೀ''ತಿ ಶ್ರುತ್ಯಾ ಇತರವ್ಯವಚ್ಛೇದಪೂರ್ವಕಂ ತೃತೀಯಯಾ ಮನಸ ಏವಕರಣತ್ವನಿರ್ಣೀತೇಃ ಸಹಕಾರಿತಯೈವೈಷಾಂ ಕಥನಂ ನ ಕರಣತಯಾ ದ್ವಿಕರಣಕೈಕಕ್ರಿಯಾಯೋಗಾತ್ ತ್ರಯಾಣಾಮಪಿ ಕರಣತ್ವಪ್ರಸಂಗಾಚ್ಚೇತಿ ॥ ೪೯, ೫೦ ॥

**ವಿವರಣೆ–** 'ಕರ್ಮಣಾ ಜ್ಞಾನಮಾತನೋತಿ' ಎಂಬ ಶ್ರುತಿಯಿದೆ. 'ಕರ್ಮಣಾ' ಎಂಬ ತೃತೀಯಾದಿಂದ ಕರ್ಮಕ್ಕೆ ಕರಣತ್ವವೂ ಲಭಿಸುತ್ತಿದೆ. ಜ್ಞಾನವೆಂದರೆ ಅಪರೋಕ್ಷಜ್ಞಾನ. ಹಾಗಾಗಿ, ಈ ಶ್ರುತಿಯು ಅಪರೋಕ್ಷಜ್ಞಾನಕ್ಕೆ ಕರ್ಮವು ಕರಣ ಎಂದು ಉಸುರಿದೆ. 'ಶ್ರೋತವ್ಯಃ' ಎಂಬಿತ್ಯಾದಿ ಹೇಳಿರುವ ಶ್ರವಣಮನನಾದಿಗಳು ಕರ್ಮದೊಂದಿಗೆ ಸಹಕಾರಿಗಳಾಗಿ ಉಪಕರಿಸುತ್ತವೆ. ಭಗವದಪರೋಕ್ಷಜ್ಞಾನಕ್ಕೆ ಕರ್ಮವು ಅಂಗಿ, ಶ್ರವಣಾದಿಗಳು ಅಂಗಗಳೆಂದು ಶ್ರುತಿಸಾಮರ್ಥ್ಯದಿಂದ ನಿರ್ಧರಿಸಬಹುದಾಗಿದೆ. ಆದರೆ, ಯಾರೂ ಹಾಗೆ ನಿರ್ಧರಿಸುವುದಿಲ್ಲ. ಏಕೆಂದರೆ, ಕರ್ಮಕ್ಕೆ ಸ್ವತಃ ಜ್ಞಾನಸಾಧನ-ಸಾಮರ್ಥ್ಯವಿಲ್ಲದೇ ಇರುವುದರಿಂದ 'ಕರ್ಮಣಾ ಜ್ಞಾನಂ' ಎಂಬ ಶ್ರುತಿಯಿದ್ದರೂ ಕರ್ಮವನ್ನು ಅಂತಃಕರಣಶುದ್ಧಿದ್ವಾರಾ ಶ್ರವಣಾದ್ಯರ್ಹತೆಗೆ ಕಾರಣವೆನ್ನಲಾಗಿದೆ. ಹಾಗೆಯೇ, 'ದ್ರಷ್ಟವ್ಯಃ ಶ್ರೋತವ್ಯಃ' ಎಂಬ ಶ್ರುತಿಸನ್ನಿಧಾನವಿದ್ದರೂ ಶ್ರವಣಕ್ಕೆ ದರ್ಶನ (ಸಾಕ್ಷಾತ್ಕಾರ) ಸಂಪಾದನಯೋಗ್ಯತೆಯೇ ಇಲ್ಲವಾದ್ದರಿಂದ, ಶ್ರುತಿಗೂ ಶ್ರವಣವು ಸಾಕ್ಷಾತ್ಕಾರಸಾಧನವೆಂಬ ಅರ್ಥವನ್ನು ಮಾಡುವಂತಿಲ್ಲ.

ಶ್ರುತಿಗೆ 'ಅಚಂಚಲಾ' ಎಂಬ ವಿಶೇಷಣವಿದೆ. 'ಚಂಚಲವಲ್ಲದ ಶ್ರುತಿ' ಎಂದರೆ ಬೇರೆ ಅರ್ಥವನ್ನು ಹೇಳಲಾಗದ ನಿರವಕಾಶಶ್ರುತಿಯೆಂದರ್ಥ. ಅಥವಾ ದ್ವಾರಾಂತರವನ್ನು ಹೇಳದೆ ಕರ್ಮಕ್ಕೆ ಅಂಗಿತ್ವವನ್ನು ಹೇಳುವ ಶ್ರುತಿಯೆಂದರ್ಥ.

**ತಸ್ಮಾತ್ ಕ್ರಮಿಕವೇದೋಕ್ತಕಾರಣೇಷು ಯದುತ್ತರಮ್ ।**
**ಜ್ಞಾನಾದವ್ಯವಧಾನೇನ ಪೂರ್ವಂ ಚ ತತ ಏವ ತತ್ ॥ ೫೧ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಕ್ರಮಿಕವೇದೋಕ್ತ= ಕ್ರಮವಾಗಿ ವೇದದಲ್ಲಿ ಹೇಳಲ್ಪಟ್ಟ, ಕಾರಣೇಷು= ಕಾರಣಗಳಲ್ಲಿ, ಯತ್= ಯಾವುದು, ಉತ್ತರಂ= ಕೊನೆಯದಾಗಿದೆಯೋ, ಜ್ಞಾನಾತ್= ಜ್ಞಾನಕ್ಕಿಂತ, ಅವ್ಯವಧಾನೇನ= ಮಧ್ಯೆ ತಡೆಯಿಲ್ಲದೆ, ಪೂರ್ವಂ ಚ= ಮೊದಲನೆಯದೂ ಆಗಿದೆಯೋ, ತತಃ ಏವ= ಅಂತಹ ಧ್ಯಾನದಿಂದಲೇ, ತತ್= ಭಗವದಪರೋಕ್ಷವು, ಸ್ಯಾತ್= ಆಗುತ್ತದೆ.

**ಅನುವಾದ–** ಆದ್ದರಿಂದ, ವೇದದಲ್ಲಿ ಹೇಳಿದ ಕ್ರಮಿಕ ಕಾರಣಗಳಲ್ಲಿ ಯಾವುದು ಕೊನೆಯದೋ, ಅಲ್ಲದೇ ಜ್ಞಾನಕ್ಕಿಂತ ಅವ್ಯವಧಾನೇನ (ಮಧ್ಯೆ ತಡೆಯಿಲ್ಲದೆ) ಪೂರ್ವದಲ್ಲಿದೆಯೋ, ಅಂತಹ ಧ್ಯಾನದಿಂದಲೇ ಭಗವದ್ದರ್ಶನವಾಗುತ್ತದೆ.

**ಭಾವವಿಲಾಸಿನೀ–** ತಸ್ಮಾತ್ ಪೂರ್ವತಯಾ ಶ್ರವಣಸ್ಯ ಮುಖ್ಯಕಾರಣತ್ವೇ ಕರ್ಮಣ ಏವ ತತ್ ಪ್ರಸಂಗಾತ್ । ತತ ಏವ ತಾದೃಶನಿದಿಧ್ಯಾಸನಾದೇವ । ತತ್ ಅಪರೋಕ್ಷಜ್ಞಾನಮ್ ॥ ೫೧ ॥

**ವಿವರಣೆ–** ಶ್ರವಣವು ದರ್ಶನಕ್ಕಿಂತ ಪೂರ್ವಭಾವಿಯಾಗಿದೆ ಎಂಬುದರಿಂದ ಶ್ರವಣವನ್ನು ದರ್ಶನ (ಸಾಕ್ಷಾತ್ಕಾರ)ಕ್ಕೆ ಮುಖ್ಯ ಕಾರಣವೆಂದು ಒಪ್ಪಿದರೆ, ಕರ್ಮವು ಅಂತಹ ಮುಖ್ಯ ಕಾರಣವಾಗಬೇಕಾದೀತು ಎಂಬ ಅತಿಪ್ರಸಂಗವನ್ನು ಹಿಂದಿನ ಶ್ಲೋಕದಲ್ಲಿ ಹೇಳಲಾಗಿದೆ. ಈ ಅತಿಪ್ರಸಂಗವನ್ನೇ ಇಲ್ಲಿ 'ತಸ್ಮಾತ್' ಎಂಬ ಶಬ್ದದಿಂದ ಪರಾಮರ್ಶಿಸಲಾಗಿದೆ. ಹಾಗಾಗಿ, ತಸ್ಮಾತ್=ದರ್ಶನಪೂರ್ವಭಾವಿತ್ವಮಾತ್ರದಿಂದ ಶ್ರವಣವನ್ನು ಮುಖ್ಯಕಾರಣವೆಂದು ಒಪ್ಪಿದರೆ ಕರ್ಮವೇ ದರ್ಶನಕಾರಣವಾಗಬೇಕಾದೀತು ಎಂಬ ಅತಿಪ್ರಸಂಗವುಂಟಾಗುವುದರಿಂದ ಎಂದರ್ಥ.

ಸಾಕ್ಷಾತ್ಕಾರಕ್ಕೆ ಶ್ರವಣವು ಸಾಕ್ಷಾತ್ ಕಾರಣವಲ್ಲ ಹೊರತು, ಧ್ಯಾನವೇ ಎಂಬ ಸಿದ್ಧಾಂತವನ್ನು ಇಲ್ಲಿ ನಿರ್ಧರಿಸಲಾಗಿದೆ. ಶ್ರವಣ-ಮನನ-ಧ್ಯಾನಗಳನ್ನು ವೇದದಲ್ಲಿ 'ಶ್ರೋತವ್ಯೋ ಮಂತವ್ಯೋ ನಿದಿಧ್ಯಾಸಿತವ್ಯಃ' ಎಂಬುದಾಗಿ ಕ್ರಮವಾಗಿ ಹೇಳಲಾಗಿದೆ. ಇವುಗಳಲ್ಲಿ ಕೊನೆಯದು ಧ್ಯಾನ. ಇದೇ ಭಗವದ್ದರ್ಶನದ ಅವ್ಯವಹಿತ ಪೂರ್ವದಲ್ಲಿರುವಂಥದು. ಹಾಗಾಗಿ, ಈ ಧ್ಯಾನದಿಂದಲೇ ಭಗವದಪರೋಕ್ಷ. ಶ್ರವಣ-ಮನನಗಳು ಸಹಕಾರಿಗಳಾಗಿ ಧ್ಯಾನಸ್ಥಿತಿಯಲ್ಲಿ ಪಕ್ವತೆಯನ್ನು ತಂದುಕೊಡುತ್ತವೆ.

**ಯದಿ ಶ್ರವಣಮಾತ್ರೇಽಪಿ ಸರ್ವೇಷಾಂ ಬ್ರಹ್ಮದರ್ಶನಮ್ ।**
**ಜೀವನ್ಮುಕ್ತಾಃ ಕುತಸ್ತರ್ಹಿ ಶುಕಾದ್ಯಾ ಏವ ಯೋಗಿನಃ ॥ ೫೨ ॥**

**ಅರ್ಥ–** ಯದಿ= ಒಂದು ಪಕ್ಷದಲ್ಲಿ, ಶ್ರವಣಮಾತ್ರೇಣ= ಕೇವಲ ಶ್ರವಣದಿಂದ, ಸರ್ವೇಷಾಂ= ಎಲ್ಲರಿಗೂ, ಬ್ರಹ್ಮದರ್ಶನಂ= ಬ್ರಹ್ಮಜ್ಞಾನವು, ಭವತಿ= ಆಗುವಂತಿದ್ದರೆ, ತರ್ಹಿ= ಆ ಪಕ್ಷದಲ್ಲಿ, ಶುಕಾದ್ಯಾಃ= ಶುಕ ಮೊದಲಾದ, ಯೋಗಿನಃ ಏವ= ಯೋಗಿಗಳು ಮಾತ್ರವೇ, ಕುತಃ= ಏಕೆ, ಜೀವನ್ಮುಕ್ತಾಃ= ಜೀವನ್ಮುಕ್ತರಾಗಿದ್ದಾರೆ?

**ಅನುವಾದ–** ಒಂದು ವೇಳೆ ಶ್ರವಣಮಾತ್ರದಿಂದ ಎಲ್ಲರಿಗೂ ಬ್ರಹ್ಮಾಪರೋಕ್ಷವಾಗುವುದಾದರೆ, ನಿನ್ನ ಮತದಲ್ಲಿ ಶುಕವಾಮದೇವಾದಿ ಯೋಗಿಗಳು ಮಾತ್ರ ಜೀವನ್ಮುಕ್ತರಾಗಿರುವುದು ಏತಕ್ಕೆ? ಶ್ರವಣ ಮಾಡಿದ ಪ್ರತಿಯೊಬ್ಬರೂ ಮುಕ್ತರಾಗಬೇಕಲ್ಲವೇ?

**ಭಾವವಿಲಾಸಿನೀ–** ಶ್ರವಣಾದೇವ ಬ್ರಹ್ಮದರ್ಶನಾಂಗೀಕಾರೇ ಬಾಧಕಂಚಾಹ – **ಯದೀತಿ** ॥ ಮಂದಾನಾಮಪಿ ಜೀವನ್ಮುಕ್ತತ್ವಂ ಸ್ಯಾದಿತಿ ಭಾವಃ । ವಿವಾದಾಭಾವಾದೇರುಪಲಕ್ಷಣಮೇತತ್ ॥ ೫೨ ॥

**ವಿವರಣೆ–** ಶ್ರವಣದಿಂದಲೇ ಬ್ರಹ್ಮಾಪರೋಕ್ಷವನ್ನು ಒಪ್ಪಿದರೆ ಮಂದರೂ ಜೀವನ್ಮುಕ್ತರಾಗ ಬೇಕಾದೀತು. ಏಕೆಂದರೆ ಶ್ರವಣವು ಎಲ್ಲರಿಂದಲೂ ನಡೆಯುತ್ತದೆ. ಶ್ರವಣ ಮಾಡುವವರೆಲ್ಲಾ ಮುಕ್ತರಾಗುತ್ತಿಲ್ಲ. ಶುಕ-ವಾಮದೇವಾದಿ ಕೆಲವರನ್ನು ಮಾತ್ರ ಪರರು ಜೀವನ್ಮುಕ್ತರೆಂದು ಅಂಗೀಕರಿಸಿದ್ದಾರೆ.

ಪರಮತದಲ್ಲಿ ಜೀವನ್ಮುಕ್ತರನ್ನು ಒಪ್ಪಿ ಈ ದೋಷವನ್ನು ರಾಜರು ಹೇಳಿದ್ದಾರೆ. ವಸ್ತುತಃ ಪರಮತಕ್ಕೆ ಶ್ರವಣಮಾತ್ರದಿಂದ ಎಲ್ಲರೂ ಮುಕ್ತರಾಗಬೇಕಾದೀತು ಎಂಬ ದೋಷವನ್ನೇ ಹೇಳಬೇಕಾಗುತ್ತದೆ. ಹಾಗಾಗಿಯೇ, ನ್ಯಾಯಸುಧೆಯಲ್ಲಿ 'ಜ್ಞಾನೇ ಸತಿ ಕಿಮಪಿ ಮುಕ್ತಿರ್ನೈವಾಪೇಕ್ಷತ ಇತಿ ಸದ್ಯ ಏವ ಸಾಕ್ಷಾತ್ಕೃತಬ್ರಹ್ಮಣಾಂ ಶರೀರಾದಿನಿವೃತ್ತಿಃ ಪ್ರಸಜ್ಯೇತ' ಎಂಬ ದೋಷವನ್ನು ಹೇಳಿದ್ದಾರೆ.

**ಅನಾನುಭಾವಿಕಂ ಚೇದಂ ಶ್ರುತಿಕಾಲೇಽಪಿ ದರ್ಶನಮ್ ।**
**ಅಶ್ನತಃ ಶೃಣ್ವತಶ್ಚಾನ್ನಂ ಕಿಂ ನಾಸ್ತಿ ಮಹದಂತರಮ್ ॥ ೫೩ ॥**

**ಅರ್ಥ–** ಶ್ರುತಿಕಾಲೇ ಅಪಿ= ಶ್ರವಣವನ್ನು ಮಾಡುತ್ತಿರುವಾಗಲೇ, ದರ್ಶನಂ= ಭಗವದಪರೋಕ್ಷಜ್ಞಾನವು, ಇತಿ ಇದಂ= ಎಂಬ ಈ ವಿಷಯವು, ಅನಾನುಭವಿಕಂ ಚ= ಅನುಭವವಿರುದ್ಧವೂ ಆಗಿದೆ. ಅನ್ನಂ= ಅನ್ನವನ್ನು, ಅಶ್ನತಃ= ತಿನ್ನುತ್ತಿರುವವನಿಗೆ ಮತ್ತು, ಶೃಣ್ವತಃ ಚ= ಅನ್ನಶಬ್ದವನ್ನು ಕೇಳುತ್ತಿರುವವನಿಗೂ, ಮಹತ್= ದೊಡ್ಡ, ಅಂತರಂ= ವ್ಯತ್ಯಾಸವು, ನ ಅಸ್ತಿ ಕಿಂ= ಇಲ್ಲವೇನು?

**ಅನುವಾದ–** ಶಬ್ದವನ್ನು ಕೇಳುತ್ತಿರುವಾಗಲೇ, ಅಪರೋಕ್ಷಜ್ಞಾನವುಂಟಾಗುತ್ತದೆ ಎಂಬ ಈ ವಿಷಯ ಅನುಭವವಿರುದ್ಧವೂ ಆಗಿದೆ. ಅನ್ನವನ್ನು ಉಣ್ಣುವವನಿಗೂ, ಅನ್ನಶಬ್ದವನ್ನು ಕೇಳುವವನಿಗೂ ಅಜಗಜಾಂತರವಿಲ್ಲವೇನು?

**ಭಾವವಿಲಾಸಿನೀ–** ಶ್ರವಣದರ್ಶನಯೋರತ್ಯಂತವೈಲಕ್ಷಣ್ಯೇ ಸರ್ವಾನುಭವಸಿದ್ಧಂ ದೃಷ್ಟಾಂತಮಾಹ – **ಅಶ್ನತ ಇತಿ** ॥ ಏಕತ್ರ ತೃಪ್ತಿದರ್ಶನಾತ್ ಅನ್ಯತ್ರ ತದಭಾವಾತ್ ರಸನೇಂದ್ರಿಯಮೇವ ತತ್ತದ್ರಸದರ್ಶನಕಾರಣಂ ನ ಶಬ್ದ ಇತಿ ಭಾವಃ ॥ ೫೩ ॥

**ವಿವರಣೆ–** ಶ್ರವಣ-ದರ್ಶನಗಳಿಗೆ ತುಂಬ ವ್ಯತ್ಯಾಸವಿದೆಯೆಂಬುದನ್ನು ಸರ್ವಾನುಭವ ಸಿದ್ಧದೃಷ್ಟಾಂತದಿಂದ ತೋರಿಸುತ್ತಿದ್ದಾರೆ. ಅನ್ನಶಬ್ದದಿಂದ ತೃಪ್ತಿಯುಂಟಾಗುವುದಿಲ್ಲ.

ಅನ್ನಭಕ್ಷಣದಿಂದ ತೃಪ್ತಿಯುಂಟಾಗುತ್ತದೆ. ರಸನೇಂದ್ರಿಯವು ರಸದರ್ಶನಕಾರಣವೇ ಹೊರತು, ಶಬ್ದವಲ್ಲ. ಶಬ್ದವು ಅನ್ನದ ಬಗೆಗೆ ಪರೋಕ್ಷಜ್ಞಾನವನ್ನಷ್ಟೇ ಹುಟ್ಟಿಸಬಲ್ಲುದು.

**ತಚ್ಛಬ್ದಾನ್ನಾಪರೋಕ್ಷಂ ಸ್ಯಾತ್ ನ ತರಾಂ ನಿರ್ವಿಕಲ್ಪಕಮ್ ।**
**ಯತಸ್ತ್ವದುಕ್ತವಾಕ್ಯೇऽಪಿ ದಶಮತ್ವವಿಶಿಷ್ಟಧೀಃ ॥ ೫೪ ॥**

**ಅರ್ಥ–** ತತ್= ಆದ್ದರಿಂದ, ಶಬ್ದಾತ್= ಶಬ್ದಶ್ರವಣಮಾತ್ರದಿಂದ, ಅಪರೋಕ್ಷಂ= ಅಪರೋಕ್ಷಜ್ಞಾನವು, ನ ಸ್ಯಾತ್= ಹುಟ್ಟಲಾರದು, ನಿರ್ವಿಕಲ್ಪಕಂ= ನಿರ್ವಿಕಲ್ಪಕ-ಪ್ರತ್ಯಕ್ಷವಂತೂ, ನ ತರಾಂ ಸ್ಯಾತ್= ಸುತರಾಂ ಹುಟ್ಟಲಾರದು. ಯತಃ= ಏಕೆಂದರೆ, ತ್ವದುಕ್ತ= ನಿನ್ನಿಂದ ಹೇಳಲ್ಪಟ್ಟ ವಾಕ್ಯೇ ಅಪಿ= ನೀನು ಹತ್ತನೆಯವನು ಎಂಬ ವಾಕ್ಯದಲ್ಲಿಯೂ (ವಾಕ್ಯದಿಂದಲೂ ದಶಮತ್ವ ವಿಶಿಷ್ಟಧೀಃ) = ಹತ್ತನೆಯವನು ಎಂಬ ಅಂಶವನ್ನು ವಿಷಯೀಕರಿಸುವ ಸವಿಕಲ್ಪಕ ಜ್ಞಾನವೇ, ಸ್ಯಾತ್= ಹುಟ್ಟುತ್ತದೆ.

**ಅನುವಾದ–** ಅನ್ನಶಬ್ದಾದಿಗಳಿಂದ ಅನ್ನರಸಸಾಕ್ಷಾತ್ಕಾರವಿಲ್ಲವಾದ್ದರಿಂದ ಶಬ್ದದಿಂದ ಅಪರೋಕ್ಷವೆಂಬುದು ಇಲ್ಲ. ನಿರ್ವಿಕಲ್ಪಕ ಪ್ರತ್ಯಕ್ಷವಂತೂ ಸುತರಾಂ ಹುಟ್ಟಲಾರದು. ಏಕೆಂದರೆ, ನೀನು ಹೇಳಿದ 'ದಶಮಸ್ತ್ವಮಸಿ' ಎಂಬ ವಾಕ್ಯದಲ್ಲೂ ದಶಮತ್ವವಿಶಿಷ್ಟಜ್ಞಾನವು ಹುಟ್ಟಿದೆಯೇ ಹೊರತು, ನಿರ್ವಿಕಲ್ಪಕ ಜ್ಞಾನವಲ್ಲ.

**ಭಾವವಿಲಾಸಿನೀ–** ತತ್ ತಸ್ಮಾತ್ ರಸಶಬ್ದೇನ ರಸಸಾಕ್ಷಾತ್ಕಾರಾದರ್ಶನಾತ್ । ನತರಾಮಿತ್ಯೇತದೇವ ಸ್ಪಷ್ಟಯತಿ – ಯತ ಇತಿ ॥ ೫೪ ॥

**ವಿವರಣೆ–** ಚರಮವೃತ್ತಿ ಎಂದು ಕರೆಸಿಕೊಳ್ಳುವ ಬ್ರಹ್ಮಾಪರೋಕ್ಷವನ್ನು ಅದ್ವೈತ ಸಿದ್ಧಾಂತದಲ್ಲಿ ನಿರ್ವಿಕಲ್ಪಕಜ್ಞಾನವೆನ್ನಲಾಗಿದೆ. ಧರ್ಮ-ಧರ್ಮಿಗಳಿಗೆ ಸಂಬಂಧವು ಕಾಣದೇ ವಸ್ತುಮಾತ್ರವನ್ನು ಗ್ರಹಿಸುವ ಜ್ಞಾನವು ನಿರ್ವಿಕಲ್ಪಕ. ಪ್ರತ್ಯಕ್ಷದಲ್ಲಿ ನಿರ್ವಿಕಲ್ಪಕ ಹಾಗು ಸವಿಕಲ್ಪಕವೆಂಬ ಎರಡು ಪ್ರಭೇದವಿದೆ.

ಸಾಮಾನ್ಯವಾಗಿ, ಶಬ್ದದಿಂದ ಬರುವ ಎಲ್ಲಾ ಜ್ಞಾನವೂ ಸಪ್ರಕಾರಕವಾಗಿದ್ದು ಸವಿಕಲ್ಪಕವೇ ಆಗಿದೆ. ಬ್ರಹ್ಮನಲ್ಲಿ ಯಾವುದೇ ಧರ್ಮಗಳಿಲ್ಲ. ಹಾಗಾಗಿ ಬ್ರಹ್ಮಾಪರೋಕ್ಷವು ಸಪ್ರಕಾರಕವಾದರೆ (ಬ್ರಹ್ಮನಲ್ಲಿ ಧರ್ಮಗಳನ್ನು ಗ್ರಹಿಸಿದರೆ) ಅದು ಭ್ರಾಂತಿಯಾದೀತು. ಬ್ರಹ್ಮಪ್ರಮಾ ಆಗುವುದು ಸಾಧ್ಯವಿಲ್ಲ. ಆದ್ದರಿಂದ, ಈ ಬ್ರಹ್ಮಾಪರೋಕ್ಷವು ನಿಷ್ಪ್ರಕಾರಕವಾಗಿದ್ದು, ನಿರ್ವಿಕಲ್ಪಕಪ್ರತ್ಯಕ್ಷವಾಗಿದೆಯೆಂಬುದು ಅದ್ವೈತವಾದ.

ಇದು ಅಸಮಂಜಸವಾದವಾಗಿದೆ. ಮೊದಲನೆಯದಾಗಿ ನಿರ್ವಿಕಲ್ಪಕಪ್ರಮಾ ಎಂಬುದೇ ಇಲ್ಲ. ಜ್ಞಾನವೆಲ್ಲವೂ ಸಂಬದ್ಧಾರ್ಥಗಳನ್ನೇ ವಿಷಯೀಕರಿಸುತ್ತದೆ. ಸಂಬಂಧ-ವನ್ನು ವಿಷಯೀಕರಿಸದ ಕೇವಲ ಧರ್ಮವನ್ನೋ ಧರ್ಮಿಯನ್ನೋ ವಿಷಯೀಕರಿಸುವ ನಿರ್ವಿಕಲ್ಪಕ ಜ್ಞಾನವೆಂಬುದೇ ಶಶವಿಷಾಣದಂತೆ ಅಪ್ರಾಮಾಣಿಕವಾಗಿದೆ.

ಇಂತಹ ನಿರ್ವಿಕಲ್ಪಕವು ಶಬ್ದದಿಂದ ಹುಟ್ಟುತ್ತದೆಯೆಂಬುದಂತೂ ಅತ್ಯಂತ ಅಪ್ರಾಮಾಣಿಕ. ಅದಕ್ಕಾಗಿಯೇ ರಾಜರು 'ನತರಾಂ' ಎಂಬ ಶಬ್ದವನ್ನು ಬಳಸಿದ್ದಾರೆ. ಅದೃಷ್ಟಪೂರ್ವವಸ್ತುವೊಂದನ್ನು ಕಣ್ಣಿನಿಂದ ಕಂಡಾಗ ಮೊದಲ ನೋಟಕ್ಕೆ ನಿರ್ವಿಕಲ್ಪಕ ಪ್ರತ್ಯಕ್ಷ ಹುಟ್ಟಬಹುದೇನೋ ಎಂಬ ವಿಮರ್ಶೆಗಾದರೂ ಅವಕಾಶವಿದೆ. ಆದರೆ, ಶಬ್ದವಾಗಲೀ, ಅನುಮಾನವಾಗಲೀ, ಶಕ್ತಿಜ್ಞಾನ-ವ್ಯಾಪ್ತಿಜ್ಞಾನಾದಿಗಳಿಂದ ಜ್ಞಾನವನ್ನು ಹುಟ್ಟಿಸುವುದರಿಂದ, ಅದು ವಿಶಿಷ್ಟಜ್ಞಾನವನ್ನೇ ಹುಟ್ಟಿಸುತ್ತದೆ. ನಿರ್ವಿಕಲ್ಪಕವನ್ನು ಹುಟ್ಟಿಸುವುದು ಅಸಾಧ್ಯ.

ಅಲ್ಲದೇ, ಶಾಬ್ದಾಪರೋಕ್ಷಕ್ಕೆ ನೀವು ಕೊಟ್ಟ ದೃಷ್ಟಾಂತ 'ದಶಮಸ್ತ್ವಮಸಿ' ಎಂಬ ವಾಕ್ಯದಿಂದ ಬರುವ 'ಅಹಂ ದಶಮಃ' ಎಂಬ ಪ್ರತ್ಯಕ್ಷ. ಇದು ದಶಮತ್ವವಿಶಿಷ್ಟ ಜ್ಞಾನವಾಗಿದೆ. ಎಂದರೆ, ತನ್ನಲ್ಲಿ ದಶಮತ್ವದ ಸಂಬಂಧವನ್ನು ಗ್ರಹಿಸುತ್ತಿದೆ. ಅರ್ಥಾತ್ ಸವಿಕಲ್ಪಕವಾಗಿದೆ. 'ತತ್ತ್ವಮಸಿ' ಎಂಬ ವಾಕ್ಯದಿಂದಲೂ ಪ್ರತ್ಯಕ್ಷವೇ ಹುಟ್ಟುವುದಾದರೂ ದೃಷ್ಟಾಂತದಲ್ಲಿರುವಂತೆ ಸವಿಕಲ್ಪಕವು ಹುಟ್ಟಬಹುದೇ ಹೊರತು, ನಿರ್ವಿಕಲ್ಪಕವಲ್ಲ. ಹಾಗಾಗಿ, ಶಬ್ದದಿಂದ ಅಪರೋಕ್ಷವೇ ಇಲ್ಲ. ಅಪರೋಕ್ಷ ಜ್ಞಾನದಲ್ಲಿ ನಿರ್ವಿಕಲ್ಪಕವೆಂಬ ಜಾತಿಯೇ ಇಲ್ಲವೆಂದ ಮೇಲೆ ನಿರ್ವಿಕಲ್ಪಕಅಪರೋಕ್ಷವೆಂಬುದು ಅಷ್ಟಮರಸದಂತೆ ಅತ್ಯಂತ ಅಸಂಭಾವಿತವಾದುದು.

**ಅನ್ವಿತಾರ್ಥಾಭಿಧಾಯಿತ್ವಾದ್ ಅನ್ಯೋನ್ಯಾನ್ವಯಮಿಶ್ರಿತಮ್ ।**
**ಸ್ವಾರ್ಥಂ ಮುಖ್ಯಮಮುಖ್ಯಂ ವಾ ಪದಂ ವಕ್ತೀತಿ ತೇ ಮತಮ್ ।**
**ತಚ್ಛಬ್ದಾತ್ ನಿರ್ವಿಕಲ್ಪಾ ಧೀರಿತಿ ರಿಕ್ತಂ ವಚಸ್ತವ ॥ ೫೫ ॥**

**ಅರ್ಥ–** ಅನ್ವಿತಾರ್ಥಾಭಿಧಾಯಿತ್ವಾತ್= ಅನ್ವಿತಗಳಾದ ಅರ್ಥಗಳನ್ನೇ ಹೇಳುವ ಶಕ್ತಿಯುಳ್ಳದ್ದಾದ್ದರಿಂದ, ಪದಂ= ಪದವು, ಅನ್ಯೋನ್ಯಾನ್ವಯ= ಪರಸ್ಪರಾನ್ವಯದಿಂದ, ಮಿಶ್ರಿತಂ= ಕೂಡಿದ, ಮುಖ್ಯಂ= ಮುಖ್ಯವಾದ, ವಾ= ಅಥವಾ, ಅಮುಖ್ಯಂ= ಅಮುಖ್ಯವಾದ, ಸ್ವಾರ್ಥಂ= ತನ್ನ ಅರ್ಥವನ್ನು, ವಕ್ತಿ= ಹೇಳುತ್ತದೆ, ಇತಿ= ಎಂಬುದಾಗಿ, ತೇ= ನಿನ್ನ, ಮತಂ= ಮತವು, ಅಸ್ತಿ= ಇದೆ. ತತ್= ಆದ್ದರಿಂದ, ಶಬ್ದಾತ್= ಶಬ್ದದಿಂದ, ನಿರ್ವಿಕಲ್ಪಾಧೀಃ= ನಿರ್ವಿಕಲ್ಪಕಜ್ಞಾನವು, ಭವತಿ= ಹುಟ್ಟುತ್ತದೆ, ಇತಿ= ಎಂಬ, ತವ= ನಿನ್ನ, ವಚಃ= ಮಾತು, ರಿಕ್ತಂ= ಸುಳ್ಳಾಗಿದೆ.

**ಅನುವಾದ– ಪದಗಳು ಅನ್ವಿತವಾದ ಅರ್ಥದಲ್ಲೇ ಶಕ್ತಿಯುಳ್ಳವುಗಳಾದ್ದರಿಂದ, ಪದವು ಪರಸ್ಪರಾನ್ವಯದಿಂದ ಕೂಡಿದ ಮುಖ್ಯಾರ್ಥವನ್ನು ಅಥವಾ ಅಮುಖ್ಯಾರ್ಥವನ್ನು ಬೋಧಿಸುವುದೆಂದು ನಿನ್ನ ಮತವಾಗಿದೆ. ಹೀಗಿರುವುದರಿಂದ, ಶಬ್ದದಿಂದ ನಿರ್ವಿಕಲ್ಪಕವಾದ (ಅನ್ವಯವನ್ನು ವಿಷಯೀಕರಿಸದ) ಬುದ್ಧಿಯು ಹುಟ್ಟುವುದೆಂಬ ನಿನ್ನ ಮಾತು ಸುಳ್ಳಾಗಿದೆ.**

**ಭಾವವಿಲಾಸಿನೀ–** ತತ್ ತಸ್ಮಾತ್ ತವ ಮತೇಽಪಿ ಶಬ್ದಸ್ಯಾನ್ವಿತಾಭಿಧಾಯಿತ್ವಾತ್ ॥ ೫೫ ॥

**ವಿವರಣೆ–** ಶಬ್ದದಿಂದ ಶಾಬ್ದಬೋಧ ಬರುವುದಕ್ಕೆ ವೃತ್ತಿಜ್ಞಾನವು ಸಹಕಾರಿ. ವೃತ್ತಿಯು ಶಕ್ತಿ, ಲಕ್ಷಣಾ, ಗೌಣೀ ಎಂಬುದಾಗಿ ಮೂರು ವಿಧ. ಶಕ್ತಿವೃತ್ತಿಯಿಂದ ಶಬ್ದವು ಮುಖ್ಯಾರ್ಥವನ್ನು ಬೋಧಿಸುತ್ತದೆ. ಲಕ್ಷಣಾವೃತ್ತಿ ಹಾಗು ಗೌಣೀವೃತ್ತಿಯಿಂದ ಅಮುಖ್ಯಾರ್ಥವನ್ನು ತಿಳಿಸುತ್ತದೆ. ಶಕ್ತಿವೃತ್ತಿಯನ್ನೇ 'ಅಭಿಧಾ' ಎಂದೂ ಕರೆಯುವುದಿದೆ. ಈ ಅಭಿಧಾವೃತ್ತಿಯಿಂದ ಪದವು ಅರ್ಥವನ್ನು ತಿಳಿಸುವ ವಿಷಯದಲ್ಲಿ ಎರಡು ಪಕ್ಷಗಳಿವೆ. ಒಂದು ಅಭಿಹಿತಾನ್ವಯವಾದ ಮತ್ತೊಂದು ಅನ್ವಿತಾಭಿಧಾನವಾದ.

ಪದಗಳು ಕೇವಲ ಅರ್ಥವನ್ನು ತಿಳಿಸುತ್ತವೆ. ಪದಾಭಿಹಿತವಾದ ಪದಾರ್ಥಗಳೇ ಪರಸ್ಪರಾನ್ವಯವನ್ನು ಹೊಂದುತ್ತವೆ ಎಂಬ ವಾದ ಅಭಿಹಿತಾನ್ವಯವಾದ. ಮೀಮಾಂಸಕರು ಈ ವಾದವನ್ನು ಅಂಗೀಕರಿಸಿದ್ದಾರೆ. ನ್ಯಾಯಮತದಲ್ಲೂ ಅನ್ವಯ (ಸಂಬಂಧ)ವನ್ನು ತಿಳಿಸುವುದಕ್ಕೆ ಪದಗಳಲ್ಲಿ ಶಕ್ತಿ ಇರುವುದಿಲ್ಲ. ಪದಸಮಭಿವ್ಯಾಹಾರರೂಪ ಆಕಾಂಕ್ಷೆಯು ಅನ್ವಯಬೋಧಜನಕ.

ಅನ್ವಿತಾಭಿಧಾನ ವಾದದಲ್ಲಿ ಪದಗಳು ಅನ್ವಿತವಾದ ಅರ್ಥಗಳನ್ನೇ ಅಭಿಧಾನ ಮಾಡುತ್ತವೆ. ಅಂದರೆ, ಪದಗಳಿಗೆ ಅನ್ವಯದಲ್ಲೂ ಅರ್ಥದಲ್ಲೂ ಶಕ್ತಿಯಿದೆ. ಶ್ರುತವಾದ ಶಬ್ದವು ಅನ್ವಿತವಾದ ಅರ್ಥವನ್ನೇ ತಿಳಿಸುವುದರಿಂದ ಇದು ಅನ್ವಿತಾಭಿಧಾನವಾದ. ಭಾಟ್ಟರು ಈ ಮತದ ಪ್ರತಿಪಾದಕರು. ಪ್ರಾಯಶಃ, ಶಾಂಕರರು ಭಾಟ್ಟನಯವನ್ನು ಬಳಸುವರಾಗಿ ಈ ಅನ್ವಿತಾಭಿಧಾನವಾದವನ್ನು ಒಪ್ಪಿಕೊಂಡಿದ್ದಾರೆ.

ಹೀಗೆ ಅನ್ವಿತಾಭಿಧಾನವಾದಿಗಳಾದ ಅದ್ವೈತಿಗಳು ಶಬ್ದವು ಅನ್ವಯದೊಂದಿಗೇ ಅರ್ಥವನ್ನು ತಿಳಿಸುತ್ತವೆಯೆಂದು ನಿರ್ಧರಿಸಿದ್ದಾರೆ. ಹೀಗಿರುವಾಗ ನಿರ್ವಿಕಲ್ಪಕ ಜ್ಞಾನವೊಂದನ್ನು ಶಬ್ದಜನ್ಯವೆಂದು ಒಪ್ಪಿದರೆ ಅಪಸಿದ್ಧಾಂತವುಂಟಾಗುತ್ತದೆ. ಅನ್ವಯ ರಹಿತವಾದ ನಿರ್ವಿಕಲ್ಪಕ ಜ್ಞಾನವನ್ನು ಶಬ್ದವು ಹುಟ್ಟಿಸಿದರೆ ಆ ಶಬ್ದವು ಅನ್ವಿತಾಭಿಧಾಯಿಯಾಗುವುದು ಹೇಗೆ ಸಾಧ್ಯ?

ಧ್ಯಾನದಿಂದಾಗಿ ಭೌತಮನಸ್ಸಿನಿಂದ ಭಗವದ್ದರ್ಶನ -

**ಯೌಗಪದ್ಯೇನ ತದ್ಯೋಗ್ಯಗುಣಾನುಸ್ಮರಣಂ ಹರೇಃ ।**
**ಅಚ್ಛಿನ್ನತೈಲಧಾರಾವದ್ ಆರಾತ್ತಂ ದರ್ಶಯೇದ್ ಹೃದಿ ॥ ೫೬ ॥**

**ಅರ್ಥ–** ತತ್= ಆದ್ದರಿಂದ, ಯೌಗಪದ್ಯೇನ= ನಿರಂತರವಾಗಿ, ಅಚ್ಛಿನ್ನ= ಅವಿಚ್ಛಿನ್ನವಾದ, ತೈಲಧಾರಾವತ್= ಎಣ್ಣೆಯ ಧಾರೆಯಂತೆ, ಹರೇಃ= ಭಗವಂತನ, ಯೋಗ್ಯ= ಧ್ಯಾನಮಾಡುವವನ ಯೋಗ್ಯತೆಗೆ ಅನುಸಾರವಾಗಿ, ಗುಣ= ಗುಣಗಳ, ಅನುಸ್ಮರಣಂ=

ಸ್ಮರಣವು, ತಂ= ಭಗವಂತನನ್ನು, ಹೃದಿ= ಹೃದಯದಲ್ಲಿ, ಆರಾತ್= ಶೀಘ್ರವಾಗಿ, ದರ್ಶಯೇತ್= ದರ್ಶನ ಮಾಡಿಸೀತು.

**ಅನುವಾದ–** ಆದ್ದರಿಂದ (ಶ್ರವಣವು ದರ್ಶನಕ್ಕೆ ಕಾರಣವಲ್ಲವಾದ್ದರಿಂದ) ನಿರಂತರವಾಗಿ ಅವಿಚ್ಛಿನ್ನವಾಗಿ ಸುರಿಯುವ ತೈಲಧಾರೆಯಂತೆ ಶ್ರೀಹರಿಯ ಯೋಗ್ಯಗುಣಗಳ ನಿರಂತರಸ್ಮರಣೆಯು ಆ ಶ್ರೀಹರಿಯನ್ನು ಶೀಘ್ರವಾಗಿ ಹೃದಯದಲ್ಲಿ ದರ್ಶನ ಮಾಡಿಸೀತು.

**ಭಾವವಿಲಾಸಿನೀ–** ಉಪಸಂಹರತಿ – **ಯೌಗಪದ್ಯೇನೇತಿ** ॥ ತತ್ ತಸ್ಮಾತ್ ಶ್ರವಣಸ್ಯ ದರ್ಶನಹೇತುತ್ವಾಯೋಗಾತ್ । ಅಚ್ಛಿನ್ನತೈಲಧಾರಾವದ್ಯೌಗಪದ್ಯೇನ ಹರೇರ್ಯೋಗ್ಯ-ಗುಣಾನುಸ್ಮರಣಂ ಸ್ವಯೋಗ್ಯಗುಣಾನುಸ್ಮರಣಮಿತಿ ನಿದಿಧ್ಯಾಸನಸ್ವರೂಪಕಥನಮ್ ॥ ೫೬ ॥

**ವಿವರಣೆ–** ಶ್ರವಣದಿಂದ ಭಗವದಪರೋಕ್ಷ ಎಂಬ ವಾದವನ್ನು ಸುದೀರ್ಘವಾಗಿ ನಿರಾಕರಿಸಿ, ಇದೀಗ ಉಪಸಂಹರಿಸಲು ತೊಡಗಿದ್ದಾರೆ. ಭಗವದ್ದರ್ಶನಕ್ಕೆ ಮುಖ್ಯಕಾರಣ ಶ್ರವಣವಲ್ಲವಾದರೆ ಮತ್ತೆ ಯಾವುದು ಎಂಬ ಪ್ರಶ್ನೆಗೆ ಇಲ್ಲಿ ಉತ್ತರವಿದೆ. ಧ್ಯಾನವು ಭಗವದ್ದರ್ಶನಕ್ಕೆ ಕಾರಣ. ಧ್ಯಾನವೆಂದರೆ ಅವಿಚ್ಛಿನ್ನ ತೈಲಧಾರೆಯಂತೆ ನಿರಂತರ ಭಗವದ್ಗುಣಗಳ ಸ್ಮರಣೆ.

'ಖಂಡಸ್ಮೃತಿರ್ಧಾರಣಾ ಸ್ಯಾದಖಂಡಾ ಧ್ಯಾನಮುಚ್ಯತೇ' ಎಂಬ ತಂತ್ರಸಾರಸಂಗ್ರಹದ ಆಚಾರ್ಯೋಕ್ತಿಯಂತೆ ಖಂಡಸ್ಮರಣೆಯು ಧಾರಣೆ. ಅಖಂಡಸ್ಮರಣೆಯು ಧ್ಯಾನ. ಭಗವದ್ಗುಣಸ್ಮರಣೆಯು ಮಧ್ಯೆ ಮಧ್ಯೆ ವಿಚ್ಛೇದವನ್ನು ಹೊಂದುತ್ತಿದ್ದರೆ ಅದು ಧಾರಣೆ. ತೈಲಧಾರೆಯಂತೆ ಅವಿಚ್ಛಿನ್ನವಾದ ಗುಣಸ್ಮರಣೆಯಿದ್ದರೆ ಅದು ಧ್ಯಾನ. ಅಲ್ಲದೆ, ಧಾರಣೆಯಲ್ಲಿ ಅಲ್ಪವಿಷಯಗಳ ಸ್ಮರಣೆಯಿರುತ್ತದೆ. ಭಗವಂತನ ಪಾದ, ಶಿರಸ್ಸು ಮುಂತಾದ ಖಂಡಗಳ ಸ್ಮೃತಿಯು ಧಾರಣೆ. ಭಗವಂತನ ಅಖಂಡ ಸ್ಮೃತಿಯೇ ಧ್ಯಾನ ಎಂಬ ಎರಡು ವಿಶೇಷಗಳನ್ನು ತಿಳಿಸುವುದಕ್ಕಾಗಿ 'ಅಚ್ಛಿನ್ನತೈಲ-ಧಾರಾವತ್' ಮತ್ತು 'ಯೌಗಪದ್ಯೇನ' ಎಂಬ ಎರಡು ವಿಶೇಷಣಗಳನ್ನು ಸ್ಮರಣೆಗೆ ಕೊಡಲಾಗಿದೆ.

ಧ್ಯಾನಕಾಲದಲ್ಲಿ ಅಖಂಡಸ್ಮರಣೆಯೆಂಬುದು ಧ್ಯಾತೃವಿನ ಯೋಗ್ಯತೆಗೆ ಅನುಗುಣವಾಗಿರುತ್ತದೆ.

'ಸಚ್ಚಿದಾನಂದ ಆತ್ಮೇತಿ ಮಾನುಷೈಸ್ತು ಸುರೇಶ್ವರೈಃ ।
ಯಥಾಕ್ರಮಂ ಬಹುಗುಣೈರ್ಬ್ರಹ್ಮಣಾ ತ್ವಖಿಲೈರ್ಗುಣೈಃ ॥'

ಎಂಬುದಾಗಿ ಅಣುಭಾಷ್ಯಾದಿಗಳಲ್ಲಿ ನಿರೂಪಿಸಿದ ಯೋಗ್ಯಗುಣೋಪಾಸನೆಯೇ ದರ್ಶನಸಾಧನವೆಂದು ತಿಳಿಸಲು 'ಯೋಗ್ಯಗುಣಾನುಸ್ಮರಣಂ' ಎಂಬಲ್ಲಿ ಗುಣಕ್ಕೆ

ಯೋಗ್ಯವೆಂಬ ವಿಶೇಷಣವನ್ನು ಕೊಡಲಾಗಿದೆ. ಉಪಾಸಕನ ಧ್ಯಾನಕ್ಕೆ ಯೋಗ್ಯವಾದ ಗುಣಗಳ ನಿರಂತರ ಸ್ಮರಣೆ ಎಂದರ್ಥ.

**ಧ್ಯಾನಂ ಚ ಮನಸಾ ತಸ್ಮಾತ್ ಧ್ಯಾತೃಚಿತ್ತಂ ಹರೀಚ್ಛಯಾ ।**
**ತದ್ಗಂ ತಮೇವೇಂದ್ರಿಯತ್ವಾತ್ ಪಶ್ಯತೀತ್ಯತಿಮಂಗಲಮ್ ॥ ೫೭ ॥**

**ಅರ್ಥ–** ಧ್ಯಾನಂ ಚ= ಧ್ಯಾನವಾದರೂ, ಮನಸಾ= ಮನಸ್ಸಿನಿಂದ, ಭವತಿ= ಆಗುತ್ತದೆ, ತಸ್ಮಾತ್= ಆದ್ದರಿಂದ, ತದ್ಗಂ= ಸಂಸ್ಕಾರಮಯ ಪ್ರತಿಮೆಯಲ್ಲಿರುವ, ತಂ ಏವ= ಆ ಭಗವಂತನನ್ನೇ, ಧ್ಯಾತೃ= ಧ್ಯಾನ ಮಾಡುವವನ, ಚಿತ್ತಂ= ಮನಸ್ಸು, ಇಂದ್ರಿಯತ್ವಾತ್= ತಾನೂ ಒಂದು ಇಂದ್ರಿಯವಾದ್ದರಿಂದ, ಹರೀಚ್ಛಯಾ= ಭಗವಂತನ ಅನುಗ್ರಹದಿಂದ, ಪಶ್ಯತಿ= ಸಾಕ್ಷಾತ್ಕರಿಸಿಕೊಳ್ಳುತ್ತದೆ, ಇತಿ= ಎಂಬುದಾಗಿ, ಅತಿಮಂಗಲಂ= ಅತ್ಯಂತ-ಶೋಭನವೆನಿಸುತ್ತದೆ.

**ಅನುವಾದ–** ಧ್ಯಾನವಾದರೋ ಮನಸ್ಸಿನ ಮೂಲಕ ಆಗುತ್ತದೆ. ಹೀಗಾಗಿ, ಭಗವಂತನ ಅನುಗ್ರಹದಿಂದ ಸಂಸ್ಕಾರಮಯ ಪ್ರತಿಮೆಯಲ್ಲಿರುವ ಆ ಭಗವಂತನನ್ನೇ ಧ್ಯಾನಮಾಡುವವನ ಚಿತ್ತವು ಇಂದ್ರಿಯವಾದ್ದರಿಂದ ಅವನನ್ನೇ ಸಾಕ್ಷಾತ್ಕರಿಸಿ ಕೊಳ್ಳುತ್ತದೆ ಎಂದು ಅರ್ಥೈಸಿಕೊಂಡಲ್ಲಿ ಅತಿಶೋಭನವೆನಿಸುತ್ತದೆ.

**ಭಾವವಿಲಾಸಿನೀ–** ಸಾಕ್ಷಾತ್ಕಾರಸ್ಯೇಂದ್ರಿಯಜನ್ಯತ್ವನಿಯಮಾನ್ಮನಸೈವೇನಂ ಪಶ್ಯತೀತಿ ಶ್ರುತೇಶ್ಚ ಕಥಂ ಧ್ಯಾನಮಾತ್ರೇಣ ದರ್ಶನಮಿತ್ಯತ ಆಹ – **ಧ್ಯಾನಂ ಚೇತಿ** ॥ ತದ್ಗಂ ಧ್ಯೇಯ-ಪ್ರತಿಮಾಂತರ್ಗತಮ್ । ತಂ ಧ್ಯೇಯಗುಣವಂತಂ ಭಗವಂತಂ ಪಶ್ಯತೀತಿ ಕರಣೇ ಕರ್ತೃತ್ವೋಪಚಾರಃ । ಧ್ಯಾನಪ್ರಸನ್ನಭಗವದನುಗೃಹೀತಂ ಮನಃ ಯೋಗ್ಯಜೀವಸ್ಯ ಭಗವತ್-ಸಾಕ್ಷಾತ್ಕಾರಕರಣಂ ಭವತೀತಿ ಭಾವಃ । ಏತತ್ಸರ್ವಂ ಮನಸಿ ನಿಧಾಯ ಶ್ರೋತೄಣಾಂ ಮನಸ್ಸಮಾಧಾನಾರ್ಥಂ ಪ್ರಾಗಸ್ಮಾಭಿಃ ಕಿಂಚಿತ್ಪ್ರದರ್ಶಿತಮಿತಿ ದ್ರಷ್ಟವ್ಯಮ್ ॥ ೫೭ ॥

**ವಿವರಣೆ–** ಧ್ಯಾನದಿಂದ ಸಾಕ್ಷಾತ್ಕಾರವೆಂದು ಹಿಂದಿನ ಶ್ಲೋಕದಲ್ಲಿ ಹೇಳಿದೆ. ಆದರೆ ಇಂದ್ರಿಯದಿಂದ ಹುಟ್ಟಿದ್ದೇ ಸಾಕ್ಷಾತ್ಕಾರವೆಂಬ ನಿಯಮವಿದೆ. ಧ್ಯಾನವು ಒಂದು ಮಾನಸಕ್ರಿಯೆಯೇ ಹೊರತು ಇಂದ್ರಿಯವಲ್ಲ, ಹಾಗಾಗಿ ಧ್ಯಾನದಿಂದ ಅವನನ್ನೇ ಸಾಕ್ಷಾತ್ಕರಿಸುವುದು ಹೇಗೆ? ಅಲ್ಲದೆ 'ಮನಸೈವೈನಂ ಪಶ್ಯತಿ' ಎಂಬ ಶ್ರುತಿಯಲ್ಲಿ ಮನಸ್ಸು ಸಾಕ್ಷಾತ್ಕಾರಕರಣವೆಂದು ಹೇಳಿದೆ. ಹೀಗಿರುವಾಗ ಧ್ಯಾನವನ್ನು ಸಾಕ್ಷಾತ್ಕಾರವೆಂದು ಹೇಗೆ ಎಂಬ ಪ್ರಶ್ನೆಗೆ ಸಮಾಧಾನ ನೀಡಲು 'ಧ್ಯಾನಂ ಚ ಮನಸಾ' ಎಂಬ ವಾಕ್ಯವಿದೆ. ಇದನ್ನು ಹಿಂದಿನ ಶ್ಲೋಕದೊಂದಿಗೆ ಅನ್ವಯಿಸಿಕೊಳ್ಳಬೇಕು. ಹರಿಗುಣಾನುಸ್ಮರಣವೆಂಬ ಧ್ಯಾನ-ವಾದರೋ ಮನಸ್ಸೆಂಬ ಇಂದ್ರಿಯದಿಂದ ನಡೆಯುತ್ತದೆ ಎಂದರ್ಥ. 'ಶ್ರವಣದರ್ಶ-ನಾದಿಜನಿತಮಾನಸವಾಸನಾಮಯಸ್ಯ ವಸ್ತುನೋ ಮನಸಾವಲೋಕನಂ ಧ್ಯಾನಮ್'.

ಎಂದರೆ ಭಗವದ್ರೂಪ ಸದೃಶವಾದ ಮಾನಸವಾಸನಾ (ಸಂಸ್ಕಾರ)ಮಯವಾದ ವಸ್ತುವನ್ನು ಮನಸ್ಸೆಂಬ ಇಂದ್ರಿಯದಿಂದ ಕಾಣುವುದಕ್ಕೆ ಧ್ಯಾನವೆಂದು ಹೆಸರು. ಇಲ್ಲಿ ಕಾಣುತ್ತಿರುವುದು . ಭಗವಂತನ ಪ್ರತಿಮೆಯಾದ ವಾಸನಾಮಯದೇಹವನ್ನೇ ಹೊರತು, ಭಗವಂತನನ್ನಲ್ಲ. ಧ್ಯಾನದಿಂದ ಭಗವಂತನು ಅನುಗ್ರಹೋನ್ಮುಖನಾಗಿ ಮನಸ್ಸಿನಲ್ಲಿ ತನ್ನನ್ನು ಕಾಣುವ ಶಕ್ತಿಯನ್ನು ತುಂಬುತ್ತಾನೆ. ಹರೀಚ್ಛೆಯಿಂದ ಆಸಾದಿತ ಶಕ್ತಿಯಿಂದ ಮನಸ್ಸು ವಾಸನಾಮಯಪ್ರತಿಮೆಯಲ್ಲಿರುವ ಭಗವಂತನನ್ನು ಕಾಣುತ್ತದೆ.

ಅವ್ಯಕ್ತಸ್ವಭಾವನಾದ ಭಗವಂತನು ತನ್ನ ಶಕ್ತಿಯಿಂದಲೇ ಮನಸ್ಸಿಗೆ ವ್ಯಕ್ತನಾಗುತ್ತಾನೆ. 'ನಿತ್ಯಾವ್ಯಕ್ತೋऽಪಿ ಭಗವಾನೀಕ್ಷ್ಯತೇ ನಿಜಶಕ್ತಿತಃ'. ಅಲ್ಲದೆ 'ಉಪಾಸನಾ ತ್ವಾಪರೋಕ್ಷ್ಯಂ ಗಮಯೇತ್ ತತ್ಪ್ರಸಾದತಃ' ಎಂಬ ಸೂತ್ರಭಾಷ್ಯದ ಪ್ರಮಾಣವು ಧ್ಯಾನದಿಂದಾಗಿ ಭಗವತ್‌ಪ್ರಸಾದವುಂಟಾಗಿ ಭಗವದಾಪರೋಕ್ಷವುಂಟಾಗುತ್ತದೆಯೆಂದಿದೆ.

ಮನಸ್ಸು ಇಂದ್ರಿಯವಾದ್ದರಿಂದ ಮನಸ್ಸಿನಿಂದ ಹುಟ್ಟಿದ ಜ್ಞಾನವು ಅಪರೋಕ್ಷವಾಗುವುದಕ್ಕೆ ತೊಂದರೆಯಿಲ್ಲ. 'ಮನಸೈವೈನಂ ಪಶ್ಯತಿ' ಎಂಬ ಶ್ರುತಿಯು ಅನುಕೂಲಿತವಾಗಿದೆ.

'ಧ್ಯಾತೃಚಿತ್ತಂ ತದ್ಗಂ ಹರಿಂ ಪಶ್ಯತಿ' 'ಮನಸ್ಸು ವಾಸನಾಮಯಪ್ರತಿಮಾಗತ ಹರಿಯನ್ನು ಕಾಣುತ್ತದೆ' ಎಂಬುದಾಗಿ ರಾಜರು ಶಬ್ದವನ್ನು ಬಳಸಿದ್ದಾರೆ. ಇಲ್ಲಿ ಮನಸ್ಸು ಕಾಣುವುದಲ್ಲ, ಮನಸ್ಸಿನಿಂದ ಜೀವನು ಕಾಣುವುದು. ಮನಸ್ಸು ಕರ್ತೃವಲ್ಲ, ಕರಣ. ಹಾಗಿದ್ದೂ 'ಮನಸ್ಸು ಹರಿಯನ್ನು ಕಾಣುತ್ತದೆ' ಎಂಬುದಾಗಿ ಕರಣದಲ್ಲಿ ಕರ್ತೃತ್ವವನ್ನು ಔಪಚಾರಿಕವಾಗಿ ವ್ಯವಹರಿಸಲಾಗಿದೆ. 'ಅವನು ಕಣ್ಣಿನಿಂದ ಕಂಡನು' ಎಂಬ ಅರ್ಥದಲ್ಲಿ ಅವನ ಕಣ್ಣು ಕಂಡಿತು ಎಂದು ಬಳಸುವಂತೆ.

ಕೊನೆಗೆ 'ಇತ್ಯತಿಮಂಗಲಂ' ಎಂದಿದ್ದಾರೆ. ಶ್ರವಣದಿಂದಲೇ ಅಪರೋಕ್ಷಜ್ಞಾನ, ಜ್ಞಾನವು ಪ್ರಸಾದನಿರಪೇಕ್ಷವಾಗಿ ಮೋಚಕವಾಗಿದೆ ಎಂಬಿತ್ಯಾದಿ ಅಮಂಗಲ ಪ್ರಕ್ರಿಯೆಗಳನ್ನು ನಿರಾಕರಿಸಿದ್ದರಿಂದಾಗಿ 'ಅಜ್ಞಾನಾಂ ಜ್ಞಾನದೋ ವಿಷ್ಣುಃ ಜ್ಞಾನಿನಾಂ ಮೋಕ್ಷದಶ್ಚ ಸಃ' ಎಂಬಿತ್ಯಾದಿ ಪ್ರಮಾಣಗಳಲ್ಲಿ ನಿರೂಪಿತವಾದ ಧ್ಯಾನಾದಿಗಳಿಂದ ಪ್ರಸನ್ನನಾದ ಭಗವಂತನೇ ಅಪರೋಕ್ಷಜ್ಞಾನವನ್ನಿತ್ತು ಪ್ರಸನ್ನನಾಗಿ ಮೋಕ್ಷವನ್ನು ನೀಡುತ್ತಾನೆ ಎಂಬ ಪ್ರಮೇಯವು ಸುಸ್ಥಿರವಾಗಿ ಪರಮಮಂಗಲಕರವಾಯಿತು ಎಂದು ಅಭಿಪ್ರಾಯ.

**ಸಾಕ್ಷಾತ್ಕಾರಕ್ಕೆ ಮನಸ್ಸು ಅಂಗಿ, ಧ್ಯಾನವು ಪ್ರಧಾನಾಂಗ ಎಂಬುದು ಶುಕರಿಗೂ ಅಭಿಮತ-**

**ಯದಂಘ್ರ್ಯಭಿಧ್ಯಾನಸಮಾಧಿಧೌತಸುಧಿಯಾತ್ಮನಃ ।**
**ಅನುಪಶ್ಯಂತಿ ತತ್ತತ್ತ್ವಮಿತ್ಯಾಹ ಭಗವಾನ್ ಶುಕಃ ॥ ೫೮ ॥**

**ಅರ್ಥ—** ಯತ್= ಯಾವ ಪರಮಾತ್ಮನ, ಅಂಘ್ರಿ= ಪಾದಗಳ, ಅಭಿಧ್ಯಾನಸಮಾಧಿ= ಧ್ಯಾನರೂಪ ಸಮಾಧಿಯಿಂದ, ಧೌತ= ಶುದ್ಧವಾದ, ಸುಧಿಯಾ= ಶ್ರೇಷ್ಠವಾದ ಮನಸ್ಸಿನಿಂದ, ಆತ್ಮನಃ= ಪರಮಾತ್ಮನ, ತತ್= ಆ, ತತ್ತ್ವಂ= ಸ್ವರೂಪವನ್ನು, ಕವಯಃ= ಜ್ಞಾನಿಗಳು, ಅನುಪಶ್ಯಂತಿ= ಕಾಣುತ್ತಾರೆ, ಇತಿ= ಎಂದು, ಭಗವಾನ್ ಶುಕಃ= ಶುಕಮಹರ್ಷಿಗಳು, ಆಹ= ಹೇಳುತ್ತಾರೆ.

**ಅನುವಾದ—** ಭಗವಂತನ ಪಾದದ ಧ್ಯಾನ-ಸಮಾಧಿಗಳಿಂದ ಶುದ್ಧವಾದ ಮನಸ್ಸಿನಿಂದ ಪರಮಾತ್ಮನ ನಿಜಸ್ವರೂಪವನ್ನು ಜ್ಞಾನಿಗಳು ಕಾಣುತ್ತಾರೆ ಎಂದು ಮಾನ್ಯರಾದ ಶುಕರೂ ಭಾಗವತದಲ್ಲಿ ಹೇಳಿದ್ದಾರೆ.

**ಭಾವವಿಲಾಸಿನೀ—** ಉಕ್ತಾರ್ಥಂ ಪ್ರಮಾಣೇನ ದೃಢಯತಿ – **ಯದಂಘ್ರೀತಿ** ॥ ಅನೇನ ''ಯದಂಘ್ರ್ಯಭಿಧ್ಯಾನಸಮಾಧಿಧೌತಯಾ ಧಿಯಾಽನುಪಶ್ಯಂತಿ ಹಿ ತತ್ವಮಾತ್ಮನಃ । ವದಂತಿ ಚೈತತ್ಕವಯೋ ಯಥಾತಥಂ ಸಮೇ ಮುಕುಂದೋ ಭಗವಾನ್ಪ್ರಸೀದತಾಮಿ''ತಿಭಾಗವತಶ್ಲೋಕಂ ಸಂಗೃಹ್ಣಾತಿ ॥ ೫೮ ॥

**ವಿವರಣೆ—** ಸಾಕ್ಷಾತ್ಕಾರಕ್ಕೆ ಮನಸ್ಸು ಕಾರಣವಾಗಿದ್ದು ಅಂಗಿಯೆನಿಸಿದೆ. ಧ್ಯಾನವು ಪ್ರಧಾನಾಂಗ ಶ್ರವಣಮನನಗಳು ಅಂಗಾಂಗಗಳು ಎಂಬ ವಿಷಯದಲ್ಲಿ ಭಾಗವತದ ಶ್ಲೋಕವು ಪ್ರಮಾಣವಾಗಿದೆ.

'ಯದಂಘ್ರ್ಯಭಿಧ್ಯಾನಸಮಾಧಿಧೌತಯಾ
ಧಿಯಾಽನುಪಶ್ಯಂತಿ ಹಿ ತತ್ವಮಾತ್ಮನಃ ।
ವದಂತಿ ಚೈತತ್ ಕವಯೋ ಯಥಾತಥಂ
ಸ ಮೇ ಮುಕುಂದೋ ಭಗವಾನ್ ಪ್ರಸೀದತಾಮ್ ॥'

ಜಗತಿಯಲ್ಲಿರುವ ಈ ಶ್ಲೋಕವನ್ನು ಶ್ರಿಮದ್ವಾದಿರಾಜರು ಅನುಷ್ಟುಪ್‌ನಲ್ಲಿ ಸಂಗ್ರಹಿಸಿದ್ದಾರೆ. ಮೊದಲ ಪಾದವನ್ನು ವಿಭಕ್ತಿಯೊಂದನ್ನು ಹೊರತುಪಡಿಸಿ ಅದೇ ಆನುಪೂರ್ವಿಯಿಂದ ಬಳಸಿಕೊಂಡಿದ್ದಾರೆ. ಪಾದಾಂತದಲ್ಲಿ ಯತಿಯಿರಬೇಕೆಂಬ ನಿಯಮವಿದೆ. ಅನುಷ್ಟುಪ್ ಶ್ಲೋಕಗಳಲ್ಲಿ ಎಂಟು ಅಕ್ಷರಗಳಿಗೊಮ್ಮೆ ಯತಿ. ಅಂದರೆ, ಅಲ್ಲಿಗೆ ಒಂದು ಪದ ಮುಗಿಯಬೇಕು. ಇಲ್ಲಿ ಮೊದಲ ಪಾದದಲ್ಲಿ ಯತಿಭಂಗವಿದೆ. ಸಮಾಧಿ ಎಂಬ ಪದದಲ್ಲಿ 'ಸಮಾ' ಎಂಬಲ್ಲಿಗೆ ಯತಿ ಇದ್ದು 'ಧಿ' ಎಂಬ ಅಕ್ಷರ ಮುಂದಿನ ಪಾದಕ್ಕೆ ಸೇರುತ್ತಿದೆ. ಇದು ದೋಷವಲ್ಲವೇ? ಎಂಬ ಶಂಕೆಯುಂಟಾಗುವುದು ಸಹಜ. ಆದರೆ ಶುಕವಚನವನ್ನು ಯಥಾವತ್ತಾಗಿ ಅನುವಾದಿಸುತ್ತಿರುವ ಗುಣದ ಮುಂದೆ ಯತಿಭಂಗವು ಅಗಣ್ಯವಾಗುತ್ತದೆ. ಅಲ್ಲದೇ, ಯತಿಭಂಗವು ಕಾವ್ಯದೋಷ ಕಾವ್ಯಶಾಸ್ತ್ರವೆನಿಸಿದ ಈ ಗ್ರಂಥಕ್ಕೆ ಅದು ದೋಷವೆನಿಸುವುದಿಲ್ಲ. ಆದ್ದರಿಂದಲೇ,

ಶ್ರೀಮದಾಚಾರ್ಯರ ಗೀತಾಭಾಷ್ಯದ ಮಂಗಳಶ್ಲೋಕದಲ್ಲಿ 'ಪರಿಪೂರ್ಣಂ ಗುರೂಂಶ್ಚಾನ್ ಗೀತಾರ್ಥಂ ವಕ್ಷ್ಯಾಮಿ ಲೇಶತಃ' ಎಂಬಲ್ಲಿ ಪಾದಾಂತದಲ್ಲಿ ಪದಾಂತ್ಯವಾಗದಿದ್ದರೂ ದೋಷವೆನಿಸಲಿಲ್ಲ.

**ಈ ಶ್ಲೋಕಾರ್ಥವು ಹೇಗೆ ಪ್ರಕೃತೋಪಯೋಗಿಯೆಂಬುದನ್ನು ಮುಂದಿನ ಮೂರು ಶ್ಲೋಕಗಳಲ್ಲಿ ಸ್ವಯಂ ತಿಳಿಸುತ್ತಿದ್ದಾರೆ -**

**ಧ್ಯಾನಮೇವ ಪ್ರಧಾನಾಂಗಂ ತೇನ ಚಾಜ್ಞಾನಧೀಮಲಮ್ ।**
**ಕ್ಷಾಲ್ಯತೇ ಧೌತಧೀರೇವ ದರ್ಶನೇ ಕಾರಣಂ ಕಿಲ ॥ ೫೯ ॥**

**ಧೀಶಬ್ದೋಕ್ತಂ ಮನಸ್ಸಾಕ್ಷಾತ್ಕಾರಸ್ಯ ಕರಣಂ ಕಿಲ ।**
**ಅಂಗಾಂಗಂ ಶ್ರವಣಂ ದೃಷ್ಟಿಕಾರಣಂ ನತರಾಂ ಕಿಲ ॥ ೬೦ ॥**

**ಅರ್ಥ–** ಧ್ಯಾನಂ ಏವ= ಧ್ಯಾನವೇ, ಪ್ರಧಾನಾಂಗಂ= ಭಗವತ್ಸಾಕ್ಷಾತ್ಕಾರವನ್ನು ಪಡೆಯುವುದಕ್ಕಾಗಿ ಮನಸ್ಸಿಗೆ ಪ್ರಧಾನಾಂಗವೆನಿಸಿದೆ. ತೇನ ಚ= ಆ ಧ್ಯಾನದಿಂದಾದರೂ, ಅಜ್ಞಾನ= ಅಜ್ಞಾನವೆಂಬ, ಧೀ= ಮನಸ್ಸಿನ, ಮಲಂ= ದೋಷವು, ಕ್ಷಾಲ್ಯತೇ= ತೊಳೆಯಲ್ಪಡುತ್ತವೆ. ಧೌತ= ಶುದ್ಧವಾದ, ಧೀಃ ಏವ= ಮನಸ್ಸೇ, ದರ್ಶನೇ= ಭಗವದಪರೋಕ್ಷಕ್ಕೆ, ಕಾರಣಂ ಕಿಲ?= ಕಾರಣವಷ್ಟೆ? ಧೀಶಬ್ದ= ಧೀ ಎಂಬ ಶಬ್ದದಿಂದ, ಉಕ್ತಂ= ಹೇಳಲ್ಪಟ್ಟ, ಮನಃ= ಮನಸ್ಸು, ಸಾಕ್ಷಾತ್ಕಾರಸ್ಯ= ಭಗವದಪರೋಕ್ಷಕ್ಕೆ, ಕಾರಣಂ ಕಿಲ= ಸಾಧನವಷ್ಟೆ? ಅಂಗ= ಮನಸ್ಸಿನ ಅಂಗವಾದ ಧ್ಯಾನಕ್ಕೆ, ಅಂಗಂ= ಅಂಗವಾದ್ದರಿಂದ, ಶ್ರವಣಂ= ಶ್ರವಣವು, ದೃಷ್ಟಿ= ಅಪರೋಕ್ಷಜ್ಞಾನಕ್ಕೆ, ಕಾರಣಂ= ಕಾರಣವು, ನ ತರಾಂ ಕಿಲ= ಅಲ್ಲವೇ ಅಲ್ಲವಸ್ಟೇ?

**ಅನುವಾದ–** ಭಗವದಪರೋಕ್ಷದಲ್ಲಿ ಮನಸ್ಸಿಗೆ ಧ್ಯಾನವೇ ಪ್ರಧಾನಾಂಗವಾಗಿದೆ. ಧ್ಯಾನದಿಂದ ಮನಸ್ಸಿನ ಅಜ್ಞಾನವೆಂಬ ಕೊಳೆಯು ತೊಳೆಯಲ್ಪಡುತ್ತದೆ. ನಿರ್ಮಲಮನಸ್ಸೇ ಭಗವದಪರೋಕ್ಷಕ್ಕೆ ಕಾರಣವಲ್ಲವೇ? ಧೀಶಬ್ದದಿಂದ ಹೇಳಲ್ಪಟ್ಟ ಮನಸ್ಸು ಸಾಕ್ಷಾತ್ಕಾರಕ್ಕೆ ಕಾರಣವಷ್ಟೇ? ಶ್ರವಣವು ಮನಸ್ಸಿಗೆ ಅಂಗವಾದ ಧ್ಯಾನಕ್ಕೆ ಅಂಗವಾದ್ದರಿಂದ ಅಂಗಾಂಗವೆನಿಸಿದೆ. ಅಂಗವಾದ ಶ್ರವಣವು ದರ್ಶನಕ್ಕೆ ಅಂಗವೇ ಅಲ್ಲವೆಂದ ಮೇಲೆ ದರ್ಶನಕ್ಕೆ ಕಾರಣ(ಕಾರಣ)ವಾಗುವುದು ಸುತರಾಂ ಸಾಧ್ಯವಿಲ್ಲ.

**ಭಾವವಿಲಾಸಿನೀ–** ಅಸ್ಯ ತಾತ್ಪರ್ಯಮಾಹ – **ಧ್ಯಾನಮಿತಿ** ॥ ಶ್ರವಣಮನನೇ ವಿಹಾಯಾಸ್ಯೈವಾಸಾಧಾರಣ್ಯೇನ ಗ್ರಹಣಾದಿತಿ ಭಾವಃ । ತೇನ ಧ್ಯಾನಾಖ್ಯಸಮಾಧಿನಾ । ಅಜ್ಞಾನಧೀಮಲಂ ಅಜ್ಞಾನಾಖ್ಯಮನೋಮಲಮ್ । ಧೌತಪದಮಹಿಮ್ನಾ ಲಬ್ಧೋಯಮರ್ಥಃ । ತೇನ ಚಾಂಗತ್ವಸ್ಫೋರಣಂ ಕೃತಮಿತಿ ದ್ರಷ್ಟವ್ಯಮ್ । ಧೌತಧೀಃ ಅಜ್ಞಾನಾಖ್ಯಪಂಕಕ್ಷಾಲನೇನ ಧವಲೀಭೂತಧೀಃ । ದರ್ಶನೇ ಆತ್ಮತತ್ತ್ವದರ್ಶನೇ ॥ ೫೯ ॥

ಧೀಶಬ್ದಾರ್ಥಂ ವದನ್ ತೃತೀಯಾಬಲೇನ ಲಬ್ಧಾರ್ಥಮಪ್ಯಾಹ– ಧೀಶಬ್ದೇತಿ ॥ ಅನುಪಶ್ಯಂತೀತಿ ಜ್ಞಾನಕರಣತಯೋಕ್ತತ್ವಾದಿತಿ ಭಾವಃ । ಅತಃ ಪ್ರಾಗುಕ್ತಕಾರಣಪದಮಪಿ ಏವಕಾರ-ಸಾಹಿತ್ಯಾತ್ಕರಣಪರಮ್ । ಅತಿಶಯಿತಕಾರಣಸ್ಯೈವ ಕರಣತ್ವಾತ್ । ಅಂಗಾಂಗಂ ಧ್ಯಾನಾಂಗಸ್ಯ ಮನನಸ್ಯಾಂಗಮ್ । ಸಾಕ್ಷಾದ್ಧ್ಯಾನಾಂಗಮಪಿನೇತ್ಯರ್ಥಃ। ಅತ ಏವ ನತರಾಮಿತ್ಯುಕ್ತಮ್ ॥೬೦॥

**ವಿವರಣೆ–** ಭಾಗವತದ ಶ್ಲೋಕದಲ್ಲಿ 'ಧ್ಯಾನಸಮಾಧಿಧೌತಯಾ ಅನುಪಶ್ಯಂತಿ' 'ಧ್ಯಾನಸಮಾಧಿಯಿಂದ ನಿರ್ಮಲವಾದ ಧೀಯಿಂದ ಭಗವದ್ದರ್ಶನವಾಗುತ್ತದೆ' ಎನ್ನಲಾಗಿದೆ. ಇಲ್ಲಿ 'ಧೀ' ಎಂದರೆ ಮನಸ್ಸು, ಜ್ಞಾನ, ಬುದ್ಧಿ ಎಂಬ ಅರ್ಥದಲ್ಲಿ ಧೀ-ಶಬ್ದವಿರುವಂತೆ ಮನಸ್ಸೆಂಬ ಅರ್ಥದಲ್ಲೂ ಪ್ರಸಿದ್ಧವಿದೆ. 'ಧಿಯಾ ಅನುಪಶ್ಯಂತಿ' ಎಂಬ ಮಾತಿನಿಂದ ಭಗವದ್ದರ್ಶನಕ್ಕೆ ಮನಸ್ಸು ಪ್ರಧಾನಕಾರಣ (ಕಾರಣ)ವೆಂಬ ಪ್ರಮೇಯವು ಸ್ಪಷ್ಟವಾಗಿದೆ.

ಸಮಾಧಿ ಎಂಬುದು ನಿದಿಧ್ಯಾಸನೆಯದ್ದೇ ಒಂದು ಪ್ರಭೇದ. 'ಖಂಡಸ್ಮೃತಿರ್ಧಾರಣಾ ಸ್ಯಾದ್ ಅಖಂಡಾ ಧ್ಯಾನಮುಚ್ಯತೇ । ಅಪ್ರಯತ್ನಾತ್ ಸಮಾಧಿಶ್ಚ' ಎಂಬ ತಂತ್ರಸಾರಸಂಗ್ರಹದ ವಚನದಂತೆ ಅಖಂಡಸ್ಮೃತಿಯು ಪ್ರಯತ್ನಪೂರ್ವಕವಾದಾಗ ಧ್ಯಾನವೆಂದೂ, ಅದೇ ಧ್ಯಾನ ಪ್ರಯತ್ನವೇ ಇಲ್ಲದೇ ಸುಲಲಿತವಾಗಿ ನಡೆದಾಗ ಸಮಾಧಿಯೆಂದೂ ಕರೆಸಿಕೊಳ್ಳುತ್ತದೆ. ಹಾಗಾಗಿ ಸುರೋತ್ತಮತೀರ್ಥರು 'ತೇನ= ಧ್ಯಾನಾಖ್ಯಸಮಾಧಿನಾ' ಎಂದು ವ್ಯಾಖ್ಯಾನಿಸಿದ್ದಾರೆ.

'ಧಾವು ಗತಿಶುದ್ಧ್ಯೋಃ' ಎಂಬ ಧಾತುವಿನಿಂದ ನಿಷ್ಪನ್ನವಾದ ಧೌತವೆಂಬ ಶಬ್ದ ತೊಳೆಯಲ್ಪಟ್ಟ ಅಥವಾ ನಿರ್ಮಲೀಕೃತವಾದ ಎಂಬ ಅರ್ಥದಲ್ಲಿದೆ. ಧ್ಯಾನಾಖ್ಯಸಮಾಧಿಯಿಂದ ನಿರ್ಮಲೀಕೃತ ಮನಸ್ಸು ಎಂದರೆ ಮನಸ್ಸಿನ ಮಲವಾದ ಅಜ್ಞಾನವು ಧ್ಯಾನದಿಂದ ತೊಳೆಯಲ್ಪಟ್ಟಿದೆಯೆಂದರ್ಥ. ಏಕಶ್ರುತಿಯಲ್ಲಿ ಸಮಕಕ್ಷೆಯಲ್ಲಿ ನಿರೂಪಿತವಾದ ಶ್ರವಣ, ಮನನ, ಧ್ಯಾನಗಳಲ್ಲಿ ಶ್ರವಣ-ಮನನಗಳನ್ನು ಬಿಟ್ಟು ಧ್ಯಾನವನ್ನು ಮಾತ್ರ ಶುಕವಾಕ್ಯವು ಪರಿಗ್ರಹಿಸಿರುವುದರಿಂದ ಧ್ಯಾನವು ಪ್ರಧಾನಾಂಗವೆಂಬುದು ಸ್ಪಷ್ಟವಾಗಿದೆ. ಮನನವು ಧ್ಯಾನಕ್ಕೆ ಅಂಗ. ಶ್ರವಣವು ಮನನಾಂಗವಾಗಿದೆ. ಹಾಗಾಗಿ, ಶ್ರವಣವೇ ದರ್ಶನಕ್ಕೆ ಸಾಧನ(ಕರಣ)ವೆಂಬ ಪರರ ಪ್ರಕ್ರಿಯೆಯು ಅತ್ಯಂತ ಅಸಮಂಜಸವಾಗಿದೆ. ಅದನ್ನೇ ರಾಜರು 'ಶ್ರವಣಂ ದೃಷ್ಟಿಕಾರಣಂ ನತರಾಂ ಕಿಲ' ಎಂಬಲ್ಲಿ 'ನತರಾಂ' ಶಬ್ದದಿಂದಲೂ, 'ಕಿಲ' ಎಂಬ ಅವ್ಯಯದಿಂದಲೂ ಅಭಿವ್ಯಕ್ತಿಗೊಳಿಸಿದ್ದಾರೆ.

**ಏವಂ ಚಾರ್ಥದ್ವಯಂ ಸಿದ್ಧಂ ಯದಸ್ಮಾಭಿರುದೀರಿತಮ್ ।**
**ಪರೋದೀರಿತಮಾರ್ಗೌ ಯೌ ಕುಮಾರ್ಗೌ ತೌ ಬಹಿರ್ಗತೌ ॥ ೬೧ ॥**

**ಅರ್ಥ–** ಏವಂ ಚ= ಆದ್ದರಿಂದ, ಅಸ್ಮಾಭಿಃ= ನಮ್ಮಿಂದ, ಯತ್= ಯಾವುದು, ಉದೀರಿತಂ= ಹೇಳಲ್ಪಟ್ಟಿದೆಯೋ, ತಾದೃಶಂ= ಅಂತಹ, ಅರ್ಥದ್ವಯಂ= ಎರಡು

ವಿಷಯಗಳು, ಸಿದ್ಧಂ= ದೃಢೀಕೃತವಾಗಿವೆ. ಯೌ= ಯಾವವು, ಪರ= ಅದ್ವೈತಿಗಳಿಂದ, ಉದೀರಿತ= ಹೇಳಲ್ಪಟ್ಟ, ಮಾರ್ಗೌ= ಎರಡು ಮಾರ್ಗಗಳು (ವಿಷಯಗಳು) ಇವೆಯೋ ತೌ= ಅವೆರಡು, ಕುಮಾರ್ಗೌ= ದುರ್ಮಾರ್ಗಗಳಾದ್ದರಿಂದ, ಬಹಿರ್ಗತೌ= ಶುಕವಾಕ್ಯದಿಂದ ನಿರಾಕರಿಸಲ್ಪಟ್ಟಿವೆ.

**ಅನುವಾದ–** ಏವಂಚ, ಶುಕವಾಕ್ಯವು ಧ್ಯಾನವನ್ನು ಪ್ರಧಾನಾಂಗವೆಂದೂ, ಮನಸ್ಸನ್ನು ಕರಣವೆಂದೂ ಪುಷ್ಟೀಕರಿಸಿರುವುದರಿಂದ ಏನೊಂದು ನಮ್ಮಿಂದ ಹೇಳಲ್ಪಟ್ಟಿದೆಯೋ, ಅಂತಹ ಎರಡು ವಿಷಯಗಳು (ಮನಸ್ಸಿಗೆ ಕರಣತ್ವ ಮತ್ತು ಧ್ಯಾನಕ್ಕೆ ಪ್ರಧಾನಾಂಗತ್ವ) ದೃಢೀಕೃತವಾಗಿವೆ. ಪರವಾದಿಗಳು ಹೇಳಿರುವ ಮಾರ್ಗಗಳೆರಡು (ಶ್ರವಣಕ್ಕೆ ಅಂಗತ್ವ, ಮನನ-ಧ್ಯಾನಗಳಿಗೆ ಉತ್ತರಾಂಗತ್ವ) ಕುಮಾರ್ಗವೆಂಬ ಕಾರಣದಿಂದ ಶುಕವಾಕ್ಯದಿಂದ ನಿರಾಕರಿಸಲ್ಪಟ್ಟಿವೆ.

**ಭಾವವಿಲಾಸಿನೀ–** ಶ್ಲೋಕಸ್ಯ ಪ್ರಕೃತೋಪಯೋಗಂ ದರ್ಶಯತಿ – ಏವಮಿತಿ ॥ ಅರ್ಥದ್ವಯಂ ಧ್ಯಾನಸ್ಯ ಪ್ರಧಾನಾಂಗತ್ವಮ್ । ಮನಸಃ ಕರಣತ್ವರೂಪಮಂಗಿತ್ವಂ ಚ । ಪರೋದೀರಿತಮಾರ್ಗೌ ಶ್ರವಣಸ್ಯೈವಾಂಗಿತ್ವಂ ಮನನನಿದಿಧ್ಯಾಸನಯೋರುತ್ತರಾಂಗತ್ವಮಿತಿ ಮಾರ್ಗೌ । ಮಾರ್ಗ-ಪದೇನೋಕ್ತ್ಯಾ ಪ್ರಾಪ್ತಾಪರಾಧಪರಿಹಾರಾಯ ಕುಮಾರ್ಗಾವಿತ್ಯನುವಾದಃ ॥ ೬೧ ॥

**ವಿವರಣೆ–** ಭಾಗವತದ ಮಾತಿನಿಂದ ಭಗವದ್ದರ್ಶನಕ್ಕೆ ಮನಸ್ಸು (ಧೀ) ಕರಣವೆಂದು ಧ್ಯಾನಾಖ್ಯಸಮಾಧಿಯು ಪ್ರಧಾನಾಂಗವೆಂದೂ ಸ್ಪಷ್ಟವಾಗಿದೆ. ಆದ್ದರಿಂದಲೇ, ಶ್ರವಣವೇ ದರ್ಶನಕ್ಕೆ ಪ್ರಧಾನಸಾಧನ, ಮನನ ಧ್ಯಾನಗಳು ದರ್ಶನವಾದ ನಂತರದ ಉತ್ತರಾಂಗಗಳೆಂಬ ಪರಪಕ್ಷವು ನಿರಾಕೃತವಾಗಿದೆ.

ಪರರು ಹೇಳುವ ಎರಡು ವಿಷಯಗಳು ಅಪ್ರಾಮಾಣಿಕವಾದ್ದರಿಂದ ಅವನ್ನು ಮಾರ್ಗ ಎಂದು ಕರೆಯುವಂತಿಲ್ಲ, ಅದು ಅಮಾರ್ಗ ಅಥವಾ ಕುಮಾರ್ಗ 'ಪರೋದೀರಿತಮಾರ್ಗೌ' ಎಂದರೆ 'ಪರರು ಮಾರ್ಗಗಳೆಂದು ಹೇಳಿರುವ' ಎಂದರ್ಥ. ಹೀಗೆ ಅನುವಾದಿಸುವಾಗ ಪರೋದೀರಿತ ವಿಷಯಗಳೆರಡನ್ನು ಮಾರ್ಗಗಳೆಂದು ಹೇಳಿದ್ದರಿಂದ ಅಪರಾಧವಾಯಿತು. ಅದರ ಕ್ಷಾಲನೆಗೆ 'ಕುಪಥೌ' (ಕೆಟ್ಟ ಮಾರ್ಗಗಳು) ಎಂಬ ಶಬ್ದವನ್ನು ರಾಜರು ಬಳಸಿದ್ದಾರೆ ಎಂಬ ಸ್ವಾರಸ್ಯವನ್ನು ಶ್ರೀಸುರೋತ್ತಮತೀರ್ಥರು ಹೊರಗೆಡಹಿದ್ದಾರೆ. 'ಮಾರ್ಗಪದೇನೋಕ್ತ್ಯಪ್ರಾಪ್ತಾಪರಾಧಪರಿಹಾರಾಯ ಕುಮಾರ್ಗಾವಿತ್ಯನುವಾದಃ ।'

**ಪರೋಕ್ಷಜ್ಞಾನಕರಣಂ ಸಾಕ್ಷಾತ್ಕಾರಾಯ ಕೋ ವದೇತ್ ।**
**ಕೋ ವಾ ಶ್ರವಣಮಾತ್ರೇಣ ತಂ ಪಶ್ಯತಿ ಮಹಾಪ್ರಭುಮ್ ।**
**ಅಜ್ಞೈಶ್ಚ ಶಬ್ದಮಾತ್ರೇಣ ದೃಷ್ಟಶ್ಚೇತ್ ಕಲಹಃ ಕುತಃ ॥ ೬೨ ॥**

**ಅರ್ಥ–** ಪರೋಕ್ಷಜ್ಞಾನ= ಪರೋಕ್ಷಜ್ಞಾನಕ್ಕೆ, ಕರಣಂ= ಕರಣ ವಾದದ್ದನ್ನು, ಸಾಕ್ಷಾತ್ಕಾರಾಯ= ಸಾಕ್ಷಾತ್ಕಾರಕ್ಕೆ ಸಾಧನವೆಂದು, ಕಃ= ಯಾರು, ವದೇತ್= ಹೇಳುತ್ತಾರೆ? ಶ್ರವಣಮಾತ್ರೇಣ= ಕೇವಲ ಶಬ್ದಶ್ರವಣದಿಂದ, ಕಃ ವಾ= ಯಾರು ತಾನೇ, ತಂ= ಆ, ಮಹಾಪ್ರಭುಂ= ಮಹಾಪ್ರಭುವಾದ ನಾರಾಯಣನನ್ನು, ಪಶ್ಯತಿ= ನೋಡುತ್ತಾನೆ? ಸಃ= ಆ ಪರಮಾತ್ಮನು, ಅಜ್ಞೈಃ ಚ= ಅಜ್ಞಾನಿಗಳಿಗೆ, ಶಬ್ದಮಾತ್ರೇಣ= ಶಬ್ದದಿಂದ, ದೃಷ್ಟಃ ಚೇತ್= ಕಾಣಲ್ಪಡುತ್ತಾನೆಂದಾದರೆ, ಕಲಹಃ= ಭಗವಂತನ ಸ್ವರೂಪದ ಬಗ್ಗೆ ಭಿನ್ನಾಭಿಪ್ರಾಯವು, ಕುತಃ= ಏಕೆ ಉಂಟಾಗುತ್ತದೆ?

**ಅನುವಾದ–** ಪರೋಕ್ಷಜ್ಞಾನಕರಣವನ್ನು ಯಾರಾದರೂ ಸಾಕ್ಷಾತ್ಕಾರ(ಪ್ರತ್ಯಕ್ಷ)ಕ್ಕೆ ಕಾರಣವೆಂದು ಹೇಳುತ್ತಾರೇನು? ತತ್ತ್ವಮಸ್ಯಾದಿಶಬ್ದಶ್ರವಣಮಾತ್ರದಿಂದ ಮಹಾ-ಪ್ರಭುವಾದ ಶ್ರೀಮನ್ನಾರಾಯಣನನ್ನು ಯಾರು ತಾನೇ ಸಾಕ್ಷಾತ್ಕರಿಸಿಕೊಳ್ಳುವುದು ಸಾಧ್ಯ? ಅಜ್ಞಾನಿಗಳಿಂದ ಕೇವಲ ಶಬ್ದದಿಂದ ಆ ದೇವನು ಕಾಣಲ್ಪಡುವುದಾದರೆ ಆ ದೇವನ ಬಗ್ಗೆ ಸಗುಣನೋ ನಿರ್ಗುಣನೋ ಮೊದಲಾದ ಕಲಹವಾದರೂ ಏತಕ್ಕೆ?

**ಭಾವವಿಲಾಸಿನೀ–** ಕಲಹಃ ವಾದಿಪ್ರತಿವಾದಿನೋರ್ವಿವಾದಃ। ಏತದೇವಾಭಿಪ್ರೇತ್ಯ ಪ್ರಾಗಸ್ಮಾಭಿಃ ಸಂಗ್ರಹಾಯೋಕ್ತಮ್ ॥ ೬೨ ॥

**ವಿವರಣೆ–** ದೇವರ ಬಗ್ಗೆ ಲೋಕದಲ್ಲಿ ಹತ್ತು ಹಲವು ಬಗೆಯ ವಿವಾದಗಳಿವೆ. ದೇವರೇ ಇಲ್ಲವೆಂದು ಕೆಲವರು, ಇರುವನೆಂದು ಮತ್ತೆ ಕೆಲವರು, ದೇವರಿದ್ದರೂ ಅವನು ನಿರ್ಗುಣನೆಂದು ಕೆಲವರು, ಸಗುಣನೆಂದು ಇನ್ನು ಕೆಲವರು, ಸಗುಣನಾದರೂ ಕೇವಲ ಎಂಟು ಗುಣಗಳುಳ್ಳವನೆಂದು ಕೆಲವರು, ಅನಂತಗುಣಪರಿಪೂರ್ಣನೆಂದು ಹಲವರು. ಹೀಗೆ ದೇವರ ಬಗೆಗೆ ವಿವಾದ ಕಲಹಗಳು ಚರ್ಚೆ-ವಾಕ್ಯಾರ್ಥಗಳು ವಾದಿ-ಪ್ರತಿವಾದಿಗಳಲ್ಲಿ ನಿರಂತರ ನಡೆಯುತ್ತಿದೆ. ತತ್ತ್ವಮಸ್ಯಾದಿ ವಾಕ್ಯಗಳ ಶ್ರವಣದಿಂದಲೇ ದೇವರ ಅಪರೋಕ್ಷವಾಗುತ್ತದೆಯೆಂದಾದರೆ ಲೋಕದ ಅಜ್ಞಜನರಿಗೂ ಭಗವದಪರೋಕ್ಷವಾಗಿದೆ ಎನ್ನಬೇಕಾಗುತ್ತದೆ. ಅಪರೋಕ್ಷಜ್ಞಾನವು ಸರ್ವಸಾಮಾನ್ಯ-ವಾಗಿದ್ದರೆ, ಈ ಮಂದಿಯಲ್ಲಿ ದೇವವಿಷಯಕ ವಿವಾದಗಳಿರಬಾರದಾಗುತ್ತದೆ. ಸ್ಪಷ್ಟವಾಗಿ ಕಂಡ ದೇವರ ಬಗ್ಗೆ ವಿವಾದವಿರುವುದು ಹೇಗೆ ಸಾಧ್ಯ? ವಿವಾದವಂತೂ ಇದೆ. ಹಾಗಾಗಿ ಶಬ್ದಮಾತ್ರದಿಂದ ಅಪರೋಕ್ಷವಾಗುವುದಿಲ್ಲವೆಂದು ದೃಢವಾಗಿ ಒಪ್ಪಬೇಕು.

**ತೈಲಧಾರಾವದಚ್ಛಿನ್ನಗುಣಸಂಧಾನರೂಪಯಾ ।**
**ಮನೋಧಾರಣಯಾ ಯೋಗೀ ಪಶ್ಯೇಚ್ಚೇದುಚಿತಂ ಹಿ ತತ್ ॥ ೬೩ ॥**

ವಿಷಯಗಳು, ಸಿದ್ಧಂ= ದೃಢೀಕೃತವಾಗಿವೆ. ಯೌ= ಯಾವವು, ಪರ= ಅದ್ವೈತಿಗಳಿಂದ, ಉದೀರಿತ= ಹೇಳಲ್ಪಟ್ಟ, ಮಾರ್ಗೌ= ಎರಡು ಮಾರ್ಗಗಳು (ವಿಷಯಗಳು) ಇವೆಯೋ ತೌ= ಅವೆರಡು, ಕುಮಾರ್ಗೌ= ದುರ್ಮಾರ್ಗಗಳಾದ್ದರಿಂದ, ಬಹಿರ್ಗತೌ= ಶುಕವಾಕ್ಯದಿಂದ ನಿರಾಕರಿಸಲ್ಪಟ್ಟಿವೆ.

**ಅನುವಾದ–** ಏವಂಚ, ಶುಕವಾಕ್ಯವು ಧ್ಯಾನವನ್ನು ಪ್ರಧಾನಾಂಗವೆಂದೂ, ಮನಸ್ಸನ್ನು ಕರಣವೆಂದೂ ಪುಷ್ಟೀಕರಿಸಿರುವುದರಿಂದ ಏನೊಂದು ನಮ್ಮಿಂದ ಹೇಳಲ್ಪಟ್ಟಿದೆಯೋ, ಅಂತಹ ಎರಡು ವಿಷಯಗಳು (ಮನಸ್ಸಿಗೆ ಕರಣತ್ವ ಮತ್ತು ಧ್ಯಾನಕ್ಕೆ ಪ್ರಧಾನಾಂಗತ್ವ) ದೃಢೀಕೃತವಾಗಿವೆ. ಪರವಾದಿಗಳು ಹೇಳಿರುವ ಮಾರ್ಗಗಳೆರಡು (ಶ್ರವಣಕ್ಕೆ ಅಂಗತ್ವ, ಮನನ-ಧ್ಯಾನಗಳಿಗೆ ಉತ್ತರಾಂಗತ್ವ) ಕುಮಾರ್ಗವೆಂಬ ಕಾರಣದಿಂದ ಶುಕವಾಕ್ಯದಿಂದ ನಿರಾಕರಿಸಲ್ಪಟ್ಟಿವೆ.

**ಭಾವವಿಲಾಸಿನೀ–** ಶ್ಲೋಕಸ್ಯ ಪ್ರಕೃತೋಪಯೋಗಂ ದರ್ಶಯತಿ – **ಏವಮಿತಿ** ॥ ಅರ್ಥದ್ವಯಂ ಧ್ಯಾನಸ್ಯ ಪ್ರಧಾನಾಂಗತ್ವಮ್ । ಮನಸಃ ಕರಣತ್ವರೂಪಮಂಗಿತ್ವಂ ಚ । ಪರೋದೀರಿತಮಾರ್ಗೌ ಶ್ರವಣಸ್ಯೈವಾಂಗಿತ್ವಂ ಮನನನಿದಿಧ್ಯಾಸನಯೋರುತ್ತರಾಂಗತ್ವಮಿತಿ ಮಾರ್ಗೌ । ಮಾರ್ಗ-ಪದೇನೋಕ್ತ್ಯಾ ಪ್ರಾಪ್ತಾಪರಾಧಪರಿಹಾರಾಯ ಕುಮಾರ್ಗಾವಿತ್ಯನುವಾದಃ ॥ ೬೧ ॥

**ವಿವರಣೆ–** ಭಾಗವತದ ಮಾತಿನಿಂದ ಭಗವದ್ದರ್ಶನಕ್ಕೆ ಮನಸ್ಸು (ಧೀ) ಕರಣವೆಂದು ಧ್ಯಾನಾಖ್ಯಸಮಾಧಿಯು ಪ್ರಧಾನಾಂಗವೆಂದೂ ಸ್ಪಷ್ಟವಾಗಿದೆ. ಆದ್ದರಿಂದಲೇ, ಶ್ರವಣವೇ ದರ್ಶನಕ್ಕೆ ಪ್ರಧಾನಸಾಧನ, ಮನನ ಧ್ಯಾನಗಳು ದರ್ಶನವಾದ ನಂತರದ ಉತ್ತರಾಂಗಗಳೆಂಬ ಪರಪಕ್ಷವು ನಿರಾಕೃತವಾಗಿದೆ.

ಪರರು ಹೇಳುವ ಎರಡು ವಿಷಯಗಳು ಅಪ್ರಾಮಾಣಿಕವಾದ್ದರಿಂದ ಅವನ್ನು ಮಾರ್ಗ ಎಂದು ಕರೆಯುವಂತಿಲ್ಲ. ಅದು ಅಮಾರ್ಗ ಅಥವಾ ಕುಮಾರ್ಗ 'ಪರೋದೀರಿತಮಾರ್ಗೌ' ಎಂದರೆ 'ಪರರು ಮಾರ್ಗಗಳೆಂದು ಹೇಳಿರುವ' ಎಂದರ್ಥ. ಹೀಗೆ ಅನುವಾದಿಸುವಾಗ ಪರೋದೀರಿತ ವಿಷಯಗಳೆರಡನ್ನು ಮಾರ್ಗಗಳೆಂದು ಹೇಳಿದ್ದರಿಂದ ಅಪರಾಧವಾಯಿತು. ಅದರ ಕ್ಷಾಲನೆಗೆ 'ಕುಪಥೌ' (ಕೆಟ್ಟ ಮಾರ್ಗಗಳು) ಎಂಬ ಶಬ್ದವನ್ನು ರಾಜರು ಬಳಸಿದ್ದಾರೆ ಎಂಬ ಸ್ವಾರಸ್ಯವನ್ನು ಶ್ರೀಸುರೋತ್ತಮತೀರ್ಥರು ಹೊರಗೆಡಹಿದ್ದಾರೆ. 'ಮಾರ್ಗಪದೇನೋಕ್ತಪ್ರಾಪ್ತಾಪರಾಧಪರಿಹಾರಾಯ ಕುಮಾರ್ಗಾವಿತ್ಯನುವಾದಃ ।'

**ಪರೋಕ್ಷಜ್ಞಾನಕರಣಂ ಸಾಕ್ಷಾತ್ಕಾರಾಯ ಕೋ ವದೇತ್ ।**
**ಕೋ ವಾ ಶ್ರವಣಮಾತ್ರೇಣ ತಂ ಪಶ್ಯತಿ ಮಹಾಪ್ರಭುಮ್ ।**
**ಅಜ್ಞೈಶ್ಚ ಶಬ್ದಮಾತ್ರೇಣ ದೃಷ್ಟಶ್ಚೇತ್ ಕಲಹಃ ಕುತಃ ॥ ೬೨ ॥**

**ಅರ್ಥ–** ಪರೋಕ್ಷಜ್ಞಾನ= ಪರೋಕ್ಷಜ್ಞಾನಕ್ಕೆ, ಕರಣಂ= ಕರಣ ವಾದದ್ದನ್ನು, ಸಾಕ್ಷಾತ್ಕಾರಾಯ= ಸಾಕ್ಷಾತ್ಕಾರಕ್ಕೆ ಸಾಧನವೆಂದು, ಕಃ= ಯಾರು, ವದೇತ್= ಹೇಳುತ್ತಾರೆ? ಶ್ರವಣಮಾತ್ರೇಣ= ಕೇವಲ ಶಬ್ದಶ್ರವಣದಿಂದ, ಕಃ ವಾ= ಯಾರು ತಾನೇ, ತಂ= ಆ, ಮಹಾಪ್ರಭುಂ= ಮಹಾಪ್ರಭುವಾದ ನಾರಾಯಣನನ್ನು, ಪಶ್ಯತಿ= ನೋಡುತ್ತಾನೆ? ಸಃ= ಆ ಪರಮಾತ್ಮನು, ಅಜ್ಞೈಃ ಚ= ಅಜ್ಞಾನಿಗಳಿಗೆ, ಶಬ್ದಮಾತ್ರೇಣ= ಶಬ್ದದಿಂದ, ದೃಷ್ಟಃ ಚೇತ್= ಕಾಣಲ್ಪಡುತ್ತಾನೆಂದಾದರೆ, ಕಲಹಃ= ಭಗವಂತನ ಸ್ವರೂಪದ ಬಗ್ಗೆ ಭಿನ್ನಾಭಿಪ್ರಾಯವು, ಕುತಃ= ಏಕೆ ಉಂಟಾಗುತ್ತದೆ?

**ಅನುವಾದ–** ಪರೋಕ್ಷಜ್ಞಾನಕರಣವನ್ನು ಯಾರಾದರೂ ಸಾಕ್ಷಾತ್ಕಾರ(ಪ್ರತ್ಯಕ್ಷ)ಕ್ಕೆ ಕಾರಣವೆಂದು ಹೇಳುತ್ತಾರೇನು? ತತ್ತ್ವಮಸ್ಯಾದಿಶಬ್ದಶ್ರವಣಮಾತ್ರದಿಂದ ಮಹಾ-ಪ್ರಭುವಾದ ಶ್ರೀಮನ್ನಾರಾಯಣನನ್ನು ಯಾರು ತಾನೇ ಸಾಕ್ಷಾತ್ಕರಿಸಿಕೊಳ್ಳುವುದು ಸಾಧ್ಯ? ಅಜ್ಞಾನಿಗಳಿಂದ ಕೇವಲ ಶಬ್ದದಿಂದ ಆ ದೇವನು ಕಾಣಲ್ಪಡುವುದಾದರೆ ಆ ದೇವನ ಬಗ್ಗೆ ಸಗುಣನೋ ನಿರ್ಗುಣನೋ ಮೊದಲಾದ ಕಲಹವಾದರೂ ಏತಕ್ಕೆ?

**ಭಾವವಿಲಾಸಿನೀ–** ಕಲಹಃ ವಾದಿಪ್ರತಿವಾದಿನೋರ್ವಿವಾದಃ । ಏತದೇವಾಭಿಪ್ರೇತ್ಯ ಪ್ರಾಗಸ್ಮಾಭಿಃ ಸಂಗ್ರಹಾಯೋಕ್ತಮ್ ॥ ೬೨ ॥

**ವಿವರಣೆ–** ದೇವರ ಬಗ್ಗೆ ಲೋಕದಲ್ಲಿ ಹತ್ತು ಹಲವು ಬಗೆಯ ವಿವಾದಗಳಿವೆ. ದೇವರೇ ಇಲ್ಲವೆಂದು ಕೆಲವರು, ಇರುವನೆಂದು ಮತ್ತೆ ಕೆಲವರು, ದೇವರಿದ್ದರೂ ಅವನು ನಿರ್ಗುಣನೆಂದು ಕೆಲವರು, ಸಗುಣನೆಂದು ಇನ್ನು ಕೆಲವರು, ಸಗುಣನಾದರೂ ಕೇವಲ ಎಂಟು ಗುಣಗಳುಳ್ಳವನೆಂದು ಕೆಲವರು, ಅನಂತಗುಣಪರಿಪೂರ್ಣನೆಂದು ಹಲವರು. ಹೀಗೆ ದೇವರ ಬಗೆಗೆ ವಿವಾದ ಕಲಹಗಳು ಚರ್ಚೆ-ವಾಕ್ಯಾರ್ಥಗಳು ವಾದಿ-ಪ್ರತಿವಾದಿಗಳಲ್ಲಿ ನಿರಂತರ ನಡೆಯುತ್ತಿದೆ. ತತ್ತ್ವಮಸ್ಯಾದಿ ವಾಕ್ಯಗಳ ಶ್ರವಣದಿಂದಲೇ ದೇವರ ಅಪರೋಕ್ಷವಾಗುತ್ತದೆಯೆಂದಾದರೆ ಲೋಕದ ಅಜ್ಞಜನರಿಗೂ ಭಗವದಪರೋಕ್ಷವಾಗಿದೆ ಎನ್ನಬೇಕಾಗುತ್ತದೆ. ಅಪರೋಕ್ಷಜ್ಞಾನವು ಸರ್ವಸಾಮಾನ್ಯ-ವಾಗಿದ್ದರೆ, ಈ ಮಂದಿಯಲ್ಲಿ ದೇವವಿಷಯಕ ವಿವಾದಗಳಿರಬಾರದಾಗುತ್ತದೆ. ಸ್ಪಷ್ಟವಾಗಿ ಕಂಡ ದೇವರ ಬಗ್ಗೆ ವಿವಾದವಿರುವುದು ಹೇಗೆ ಸಾಧ್ಯ? ವಿವಾದವಂತೂ ಇದೆ. ಹಾಗಾಗಿ ಶಬ್ದಮಾತ್ರದಿಂದ ಅಪರೋಕ್ಷವಾಗುವುದಿಲ್ಲವೆಂದು ದೃಢವಾಗಿ ಒಪ್ಪಬೇಕು.

ತೈಲಧಾರಾವದಚ್ಛಿನ್ನಗುಣಸಂಧಾನರೂಪಯಾ ।
ಮನೋಧಾರಣಯಾ ಯೋಗೀ ಪಶ್ಯೇಚ್ಛೇದುಚಿತಂ ಹಿ ತತ್ ॥ ೬೩ ॥

**ಅರ್ಥ–** ಯೋಗೀ= ಯೋಗಿಯು, ತೈಲಧಾರಾವತ್= ಎಣ್ಣೆಯ ಧಾರೆಯಂತೆ, ಅಚ್ಛಿನ್ನ= ನಿರಂತರವಾದ, ಗುಣ= ಭಗವಂತನ ಗುಣಗಳ, ಸಂಧಾನರೂಪಯಾ= ಅನುಸಂಧಾನ ರೂಪವಾದ, ಮನೋಧಾರಣಯಾ= ಧ್ಯಾನದಿಂದ, ತಂ= ಆ ಪರಮಾತ್ಮನನ್ನು, ಪಶ್ಯೇತ್ ಚೇತ್= ಅಪರೋಕ್ಷೀಕರಿಸಿಕೊಳ್ಳುತ್ತಾನಾದರೆ, ತತ್= ಅದು, ಉಚಿತಂ ಹಿ= ದೋಷರಹಿತವಾದ ಪಕ್ಷವಾಗುತ್ತದೆ.

**ಅನುವಾದ– ಯೋಗಿಯು (ಸಮಾಧಿಸಾಧನಸಿದ್ಧಿಯನ್ನು ಪಡೆದವನು) ಎಣ್ಣೆಯ ಧಾರೆಯಂತೆ ನಿರವಚ್ಛಿನ್ನ ಭಗವದ್ಗುಣಾನುಸಂಧಾನರೂಪವಾದ ಮನೋಧಾರಣೆ (ಧ್ಯಾನ)ಯಿಂದ ಆ ಮಹಾಪ್ರಭುವಾದ ಶ್ರೀಹರಿಯನ್ನು ಅಪರೋಕ್ಷಿಸಿಕೊಳ್ಳುತ್ತಾನೆ ಎಂದಾದರೆ ಅದು ದೋಷರಹಿತವಾದ ಸಮುಚಿತಪಕ್ಷವಾಗಿದೆ.**

**ಭಾವವಿಲಾಸಿನೀ–** ಧ್ಯಾನಸ್ವರೂಪಂ ನಿರೂಪಯನ್ಧ್ಯಾನಸ್ಯೈವ ಪ್ರಧಾನಾಂಗತ್ವಮನುಭಾವಯತಿ **–ತೈಲಧಾರಾವದಿತಿ ॥ ೬೩ ॥**

**ವಿವರಣೆ–** ಭಗವದಪರೋಕ್ಷದ ಬಗೆಗೆ ಪರಪಕ್ಷಿಗಳ ಟೊಳ್ಳುತನವನ್ನು ತೋರಿಸಿ ನಮ್ಮ ಪಕ್ಷವು ಯುಕ್ತಿಯುಕ್ತವಾಗಿದೆಯೆಂದು ತೋರಿಸುತ್ತಿದ್ದಾರೆ. ಯೋಗಿಯು ಧ್ಯಾನದ ಸಹಕಾರದಿಂದ ಶುದ್ಧಾಂತಃಕರಣನಾಗಿ ಆ ಶುದ್ಧವಾದ ಮನಸ್ಸಿನಿಂದ ದೇವನನ್ನು ಸಾಕ್ಷಾತ್ಕರಿಸಿಕೊಳ್ಳುತ್ತಾನೆ ಎಂಬುದು ಉಚಿತವಾಗಿದೆ.

ಯೋಗಸಾಧಕನು ಯೋಗೀ. ಯೋಗವು ಯಮ, ನಿಯಮ ಮೊದಲಾದ ಹಲವು ಅಂಗಗಳುಳ್ಳದ್ದು. ಯಮ-ನಿಯಮ-ಆಸನ ಪ್ರಾಣಾಯಾಮಗಳಿಂದ ಮಾನಸ ಕಶ್ಮಲಗಳನ್ನು ಕಳೆದುಕೊಂಡು ಇಂದ್ರಿಯ ಪ್ರತ್ಯಾಹಾರದೊಂದಿಗೆ ಧಾರಣೆ-ಧ್ಯಾನಗಳೆಂಬ ಮೆಟ್ಟಿಲಿನಿಂದ ಪರಿಪಕ್ವಧ್ಯಾನವೆನಿಸಿದ ಸಮಾಧಿಯನ್ನು ಸಿದ್ಧಿಸಿಕೊಂಡವನು ಯೋಗಿ. ಇಂತಹ ಯೋಗಿಯು ಮನಸ್ಸಿನಿಂದ ದೇವನನ್ನು ಅಪರೋಕ್ಷೀಕರಿಸಿಕೊಳ್ಳುತ್ತಾನೆ.

ಭಗವದ್ದತ್ತ ಚಕ್ಷುಸ್ಸಿನಿಂದಲೇ ಭಗವದ್ದರ್ಶನ

**ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ।**
**ಇತಿ ಗೀತಾಸು ಹರಿಣಾ ನಿರಣಾಯಿ ಮತಂ ಮಮ ॥ ೬೪ ॥**

**ಅರ್ಥ–** ಹೇ ಅರ್ಜುನ= ಅರ್ಜುನನೇ, ತೇ= ನಿನಗೆ, ದಿವ್ಯಂ= ಅಲೌಕಿಕವಾದ, ಚಕ್ಷುಃ= ಕಣ್ಣನ್ನು, ದದಾಮಿ= ಕೊಡುತ್ತೇನೆ. ಮೇ= ನನ್ನ, ಐಶ್ವರಂ= ದೈವಿಕವಾದ, ಯೋಗಂ= ಸಾಮರ್ಥ್ಯವನ್ನು, ಪಶ್ಯ= ನೋಡು. ಇತಿ= ಎಂಬುದಾಗಿ, ಗೀತಾಸು= ಭಗವದ್ಗೀತೆಯಲ್ಲಿ, ಹರಿಣಾ= ಭಗವಂತನಿಂದ, ಮಮ= ನನ್ನ, ಮತಂ= ಅಭಿಪ್ರಾಯವು ನಿರಣಾಯಿ= ನಿರ್ಣಯಿಸಲ್ಪಟ್ಟಿದೆ.

**ಅನುವಾದ–** ಅರ್ಜುನನೇ, ನಿನಗೆ ದಿವ್ಯಚಕ್ಷುಸ್ಸನ್ನು ನೀಡುತ್ತೇನೆ. ನನ್ನ ದೈವೀ ಸಾಮರ್ಥ್ಯವನ್ನು (ನಿಜ ಸ್ವರೂಪವನ್ನು) ನೋಡು ಎಂಬ ಗೀತಾವಾಕ್ಯದಲ್ಲಿ ಶ್ರೀಕೃಷ್ಣನಿಂದ ನನ್ನ ಮತವು ನಿರ್ಣಯಿಸಲ್ಪಟ್ಟಿದೆ.

**ಭಾವವಿಲಾಸಿನೀ–** ಧ್ಯಾನಪ್ರಸನ್ನಭಗವದ್ದತ್ತಚಕ್ಷುಷೈವ ಭಗವದ್ದರ್ಶನಮ್ । ನ ಶಬ್ದಶ್ರವಣಮಾತ್ರೇಣೇತ್ಯತ್ರ ಗೀತಾವಾಕ್ಯಮಪಿ ಪ್ರಮಾಣಯತಿ – ದಿವ್ಯಮಿತಿ ॥ ೬೪ ॥

**ವಿವರಣೆ–** ಶ್ರೀಕೃಷ್ಣ ಅರ್ಜುನನಿಗೆ ವಿಶ್ವರೂಪವನ್ನು ತೋರಿಸುತ್ತಾನೆ. ಆಗ ಆತ ಅರ್ಜುನನಿಗೆ ದಿವ್ಯದೃಷ್ಟಿಯನ್ನಿತ್ತಿದ್ದಾನೆ. ಗೀತೆಯಲ್ಲಿ ಕೃಷ್ಣನ ಮಾತು-

'ನತು ಮಾಂ ಶಕ್ಯಸೇ ದ್ರಷ್ಟುಂ ಅನೇನೈವ ಸ್ವಚಕ್ಷುಷಾ ।
ದಿವ್ಯಂ ದದಾಮಿ ತೇ ಚಕ್ಷುಃ ಪಶ್ಯ ಮೇ ಯೋಗಮೈಶ್ವರಮ್ ॥'

'ಈ ನಿನ್ನ ಚರ್ಮ ಚಕ್ಷುಸ್ಸಿನಿಂದ ನನ್ನನ್ನು ನೋಡಲಾರೆ. ನಿನಗೆ ಅಲೌಕಿಕ ಕಣ್ಣನ್ನಿತ್ತಿದ್ದೇನೆ. ಆ ದಿವ್ಯದೃಷ್ಟಿಯಿಂದ ನನ್ನ ಸರ್ವೇಶ್ವರತ್ವಸಾಮರ್ಥ್ಯವನ್ನು ಕಾಣು' ಈ ಭಗವದ್ವಾಣಿಯಿಂದ ಪ್ರಸನ್ನನಾದ ಭಗವಂತನಿತ್ತ ಶಕ್ತಿಯಿಂದ ಮನಸ್ಸು (ಚಕ್ಷುಃ) ಭಗವದ್ದರ್ಶನಸಮರ್ಥವಾಗುತ್ತದೆ ಎಂಬ ನಮ್ಮ ಮತವು ಸಮರ್ಥಿಸಲ್ಪಟ್ಟಿದೆ.

ಅದು ಹೇಗೆ ಎಂಬುದನ್ನು ಮುಂದಿನ ಎರಡು ಶ್ಲೋಕಗಳಲ್ಲಿ ರಾಜರು ಗೀತಾಶ್ಲೋಕಕ್ಕೆ ವ್ಯಾಖ್ಯಾನಿಸುತ್ತಾ ತಿಳಿಸುತ್ತಾರೆ–

**ಅವಿದ್ಯಾಂ ಕಿಲ ವಿದ್ರಾವ್ಯ ದಿವ್ಯಂ ಚಕ್ಷುರ್ದೃಶೇ ದಿಶೇತ್ ।**
**ಸಾಕ್ಷಾದ್ಧೀಕರಣಾದೇವ ಸಾಕ್ಷಾದ್ಧೀಃ ಸಂಸ್ಕೃತಾದಪಿ ।**
**ನಾನ್ಯಸ್ಮಾದ್ ಯದ್ ದದೌ ದಿವ್ಯಂ ಚಕ್ಷುರೇವ ನಿರೀಕ್ಷಿತುಮ್ ॥ ೬೫ ॥**

**ಅರ್ಥ–** ಅವಿದ್ಯಾಂ= ಅಜ್ಞಾನವನ್ನು, ವಿದ್ರಾವ್ಯ ಕಿಲ= ಪರಿಹರಿಸಿದ ಬಳಿಕವೇ, ದೃಶೇ= ದರ್ಶನಕ್ಕಾಗಿ, ದಿವ್ಯಂ= ಅಲೌಕಿಕವಾದ, ಚಕ್ಷುಃ= ಕಣ್ಣನ್ನು, ದಿಶೇತ್= ಕೊಡುತ್ತಾನೆ. ಸಾಕ್ಷಾದ್ಧೀ= ಪ್ರತ್ಯಕ್ಷಕ್ಕೆ ಕರಣಾತ್ ಏವ= ಕರಣವಾದ ಇಂದ್ರಿಯದಿಂದಲೇ, ಸಾಕ್ಷಾಧೀಃ= ಭಗವಂತನ ಸಾಕ್ಷಾತ್ಕಾರವು, ಭವತಿ= ಆಗುತ್ತದೆ. ಸಂಸ್ಕೃತಾತ್ ಅಪಿ= ಸಂಸ್ಕಾರಗೊಂಡರೂ, ಅನ್ಯಸ್ಮಾತ್= ಶಬ್ದೇತರ ಸಾಧನಗಳಿಂದ, ನ ಭವತಿ= ಸಾಕ್ಷಾತ್ಕಾರವು ಆಗುವುದಿಲ್ಲ ಯತ್= ಏಕೆಂದರೆ, ಹರಿಃ= ಶ್ರೀಹರಿಯು, ನಿರೀಕ್ಷಿತುಂ= ತನ್ನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳಲು, ದಿವ್ಯಂ= ಅಲೌಕಿಕವಾದ, ಚಕ್ಷುಃ ಏವ= ಕಣ್ಣನ್ನೇ, ದದೌ= ಅರ್ಜುನನಿಗೆ ಕೊಟ್ಟಿದ್ದಾನೆ.

**ಅನುವಾದ–** ಅವಿದ್ಯೆಯನ್ನು ಬಡಿದೋಡಿಸಿಯಲ್ಲವೇ ದರ್ಶನಕ್ಕಾಗಿ ದಿವ್ಯಚಕ್ಷುಸ್ಸನ್ನು ಕೊಡುವುದು ಸಾಧ್ಯ. ಸಾಕ್ಷಾತ್ಕಾರಕರಣ (ಪ್ರತ್ಯಕ್ಷಕರಣವಾದ ಇಂದ್ರಿಯ) ದಿಂದಲೇ ಸಾಕ್ಷಾತ್ಕಾರ, ಸಂಸ್ಕಾರಗೊಂಡರೂ ಅನಿಂದ್ರಿಯದಿಂದ (ಶಬ್ದದಿಂದ) ಸಾಕ್ಷಾತ್ಕಾರ

ಉಂಟಾಗದು. ಆ ಕಾರಣದಿಂದಲೇ ತನ್ನ ದರ್ಶನಕ್ಕಾಗಿ ಶ್ರೀಕೃಷ್ಣನು ದಿವ್ಯ ಚಕ್ಷುಸ್ಸನ್ನೇ ಕೊಟ್ಟಿದ್ದಾನೆ.

**ಭಾವವಿಲಾಸಿನೀ–** ಅಸ್ಯ ತಾತ್ಪರ್ಯಮಾಹ – **ಅವಿದ್ಯಾಮಿತಿ** ॥ ಪ್ರಾಗ್ದರ್ಶನಾಭಾವಸಂಪಾದಕಪ್ರತಿಬಂಧಕನಿರಾಸಸ್ಯಾವಶ್ಯಕತ್ವಾತ್ । ಅವಿದ್ಯಾಂ ವಿದ್ರಾವ್ಯೇತ್ಯುಕ್ತಮ್ । ಯತ್‌ಯಸ್ಮಾತ್ । ನಿರೀಕ್ಷಿತುಂ ಸ್ವವಿಶ್ವರೂಪಂ ದ್ರಷ್ಟುಂ ದಿವ್ಯಂ ಚಕ್ಷುರೇವ ದದೌ । ತಸ್ಮಾತ್ಸಂಸ್ಕೃತಾದಪಿ ಭಗವದನುಗ್ರಹಾಖ್ಯಸಂಸ್ಕಾರಸಹಿತಾದಪಿ ಸಾಕ್ಷಾದ್ಧೀಕರಣಾದೇವ ಸಾಕ್ಷಾದ್ಧೀಸ್ಸಾಕ್ಷಾತ್ಕಾರಃ । ನತ್ವನ್ಯಸ್ಮಾಲ್ಲಿಂಗಾಚ್ಛಬ್ದಾದ್ವೇತಿ ಸಿದ್ಧಮ್ । ಅನುಗೃಹ್ಣನ್ನಪಿ ಭಗವಾನ್ನ ಲೋಕಮರ್ಯಾದಾಮುಲ್ಲಂಘಿತವಾನ್ । ತ್ವಂ ತು ನಿರ್ಮರ್ಯಾದಸ್ತಾಮಪ್ಯುಲ್ಲಂಘಯಸಿ । ಅತಸ್ತ್ವಂ ನಾಲೌಕಿಕೋ ನಾಪಿ ಲೌಕಿಕ ಇತಿ ಭಾವಃ ॥ ೬೫ ॥

**ವಿವರಣೆ–** ದಿವ್ಯ ಚಕ್ಷುಸ್ಸನ್ನು ನೀಡುವುದೆಂದರೇನು? ಹೊಸ ಕಣ್ಣನ್ನು ದೇಹಕ್ಕೆ ಅಂಟಿಸುವುದಲ್ಲ, ಅವಿದ್ಯೆಯನ್ನು ಕಳೆದು ಮನಸ್ಸಿಗೆ ದೇವದರ್ಶನಶಕ್ತಿಯನ್ನು ತುಂಬುವುದು.

ಧ್ಯಾನಪಕ್ವವಾದ ಮನಸ್ಸು ಭಗವದ್ದರ್ಶನಕ್ಕೆ ಅರ್ಹವಾಗುತ್ತದೆ. ಆದರೆ, ಅಜ್ಞಾನವೆಂಬ ಪ್ರತಿಬಂಧಕವು ದರ್ಶನಕ್ಕೆ ತಡೆಯಾಗಿರುತ್ತದೆ. ಪ್ರಸನ್ನನಾದ ದೇವನು ಈ ಅಜ್ಞಾನವನ್ನು ಕಳೆಯುತ್ತಾನೆ. ಈಗ ಮನಸ್ಸು ದಿವ್ಯಚಕ್ಷುಸ್ಸೆನಿಸುತ್ತದೆ.

'ಸಾಕ್ಷಾದ್ಧೀಕರಣಾದೇವ' ಎಂಬಲ್ಲಿ ಏವಕಾರವು ಶಬ್ದದಿಂದ ಸಾಕ್ಷಾತ್ಕಾರವು ಅಸಾಧ್ಯವೆಂಬುದನ್ನು ತಿಳಿಸುತ್ತಿದೆ.

ಕೃಷ್ಣವಚನದಿಂದ ಸ್ವಸಿದ್ಧಾಂತವು ಪೂರ್ತಿಯಾಗಿ ಸಮರ್ಥಿತವಾಗಬೇಕಾದರೆ ಕೃಷ್ಣನು ದಿವ್ಯಚಕ್ಷುಸ್ಸನ್ನು ನೀಡುವುದರ ಬದಲು ಮನಸ್ಸನ್ನು ನೀಡಬೇಕಿತ್ತು. ಮನಸ್ಸಲ್ಲವೇ ದರ್ಶನದಲ್ಲಿ ಅಂಗಿ? ಹಾಗಾಗಿ, ಇಲ್ಲಿ ಚಕ್ಷುಸ್ಸೆಂದರೆ ಮನಸ್ಸು ಎಂಬುದನ್ನು ಮುಂದಿನ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಿದ್ದಾರೆ -

> ಚಷ್ಟೇಽನೇನೇತಿ ತಚ್ಚಕ್ಷುರ್ಮನೋ ವಾ ಬಾಹ್ಯಮೇವ ವಾ ।
> ಚಕ್ಷುಸ್ಸಹಾಯೇನ ಮನೋ ಯತಃ ಪಶ್ಯತಿ ತಂ ಬಹಿಃ ॥ ೬೬ ॥

**ಅರ್ಥ–** ಅನೇನ= ಇದರಿಂದ, ಚಷ್ಟೇ= ನೋಡುತ್ತಾನೆ, ಇತಿ= ಎಂಬ ಕಾರಣದಿಂದ, ತತ್= ಆ ಚಕ್ಷುಃ= ಚಕ್ಷುರಿಂದ್ರಿಯವು, ಮನಃ ವಾ= ಮನಸ್ಸಾಗಲೀ, ಬಾಹ್ಯಂ ಏವ ವಾ= ಬಾಹ್ಯೇಂದ್ರಿಯವಾಗಲೀ, ಭವಿತುಂ= ಆಗಲು, ಅರ್ಹತಿ= ಯೋಗ್ಯವಾಗುತ್ತದೆ, ಯತಃ= ಏಕೆಂದರೆ,ಮನಃ= ಮನಸ್ಸು, ಚಕ್ಷುಃಸಹಾಯೇನ= ಕಣ್ಣಿನ ಸಹಾಯದಿಂದ, ತಂ= ಆ ದೇವನನ್ನು, ಬಹಿಃ= ಹೊರಗಡೆ, ಪಶ್ಯತಿ= ನೋಡುತ್ತದೆ.

**ಅನುವಾದ–** 'ಚಷ್ಟೇ ಅನೇನೇತಿ ಚಕ್ಷುಃ' 'ಕಾಣ್ಕೆಗೆ ಕರಣವಾದದ್ದು' ಎಂಬ ವ್ಯುತ್ಪತ್ತಿಯಿಂದ ಆ ಚಕ್ಷುಸ್ಸೆಂದರೆ ಮನಸ್ಸೆಂಬ ಒಳಗಣ್ಣೂ ಆಗಬಹುದು ಅಥವಾ

**ಬಾಹ್ಯಕರಣವಾದ ಹೊರಗಣ್ಣೂ ಆಗಬಹುದು. ಏಕೆಂದರೆ, ಹೊರಗಣ್ಣಿನ ಸಹಾಯದಿಂದ ಮನಸ್ಸು ದೇವನನ್ನು ಹೊರಗಿನಿಂದ ಪ್ರತ್ಯಕ್ಷವಾಗಿ ಕಾಣುತ್ತದೆ.**

**ಭಾವವಿಲಾಸಿನೀ–** ತರ್ಹಿ ಚಕ್ಷುರಿತಿಕಥನಾನ್ಮನಸಃ ಕಥಂ ಕರಣತ್ವಮಿತ್ಯತ ಆಹ – **ಚಷ್ಟ ಇತಿ** ॥ ಇತಿ ವ್ಯುತ್ಪತ್ತ್ಯಾ ತಚ್ಚಕ್ಷುಃ ಗೀತೋಕ್ತಂ ಚಕ್ಷುಃ । ಬಹಿರ್ದರ್ಶನೇಽಪಿ ಮನಸ ಏವ ಪ್ರಾಧಾನ್ಯಮಿತ್ಯಾಹ – **ಚಕ್ಷುಃಸಹಾಯೇನೇತಿ** ॥ ತತಃ ಪ್ರಾಧಾನ್ಯೇನ ಮನ ಏವ ತತ್ರಾಪಿ ಚಕ್ಷುಃ । ಅನ್ಯಥಾ ಭಾಗವತಗೀತಾ- ವಾಕ್ಯಯೋರ್ವಿರೋಧಾತ್ । ಅಂತರ್ವಾ ಬಹಿರ್ವಾ ತಯೋ-ರುಭಯೋರೇವ ದರ್ಶನಹೇತುತ್ವಸ್ಯ ಚಕ್ಷುಷಾ ಪಶ್ಯತಿ ಮನಸಾ ಪಶ್ಯತಿ ಸುಖಂ ಪಶ್ಯತೀತಿ ಲೋಕವೇದಸಂಮತತ್ವಾತ್ ಸ್ಮೃತಿದ್ವಯೇನಾಪಿ ಮನಶ್ಚಕ್ಷುಷೀ ಏವಗೃಹೀತೇ ನ ಶ್ರಾವಣ-ಸ್ಪರ್ಶನಾದಿಸಾಕ್ಷಾತ್ಕಾರಾಂತರಕರಣಾನಿ । ಕಿಮು ವಾಚ್ಯಂ ತದಾ ಪರೋಕ್ಷಜ್ಞಾನಕರಣಲಿಂಗ-ಶಬ್ದಾದೀನಾಂ ದರ್ಶನಹೇತುತಯಾಽಸಂಗ್ರಾಹ್ಯತ್ವಮಿತಿ ಭಾವಃ ॥ ೬೬ ॥

**ವಿವರಣೆ–** 'ಚಕ್ಷುಸ್' ಎಂಬ ಶಬ್ದವು ಹೊರಗಣ್ಣನ್ನೂ ಒಳಗಣ್ಣನ್ನೂ ಹೇಳುವ ಶಬ್ದವಾಗಿದೆ. ಏಕೆಂದರೆ, ಕಾಣುವಂಥದ್ದು ಎಂಬುದು ಆ ಶಬ್ದದ ಅರ್ಥ. 'ಚಷ್ಟೇ ಅನೇನ ಇತಿ ಚಕ್ಷುಃ' ಎಂಬ ವ್ಯುತ್ಪತ್ತಿಯಂತೆ 'ಚಕ್ಷಿಙ್ ವ್ಯಕ್ತಾಯಾಂ ವಾಚಿ' ಎಂಬ ಧಾತುವಿಗೆ ಕರಣಾರ್ಥದಲ್ಲಿ 'ಉಸ್' ಎಂಬ ಪ್ರತ್ಯಯ ಬಂದಿದೆ. 'ಧಾತೂನಾಂ ಅನೇಕಾರ್ಥತ್ವಮ್' ಎಂಬ ಭಾಷ್ಯವಚನದಂತೆ 'ಚಕ್ಷಿಙ್' ಧಾತುವಿಗೆ ದರ್ಶನವೆಂಬುದು ಅರ್ಥ. ಹೀಗಾಗಿ ಚಕ್ಷುಸ್ ಎಂದರೆ ದರ್ಶನಕ್ಕೆ (ಪ್ರತ್ಯಕ್ಷ ಜ್ಞಾನಕ್ಕೆ) ಕರಣ ಎಂದು ಅರ್ಥವಾಯಿತು.

ದರ್ಶನಕ್ಕೆ ಕರಣವಾದದ್ದು ಕಣ್ಣೂ ಹೌದು, ಮನಸ್ಸೂ ಹೌದು. ಹಾಗಾಗಿಯೇ ಮನಸ್ಸಿಗೆ ಒಳಗಣ್ಣು ಎಂದು ಹೆಸರು. ಮನಸ್ಸು ಒಳಗಿನ ಸುಖ-ದುಃಖಗಳನ್ನು ಮಾತ್ರ ಕಾಣಿಸುವುದಲ್ಲ, ಹೊರಗಿನ ವಸ್ತುಗಳನ್ನು ಕಣ್ಣಿನ ಸಹಕಾರದಿಂದ ಮನಸ್ಸೇ ಕಾಣಿಸುತ್ತದೆ. ಮನಸ್ಸಿನ ಸಂಬಂಧವಿಲ್ಲದೆ ಹೊರ ವಸ್ತುಗಳು ಕಣ್ಣಿಗೆ ಕಾಣಿಸಲಾರವು. ಹಾಗಾಗಿ, ಹೊರಗಣ್ಣು ಮಾತ್ರವಲ್ಲದೆ ಒಳಗಣ್ಣಾದ ಮನಸ್ಸು 'ಚಕ್ಷುಸ್' ಎನಿಸಿಕೊಂಡಿದೆ.

ಅಲ್ಲದೆ ಅರ್ಜುನನು ಹೊರಗಣ್ಣಿನ ಸಹಕಾರದಿಂದ ಶುದ್ಧವಾದ ದಿವ್ಯಮನಸ್ಸಿನಿಂದ ವಿಶ್ವರೂಪವನ್ನು ಕಂಡನು. ಹಾಗಾಗಿ ಈ ಎರಡು ಕರಣಗಳೂ ಚಕ್ಷುಸ್ಸುಗಳೇ.

**ಕಿಂಚ ದಕ್ಷಶಿರಶ್ಛಿಂದನ್ ನ ಚ್ಛೇದೇ ಕಾರಣಂ ಪುರಾ ।**
**ಅಪಶ್ಯತ್ ಕಿಲ ತದ್ದೃಷ್ಟ್ಯೈ ದಧ್ಯೌ ಪಶುಪತಿಶ್ಶಿರಮ್ ॥ ೬೭ ॥**

**ಅರ್ಥ–** ಪಶುಪತಿಃ=ಪಶುಪತಿ ಎಂದು ಖ್ಯಾತರಾದ ಮಹಾರುದ್ರದೇವರು, ಪುರಾ= ಹಿಂದೆ ದಕ್ಷಯಜ್ಞದಲ್ಲಿ, ದಕ್ಷಶಿರಃ ಛಿಂದನ್=ದಕ್ಷ ಪ್ರಜಾಪತಿಯ ತಲೆಯನ್ನು ಕತ್ತರಿಸುವ ವ್ಯಾಪಾರವನ್ನು ಮಾಡುವವರಾಗಿ, ಛೇದೇ=ಅವನ ತಲೆಯನ್ನು ಕತ್ತರಿಸುವ,

ಕಾರಣಂ=ವಿಶೇಷ ಉಪಾಯವನ್ನು, ನ ಅಪಶ್ಯತ್=ಕಾಣಲಿಲ್ಲ. ಕಿಲ=ಇದು ಪ್ರಸಿದ್ಧ. ತದ್ದೃಷ್ಟ್ಯೈ= ಮಹಾರುದ್ರ ದೇವರು, ವಿಶೇಷ ಉಪಾಯವನ್ನು ತಿಳಿಯಲು ಚಿರಂ=ಬಹುಕಾಲ, ದಧ್ಯೌ=ಧ್ಯಾನ ಮಾಡಿದರು.

**ಅನುವಾದ–** ಪರಮಾತ್ಮನ ಸಾಕ್ಷಾತ್ಕಾರಕ್ಕೆ ಶ್ರವಣಮನನಗಳು ಪ್ರಧಾನ ಸಾಧನಗಳಲ್ಲ. ಧ್ಯಾನವೇ ಪ್ರಧಾನ ಸಾಧನ. ಯಾವುದೇ ಅತೀಂದ್ರಿಯವಸ್ತುವಿನ ಸಾಕ್ಷಾತ್ಕಾರಕ್ಕೆ ಧ್ಯಾನವೇ ಪ್ರಧಾನ ಸಾಧನ ಎಂಬ ವಿಷಯವನ್ನು ಅನ್ವಯ - ವ್ಯತಿರೇಕ ವ್ಯಾಪ್ತಿಯನ್ನು ತೋರಿಸಿ ಸ್ಪಷ್ಟಪಡಿಸುತ್ತಿದ್ದಾರೆ. ಮಹಾರುದ್ರದೇವರು ಪಶುಪತಿ ಎಂದು ಖ್ಯಾತರಾಗಿದ್ದಾರೆ. ಇವರು ತನ್ನ ಪತ್ನಿಯಾದ ಸತೀದೇವಿಯು, ದಕ್ಷನಿಂದ ಅವಮಾನಿತಳಾಗಿ ಯೋಗಾಗ್ನಿಯಲ್ಲಿ ದೇಹ ತ್ಯಾಗ ಮಾಡಿದ ವಿಷಯವನ್ನು ತಿಳಿದು ಪ್ರತೀಕಾರ ಮಾಡಲು ವೀರಭದ್ರನನ್ನು ಕಳುಹಿಸಿದರು. ವೀರಭದ್ರನು ದಕ್ಷ ಪ್ರಜಾಪತಿಯನ್ನು ನಿಗ್ರಹಿಸಲು ಅಸಮರ್ಥನಾದಾಗ ಸ್ವತಃ ತಾವೇ ದಕ್ಷನನ್ನು ನಿಗ್ರಹಿಸಲು ಕೈಲಾಸದಿಂದ ಆಗಮಿಸಿದರು. ದಕ್ಷನ ತಲೆಯನ್ನು ಶಸ್ತ್ರದಿಂದ ಕತ್ತರಿಸಲು ಪ್ರಯತ್ನಿಸಿದರು. ಆದರೆ ರುದ್ರದೇವರ ಪ್ರಯತ್ನ ಫಲಕಾರಿಯಾಗಲಿಲ್ಲ. ರುದ್ರ ದೇವರಿಗೆ ದಕ್ಷನ ತಲೆಯನ್ನು ಕತ್ತರಿಸುವ ವಿಶೇಷ ಉಪಾಯವು ಹೊಳೆಯಲಿಲ್ಲ. ಆಗ ರುದ್ರದೇವರು ದಕ್ಷನ ತಲೆಯನ್ನು ಕತ್ತರಿಸುವ ವಿಶೇಷ ಉಪಾಯವನ್ನು ತಿಳಿಯಲು ಬಹುಕಾಲ ಧ್ಯಾನ ಮಗ್ನರಾದರು. ಆಗ ರುದ್ರದೇವರಿಗೆ ದಕ್ಷನ ತಲೆಯನ್ನು ಕತ್ತರಿಸುವ ವಿಶೇಷ ಉಪಾಯ ಹೊಳೆಯಿತು.

**ವಿವರಣೆ–** ಪರಮಾತ್ಮನ ಸಾಕ್ಷಾತ್ಕಾರಕ್ಕೆ ಧ್ಯಾನವೇ ಪ್ರಧಾನ ಸಾಧನ, ಶ್ರವಣವಲ್ಲ ಎಂಬ ವಿಷಯದಲ್ಲಿ ಭಾಗವತದ ಇನ್ನೊಂದು ಕಥೆಯ ಸಮ್ಮತಿಯನ್ನೂ ಪ್ರಮಾಣವಾಗಿ ಕಿಂಚ ಎಂಬ ಶ್ಲೋಕದಲ್ಲಿ ಉದಾಹರಿಸುತ್ತಿದ್ದಾರೆ. ಮಂತ್ರ ಸಹಿತವಾದ ಶಸ್ತ್ರಗಳಿಂದಲೂ ದಕ್ಷನ ತೊಗಲೂ ಕೂಡ ಹರಿಯದಿದ್ದುದನ್ನು ಕಂಡು ವೀರಭದ್ರನಿಗೆ ಆಶ್ಚರ್ಯವಾಯಿತು. ಅವನು ತನ್ನ ಮೂಲರೂಪವನ್ನು ಧ್ಯಾನಿಸಿದ. ಆಗ ಮೂಲರೂಪಿ ಶಿವನೇ ಕೈಲಾಸದಿಂದ ಬಂದು ಪ್ರಯತ್ನ ಮಾಡಿ, ವಿಫಲನಾಗಿ ಇದಕ್ಕೇನು ಉಪಾಯ ಎಂದು ಬಹುಕಾಲ ಧ್ಯಾನ ಮಾಡಿದ ಎಂಬ ಭಾಗವತ ವಾಕ್ಯದ ತಾತ್ಪರ್ಯವನ್ನು ಈ ಶ್ಲೋಕ ತಿಳಿಸುತ್ತಿದೆ.

ಇತಿ ಭಾಗವತೇ ಧ್ಯಾನಾತ್ ಪೂರ್ವಂ ದೃಷ್ಟೇರಭಾವತಃ ।
ತದಭಾವೇಽಭಾವರೂಪಂ ವ್ಯತಿರೇಕಮದರ್ಶಯತ್ ॥ ೬೮ ॥

**ಅರ್ಥ–** ಇತಿ ಭಾಗವತೇ=ಹೀಗೆ ಭಾಗವತದಲ್ಲಿ ಧ್ಯಾನಾತ್=ಧ್ಯಾನಕ್ಕಿಂತ, ಪೂರ್ವಂ= ಮೊದಲು, ದೃಷ್ಟೇಃ ಅಭಾವತಃ=ದರ್ಶನವು ಇಲ್ಲದಿರುವುದರಿಂದ, ತದಭಾವೇ= ಕಾರಣ ಇಲ್ಲದಿದ್ದರೆ, ಅಭಾವರೂಪಂ=ಕಾರ್ಯವು ಇಲ್ಲ ಎಂಬ ವ್ಯತಿರೇಕಂ=ವ್ಯತಿರೇಕ ವ್ಯಾಪ್ತಿಯನ್ನು ಅದರ್ಶಯತ್= ಭಾಗವತಕಾರರು ತೋರಿಸಿದ್ದಾರೆ.

**ಅನುವಾದ–** ಹಿಂದೆ ಹೇಳಿದ ಕಥೆಯನ್ನು ವಿಮರ್ಶಿಸಿದಾಗ, ರುದ್ರದೇವರಿಗೆ ಧ್ಯಾನಕ್ಕಿಂತ ಮೊದಲು ದಕ್ಷನನ್ನು ಸಂಹರಿಸುವ ವಿಶೇಷ ಉಪಾಯ ತಿಳಿದಿರಲಿಲ್ಲ ಎಂದು ತಿಳಿದುಬರುತ್ತದೆ. ಇದರಿಂದ ವ್ಯತಿರೇಕ ವ್ಯಾಪ್ತಿಯನ್ನು ತೋರಿಸಿದಂತಾಯಿತು. 'ತದಭಾವೇ ತದಭಾವಃ' ಎಂಬುದು ವ್ಯತಿರೇಕ ವ್ಯಾಪ್ತಿ. ಕಾರಣ ಇಲ್ಲದಿದ್ದರೆ ಕಾರ್ಯ ಇಲ್ಲ ಎಂದು ತಾತ್ಪರ್ಯ. ಧ್ಯಾನವು ಕಾರಣ, ವಿಶೇಷ ಉಪಾಯಜ್ಞಾನ ಕಾರ್ಯ. ಧ್ಯಾನ ಎಂಬ ಕಾರಣವಿಲ್ಲದಿದ್ದಾಗ ವಿಶೇಷ ಉಪಾಯದ ಜ್ಞಾನ ಎಂಬ ಕಾರ್ಯವೂ ಇಲ್ಲ ಎಂಬ ವ್ಯತಿರೇಕ ವ್ಯಾಪ್ತಿಯನ್ನು ಹೇಳಿದಂತಾಯಿತು.

**ಭಾವವಿಲಾಸಿನೀ–** ಧ್ಯಾನಸ್ಯೈವ ದರ್ಶನೇ ಪ್ರಧಾನಾಂಗತ್ವಂ ನ ಶ್ರವಣಸ್ಯೇತ್ಯತ್ರ ಭಾಗವತ-ಕಥಾಂತರಸಮ್ಮತಿಮಪಿ ಪ್ರಮಾಣಯತಿ – **ಕಿಂಚೇತಿ** ॥ ವ್ಯತಿರೇಕಂ ವ್ಯತಿರೇಕವ್ಯಾಪ್ತಿಮ್ । ''ಶಸ್ತ್ರೈರಸ್ತ್ರಾನ್ವಿತೈರೇನಮನಿರ್ಭಿನ್ನತ್ವಂ ಚ ಹರಃ । ವಿಸ್ಮಯಂ ಪರಮಾಪನ್ನೋ ದಧ್ಯೌ ಪಶುಪತಿ-ಶ್ಚಿರಮ್'' ಇತಿ ಭಾಗವತವಾಕ್ಯಸ್ಯ ತಾತ್ಪರ್ಯಕಥನಮಿದಮ್ ॥ ೬೭,೬೮ ॥

ದೃಷ್ಟ್ವಾ ಸಂಜ್ಞಪನೇ ಯೋಗಮಿತಿ ಧ್ಯಾನೋತ್ತರಕ್ಷಣೇ ।
ದೃಷ್ಟಿಂ ಬ್ರವೀತಿ ಯತ್ ತೇನ ತತ್ಸತ್ತ್ವೇ ಸತ್ತ್ವರೂಪಿಣಮ್ ॥
ಅನ್ವಮಂಸ್ತಾನ್ವಯಂ ಧ್ಯಾನಾದದೃಶ್ಯಾರ್ಥಸ್ಯ ದರ್ಶನೇ ॥ ೬೯ ॥

**ಅರ್ಥ–** ಯತ್=ಯಾವ ಕಾರಣದಿಂದ, ಸಂಜ್ಞಪನೇ=ಯಾಗೀಯ ಪಶು ಹಿಂಸೆಯಲ್ಲಿ ಯೋಗಂ=ಉಪಾಯವನ್ನು ದೃಷ್ಟ್ವಾ=ತಿಳಿದು ಇತಿ=ಹೀಗೆ, ಧ್ಯಾನೋತ್ತರಕ್ಷಣೇ ಧ್ಯಾನಾನಂತರದಲ್ಲಿ ದೃಷ್ಟಿಂ=ದರ್ಶನವನ್ನು (ವಿಶೇಷ ಉಪಾಯದ ತಿಳಿಯುವಿಕೆಯನ್ನು) ಬ್ರವೀತಿ=(ಭಾಗವತವು) ಹೇಳುತ್ತಿದೆಯೋ, ತೇನ=ಆದ್ದರಿಂದ ಧ್ಯಾನಾತ್=ಧ್ಯಾನದಿಂದ, ಅದೃಶ್ಯಾರ್ಥಸ್ಯ=ಅತೀಂದ್ರಿಯ ವಸ್ತುವಿನ ದರ್ಶನೇ=ಸಾಕ್ಷಾತ್ಕಾರ ವಿಷಯದಲ್ಲಿ, ತತ್ಸತ್ತ್ವೇ= ಕಾರಣ ಇದ್ದರೆ, ಸತ್ತ್ವರೂಪಿಣಂ=ಕಾರ್ಯ ಇರುತ್ತದೆ ಎಂಬ, ಅನ್ವಯಂ=ಅನ್ವಯ ವ್ಯಾಪ್ತಿಯನ್ನು ಅನ್ವಮಂಸ್ತ=ಅನುಮೋದಿಸಿದೆ.

**ಅನುವಾದ–** ರುದ್ರದೇವರು ಧ್ಯಾನದಿಂದ ಯಾಗೀಯ ಪಶುಹಿಂಸೆಯ ಉಪಾಯವನ್ನು ತಿಳಿದುಕೊಂಡರು ಎನ್ನುತ್ತಿದೆ ಭಾಗವತ. ಇದರಿಂದ ಅತೀಂದ್ರಿಯವಸ್ತುವಿನ ಸಾಕ್ಷಾತ್ಕಾರದ ವಿಷಯದಲ್ಲಿ ತತ್ಸತ್ತ್ವೇ ತತ್ಸತ್ತ್ವಂ ಎಂಬ ಅನ್ವಯವ್ಯಾಪ್ತಿಯನ್ನು ತಿಳಿದಂತಾಯಿತು.

**ಭಾವವಿಲಾಸಿನೀ–** ''ದೃಷ್ಟ್ವಾ ಸಂಜ್ಞಪನೇ ಯೋಗಮಿ''ತ್ಯನೇನ ''ದೃಷ್ಟ್ವಾ ಸಂಜ್ಞಪನೇ ಯೋಗಂ ಪಶೂನಾಂ ಸ ಪತಿರ್ಮಖೇ ಯಜಮಾನಪಶೋಸ್ತಸ್ಯ ಕಾಯಾತ್ತೇನಾಹರಚ್ಛಿರ'' ಇತಿವಾಕ್ಯಂ ಸಂಗೃಹ್ಣಾತಿ। ಮಖೇ ಯಜ್ಞೇ । ಸಂಜ್ಞಾಪನೇ ಯಜ್ಞೀಯಪಶುಹಿಂಸಾಯಾ । ಯೋಗಂ ಉಪಾಯಂ । ಸ್ವಯಜ್ಞಭಂಗಾತ್ಕುಪಿತೋ ಹರಿರಿಮಂ ಛೇತ್ತುಂ ನ ಮುಂಚತಿ । ತಸ್ಮಾದಿಮಮೇವ

**ಯಜ್ಞಪಶುಂ ಕೃತ್ವೈತಚ್ಛಿರ ಏವ ವಿಚ್ಛಿದ್ಯ ಭಗವದಾಹುತಿತ್ವೇನಾಗ್ನೌ ಜುಹೋಮೀತಿ ಸಂಕಲ್ಪಾಖ್ಯಮುಪಾಯಂ ದೃಷ್ಟ್ವೇತಿ ಭಾವಃ । ಅನ್ವಯಂ ಅನ್ವಯವ್ಯಾಪ್ತಿಮ್ ॥ ೬೯ ॥**

**ವಿವರಣೆ–** ರುದ್ರದೇವರು ಧ್ಯಾನ ಮಾಡಿದ ನಂತರ, ದಕ್ಷ ಪ್ರಜಾಪತಿಯ ತಲೆಯನ್ನು ಕತ್ತರಿಸುವ ಉಪಾಯವನ್ನು ಕಂಡುಕೊಂಡರು. ಪರಮಾತ್ಮನ ಪ್ರೀತಿಗಾಗಿ ಬೃಹಸ್ಪತಿಸವ ಎಂಬ ವಿಷ್ಣುಯಾಗವನ್ನು ದಕ್ಷಪ್ರಜಾಪತಿ ಮಾಡುತ್ತಿದ್ದಾನೆ. ಯಜಮಾನನಾದ ದಕ್ಷನು ಹತನಾದರೆ ತನ್ನ ಆರಾಧನಾರೂಪವಾದ ಯಜ್ಞವು ಭಗ್ನವಾಗುತ್ತದೆ ಎಂದು ಪರಮಾತ್ಮನೇ ರುದ್ರನಿಂದ ದಕ್ಷಹತನಾಗದಂತೆ ಮಾಡಿದ. ಆಗ ರುದ್ರದೇವರು ಧ್ಯಾನ ಮಾಡಿ, ದಕ್ಷನು ಹತನಾದರೆ ಯಜ್ಞವು ಭಗ್ನವಾಗಿ ತನ್ನ ಆರಾಧನೆಗೆ ಭಂಗ ಬರುತ್ತದೆ ಎಂದು ಪರಮಾತ್ಮನೇ ದಕ್ಷನನ್ನು ವಧಿಸಲು ಬಿಡುತ್ತಿಲ್ಲ ಎಂದು ತಿಳಿದರು. ಆದ್ದರಿಂದ ಪರಮಾತ್ಮನ ಆರಾಧನೆಗೆ ಭಂಗವು ಬಾರದ ಹಾಗೆ ದಕ್ಷನನ್ನು ವಧಿಸಬೇಕು. ಎಂದರೆ ಭಗವಂತನ ಆರಾಧನೆಗೆ ಈ ದಕ್ಷಪ್ರಜಾಪತಿಯೇ ಪಶು ಎಂದು ಅನುಸಂಧಾನ ಮಾಡಿ, ಪರಮಾತ್ಮನಿಗೆ ಆಹುತಿಯನ್ನು ಕೊಡುತ್ತೇನೆ ಎಂದು ತೀರ್ಮಾನಿಸಿದರು. ಆಗ ರುದ್ರದೇವರಿಗೆ ದಕ್ಷನ ತಲೆಯನ್ನು ಕತ್ತರಿಸಲು ಸಾಧ್ಯವಾಯಿತು. ಹೀಗೆ ಭಾಗವತದಲ್ಲಿ ಕಥೆ ಇದೆ. ಇದರಿಂದ ಧ್ಯಾನದ ನಂತರ ರುದ್ರ ದೇವರಿಗೆ ದಕ್ಷನ ವಧೋಪಾಯವು ತಿಳಿಯಿತು ಎಂದು ಅನ್ವಯ ವ್ಯಾಪ್ತಿಯನ್ನು ತೋರಿಸಿದಂತಾಯಿತು. 'ತತ್ಸತ್ತ್ವೇ ತತ್ಸತ್ತ್ವಂ' ಇದು ಅನ್ವಯ ವ್ಯಾಪ್ತಿ. ಕಾರಣ ಇದ್ದರೆ ಕಾರ್ಯ ಎಂದು ತಾತ್ಪರ್ಯ.

ಅತೀಂದ್ರಿಯ ವಸ್ತುವಿನ ಸಾಕ್ಷಾತ್ಕಾರಕ್ಕೆ ಧ್ಯಾನವು ಸಾಧನ. ಎಂದರೆ ಸಾಕ್ಷಾತ್ಕಾರವು ಕಾರ್ಯ, ಧ್ಯಾನವು ಕಾರಣ. ಧ್ಯಾನ ಎಂಬ ಕಾರಣವಿದ್ದರೆ ಅತೀಂದ್ರಿಯನಾದ ಪರಮಾತ್ಮನ ಸಾಕ್ಷಾತ್ಕಾರ ಎಂಬ ಕಾರ್ಯ ಇರುತ್ತದೆ ಎಂದು ಅನ್ವಯವ್ಯಾಪ್ತಿಯು ಸಿದ್ಧವಾಯಿತು.

ಧ್ಯಾನವು ಸಾಕ್ಷಾತ್ಕಾರಕ್ಕೆ ಪ್ರಧಾನ ಸಾಧನ ಎಂಬ ವಿಷಯದ ಉಪಸಂಹಾರ ಮಾಡುತ್ತಿದ್ದಾರೆ –

**ರೌದ್ರೀ ವಿದ್ಯಾನವದ್ಯೇತ್ಥಂ ಧ್ಯಾನಸ್ಯ ದೃಶಿ ಹೇತುತಾಮ್ ।**
**ಅನ್ವಯವ್ಯತಿರೇಕಾಭ್ಯಾಂ ನಿರ್ಣಿನಾಯೇತಿ ಮೇ ಮತಿಃ ॥ ೭೦ ॥**

**ಅರ್ಥ–** ಅನವದ್ಯಾ=ನಿರ್ದುಷ್ಟವಾದ, ರೌದ್ರೀ ವಿದ್ಯಾ=ರುದ್ರದೇವರು ಮಾಡಿದ ಧ್ಯಾನ ಮೊದಲಾದ ವಿದ್ಯೆಯು, ಇತ್ಥಂ=ಈ ರೀತಿಯಾಗಿ, ಧ್ಯಾನಸ್ಯ=ಧ್ಯಾನಕ್ಕೆ, ದೃಶಿ ಹೇತುತಾಂ= ಸಾಕ್ಷಾತ್ಕಾರ ಕಾರಣತ್ವವನ್ನು, ಅನ್ವಯವ್ಯತಿರೇಕಾಭ್ಯಾಂ= ಅನ್ವಯವ್ಯಾಪ್ತಿ-ವ್ಯತಿರೇಕವ್ಯಾಪ್ತಿಗಳ ಮೂಲಕ, ನಿರ್ಣಿನಾಯ=ತೀರ್ಮಾನಿಸಿದೆ. ಇತಿ=ಎಂದು, ಮೇ ಮತಿಃ=ನನ್ನ ಅಭಿಪ್ರಾಯ.

**ಅನುವಾದ–** ರುದ್ರದೇವರು ಮಾಡಿದ ನಿರ್ದುಷ್ಟವಾದ ಧ್ಯಾನಾಚರಣೆಯಿಂದ ರುದ್ರದೇವರಿಗೆ ದಕ್ಷನ ವಧೋಪಾಯವು ತಿಳಿದಿದ್ದರಿಂದ ಧ್ಯಾನವು ಕಾರಣ.

**ದಕ್ಷವಧೋಪಾಯಜ್ಞಾನವು ಕಾರ್ಯ. ಧ್ಯಾನರೂಪವಾದ ಕಾರಣವು ಇದ್ದಾಗಲೇ ದಕ್ಷವಧೋಪಾಯವು ತಿಳಿದದ್ದರಿಂದ, ಕಾರಣವಿದ್ದಾಗ ಕಾರ್ಯ ಎಂಬ ಅನ್ವಯ ವ್ಯಾಪ್ತಿಯನ್ನು ಹೇಳಿದಂತಾಯಿತು.**

**ಭಾವವಿಲಾಸಿನೀ–** ರೌದ್ರೀವಿದ್ಯಾ ರುದ್ರಕೃತಧ್ಯಾನಾದಿವಿದ್ಯಾ ॥ ೭೦ ॥

**ವಿವರಣೆ–** 'ದೃಷ್ಟ್ವಾ ಸಂಜ್ಞಪನೇ ಯೋಗಂ' ಎಂಬ ವಾಕ್ಯದಿಂದ ದೃಷ್ಟ್ವಾ ಸಂಜ್ಞಪನೇ ...... ತೇನಾಹರತ್ ಶಿರಃ ಎಂಬ ಭಾಗವತ ವಾಕ್ಯವನ್ನು ಸಂಗ್ರಹಿಸಿದ್ದಾರೆ. ಪಶುಪತಿಯಾದ ರುದ್ರದೇವರು, ಯಜ್ಞದಲ್ಲಿ ಯಜ್ಞಸಂಬಂಧಿಯಾದ ಪಶುಹಿಂಸೆವಿಷಯಕವಾದ ಉಪಾಯವನ್ನು ಅರಿತು, ಪಶುವೆನಿಸಿದ ಯಜಮಾನನಾದ ದಕ್ಷನ ಕತ್ತು ಹಿಸುಕಿ, ವಧಿಸಿ, ನಂತರ ಶರೀರದಿಂದ ತಲೆಯನ್ನು ತುಂಡರಿಸಿದರು.

ಸಂಜ್ಞಪನೇ: ಯಜ್ಞ ಸಂಬಂಧಿಯಾದ ಪಶು ಹಿಂಸೆಯ ವಿಷಯದಲ್ಲಿ, ಯೋಗಂ= ಉಪಾಯವನ್ನು ತನ್ನ ಆರಾಧನಾ ರೂಪವಾದ ಯಜ್ಞವು ಭಗ್ನವಾಗುತ್ತದೆಂದು ಕುಪಿತನಾದ ಪರಮಾತ್ಮನು, ದಕ್ಷನನ್ನು ತುಂಡರಿಸಲು ಬಿಡುತ್ತಿಲ್ಲ. ಆದ್ದರಿಂದ ಈ ದಕ್ಷನನ್ನೇ ಯಜ್ಞಪಶುವನ್ನಾಗಿ ಮಾಡಿ, ಇವನ ತಲೆಯನ್ನೇ, ಕಡಿದು ಭಗವಂತನಿಗೆ ಆಹುತಿಯಾಗಿ ಅಗ್ನಿಯಲ್ಲಿ ಹೋಮಿಸುತ್ತೇನೆ ಎಂದು ಸಂಕಲ್ಪರೂಪವಾದ ಉಪಾಯವನ್ನು ಅರಿತು ಎಂದು ತಾತ್ಪರ್ಯ.

ಅನ್ವಯಂ=ಅನ್ವಯ ವ್ಯಾಪ್ತಿಯನ್ನು, ಧ್ಯಾನವೇ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಪ್ರಧಾನ ಸಾಧನ ಎಂದು ದೃಢವಾಯಿತು. ಈ ದಾರ್ಢ್ಯಕ್ಕೆ ಧ್ಯಾನ ಇದ್ದರೆ ಸಾಕ್ಷಾತ್ಕಾರ, ಧ್ಯಾನ ಇಲ್ಲದಿದ್ದರೆ ಸಾಕ್ಷಾತ್ಕಾರವಿಲ್ಲ ಎಂದು ಅನ್ವಯ ವ್ಯತಿರೇಕ ವ್ಯಾಪ್ತಿಯು ಸಹಕಾರಿಯಾಗಿದೆ ಎಂದು ನನ್ನ ಅಭಿಪ್ರಾಯ ಎಂದು ವಾದಿರಾಜಶ್ರೀಗಳು ಹೇಳಿದ್ದಾರೆ.

**ರುದ್ರೋಽಪ್ಯದ್ರಾವಯದ್ ಯಸ್ಯಾಃ ಕ್ಷುದ್ರೋಪದ್ರವಹೃದ್ರುಜಮ್ ।**
**ಹೃದ್ಯಾ ಮಧ್ವಸ್ಯ ಶುದ್ಧಾ ಸಾ ವಿದ್ಯಾ ವಿದ್ಯೋತತೇತರಾಮ್ ॥ ೭೧ ॥**

**ಅರ್ಥ–** ರುದ್ರೋಽಪಿ=ರುದ್ರದೇವರೂ ಕೂಡ, ಯಸ್ಯಾಃ=ಧ್ಯಾನಸಹಿತಮನಸ್ಸೇ ಪರಮಾತ್ಮನ ಅಪರೋಕ್ಷಕ್ಕೆ ಸಾಧನ ಎಂಬ ಸಿದ್ಧಾಂತದ, ಕ್ಷುದ್ರೋಪದ್ರವಹೃದ್ರುಜಂ= ಧ್ಯಾನಸಹಿತವಾದ ಮನಸ್ಸು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಕಾರಣವಲ್ಲ, ಶ್ರವಣದಿಂದಲೇ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ ಎಂಬ ಹೃದಯ ರೋಗವನ್ನು, ಅದ್ರಾವಯತ್= ಪರಿಹರಿಸಿದ್ದಾರೆ. ಆದ್ದರಿಂದ ಮಧ್ವಸ್ಯ=ಮಧ್ವಾಚಾರ್ಯರ, ಹೃದ್ಯಾ=ಮನೋಹರವಾದ, ಶುದ್ಧಾ = ನಿರ್ದುಷ್ಟವಾದ, ಸಾ ವಿದ್ಯಾ=ಧ್ಯಾನಸಹಿತ ಮನಸ್ಸೇ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಾಧನ ಎಂಬ ಸಿದ್ಧಾಂತವು ವಿದ್ಯೋತತೇತರಾಂ=ವಿಶೇಷವಾಗಿ ಶೋಭಿಸುತ್ತದೆ (ಸಮಂಜಸವಾಗುತ್ತದೆ).

**ಅನುವಾದ–** ರುದ್ರದೇವನು ಧ್ಯಾನ ಮಾಡಿ, ದಕ್ಷನ ವಧೋಪಾಯವನ್ನು ಕಂಡುಕೊಂಡರು. ಆದ್ದರಿಂದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಧ್ಯಾನಸಹಿತವಾವ ಮನಸ್ಸೇ ಪ್ರಧಾನ ಸಾಧನ, ಶ್ರವಣವು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಕಾರಣವಲ್ಲ, ಇದು ಶ್ರೀಮದಾಚಾರ್ಯರ ಸಿದ್ಧಾಂತ. ಇದಕ್ಕೆ ವಿರುದ್ಧವಾಗಿ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಶ್ರವಣವೇ ಸಾಧನ. ಧ್ಯಾನಸಹಿತಮನಸ್ಸಲ್ಲ ಎಂದು ಕೆಲವರು ಹೇಳುವ ವಿಷಯವನ್ನು ರುದ್ರದೇವರೇ ನಿರಾಕರಣೆ ಮಾಡಿದಂತಾಯಿತು. ಶ್ರೀಮದಾಚಾರ್ಯರ ಸಿದ್ಧಾಂತವನ್ನು ವಿಶೇಷವಾಗಿ ಸಮರ್ಥಿಸಿದಂತಾಯಿತು.

**ಭಾವವಿಲಾಸಿನೀ–** ಅಧುನೋಕ್ತರೀತ್ಯಾ ಭಾಗವತಭಾರತಾದಿರಹಸ್ಯಾನುಕೂಲಾಂ ಮಧ್ವಸ್ಯ ವಿದ್ಯಾಂ ಸ್ತೌತಿ – ರುದ್ರ ಇತಿ ॥ ಯಸ್ಯಾಃ ವಿದ್ಯಾಯಾಃ । ಕ್ಷುದ್ರೋಪದ್ರವಃ ಶ್ರವಣಾದೇವಾ-ಪರೋಕ್ಷಜ್ಞಾನಂ ನತು ನಿದಿಧ್ಯಾಸನಸಹಕೃತಮನಸ ಇತಿ ವಿಪರೀತಪ್ರಮೇಯಮ್ । ಸ ಏವ ಹೃದ್ರುಕ್ ಹೃದಯರೋಗಃ ತಾಂ ಹೃದ್ರುಜಮ್ । ಶ್ರುತಿಸ್ಮೃತ್ಯನುಭವವಿರುದ್ಧತ್ವಾತ್ ಸ್ವಾಭಿಮತ-ಹರೇಣೈವತಿರಸ್ಕೃತತ್ವಾದ್ವಾ ಕ್ಷುದ್ರೇತ್ಯುಕ್ತಮ್ ॥ ೭೧ ॥

**ವಿವರಣೆ–** ಶ್ರವಣದಿಂದ ಅಪರೋಕ್ಷಜ್ಞಾನ ಎನ್ನುವ ಪರರವಾದ ಕ್ಷುದ್ರವಾದ ಉಪದ್ರವ. ಅದು 'ಧ್ಯಾನದಿಂದಲೇ ಅಪರೋಕ್ಷ' ಎಂಬ ಮಧ್ವಸಿದ್ಧಾಂತಕ್ಕೆ ಹೃದಯ ರೋಗದಂತಿದೆ. ಅದನ್ನು ರುದ್ರದೇವರು ಪರಿಹರಿಸಿ ರುದ್ರ (ರುಜಂ= ದ್ರಾವಯತಿ) ಎಂಬ ಹೆಸರನ್ನು ಸಾರ್ಥಕಪಡಿಸಿಕೊಂಡಿದ್ದಾರೆ, ಎಂದು ವಾದಿರಾಜರು ಈ ಶ್ಲೋಕದಲ್ಲಿ ಚಮತ್ಕಾರವಾಗಿ ತಿಳಿಸಿದ್ದಾರೆ.

'ಯಸ್ಯ ಪ್ರಸಾದಾತ್ ಪರಮಾರ್ತಿರೂಪಾತ್ ಅಸ್ಮಾತ್ ಸಂಸಾರಾನ್ ಮುಚ್ಯತೇ ನಾಪರೇಣ' ಅಪರೋಕ್ಷಜ್ಞಾನಜನ್ಯವಾದ, ಪರಮಾತ್ಮನ ಪ್ರಸಾದದಿಂದಲೇ ದುಃಖಮಯವಾದ ಈ ಸಂಸಾರದಿಂದ ಮುಕ್ತಿ ಬೇರೆ ಸಾಧನವಿಲ್ಲ ಎಂಬ ಶ್ರುತಿ, 'ಮತ್ ಪ್ರಸಾದಾತ್ ಪರಾಂ ಶಾಂತಿಂ ಸ್ಥಾನಂ ಪ್ರಾಪ್ಸ್ಯಸಿ ಶಾಶ್ವತಂ' ಜ್ಞಾನಜನ್ಯವಾದ ನನ್ನ ಪ್ರಸಾದದಿಂದಲೇ ಶಾಶ್ವತಸ್ಥಾನವನ್ನು ಅತಿಶಯವಾದ ಪೂರ್ಣವಾದ ಆನಂತ್ಯವನ್ನು ಹೊಂದುತ್ತೀಯೆ, ಎಂಬ ಸ್ಮೃತಿ ಇವುಗಳಿಂದ ಅಪರೋಕ್ಷ ಜ್ಞಾನಕ್ಕೆ ಧ್ಯಾನವೇ ಸಾಧನ ಎಂದು ತಿಳಿದುಬರುತ್ತದೆ.

ಇದಂ ತ್ರಯಂ ಪ್ರಧಾನಾಂಗಂ ಮನಃ ಕರಣಮುಚ್ಯತೇ ।
ಪ್ರತಿಬಂಧೇ ನ ತತ್ಪಶ್ಯೇತ್ ತದಪಾಯೇ ತು ಪಶ್ಯತಿ ॥ ೭೨ ॥

**ಅರ್ಥ–** ಇದಂ ತ್ರಯಂ=ಈ ಶ್ರವಣ, ಮನನ, ನಿಧಿಧ್ಯಾಸನ=ಈ ಮೂರು ಪ್ರಧಾನಾಂಗಂ=ಪರಮಾತ್ಮನ ಸಾಕ್ಷಾತ್ಕಾರಕ್ಕೆ ಕರ್ಮಾದಿಗಳಿಗಿಂತ ಪ್ರಧಾನ ಸಾಧನ. ಮನಃ=ಮನಸ್ಸು ಕರಣಂ=ಅಸಾಧಾರಣ ಕಾರಣ ಎಂದು, ಉಚ್ಯತೇ=ಶಾಸ್ತ್ರದಲ್ಲಿ

ಉಕ್ತವಾಗಿದೆ. ತತ್=ಆ ಕರಣವಾದ ಮನಸ್ಸು ಪ್ರತಿಬಂಧೇ=ಪ್ರತಿಬಂಧಕವಿದ್ದಾಗ ತತ್=ಆ ಪರಮಾತ್ಮನರೂಪನ್ನು ನ ಪಶ್ಯೇತ್=ಕಾಣುವುದಿಲ್ಲ. ತದಪಾಯೇ ತು=ಆ ಪ್ರತಿಬಂಧಕಗಳು ನಿವೃತ್ತವಾದಾಗ, ತತ್=ಆ ಮನಸ್ಸು ತತ್=ಪರಮಾತ್ಮನ ರೂಪವನ್ನು ಪಶ್ಯತಿ=ಕಾಣುತ್ತದೆ.

**ಅನುವಾದ–** ಪರಮಾತ್ಮನ ಸಾಕ್ಷಾತ್ಕಾರಕ್ಕೆ ಶ್ರವಣ ಮನನ ನಿದಿಧ್ಯಾಸನಗಳು ಮುಖ್ಯ ಕಾರಣಗಳು, ವರ್ಣಾಶ್ರಮ ವಿಹಿತ ಕರ್ಮಗಳು ಅಪ್ರಧಾನ ಕಾರಣಗಳು. ಶ್ರವಣ ಮನನ ನಿದಿಧ್ಯಾಸನ ಸಹಿತವಾದ ಮನಸ್ಸು ಪರಮಾತ್ಮನ ಸಾಕ್ಷಾತ್ಕಾರಕ್ಕೆ ಅಸಾಧಾರಣ ಕಾರಣ. ಅಸಾಧಾರಣ ಕಾರಣವಾದ ಮನಸ್ಸಿನಿಂದ ಪ್ರತಿಬಂಧಕಗಳಾದ ಸಂಶಯ ಪಾಪಗಳು ಇದ್ದಾಗ ಪರಮಾತ್ಮನನ್ನು ಕಾಣಲು ಸಾಧ್ಯವಿಲ್ಲ. ಪ್ರತಿಬಂಧಕಗಳಾದ ಸಂಶಯ, ಪಾಪಗಳು ನಿವೃತ್ತವಾದಾಗ ಮನಸ್ಸಿನಿಂದ ಪರಮಾತ್ಮನನ್ನು ಕಾಣಬಹುದು.

**ಭಾವವಿಲಾಸಿನೀ–** ತ್ರಯಂ ಶ್ರವಣಾದಿತ್ರಯಮ್ । ಪ್ರಧಾನಾಂಗಂ ಕರ್ಮಾದಿಭ್ಯಃ ಪ್ರಧಾನಾಂಗಮ್ । ಏತೇಷಾಂ ಮಧ್ಯೇ ತು ಪೂರ್ವೋಕ್ತರೀತ್ಯಾ ಧ್ಯಾನಸ್ಯೈವ ಪ್ರಾಧಾನ್ಯಂ ದ್ರಷ್ಟವ್ಯಮ್ ॥ ೭೨ ॥

**ವಿವರಣೆ–** ಶ್ರವಣಾದಿ ತ್ರಯಗಳು ಪ್ರಧಾನಾಂಗಗಳು ಎಂದರೆ ಕರ್ಮಾದಿ ಇತರ ಸಾಧನಗಳಿಗಿಂತ ಅವುಗಳು ಪ್ರಧಾನ, ಎಂದಿಷ್ಟೇ ಅರ್ಥ. ಆ ಮೂರರಲ್ಲಿ ಕೊನೆಯದಾದ ಧ್ಯಾನವೇ ಅಪರೋಕ್ಷಕ್ಕೆ ಪ್ರಧಾನಾಂಗ.

ಸಂಶಯ ಮತ್ತು ಪಾಪಗಳು ಮನಸ್ಸಿಗೆ ಪ್ರತಿಬಂಧಕವಾಗಿ ಇರುವ ಕಾರಣದಿಂದ ಭಗವಂತನ ಅಪರೋಕ್ಷವಾಗುತ್ತಿಲ್ಲ. ಶ್ರವಣ-ಮನನಗಳಿಂದ ಸಂದೇಹವು ನಾಶವಾಗುತ್ತದೆ. ನಿಷ್ಕಾಮಕರ್ಮದಿಂದ ಪಾಪವು ನಾಶವಾಗುತ್ತದೆ. ಆಗ ಮನಸ್ಸಿನಿಂದ ಅಪರೋಕ್ಷವಾಗಲು ಸಾಧ್ಯವಾಗುತ್ತದೆ.

**ಪ್ರತಿಬಂಧನಿವೃತ್ತ್ಯರ್ಥಂ ಶ್ರವಣಾದ್ಯಪಿ ಮೃಗ್ಯತೇ ।**
**ಅತಃ ಶ್ರುತಿಃ ಶ್ರವಣತೋ ಮುಕ್ತಿರಿತ್ಯಪಿ ಸಾ ಜಗೌ ॥**
**ಏವಂ ಚ ಮನಸೈವೇತಿ ಶ್ರೌತಾವಧೃತಿರಪ್ಯಭೂತ್ ॥ ೭೩ ॥**

**ಅರ್ಥ–** ಪ್ರತಿಬಂಧನಿವೃತ್ತ್ಯರ್ಥಂ=ಪ್ರತಿಬಂಧಕವಾದ ಸಂಶಯ, ಪಾಪ ಇವುಗಳ ನಿವೃತ್ತಿಗಾಗಿ, ಶ್ರವಣಾದ್ಯಪಿ=ಶ್ರವಣ ಮನನಾದಿಗಳೂ ಸಹ, ಮೃಗ್ಯತೇ=(ಮನಸ್ಸಿನಿಂದ) ಅರಸಲ್ಪಡುತ್ತವೆ. ಅತಃ=ಶ್ರವಣಾದಿಗಳೂ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಸಹಕಾರಿಯಾದ್ದರಿಂದ ಸಾ ಶ್ರುತಿಃ='ಶ್ರುತ್ವೈವ ಮೋಕ್ಷಮಾಪ್ನೋತಿ' ಎಂಬ ಶ್ರುತಿಯು, ಶ್ರವಣತಃ= ಶ್ರವಣದಿಂದಲೂ, ಮುಕ್ತಿಃ= ಮೋಕ್ಷವಾಗುತ್ತದೆ, ಇತ್ಯಪಿ= ಎಂದೂ ಜಗೌ= ಹೇಳಿದೆ. ಏವಂ

ಚ= ಮನಸ್ಸೇ ಸಾಕ್ಷಾತ್ಕಾರಕ್ಕೆ ಕಾರಣವಾದ್ದರಿಂದ, ಮನಸ್ಯೈವೇತಿ= ಮನಸ್ಸಿನಿಂದಲೇ ಎಂಬ, ಶ್ರೌತಾವಧೃತಿರಪಿ= ಶ್ರುತಿಯಲ್ಲಿ ಹೇಳಿದ ನಿರ್ಧಾರಣವೂ, ಅಭೂತ್=ಸಮಂಜಸವೇ ಆಗಿದೆ.

**ಅನುವಾದ–** ಪರಮಾತ್ಮನನ್ನು ಮನಸ್ಸಿನಿಂದ ಕಾಣಲು ಪ್ರತಿಬಂಧಕ ನಿವೃತ್ತಿಯಾಗಬೇಕು. ಪ್ರತಿಬಂಧಕ ನಿವೃತ್ತಿಯಾಗಿ ಶ್ರವಣ ಮನನಾದಿಗಳನ್ನು ಮನಸ್ಸಿನಿಂದ ಆಚರಿಸಬೇಕು. ಆದ್ದರಿಂದ ಪರಮಾತ್ಮನ ಸಾಕ್ಷಾತ್ಕಾರಕ್ಕೆ ಮನಸ್ಸೇ ಮುಖ್ಯ ಕಾರಣ. ಶ್ರವಣದಿಂದಲೇ ಮೋಕ್ಷ ಎಂದು ಹೇಳುವ 'ಶ್ರುತ್ವೈವ ಮೋಕ್ಷಮಾಪ್ನೋತಿ ಎಂಬ ಶ್ರುತಿ ಇದೆ. ಶ್ರವಣವೂ ಪರಂಪರಯಾ ಮೋಕ್ಷಕ್ಕೆ ಸಾಧನವಾದ್ದರಿಂದ ಶ್ರವಣವೇ ಮೋಕ್ಷ ಸಾಧನ ಎಂಬ ಶ್ರುತಿಯೂ ಯಥಾರ್ಥವನ್ನೇ ಹೇಳುತ್ತದೆ. ಮನಸ್ಸು ಪ್ರಧಾನ ಕಾರಣವಾದ್ದರಿಂದ 'ಮನಸ್ಯೈವೇದ ಮಾಪ್ತವ್ಯಂ' ಎಂಬ ಶ್ರುತಿಯಲ್ಲಿ ಹೇಳಿದ ಮನಸ್ಸಿನಿಂದಲೇ ಮೋಕ್ಷ ಎಂಬ ನಿರ್ಧಾರಣವೂ ಸಮಂಜಸವೇ ಆಗಿದೆ.

**ಭಾವವಿಲಾಸಿನೀ–** ಮೃಗ್ಯತೇ ಮನಸಾ । ಅತಃ ಶ್ರವಣಾದೇರಪ್ಯಂಗತ್ವಾತ್ । ಸಾ ಶ್ರುತ್ವೈವ ಮೋಕ್ಷಮಾಪ್ನೋತೀತ್ಯಾದಿಕಾ । ಏವಂ ಚ ಮನಸ ಏವ ದರ್ಶನಕರಣತ್ವಾತ್ ॥ ೭೩ ॥

**ವಿವರಣೆ–** 'ಶ್ರುತ್ವೈವ ಮೋಕ್ಷಮಾಪ್ನೋತಿ' ಎಂಬ ಶ್ರುತಿಯಲ್ಲಿ ಶ್ರವಣವೇ ಮೋಕ್ಷಸಾಧನೆ ಎನ್ನಲಾಗಿದೆ. 'ಮನಸ್ಯೈವೇದಮಾಪ್ತವ್ಯಂ' ಎಂಬ ಶ್ರುತಿಯಲ್ಲಿ ಮನಸ್ಸೇ ಸಾಧನವೆಂದಿದೆ. ಇವೆರಡೂ ಅಸಂಗತವಲ್ಲ. ಅಪರೋಕ್ಷಕ್ಕೆ ಶ್ರವಣವೂ ಬೇಕು, ಮನಸ್ಸೂ ಬೇಕು. ಶ್ರವಣದಿಂದ ಮನಸ್ಸಿನಲ್ಲಿರುವ ಸಂಶಯ-ವಿಪರ್ಯಯಾದಿ ಪ್ರತಿಬಂಧ ನಿರಾಸ. ಅಂತಹ ಮನಸ್ಸಿನಿಂದ ಅಪರೋಕ್ಷ. ಹೀಗೆ ಅಪರೋಕ್ಷಕ್ಕೆ ಎರಡೂ ಬೇಕು.

ಹರ್ಯನುಗ್ರಹ ಏಭ್ಯೋ ಸರ್ವೇಭ್ಯೋ ಬಲವತ್ತರಃ ।
ವ್ಯರ್ಥೀಕೃತ್ಯ ಪ್ರವಚನಂ ಸುಮೇಧಾಂ ಚ ಬಹುಶ್ರುತಂ ।
ಯಮೇವೈಷ ಇತಿ ಶ್ರುತ್ಯಾ ಪ್ರಸಾದಸ್ಯೈವ ಕೀರ್ತನಾತ್ ॥ ೭೪ ॥

**ಅರ್ಥ –** ಪ್ರವಚನಂ= ಪ್ರವಚನವನ್ನು, ಸುಮೇಧಾಂ= ಒಳ್ಳೆಯ ಮೇಧಾ ಶಕ್ತಿಯನ್ನು, ಬಹುಶ್ರುತಂ ಚ= ಮತ್ತು ಬಹಳ ಶ್ರವಣವನ್ನು, ವ್ಯರ್ಥೀಕೃತ್ಯ= ವ್ಯರ್ಥಗೊಳಿಸಿ, ಪ್ರಸಾದಸ್ಯೈವ= ಭಗವದನುಗ್ರಹವೇ, ಯಮೇವೈಷ ಇತಿ ಶ್ರುತ್ಯಾ= ಯಮೇವೈಷ ಎಂಬ ಶ್ರುತಿಯಿಂದ, ಕೀರ್ತನಾತ್= ಹೇಳಲ್ಪಡುವುದರಿಂದ, ಏಭ್ಯಃ ಸರ್ವೇಭ್ಯಃ= ಈ ಎಲ್ಲ ಸಾಧನಗಳಿಗಿಂತಲೂ, ಹರ್ಯನುಗ್ರಹಃ= ಹರಿಯ ಅನುಗ್ರಹವೇ, ಬಲವತ್ತರಃ= ಬಹಳ ಪ್ರಬಲವಾದುದು.

**ಅನುವಾದ –** ಪ್ರವಚನವನ್ನು ಮೇಧಾಶಕ್ತಿಯನ್ನು ಮತ್ತು ಬಹುಶ್ರವಣವನ್ನು ಮೋಘಗೊಳಿಸಿ ಯಮೇವೈಷ ವೃಣುತೇ ಎಂಬ ಶ್ರುತಿಯು ಪ್ರಸಾದವೇ

ಮೋಕ್ಷಸಾಧನವೆಂದು ಹೇಳುವುದರಿಂದ, ಈ ಎಲ್ಲ ಸಾಧನಗಳಿಗಿಂತಲೂ ಹರಿಯ ಅನುಗ್ರಹವೇ ಬಹಳ ಪ್ರಬಲವಾದುದು.

**ಭಾವವಿಲಾಸಿನೀ–** ಕಿಂಚ ಜಡಾದಸ್ವತಂತ್ರಾಚ್ಚಾಸಾಧ್ಯಾಯಾಃ ಭಾವರೂಪಾನಾದಿ-ಪ್ರಕೃತ್ಯಂಶಾಖ್ಯಪ್ರತಿಬಂಧನಿವೃತ್ತೇಃ ಪ್ರಸನ್ನಭಗವದೇಕಸಾಧ್ಯತ್ವಾತ್ ಅಪ್ರತಿಬದ್ಧೇನಾಪಿ ಮನಸಾ ಅವ್ಯಕ್ತಸ್ವಭಾವಸ್ಯ ತಸ್ಯ ಪ್ರಸಾದೇನೈವ ದ್ರಷ್ಟುಂ ಶಕ್ಯತ್ವಾತ್ ಭಗವತ್ಪ್ರಸಾದ ಏವ ದರ್ಶನೇ ಮುಕ್ತೌ ಚ ಸರ್ವೇಭ್ಯೋಽಪ್ಯತಿಶಯಿತಹೇತುರಿತ್ಯತ್ರ ಶ್ರುತಿಂ ಪ್ರಮಾಣಯನ್ ತಥೈವ ಶ್ರುತ್ಯಾ ದರ್ಶನಸ್ಯ ಮುಕ್ತೇಶ್ಚ ಸ್ವರೂಪಂ ನಿರೂಪಯತಿ – ಹರ್ಯನುಗ್ರಹ ಇತಿ ॥ ''ಯಮೇವೈಷ'' ಇತಿ ಶ್ರುತ್ಯೇತ್ಯನೇನ ''ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾಶ್ರುತೇನ'' । ''ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮಿ''ತಿ ಶ್ರುತಿಂ ಸಂಗೃಹ್ಣಾತಿ । ಪ್ರವಚನೇನ ವ್ಯಾಖ್ಯಾನೇನ ನ ಲಭ್ಯ ಇತ್ಯಾದಿನಾ ವ್ಯರ್ಥೀಕೃತ್ಯ ವೃಣುತೇ ಮದೀಯೋಽಯಮಿತ್ಯಂಗೀಕರೋತೀತ್ಯುಕ್ತ್ಯಾ ಸ್ವೀಯತಯಾಂಗೀಕಾರಾಖ್ಯ ಪ್ರಸಾದಸ್ಯೈವ ಶ್ರುತ್ಯಾ ಕೀರ್ತನಾದಿತಿ ಸಂಬಂಧಃ। ಏವಕಾರಸ್ಯ ತೇನೇತ್ಯನೇನ ಸಂಬಂಧಃ। ಅನ್ಯಥಾ ವೈಯರ್ಥ್ಯ-ಪ್ರಸಂಗಾತ್ । ತೇನೈವ ಲಭ್ಯಃ ಪ್ರಾಪ್ಯಃ । ತತ್ಪ್ರಾಪ್ತಿರಪಿ ತದಪರೋಕ್ಷಜ್ಞಾನೇನೈವೇತಿ ಭಾವೇನ ತಸ್ಯೈಷ ಆತ್ಮೇತ್ಯಾದ್ಯುಕ್ತಂ ವಿವೃಣುತೇ ದರ್ಶಯತಿ । ಅರ್ಥಪ್ರದರ್ಶನಸ್ಯೈವ ವಿವರಣ-ಶಬ್ದವಾಚ್ಯತ್ವಾತ್ ॥ ೭೪ ॥

**ವಿವರಣೆ** – ಭಾವರೂಪವಾದ ಅನಾದಿ ಪ್ರಕೃತಿಬಂಧವು ಹರಿಯ ಅನುಗ್ರಹದಿಂದ ಮಾತ್ರ ನಿವೃತ್ತವಾಗುತ್ತದೆ. ಹರಿಯು ಅವ್ಯಕ್ತೈಕಸ್ವಭಾವನಾದ್ದರಿಂದ ದೋಷರಹಿತವಾದ ಮನಸ್ಸಿನಿಂದಲೂ ಸಹ ಅವನ ಅನುಗ್ರಹವಿಲ್ಲದೆ ಅವನನ್ನು ನೋಡಲು ಸಾಧ್ಯವಿಲ್ಲವಾದ್ದರಿಂದ ಹರಿಯ ದರ್ಶನಕ್ಕೂ ಮತ್ತು ಮೋಕ್ಷಕ್ಕೂ ಭಗವತ್ಪ್ರಸಾದವೇ ಉಳಿದೆಲ್ಲ ಕಾರಣಗಳಿಗಿಂತ ಅತಿಶಯವಾದ ಕಾರಣವೆಂದು ಶ್ರುತಿಪ್ರಮಾಣದಿಂದ ನಿರೂಪಿಸುತ್ತಾ ಮುಕ್ತಿಸ್ವರೂಪವನ್ನು ಇಲ್ಲಿ ನಿರ್ಧರಿಸುತ್ತಾರೆ. 'ನಾಯಮಾತ್ಮಾ ಪ್ರವಚನೇನ ಲಭ್ಯೋ ನ ಮೇಧಯಾ ನ ಬಹುನಾ ಶ್ರುತೇನ । ಯಮ್ಮೈವೇಷ ವೃಣುತೇ ತೇನ ಲಭ್ಯಃ ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಮ್ ।' ಎಂಬ ಶ್ರುತಿಯನ್ನು ಮನಸ್ಸಿನಲ್ಲಿ ಇಟ್ಟುಕೊಂಡು ವಿಮರ್ಶೆ ಮಾಡುತ್ತಾರೆ. ವ್ಯಾಖ್ಯಾನಾದಿಗಳಿಂದ ಲಭ್ಯನಲ್ಲವೆಂದು ಹೇಳಿರುವುದರಿಂದ ಅವುಗಳನ್ನು ವ್ಯರ್ಥಗೊಳಿಸಿದಂತೆ ಆಯಿತು. ವೃಣುತೇ ಎಂಬ ಪದದಿಂದ ಯಾವ ಜೀವನನ್ನು ಹರಿಯು ಇವನು ನನ್ನವನು ಎಂದು ಸ್ವೀಕಾರ ಮಾಡುತ್ತಾನೆಯೋ ಎಂದು ಹೇಳಿರುವುದರಿಂದ ಅಂತಹ ಸ್ವೀಕಾರ ರೂಪವಾದ ಪ್ರಸಾದವೇ ದರ್ಶನಕ್ಕೆ ಮತ್ತು ಮೋಕ್ಷಕ್ಕೆ ಕಾರಣವೆಂದು ಸಿದ್ಧವಾಗುತ್ತದೆ. ಯಮ್ಮೈವೇಷ ಎಂಬಲ್ಲಿರುವ ಏವ ಶಬ್ದವನ್ನು ತೇನ ಎಂಬ ಶಬ್ದದ ಜೊತೆಯಲ್ಲಿ ಅನ್ವಯ ಮಾಡಬೇಕು. ಆಗ ತೇನೈವ ಲಭ್ಯತೇ ಎಂದು ಅನ್ವಯವಾಗುತ್ತದೆ. ಭಗವದನುಗ್ರಹ ಪಾತ್ರನಾದವನು ಮಾತ್ರ ಅವನನ್ನು ನೋಡುತ್ತಾನೆ, ಇಲ್ಲದಿದ್ದರೆ ನೋಡುವುದಿಲ್ಲ ಎಂಬ ಅರ್ಥವು

ದೊರೆಯುತ್ತದೆ. ಹರಿಯ ಪ್ರಾಪ್ತಿಯೂ ಕೂಡ ಹರಿಯ ಅಪರೋಕ್ಷಜ್ಞಾನ ಮೂಲಕವಾದುದೇ ಆಗುತ್ತದೆ. ವಿವೃಣುತೇ ಎಂದರೆ ತೋರಿಸುತ್ತಾನೆ ಎಂದು ಅರ್ಥ. ಯಾರ ಮೇಲೆ ತನ್ನ ಅನುಗ್ರಹ ಉಂಟಾಗುತ್ತದೆಯೋ ಅವರಿಗೆ ತನ್ನ ರೂಪವನ್ನು ತೋರಿಸುತ್ತಾನೆ ಎಂದು ತಾತ್ಪರ್ಯ.

**ತನುಶಬ್ದಬಲಾತ್ ಸಿದ್ಧಂ ಸಾಕಾರಸ್ಯೈವ ದರ್ಶನಮ್ ।**
**ಅತೋ ನಿರಾಕಾರವಸ್ತುನಿರ್ವಿಕಲ್ಪಕದರ್ಶನಮ್ ॥ ೭೫ ॥**

**ನಿರಸ್ತಂ ಸಾ ತನುಶ್ಚಾಭೂತ್ ಸ್ವಾಮಿತ್ಯುಕ್ತೇಃ ಸ್ವರೂಪಿಣೀ ।**
**ಪ್ರಾಗಾವೃತಾಯಾ ವಿವೃತೇರೇವೋಕ್ತೇರ್ನಿತ್ಯಸಿದ್ಧತಾ ॥ ೭೬ ॥**

**ಅತಶ್ಚಿದಾನಂದರೂಪಶಿರಃಪಾಣ್ಯಾದಿಮಾನ್ ಹರಿಃ ।**
**ಮುಕ್ತಾಶ್ಚ ತಾದೃಶಾಕಾರಾ ಇತಿ ಶ್ರೌತಮತಸ್ಥಿತಿಃ ॥ ೭೭ ॥**

**ಅರ್ಥ–** ತನುಶಬ್ದಬಲಾತ್= ಈ ಶ್ರುತಿಯಲ್ಲಿ ಇರುವ ತನು ಎಂಬ ಶಬ್ದದ ಸಾಮರ್ಥ್ಯದಿಂದ, ಸಾಕಾರಸ್ಯೈವ= ಶಿರ ಆದಿ ಆಕಾರವುಳ್ಳವನದ್ದೇ, ದರ್ಶನಂ= ದರ್ಶನವು, ಸಿದ್ಧಂ= ಸಿದ್ಧವಾಗುತ್ತದೆ, ಅತಃ= ಆದ್ದರಿಂದ, ನಿರಾಕಾರವಸ್ತುನಿರ್ವಿಕಲ್ಪಕದರ್ಶನಂ= ನಿರಾಕಾರ ವಸ್ತುವಿನ ನಿರ್ವಿಕಲ್ಪಕ ಅಪರೋಕ್ಷ ಜ್ಞಾನವು, ನಿರಸ್ತಂ= ನಿರಸ್ತವಾಗುತ್ತದೆ, ಸ್ವಾಮಿತ್ಯುಕ್ತೇಃ= ತನ್ನದು ಎಂದು ಹೇಳಿದ್ದರಿಂದ, ಸಾ ತನುಶ್ಚ= ಆ ಶರೀರವಾದರೂ, ಸ್ವರೂಪಿಣೀ= ಸ್ವರೂಪ ಶರೀರವೇ ಆಗುತ್ತದೆ, ಪ್ರಾಕ್= ಮೊದಲು, ಆವೃತಾಯಾಃ= ಆವರಿಸಲ್ಪಟ್ಟಿದ್ದ ಆ ಶರೀರಕ್ಕೆ, ವಿವೃತೇಃ= ವಿವರಣವನ್ನೇ, ಉಕ್ತೇಃ= ಹೇಳಿರುವುದರಿಂದ, ನಿತ್ಯಸಿದ್ಧತಾ= ಆ ಶರೀರವು ನಿತ್ಯವೆಂದು ಸಿದ್ಧವಾಗುತ್ತದೆ, ಅತಃ= ಆದ್ದರಿಂದ, ಹರಿಃ= ಹರಿಯು, ಚಿದಾನಂದರೂಪಶಿರಃ ಪಾಣ್ಯಾದಿಮಾನ್= ಜ್ಞಾನಾನಂದ ರೂಪವಾದ ಶಿರಃಪಾಣ್ಯಾದಿಗಳನ್ನು ಉಳ್ಳವನು, ಚ= ಮತ್ತು, ಮುಕ್ತಾಃ= ಮುಕ್ತರೂ ಕೂಡ, ತಾದೃಶಾಕಾರಾಃ= ಅಂತಹ ಆಕಾರವನ್ನೇ ಉಳ್ಳವರು, ಇತಿ= ಎಂಬುದು, ಶ್ರೌತಮತಸ್ಥಿತಿಃ= ಶ್ರುತಿ ಸಮ್ಮತವಾದ ಮತದ ಧೋರಣೆ.

**ಅನುವಾದ–** ಶ್ರುತಿಯಲ್ಲಿರುವ ತನು ಶಬ್ದದ ಸಾಮರ್ಥ್ಯದಿಂದ ಆಕಾರ ಸಹಿತವಾದ ರೂಪದ ದರ್ಶನವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ನಿರಾಕಾರ ವಸ್ತುವಿನ ನಿರ್ವಿಕಲ್ಪಕ ಜ್ಞಾನವು ಮೋಕ್ಷಕ್ಕೆ ಸಾಧನವೆಂಬುದು ನಿರಸ್ತವಾಗುತ್ತದೆ. ಆ ದೇಹವನ್ನು ಸ್ವಾಂ ಎಂದು ಹೇಳಿದ್ದರಿಂದ ಅದು ಸ್ವರೂಪ ದೇಹವೆಂದು ಸಿದ್ಧವಾಗುತ್ತದೆ. ಮೊದಲು ಆವರಿಸಲ್ಪಟ್ಟಿದ್ದ ಆ ದೇಹವನ್ನು ಹರಿಯು ತೋರಿಸುತ್ತಾನೆ ಎಂದು ಹೇಳಿದ್ದರಿಂದ ಆ ದೇಹವು ನಿತ್ಯಸಿದ್ಧವಾಗಿದೆ ಎಂದೂ ತಿಳಿಯುತ್ತದೆ.

**ಭಾವವಿಲಾಸಿನೀ–** ಸ್ವಾಂ ಸ್ವರೂಪಭೂತಾಮ್ । ಸ್ವೀಯಾಮಿತ್ಯರ್ಥಾಂಗೀಕಾರೇ ತತ್ಸಂಬಂಧಿ ಜಡಶರೀರಸ್ಯೈವ ಪ್ರಾಪ್ತೇಃ ತಸ್ಯ ಚ ಪ್ರಕೃತೇ ಭಗವತ್ಯಸಂಭವಾತ್ ಜಡಶರೀರದರ್ಶನಸ್ಯ ಪ್ರಸಾದಫಲತ್ವಾಯೋಗಾಚ್ಚೋಕ್ತ ಏವಾರ್ಥಃ । ಜೀವಸ್ವರೂಪಾಪರೋಕ್ಷಜ್ಞಾನಮಪ್ಯನೇನೈವ ಗ್ರಾಹ್ಯಮ್ । ಮುಕ್ತೌಸ್ವಸ್ವರೂಪಾನಂದಾನುಭವಸ್ಯಾವಶ್ಯಮಪೇಕ್ಷಿತತ್ವಾತ್ ಜೀವಮೌಕ್ತ-ತನೋರಪಿಸ್ವರೂಪಭೂತತನುತ್ವೇನ ಸ್ವಾಂ ತನುಮಿತಿ ಸಾಮಾನ್ಯೋಕ್ತ್ಯೋಭಯೋರಪಿವಕ್ತುಂ ಶಕ್ಯತ್ವಾಚ್ಚ । ಅತ ಏವ ಮುಕ್ತಾಶ್ಚ ತಾದೃಶಾಕಾರಾ ಇತ್ಯುಕ್ತಮ್ । ಅಥವಾ ಭಗವತೋ ಬೃಹಚ್ಛರೀರಮೇವ ತನುಃ । ತದ್ದರ್ಶನಮೇವಾಪರೋಕ್ಷದರ್ಶನಮ್ । ಆತ್ಮಾ ವಾ ಅರೇ ದ್ರಷ್ಟವ್ಯ ಇತಿ ತದ್ದರ್ಶನಸ್ಯೈವ ಶ್ರವಣಾದಿ ಫಲತ್ವಸಂಭವಾತ್ । ವಿಸ್ತೃತತನೋರೇವ ತನು- ಶಬ್ದ-ಮುಖ್ಯಾರ್ಥತ್ವಾಚ್ಚ। ಅತೋಮೂಲೋಕ್ತನಿತ್ಯತ್ವಂ ವ್ಯಾಪ್ತತ್ವಸ್ಯಾಪ್ಯುಪಲಕ್ಷಣಮ್ । ಜೀವಸ್ವರೂಪ-ದರ್ಶನಂ ತು ಚಕ್ಷುಃ ಪ್ರತಿಬಂಧಕನಿವೃತ್ತ್ಯುಕ್ತ್ಯಾರ್ಥಾದೇವ ಲಭ್ಯತೇ । ಜೀವಸ್ಯ ಸಾಕಾರತ್ವಾದಿಕಂ ಚ ಭವಗತ್ಪ್ರತಿಬಿಂಬತ್ವೇನೈವ ಲಭ್ಯತ ಇತಿ ಭಾವೇನೋಕ್ತಂ ತಾದೃಶಾಕಾರಾ ಇತಿ । ಇತಿ ಶ್ರೌತಮತಸ್ಥಿತಿಃ ಇತ್ಯೇವಶ್ರೌತಮತಸ್ಥಿತಿಃ । ಇತೋಽನ್ಯನ್ಮತಮಶ್ರೌತಮಿತ್ಯರ್ಥಃ ॥ ೭೫-೭೭ ॥

**ವಿವರಣೆ –** ಸ್ವಾಂ ಎಂದರೆ ಸ್ವರೂಪಭೂತವಾದ ಎಂದು ಅರ್ಥ. ಅದನ್ನು ಬಿಟ್ಟು ಸ್ವೀಯ ತನಗೆ ಸಂಬಂಧಿಸಿದ್ದು ಎಂಬ ಅರ್ಥವನ್ನು ಸ್ವೀಕರಿಸಿದರೆ ಅಂತಹ ಶರೀರವು ಜಡ ಶರೀರವೇ ಆಗುವುದರಿಂದ ಅದು ಈಶ್ವರನಲ್ಲಿ ಅಸಂಭಾವಿತವಾಗುತ್ತದೆ. ಮತ್ತು ಜಡ ಶರೀರದ ದರ್ಶನವು ಭಗವದನುಗ್ರಹ ಫಲವೂ ಆಗಲಾರದು. ಆದ್ದರಿಂದ ಸ್ವಾಂ ಎಂಬುದಕ್ಕೆ ಸ್ವರೂಪಭೂತವಾದುದು ಎಂದೇ ಅರ್ಥವನ್ನು ಮಾಡಬೇಕು. ಜೀವನಿಗೆ ಮೋಕ್ಷದಲ್ಲಿ ಸ್ವರೂಪಾನಂದಾನಾನುಭವವು ಅವಶ್ಯವಾಗಿ ಅಪೇಕ್ಷಿತವಾದುದರಿಂದ ಜೀವನ ಮುಕ್ತಿಕಾಲೀನ ಶರೀರವೂ ಸಹ ಸ್ವರೂಪಭೂತ ಶರೀರವೇ ಆಗಿರುವುದರಿಂದ ಸ್ವಾಂ ತನೂಂ ಎಂಬ ಶಬ್ದವು ಹರಿಯ ಸ್ವರೂಪಶರೀರವನ್ನು ಮತ್ತು ಮುಕ್ತರ ಸ್ವರೂಪಶರೀರವನ್ನು ಹೇಳುತ್ತದೆ. ಆದ್ದರಿಂದಲೇ ಮುಕ್ತರು ಅಂತಹ ಆಕಾರವನ್ನೇ ಉಳ್ಳವರು ಎಂದು ತಾದೃಶಾಕಾರಾಃ ಎಂಬ ಶಬ್ದದಿಂದ ಗ್ರಂಥಕಾರರು ಹೇಳಿದ್ದಾರೆ. ಅಥವಾ ತನುವಿಸ್ತಾರೇ ಎಂಬ ಧಾತುವಿನಿಂದ ತನು ಎಂದರೆ ಹರಿಯ ಬೃಹತ್ತಾದ ಶರೀರ. ಆ ಶರೀರದ ದರ್ಶನವೇ ಅಪರೋಕ್ಷ ಜ್ಞಾನ. ಏಕೆಂದರೆ ಆತ್ಮಾವಾ ಅರೇ ದ್ರಷ್ಟವ್ಯಃ ಎಂಬ ಶ್ರುತಿಯು ಅಂತಹ ದರ್ಶನವನ್ನೇ ಶ್ರವಣಾದಿಫಲವೆಂದು ಹೇಳುತ್ತದೆ. ವಿಸ್ತೃತವಾದ ಶರೀರವೇ ತನು ಶಬ್ದದ ಮುಖ್ಯಾರ್ಥವಾಗುತ್ತದೆ. ಆದ್ದರಿಂದ ಕಾಲದಿಂದ ವಿಸ್ತೃತವಾದ್ದರಿಂದ ಮೂಲೋಕ್ತವಾದ ನಿತ್ಯತ್ವವು ಉಪಪನ್ನವಾಗುತ್ತದೆ. ಅದರಂತೆ ದೇಶದಿಂದ ವಿಸ್ತೃತತ್ವರೂಪವಾದ ವ್ಯಾಪ್ತತ್ವವನ್ನೂ ತೆಗೆದುಕೊಳ್ಳಬೇಕು. ದರ್ಶನಪ್ರತಿಬಂಧಕ ನಿವೃತ್ತಿಯನ್ನು ಹೇಳಿರುವುದರಿಂದ ಜೀವಸ್ವರೂಪದರ್ಶನವಾದರೂ ಅರ್ಥಾತ್ ಸಿದ್ಧವಾಗುತ್ತದೆ. ಜೀವರು ಭಗವಂತನ ಪ್ರತಿಬಿಂಬರಾದ್ದರಿಂದ ಜೀವರೂ ಸಹ ಭಗವಂತನ ಆಕಾರದಂತಹ ಆಕಾರವನ್ನೇ ಹೊಂದಿರುತ್ತಾರೆ ಎಂದು ತಿಳಿಸಲು

ತಾದೃಶಾಕಾರಾಃ ಎಂದು ಹೇಳಿದ್ದಾರೆ. ಇದು ವೇದಸಮ್ಮತವಾದ ಮತ. ಇದಕ್ಕಿಂತ ಭಿನ್ನವಾದ ಮತವು ವೇದ ವಿರುದ್ಧವಾದುದು ಎಂದು ಅಭಿಪ್ರಾಯ.

**ಗೋಪ್ಯಃ ಕಾಮಾದ್ ಭಯಾತ್ ಕಂಸೋ ದ್ವೇಷಾಚ್ಚೈದ್ಯಾದಯೋ ನೃಪಾಃ ।**
**ಸಂಬಂಧಾದ್ ವೃಷ್ಣಯಃ ಸ್ನೇಹಾದ್ ಯೂಯಂ ಭಕ್ತ್ಯಾವಯಂ ಪ್ರಭೋ ।**
**ಇತಿ ಭಾಗವತೇ ಪ್ರೋಕ್ತಂ ಕಾಮದ್ವೇಷಾದಿಸಾಧನಮ್ ॥ ೭೮ ॥**

**ದ್ವಾರಿ ದ್ವಾರಿ ಹರೇರ್ಲೋಕೇ ಸದಾ ಸರ್ವತ್ರ ಸೇವಿಷು ।**
**ಅನಾದ್ಯನಂತಕಾಲೇಷ್ವಪ್ಯೇವಂ ಕೈಂಕರ್ಯಕರ್ಮಸು ॥ ೭೯ ॥**

**ನಿಬಿಡಜ್ಞಾನವೈರಾಗ್ಯಭಕ್ತ್ಯಾದಿಗುಣಸಂಪದಾ ।**
**ಶಾಪಾದ್ಯುಪಾಧಿಮೂಲೋಽಸಾವೀಷದ್ದ್ವೇಷೋ ಜಯಾದಿಷು ॥ ೮೦ ॥**

**ಅಸ್ವಾಭಾವಿಕದೋಷತ್ವಾನ್ನೈವ ಮೋಕ್ಷನಿರೋಧಕೃತ್ ।**
**ಇತ್ಯೇವ ಮುಕ್ತಿದತ್ವೇನ ಕೀರ್ತ್ಯತೇ ನಾರದಾದಿಭಿಃ ॥ ೮೧ ॥**

**ಅರ್ಥ –** ಗೋಪ್ಯಃ= ಗೋಪಿಯರು, ಕಾಮಾತ್= ಕಾಮದಿಂದಲೂ, ಕಂಸಃ= ಕಂಸನು, ಭಯಾತ್= ಭಯದಿಂದಲೂ, ಚೈದ್ಯಾದಯಃ ನೃಪಾಃ= ಶಿಶುಪಾಲ ಮೊದಲಾದವರು, ದ್ವೇಷಾತ್= ದ್ವೇಷದಿಂದಲೂ, ವೃಷ್ಣಯಃ= ವೃಷ್ಣಿಗಳು, ಸಂಬಂಧಾತ್= ಸಂಬಂಧದಿಂದಲೂ, ಯೂಯಂ= ಧರ್ಮರಾಜ ಮೊದಲಾದ ನೀವು, ಸ್ನೇಹಾತ್= ಸ್ನೇಹದಿಂದಲೂ, ವಯಂ= ನಾರದ ಮೊದಲಾದ ನಾವು, ಭಕ್ತ್ಯಾ= ಭಕ್ತಿಯಿಂದಲೂ (ಹರಿಯ ಉಪಾಸನೆಯನ್ನು ಮಾಡಿ ಅವನ ಅನುಗ್ರಹವನ್ನು ಪಡೆದಿದ್ದೇವೆ). ಇತಿ= ಎಂದು, ಭಾಗವತೇ= ಭಾಗವತದಲ್ಲಿ, ಪ್ರೋಕ್ತಂ= ಹೇಳಲ್ಪಟ್ಟ, ಕಾಮದ್ವೇಷಾದಿಸಾಧನಂ= ಕಾಮ, ದ್ವೇಷ ಮೊದಲಾದವುಗಳು ಮೋಕ್ಷಕ್ಕೆ ಸಾಧನವೆಂಬುದು, ಹರೇರ್ಲೋಕೇ= ಹರಿಯ ಲೋಕದಲ್ಲಿ, ದ್ವಾರಿ ದ್ವಾರಿ= ಪ್ರತಿಯೊಂದು ಮನೆಯಲ್ಲಿಯೂ, ಸದಾ ಸರ್ವತ್ರ= ಯಾವಾಗಲೂ ಎಲ್ಲ ಕಡೆಯಲ್ಲಿಯೂ, ಸೇವಿಷು= ಹರಿಯ ಸೇವೆಯನ್ನು ಮಾಡುವ, ಅನಾದ್ಯನಂತಕಾಲೇಷ್ವಪಿ= ಅನಾದ್ಯನಂತ ಕಾಲದಲ್ಲಿಯೂ, ಏವಂ= ಹೀಗೆಯೇ, ಕೈಂಕರ್ಯಕರ್ಮಸು= ಕೈಂಕರ್ಯ ಕರ್ಮವನ್ನು ಮಾಡತಕ್ಕಂತಹ, ಜಯಾದಿಷು= ಜಯ ವಿಜಯ ಮೊದಲಾದವರಲ್ಲಿ, ನಿಬಿಡಜ್ಞಾನವೈರಾಗ್ಯ ಭಕ್ತ್ಯಾದಿಗುಣಸಂಪದಾ= ಬಹುತರವಾದ ಜ್ಞಾನ, ವೈರಾಗ್ಯ, ಭಕ್ತಿ ಮೊದಲಾದ ಗುಣಸಂಪತ್ತು ಇರುವುದರಿಂದ, ಶಾಪಾದ್ಯುಪಾಧಿ ಮೂಲಃ= ಶಾಪ ಮೊದಲಾದ ಉಪಾಧಿಯಿಂದ ಉಂಟಾದ, ಅಸೌ ಈಷದ್ದ್ವೇಷಃ= ಈ ಅಲ್ಪದ್ವೇಷವು, ಅಸ್ವಾಭಾವಿಕ ದೋಷತ್ವಾತ್= ಸ್ವಾಭಾವಿಕವಲ್ಲದ ದೋಷವಾದ್ದರಿಂದ, ನೈವ ಮೋಕ್ಷನಿರೋಧಕೃತ್= ಮೋಕ್ಷವನ್ನು ಪ್ರತಿಬಂಧಿಸುವಂತಹದ್ದಲ್ಲ, ಇತ್ಯೇವ= ಎನ್ನುವ

ಅಭಿಪ್ರಾಯದಲ್ಲೇ, ನಾರದಾದಿಭಿಃ= ನಾರದ ಮೊದಲಾದ ಋಷಿಗಳಿಂದ, ಮುಕ್ತಿದತ್ವೇನ= ದ್ವೇಷವು ಮೋಕ್ಷಸಾಧನವೆಂದು, ಕೀರ್ತ್ಯತೇ= ಹೇಳಲ್ಪಡುತ್ತದೆ.

**ಅನುವಾದ** – ಗೋಪಿಯರು ಕಾಮದಿಂದಲೂ, ಕಂಸನು ಭಯದಿಂದಲೂ, ಶಿಶುಪಾಲ ಮೊದಲಾದ ರಾಜರು ದ್ವೇಷದಿಂದಲೂ, ವೃಷ್ಣಿಗಳು ಸಂಬಂಧದಿಂದಲೂ, ಧರ್ಮರಾಜಾದಿಗಳು ಸ್ನೇಹದಿಂದಲೂ, ನಾರದಾದಿ ಋಷಿಗಳು ಭಕ್ತಿಯಿಂದಲೂ ಹರಿಯ ಅನುಗ್ರಹದಿಂದ ಮೋಕ್ಷವನ್ನು ಪಡೆದರು ಎಂಬುದಾಗಿ ಭಾಗವತದಲ್ಲಿ ಹೇಳಲ್ಪಟ್ಟಿರುವ ಕಾಮದ್ವೇಷಾದಿಗಳಿಗೆ ಮೋಕ್ಷ ಸಾಧನತ್ವವು ಹರಿಯ ಲೋಕದಲ್ಲಿ ಯಾವಾಗಲೂ ಎಲ್ಲ ಕಡೆಗಳಲ್ಲಿಯೂ ಮನೆ ಮನೆಗಳಲ್ಲಿ ಹರಿಯ ಸೇವೆಯನ್ನು ಮಾಡುವ ಅನಾದ್ಯನಂತ ಕಾಲದಲ್ಲಿಯೂ ಸಹ ಹೀಗೆಯೇ ಕೈಂಕರ್ಯದಲ್ಲಿ ನಿರತರಾದ ಜಯ-ವಿಜಯ ಮೊದಲಾದವರಲ್ಲಿ, ಬಹುತರವಾದ ಜ್ಞಾನಭಕ್ತ್ಯಾದಿ ವೈರಾಗ್ಯಗಳನ್ನು ಹೊಂದಿರುವ ಅವರು ಶಾಪಾದಿ ದೋಷ ಮೂಲಕವಾಗಿ ಮಾಡುವ ಈ ಅಲ್ಪದ್ವೇಷವು ಸ್ವಾಭಾವಿಕವಲ್ಲವಾದ ಕಾರಣ ಅದು ಮೋಕ್ಷಕ್ಕೆ ಪ್ರತಿಬಂಧಕವಾಗುವುದಿಲ್ಲ ಎಂಬ ಅಭಿಪ್ರಾಯದಿಂದಲೇ ನಾರದಾದಿಗಳು ಅದನ್ನು ಮೋಕ್ಷಸಾಧನವೆಂದು ಹೇಳಿದ್ದಾರೆ.

**ಭಾವವಿಲಾಸಿನೀ**–ನನು ಶ್ರವಣಾದಿಜನಿತಭಗವದಪರೋಕ್ಷಜ್ಞಾನಾದೇವ ಮೋಕ್ಷ ಇತ್ಯುಕ್ತಮ್। ಕಾ ತರ್ಹಿ ಕಾಮಕ್ರೋಧಾದೀನಾಂ ಮೋಕ್ಷದಾಯಕತ್ವಪ್ರತಿಪಾದಕಭಗವತವಚನಾನಾಂ ಗತಿರಿತಿ ಚೇತ್ । ನ। ತತ್ರೈವ ''ಕಾಮಂ ದಹಂತಿ ಕೃತಿನೋ ನನು ರೋಷದೃಷ್ಟ್ಯಾ ರೋಷಂ ದಹಂತಮುತ ತೇನ ದಹಂತ್ಯಸಹ್ಯಮ್ । ಸೋಽಯಂ ಯದಂತರಮಲಂ ನಿವಿಶಂಬಿಭೇತಿ ಕಾಮಃ ಕಥಂ ನು ಪುನರಸ್ಯ ಮನಃಶ್ರಯೀತ'' ಇತ್ಯಾದಿವಚನೈಃ ಕಾಮಕ್ರೋಧಾದೀನಾಂ ದೋಷತ್ವಸ್ಯ ಕೀರ್ತ-ನಾತ್ । ಲೋಕೇಽಪಿ ಕಾಮಕ್ರೋಧಾದೀನಾಂ ಶಿಷ್ಟೈರ್ದೋಷತ್ವೇನಪರಿಗಣನಾನ್ನಕಾಪಿಗತಿಃ । ಹರಿಗುರುಭಕ್ತ್ಯಾದೇಶ್ಚ ಲೋಕೇ ವೇದೇ ಪುರಾಣಾದೌ ಚ ಕ್ವಾಪಿ ದೋಷತಯಾಽಕಥನೇನ ಗುಣತಯೈವ ಕಥನೇನ ಚ ಮಾನಾಂತರಾವಿರುದ್ಧಮಾನಪ್ರತಿಪಾದಿತಾನಾಂ ಶ್ರವಣಮನನಾದೀ-ನಾಮೇವ ಸಾಧನತ್ವೌಚಿತ್ಯಾತ್ । ನಚ ವಾಚ್ಯಂ ಲೌಕಿಕಕಾಮಾದೇರೇವ ದೋಷತ್ವಮ್ । ನ ಭಗವದ್ವಿಷಯಕಕಾಮಾದೇರಿತಿ । ರಾಮಕಾಮುಕಶೂರ್ಪನಖ್ಯಾಃ ಕರ್ಣನಾಸಾಚ್ಛೇದಯೋ-ರ್ನಿಷ್ಕಾರಣತ್ವಪ್ರಸಂಗಾತ್ । ಏಕಪತ್ನೀವ್ರತತ್ವಾದೇವ ತದನಂಗೀಕಾರೋ ನ ತು ಕಾಮಸ್ಯ-ದೋಷತ್ವಾದಿತಿ ಚೇತ್ । ನ । ಕಾಮಸ್ಯ ದೋಷತಯಾಽಪರಾಧತ್ವಾಭಾವೇ ತಚ್ಛಿಕ್ಷಣಾ-ಯೋಗಾತ್ । ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಾಮಿತಿ ಶ್ರುತ್ಯಾ ತತ್ತತ್ಕೃತ-ಪಾಪೇನೈವ ಭಗವತಃ ಶಿಕ್ಷಕತ್ವಶ್ರವಣಾತ್ । ಪಾಪಾಂತರಸ್ಯ ನಿಮಿತ್ತತ್ವಕಲ್ಪನೇ ದೃಷ್ಟಹಾನ್ಯದೃಷ್ಟ-ಕಲ್ಪನಯೋಃ ಪ್ರಸಂಗಾತ್ । ಷೋಡಷಸಹಸ್ರಪತ್ನೀಪತೇಸ್ತಸ್ಯ ತ್ವದುಕ್ತನಿಯಮಾಭಾವಾಚ್ಚ । ಉಭಯೋರವ್ಯಾಪ್ತವಾಕ್ಯತ್ವೇನಾಪ್ರಾಮಾಣ್ಯಾಯೋಗಾದೇಕಸ್ಯಾರ್ಥಾಂತರಂ ವಾಚ್ಯಮಿತಿ ಚೇತ್ ತರ್ಹಿ ಸಂಭವದರ್ಥಾಂತಸ್ಯ ದೋಷಸ್ಯ ಗುಣತ್ವಪ್ರತಿಪಾದಕತಯಾ ಸ್ವತೋಽಪಿ

ವಿರುದ್ಧಸ್ಯ ಪೂರ್ವೋತ್ತರವಿರುದ್ಧಸ್ಯ ಸಯುಕ್ತಿಕನಿರವಕಾಶಬಹುತರಾಸ್ಮದ್ವಾಕ್ಯವಿರುದ್ಧಸ್ಯ ಚ ತ್ವದೀಯವಾಕ್ಯಸಮುದಾಯಸ್ಯೈವಾರ್ಥಾಂತರಂ ವಾಚ್ಯಮಿತಿ ಭಾವೇನಾಹ – **ಗೋಷ್ಠ ಇತಿ** ॥ ಇತಿ ಭಾಗವತೇ ಪ್ರೋಕ್ತಂಕಾಮದ್ವೇಷಾದಿಸಾಧನಮಿತ್ಯಸ್ಯ ಕೀರ್ತ್ಯತ ಇತ್ಯನೇನ ಸಂಬಂಧಃ । ಋಷೇರ್ನಾರದಸ್ಯ । ಋಷೇರಿತ್ಯನೇನ ಭಗವದ್ಭಜಕತಾಪಸಕುಲೋತ್ಪನ್ನಸ್ಯ ಪರಮ- ವೈಷ್ಣವಸ್ಯ ಕೃಷ್ಣದ್ವೇಷಗುಣೀಕರಣಮೇವ ನ ಹಾರ್ದಮ್ । ಕಿಂತೂಕ್ತ ಏವ ಭಾವ ಇತಿ ಸೂಚಯತಿ ॥ ೭೮-೮೨ ॥

**ವಿವರಣೆ** – ಶ್ರವಣಾದಿಜನಿತಭಗವದಪರೋಕ್ಷ ಜ್ಞಾನದಿಂದಲೇ ಮೋಕ್ಷವೆಂದು ಅಂಗೀಕರಿಸಿದರೆ ಕಾಮದ್ವೇಷಾದಿಗಳಿಂದ ಮೋಕ್ಷವನ್ನು ಹೇಳುವ ಭಾಗವತ ವಚನಗಳಿಗೆ ಏನು ಗತಿ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಕೊಡುತ್ತಾರೆ. ಕಾಮದ್ವೇಷಾದಿಗಳನ್ನು ಭಾಗವತವು ಎಂದೂ ಗುಣವೆಂದು ಕೀರ್ತನೆ ಮಾಡಿಲ್ಲ. ಏಕೆಂದರೆ 'ಕಾಮಂ ದಹಂತಿ ಕೃತಿನೋನನುರೋಷದೃಷ್ಟ್ಯಾ ರೋಷಂ ದಹಂತಮಪಿತೇ ನ ದಹಂತ್ಯಜಸ್ರಂ । ಸೋಯಂ ಯದಂತರಮಲಂ ನಿವಿಶನ್ ಬಿಭೇತಿ ಕಾಮಃ ಕಥಂ ನು ಪುನರಸ್ಯ ಮನಃ ಶ್ರಯೇತ್' ಇತ್ಯಾದಿ ವಚನಗಳು ಕಾಮ-ಕ್ರೋಧಗಳನ್ನು ದೋಷವೆಂದೇ ಕೀರ್ತನೆ ಮಾಡಿದೆ. ಲೋಕದಲ್ಲಿಯೂ ಸಹ ಶಿಷ್ಟರು ಕಾಮ-ದ್ವೇಷಾದಿಗಳನ್ನು ದೋಷಗಳೆಂದೇ ಪರಿಗಣಿಸುತ್ತಾರೆ. ಹರಿಭಕ್ತ್ಯಾದಿಗಳು ಲೋಕದಲ್ಲೇ ಆಗಲಿ, ವೇದದಲ್ಲಾಗಲೀ ಅಥವಾ ಪುರಾಣಗಳಲ್ಲಾಗಲೀ ಎಂದೂ ದೋಷವೆಂದು ಹೇಳಲ್ಪಟ್ಟಿಲ್ಲ, ಗುಣವೆಂದೇ ಹೇಳಲ್ಪಟ್ಟಿದೆ. ಆದ್ದರಿಂದ ಶ್ರವಣ ಮನನ ಭಕ್ತ್ಯಾದಿಗಳಿಗೆ ಮೋಕ್ಷಸಾಧನತ್ವವನ್ನು ಹೇಳಬೇಕು. ಲೌಕಿಕಕಾಮವು ದೋಷವಾಗುತ್ತದೆ, ಭಗವದ್ವಿಷಯ ಕಾಮವು ದೋಷವಾಗುವುದಿಲ್ಲ ಎಂಬ ಶಂಕೆಯೂ ಸರಿಯಲ್ಲ. ರಾಮನನ್ನು ಕಾಮಿಸಿದ ಶೂರ್ಪಣಖಿಗೆ ಕರ್ಣನಾಸಾಚ್ಛೇದವಾಯಿತಷ್ಟೆ? ರಾಮನ ಕಾಮವು ದೋಷವಾಗದಿದ್ದರೆ ಅವಳ ಈ ಶಿಕ್ಷೆಗೆ ಏನು ಕಾರಣ? ರಾಮನು ಏಕಪತ್ನೀವ್ರತಸ್ಥನಾದ್ದರಿಂದ ಈ ಶಿಕ್ಷೆಯಾಯಿತು. ರಾಮನನ್ನು ಕಾಮಿಸಿದ್ದರಿಂದಲ್ಲ ಎಂಬ ಸಮಾಧಾನವು ಸರಿಯಲ್ಲ. ಕಾಮವು ದೋಷವಾಗಿ ಅಪರಾಧವಾಗದಿದ್ದರೆ ಶಿಕ್ಷೆಗೆ ಕಾರಣವೇ ಇಲ್ಲ. ಪುಣ್ಯೇನ ಪುಣ್ಯಂ ಲೋಕಂ ನಯತಿ ಎಂಬ ಶ್ರುತಿಯು ಹರಿಯು ಜೀವರು ಮಾಡಿದ ಪಾಪಗಳನ್ನು ನಿಮಿತ್ತೀಕರಿಸಿ ಅವರಿಗೆ ಶಿಕ್ಷೆಯನ್ನು ಕೊಡುತ್ತಾನೆ ಎಂದು ಹೇಳುವುದರಿಂದ ಆ ಕಾಮವು ಪಾಪವೆಂದೇ ಅಂಗೀಕರಿಸಬೇಕು. ಬಹುಪತ್ನೀವಲ್ಲಭನಾದ ಹರಿಗೆ ಏಕಪತ್ನೀವ್ರತಸ್ಥವೆಂಬ ನಿಯಮವೂ ಕೂಡುವುದಿಲ್ಲ. ದ್ವೇಷವು ಮೋಕ್ಷಸಾಧನವಲ್ಲವೆಂದು ಹೇಳುವ ಎರಡು ವಾಕ್ಯಗಳೂ ಸಹ ಆಪ್ತವಾಕ್ಯವೇ ಆಗಿರುವುದರಿಂದ ಯಾವುದಕ್ಕೂ ಅಪ್ರಾಮಾಣ್ಯವನ್ನು ಹೇಳುವುದು ಸಾಧ್ಯವಿಲ್ಲ. ಆದ್ದರಿಂದ ಒಂದು ವಾಕ್ಯಕ್ಕೆ ಅರ್ಥಾಂತರವನ್ನು ಮಾಡಬೇಕು. ಹಾಗಾದರೆ ದ್ವೇಷವನ್ನು ಗುಣವೆಂದು ಹೇಳುವ ಎಂದರೆ ದ್ವೇಷಕ್ಕೆ ಮೋಕ್ಷಸಾಧನತ್ವವನ್ನು ಹೇಳುವ ವಾಕ್ಯವೇ ದೋಷವನ್ನು ಗುಣವೆಂದು ಹೇಳುವುದರಿಂದ ಸ್ವತಃ ವಿರುದ್ಧವಾದ್ದರಿಂದ ಮತ್ತು

ಪೂರ್ವೋತ್ತರ ವಿರುದ್ಧವಾದ್ದರಿಂದ, ದ್ವೇಷಕ್ಕೆ ಮೋಕ್ಷಸಾಧನತ್ವವು ಇಲ್ಲವೆಂದು ಹೇಳುವ ವಾಕ್ಯಗಳು ಬಹುತರವಾಗಿ ಮತ್ತು ನಿರವಕಾಶವಾಗಿ ಇರುವುದರಿಂದ ದ್ವೇಷಕ್ಕೆ ಮೋಕ್ಷಸಾಧನವಿಲ್ಲವೆಂದೇ ನಿಶ್ಚಯಿಸಿ ದ್ವೇಷದಿಂದ ಮೋಕ್ಷವನ್ನು ಹೇಳುವ ವಾಕ್ಯಗಳು ಜಯಾದಿಗಳಲ್ಲಿದ್ದಂತೆ ಅಸ್ವಾಭಾವಿಕವಾದ ದ್ವೇಷದಿಂದ ಕೂಡಿದ ಬಹುತರವಾದ ಭಕ್ತಿಯಿಂದಲೇ ಮೋಕ್ಷಪ್ರಾಪ್ತಿಯನ್ನು ಹೇಳುತ್ತವೆ ಎಂದು ಅರ್ಥವನ್ನು ಮಾಡಬೇಕು. 78ನೇ ಶ್ಲೋಕದಲ್ಲಿರುವ ಕಾಮದ್ವೇಷಾದಿ ಸಾಧನಂ ಎಂಬುದಕ್ಕೆ 81ನೆಯ ಶ್ಲೋಕದಲ್ಲಿರುವ ಕೀರ್ತ್ಯತೇ ಎಂಬುದರಿಂದ ಅನ್ವಯ ಮಾಡಬೇಕು. ನಾರದ ಋಷಿಗಳಿಂದ ಎಂದು ಹೇಳಿರುವುದರಿಂದ ಹರಿಯನ್ನು ಭಜಿಸುವ ತಾಪಸ ಕುಲದಲ್ಲಿ ಜನಿಸಿ, ಪರಮವೈಷ್ಣವರಾದ ನಾರದರು ಕೃಷ್ಣದ್ವೇಷರೂಪವಾದ ದೋಷವನ್ನು ಎಂದೂ ಗುಣವೆಂದು ಹೇಳಲಾರರು ಎಂಬುದನ್ನು ಮನಸ್ಸಿನಲ್ಲಿಡಬೇಕು ಎಂದು ಅಭಿಪ್ರಾಯ.

**ಭೃತ್ಯಾಪಹಾರಸಹನಶೀಲತ್ವಸ್ತುತಯೇ ಹರೇಃ ।**
**ಕೇವಲದ್ವೇಷತೋ ಮೋಕ್ಷ ಇತಿ ನರ್ಷೇರ್ಮನೋಗತಮ್ ॥ ೮೨ ॥**

**ಅರ್ಥ** – ಹರೇಃ= ಹರಿಯ, ಭೃತ್ಯಾಪಹಾರಸಹನಶೀಲತ್ವಸ್ತುತಯೇ= ಭಕ್ತರ ಅಪರಾಧ ಸಹಿಷ್ಣುತ್ವ ಸ್ವಭಾವವನ್ನು ಸ್ತೋತ್ರಮಾಡುವುದಕ್ಕಾಗಿ, ಕೇವಲದ್ವೇಷತಃ= ಕೇವಲ ದ್ವೇಷದಿಂದ, ಮೋಕ್ಷಃ ಇತಿ= ಮೋಕ್ಷವೆಂಬುದು, ಋಷೇಃ= ಋಷಿಗಳಾದ ನಾರದರಿಗೆ, ಮನೋಗತಂ ನ= ಅಭಿಪ್ರಾಯವಲ್ಲ.

**ಅನುವಾದ** – **ಹರಿಯ ಭಕ್ತಾಪರಾಧಸಹಿಷ್ಣುತ್ವ ಗುಣವನ್ನು ಸ್ತೋತ್ರ ಮಾಡಲು ಹೊರಟ ಋಷಿಗಳಾದ ನಾರದರಿಗೆ ಕೇವಲ ದ್ವೇಷದಿಂದ ಮೋಕ್ಷವುಂಟಾಗುತ್ತದೆ ಎಂಬುದು ಅಭಿಪ್ರಾಯವಲ್ಲ.**

**ಕತಮೋಽಪಿ ನ ವೇನಸ್ಯ ಪಂಚಾನಾಂ ಪುರುಷಂ ಪ್ರತಿ ।**
**ಇತ್ಯುತ್ತರಶ್ಲೋಕ ಏವ ವೇನೇ ಸಾಧನಪಂಚಕಮ್ ।**
**ಯನ್ನೇತ್ಯಾಹ ತತೋ ದ್ವೇಷೋ ದ್ವೇಷಮಾತ್ರಂ ಕಥಂ ಭವೇತ್ ॥ ೮೩ ॥**

**ಅರ್ಥ** – ಪುರುಷಂ ಪ್ರತಿ= ಹರಿಯನ್ನು ಕುರಿತು, ಪಂಚಾನಾಂ= ಐದು ಸಾಧನಗಳ ಮಧ್ಯದಲ್ಲಿ, ವೇನಸ್ಯ= ವೇನನಿಗೆ, ಕತಮೋಽಪಿ ನ= ಯಾವ ಸಾಧನವೂ ಇರಲಿಲ್ಲ, ಇತಿ= ಎಂಬುದಾಗಿ, ಉತ್ತರಶ್ಲೋಕ ಏವ= ಮುಂದಿನ ಶ್ಲೋಕದಲ್ಲಿಯೇ, ಸಾಧನಪಂಚಕಂ= ಹರಿಯ ಅನುಗ್ರಹಕ್ಕೆ ಸಾಧಕವಾದ ಈ ಐದು ಗುಣಗಳು, ಯತ್= ಯಾವ ಕಾರಣದಿಂದ, ನೇತ್ಯಾಹ= ಇಲ್ಲವೆಂದು ಹೇಳಿದ್ದಾರೆಯೋ, ತತಃ= ಆದ್ದರಿಂದ, ದ್ವೇಷಃ= ಆ ಐದರ ಮಧ್ಯದಲ್ಲಿ ಹೇಳಲ್ಪಟ್ಟ ದ್ವೇಷವು, ದ್ವೇಷಮಾತ್ರಂ= ಶುದ್ಧದ್ವೇಷ ಎಂದರೆ ಭಕ್ತಿಯಿಂದ ಅಮಿಶ್ರಿತವಾದ ದ್ವೇಷವಾಗಿ, ಕಥಂ ಭವೇತ್= ಹೇಗೆ ಆಗುತ್ತದೆ.

**ಅನುವಾದ** – ಹರಿಯನ್ನು ಕುರಿತು ವೇನನಿಗೆ ಕಾಮಾದಿ ಪಂಚಸಾಧನಗಳಲ್ಲಿ ಯಾವುದೂ ಇರಲಿಲ್ಲ ಎಂದು ಉತ್ತರ ಶ್ಲೋಕದಲ್ಲಿಯೇ ಹೇಳಿರುವ ಕಾರಣ ಈ ಸಾಧನ ಪಂಚಕದಲ್ಲಿ ಸೇರಿದ ದ್ವೇಷವು ಹೇಗೆ ಕೇವಲ ದ್ವೇಷವಾಗುತ್ತದೆ?

**ಭಾವವಿಲಾಸಿನೀ**– ಇತ್ಯುತ್ತರಶ್ಲೋಕೇ ಪಂಚಾನಾಂ ವೇನೇ ಭಕ್ತ್ಯಭಾವಸ್ಯ ಸ್ವತಃ ಸಿದ್ಧತ್ವಾ-ತ್ತದತಿ-ರಿಕ್ತಕಾಮಾದಿಪಂಚೋಪಾಯಾನಾಂ ಮಧ್ಯೇ ಕತಮೋऽಪಿ ಏಕೋऽಪಿ ನೇತ್ಯರ್ಥಪ್ರತಿ-ಪಾದಕೋತ್ತರಶ್ಲೋಕೇ । ಯತ್ ಯಸ್ಮಾತ್ । ದ್ವೇಷಃ ದ್ವೇಷಾದಿತ್ಯತ್ರೋಕ್ತದ್ವೇಷಃ । ದ್ವೇಷಮಾತ್ರಂ ಸೇವಾದಿಗುಣಸಾಹಿತ್ಯರಹಿತಸಂಪೂರ್ಣದ್ವೇಷ ಇತ್ಯರ್ಥಃ ॥ ೮೩ ॥

**ವಿವರಣೆ** – ಹಿಂದಿನ ಶ್ಲೋಕಗಳಲ್ಲಿ ಭಕ್ತಿಯನ್ನು ಸೇರಿಸಿ ಆರು ಸಾಧನವನ್ನು ಹೇಳಿದ್ದಾರೆ. ವೇನನಿಗೆ ಭಕ್ತಿ ಇಲ್ಲವೆಂದು ಸ್ವತಃ ಸಿದ್ಧವಾದುದರಿಂದ ಕತಮೋಪಿ ಎನ್ನುವ ಶ್ಲೋಕದಲ್ಲಿ ಉಳಿದ ಐದು ಸಾಧನಗಳಲ್ಲಿಯೂ ಯಾವುದೂ ಇರಲಿಲ್ಲ ಎಂದು ಹೇಳಿದ್ದಾರೆ. ಆದ್ದರಿಂದ ಸಾಧನವೆಂದು ಹೇಳಲ್ಪಟ್ಟ ದ್ವೇಷವು ಭಕ್ತಿಪೂರ್ವಕ ಸೇವಾಸಹಿತವಾದ ಅಲ್ಪದ್ವೇಷವೇ ಹೊರತು ಭಕ್ತಿಯ ಸ್ಪರ್ಶವಿಲ್ಲದ ಮಹಾದ್ವೇಷವೆಂದು ಅರ್ಥವಲ್ಲ.

**ಪೂರ್ಣೋ ಹಿ ಭಗವದ್ದ್ವೇಷೋ ವೇನೇ ತೇನೈವ ಕೀರ್ತಿತಃ ।**
**ಕಥಂ ಪುನರ್ನಿಷೇಧೋ ಹಿ ತಸ್ಯೈವ ಸ್ಯಾದ್ವಿದೋ ಮುನೇಃ ॥ ೮೪ ॥**

**ಅರ್ಥ** – ತೇನೈವ= ಆ ನಾರದರಿಂದಲೇ, ವೇನೇ= ವೇನನಲ್ಲಿ, ಪೂರ್ಣಃ= ಪೂರ್ಣವಾದ, ಭಗವದ್ದ್ವೇಷಃ= ಭಗವದ್ದ್ವೇಷವು, ಕೀರ್ತಿತಃ ಹಿ= ಹೇಳಲ್ಪಟ್ಟಿದೆಯಷ್ಟೆ, ವಿದಃ= ಜ್ಞಾನಿಗಳಾದ, ಮುನೇಃ= ನಾರದ ಮುನಿಗಳಿಗೆ, ಪುನಃ= ಪುನಃ, ತಸ್ಯೈವ= ಆ ಪೂರ್ಣ ದ್ವೇಷದ, ನಿಷೇಧಃ= ನಿಷೇಧವು, ಕಥಂ ಹಿ ಸ್ಯಾತ್= ಹೇಗೆ ತಾನೆ ಉಪಪನ್ನವಾಗುತ್ತದೆ.

**ಅನುವಾದ** – ನಾರದರೇ ವೇನನಿಗೆ ಪೂರ್ಣವಾದ ಭಗವದ್ದ್ವೇಷವಿದೆ ಎಂದು ನಿರೂಪಿಸಿದ್ದಾರೆ. ಜ್ಞಾನಿಗಳಾದ ಋಷಿಗಳಾದ ಅವರು ಪುನಃ ಅದನ್ನೇ ಹೇಗೆ ನಿಷೇಧ ಮಾಡುತ್ತಾರೆ?

**ಭಾವವಿಲಾಸಿನೀ**– ತೇನೈವ ನಾರದೇನೈವ । ತಸ್ಯ ಸ್ವೇನೈವೋಕ್ತದ್ವೇಷಸ್ಯ । ವಿದಃ ಜ್ಞಾನಿನಃ ॥೮೪॥

**ವಿವರಣೆ** – ಕತಮೋಪಿ ನ ವೇನಸ್ಯ ಎಂಬ ಶ್ಲೋಕದಲ್ಲಿ ನಿಷಿದ್ಧವಾದ ದ್ವೇಷವು ದ್ವೇಷಾಚ್ಚೈದ್ಯಾದಯೋನೃಪಾಃ ಎಂಬಲ್ಲಿ ಹೇಳಿದ ದ್ವೇಷವೇ ಆಗಿದ್ದರೆ, ಆ ದ್ವೇಷವು ಮೋಕ್ಷಸಾಧನವೇ ಆದುದರಿಂದ ಪುನಃ ಅದನ್ನು ಹೇಗೆ ನಿರಾಕರಣೆ ಮಾಡುತ್ತಾರೆ ಎಂದು ತಾತ್ಪರ್ಯ.

**ಭಗವನ್ನಿಂದಯಾ ವೇನೋ ದ್ವಿಜೈಸ್ತಮಸಿ ಪಾತಿತಃ ।**
**ಇತಿ ನಿಂದಾಖ್ಯವಿದ್ವೇಷಸ್ತಮೋಹೇತುರುದೀರಿತಃ ॥ ೮೫ ॥**

**ಇದಾನೀಂ ಮೋಕ್ಷದತ್ವಂ ಚ ಕಥಂ ತಸ್ಯೈವ ಕೀರ್ತಯೇತ್ ।**
**ತ್ರಿಕಾಲದರ್ಶೀ ಸ ಮುನಿಃ ಕಿಂ ತಾತ್ಕಾಲಿಕದೃಕ್ಚ ನ ॥ ೮೬ ॥**

**ಅರ್ಥ –** ವೇನಃ= ವೇನನು, ಭಗವನ್ನಿಂದಯಾ= ಭಗವಂತನನ್ನು ನಿಂದನೆ ಮಾಡಿದ ಕಾರಣದಿಂದ, ದ್ವಿಜೈಃ= ಬ್ರಾಹ್ಮಣರಿಂದ, ತಮಸಿ= ತಮಸ್ಸಿನಲ್ಲಿ, ಪಾತಿತಃ= ಬೀಳಿಸಲ್ಪಟ್ಟನು, ಇತಿ= ಎಂದು, ನಿಂದಾಖ್ಯವಿದ್ವೇಷಃ= ನಿಂದಾರೂಪವಾದ ದ್ವೇಷವು, ತಮೋಹೇತುಃ= ತಮಸ್ಸಿಗೆ ಕಾರಣವೆಂದು, ಉದೀರಿತಃ= ಹೇಳಲ್ಪಟ್ಟಿದೆ, ಇದಾನೀಂ= ಈಗ, ತಸ್ಯೈವ= ಅದೇ ದ್ವೇಷಕ್ಕೆ, ಮೋಕ್ಷದತ್ತ್ವಂ ಚ= ಮೋಕ್ಷದಾಯಕತ್ವವನ್ನೂ ಕೂಡ, ಕಥಂ ಕೀರ್ತಯೇತ್= ನಾರದರು ಹೇಗೆ ಹೇಳುತ್ತಾರೆ, ತ್ರಿಕಾಲದರ್ಶೀ= ತ್ರಿಕಾಲದರ್ಶಿಗಳಾದ, ಸಃ ಮುನಿಃ= ಆ ನಾರದರು, ತಾತ್ಕಾಲಿಕ ದೃಕ್ ಚ= ಆಕಾಲದಲ್ಲಿಯೇ ಹೇಳಿದ ವಾಕ್ಯದ ಜ್ಞಾನವುಳ್ಳವರೂ ಸಹ, ಕಿಂ ನ= ಆಗುವುದಿಲ್ಲವೆ?

**ಅನುವಾದ –** ಭಗವಂತನನ್ನು ನಿಂದಿಸಿದ ಕಾರಣದಿಂದ ಬ್ರಾಹ್ಮಣರಿಂದ ವೇನನು ತಮಸ್ಸಿನಲ್ಲಿ ಬೀಳಿಸಲ್ಪಟ್ಟನು ಎಂದು ಭಗವನ್ನಿಂದಾರೂಪವಾದ ದ್ವೇಷವು ತಮಸ್ಸಿಗೆ ಕಾರಣವೆಂದು ಹೇಳಲ್ಪಟ್ಟಿದೆ. ಈಗ ಅದೇ ದ್ವೇಷವು ಮೋಕ್ಷಕ್ಕೆ ಕಾರಣವೆಂದು ಹೇಳಿದರೆ ತ್ರಿಕಾಲ ಜ್ಞಾನಿಗಳಾದ ನಾರದರಿಗೆ ಅದೇ ಪ್ರಕರಣದಲ್ಲಿ (ಗ್ರಂಥದಲ್ಲಿ) ಹೇಳಿದ ವಾಕ್ಯದ ಜ್ಞಾನವು ಇಲ್ಲವೆಂದಾಗುತ್ತದೆ. ಇದು ಅನುಪಪನ್ನವಾದುದು.

**ಭಾವವಿಲಾಸಿನೀ–** ತದೇವವಾಕ್ಯಂ ಪಠತಿ – **ಭಗವದಿತಿ** ॥ ಇತಿ ವಾಕ್ಯೇ ॥ ೮೫ ॥ ಕೀರ್ತಯೇದಿತ್ಯುಪಲಕ್ಷಣಂ । ಕಥಂ ನಿಷೇಧೇಚ್ಚೇತ್ಯಪಿ ದ್ರಷ್ಟವ್ಯಮ್ ॥ ೮೬ ॥

**ಅತೋ ಗ್ರಾಂಥಿಕಮುದ್ರಾಜ್ಞೋ ನೈವಂ ವ್ಯಾಖ್ಯಾತುಮರ್ಹತಿ ।**
**ತದೀಷದ್ವೇಷ ಏವಾಸೌ ಸುಗುಣಸ್ತೋಮಮಧ್ಯಗಃ ॥ ೮೭ ॥**

**ಅರ್ಥ –** ಅತಃ= ಆದ್ದರಿಂದ, ಗ್ರಾಂಥಿಕಮುದ್ರಾಜ್ಞಃ= ಗ್ರಂಥದ ಶೈಲಿಯನ್ನು ತಿಳಿದವನು, ಏವಂ ವ್ಯಾಖ್ಯಾತುಂ= ಹೀಗೆ ವ್ಯಾಖ್ಯಾನ ಮಾಡಲು, ನಾರ್ಹತಿ= ಶಕ್ತನಾಗುವುದಿಲ್ಲ, ತತ್= ಆದ್ದರಿಂದ, ಅಸೌ= ಈ ದ್ವೇಷವು, ಸುಗುಣಸ್ತೋಮಮಧ್ಯಗಃ= ಸುಗುಣಗಳ ರಾಶಿಗಳ ಮಧ್ಯದಲ್ಲಿರುವ, ಈಷದ್ವೇಷಃ ಏವ= ಅಲ್ಪದ್ವೇಷವು ಮಾತ್ರ.

**ಅನುವಾದ –** ಆದ್ದರಿಂದ ಗ್ರಂಥದ ಶೈಲಿಯ ಮರ್ಯಾದೆಯನ್ನು ತಿಳಿದವನು ಹೀಗೆ ವ್ಯಾಖ್ಯಾನವನ್ನು ಮಾಡಬಾರದು. ಆದ್ದರಿಂದ ಶಿಶುಪಾಲಾದಿಗಳಿಗೆ ಮೋಕ್ಷ

ಸಾಧನವೆಂದು ಹೇಳಲ್ಪಟ್ಟ ದ್ವೇಷವು ಅವರ ಸುಗುಣರಾಶಿಯ ಮಧ್ಯದಲ್ಲಿರುವ ಅಲ್ಪದ್ವೇಷವೇ ಆಗಿದೆ.

**ಭಾವವಿಲಾಸಿನೀ–** ಏಥಂ ಆಪಾತಾರ್ಥಪ್ರತಿಪಾದಕತಯಾ । ತತ್ತಸ್ಮಾತ್ । ಅಸೌ ಮೋಕ್ಷಸಾಧನತಯೋಕ್ತಃ ನೇತಿ ನಿಷಿದ್ಧಶ್ಚ ॥ ೮೭, ೮೮ ॥

**ಹಿರಣ್ಯಕಶಿಪುಶ್ಚಾಪಿ ಭಗವನ್ನಿಂದಯಾ ತಮಃ ।**
**ವಿವಿಕ್ಷುರತ್ಯಗಾತ್ ಸೂನೋಃ ಪ್ರಹ್ಲಾದಸ್ಯಾನುಭಾವತಃ ॥ ೮೮ ॥**

**ಯದನಿಂದತ್ ಪಿತಾ ಮಹ್ಯಂ ತ್ವದ್ಭಕ್ತೇ ಮಯಿ ಚಾಘವಾನ್ ।**
**ತಸ್ಮಾತ್ ಪಿತಾ ಮೇ ಪೂಯೇತ ದುರಂತಾದ್ ದುಸ್ತರಾದಘಾತ್॥ ೮೯ ॥**

**ನಿಂದಾಂ ಭಗವತಃ ಶೃಣ್ವಂಸ್ತತ್ಪರಸ್ಯ ಜನಸ್ಯ ವಾ ।**
**ತತೋ ನಾಪೈತಿ ಯಃ ಸೋಪಿ ಯಾತ್ಯಧಃ ಸುಕೃತಾಚ್ಚ್ಯುತಃ ॥ ೯೦ ॥**

**ಇತ್ಯಾದಿ ವಾಕ್ಯಸಂದರ್ಭೈಸ್ತಮೋಹೇತುರ್ಯತಃ ಸ್ಫುಟಮ್ ।**
**ನಿರ್ಣೀತೋ ಭಗವದ್ದ್ವೇಷಸ್ತತೋಽಪ್ಯುಕ್ತೋರ್ಥ ಏವ ಹಿ ॥ ೯೧ ॥**

**ಅರ್ಥ –** ಹಿರಣ್ಯಕಶಿಪುಶ್ಚಾಪಿ= ಹಿರಣ್ಯಕಶಿಪುವು ಕೂಡ, ಭಗವನ್ನಿಂದಯಾ= ಭಗವಂತನನ್ನು ನಿಂದನೆ ಮಾಡಿದ ಕಾರಣದಿಂದ, ತಮಃ ವಿವಿಕ್ಷುಃ= ನರಕಕ್ಕೆ ಹೋಗುವವನಾಗಿದ್ದು, ಸೂನೋಃ= ಮಗನಾದ, ಪ್ರಹ್ಲಾದಸ್ಯ= ಪ್ರಹ್ಲಾದನ, ಅನುಭಾವತಃ= ಸಾಮರ್ಥ್ಯದಿಂದ, ಅತ್ಯಗಾತ್= ವಿಪತ್ತನ್ನು ದಾಟಿದನು, ಪಿತಾ= ನನ್ನ ತಂದೆಯು, ಮಹ್ಯಂ= ಮಹನೀಯನಾದ ಮತ್ತು ಪೂಜನೀಯನಾದ ನಿನ್ನನ್ನು, ಯದನಿಂದತ್= ಯಾವ ಕಾರಣದಿಂದ, ನಿಂದಿಸಿದ್ದಾನೆಯೋ, ಚ= ಮತ್ತು, ತ್ವದ್ಭಕ್ತೇ ಮಯಿ= ನಿನ್ನ ಭಕ್ತನಾದ ನನ್ನಲ್ಲಿ, ಅಘವಾನ್= ಮರಣಾಂತಕವಾದ ಹಿಂಸೆಯನ್ನು ಮಾಡಿದ್ದಾನೆಯೋ, ತತ್= ಆ ಕಾರಣದಿಂದ, ದುರಂತಾತ್= ಅನಂತವಾದ, ದುಸ್ತರಾತ್= ದಾಟಲು ಅಸಾಧ್ಯವಾದ, ತಸ್ಮಾತ್ ಅಘಾತ್= ಆ ಪಾಪದಿಂದ, ಮೇ ಪಿತಾ= ನನ್ನ ತಂದೆಯು, ಪೂಯೇತ= ನಿರ್ಮುಕ್ತನಾಗಿ ಪವಿತ್ರನಾಗಲಿ, ಯಃ= ಯಾವನು, ಭಗವತಃ= ಭಗವಂತನ, ವಾ= ಅಥವಾ, ತತ್ಪರಸ್ಯ ಜನಸ್ಯ= ಭಗವದ್ಭಕ್ತರಾದ ವ್ಯಕ್ತಿಯ, ನಿಂದಾಂ= ನಿಂದೆಯನ್ನು, ಶೃಣ್ವನ್= ಕೇಳುವವನಾಗಿ, ತತಃ= ಆ ಸ್ಥಳದಿಂದ, ನಾಪೈತಿ= ಹೊರಗೆ ಹೋಗುವುದಿಲ್ಲವೊ, ಸೋಪಿ= ಅವನೂ ಸಹ, ಸುಕೃತಾಚ್ಚ್ಯುತಃ= ತನ್ನ ಪುಣ್ಯವೆಲ್ಲವನ್ನೂ ಕಳೆದುಕೊಂಡು, ಅಧಃ ಯಾತಿ= ಅಧೋಗತಿಯನ್ನು ಹೊಂದುತ್ತಾನೆ, ಇತ್ಯಾದಿ ವಾಕ್ಯಸಂದರ್ಭೈಃ= ಇವೇ ಮೊದಲಾದ ವಾಕ್ಯಗಳ ಸಂದರ್ಭದಿಂದ, ಯತಃ= ಯಾವ ಕಾರಣದಿಂದ, ಸ್ಫುಟಂ= ಸ್ಪಷ್ಟವಾಗಿ,

ಭಗವದ್ದ್ವೇಷಃ= ಭಗವದ್ದ್ವೇಷವು, ತಮೋಹೇತುಃ= ನರಕ ಸಾಧನವೆಂದು, ನಿರ್ಣೀತಃ= ನಿರ್ಣಯಿಸಲ್ಪಟ್ಟಿದೆಯೋ, ತತೋಽಪಿ= ಆ ಕಾರಣದಿಂದಲೂ ಕೂಡ, ಉಕ್ತಾರ್ಥ ಏವ ಹಿ= ನಾವು ಹೇಳಿದ ಅರ್ಥವೇ ಉಪಪನ್ನವಾದ ಅರ್ಥವಷ್ಟೆ.

**ಅನುವಾದ –** ಹಿರಣ್ಯಕಶಿಪುವು ಸಹ ಭಗವಂತನ ನಿಂದೆ ಮಾಡಿದುದರಿಂದ ತಮಸ್ಸನ್ನು ಪ್ರವೇಶಿಸುವವನಾಗಿದ್ದು ಪುತ್ರನಾದ ಪ್ರಹ್ಲಾದನ ಸಾಮರ್ಥ್ಯದಿಂದ ಆ ವಿಪತ್ತನ್ನು ದಾಟಿದನು. ಪೂಜನೀಯನಾದ ನಿನ್ನನ್ನು ಯಾವ ಕಾರಣದಿಂದ ನನ್ನ ತಂದೆಯು ನಿಂದಿಸಿದನೋ ಮತ್ತು ನಿನ್ನ ಭಕ್ತನಾದ ನನಗೆ ಮರಣಾಂತಕವಾದ ಹಿಂಸೆಯನ್ನು ಮಾಡಿದನೋ ಆ ಅನಂತವಾದ ದಾಟಲು ಅಸಾಧ್ಯವಾದ ಪಾಪದಿಂದ ನನ್ನ ತಂದೆಯು ಮುಕ್ತನಾಗಿ ಪವಿತ್ರನಾಗಲಿ. ಯಾವನು ಭಗವಂತನ ಅಥವಾ ಭಗವದ್ಭಕ್ತನ ನಿಂದೆಯನ್ನು ಕೇಳಿ ಆ ಸ್ಥಳದಿಂದ ಹೊರಗೆ ಹೋಗುವುದಿಲ್ಲವೋ ಅವನೂ ಸಹ ತನ್ನ ಎಲ್ಲ ಪುಣ್ಯಗಳನ್ನು ಕಳೆದುಕೊಂಡು ಅಧೋಗತಿಯನ್ನು ಹೊಂದುತ್ತಾನೆ. ಇವೇ ಮೊದಲಾದ ವಾಕ್ಯಸಂದರ್ಭಗಳಿಂದ ಭಗವದ್ದ್ವೇಷವು ತಮಸ್ಸಿಗೆ ಕಾರಣವೆಂದು ಸ್ಪಷ್ಟವಾಗಿ ನಿರ್ಣಯಿಸಲ್ಪಟ್ಟಿರುವುದರಿಂದ ದ್ವೇಷಾಚ್ಚೈದ್ಯಾದಯೋನೃಪಾಃ ಮೊದಲಾದ ವಾಕ್ಯಗಳಿಗೆ ನಾವು ಹೇಳಿದ ಅರ್ಥವನ್ನೇ ಅಂಗೀಕರಿಸಬೇಕಷ್ಟೆ.

**ಭಾವವಿಲಾಸಿನೀ–** ಕಿಂಚ ಭಾಗವತ ಏವ ಭಗವದ್ದ್ವೇಷಸ್ಯ ತಮೋಹೇತುದೋಷತಯಾ ಬಹುಷು ಸ್ಥಲೇಷು ನಿರ್ಣೀತತ್ವಾತ್ ಸೂತ್ರಕೃತಾ ಚ ವಿದ್ಯಾಯಾ ಏವ ಸಾಧನತ್ವೇನ ನಿರ್ಣೀತತ್ವಾತ್ ಮೋಕ್ಷಸಾಧನತಯೋಚ್ಯಮಾನೋ ದ್ವೇಷಸ್ಸಮುದ್ರವಿಲೋಡಿತಹಿಂಗುಬಿಂದುವತ್ ಭಕ್ತ್ಯಾದಿ ಸಾಧನಸಮುದ್ರಾಂತರ್ನಿಲೀನ ಈಶದ್ವೇಷ ಏವ ಭವೇದಿತ್ಯಾಹ – **ಹಿರಣ್ಯಕಶಿಪುರಿತ್ಯಾದಿನಾ ॥** ಯದನಿಂದದಿತಿ ಪ್ರಹ್ಲಾದವಾಕ್ಯಮ್ । ಅನಿಂದದಿತಿ ಯತ್ ಮಯಿ ಚಾಘವಾನಪರಾಧವಾನಿತಿ ಯತ್ ತಸ್ಮಾದಘಾದಿತಿ ಸಂಬಂಧಃ ॥ ೮೯ ॥

ತತಃ ಸ್ಥಲಾತ್ । ಅಪಿಪದೇನ ನಿಂದಂಸ್ತು ಕಿಮುತೇತಿ ಸೂಚಿತಮ್ ॥ ೯೦, ೯೧ ॥

**ಸೂತ್ರಕೃಚ್ಚಾಹ ಯದ್ ವಿದ್ಯೈವ ತು ನಿರ್ಧಾರಣಾದಿತಿ ।**
**ನಾನ್ಯಃ ಪಂಥಾ ಇತಿ ಸ್ಪಷ್ಟೋ ವೇದಸ್ತೌ ಕೋನು ಲಂಘಯೇತ್ ॥ ೯೨ ॥**

**ಅರ್ಥ –** ಯತ್= ಯಾವ ಕಾರಣದಿಂದ, ಸೂತ್ರಕೃಚ್ಚ= ಸೂತ್ರಕಾರರೂ ಸಹ, ವಿದ್ಯೈವ ತು ನಿರ್ಧಾರಣಾದಿತಿ= ಅಪರೋಕ್ಷ ಜ್ಞಾನವೇ ಮೋಕ್ಷಸಾಧನವೆಂದು ವೇದದ ಅಭಿಪ್ರಾಯವೆಂದು ಹೇಳಿದ್ದಾರೆಯೋ ಮತ್ತು, ವೇದಃ= ವೇದವು, ನಾನ್ಯಃ ಪಂಥಾಃ= ಹರಿಯ ಅನುಗ್ರಹಕ್ಕೆ ಜ್ಞಾನವನ್ನು ಬಿಟ್ಟು ಬೇರೆ ಮಾರ್ಗವಿಲ್ಲ, ಇತಿ= ಎಂದು,. ಸ್ಪಷ್ಟಃ=

ಸ್ಪಷ್ಟವಾಗಿ ಹೇಳುತ್ತದೆಯೋ ಆ ಕಾರಣದಿಂದ, ತೌ= ಆ ಬ್ರಹ್ಮಸೂತ್ರ ಮತ್ತು ವೇದಗಳನ್ನು, ಕೋನುಲಂಘಯೇತ್= ಯಾವನು ತಾನೆ ಮೀರಲು ಸಾಧ್ಯ?

**ಅನುವಾದ –** ಯಾವ ಕಾರಣದಿಂದ ಸೂತ್ರಕಾರರು ವಿದ್ಯೈವತು ನಿರ್ಧಾರಣಾತ್ ಎಂಬಲ್ಲಿ ಜ್ಞಾನವೇ ಮೋಕ್ಷಸಾಧನವೆಂದು ನಿರ್ಣಯಿಸಿದ್ದಾರೆಯೋ, ಮತ್ತು ನಾನ್ಯಃ ಪಂಥಾಃ ಎಂಬ ಶ್ರುತಿಯು ಜ್ಞಾನವನ್ನು ಬಿಟ್ಟು ಭಗವದ್ಪ್ರಾಪ್ತಿಗೆ ಬೇರೆ ಮಾರ್ಗವಿಲ್ಲವೆಂದು ಹೇಳುತ್ತದೆಯೋ, ಆ ಕಾರಣದಿಂದ ಆ ಶ್ರುತಿಯನ್ನು ಮತ್ತು ಸೂತ್ರಕಾರರನ್ನು ಯಾರು ಮೀರಲು ಸಾಧ್ಯ?

**ವಿವರಣೆ –** ದ್ವೇಷವು ಮೋಕ್ಷಸಾಧನವೆಂದು ಒಪ್ಪಿದರೆ ಅದು ಜ್ಞಾನವಲ್ಲ. ಆದ್ದರಿಂದ ಜ್ಞಾನವೇ ಮೋಕ್ಷಸಾಧನವೆಂದು ಹೇಳುವ ಶ್ರುತಿಸೂತ್ರಗಳ ವಿರೋಧವು ಅಪರಿಹಾರ್ಯ-ವೆಂದು ಅಭಿಪ್ರಾಯ.

**ಭಾವವಿಲಾಸಿನೀ–** ತೌ ಶ್ರುತಿಸೂತ್ರಕೃತೌ ॥ ೯೨ ॥

ಶ್ರವಣಂ ಮನನಂ ತಸ್ಮಾತ್ ಧ್ಯಾನಂ ಸಾಕ್ಷಾತ್ಕೃತಿರ್ಹರೇಃ ।
ಭಕ್ತಿಃ ಪ್ರಸಾದ ಇತ್ಯೇತೇ ಮುಕ್ತೇಃ ಸೋಪಾನಪಂಕ್ತಯಃ ॥ ೯೩ ॥

**ಅರ್ಥ –** ಶ್ರವಣಂ= ಶ್ರವಣ, ಮನನಂ= ಮನನ, ತಸ್ಮಾತ್= ಅನಂತರ, ಧ್ಯಾನಂ= ಧ್ಯಾನ, ಹರೇಃ= ಹರಿಯ, ಸಾಕ್ಷಾತ್ಕೃತಿಃ= ಸಾಕ್ಷಾತ್ಕಾರ, ಭಕ್ತಿಃ= ಭಕ್ತಿ, ಪ್ರಸಾದಃ= ಭಗವದ್ಪ್ರಸಾದ, ಇತ್ಯೇತೇ= ಇವುಗಳು, ಮುಕ್ತೇಃ= ಮೋಕ್ಷಕ್ಕೆ, ಸೋಪಾನಪಂಕ್ತಯಃ= ಮೆಟ್ಟಲುಗಳ ಶ್ರೇಣಿಯಾಗಿವೆ.

**ಅನುವಾದ –** ಶ್ರವಣ, ಮನನ ಅನಂತರ ಧ್ಯಾನ ಹರಿಯ ಸಾಕ್ಷಾತ್ಕಾರ, ಭಕ್ತಿ ಮತ್ತು ಭಗವತ್ಪ್ರಸಾದ ಇವುಗಳು ಮೋಕ್ಷಕ್ಕೆ ಸೋಪಾನಶ್ರೇಣಿಯಾಗಿವೆ.

**ಭಾವವಿಲಾಸಿನೀ–** ಸಾಕ್ಷಾದುಕ್ತಾನಿ ಉಪಲಕ್ಷಿತಾನಿ ಚ ಸಾಧನಾನಿ ಕ್ರಮೇಣ ಸಂಗೃಹ್ಣಾತಿ – **ಶ್ರವಣಮಿತಿ॥** ತಸ್ಮಾತ್ ಉಕ್ತಶ್ರುತಿಸ್ಮೃತಿಯುಕ್ತ್ಯಾದಿ ಪ್ರಮಾಣಸಮುದಾಯಾತ್ । ಹರೇರಿತಿ ಪದಂ ಸಾಧನಷಟ್ಕೇಽಪಿ ಸಂಬಧ್ಯತೇ । ಭಕ್ತಿಪದಂ ವಿರಕ್ತೇರುಪಲಕ್ಷಕಮ್ । ಅಯಮತ್ರ ಕ್ರಮಃ । ಪ್ರಥಮಮಿಮಮುದ್ಧರಾಮೀತಿ ತದ್ಯೋಗ್ಯತಾಪರಿಪಾಕೈಕನಿಬಂಧನಾ ಹರೇರನಿಮಿತ್ತಕೃಪಾ । ತತಸ್ತಸ್ಮಿನ್ಮದೀಯೋಽಯಮಿತಿ ಈಷತ್ಸ್ನೇಹರೂಪಃ ಅನುಗ್ರಹಾಪರಪರ್ಯಾಯೋ ಹರೇ-ರೀಷತ್ಪ್ರಸಾದಃ । ತತೋ ಹರೇರನ್ಯತ್ರೇಷದ್ವಿರಕ್ತಿಃ ತತೋ ಹರಾವೀಷದ್ಭಕ್ತಿಃ । ತತಃ ಪುನರೀಷದಭಿ-ವೃದ್ಧೋ ಹರೇಃ ಪ್ರಸಾದಃ ತತಃ ಶ್ರವಣಮ್ । ತತಃ ಪುನಃ ಪೂರ್ವತೋಽಪ್ಯಭಿ-ವೃದ್ಧವಿರಕ್ತಿಭಕ್ತಿಪ್ರಸಾದಾಃ । ತತೋ ಮನನಂ ತಸ್ಮಾತ್ಪುನರಭಿವೃದ್ಧವಿರಕ್ತಿಭಕ್ತಿಪ್ರಸಾದಾಃ । ತತೋ ನಿರಂತರಧ್ಯಾನರೂಪಂ ನಿದಿಧ್ಯಾಸನಂ ತಸ್ಮಾದತಿಶಯಿತೇ ವಿರಕ್ತಿಭಕ್ತೀ ಅತಿಶಯಿತೋ

ಭಗವತ್ಪ್ರಸಾದಶ್ಚ । ತೇಭ್ಯಃ ಪ್ರಸನ್ನಭಗವತೈವ ಪ್ರತಿಬಂಧಕಾವಿದ್ಯಾಯಾಮಪಸಾರಿತಾಯಾಂ ತದಪರೋಕ್ಷಜ್ಞಾನಮ್ । ತತಃ ಸ್ವಯೋಗ್ಯಪರಿಪೂರ್ಣವಿರಕ್ತಿಭಕ್ತಿಪ್ರಸಾದಾಃ । ತತಃ ಆತ್ಯಂತಿಕದುಃಖನಿವೃತ್ತಿರೂಪಃ ಪರಮಾನಂದಾವಾಪ್ತಿಲಕ್ಷಣಶ್ಚ ಮೋಕ್ಷ ಇತಿ ಮೋಕ್ಷಸಾಧನಪಂಕ್ತಯಃ । ತತಶ್ಚ ಮಹೋಪಕಾರಕೇ ಹರೌ ಸ್ವರೂಪಭೂತಾ ಫಲರೂಪಾ ಚ ನಿತ್ಯಾ ಭಕ್ತಿಃ । ತನ್ನಿಮಿತ್ತೋ ಹರೇರ್ನಿತ್ಯಪ್ರಸಾದಶ್ಚೇತಿ ಭಕ್ತಿ ಪ್ರಸಾದಯೋಃ ಸರ್ವತ್ರಾನ್ವಯ-ಪ್ರದರ್ಶನಾಯ ಸಾಮಾನ್ಯೇನೈವ ಕೀರ್ತನಮ್ । ಅನ್ಯಥಾ ಮಹಾಭಕ್ತಿರ್ಮಹಾಪ್ರಸಾದ ಇತ್ಯವಕ್ಷ್ಯತ್ ॥ ೯೩ ॥

**ವಿವರಣೆ –** ವೇದದಲ್ಲಿ ಸಾಕ್ಷಾತ್ ಹೇಳಲ್ಪಟ್ಟ ಮತ್ತು ಉಪಲಕ್ಷಣಯಾ ಸೂಚಿಸಲ್ಪಟ್ಟ ಸಾಧನಗಳನ್ನು ಇಲ್ಲಿ ಕ್ರಮವಾಗಿ ಸಂಗ್ರಹಿಸುತ್ತಾರೆ. ತಸ್ಮಾತ್ ಎಂದರೆ ಶ್ರುತಿಸ್ಮೃತಿಯುಕ್ತ್ಯಾದಿ ಪ್ರಮಾಣಸಮುದಾಯಗಳ ಶ್ರವಣಾದಿಗಳಿಂದ ಉಂಟಾದ ಧ್ಯಾನ ಎಂದು ಅಭಿಪ್ರಾಯ. ಹರೇಃ ಎಂಬ ಪದವು ಪ್ರತ್ಯೇಕವಾಗಿ ಎಲ್ಲದರ ಜೊತೆಯಲ್ಲಿಯೂ ಅನ್ವಯವನ್ನು ಹೊಂದುತ್ತದೆ. ಎಂದರೆ ಹರಿಯ ಶ್ರವಣ, ಹರಿಯ ಮನನ, ಹರಿಯ ಧ್ಯಾನ, ಹರಿಯ ಸಾಕ್ಷಾತ್ಕಾರ, ಹರಿಯ ಭಕ್ತಿ ಮತ್ತು ಹರಿಯ ಪ್ರಸಾದ ಎಂದು ಅನ್ವಯವನ್ನು ಮಾಡಬೇಕು. ಭಕ್ತಿಪದದಿಂದ ವೈರಾಗ್ಯವನ್ನೂ ಇಟ್ಟುಕೊಳ್ಳಬೇಕು. ಇದು ಮೋಕ್ಷದ ಮೆಟ್ಟಿಲುಗಳ ಕ್ರಮ. ಮೊದಲು ಇವನನ್ನು ಉದ್ಧರಿಸುತ್ತೇನೆ ಎಂಬ ಜೀವನ ಯೋಗ್ಯತಾಪರಿಪಾಕೈಕನಿಮಿತ್ತವಾದ ಹರಿಯ ಅನಿಮಿತ್ತವಾದ ಕೃಪೆ. ಅನಂತರ ಆ ಜೀವನಲ್ಲಿ ಇವನು ನನ್ನವನು ಎಂಬ ಅಲ್ಪ ಸ್ನೇಹರೂಪವಾದ ಹರಿಯ ಅನುಗ್ರಹವೆಂದು ಕರೆಸಿಕೊಳ್ಳಲ್ಪಡುವ ಪ್ರಸಾದ. ಅನಂತರ ಹರಿಯನ್ನು ಬಿಟ್ಟು ಬೇರೆ ವಸ್ತುವಿನಲ್ಲಿ ಸ್ವಲ್ಪ ವೈರಾಗ್ಯ ಮತ್ತು ಹರಿಯಲ್ಲಿ ಸ್ವಲ್ಪ ಭಕ್ತಿ. ಅನಂತರ ಅದರಿಂದ ಪುನಃ ಸ್ವಲ್ಪ ಅಧಿಕವಾದ ಹರಿಯಪ್ರಸಾದ. ಅನಂತರ ಪುನಃ ಶ್ರವಣ. ಅನಂತರ ಅದರಿಂದ ಮೊದಲಿಗಿಂತಲೂ ಅಧಿಕವಾದ ವಿರಕ್ತಿಭಕ್ತಿ ಪ್ರಸಾದಗಳು, ಅನಂತರ ಮನನ, ಅದರಿಂದ ಪುನಃ ಅಭಿವೃದ್ಧವಾದ ವಿರಕ್ತಿಭಕ್ತಿಪ್ರಸಾದಗಳು. ಅನಂತರ ನಿರಂತರ ಧ್ಯಾನರೂಪವಾದ ನಿಧಿಧ್ಯಾಸನ. ಅದರಿಂದ ಅತಿಶಯಿತವಾದ ವೈರಾಗ್ಯಭಕ್ತಿಗಳು ಮತ್ತು ಅತಿಶಯಿತವಾದ ಭಗವತ್ಪ್ರಸಾದ. ಅನಂತರ ಅವುಗಳಿಂದ ಪ್ರಸನ್ನನಾದ ಭಗವಂತನಿಂದ ಪ್ರತಿಬಂಧಕವಾದ ಅವಿದ್ಯೆಯ ಅಪಸರಣ. ಅದರಿಂದ ಭಗವಂತನ ಅಪರೋಕ್ಷಜ್ಞಾನ. ಅನಂತರ ಸ್ವಯೋಗ್ಯವಾದ ಪರಿಪೂರ್ಣವಾದ ವಿರಕ್ತಿಭಕ್ತಿಪ್ರಸಾದಗಳು. ಅನಂತರ ಆತ್ಯಂತಿಕ ದುಃಖನಿವೃತ್ತಿಪೂರ್ವಕ ಪರಮಾನಂದ ಪ್ರಾಪ್ತಿರೂಪವಾದ ಮೋಕ್ಷ. ಇವು ಸಾಧನೆಯ ಮೆಟ್ಟಲುಗಳು. ಅನಂತರ ಮಹೋಪಕಾರಕನಾದ ಹರಿಯಲ್ಲಿ ಜೀವನ ಸ್ವರೂಪ ಭೂತವಾದ ಮತ್ತು ಜೀವನ ಸಾಧನೆಗೆ ಫಲರೂಪವಾದ ನಿತ್ಯಭಕ್ತಿ ಅನಂತರ ತನ್ನಿಮಿತ್ತವಾದ ಹರಿಯ ಪ್ರಸಾದ ಎಂದು ಈ ರೀತಿಯಾಗಿ ಭಕ್ತಿಪ್ರಸಾದಗಳು ಮೊದಲಿನಿಂದ ಕೊನೆಯವರೆಗೆ ಅನ್ವಯವನ್ನು ಹೊಂದುವುದರಿಂದ ಭಕ್ತಿ ಮತ್ತು ಪ್ರಸಾದಗಳೆಂಬ ಸಾಮಾನ್ಯ ಶಬ್ದಗಳಿಂದ ಅವುಗಳನ್ನು

ಹೇಳಲಾಗಿದೆ. ಇಲ್ಲದಿದ್ದರೆ ಮೋಕ್ಷಕ್ಕೆ ನೇರಕಾರಣವಾದ ಭಕ್ತಿಯನ್ನು ಮತ್ತು ಪ್ರಸಾದವನ್ನು ಮಹಾಭಕ್ತಿ ಮತ್ತು ಮಹಾಪ್ರಸಾದ ಎಂದೇ ಹೇಳಬೇಕಾಗಿದ್ದಿತು ಎಂದು ಅಭಿಪ್ರಾಯ.

**ರುಗ್ಮವರ್ಣಂ ಚ ಕರ್ತಾರಮೀಶಂ ಪುರುಷರೂಪಿಣಮ್ ।**
**ಬ್ರಹ್ಮತಾತಂ ಮಹಾತ್ಮಾನಂ ಪದ್ಮನಾಭಂ ಪರಾತ್ಪರಮ್ ॥ ೯೪ ॥**

**ಯದಾ ಪಶ್ಯತಿ ಜೀವೋಽಯಂ ತದಾ ಕರ್ಮ ದ್ವಿರೂಪಕಮ್ ।**
**ಹಿತ್ವಾ ನಿರ್ದುಃಖತ್ವಪೂರ್ವೈಃ ಪರಂ ಸಾಮ್ಯಮುಪೈತಿ ಸಃ ॥ ೯೫ ॥**

**ಇತಿ ಶ್ರುತೌ ಮೋಕ್ಷಹೇತುಜ್ಞಾನಸ್ಯೇತ್ಥಂ ವಿನಿರ್ಣಯಾತ್ ।**
**ಜ್ಞಾನಂ ಸರೂಪಸಾಕಾರಸಗುಣೇಶ್ವರಗೋಚರಮ್ ।**
**ಸಾಧ್ಯಂ ಮೋಕ್ಷಾರ್ಥಿಭಿರ್ಭಕ್ತೈರ್ನಾನ್ಯಚ್ಛ್ರುತಿವಿರೋಧತಃ ॥ ೯೬ ॥**

**ಅರ್ಥ** – ರುಗ್ಮವರ್ಣಂ= ಬಂಗಾರದ ಬಣ್ಣವನ್ನು ಹೊಂದಿದ, ಕರ್ತಾರಂ= ಜಗತ್ಕರ್ತೃವಾದ, ಈಶಂ= ಜಗತ್ತಿಗೆ ಸ್ವಾಮಿಯಾದ, ಪುರುಷರೂಪಿಣಂ= ಪುರುಷಾಕಾರವನ್ನು ಹೊಂದಿರುವ, ಬ್ರಹ್ಮತಾತಂ= ಬ್ರಹ್ಮದೇವರಿಗೆ ತಂದೆಯಾದ, ಮಹಾತ್ಮಾನಂ= ಮಹಾತ್ಮನಾದ, ಪರಾತ್ಪರಂ= ಶ್ರೇಷ್ಠರಾದ ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನಾದ, ಪದ್ಮನಾಭಂ= ಪದ್ಮನಾಭನನ್ನು, ಯದಾ= ಯಾವಾಗ, ಅಯಂ ಜೀವಃ= ಈ ಜೀವನು, ಪಶ್ಯತಿ= ನೋಡುತ್ತಾನೆಯೋ, ತದಾ= ಆಗ, ದ್ವಿರೂಪಕಂ= ಸಂಚಿತ ಮತ್ತು ಆಗಾಮಿರೂಪವಾದ, ಕರ್ಮ= ಕರ್ಮವನ್ನು, ಹಿತ್ವಾ= ಪರಿಹರಿಸಿಕೊಂಡು, ನಿರ್ದುಃಖತ್ವಪೂರ್ವೈಃ= ನಿರ್ದುಃಖತ್ವವೇ ಮೊದಲಾದ ಧರ್ಮಗಳಿಂದ, ಸಃ= ಆ ಜೀವನು, ಪರಂ ಸಾಮ್ಯಂ= ಶ್ರೇಷ್ಠವಾದ ಸಾಮ್ಯವನ್ನು, ಉಪೈತಿ= ಹೊಂದುತ್ತಾನೆ, ಇತಿ ಶ್ರುತೌ= ಎಂಬ ಈ ಶ್ರುತಿಯಲ್ಲಿ, ಮೋಕ್ಷಹೇತುಜ್ಞಾನಸ್ಯ= ಮೋಕ್ಷಹೇತುವಾದ ಜ್ಞಾನವನ್ನು, ಇತ್ಥಂ= ಈ ರೀತಿಯಾಗಿ, ವಿನಿರ್ಣಯಾತ್= ನಿರ್ಧರಿಸಿರುವುದರಿಂದ, ಮೋಕ್ಷಾರ್ಥಿಭಿಃ= ಮೋಕ್ಷಾಕಾಂಕ್ಷಿಗಳಾದ, ಭಕ್ತೈಃ= ಭಕ್ತಜೀವರಿಂದ, ಸರೂಪಸಾಕಾರಸಗುಣೇಶ್ವರಗೋಚರಂ= ರೂಪಸಹಿತನಾದ, ಆಕಾರಸಹಿತನಾದ, ಗುಣಭರಿತನಾದ ಈಶ್ವರನವಿಷಯಕವಾದ, ಜ್ಞಾನಂ= ಜ್ಞಾನವೇ, ಸಾಧ್ಯಂ= ಸಂಪಾದಿಸಲ್ಪಡಬೇಕು, ಅನ್ಯತ್= ಬೇರೆ ರೀತಿಯಾದ ಜ್ಞಾನವು, ಶ್ರುತಿವಿರೋಧತಃ= ಶ್ರುತಿ ವಿರೋಧವು ಬರುವುದರಿಂದ, ನ= ಸಂಪಾದನೀಯವಲ್ಲ.

**ಅನುವಾದ – ಬಂಗಾರದ ಬಣ್ಣವುಳ್ಳವನು, ಜಗತ್ಕರ್ತೃವು, ಜಗದೊಡೆಯನು, ಪುರುಷಾಕಾರವುಳ್ಳವನು, ಬ್ರಹ್ಮದೇವರ ತಂದೆಯು, ಮಹಾತ್ಮನು, ರಮಾ-ಬ್ರಹ್ಮಾದಿಗಳಿಗಿಂತಲೂ ಶ್ರೇಷ್ಠನೂ ಆದ ಪದ್ಮನಾಭನನ್ನು ಯಾವಾಗ ಈ ಜೀವನು ನೋಡುತ್ತಾನೆಯೋ ಆಗ ಸಂಚಿತ ಮತ್ತು ಆಗಮ್ಯಾದಿ ಕರ್ಮಗಳನ್ನು**

ಪರಿಹರಿಸಿಕೊಂಡು ನಿರ್ದುಃಖವೇ ಮೊದಲಾದ ಧರ್ಮಗಳಿಂದ ಆ ಜೀವನು ಹರಿಯ ಶ್ರೇಷ್ಠ ಸಾಮ್ಯವನ್ನು ಪಡೆಯುತ್ತಾನೆ ಎಂಬ ಈ ಶ್ರುತಿಯಲ್ಲಿ ಮೋಕ್ಷ ಹೇತುವಾದ ಜ್ಞಾನವನ್ನು ಈ ರೀತಿಯಲ್ಲಿ ನಿರ್ಧರಿಸಿರುವುದರಿಂದ ಮುಮುಕ್ಷುಗಳಾದ ಭಕ್ತಜೀವರು ರೂಪಸಹಿತನಾದ, ಆಕಾರಸಹಿತನಾದ, ಗುಣಭರಿತನಾದ ಈಶ್ವರ ಜ್ಞಾನವನ್ನೇ ಸಂಪಾದಿಸಬೇಕು ಎಂದು ಸಿದ್ಧವಾಗುತ್ತದೆ. ಇದಕ್ಕಿಂತ ಭಿನ್ನವಾದ ಜ್ಞಾನವನ್ನು ಮೋಕ್ಷಸಾಧನವೆಂದು ಹೇಳಿದರೆ ಈ ಶ್ರುತಿಯ ವಿರೋಧವು ಉಂಟಾಗುತ್ತದೆ.

**ಭಾವವಿಲಾಸಿನೀ–** ''ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಮ್ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತೀ''ತಿ ಶ್ರುತಿಮರ್ಥತಃ ಸಂಗೃಹ್ಣನ್ ಸಾಕಾರಸಗುಣಸರ್ವೇಶ್ವರತ್ವಾದಿವಿಶಿಷ್ಟ-ಭಗವತ್ಸಾಕ್ಷಾತ್ಕಾರ ಏವಮೋಕ್ಷಸಾಧನಂ ನತು ಪರೋದೀರಿತಮೈಕ್ಯಜ್ಞಾನಂ ನಿರ್ವಿಕಲ್ಪಕಂ ವಾ ತದ್ಧೇತುರಿತಿ ದರ್ಶಯತಿ – ರುಗ್ಮವರ್ಣಮಿತ್ಯಾದಿನಾ ॥ ಬ್ರಹ್ಮಯೋನಿತ್ವಸ್ಯ ಪದ್ಮನಾಭ-ಮೂರ್ತಾವೇವ ಸಂಭವಾತ್ಪದ್ಮನಾಭಮಿತ್ಯುಕ್ತಮ್ । ನಿರ್ದುಃಖತ್ವಪೂರ್ವೈಃ ನಿರ್ದುಃಖತ್ವನಿತ್ಯ-ಸುಖತ್ವನಿತ್ಯದೇಹತ್ವಪೂರ್ವೈಃ । ಅನ್ಯತ್ ನಿರ್ಗುಣತ್ವಾದಿಜ್ಞಾನಮ್ ॥ ೯೪-೯೬ ॥

**ವಿವರಣೆ** – 'ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯ ಮುಪೈತಿ' ಎಂಬ ಶ್ರುತಿಯನ್ನು ಅರ್ಥತಃ ಸಂಗ್ರಹಿಸಿ ಆಕಾರರೂಪಸರ್ವೇಶ್ವರತ್ವಾದಿ ವಿಶಿಷ್ಟನಾದ ಭಗವತ್‌ಗುಣಸಾಕ್ಷಾತ್ಕಾರವೇ ಮೋಕ್ಷಸಾಧನ. ಪರೋದೀರಿತವಾದ ಐಕ್ಯಜ್ಞಾನವಾಗಲೀ, ನಿರ್ವಿಕಲ್ಪಕಜ್ಞಾನವಾಗಲೀ ಮೋಕ್ಷಸಾಧನವಲ್ಲವೆಂದು ಇಲ್ಲಿ ಸ್ಪಷ್ಟಪಡಿಸುತ್ತಾರೆ. ಬ್ರಹ್ಮನಿಗೆ ತಂದೆಯಾದ ರೂಪವು ಪದ್ಮನಾಭ ರೂಪವಾದುದರಿಂದ ಇಲ್ಲಿ ಪದ್ಮನಾಭಂ ಎಂದು ಹೇಳಿದ್ದಾರೆ. ನಿರ್ದುಃಖತ್ವ ಮೊದಲಾದ ಧರ್ಮಗಳೆಂದರೆ ನಿರ್ದುಃಖತ್ವದ ಜೊತೆಯಲ್ಲಿ ನಿತ್ಯಸುಖತ್ವವನ್ನೂ ಮತ್ತು ನಿತ್ಯದೇಹತ್ವವನ್ನೂ ತೆಗೆದುಕೊಳ್ಳಬೇಕು ಎಂದು ಅಭಿಪ್ರಾಯ.

**ಯಃ ಸ್ವತಃ ಪರತೋ ವೇಷದ್ವಿರಕ್ತೋ ವಿಷ್ಣುಭಕ್ತಿಮಾನ್ ।**
**ಸಾರಾಸಾರವಿವೇಕಜ್ಞೋ ಮುಮುಕ್ಷುಶ್ಚ ಸ ಮುಕ್ತಯೇ ।**
**ಅಧ್ಯಾಯದ್ವಯರೂಪಸ್ಯ ಶಾಸ್ತ್ರಸ್ಯ ಶ್ರವಣಂ ಚರೇತ್ ॥ ೯೭ ॥**

**ಅರ್ಥ** – ಯಃ= ಯಾವ ಅಧಿಕಾರಿಯು, ಸ್ವತಃ= ತಾನಾಗಿಯೇ, ಪರತೋ ವಾ= ಅಥವಾ ಮಹಾತ್ಮರ ಸಮಾಗಮದಿಂದಾಗಿ, ಈಷದ್ವಿರಕ್ತಃ= ಅಲ್ಪ ವೈರಾಗ್ಯವನ್ನು ಹೊಂದಿದವನಾಗಿ, ವಿಷ್ಣುಭಕ್ತಿಮಾನ್= ಅಲ್ಪವಾದ ವಿಷ್ಣುಭಕ್ತಿಯನ್ನು ಹೊಂದಿರುತ್ತಾನೆಯೋ,

ಸಃ= ಅಂತಹ, ಸಾರಾಸಾರವಿವೇಕಜ್ಞಃ= ಸಾರಾಸಾರ ವಿವೇಕವನ್ನು ತಿಳಿದ, ಮುಮುಕ್ಷುಶ್ಚ= ಮುಮುಕ್ಷುವಾದವನು, ಮುಕ್ತಯೇ= ಮೋಕ್ಷಕ್ಕಾಗಿ, ಅಧ್ಯಾಯದ್ವಯರೂಪಸ್ಯ= ಪ್ರಥಮಾಧ್ಯಾಯ ಮತ್ತು ದ್ವಿತೀಯಾಧ್ಯಾಯರೂಪವಾದ, ಶಾಸ್ತ್ರಸ್ಯ= ಬ್ರಹ್ಮಸೂತ್ರಗಳ, ಶ್ರವಣಂ= ಶ್ರವಣವನ್ನು, ಚರೇತ್= ಮಾಡಬೇಕು.

**ಅನುವಾದ** – ಯಾವ ಅಧಿಕಾರಿಯು ತಾನಾಗಿಯೇ ಆಗಲಿ ಅಥವಾ ಮಹಾತ್ಮರ ಸಮಾಗಮದಿಂದಾಗಲೀ ಅಲ್ಪವೈರಾಗ್ಯವನ್ನು ಹೊಂದಿ ವಿಷ್ಣುಭಕ್ತಿಯನ್ನು ಹೊಂದಿರುತ್ತಾನೆಯೋ ಅಂತಹ ಸಾರಾಸಾರವಿವೇಕವುಳ್ಳ ಮುಮುಕ್ಷುವು ಮೋಕ್ಷದ ಸಲುವಾಗಿ ಬ್ರಹ್ಮಸೂತ್ರಗಳ ಮೊದಲನೆಯ ಎರಡು ಅಧ್ಯಾಯಗಳನ್ನು ಶ್ರವಣ ಮಾಡಬೇಕು.

**ಭಾವವಿಲಾಸಿನೀ**– ಇದಾನೀಮಧ್ಯಾಯಚತುಷ್ಟಯಾರ್ಥಪ್ರತಿಪಾದಕೇನ ''ಅಥಾऽತೋ ಬ್ರಹ್ಮಜಿಜ್ಞಾಸೇ''ತ್ಯಾದಿಮಸೂತ್ರೇಣ ಸ್ವೋಕ್ತಾರ್ಥಂ ಸಂಗಮಯನ್ ಶ್ರವಣಾದೀನಾಂ ಕಾಲಂ ವಿಭಜ್ಯ ದರ್ಶಯತಿ – **ಯಃ ಸ್ವತ ಇತ್ಯಾದಿನಾ** ॥ ಪ್ರಾಗೇವ ಶಾಸ್ತ್ರಶ್ರವಣಾಭಾವೇನ ಶಾಸ್ತ್ರಜನಿತ-ವೈರಾಗ್ಯಾದೇರಯೋಗಾತ್ ಸ್ವತಃ ಪರತೋ ವೇತ್ಯುಕ್ತಮ್ । ಸ್ವತಃ ಸ್ವಯೋಗ್ಯತಾ-ಪರಿಪಾಕಬಲಾತ್ । ಸ್ವತಃ ಸ್ವತಂತ್ರಪರಮಾತ್ಮನೋ ವಾ ಪರತಃ ವೈರಾಗ್ಯಾದಿಗುಣಭರಿತಮಹತ್ ಸಮಾಗಮಬಲಾದಿತ್ಯರ್ಥಃ । ಈಷದಿತಿ ಪದಂ ವಿಶೇಷಣಚತುಷ್ಟಯೇನಾಪಿ ಸಂಬಧ್ಯತೇ । ಸಾಮಾನ್ಯತೋ ವೈರಾಗ್ಯಾದಿ ವಿಶೇಷಣಸಂಪತ್ತ್ಯನಂತರಮಿತಿ ಸೌತ್ರಾಥಶಬ್ದೇನೈವಾ-ಯಮರ್ಥೋऽಪಿ ಸಂಗೃಹೀತಃ। ವಿಶಿಷ್ಯಾಜ್ಞಾತೇ ವಸ್ತುನ್ಯಾಶೋಕಾದರ್ಶನೇನ ಮೋಕ್ಷಸಾಧನ-ಬ್ರಹ್ಮಜ್ಞಾನಾಯೇತ್ಯರ್ಥಪ್ರತಿಪಾದಕಾತ್ ಶಬ್ದಬೋಧಿತವಿಷಯಸಾಧನಫಲೇಷು ಶ್ರೋತು-ಸ್ತಾದರ್ಥ್ಯಾರ್ಥಕವಿಭಕ್ತಿಸೂಚಿತಾಶಾತಿಶಯಜನನಾಯ ತತ್ಪ್ರತಿಪಾದಕಸಕಲಶಾಸ್ತ್ರಸ್ಯಾಪಿ ಸಾಕ್ಷಾದ್ಬ್ರಹ್ಮಸ್ವರೂಪನಿರೂಪಕಾಧ್ಯಾಯದ್ವಿತಯೇ ಪಾರಂಪರ್ಯೇಣ ತತ್ ಸಂಬಂಧಿ ನ್ಯಧ್ಯಾಯದ್ವಿತಯೇ ಚ ಬ್ರಹ್ಮಜಿಜ್ಞಾಸಾತ್ವಸ್ಯ ವಿದ್ಯಮಾನತ್ವಾತ್ ಬ್ರಹ್ಮಜಿಜ್ಞಾಸಾಪದೋದಿತಂ ಸಕೃಚ್ಛ್ರವಣಂ ಕಾರ್ಯಮ್ । ಅಯಮೇಕಃ ಶ್ರವಣಕಾಲಃ । ಅಥ ಸಕೃಚ್ಛ್ರವಣಸಂಪತ್ತ್ಯನಂತರಂ ಪುನರ್ವಿಶಿಷ್ಯೋತ್ಕಂಠಿತಚತುರ್ಥಾಧ್ಯಾಯೋಕ್ತಫಲಸ್ಯ ತತ್ಸಾಧನಜ್ಞಾನಪಾದೋಕ್ತಾ-ಪರೋಕ್ಷಜ್ಞಾನಸ್ಯ ಚ ಅತೋ ಮೋಕ್ಷಾಯಾತೋಜ್ಞಾನಾಯೇತಿ ಚ ಸೌತ್ರಾತಃ ಪದೋದಿತಸ್ಯ ಸಾಕ್ಷಾತ್ಪರಂಪರಯಾ ಚ ಸಾಧನೀಭೂತಸ್ಯೋಪಾಸನಾಪಾದೋಕ್ತಸ್ಯ ಸೌತ್ರಜಿಜ್ಞಾಸಾಪದೇನೈವ ಮುಖ್ಯತಃ ಕರ್ತವ್ಯತಯಾ ನಿರೂಪಿತಸ್ಯ ಶಾಸ್ತ್ರಾಭ್ಯಾಸಾಖ್ಯಮನನಸ್ಯ ಧ್ಯಾನಸ್ಯ ಚ ಸಮ್ಯಕ್ ಸಂಪತ್ತಿಪರ್ಯಂತಮುತ್ಕಂಠಿತತಯಾऽತಃ ಪದೇನಾಪ್ಯುಕ್ತಸ್ಯ ಚ ಸಮ್ಯಕ್ ಸಿದ್ಧಯೇ ವಿಚಾರ್ಯಮಾಣಭಗವದ್ಗುಣಗಣನಿರ್ದೋಷತ್ವ- ನಿರೂಪಣಪರಾಧ್ಯಾಯದ್ವಯಾರ್ಥಸ್ಯ ಭಗವತ್ಯೇವ ಮನೋನೈರಂತರ್ಯೋಪಯೋಗಿವೈರಾಗ್ಯಭಕ್ತ್ಯುತ್ಪಾದಕಪಾದದ್ವಯಾರ್ಥಸ್ಯ ಚಾತಃ ಪದೋದಿತಸಮ್ಯಗ್ಬೋಧಾಯೋಪಾಸನಾಜ್ಞಾನಫಲೇಷು ವಾದಿವಿವಾದಪರಿ-ಹಾರಾಯಚ ಸಕೃಚ್ಛ್ರವಣಮಪಿ ಕರ್ತವ್ಯಮ್ । ಅಥ ಸಾರ್ಧಾಧ್ಯಾಯದ್ವಯಾರ್ಥಸ್ಯ

ಸಮ್ಯಗ್ಬೋಧಸಂಪತ್ತ್ಯನಂತರಂ ಅನ್ಯತ್ರ ಸಮ್ಯಗ್ ವೈರಾಗ್ಯಾತಿಶಯೇನ ಹರೌ ಸಮ್ಯಗ್ಭಕ್ತ್ಯತಿಶಯೇನ ಚ ತಲ್ಲೋಕ ಏವ ಸ್ಥಾಸ್ಯಾಮಿ ತಮೇವ ಪಶ್ಯಾಮೀತಿ ಪುನರ್ವಿಶಿಷ್ಯೋತ್ಕಂಠಿತಾತಃ ಪದೋದಿತ-ಮೋಕ್ಷಾಯ ಜ್ಞಾನಾಯ ಚ ಮನನಧ್ಯಾನಾತ್ಮಿಕಾ ಮುಖ್ಯಾ ಬ್ರಹ್ಮಜಿಜ್ಞಾಸಾ ಕರ್ತವ್ಯಾ। ತತ್ರಾಪ್ಯಾಧ್ಯಾನಶಕ್ತೇರ್ಮನನಮ್। ಆಜ್ಞಾನಾಚ್ಚ ಧ್ಯಾನಮಿತಿ ವಿವೇಕಃ। ವೈರಾಗ್ಯಮಾರಾಭ್ಯ ಬಂಧಧ್ವಂಸಾತ್ಮಕಮುಕ್ತಿಪರ್ಯಂತಸಕಲವ್ಯಾಪಾರಾಣಾಂ ಜಡತ್ವೇನ ಸ್ವಜನ್ಮನಿ ಸ್ವನಿಷ್ಠಾನ್ಯ-ಜನಕತ್ವಶಕ್ತೌ ಚ ಸ್ವಾತಂತ್ರ್ಯಾಯೋಗಾತ್ ಅವಾಂತರಕರ್ತುರ್ಜೀವಸ್ಯ ಚ ಸ್ವತಂತ್ರತ್ವಾನ್ನ ಮುಮುಕ್ಷೋಃ ಸ್ವಭಕ್ತಸ್ಯ ಪರಮೇಷ್ಟರೂಪಾಣಾಮೇಷಾಂ ವ್ಯಾಪಾರಾಣಾಂ ಸಿದ್ಧಯೇ ಪೂರ್ಣತಯಾ ಫಲಾಂತರಾನಪೇಕ್ಷಸ್ವತಂತ್ರಕರ್ತುರ್ಭಗವತಃ ಪ್ರಸಾದೋಽವಶ್ಯಮ-ಪೇಕ್ಷಣೀಯಃ। ರಾಜಪ್ರಸಾದಾದೇವ ರಾಜಪುರುಷಾಣಾಮಿಷ್ಟಸಂಪತ್ತಿದರ್ಶನಾತ್। ಪ್ರಸಾದಶ್ಚ ನಃ ಪ್ರಭುರಯಮಿತಿ ನಿರ್ವ್ಯಲೀಕತತ್ತತ್ ಸ್ನೇಹಾದೇವ ತೇಷು ತೇಷು ಲೋಕೇ ದೃಷ್ಟಃ। ಸ್ನೇಹಶ್ಚ ಸ್ವೋಪಕಾರಕೇ ದೃಷ್ಟಃ। ಉಪಕಾರಾತಿಶಯೇ ಸಾತಿಶಯಶ್ಚ। ಏವಂ ಪ್ರಸಾದೋಽಪಿ ಭಕ್ತಿಸ್ನೇಹಾದೇವ ದೃಷ್ಟಃ। ತದತಿಶಯೇ ಸಾತಿಶಯಃ। ಅನ್ಯೋನ್ಯಾಶ್ರಯ ಪರಿಹಾರಾಯ ಪ್ರಾಕ್ತಾವದೇನಮುದ್ಧರಾಮೀತಿ ಕಸ್ಮಿಂಶ್ಚಿತ್ಪುರುಷೇ ತತ್ಪುಣ್ಯಪರಿಪಾಕೈಕನಿಬಂಧನೋ ನಿಮಿತ್ತಾಂತ-ರಶೂನ್ಯಶ್ಚ ಪ್ರಸಾದೋಽಪ್ಯೇಕೋ ದೃಷ್ಟಃ। ಅತಃ ಪ್ರಕೃತೇಽಪಿ ಪ್ರಾಕ್ತಾವದ್ದೀನಮೇನಂ ಭಕ್ತಮುದ್ಧರಾಮೀತಿ ತದ್ಯೋಗ್ಯತಾಪರಿಪಾಕೈಕನಿಬಂಧನೋ ನಿಮಿತ್ತಾಂತರಶೂನ್ಯಶ್ಚ ಹರೇಃ ಪ್ರಸಾದೋ ವಕ್ತವ್ಯಃ। ಉಪರಿ ಚೋತ್ತರೋತ್ತರಪ್ರಚುರಶ್ರವಣಾದಿರೂಪಸ್ವವ್ಯಾಪಾರೇಷ್ವಪಿ ಸ್ವೋಪಕಾರಕೇ ಭಗವತಿ ಮಧ್ಯೇ ಮಧ್ಯೇ ಸಾತಿಶಯಾಭಕ್ತಿಃ ಕರ್ತವ್ಯಾ। ತದಭಿವ್ಯಕ್ತೋ ಹರೇಃ ಪ್ರಸಾದಶ್ಚ ತಾದೃಶೋ ವಕ್ತವ್ಯಃ। ಏವಂ ಚ ಪ್ರಾಥಮಿಕಪ್ರಸಾದಮಾರಭ್ಯ ಕ್ರಮೇಣಾಭಿವೃದ್ಧ-ಚರಮಮಹಾಪ್ರಸಾದಪರ್ಯಂತಂ ಪ್ರಸಾದಪರಂಪರಾಯಾಃ। ಪ್ರಾಥಮಿಕೋಪಕಾರಫಲಿತ-ಭಕ್ತಿಮಾರಭ್ಯಾಪರೋಕ್ಷಜ್ಞಾನಾಖ್ಯ ಮಹೋಪಕಾರಫಲಿತ ಮಹಾಭಕ್ತಿಪರ್ಯಂತ ಭಕ್ತಿಪರಂಪರಾಯಾಶ್ಚ ಸೂತ್ರಕೃತ ಏವಾಭಿಪ್ರೇತತ್ವಾನ್ನಾನುಕ್ತಕಥನಮಿದಮ್। ಯದ್ವಾ ಅತಃ ಜಡಪ್ರೇರಕತಯಾ ತತ್ರ ತತ್ರ ಪ್ರಸ್ತುತಾತ್ ನ ಅ ಇತಿವ್ಯುತ್ಪತ್ತ್ಯಾ ಸರ್ವವಿಲಕ್ಷಣತ್ವೇನಾಕಾರ-ಶಬ್ದವಾಚ್ಯಪರಮಾತ್ಮರೂಪಾತ್ಮೋಕ್ಷದಾಯಕತಯಾ ರುದ್ರಾದಿಪ್ರಸಾದವಿಲಕ್ಷಣಾದ್ವಾ ಭಗವತ್ಪ್ರಸಾದಾತ್। ಅತಃ ಕ್ರಮಿಕೋಪಕಾರಫಲತಯಾ ಪ್ರಸಕ್ತಭಗವದ್ಭಕ್ತಿತಶ್ಚೇತಿ ಸೌತ್ರಾತಃ-ಶಬ್ದಾದೇವ ಪ್ರಸಾದಭಕ್ತಿಪರಂಪರಾಪಿ ಸೂತ್ರಕೃತೈವೋಕ್ತಾ। ಏತದೇವಾಭಿಪ್ರೇತ್ಯ ಪ್ರಾಗ್ ಗ್ರಂಥಕೃತಾಪಿ ಸಾಧನಮಾಲಾ ಗ್ರಥಿತಾ। ಅಸ್ಮಾಭಿಶ್ಚ ಟೀಕಾಯಾಂ ವಿವೃತಾ। ಇದಾನೀಂ ಪುನ-ಸ್ತಮೇವಾರ್ಥಂ ಸೂತ್ರಾರೂಢಂ ಕರ್ತುಂ ಯಃ ಸ್ವತಃಪರತೋ ವೇತ್ಯಾದ್ಯುಕ್ತಮ್। ತಸ್ಯ ಸರ್ವಸ್ಯ ತಾತ್ಪರ್ಯಂ ಸಂಗೃಹ್ಯ ಸಾಮಾನ್ಯತ ಇತ್ಯಾದಿನಾ ಮಯಾಪಿ ಪ್ರಪಂಚಿತಮಿತಿ ಜ್ಞೇಯಮ್। ಭಾಷ್ಯೋಕ್ತಸಕಲಾರ್ಥಾನಾಂ ಸೌತ್ರಪದಾರೂಢತ್ವಂ ಭಾಷ್ಯಕೃತೋಽಭಿಪ್ರೇತಮೇವ। ಪ್ರಪಂಚಿತಂ ಚ ತತ್ರ ತತ್ರ ಭಾಷ್ಯಕೃತಾ ಟೀಕಾಕೃತಾ ಚ। ಸ್ವಮನಃಪ್ರೇರಕತಯಾ ಸದಾಹೃದಿ ಸನ್ನಿಹಿತೇನ ತೇನೈವ ಪ್ರೇರಿತಂ ಚ ಪ್ರಮೇಯಂ ಗ್ರಂಥಕಾರೇಣ ಪ್ರಾಕ್ ತತ್ರ ತತ್ರೋಕ್ತಮಿದಾನೀ-ಮುಚ್ಯತೇ ವಕ್ಷ್ಯತೇ ಚ। ವೀಣಾಂ ವಾದಯತೋ ವೀಣಾವಾದನಕೌಶಲಮಿವ ಸರ್ವವಿದ್ಯಾಸು

**ಕೃತಿನಃ ಪೂರ್ಣಪ್ರಮತೇರೇವೇಯಂ ಕೃತಿಃ । ಅಹಂ ತು ವೀಣಾವನ್ನಿಮಿತ್ತಮಾತ್ರಮಿತಿ ವದನ್ ಗ್ರಂಥಕಾರೋ ನ ಕ್ವಾಪ್ಯಕಥಿತಕಥಕಃ । ಅರ್ಜುನಪ್ರತಿಜ್ಞಾಪೂರಕಕೃಷ್ಣಕೃತಿವತ್ ಟೀಕಾಪೀಯಂ ಕೃತಪುಣ್ಯಾನಾಂ ತೇಷಾಮೇವ ಕೃತಿಃ । ನಾಕೃತಪುಣ್ಯಾನಾಮಸ್ಮಿನ್ಮಹಾಕಾರ್ಯೇಽಧಿಕಾರ ಇತಿ ಜ್ಞಾತವ್ಯಮ್ ॥ ೯೭ ॥**

**ವಿವರಣೆ –** ಈಗ ನಾಲ್ಕು ಅಧ್ಯಾಯಗಳ ಅರ್ಥವನ್ನು ಪ್ರತಿಪಾದಿಸುವ ಅಥಾತೋ ಬ್ರಹ್ಮಜಿಜ್ಞಾಸಾ ಎಂಬ ಮೊದಲನೆಯ ಸೂತ್ರಕ್ಕೆ ತಾವು ಇದುವರೆಗೆ ಹೇಳಿದ ಅರ್ಥವನ್ನು ಸಂಬಂಧ ಪಡಿಸುವವರಾಗಿ ಶ್ರವಣಾದಿಗಳ ಕಾಲವನ್ನು ವಿಭಾಗ ಮಾಡಿ ತೋರಿಸುತ್ತಾರೆ. ಶಾಸ್ತ್ರಶ್ರವಣಕ್ಕಿಂತ ಮೊದಲೇ ಶಾಸ್ತ್ರಜನ್ಯವಾದ ವೈರಾಗ್ಯವು ಕೂಡುವುದಿಲ್ಲವಾದ ಕಾರಣ ಸ್ವತಃ ಪರತೋವಾ ಎಂದು ಹೇಳಿದ್ದಾರೆ. ಸ್ವತಃ ಎಂದರೆ ತನ್ನ ಯೋಗ್ಯತೆಯ ಪರಿಪಾಕ ಬಲದಿಂದ ಅಥವಾ ಸ್ವತಂತ್ರನಾದ ಪರಮಾತ್ಮನ ಇಚ್ಛೆಯಿಂದ ಎಂದು ಅರ್ಥ. ಪರತಃ ಎಂದರೆ ವೈರಾಗ್ಯಾದಿ ಗುಣಭರಿತರಾದ ಮಹಾತ್ಮರ ಸಮಾಗಮದಿಂದ ಎಂದು ಅರ್ಥ. ಈಷದ್ವಿರಕ್ತಃ ಎಂಬಲ್ಲಿರುವ ಈಷತ್ ಎಂಬ ಪದವನ್ನು ವಿಷ್ಣುಭಕ್ತಿ ಸಾರಾಸಾರವಿವೇಕ ಮತ್ತು ಮೋಕ್ಷೇಚ್ಛೆಯಲ್ಲಿಯೂ ಅನ್ವಯ ಮಾಡಬೇಕು. ಸಾಮಾನ್ಯವಾದ ವೈರಾಗ್ಯಾದಿ ಸಂಪತ್ತಿಯ ಅನಂತರ ಎಂಬ ಅರ್ಥವು ಸೂತ್ರದಲ್ಲಿರುವ ಅತಃ ಶಬ್ದದಿಂದಲೇ ಸಂಗ್ರಹೀತವಾಗುತ್ತದೆ. ವಿಶೇಷವಾಗಿ ಜ್ಞಾತವಾಗದಿದ್ದ ವಸ್ತುವಿನಲ್ಲಿ ಆಶೆಯು ಉಂಟಾಗುವುದು ಕಂಡಿಲ್ಲವಾದ್ದರಿಂದ ಮೋಕ್ಷಸಾಧನ ಬ್ರಹ್ಮಜ್ಞಾನಕ್ಕಾಗಿ ಎಂಬ ಅತಃ ಶಬ್ದಸೂಚಿತವಾದ ವಿಷಯ, ಸಾಧನ ಮತ್ತು ಫಲಗಳಲ್ಲಿ ಶ್ರೋತೃವಿಗೆ ತಾದರ್ಥ್ಯಾರ್ಥಕವಾದ ಚತುರ್ಥೀ ವಿಭಕ್ತಿಯಿಂದ ಸೂಚಿಸಲ್ಪಟ್ಟ ಆಶಾತಿಶಯದ ಉತ್ಪತ್ತಿಗಾಗಿ ಆ ವಿಷಯವನ್ನು ಪ್ರತಿಪಾದಿಸುವ ಮೊದಲನೆಯ ಎರಡು ಅಧ್ಯಾಯಗಳಲ್ಲಿ ಸಾಕ್ಷಾತ್ತಾಗಿಯೂ ಮತ್ತು ಅದಕ್ಕೆ ಸಂಬಂಧಿಸಿದ ಸಾಧನಫಲಗಳನ್ನು ಪ್ರತಿಪಾದಿಸುವ ಉಳಿದ ಎರಡು ಅಧ್ಯಾಯಗಳಲ್ಲಿಯೂ ಬ್ರಹ್ಮವಿಚಾರತ್ವ ರೂಪವಾದ ಧರ್ಮವು ಇರುವುದರಿಂದ ಬ್ರಹ್ಮಜಿಜ್ಞಾಸಾಪದದಿಂದ ಹೇಳಲ್ಪಟ್ಟ ಸಮಗ್ರ ನಾಲ್ಕು ಅಧ್ಯಾಯಗಳ ಶ್ರವಣವನ್ನು ಒಮ್ಮೆ ಮಾಡಬೇಕು. ಇದು ಮೊದಲನೆಯ ಶ್ರವಣಕಾಲ. ಅನಂತರ ಒಂದು ಬಾರಿ ಶ್ರವಣ ಮಾಡಿದ ಮೇಲೆ ಪುನಃ ವಿಶೇಷ ಉತ್ಕಂಠಾವಿಷಯವಾದ ಚತುರ್ಥಾಧ್ಯಾಯದ ಫಲಕ್ಕೋಸ್ಕರ ಮತ್ತು ಅದಕ್ಕೆ ಸಾಧನವಾದ ಜ್ಞಾನಪಾದದಿಂದ ಹೇಳಲ್ಪಟ್ಟ ಅಪರೋಕ್ಷಜ್ಞಾನಕ್ಕೋಸ್ಕರ ಎಂದರೆ ಅತಃಶಬ್ದದಿಂದ ಹೇಳಲ್ಪಟ್ಟ ಮೋಕ್ಷಕ್ಕೋಸ್ಕರ ಮತ್ತು ಅತಃಶಬ್ದದಿಂದಲೇ ಹೇಳಲ್ಪಟ್ಟ ಅಪರೋಕ್ಷ ಜ್ಞಾನಕ್ಕೋಸ್ಕರವಾಗಿ ಸೂತ್ರದಲ್ಲಿರುವ ಅತಃಪದದಿಂದ ಹೇಳಲ್ಪಟ್ಟ ಸಾಕ್ಷಾತ್ ಮತ್ತು ಪರಂಪರಯಾ ಮೋಕ್ಷಸಾಧನವಾದ ಉಪಾಸನಾಪಾದೋಕ್ತವಾದ ಪ್ರಮೇಯಗಳೆಲ್ಲವೂ ಸೌತ್ರಜಿಜ್ಞಾಸಾ ಪದದಿಂದ ಮುಖ್ಯವಾಗಿ ಕರ್ತವ್ಯವೆಂದು ಹೇಳಲ್ಪಟ್ಟ ಶಾಸ್ತ್ರಾಭ್ಯಾಸ ರೂಪವಾದ ಮನನ ಮತ್ತು ಧ್ಯಾನಗಳು ಪರಿಪೂರ್ಣಸಿದ್ಧಿಪರ್ಯಂತವಾಗಿ ಉತ್ಕಂಠಾ ವಿಷಯವಾದುದರಿಂದ

ಅತಃ ಪದದಿಂದಲೂ ಹೇಳಲ್ಪಟ್ಟ ಅವುಗಳ ಸಿದ್ಧಿಗಾಗಿ ಭಗವಂತನ ಗುಣಪರಿಪೂರ್ಣತ್ವ ಮತ್ತು ನಿರ್ದೋಷತ್ವಪ್ರತಿಪಾದಕವಾದ ಮೊದಲನೆಯ ಎರಡು ಅಧ್ಯಾಯಗಳ ಅರ್ಥವನ್ನೂ ಭಗವಂತನಲ್ಲಿಯೇ ನಿರಂತರವಾಗಿ ಮನಸ್ಸನ್ನು ನಿಲ್ಲಿಸಲು ಉಪಯೋಗಿಯಾದ ವೈರಾಗ್ಯ ಮತ್ತು ಭಕ್ತಿಗಳನ್ನು ಉಂಟು ಮಾಡುವ ಮೂರನೆಯ ಅಧ್ಯಾಯದ ಮೊದಲನೆಯ ಎರಡು ಪಾದಗಳ ಅರ್ಥವನ್ನೂ ಮತ್ತು ಶ್ರೇಷ್ಠವಾದ ಜ್ಞಾನದ ಸಲುವಾಗಿ ಹೇಳಲ್ಪಟ್ಟ ಉಪಾಸನೆಯನ್ನೂ ಮತ್ತು ಅದರ ಫಲವಾದ ಜ್ಞಾನ ಮತ್ತು ಮೋಕ್ಷಗಳ ಸ್ವರೂಪವನ್ನೂ ಚೆನ್ನಾಗಿ ತಿಳಿಯುವುದಕ್ಕೋಸ್ಕರ ಈ ವಿಷಯಗಳಲ್ಲಿ ವಾದಿವಿಪ್ರತಿಪತ್ತಿಯು ಇರುವುದರಿಂದ ಅದನ್ನು ಪರಿಹರಿಸಿಕೊಳ್ಳಲು ಸಮಗ್ರವಾದ ನಾಲ್ಕು ಅಧ್ಯಾಯಗಳನ್ನು ಅನೇಕ ಬಾರಿ ಶ್ರವಣವನ್ನು ಮಾಡಬೇಕು.

**ವಿಷಯಸ್ಯೈವ ಶಾಸ್ತೃತ್ವಾನ್ಮುಖ್ಯಂ ಶಾಸ್ತ್ರಮಿದಂ ಕಿಲ ।**
**ತದಂಗಂ ಶಾಸ್ತ್ರಮಿತರತ್ ಫಲಸಾಧನಬೋಧಕಮ್ ।**
**ಪ್ರವರ್ತಕಸ್ಯ ಚರ್ಚಾತ್ರ ಸಾ ಸಾಕ್ಷಾದ್ವಿಷಯಸ್ಯ ಯತ್ ॥ ೯೮ ॥**

**ಅರ್ಥ** – ವಿಷಯಸ್ಯೈವ= ವಿಷಯವನ್ನೇ, ಶಾಸ್ತೃತ್ವಾತ್= ಪ್ರತಿಪಾದನೆ ಮಾಡುವುದರಿಂದ, ಇದಂ= ಈ ಮೊದಲನೆಯ ಎರಡು ಅಧ್ಯಾಯಗಳು, ಮುಖ್ಯಂ= ಮುಖ್ಯವಾದ, ಶಾಸ್ತ್ರಂ ಕಿಲ= ಶಾಸ್ತ್ರವಷ್ಟೆ, ಇತರತ್= ಅನ್ಯವಾದ, ಫಲಸಾಧನಬೋಧಕಂ= ಫಲ ಮತ್ತು ಸಾಧನವನ್ನು ಹೇಳುವ, ಶಾಸ್ತ್ರಂ= ಶಾಸ್ತ್ರವು, ತದಂಗಂ= ಈ ಮುಖ್ಯಶಾಸ್ತ್ರಕ್ಕೆ ಅಂಗಭೂತವಾದುದು, ಯತ್= ಯಾವ ಕಾರಣದಿಂದ, ಪ್ರವರ್ತಕಸ್ಯ= ಸ್ವಯೋಗ್ಯವಾದ ಸಾಧನದಿಂದ ಫಲಪ್ರಾಪ್ತಿಯನ್ನು ಉದ್ದೇಶಿಸಿ ಪ್ರವರ್ತನೆಯನ್ನು ಉಂಟುಮಾಡುವುದರಿಂದ, ಅತ್ರ= ಈ ಎರಡು ಅಧ್ಯಾಯಗಳಲ್ಲಿ, ಸಾಕ್ಷಾತ್= ನೇರವಾಗಿ, ವಿಷಯಸ್ಯ= ವಿಷಯನಾದ ಬ್ರಹ್ಮನ, ಚರ್ಚಾ= ಚರ್ಚೆಯು ಮಾಡಲ್ಪಟ್ಟಿದೆ.

**ಅನುವಾದ** – ವಿಷಯವನ್ನೇ ಪ್ರತಿಪಾದನೆ ಮಾಡುವುದರಿಂದ ಬ್ರಹ್ಮಸೂತ್ರದ ಮೊದಲೆರಡು ಅಧ್ಯಾಯಗಳು ಮುಖ್ಯವಾದ ಶಾಸ್ತ್ರವಷ್ಟೆ. ಫಲ ಮತ್ತು ಸಾಧನಗಳನ್ನು ಪ್ರತಿಪಾದನೆ ಮಾಡುವ ಇತರ ಎರಡು ಅಧ್ಯಾಯಗಳು ಇದಕ್ಕೆ ಅಂಗಭೂತವಾದವು. ಸ್ವಯೋಗ್ಯ ಸಾಧನದಿಂದ ಸ್ವಯೋಗ್ಯ ಫಲವನ್ನು ಉದ್ದೇಶಿಸಿ ಪ್ರವೃತ್ತಿಯನ್ನು ಉಂಟು ಮಾಡುವುದರಿಂದ ಮೊದಲನೆಯ ಎರಡು ಅಧ್ಯಾಯಗಳಲ್ಲಿ ನೇರವಾಗಿ ವಿಷಯನಾದ ಬ್ರಹ್ಮನ ಚರ್ಚೆಯೇ ಮಾಡಲ್ಪಟ್ಟಿದೆ.

**ಭಾವವಿಲಾಸಿನೀ**– ಅಧ್ಯಾಯಚತುಷ್ಟಯಾತ್ಮಕಶಾಸ್ತ್ರಸ್ಯ ನೈಕಪ್ರಕಾರೇಣೈವ ಶಾಸ್ತ್ರತ್ವಮ್ । ಕಿಂತ್ವವಾಂತರವಿಭಾಗೋಽಪ್ಯಸ್ತೀತ್ಯಾಶಯೇನೋಕ್ತಮ್ – ವಿಷಯಸ್ಯೇತಿ ॥ ವಿಷಯಸ್ಯ ವಿಷಯ-ರೂಪಬ್ರಹ್ಮಣ ಏವ ಶಾಸ್ತೃತ್ವಾತ್ ಪ್ರತಿಪಾದಕತ್ವಾತ್‌ಬ್ರಹ್ಮಸ್ವರೂಪನಿರೂಪಕತ್ವಾದಿತ್ಯರ್ಥಃ । ಇದಂ

ಅಧ್ಯಾಯದ್ವಯಮ್ । ತದಂಗಂ ತದಂಗಭೂತಶಾಸ್ತ್ರಮ್ । ಇತರತ್ ಅಧ್ಯಾಯದ್ವಯಮ್ । ಪ್ರವರ್ತಕಸ್ಯ ಉದ್ದೇಶ್ಯತಯಾ ಪ್ರವರ್ತಕಸ್ಯ । ಸ್ವಯೋಗ್ಯಸಾಧನೇನ ಫಲಸಂಪತ್ತಿಮುದ್ದಿಶ್ಯ ತತ್ರ ಪ್ರವರ್ತನಾದಿತಿ ಭಾವಃ । ಯತ್ ಯಸ್ಮಾತ್ ॥ ೯೮ ॥

ವೈರಾಗ್ಯಭಕ್ತಿಪಾದೌ ಚ ಶ್ರುತ್ವಾಽಧ್ಯಾಯದ್ವಯಶ್ರುತೇಃ ।
ಸಮ್ಯಕ್ಸಾರಾಸಾರವೇದೀ ಭಕ್ತಿವೈರಾಗ್ಯದಾರ್ಢ್ಯವಾನ್ ॥ ೯೯ ॥

ಸಾರ್ಧಾಧ್ಯಾಯದ್ವಯೋಕ್ತಾರ್ಥಸಂಪನ್ನೋಽಥ ವಿಮುಕ್ತಯೇ ।
ತದ್ಧೇತುದೃಷ್ಟ್ಯೈ ಚ ಪುನಃ ಶಾಸ್ತ್ರಾಭ್ಯಾಸಸ್ವರೂಪಿಣೀಮ್ ।
ಮನನಾಖ್ಯಾಂ ಧ್ಯಾನರೂಪಾಂ ಜಿಜ್ಞಾಸಾಂ ಚಾಚರೇತ್ ಕಿಲ ॥ ೧೦೦ ॥

**ಅರ್ಥ –** ವೈರಾಗ್ಯಭಕ್ತಿಪಾದೌ ಚ= ವೈರಾಗ್ಯ ಮತ್ತು ಭಕ್ತಿಪಾದಗಳನ್ನು, ಶ್ರುತ್ವಾ= ಕೇಳಿ, ಅಧ್ಯಾಯದ್ವಯಶ್ರುತೇಃ= ಮೊದಲಿನ ಎರಡು ಅಧ್ಯಾಯಗಳನ್ನು ಕೇಳಿ, ಸಮ್ಯಕ್ಸಾರಾಸಾರವೇದೀ= ಚೆನ್ನಾಗಿ ಸಾರಾಸಾರವಿವೇಕವುಳ್ಳವನು, ಭಕ್ತಿವೈರಾಗ್ಯದಾರ್ಢ್ಯ-ವಾನ್= ದೃಢವಾದ ಭಕ್ತಿ ಮತ್ತು ವೈರಾಗ್ಯಗಳನ್ನು ಹೊಂದಿದವನಾದ ಅಧಿಕಾರಿಯು, ಸಾರ್ಧಾಧ್ಯಾಯದ್ವಯೋಕ್ತಾರ್ಥಸಂಪನ್ನಃ= ಮೊದಲನೆಯ ಎರಡೂವರೆ ಅಧ್ಯಾಯಗಳಲ್ಲಿ ಹೇಳಲ್ಪಟ್ಟ ಅರ್ಥದಿಂದ ಕೂಡಿದವನಾಗಿ, ಅತಃ= ಅನಂತರದಲ್ಲಿ, ವಿಮುಕ್ತಯೇ= ಮೋಕ್ಷಕ್ಕೋಸ್ಕರ, ಚ= ಮತ್ತು, ತದ್ಧೇತುದೃಷ್ಟ್ಯೈ= ಅದಕ್ಕೆ ಸಾಧನವಾದ ಅಪರೋಕ್ಷಜ್ಞಾನಕ್ಕೋಸ್ಕರ, ಪುನಃ= ಮತ್ತೆ, ಶಾಸ್ತ್ರಾಭ್ಯಾಸಸ್ವರೂಪಿಣೀಂ= ಶಾಸ್ತ್ರಾಭ್ಯಾಸ ಸ್ವರೂಪವಾದ, ಮನನಾಖ್ಯಾಂ= ಮನನ ಎಂದು ಕರೆಸಲ್ಪಡುವ, ಧ್ಯಾನರೂಪಾಂ= ಧ್ಯಾನರೂಪವಾದ, ಜಿಜ್ಞಾಸಾಂ ಚ= ವಿಚಾರವನ್ನೂ ಸಹ, ಆಚರೇತ್ ಕಿಲ= ಮಾಡಬೇಕಷ್ಟೆ?

**ಅನುವಾದ –** ಮೊದಲಿನ ಎರಡು ಅಧ್ಯಾಯಗಳನ್ನು ಶ್ರವಣ ಮಾಡಿ ಸಾರಾಸಾರ ವಿವೇಕವನ್ನು ಚೆನ್ನಾಗಿ ಹೊಂದಿದವನಾಗಿ ವೈರಾಗ್ಯ ಭಕ್ತಿಪಾದಗಳನ್ನು ಶ್ರವಣ ಮಾಡಿ ದೃಢವಾದ ಭಕ್ತಿ ವೈರಾಗ್ಯಗಳನ್ನು ಹೊಂದಿದಂತಹ ಅಧಿಕಾರಿಯು ಮೊದಲನೆಯ ಎರಡೂವರೆ ಅಧ್ಯಾಯಗಳಲ್ಲಿ ಹೇಳಲ್ಪಟ್ಟ ಅರ್ಥದಿಂದ ಸಂಪನ್ನನಾಗಿ ಮೋಕ್ಷಕ್ಕೋಸ್ಕರ ಮತ್ತು ಮೋಕ್ಷಹೇತುವಾದ ಅಪರೋಕ್ಷ ಜ್ಞಾನಕ್ಕೋಸ್ಕರ ಪುನಃ ಶಾಸ್ತ್ರಾಭ್ಯಾಸರೂಪವಾದ ಮನನವೆಂದು ಕರೆಯಲ್ಪಡುವ ಧ್ಯಾನರೂಪವಾದ ಜಿಜ್ಞಾಸೆಯನ್ನು ಆಚರಿಸಬೇಕಷ್ಟೆ?

**ಭಾವವಿಲಾಸಿನೀ–** ಅಧ್ಯಾಯದ್ವಯಶ್ರುತೇಃ ಸಃ ಸಾರಾಸಾರವೇದೀ । ಬ್ರಹ್ಮಣಃ ಸಾರತಯಾಽನ್ಯೇಷಾಮಸಾರತಯಾ ತತ್ರ ನಿರೂಪಣಾತ್ । ವೈರಾಗ್ಯಭಕ್ತಿಪಾದೌ ''ಶ್ರುತ್ವಾ ಚ ಭಕ್ತಿವೈರಾಗ್ಯದಾರ್ಢ್ಯವಾನಿ'' ತಿಸಂಬಂಧಃ ॥ ೯೯-೧೦೦ ॥

ಧ್ಯಾನಸ್ಯ ಪರಿಪಾಕೇ ತು ತಂ ದೃಷ್ಟ್ವಾ ಮುಚ್ಯತೇ ಕಿಲ ॥ ೧೦೦ ॥

**ಅರ್ಥ** – ಧ್ಯಾನಸ್ಯ= ಧ್ಯಾನದ, ಪರಿಪಾಕೇ ತು= ವಿಶೇಷವಾದ ಪರಿಪಾಕವು ಉಂಟಾಗುತ್ತಿರಲು, ತಂ= ಆ ಪರಮಾತ್ಮನನ್ನು, ದೃಷ್ಟ್ವಾ= ನೋಡಿ, ಮುಚ್ಯತೇ ಕಿಲ= ಮೋಕ್ಷವನ್ನು ಪಡೆಯುವನಷ್ಟೆ.

**ಅನುವಾದ** – ಧ್ಯಾನವು ಪಕ್ವಾವಸ್ಥೆಯನ್ನು ಹೊಂದುತ್ತಿರಲು ಪರಮಾತ್ಮನನ್ನು ನೋಡಿ ಮುಕ್ತನಾಗುವನಷ್ಟೆ?

ಅತಃ ಶ್ರವಣವೈರಾಗ್ಯಭಕ್ತಿಶಾಸ್ತ್ರವಿಚಾರಣಾಃ ।
ಧ್ಯಾನಂ ಚ ಭಗವದ್ದೃಷ್ಟಿಸ್ತದ್ಭಕ್ತಿಸ್ತದನುಗ್ರಹಃ ॥ ೧೦೨ ॥

ಇಮಾನಿ ಸಾಧನಾನ್ಯಂತೇ ಫಲಾಧ್ಯಾಯೋದಿತಂ ಫಲಂ ।
ಇತ್ಯಾದಿ ಸೂತ್ರೇ ಸರ್ವೋಽಪಿ ಶಾಸ್ತ್ರಾರ್ಥಃ ಕಥಿತಃ ಕಿಲ ॥ ೧೦೩ ॥

**ಅರ್ಥ** – ಅತಃ= ಆದ್ದರಿಂದ, ಶ್ರವಣವೈರಾಗ್ಯಭಕ್ತಿಶಾಸ್ತ್ರವಿಚಾರಣಾಃ= ಶ್ರವಣ, ವೈರಾಗ್ಯ, ಭಕ್ತಿ, ಪುನಃ ಶಾಸ್ತ್ರ ಮನನ, ಚ= ಮತ್ತು, ಧ್ಯಾನಂ= ಧ್ಯಾನ, ಭಗವದ್ದೃಷ್ಟಿಃ= ಭಗವಂತನ ಅಪರೋಕ್ಷ ಜ್ಞಾನ, ತದ್ಭಕ್ತಿಃ= ಭಗವಂತನಲ್ಲಿ ವಿಶೇಷವಾದ ಭಕ್ತಿ, ತದನುಗ್ರಹಃ= ಭಗವಂತನ ವಿಶೇಷವಾದ ಅನುಗ್ರಹ, ಇಮಾನಿ ಸಾಧನಾನಿ= ಇವುಗಳು ಸಾಧನಗಳು, ಅಂತೇ= ಕೊನೆಯಲ್ಲಿ, ಫಲಾಧ್ಯಾಯೋದಿತಂ= ಫಲಾಧ್ಯಾಯದಲ್ಲಿ ಹೇಳಲ್ಪಟ್ಟ, ಫಲಂ= ಫಲವು ಉಂಟಾಗುತ್ತದೆ, ಇತ್ಯಾದಿ= ಈ ರೀತಿಯಾಗಿ, ಸರ್ವೋಽಪಿ ಶಾಸ್ತ್ರಾರ್ಥಃ= ಎಲ್ಲ ಶಾಸ್ತ್ರಾರ್ಥವೂ ಕೂಡ, ಸೂತ್ರೇ= ಜಿಜ್ಞಾಸಾ ಸೂತ್ರದಲ್ಲಿ, ಕಥಿತಃ ಕಿಲ= ಹೇಳಲ್ಪಟ್ಟಿದೆಯಷ್ಟೆ?

**ಅನುವಾದ** – ಆದ್ದರಿಂದ ಶ್ರವಣ, ವೈರಾಗ್ಯ, ಭಕ್ತಿ, ಮನನ, ಧ್ಯಾನ ಭಗವದಪರೋಕ್ಷ ಜ್ಞಾನ ವಿಶೇಷವಾದ ಭಕ್ತಿ ಮತ್ತು ಭಗವಂತನ ವಿಶೇಷವಾದ ಅನುಗ್ರಹ ಇವು ಸಾಧನಗಳು. ಕೊನೆಯಲ್ಲಿ ಫಲಾಧ್ಯಾಯದಲ್ಲಿ ಹೇಳಲ್ಪಟ್ಟದ್ದು ಫಲ. ಈ ರೀತಿಯಾಗಿ ಎಲ್ಲ ಶಾಸ್ತ್ರಾರ್ಥವು ಜಿಜ್ಞಾಸಾಸೂತ್ರದಲ್ಲಿ ಹೇಳಲ್ಪಟ್ಟಿದೆಯಷ್ಟೆ.

**ಭಾವವಿಲಾಸಿನೀ**– ತಂ ಪರಮಾತ್ಮಾನಮ್ ॥ ೧೦೦ ॥ ಅತಃ ಸೌತ್ರಪದಾವಲೀಸತ್ತ್ವಾತ್ । ಆದಿಸೂತ್ರೇ ಪ್ರಥಮಸೂತ್ರೇ ॥ ೧೦೨-೧೦೩ ॥

ಉತ್ಕ್ರಾಂತಿಮಾರ್ಗಗಮ್ಯಾಪ್ತಿಭೋಗರೂಪಂ ಫಲಂ ಸತಾಂ ।
ಫಲಾಧ್ಯಾಯೇ ತು ಕಥಿತಂ ಬುದ್ಧಿಶುದ್ಧ್ಯೈ ವಿಚಾರ್ಯತೇ ॥ ೧೦೪ ॥

**ಅರ್ಥ** – ಫಲಾಧ್ಯಾಯೇ= ಫಲಾಧ್ಯಾಯದಲ್ಲಿ, ಕಥಿತಂ ತು= ವಿಶೇಷವಾಗಿ ಹೇಳಲ್ಪಟ್ಟ, ಸತಾಂ= ಸಜ್ಜನರಿಗೆ, ಉತ್ಕ್ರಾಂತಿಮಾರ್ಗಗಮ್ಯಾಪ್ತಿಭೋಗರೂಪಂ= ಉತ್ಕ್ರಾಂತಿ ಮಾರ್ಗ,

ಗಮ್ಯಪ್ರಾಪ್ತಿ ಮತ್ತು ಭೋಗರೂಪವಾದ, ಫಲಂ= ಫಲವು, ಬುದ್ಧಿಶುದ್ಧ್ಯೈ= ಬುದ್ಧಿಶುದ್ಧಿಗಾಗಿ, ವಿಚಾರ್ಯತೇ= ವಿಚಾರ ಮಾಡಲ್ಪಡುತ್ತದೆ.

**ಅನುವಾದ** – ಫಲಾಧ್ಯಾಯದಲ್ಲಿ ಸಜ್ಜನರಿಗೆ ವಿಶೇಷವಾಗಿ ಹೇಳಲ್ಪಟ್ಟ ಉತ್ಕ್ರಾಂತಿ, ಮಾರ್ಗ, ಗಮ್ಯಪ್ರಾಪ್ತಿ ಮತ್ತು ಭೋಗರೂಪವಾದ ಫಲವು ಬುದ್ಧಿಶುದ್ಧಿಗಾಗಿ ಇಲ್ಲಿ ವಿಚಾರ ಮಾಡಲ್ಪಡುತ್ತದೆ.

**ಭಾವವಿಲಾಸಿನೀ**–ಸಾಧನಂ ನಿರೂಪ್ಯ ಫಲಂ ಚ ಕಿಂಚಿದ್ವಿವೇಚಯತಿ –ಉತ್ಕ್ರಾಂತೀತಿ ॥ ಬುದ್ಧಿಶುದ್ಧ್ಯೈ ಅಸ್ಮನ್ಮನಃ ಪಾವನೀಕರಣಾಯ ॥ ೧೦೪ ॥

**ಜ್ಞಾನೀ ಜ್ಞಾನೋದಯೇ ಜಾತೇ ಬ್ರಹ್ಮನಾಡ್ಯಾ ವಿನಿರ್ಗತಃ ।**
**ಅರ್ಚಿರಾದ್ಯಧ್ವನಾ ಪ್ರಾಪ್ಯ ಬ್ರಹ್ಮಲೋಕೇ ಚಿರಂ ವಸೇತ್ ।**
**ಜೀವನ್ಮುಕ್ತಿದಶಾ ಸೈವ ಜ್ಞಾನಿನಾಂ ಕೀರ್ತ್ಯತೇ ಬುಧೈಃ ॥ ೧೦೫ ॥**

**ಅರ್ಥ** – ಜ್ಞಾನೀ= ಅಪರೋಕ್ಷ ಜ್ಞಾನಿಯಾದವನು, ಜ್ಞಾನೋದಯೇ ಜಾತೇ= ಬ್ರಹ್ಮಾಪರೋಕ್ಷಜ್ಞಾನವು ಉಂಟಾಗುತ್ತಿರಲು, ಬ್ರಹ್ಮನಾಡ್ಯಾ= ಬ್ರಹ್ಮನಾಡಿಯ ಮಾರ್ಗದಿಂದ, ವಿನಿರ್ಗತಃ= ದೇಹದಿಂದ ಹೊರಗೆ ಬಂದವನಾಗಿ, ಅರ್ಚಿರಾದ್ಯಧ್ವನಾ= ಅರ್ಚಿರಾದಿ ಮಾರ್ಗದಿಂದ, ಪ್ರಾಪ್ಯ= ಬ್ರಹ್ಮಲೋಕವನ್ನು ಹೊಂದಿ, ಬ್ರಹ್ಮಲೋಕೇ= ಚತುರ್ಮುಖ ಬ್ರಹ್ಮನ ಲೋಕದಲ್ಲಿ, ಚಿರಂ= ಬ್ರಹ್ಮನ ಮುಕ್ತಿಕಾಲ ಪರ್ಯಂತವಾಗಿ, ವಸೇತ್= ವಾಸ ಮಾಡುತ್ತಾನೆ, ಸೈವ= ಇಂತಹ ಅವಸ್ಥೆಯೇ, ಬುಧೈಃ= ಜ್ಞಾನಿಗಳಿಂದ, ಜ್ಞಾನಿನಾಂ= ಅಪರೋಕ್ಷ ಜ್ಞಾನವುಳ್ಳವರಿಗೆ, ಜೀವನ್ಮುಕ್ತಿದಶಾ= ಜೀವನ್ಮುಕ್ತಿದೆಶೆಯೆಂದು, ಕೀರ್ತ್ಯತೇ= ಹೇಳಲ್ಪಡುತ್ತದೆ.

**ಅನುವಾದ** – ಅಪರೋಕ್ಷಜ್ಞಾನವುಂಟಾಗುತ್ತಿರಲು ಅಪರೋಕ್ಷಜ್ಞಾನಿಯು ಬ್ರಹ್ಮನಾಡಿಯಿಂದ ದೇಹದಿಂದ ಹೊರಗೆ ಬಂದವನಾಗಿ ಅರ್ಚಿರಾದಿ ಮಾರ್ಗದಿಂದ ಚತುರ್ಮುಖಬ್ರಹ್ಮಲೋಕವನ್ನು ಹೊಂದಿ ಅಲ್ಲಿ ಬ್ರಹ್ಮದೇವರ ಮುಕ್ತಿಕಾಲ ಪರ್ಯಂತವಾಗಿ ವಾಸಿಸುತ್ತಾನೆ. ಅಪರೋಕ್ಷಜ್ಞಾನಿಯ ಈ ಅವಸ್ಥೆಯನ್ನು ಜ್ಞಾನಿಗಳು ಜೀವನ್ಮುಕ್ತಿದಶಾ ಎಂದು ಕರೆಯುತ್ತಾರೆ.

**ಭಾವವಿಲಾಸಿನೀ**– ಚಿರಂ ಬ್ರಹ್ಮಣೋ ಮುಕ್ತಿಕಾಲಪರ್ಯಂತಮ್ ॥ ೧೦೫ ॥

**ದ್ವಿಪರಾರ್ಧಾತ್ಮಕಃ ಕಾಲಃ ಪರ ಇತ್ಯೇವ ಕಥ್ಯತೇ ।**
**ಪರಸ್ಯಾರ್ಧಂ ಪರಾರ್ಧಂ ಯತ್ಪ್ರಾಹುಃ ಶಬ್ದವಿಚಕ್ಷಣಾಃ ॥ ೧೦೬ ॥**

**ಅರ್ಥ** – ದ್ವಿಪರಾರ್ಧಾತ್ಮಕಃ= ಎರಡು ಪರಾರ್ಧ ಸ್ವರೂಪವಾದ, ಕಾಲಃ= ಕಾಲವು, ಪರ ಇತ್ಯೇವ= ಪರ ಎಂದೇ, ಕಥ್ಯತೇ= ಹೇಳಲ್ಪಡುತ್ತದೆ, ಶಬ್ದವಿಚಕ್ಷಣಾಃ= ಶಬ್ದಾರ್ಥಜ್ಞಾನದಲ್ಲಿ

ಪರಿಣತರಾದವರು, ಪರಾರ್ಧಂ= ಪರಾರ್ಧ ಕಾಲವೆಂದರೆ, ಪರಸ್ಯಾರ್ಧಂ= ಪರ ಕಾಲದ ಅರ್ಧವೆಂದು, ಪ್ರಾಹುಃ= ಹೇಳುತ್ತಾರೆ.

**ಅನುವಾದ** – ಎರಡುಪರಾರ್ಧಪರ್ಯಂತವಾದ ಕಾಲವು ಪರ ಎಂದು ಕರೆಯಲ್ಪಡುತ್ತದೆ. ಶಬ್ದಾರ್ಥತತ್ವಜ್ಞಾನವುಳ್ಳವರು ಈ ಪರಕಾಲದ ಅರ್ಧವನ್ನು ಪರಾರ್ಧವೆಂದು ಕರೆಯುತ್ತಾರೆ.

ಬ್ರಹ್ಮಣಃ ಶತವರ್ಷಾತ್ಮಾ ಕಾಲಸ್ತಸ್ಮಾತ್ ಪರಾಭಿದಃ ।
ತದಂತೇ ಕಿಲ ಸರ್ವೇಷಾಂ ಪ್ರಾಗ್‌ಜ್ಞಾತಪರಮಾತ್ಮನಾಮ್ ।
ತೇನೈವ ಬ್ರಹ್ಮಣಾ ಸಾಕಂ ಮಹಾಮೋಕ್ಷೋ ಭವಿಷ್ಯತಿ ॥ ೧೦೭ ॥

**ಅರ್ಥ** – ಬ್ರಹ್ಮಣಃ= ಚತುರ್ಮುಖ ಬ್ರಹ್ಮದೇವರ, ಶತವರ್ಷಾತ್ಮಾ= ನೂರು ವರ್ಷ ಪರ್ಯಂತವಾದ, ಕಾಲಃ= ಕಾಲವು, ತಸ್ಮಾತ್= ಆ ಕಾರಣದಿಂದ, ಪರಾಭಿದಃ= ಪರ ಎಂಬ ಹೆಸರನ್ನು ಹೊಂದಿದೆ, ತದಂತೇ= ಆ ಪರಕಾಲದ ನಂತರ, ಪ್ರಾಕ್‌ಜ್ಞಾತಪರಮಾತ್ಮನಾಂ= ಮೊದಲೇ ಪರಮಾತ್ಮನ ಅಪರೋಕ್ಷ ಜ್ಞಾನವನ್ನು ಪಡೆದ, ಸರ್ವೇಷಾಂ= ಎಲ್ಲರಿಗೂ, ತೇನೈವ= ಅದೇ, ಬ್ರಹ್ಮಣಾ ಸಾಕಂ= ಬ್ರಹ್ಮದೇವರಿಂದ ಕೂಡಿಕೊಂಡು, ಮಹಾಮೋಕ್ಷಃ= ಪರಮ ಮೋಕ್ಷವು, ಭವಿಷ್ಯತಿ ಕಿಲ= ಉಂಟಾಗುವುದಷ್ಟೆ.

**ಅನುವಾದ** – ಆದ್ದರಿಂದ ಚತುರ್ಮುಖ ಬ್ರಹ್ಮದೇವರ ನೂರು ವರ್ಷಾತ್ಮಕವಾದ ಕಾಲವು ಪರ ಎಂದು ಕರೆಯಲ್ಪಡುತ್ತದೆ. ಈ ಪರಕಾಲವು ಮುಗಿಯುವ ಮೊದಲೇ ಅಪರೋಕ್ಷ ಜ್ಞಾನವನ್ನು ಪಡೆದ ಎಲ್ಲರಿಗೂ ಅದೇ ಬ್ರಹ್ಮನ ಜೊತೆಯಲ್ಲಿಯೇ ಪರಾವಸಾನದಲ್ಲಿ ಪರಮ ಮೋಕ್ಷವು ಉಂಟಾಗುವುದಷ್ಟೆ.

**ಭಾವವಿಲಾಸಿನೀ**– ತದಂತೇ ಪರಾಂತೇ ॥ ೧೦೬-೧೦೭ ॥

ವೇದಾಂತಜ್ಞಾನತಃ ಸಮ್ಯಜ್ ನಿಶ್ಚಿತಾರ್ಥಾ ವಿರಾಗಿಣಃ ।
ಯತಯಃ ಶುದ್ಧ ಸತ್ತ್ವಾಸ್ತೇ ಬ್ರಹ್ಮಲೋಕೇ ವಸಂತಿ ಹಿ ॥ ೧೦೮ ॥

ಸರ್ವೇ ಪರಾಂತಕಾಲೇ ತು ಪರಾಮೃತಪದೋದಿತಾತ್ ।
ನಾರಾಯಣಾನ್ನಿತ್ಯಮುಕ್ತಾತ್ಪರಿಮುಚ್ಯಂತಿ ಸಂಸೃತೇಃ ॥ ೧೦೯ ॥

ಲ್ಯಬ್ಲೋಪೇ ಪಂಚಮೀ ಚೇಯಂ ಭವೇಚ್ಛಬ್ದಜ್ಞಸಂವಿದಾ ।
ಪರಾಮೃತಂ ಪ್ರಾಪ್ಯ ಮುಕ್ತಾ ಇತ್ಯಪ್ಯರ್ಥಃ ಶ್ರುತೇಸ್ತದಾ ॥ ೧೧೦ ॥

**ಅರ್ಥ** – ವೇದಾಂತಜ್ಞಾನತಃ= ವೇದಾಂತದಿಂದ ಜನ್ಯವಾದ ಜ್ಞಾನದಿಂದ, ಸಮ್ಯಕ್= ಚೆನ್ನಾಗಿ, ನಿಶ್ಚಿತಾರ್ಥಾಃ= ತತ್ವನಿಶ್ಚಯವನ್ನು ಉಳ್ಳ, ವಿರಾಗಿಣಃ= ವಿರಕ್ತರಾದ, ಶುದ್ಧಸತ್ತ್ವಾಃ=

ಪರಿಶುದ್ಧವಾದ ಮನಸ್ಸುಳ್ಳ, ಯತಯಃ= ಯಾವ ಯತಿಗಳು (ಪ್ರಯತ್ನಶೀಲರು ಇದ್ದಾರೆಯೋ), ತೇ= ಅವರು, ಬ್ರಹ್ಮಲೋಕೇ= ಬ್ರಹ್ಮಲೋಕದಲ್ಲಿ, ವಸಂತಿ ಹಿ= ವಾಸಿಸುತ್ತಾರಷ್ಟೆ. ಸರ್ವೇ= ಅವರೆಲ್ಲರೂ, ಪರಾಂತಕಾಲೇ ತು= ಪರಾಂತಕಾಲದಲ್ಲಿಯಾದರೂ, ಪರಾಮೃತಪದೋದಿತಾತ್= ಪರಾಮೃತಪದದಿಂದ ಹೇಳಲ್ಪಟ್ಟ, ನಿತ್ಯಮುಕ್ತಾತ್= ನಿತ್ಯಮುಕ್ತನಾದ, ನಾರಾಯಣಾತ್= ನಾರಾಯಣನಿಂದ, ಸಂಸೃತೇಃ= ಸಂಸಾರದ ದೆಸೆಯಿಂದ, ಮುಚ್ಯಂತಿ= ಬಿಡುಗಡೆಯನ್ನು ಹೊಂದುತ್ತಾರೆ, ಶಬ್ದಜ್ಞಸಂವಿದಾ= ಶಬ್ದವನ್ನು ತಿಳಿದವರ ಜ್ಞಾನಕ್ಕೆ ಅನುಗುಣವಾಗಿ, ಇಯಂ ಪಂಚಮೀ= ಪರಾಮೃತಾತ್ ಎಂಬಲ್ಲಿರುವ ಪಂಚಮೀ ವಿಭಕ್ತಿಯು, ಲ್ಯಬ್ಲೋಪೇ= ಲ್ಯಬ್ಲೋಪ ನಿಮಿತ್ತವಾದ ಪಂಚಮಿಯಾಗಿ, ಭವೇತ್= ಆಗುತ್ತದೆ, ತದಾ= ಆಗ, ಶ್ರುತೇಃ= ವೇದವಾಕ್ಯಕ್ಕೆ, ಪರಾಮೃತಂ ಪ್ರಾಪ್ಯ= ಪರಾಮೃತ ಎಂದರೆ ನಿತ್ಯಮುಕ್ತನಾದ ನಾರಾಯಣನನ್ನು ಹೊಂದಿ, ಮುಕ್ತಾಃ= ಮುಕ್ತರಾಗುತ್ತಾರೆ, ಇತ್ಯಪ್ಯರ್ಥಃ= ಎಂಬ ಅರ್ಥವೂ ದೊರೆಯುತ್ತದೆ.

**ಅನುವಾದ** – ವೇದಾಂತದಿಂದ ಜನ್ಯವಾದ ಜ್ಞಾನದಿಂದ ತತ್ತ್ವನಿಶ್ಚಯವನ್ನು ಉಳ್ಳ ವೈರಾಗ್ಯೋಪೇತರಾದ ಶುದ್ಧಾಂತಃಕರಣರಾದ ಯಾವ ಯತಿಗಳು (ಪ್ರಯತ್ನಶೀಲರು) ಇದ್ದಾರೆಯೋ, ಅವರು ಚತುರ್ಮುಖಬ್ರಹ್ಮನ ಲೋಕದಲ್ಲಿ ವಾಸಿಸುತ್ತಾರಷ್ಟೆ, ಅವರೆಲ್ಲರೂ ಪರಾಂತಕಾಲದಲ್ಲಿ ಪರಾಮೃತಪದದಿಂದ ಹೇಳಲ್ಪಟ್ಟ ನಿತ್ಯಮುಕ್ತನಾದ ನಾರಾಯಣನಿಂದ ಸಂಸಾರದಿಂದ ವಿಮೋಚನೆಯನ್ನು ಹೊಂದುತ್ತಾರಷ್ಟೆ, ಪರಾಮೃತಾತ್ ಎಂಬಲ್ಲಿರುವ ಪಂಚಮಿಯು ಶಬ್ದಶಾಸ್ತ್ರವನ್ನು ತಿಳಿದವರ ದೃಷ್ಟಿಯಲ್ಲಿ ಲ್ಯಬ್ಲೋಪನಿಮಿತ್ತವಾದ ಪಂಚಮಿಯಾಗಿದೆ. ಆಗ ಈ ಶ್ರುತಿಗೆ ಪರಾಮೃತನಾದ ನಾರಾಯಣನನ್ನು ಹೊಂದಿ ಜ್ಞಾನಿಗಳು ಮುಕ್ತರಾಗುತ್ತಾರೆ ಎಂಬ ಅರ್ಥವು ಲಭಿಸುತ್ತದೆ.

**ಭಾವವಿಲಾಸಿನೀ**– ಉಕ್ತಾರ್ಥಪ್ರತಿಪಾದಿಕಾಂ ''ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವ ಇತಿ ಶ್ರುತಿಮರ್ಥತೋ ಗೃಹ್ಣಾತಿ–**ವೇದಾಂತೇತಿ** ॥ ಸನ್ಯಾಸಯೋಗಾದಿತ್ಯಸ್ಯ ಫಲಿತಕಥನಂ ವಿರಾಗಿಣ ಇತಿ ॥ ೧೦೮–೧೧೦ ॥

**ವಿವರಣೆ** – ಮೇಲೆ ಹೇಳಿದ ಅರ್ಥವನ್ನು ಪ್ರತಿಪಾದಿಸುವ 'ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾತ್ ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವೇ' ಎಂಬ ಶ್ರುತಿಯನ್ನು ಅರ್ಥತಃ ಸಂಗ್ರಹಿಸಿ ವಿಮರ್ಶೆ ಮಾಡುತ್ತಾರೆ. ಶ್ರುತಿಯಲ್ಲಿರುವ ಸಂನ್ಯಾಸಯೋಗಾತ್ ಎಂಬ ಪದವನ್ನು ವಿರಾಗಿಣಃ ವಿರಕ್ತರಾದವರು ಎಂದು ವ್ಯಾಖ್ಯಾನ ಮಾಡಿದ್ದಾರೆ.

**ಅತಃ ಪರಮಮೋಕ್ಷೋಽಯಂ ನಾನ್ಯೋಽಸಾವಸ್ತಿ ಜಾನತಾಂ ।**
**ಇತ್ಯಾಹ ವೈದಿಕೀ ವಾಣೀ ವಿಶದಾ ಸರ್ವಸಂಮತಾ ॥ ೧೧೧ ॥**

**ಅರ್ಥ** – ಅತಃ= ಆದ್ದರಿಂದ, ಅಯಂ= ಇದೇ, ಪರಮಮೋಕ್ಷಃ= ಪರಮ ಮೋಕ್ಷವಾದುದು, ಜಾನತಾಂ= ಜ್ಞಾನಿಗಳ ದೃಷ್ಟಿಯಲ್ಲಿ, ಅನ್ಯಃ= ಇದಕ್ಕಿಂತ ಭಿನ್ನವಾದ, ಅಸೌ= ಪರಮಮೋಕ್ಷವು, ನಾಸ್ತಿ= ಇಲ್ಲ, ಇತಿ= ಎಂದು, ಸರ್ವಸಂಮತಾ= ಸರ್ವಸಂಮತವಾದ, ವಿಶದಾ= ಸ್ಪಷ್ಟವಾದ, ವೈದಿಕೀ ವಾಣೀ= ವೇದವಾಣಿಯು, ಆಹ= ಹೇಳಿದೆ.

**ಅನುವಾದ – ಆದ್ದರಿಂದ ಇದೇ ಪರಮಮೋಕ್ಷ. ಜ್ಞಾನಿಗಳ ದೃಷ್ಟಿಯಲ್ಲಿ ಇದಕ್ಕಿಂತ ಭಿನ್ನವಾದ ಪರಮಮೋಕ್ಷವು ಇಲ್ಲ ಎಂಬುದಾಗಿ ಸರ್ವಸಮ್ಮತವಾದ ಸ್ಪಷ್ಟವಾದ ಈ ವೇದವಾಣಿಯು ಹೇಳಿದೆ.**

**ಭಾವವಿಲಾಸಿನೀ–** ಅತಃ ವೇದಾಂತವಿಜ್ಞಾನಸುನಿಶ್ಚಿತಾರ್ಥೈಃ ಪ್ರಾಪ್ಯತ್ವಾತ್ । ಅಯಂ ಪರಾಂತಕಾಲೀನಃ । ಅನ್ಯಃ ಬ್ರಹ್ಮಪ್ರಲಾಯದಪ್ಯನ್ಯಕಾಲವರ್ತೀ ॥ ೧೧೧ ॥

**ಅತೋ ವಿಮುಕ್ತಿಕಾಲೋಽಯಂ ಶ್ರೌತತ್ವಾನ್ನಾಪರೋ ಶ್ರುತೇಃ ।**
**ಪರಾಂತಕಾಲಮೇವೇಯಂ ಮುಕ್ತಿಕಾಲಂ ಯತೋಽಬ್ರವೀತ್ ।**
**ಪರಾಂತಕಾಲಃ ಸ ಕಿಲ ಮಹತ್ತತ್ವಲಯೋ ಯದಾ ॥ ೧೧೨ ॥**

**ಅರ್ಥ** – ಯತಃ= ಯಾವ ಕಾರಣದಿಂದ, ಇಯಂ= ಈ ಶ್ರುತಿಯು, ಪರಾಂತಕಾಲಮೇವ= ಪರಾಂತಕಾಲವನ್ನೇ, ಮುಕ್ತಿಕಾಲಂ= ಮುಕ್ತಿಕಾಲವೆಂದು, ಅಬ್ರವೀತ್= ಹೇಳಿದೆಯೋ, ಅತಃ= ಆ ಕಾರಣದಿಂದ, ಶ್ರೌತತ್ವಾತ್= ಶ್ರುತಿಸಿದ್ಧವಾದುದರಿಂದ, ಅಯಂ= ಈ ಪರಾಂತಕಾಲವೇ, ವಿಮುಕ್ತಿ ಕಾಲಃ= ವಿಮುಕ್ತಿ ಕಾಲವು, ಅಪರಃ= ಇದಕ್ಕಿಂತ ಭಿನ್ನವಾದ ಕಾಲವು, ಅಶ್ರುತೇಃ= ವಿಮುಕ್ತಿಕಾಲವೆಂದು ಶ್ರುತಿಯಲ್ಲಿ ಹೇಳಲ್ಪಡುವುದರಿಂದ, ನ= ವಿಮುಕ್ತಿಕಾಲವಲ್ಲ, ಯದಾ= ಯಾವಾಗ, ಮಹತ್ತತ್ವಲಯಃ= ಮಹತ್ತತ್ವದ ಲಯವು ಉಂಟಾಗುತ್ತದೆಯೋ, ಸಃ= ಆ ಕಾಲವೇ, ಪರಾಂತಕಾಲಃ ಕಿಲ= ಪರಾಂತಕಾಲವಷ್ಟೆ.

**ಅನುವಾದ – ಯಾವ ಕಾರಣದಿಂದ ಈ ಶ್ರುತಿಯು ಪರಾಂತಕಾಲವನ್ನೇ ಮುಕ್ತಿಕಾಲವೆಂದು ಹೇಳಿದೆಯೋ ಆದ್ದರಿಂದ ಶ್ರುತಿಸಮ್ಮತವಾದುದರಿಂದ ಈ ಪರಾಂತಕಾಲವೇ ಪರಮ ಮೋಕ್ಷಕಾಲ. ಇದಕ್ಕಿಂತ ಭಿನ್ನವಾದ ಪರಮ-ಮೋಕ್ಷಕಾಲವು ಶ್ರುತಿಯಲ್ಲಿ ಹೇಳಲ್ಪಡದಿರುವುದರಿಂದ ಅನ್ಯಕಾಲವು ಪರಮ-**

ಪರಿಶುದ್ಧವಾದ ಮನಸ್ಸುಳ್ಳ, ಯತಯಃ= ಯಾವ ಯತಿಗಳು (ಪ್ರಯತ್ನಶೀಲರು ಇದ್ದಾರೆಯೋ), ತೇ= ಅವರು, ಬ್ರಹ್ಮಲೋಕೇ= ಬ್ರಹ್ಮಲೋಕದಲ್ಲಿ, ವಸಂತಿ ಹಿ= ವಾಸಿಸುತ್ತಾರಷ್ಟೆ. ಸರ್ವೇ= ಅವರೆಲ್ಲರೂ, ಪರಾಂತಕಾಲೇ ತು= ಪರಾಂತಕಾಲ-ದಲ್ಲಿಯಾದರೂ, ಪರಾಮೃತಪದೋದಿತಾತ್= ಪರಾಮೃತಪದದಿಂದ ಹೇಳಲ್ಪಟ್ಟ, ನಿತ್ಯಮುಕ್ತಾತ್= ನಿತ್ಯಮುಕ್ತನಾದ, ನಾರಾಯಣಾತ್= ನಾರಾಯಣನಿಂದ, ಸಂಸೃತೇಃ= ಸಂಸಾರದ ದೆಸೆಯಿಂದ, ಮುಚ್ಯಂತಿ= ಬಿಡುಗಡೆಯನ್ನು ಹೊಂದುತ್ತಾರೆ, ಶಬ್ದಜ್ಞಸಂವಿದಾ= ಶಬ್ದವನ್ನು ತಿಳಿದವರ ಜ್ಞಾನಕ್ಕೆ ಅನುಗುಣವಾಗಿ, ಇಯಂ ಪಂಚಮೀ= ಪರಾಮೃತಾತ್ ಎಂಬಲ್ಲಿರುವ ಪಂಚಮೀ ವಿಭಕ್ತಿಯು, ಲ್ಯಬ್ಲೋಪೇ= ಲ್ಯಬ್ಲೋಪ ನಿಮಿತ್ತವಾದ ಪಂಚಮಿಯಾಗಿ, ಭವೇತ್= ಆಗುತ್ತದೆ, ತದಾ= ಆಗ, ಶ್ರುತೇಃ= ವೇದವಾಕ್ಯಕ್ಕೆ, ಪರಾಮೃತಂ ಪ್ರಾಪ್ಯ= ಪರಾಮೃತ ಎಂದರೆ ನಿತ್ಯಮುಕ್ತನಾದ ನಾರಾಯಣನನ್ನು ಹೊಂದಿ, ಮುಕ್ತಾಃ= ಮುಕ್ತರಾಗುತ್ತಾರೆ, ಇತ್ಯಪ್ಯರ್ಥಃ= ಎಂಬ ಅರ್ಥವೂ ದೊರೆಯುತ್ತದೆ.

**ಅನುವಾದ** – ವೇದಾಂತದಿಂದ ಜನ್ಯವಾದ ಜ್ಞಾನದಿಂದ ತತ್ವನಿಶ್ಚಯವನ್ನು ಉಳ್ಳ ವೈರಾಗ್ಯೋಪೇತರಾದ ಶುದ್ಧಾಂತಃಕರಣರಾದ ಯಾವ ಯತಿಗಳು (ಪ್ರಯತ್ನಶೀಲರು) ಇದ್ದಾರೆಯೋ, ಅವರು ಚತುರ್ಮುಖಬ್ರಹ್ಮನ ಲೋಕದಲ್ಲಿ ವಾಸಿಸುತ್ತಾರಷ್ಟೆ. ಅವರೆಲ್ಲರೂ ಪರಾಂತಕಾಲದಲ್ಲಿ ಪರಾಮೃತಪದದಿಂದ ಹೇಳಲ್ಪಟ್ಟ ನಿತ್ಯಮುಕ್ತನಾದ ನಾರಾಯಣನಿಂದ ಸಂಸಾರದಿಂದ ವಿಮೋಚನೆಯನ್ನು ಹೊಂದುತ್ತಾರಷ್ಟೆ. ಪರಾಮೃತಾತ್ ಎಂಬಲ್ಲಿರುವ ಪಂಚಮಿಯು ಶಬ್ದಶಾಸ್ತ್ರವನ್ನು ತಿಳಿದವರ ದೃಷ್ಟಿಯಲ್ಲಿ ಲ್ಯಬ್ಲೋಪನಿಮಿತ್ತವಾದ ಪಂಚಮಿಯಾಗಿದೆ. ಆಗ ಈ ಶ್ರುತಿಗೆ ಪರಾಮೃತನಾದ ನಾರಾಯಣನನ್ನು ಹೊಂದಿ ಜ್ಞಾನಿಗಳು ಮುಕ್ತರಾಗುತ್ತಾರೆ ಎಂಬ ಅರ್ಥವು ಲಭಿಸುತ್ತದೆ.

**ಭಾವವಿಲಾಸಿನೀ**– ಉಕ್ತಾರ್ಥಪ್ರತಿಪಾದಿಕಾಂ ''ವೇದಾಂತವಿಜ್ಞಾನಸುನಿಶ್ಚಿತಾರ್ಥಾಃ ಸನ್ಯಾಸ-ಯೋಗಾದ್ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವ ಇತಿ ಶ್ರುತಿಮರ್ಥತೋ ಗೃಹ್ಣಾತಿ–**ವೇದಾಂತೇತಿ** ॥ ಸನ್ಯಾಸಯೋಗಾದಿತ್ಯಸ್ಯ ಫಲಿತಕಥನಂ ವಿರಾಗಿಣ ಇತಿ ॥ ೧೦೮–೧೧೦ ॥

**ವಿವರಣೆ** – ಮೇಲೆ ಹೇಳಿದ ಅರ್ಥವನ್ನು ಪ್ರತಿಪಾದಿಸುವ 'ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ ಸಂನ್ಯಾಸಯೋಗಾತ್ ಯತಯಃ ಶುದ್ಧಸತ್ವಾಃ । ತೇ ಬ್ರಹ್ಮಲೋಕೇತು ಪರಾಂತಕಾಲೇ ಪರಾಮೃತಾತ್ ಪರಿಮುಚ್ಯಂತಿ ಸರ್ವೇ' ಎಂಬ ಶ್ರುತಿಯನ್ನು ಅರ್ಥತಃ ಸಂಗ್ರಹಿಸಿ ವಿಮರ್ಶೆ ಮಾಡುತ್ತಾರೆ. ಶ್ರುತಿಯಲ್ಲಿರುವ ಸಂನ್ಯಾಸಯೋಗಾತ್ ಎಂಬ ಪದವನ್ನು ವಿರಾಗಿಣಃ ವಿರಕ್ತರಾದವರು ಎಂದು ವ್ಯಾಖ್ಯಾನ ಮಾಡಿದ್ದಾರೆ.

**ಅತಃ ಪರಮಮೋಕ್ಷೋಽಯಂ ನಾನ್ಯೋಽಸಾವಸ್ತಿ ಜಾನತಾಂ ।**
**ಇತ್ಯಾಹ ವೈದಿಕೀ ವಾಣೀ ವಿಶದಾ ಸರ್ವಸಂಮತಾ ॥ ೧೧೧ ॥**

**ಅರ್ಥ** – ಅತಃ= ಆದ್ದರಿಂದ, ಅಯಂ= ಇದೇ, ಪರಮಮೋಕ್ಷಃ= ಪರಮ ಮೋಕ್ಷವಾದುದು, ಜಾನತಾಂ= ಜ್ಞಾನಿಗಳ ದೃಷ್ಟಿಯಲ್ಲಿ, ಅನ್ಯಃ= ಇದಕ್ಕಿಂತ ಭಿನ್ನವಾದ, ಅಸೌ= ಪರಮಮೋಕ್ಷವು, ನಾಸ್ತಿ= ಇಲ್ಲ, ಇತಿ= ಎಂದು, ಸರ್ವಸಂಮತಾ= ಸರ್ವಸಂಮತವಾದ, ವಿಶದಾ= ಸ್ಪಷ್ಟವಾದ, ವೈದಿಕೀ ವಾಣೀ= ವೇದವಾಣಿಯು, ಆಹ= ಹೇಳಿದೆ.

**ಅನುವಾದ – ಆದ್ದರಿಂದ ಇದೇ ಪರಮಮೋಕ್ಷ. ಜ್ಞಾನಿಗಳ ದೃಷ್ಟಿಯಲ್ಲಿ ಇದಕ್ಕಿಂತ ಭಿನ್ನವಾದ ಪರಮಮೋಕ್ಷವು ಇಲ್ಲ ಎಂಬುದಾಗಿ ಸರ್ವಸಮ್ಮತವಾದ ಸ್ಪಷ್ಟವಾದ ಈ ವೇದವಾಣಿಯು ಹೇಳಿದೆ.**

**ಭಾವವಿಲಾಸಿನೀ–** ಅತಃ ವೇದಾಂತವಿಜ್ಞಾನಸುನಿಶ್ಚಿತಾರ್ಥೈಃ ಪ್ರಾಪ್ಯತ್ವಾತ್ । ಅಯಂ ಪರಾಂತಕಾಲೀನಃ । ಅನ್ಯಃ ಬ್ರಹ್ಮಪ್ರಲಾಯದಪ್ಯನ್ಯಕಾಲವರ್ತೀ ॥ ೧೧೧ ॥

**ಅತೋ ವಿಮುಕ್ತಿಕಾಲೋಽಯಂ ಶ್ರೌತತ್ವಾನ್ನಾಪರೋ ಶ್ರುತೇಃ ।**
**ಪರಾಂತಕಾಲಮೇವೇಯಂ ಮುಕ್ತಿಕಾಲಂ ಯತೋಽಬ್ರವೀತ್ ।**
**ಪರಾಂತಕಾಲಃ ಸ ಕಿಲ ಮಹತ್ತತ್ವಲಯೋ ಯದಾ ॥ ೧೧೨ ॥**

**ಅರ್ಥ** – ಯತಃ= ಯಾವ ಕಾರಣದಿಂದ, ಇಯಂ= ಈ ಶ್ರುತಿಯು, ಪರಾಂತಕಾಲಮೇವ= ಪರಾಂತಕಾಲವನ್ನೇ, ಮುಕ್ತಿಕಾಲಂ= ಮುಕ್ತಿಕಾಲವೆಂದು, ಅಬ್ರವೀತ್= ಹೇಳಿದೆಯೋ, ಅತಃ= ಆ ಕಾರಣದಿಂದ, ಶ್ರೌತತ್ವಾತ್= ಶ್ರುತಿಸಿದ್ಧವಾದುದರಿಂದ, ಅಯಂ= ಈ ಪರಾಂತಕಾಲವೇ, ವಿಮುಕ್ತಿ ಕಾಲಃ= ವಿಮುಕ್ತಿ ಕಾಲವು, ಅಪರಃ= ಇದಕ್ಕಿಂತ ಭಿನ್ನವಾದ ಕಾಲವು, ಅಶ್ರುತೇಃ= ವಿಮುಕ್ತಿಕಾಲವೆಂದು ಶ್ರುತಿಯಲ್ಲಿ ಹೇಳಲ್ಪಡುವುದರಿಂದ, ನ= ವಿಮುಕ್ತಿಕಾಲವಲ್ಲ, ಯದಾ= ಯಾವಾಗ, ಮಹತ್ತತ್ವಲಯಃ= ಮಹತ್ತತ್ವದ ಲಯವು ಉಂಟಾಗುತ್ತದೆಯೋ, ಸಃ= ಆ ಕಾಲವೇ, ಪರಾಂತಕಾಲಃ ಕಿಲ= ಪರಾಂತಕಾಲವಷ್ಟೆ.

**ಅನುವಾದ – ಯಾವ ಕಾರಣದಿಂದ ಈ ಶ್ರುತಿಯು ಪರಾಂತಕಾಲವನ್ನೇ ಮುಕ್ತಿಕಾಲವೆಂದು ಹೇಳಿದೆಯೋ ಆದ್ದರಿಂದ ಶ್ರುತಿಸಮ್ಮತವಾದುದರಿಂದ ಈ ಪರಾಂತಕಾಲವೇ ಪರಮ ಮೋಕ್ಷಕಾಲ. ಇದಕ್ಕಿಂತ ಭಿನ್ನವಾದ ಪರಮ-ಮೋಕ್ಷಕಾಲವು ಶ್ರುತಿಯಲ್ಲಿ ಹೇಳಲ್ಪಡದಿರುವುದರಿಂದ ಅನ್ಯಕಾಲವು ಪರಮ-**

**ಮೋಕ್ಷಕಾಲವಲ್ಲ. ಮಹತ್ತತ್ವವು ಯಾವಾಗ ಲಯವನ್ನು ಹೊಂದುತ್ತದೆಯೋ ಅದೇ ಪರಾಂತಕಾಲವಷ್ಟೆ.**

**ಭಾವವಿಲಾಸಿನೀ– ಇಯಂ ಶ್ರುತಿಃ ॥ ೧೧೨ ॥**

**ಉದರೇ ವಾಸುದೇವಸ್ಯ ಜೀವಾನ್ ಸರ್ವಾನ್ ವಿಧಿಸ್ತದಾ ।**
**ನಿವೇಶ್ಯ ಸರ್ವಮುಕ್ತ್ಯರ್ಹಾನ್ ಜೀವಾನಾದಾಯ ಸತ್ವರಃ ॥೧೧೩॥**

**ವೈಕುಂಠಾಂತಃಪುರಸ್ಥೇ ತು ವಿರಜಾಖ್ಯೇ ಸರಿದ್ವರೇ ।**
**ನಿತ್ಯೇ ಚಿದ್ರೂಪಸಲಿಲೇ ರಜಃಶಬ್ದೋಪಲಕ್ಷಿತೈಃ ॥೧೧೪॥**

**ತ್ರಿಗುಣೈರ್ವರ್ಜಿತೇ ತೇಷಾಂ ಭರ್ಜನೇಽತಿಪಟೀಯಸಿ ।**
**ಸ್ನಾತ್ವಾ ಭೂತೇಂದ್ರಿಯಮನೋಮಾತ್ರಂ ತ್ರಿಗುಣರೂಪಿಣಂ ॥೧೧೫॥**

**ಲಿಂಗದೇಹಂ ವಿನಿರ್ಭಿದ್ಯ ಪ್ರಾಙ್ಮುಕ್ತೈಶ್ಚ ತ್ರಿಧಾಮಗೈಃ ।**
**ಸಹಮುಕ್ತೈಶ್ಚ ಸಹಿತೋ ವಾಸುದೇವೋದರಂ ವಿಶೇತ್ ॥೧೧೬॥**

**ಅರ್ಥ** – ತದಾ= ಆಗ, ವಿಧಿಃ= ಚತುರ್ಮುಖ ಬ್ರಹ್ಮದೇವರು, ಮುಕ್ತ್ಯರ್ಹಾನ್= ಮುಕ್ತಿಯೋಗ್ಯರಾದ, ಸರ್ವಾನ್= ಎಲ್ಲ ಜೀವರನ್ನೂ, ವಾಸುದೇವಸ್ಯ= ವಾಸುದೇವ ರೂಪಿಯಾದ ಹರಿಯ, ಉದರೇ= ಉದರದಲ್ಲಿ, ನಿವೇಶ್ಯ= ಇಟ್ಟು, ಸತ್ವರಃ= ಶೀಘ್ರವಾಗಿ, ಜೀವಾನ್= ಜೀವರನ್ನು, ಆದಾಯ= ತೆಗೆದುಕೊಂಡು, ವೈಕುಂಠಾಂತಃಪುರಸ್ಥೇ= ವೈಕುಂಠ ಪಟ್ಟಣದ ಒಳಗಿರುವ, ನಿತ್ಯೇ= ನಿತ್ಯವಾದ, ಚಿದ್ರೂಪಸಲಿಲೇ= ಚೈತನ್ಯಾತ್ಮಕವಾದ ನೀರಿನಿಂದ ಕೂಡಿದ, ರಜಃಶಬ್ದೋಪಲಕ್ಷಿತೈಃ= ರಜಶಬ್ದದಿಂದ ಉಪಲಕ್ಷಿತವಾದ, ತ್ರಿಗುಣೈಃ= ತ್ರಿಗುಣಗಳಿಂದ, ವರ್ಜಿತೇ= ರಹಿತವಾದಂತಹ, ತೇಷಾಂ= ಆ ತ್ರಿಗುಣಗಳನ್ನು, ಭರ್ಜನೇ= ನಾಶಮಾಡುವುದರಲ್ಲಿ, ಅತಿಪಟೀಯಸಿ= ಅತ್ಯಂತ ಸಮರ್ಥವಾದ, ವಿರಜಾಖ್ಯೇ= ವಿರಾಜ ಎಂಬ ಹೆಸರಿನ, ಸರಿದ್ವರೇ= ಶ್ರೇಷ್ಠವಾದ ನದಿಯಲ್ಲಿ, ಸ್ನಾತ್ವಾ= ಸ್ನಾನವನ್ನು ಮಾಡಿ, ಭೂತೇಂದ್ರಿಯಮನೋಮಾತ್ರಂ= ಪಂಚಭೂತಗಳು, ದಶೇಂದ್ರಿಯಗಳು ಮತ್ತು ಮನೋರೂಪವಾದ, ತ್ರಿಗುಣರೂಪಿಣಂ= ಗುಣತ್ರಯಾತ್ಮಕವಾದ, ಲಿಂಗದೇಹಂ= ಲಿಂಗದೇಹವನ್ನು, ವಿನಿರ್ಭಿದ್ಯ= ಕಳಚಿ, ತ್ರಿಧಾಮಗೈಃ= ಶ್ವೇತದ್ವೀಪ, ಅನಂತಾಸನ ಮತ್ತು ವೈಕುಂಠ ಈ ಮೂರು ಪಟ್ಟಗಳಲ್ಲಿರುವ, ಪ್ರಾಙ್ಮುಕ್ತೈಃ= ಹಿಂದಿನ ಕಲ್ಪಗಳಲ್ಲಿಯೇ ಮುಕ್ತರಾದ, ಚ= ಮತ್ತು, ಸಹಮುಕ್ತೈಶ್ಚ= ಈ ಕಲ್ಪದಲ್ಲಿ ಮುಕ್ತರಾದ ಜೀವರಿಂದ, ಸಹಿತಃ= ಸಹಿತನಾಗಿ, ವಾಸುದೇವೋದರಂ= ವಾಸುದೇವನ ಉದರವನ್ನು, ವಿಶೇತ್= ಪುನಃ ಪ್ರವೇಶಿಸುತ್ತಾನೆ.

**ಅನುವಾದ –** ಆಗ ಚತುರ್ಮುಖಬ್ರಹ್ಮದೇವರು ಮುಕ್ತಿಯೋಗ್ಯರಾದ ಸರ್ವಜೀವರನ್ನು ವಾಸುದೇವನ ಉದರದಲ್ಲಿಟ್ಟು ಶೀಘ್ರವಾಗಿ ಆ ಎಲ್ಲ ಜೀವರನ್ನು ಕರೆದುಕೊಂಡು ವೈಕುಂಠ ಪಟ್ಟಣದ ಒಳಭಾಗದಲ್ಲಿರುವ ನಿತ್ಯವಾದ ಚೈತನ್ಯಮಯವಾದ ಜಲದಿಂದ ಕೂಡಿದ ರಜಃಶಬ್ದೋಪಲಕ್ಷಿತವಾದ, ತ್ರಿಗುಣಗಳಿಂದ ವರ್ಜಿತವಾದ ತ್ರಿಗುಣಗಳನ್ನು ನಾಶಮಾಡುವುದರಲ್ಲಿ ಬಹಳ ಸಮರ್ಥವಾದ ವಿರಜಾ ಎಂಬ ನದಿಯಲ್ಲಿ ಸ್ನಾನವನ್ನು ಮಾಡಿ ಪಂಚಭೂತಗಳು, ದಶೇಂದ್ರಿಯಗಳು ಮತ್ತು ಮನಸ್ಸು ಹೀಗೆ ಹದಿನಾರು ಕಲೆಗಳನ್ನುಳ್ಳ ತ್ರಿಗುಣಾತ್ಮಕವಾದ ಲಿಂಗದೇಹವನ್ನು ಕಳಚಿ ವೈಕುಂಠ, ಅನಂತಾಸನ ಮತ್ತು ಶ್ವೇತದ್ವೀಪಗಳಲ್ಲಿರುವ ಹಿಂದಿನ ಕಲ್ಪದಲ್ಲಿ ಮುಕ್ತರಾದವರಿಂದ ಮತ್ತು ಈ ಕಲ್ಪದಲ್ಲಿ ತನ್ನ ಜೊತೆಯಲ್ಲಿ ಮುಕ್ತರಾದ ಜೀವರಿಂದ ಸಹಿತನಾಗಿ ವಾಸುದೇವನ ಉದರವನ್ನು ಪ್ರವೇಶಿಸುತ್ತಾರೆ.

**ಭಾವವಿಲಾಸಿನೀ–** ಇದಾನೀಂ ಯೋಗ್ಯಾಯೋಗ್ಯಜೀವಾನಾದಾಯ ಗತಸ್ಯ ಮಹತ್ತತ್ವಾತ್ಮನಾ ಭಗವತೋ ಗ್ರಾಸೀಭೂತಸ್ಯ ಬ್ರಹ್ಮಣಃ ಸ್ವೇನ ಸಹ ಮುಚ್ಯಮಾನೈರ್ಜೀವೈಃ ಸಹ ಲಿಂಗದೇಹ-ಭಂಗಪ್ರಕಾರಂ ಸವಿಸ್ತಾರಂ ದರ್ಶಯತಿ –ಉದರ ಇತಿ ॥ ಜೀವಾನ್ ಸರ್ವಾನ್ ಉತ್ತಮ ಮಧ್ಯಮಾಧಮಭೇದೇನ ತ್ರಿವಿಧಾನ್ । ವೈಕುಂಠಾಂತಃ ಪುರಸ್ಥೇ ಚತುರ್ದಿಕ್ಷುಸ್ಥಿತಾ ಮುಕ್ತಗಮ್ಯದ್ವಾರಚತುಷ್ಟಯಾದಂತರ್ಮುಕ್ತನಗರೀಂ ಪರಿತೋ ವಿದ್ಯಮಾನೇ ಚತುರ್ದ್ವಾರಪರ್ಯಂತಂ ಪರಿಲಂಬಿನ್ಯಾಃ ಬಂಧಕೀಭೂತಪ್ರಕೃತೇಃ ಪರಮವ್ಯೋಮಾಖ್ಯ-ಮುಕ್ತಪುರ್ಯಾಶ್ಚ ಮಧ್ಯಪ್ರದೇಶೇಽಮುಕ್ತಗಮನಪ್ರತಿಬಂಧಕತಯಾ ಪರಿಖಾವತ್ಪರಿತಃ ಸ್ಥಿತ ಇತ್ಯರ್ಥಃ । ಪ್ರಧಾನಪರಮವ್ಯೋಮ್ನೋರಂತರಾ ವಿರಜಾನದೀತಿ ಪುರಾಣವಾಕ್ಯಾದಯ-ಮರ್ಥೋಽವಗಂತವ್ಯಃ । ಚಿದ್ರೂಪಸಲಿಲೇ ಲಕ್ಷ್ಮ್ಯಾತ್ಮಕಸಲಿಲೇ । ತತ್ರ ಪ್ರಯುಜ್ಯಮಾನ-ವಿರಜಾಶಬ್ದಾರ್ಥಮಾಹ – ರಜಃ ಶಬ್ದೇತಿ ॥ ತೇಷಾಂ ತ್ರಿಗುಣಾನಾಮ್ । ಭೂತೇಂದ್ರಿಯ-ಮನೋಮಾತ್ರಂ ಕೇವಲಂ ಸೂಕ್ಷ್ಮಪಂಚಭೂತದಶೇಂದ್ರಿಯಮನ ಆಖ್ಯಷೋಡಶಕಲಾತ್ಮಕಮ್। ತ್ರಿಧಾಮಗೈಃ ವೈಕುಂಠಶ್ವೇತದ್ವೀಪಾನಂತಾಸನಸ್ಥೈಃ ॥ ೧೧೩– ೧೧೬ ॥

ಏವಂ ಪರಾಂತಕಾಲೇಽಸ್ಮಿನ್ ಮುಚ್ಯಂತೇ ಬ್ರಹ್ಮಣಾ ಸಹ ।
ಇತ್ಯಾಹೋಪನಿಷತ್ ಸೈಷಾ ತತ್ ತತ್ತ್ವಮಿದಮೇವ ಹಿ ॥ ೧೧೭ ॥

**ಅರ್ಥ –** ಏವಂ= ಈ ರೀತಿಯಾಗಿ, ಅಸ್ಮಿನ್ ಪರಾಂತಕಾಲೇ= ಈ ಪರಾಂತಕಾಲದಲ್ಲಿ, ಬ್ರಹ್ಮಣಾ ಸಹ= ಬ್ರಹ್ಮದೇವರ ಜೊತೆಯಲ್ಲಿ, ಮುಚ್ಯಂತೇ= ಮುಕ್ತರಾಗುತ್ತಾರೆ, ಇತಿ= ಎಂಬುದಾಗಿ, ಸೈಷಾ= ಈ ಪ್ರಸಿದ್ಧವಾದ ಉಪನಿಷತ್ತು, ಆಹ= ಹೇಳುತ್ತದೆ, ತತ್= ಆದ್ದರಿಂದ, ಇದಮೇವ= ಇದೇ, ತತ್ತ್ವಂ= ತತ್ತ್ವವಷ್ಟೆ.

**ಅನುವಾದ –** ಈ ರೀತಿಯಾಗಿ ಈ ಪರಾಂತಕಾಲದಲ್ಲಿ ಬ್ರಹ್ಮದೇವರ ಜೊತೆಯಲ್ಲಿ ಮುಕ್ತರಾಗುತ್ತಾರೆ ಎಂದು ಈ ಪ್ರಸಿದ್ಧವಾದ ನಾರಾಯಣೋಪನಿಷತ್ತು ಹೇಳುತ್ತದೆ. ಮುಕ್ತರಾಗುವ ಪ್ರಕಾರವು ಈ ರೀತಿಯೇ ಇದೆಯಷ್ಟೆ

**ಭಾವವಿಲಾಸಿನೀ–** ಏಷಾ ವೇದಾಂತೇತಿ ಪ್ರಾಗುಕ್ತಾ । ತತ್ತಸ್ಮಾತ್ ಸ್ಪಷ್ಟಂ ಶ್ರುತಾವುಕ್ತತ್ವಾತ್ ॥ ೧೧೭ ॥

ತತಶ್ಚ ಚಿದ್ರೂಪಸಲಿಲಸಂಪ್ಲವೇ ಸತಿ ಕೇಶವಃ ।
ವಟಪತ್ರಪುಟೇ ಶೇತೇ ಲಕ್ಷ್ಮ್ಯಾ ಸಹ ಕಿಲ ಪ್ರಭುಃ ॥ ೧೧೮ ॥

**ಅರ್ಥ –** ತತಃ= ಅನಂತರ, ಪ್ರಭುಃ= ಸಮರ್ಥನಾದ, ಕೇಶವಃ= ಕೇಶವನು, ಚಿದ್ರೂಪಸಲಿಲಸಂಪ್ಲವೇ ಸತಿ= ಲಕ್ಷ್ಮ್ಯಾತ್ಮಕವಾದ ಪ್ರಲಯಜಲರಾಶಿಯ ಮೇಲೆ, ವಟಪತ್ರ ಪುಟೇ= ಲಕ್ಷ್ಮ್ಯಾತ್ಮಕವಾದ ವಟಪತ್ರದಲ್ಲಿ, ಲಕ್ಷ್ಮ್ಯಾ ಸಹ= ಲಕ್ಷ್ಮಿಯ ಜೊತೆಯಲ್ಲೇ, ಶೇತೇ ಕಿಲ= ಮಲಗುತ್ತಾನಷ್ಟೆ.

**ಅನುವಾದ –** ಅನಂತರ ಸಮರ್ಥನಾದ ಕೇಶವನು ಲಕ್ಷ್ಮ್ಯಾತ್ಮಕವಾದ ಪ್ರಲಯಜಲರಾಶಿಯ ಮೇಲೆ ಲಕ್ಷ್ಮ್ಯಾತ್ಮಕವಾದ ವಟಪತ್ರದಲ್ಲಿ ಲಕ್ಷ್ಮಿಯ ಜೊತೆಯಲ್ಲಿ ಶಯನ ಮಾಡುತ್ತಾನಷ್ಟೆ.

**ಭಾವವಿಲಾಸಿನೀ–** ತತಃ ಬ್ರಹ್ಮಣೋ ಲಿಂಗದೇಹನಾಶಾನಂತರಮ್ । ಚಿದ್ರೂಪಸಲಿಲ-ಸಂಪ್ಲವೇ ಮಹಾಲಕ್ಷ್ಮ್ಯಾತ್ಮಕಜಲಸಮುದಾಯೋಪರಿ । ವಟಪತ್ರಪುಟೇ ಲಕ್ಷ್ಮ್ಯಾತ್ಮಕವಟಪತ್ರ-ಪುಟೇ ॥ ೧೧೮ ॥

ಅತಃ ಪರಮಮೋಕ್ಷಸ್ಯ ಕಾಲೋಽಯಂ ನಾತ್ರ ಸಂಶಯಃ ।
ತಸ್ಮಾದ್ ಬ್ರಹ್ಮಲಯಃ ಸೋಽಯಂ ಮಹಾಪ್ರಲಯ ಏವ ಹಿ ॥ ೧೧೯ ॥

**ಅರ್ಥ –** ಅತಃ= ಆದ್ದರಿಂದ, ಅಯಂ= ಈ ಕಾಲವು, ಪರಮಮೋಕ್ಷಸ್ಯ ಕಾಲಃ= ಪರಮ ಮೋಕ್ಷದ ಕಾಲವೇ ಆಗಿದೆ. ಅತ್ರ= ಈ ವಿಷಯದಲ್ಲಿ, ಸಂಶಯಃ ನ= ಸಂಶಯವಿಲ್ಲ, ತಸ್ಮಾತ್= ಆದ್ದರಿಂದ, ಸೋಽಯಂ ಬ್ರಹ್ಮಲಯಃ= ಹೀಗೆ ನಿರೂಪಿಸಲ್ಪಟ್ಟ ಆ ಬ್ರಹ್ಮಲಯವು, ಮಹಾಪ್ರಲಯ ಏವ ಹಿ= ಮಹಾಪ್ರಲಯವೇ ಆಗಿದೆಯಷ್ಟೆ.

**ಅನುವಾದ –** ಆದ್ದರಿಂದ ಈ ಕಾಲವು ಪರಮಮೋಕ್ಷಕಾಲ ಎಂಬ ವಿಷಯದಲ್ಲಿ ಸಂಶಯವಿಲ್ಲ. ಆದ್ದರಿಂದ ಈ ಬ್ರಹ್ಮಲಯವೇ ಮಹಾಪ್ರಲಯವಷ್ಟೆ.

**ಭಾವವಿಲಾಸಿನೀ–** ಅಯಂ ಪರಾಂತಾಖ್ಯಃ । ತಸ್ಮಾತ್ ಪರಮಮೋಕ್ಷರೂಪತ್ವಾತ್ ॥ ೧೧೯ ॥

**ಸೋಽಯಂ ಲಯಶ್ಚ ಕಲ್ಪಾಂತೇ ಸಂಕರ್ಷಣಮುಖಾಗ್ನಿನಾ ।**
**ಪ್ರಲಯಾರ್ಕೇಣ ಚ ಜಗದ್ದಾಹೇ ಸಾಂವರ್ತಕೋದಕೈಃ ।**
**ವಿಲೋಡಿತಂ ಚ ತದ್ಭಸ್ಮ ಸರ್ವಂ ಜಲಮಯಂ ಭವೇತ್ ॥ ೧೨೦ ॥**

**ಅರ್ಥ** – ಕಲ್ಪಾಂತೇ= ಬ್ರಹ್ಮಕಲ್ಪದ ಕೊನೆಯಲ್ಲಿ, ಸಂಕರ್ಷಣಮುಖಾಗ್ನಿನಾ= ಸಂಕರ್ಷಣ ಮುಖದ ಅಗ್ನಿಯಿಂದ, ಚ= ಮತ್ತು, ಪ್ರಲಯಾರ್ಕೇಣ= ಪ್ರಲಯಕಾಲದ ಸೂರ್ಯನಿಂದ, ಜಗದ್ದಾಹೇ= ಜಗತ್ತು ಸುಟ್ಟುಹೋಗುತ್ತಿರಲು, ಸಃ ಅಯಂ= ಈ ಯಾವ, ಲಯಃ= ಜಗತ್ಪ್ರಲಯವು, ಭವತಿ= ಆಗುತ್ತದೆ, ತದ್ಭಸ್ಮ= ಆ ಜಗತ್ತಿನ ಭಸ್ಮವು, ಸಾಂವರ್ತಕೋದಕೈಃ= ಸಾಂವರ್ತಕ ಮೇಘಗಳು ಸುರಿಸಿದ ಮಳೆಯ ನೀರಿನಿಂದ, ವಿಲೋಡಿತಂ= ಕದಡಿಹೋಗುತ್ತವೆ, ಸರ್ವಂ= ಎಲ್ಲವೂ, ಜಲಮಯಂ ಭವೇತ್= ಜಲಮಯವೇ ಆಗುತ್ತದೆ.

**ಅನುವಾದ – ಬ್ರಹ್ಮಕಲ್ಪದ ಕೊನೆಯಲ್ಲಿ ಸಂಕರ್ಷಣ ಮುಖದಿಂದ ಹೊರಹೊಮ್ಮಿದ ಅಗ್ನಿಯಿಂದ ಮತ್ತು ಪ್ರಲಯಕಾಲದ ಸೂರ್ಯನಿಂದ ಜಗತ್ತು ದಹಿಸಿ ಹೋಗುತ್ತಿರಲು ಈ ಜಗತ್ತಿನ ಲಯವು ಆಗುತ್ತದೆ. ಸಾಂವರ್ತಕ ಮೇಘಗಳಿಂದ ಸುರಿಸಿದ ಮಳೆಯ ನೀರಿನಲ್ಲಿ ಆ ಸುಟ್ಟ ಜಗತ್ತಿನ ಭಸ್ಮವು ಕದಡಿ ಹೋಗುತ್ತಿರಲು ಜಗತ್ತೆಲ್ಲವೂ ಜಲಮಯವಾಗುತ್ತದೆ.**

**ಭಾವವಿಲಾಸಿನೀ– ಸೂಕ್ಷ್ಮಲಿಂಗದೇಹಲಯಪ್ರಕಾರಮುಕ್ತ್ವಾ ಸ್ಥೂಲಜಗಲ್ಲಯಪ್ರಕಾರಮಪ್ಯಾಹ –ಸೋಯಮಿತಿ॥ ಕಲ್ಪಾಂತೇ ಸೋಯಂ ವಕ್ಷ್ಯಮಾಣಃ ಸ್ಥೂಲಜಗಲ್ಲಯಶ್ಚ ಲಿಂಗದೇಹಲಯಾತ್** ಪ್ರಾಗೇವಾಸ್ತಿ । ಫಲಸೌರಭೇ ಮುಕ್ತಿರೂಪಲಯತಯಾ ಲಿಂಗದೇಹಲಯಸ್ಯಾಂತರಂಗ-ತ್ವಾತ್ತಸ್ಯೈವ ಪ್ರಾಕ್ ಕಥನಮ್ ॥ ೧೨೦ ॥

**ವಿವರಣೆ** – ಸೂಕ್ಷ್ಮವಾದ ಲಿಂಗದೇಹದ ಲಯದ ಪ್ರಕಾರವನ್ನು ಹೇಳಿ ಇನ್ನು ಸ್ಥೂಲವಾದ ಜಗತ್ತಿನ ಲಯಪ್ರಕಾರವನ್ನು ಹೇಳುತ್ತಾರೆ. ಯದ್ಯಪಿ ಜಗತ್ತಿನ ಲಯವಾದ ಮೇಲೆಯೇ ಲಿಂಗದೇಹದ ಲಯವು ಉಂಟಾಗುತ್ತದೆ. ಆದರೆ ಫಲಸೌರಭದಲ್ಲಿ ಹೇಳಲ್ಪಡುವ ಮುಕ್ತಿಗೆ ಲಿಂಗದೇಹದ ನಾಶವು ಅಂತರಂಗವಾದುದರಿಂದ ಮೊದಲು ಲಿಂಗದೇಹದ ನಾಶವನ್ನು ನಿರೂಪಿಸಿ ಅನಂತರ ಜಗತ್ತಿನ ನಾಶವನ್ನು ನಿರೂಪಿಸುತ್ತಿದ್ದಾರೆ.

**ಜಲಂ ಚ ತೇಜಸಾ ಶುಷ್ಯೇತ್ ತಚ್ಚ ವಾಯೌ ಪ್ರಶಾಮ್ಯತಿ ।**
**ವಾಯುಶ್ಚ ಗಗನೇ ಲೀನೋ ಲಯಸ್ತಸ್ಯಾಪ್ಯಹಂಕೃತೌ ।**
**ಅಹಂಕಾರಸ್ಯ ಮಹತಿ ತಸ್ಯ ಸ್ಯಾತ್ ಪ್ರಕೃತೌ ಲಯಃ ॥ ೧೨೧ ॥**

**ಪ್ರಕೃತಿಶ್ಚ ಸ್ವಭಾವಸ್ಥಾ ಸ್ವಭಾವಂ ಪ್ರಕೃತಿಂ ವಿದುಃ ।**
**ಅತಸ್ತಸ್ಯಾಸ್ತು ನ ಲಯಃ ಸಾ ನಿತ್ಯೈವ ಪರಾತ್ಮವತ್ ॥ ೧೨೨ ॥**

**ಅರ್ಥ** – ಜಲಂ ಚ= ಆ ಜಲವಾದರೂ, ತೇಜಸಾ= ಬಾಹ್ಯಾವರಣವಾದ ತೇಜಸ್ಸಿನಿಂದ, ಶುಷ್ಯೇತ್= ಒಣಗಿ ಹೋಗುತ್ತದೆ, ತಚ್ಚ= ಆ ತೇಜಸ್ಸಾದರೂ, ವಾಯೌ= ವಾಯುವಿನಲ್ಲಿ, ಪ್ರಶಾಮ್ಯತಿ= ಶಾಂತವಾಗುತ್ತದೆ (ಲಯವನ್ನು ಹೊಂದುತ್ತದೆ), ವಾಯುಶ್ಚ= ಆ ವಾಯುವು ಕೂಡ, ಗಗನೇ= ಆಕಾಶದಲ್ಲಿ, ಲೀನಃ= ಲಯವನ್ನು ಹೊಂದುತ್ತದೆ, ತಸ್ಯಾಪಿ= ಆಕಾಶಕ್ಕೂ ಸಹ, ಅಹಂಕೃತೌ= ಅಹಂಕಾರತತ್ತ್ವದಲ್ಲಿ, ಲಯಃ= ಲಯವು ಉಂಟಾಗುತ್ತದೆ, ಅಹಂಕಾರಸ್ಯ= ಅಹಂಕಾರ ತತ್ತ್ವಕ್ಕೆ, ಮಹತಿ= ಮಹತ್ತತ್ತ್ವದಲ್ಲಿ ಮತ್ತು, ತಸ್ಯ= ಆ ಮಹತ್ತತ್ತ್ವಕ್ಕೆ, ಪ್ರಕೃತೌ= ಮೂಲಪ್ರಕೃತಿಯಲ್ಲಿ, ಲಯಃ ಸ್ಯಾತ್= ಲಯವು ಉಂಟಾಗುತ್ತದೆ, ಪ್ರಕೃತಿಶ್ಚ= ಪ್ರಕೃತಿಯಾದರೂ, ಸ್ವಭಾವಸ್ಥಾ= ಸ್ವಾಭಾವಿಕವಾಗಿ ಹಾಗೆಯೇ ಉಳಿಯುತ್ತದೆ, ಸ್ವಭಾವಂ= ಸ್ವಭಾವವನ್ನೇ, ಪ್ರಕೃತಿಂ= ಪ್ರಕೃತಿಯೆಂದು, ವಿದುಃ= ತಿಳಿಯುತ್ತಾರಷ್ಟೆ, ಅತಃ= ಆದ್ದರಿಂದ, ತಸ್ಯಾಸ್ತು= ಆ ಪ್ರಕೃತಿಗಾದರೂ, ನ ಲಯಃ= ಲಯವಿಲ್ಲ, ಸಾ= ಆ ಪ್ರಕೃತಿಯಾದರೂ, ಪರಾತ್ಮವತ್= ಪರಮಾತ್ಮನಂತೆ, ನಿತ್ಯೈವ= ನಿತ್ಯವೇ ಆಗಿದೆ.

**ಅನುವಾದ – ಆ ಪ್ರಲಯೋದಕವಾದರೂ ಬಹಿರಾವರಣವಾದ ತೇಜಸ್ಸಿನಿಂದ ಒಣಗಿ ಹೋಗುತ್ತದೆ. ಆ ತೇಜಸ್ಸು ವಾಯುವಿನಲ್ಲಿ ಲಯವನ್ನು ಹೊಂದುತ್ತದೆ. ವಾಯುವು ಗಗನದಲ್ಲಿ ಲಯವನ್ನು ಹೊಂದುತ್ತದೆ. ಗಗನವು ಅಹಂಕಾರತತ್ತ್ವದಲ್ಲಿ ಲಯವನ್ನು ಹೊಂದುತ್ತದೆ. ಅಹಂಕಾರತತ್ತ್ವವು ಮಹತ್ತತ್ತ್ವದಲ್ಲಿಯೂ, ಮಹತ್ತತ್ತ್ವವು ಮೂಲ ಪ್ರಕೃತಿಯಲ್ಲಿಯೂ ಲಯವನ್ನು ಹೊಂದುತ್ತದೆ. ಆ ಪ್ರಕೃತಿಯೆಂದರೆ ಸ್ವಭಾವವೇ ಆಗಿದೆ. ಆ ಪ್ರಕೃತಿಗೆ ಲಯವಿಲ್ಲವಾದ್ದರಿಂದ ಅದು ಪರಮಾತ್ಮನಂತೆ ನಿತ್ಯವೇ ಆಗಿದೆ.**

**ಭಾವವಿಲಾಸಿನೀ**– ತೇಜಸಾ ಬಾಹ್ಯಾವರಣಭೂತತೇಜಸಾ । ತತ್ ತೇಜಃ । ತಸ್ಯ ಗಗನಸ್ಯ ॥ ೧೨೧-೧೨೨ ॥

**ಇತಿ ಶ್ರುತಿಪುರಾಣಾದೌ ತತ್ರ ತತ್ರ ಪ್ರದೃಶ್ಯತೇ ।**
**ಏವಂ ಚ ಜ್ಞಾನಬಲತಃ ಕಸ್ಯ ನಾಶೋ ಭವೇದ್ ವದ ॥ ೧೨೩ ॥**

**ಅರ್ಥ** – ಇತಿ= ಈ ರೀತಿಯಾಗಿ, ಶ್ರುತಿಪುರಾಣಾದೌ= ಶ್ರುತಿಪುರಾಣಾದಿಗಳಲ್ಲಿ, ತತ್ರ ತತ್ರ= ಅಲ್ಲಲ್ಲಿ, ಪ್ರದೃಶ್ಯತೇ= ಕಂಡುಬರುತ್ತದೆ, ಏವಂ ಚ= ಹೀಗಾಗಿ, ಜ್ಞಾನಬಲತಃ= ಕೇವಲ ಜ್ಞಾನದ ಸಾಮರ್ಥ್ಯದಿಂದ, ಕಸ್ಯ= ಯಾವುದರ, ನಾಶಃ= ನಾಶವು, ಭವೇತ್= ಆಗುತ್ತದೆ ಎಂದು, ವದ= ಹೇಳು.

**ಅನುವಾದ – ಈ ರೀತಿಯಾಗಿ ಶ್ರುತಿ-ಪುರಾಣಾದಿಗಳಲ್ಲಿ ಅಲ್ಲಲ್ಲಿ ಕಂಡುಬರುತ್ತದೆ. ಆದ್ದರಿಂದ ಕೇವಲ ಜ್ಞಾನಸಾಮರ್ಥ್ಯದಿಂದ ಯಾವುದಕ್ಕೆ ನಾಶವಾಗುತ್ತದೆ ಎಂದು ಹೇಳು.**

**ಭಾವವಿಲಾಸಿನೀ–** ಇತಿ ಅನೇನ ಪ್ರಕಾರೇಣೈವ ಸ್ಥೂಲಜಗಲ್ಲಯಃ । ಜ್ಞಾನಬಲತಃ ಜ್ಞಾನಸ್ಯೈವ ಬಲತಃ ॥ ೧೨೩ ॥

**ಜ್ಞಾನೇನೈವ ಚ ನಾಸ್ತಿತ್ವಂ ಕಸ್ಯ ವಿಶ್ವಸ್ಯ ಜಾಯತೇ ।**
**ಪ್ರಲಯೇ ನಾಸ್ತಿತಾ ಯಾ ತು ಸಾ ಧ್ವಂಸಾದೇವ ಕೇವಲಂ ॥ ೧೨೪ ॥**

**ಅರ್ಥ –** ಜ್ಞಾನೇನೈವ= ಜ್ಞಾನದಿಂದಲೇ, ನಾಸ್ತಿತ್ವಂ= ತ್ರಿಕಾಲ ನಾಸ್ತಿತ್ವವು, ಕಸ್ಯ ವಿಶ್ವಸ್ಯ= ಯಾವ ಜಗತ್ತಿಗೆ, ಜಾಯತೇ= ಉಂಟಾಗುತ್ತದೆ, ಪ್ರಲಯೇ= ಪ್ರಲಯದಲ್ಲಿ, ಯಾ ನಾಸ್ತಿತಾ ತು= ಯಾವ ನಾಸ್ತಿತ್ವವಿದೆಯೋ, ಸಾ= ಅದು, ಕೇವಲಂ= ಕೇವಲ, ಧ್ವಂಸಾದೇವ= ಧ್ವಂಸದಿಂದಲೇ ಉಂಟಾಗುತ್ತದೆ.

**ಅನುವಾದ – ಕೇವಲ ಜ್ಞಾನದಿಂದಲೇ ನಾಸ್ತಿತ್ವವು ಯಾವ ಜಗತ್ತಿಗೆ ಉಂಟಾಗುತ್ತದೆ? ಪ್ರಲಯದಲ್ಲಿ ಯಾವ ನಾಸ್ತಿತ್ವಬೋಧವಿದೆಯೋ ಅದು ಕೇವಲ ಧ್ವಂಸದಿಂದಲೇ ಉಂಟಾಗುತ್ತದೆ.**

**ಭಾವವಿಲಾಸಿನೀ–** ಯದ್ಯಪಿ ಜ್ಞಾನೇನ ನಾಶಾಖ್ಯಬಾಧೋ ನಾಸ್ತಿ । ತಥಾಪಿ ನಾಸ್ತಿತ್ವ-ಬೋಧಾಖ್ಯಬಾಧೋಽಸ್ತೀತ್ಯತಃಸೋಽಪಿ ನಾಸ್ತೀತ್ಯಾಹ – **ಜ್ಞಾನೇನೇತಿ** ॥ ಅತಸ್ತ್ವದಭಿಲಷಿತ ತ್ರಿಕಾಲನಾಸ್ತಿತಾಖ್ಯಬಾಧಸ್ಯ ನಾತ್ರಾವಕಾಶ ಇತಿಭಾವಃ ॥ ೧೨೪ ॥

**ವಿವರಣೆ –** ಯದ್ಯಪಿ ಜ್ಞಾನದಿಂದ ನಾಶ ಎಂಬ ಬಾಧವು ಇಲ್ಲ. ಆದರೂ ಜ್ಞಾನದಿಂದ ನಾಸ್ತಿತ್ವಬೋಧರೂಪವಾದ ಬಾಧವು ಇದೆ ಎಂದು ಶಂಕಿಸಿದರೆ ಇಲ್ಲಿ ಅದೂ ಇಲ್ಲವೆಂದು ಉತ್ತರಿಸುತ್ತಾರೆ. ನಿನಗೆ ಅಭಿಮತವಾದ ನಾಸ್ತಿತಾಬೋಧವೆಂದರೆ ತ್ರಿಕಾಲನಾಸ್ತಿತಾ ಬೋಧ. ವಿಶ್ವಕ್ಕೆ ಅಂತಹ ಬಾಧದ ಅವಕಾಶವೇ ಇಲ್ಲ ಎಂದು ಅಭಿಪ್ರಾಯ.

**ಕಿಮನ್ಯನ್ನಾಶಯೇತ್ ಜ್ಞಾನೀ ಕಸ್ಯ ವಾ ನಾಸ್ತಿತಾಂ ದಿಶೇತ್ ।**
**ಸ್ವದೇಹಸ್ಯಾಪಿ ಯದ್ದಾಹಾನ್ನಾಸ್ತಿತಾ ನ ಸ್ವಸಂವಿದಾ ॥ ೧೨೫ ॥**

**ಅರ್ಥ –** ಜ್ಞಾನೀ= ಜ್ಞಾನಿಯಾದವನು, ಅನ್ಯತ್= ದೃಷ್ಟವಾದ ಜಗತ್ತಿಗಿಂತ ಭಿನ್ನವಾದ, ಕಿಂ= ಏನನ್ನು, ನಾಶಯೇತ್= ನಾಶಮಾಡುತ್ತಾನೆ, ಕಸ್ಯ ವಾ= ಅಥವಾ ಯಾವುದಕ್ಕೆ, ನಾಸ್ತಿತಾಂ= ತ್ರಿಕಾಲನಾಸ್ತಿತ್ವವನ್ನು, ದಿಶೇತ್= ಉಂಟುಮಾಡಿಕೊಡುತ್ತಾನೆ, ಸ್ವದೇಹಸ್ಯಾಪಿ= ಜ್ಞಾನಿದೇಹಕ್ಕೂ ಕೂಡ, ಯತ್= ಯಾವ ಕಾರಣದಿಂದ, ದಾಹಾತ್= ಸಂಕರ್ಷಣಾಗ್ನಿ-ಯಿಂದಲೇ, ನಾಸ್ತಿತಾ= ಧ್ವಂಸವು ಉಂಟಾಗುತ್ತದೆ, ಸ್ವಸಂವಿದಾ= ತನ್ನ ಜ್ಞಾನದಿಂದ, ನ= ನಾಸ್ತಿತ್ವವು ಉಂಟಾಗುವುದಿಲ್ಲ.

**ಅನುವಾದ** – ಜ್ಞಾನಿಯಾದವನು ದೃಷ್ಟವಾದ ಜಗತ್ತಿಗಿಂತ ಭಿನ್ನವಾದ ಏನನ್ನು ನಾಶ ಮಾಡುತ್ತಾನೆ ಅಥವಾ ಯಾವುದಕ್ಕೆ ತ್ರಿಕಾಲನಾಸ್ತಿತ್ವಬೋಧವನ್ನು ಉಂಟು ಮಾಡುತ್ತಾನೆ? ಏಕೆಂದರೆ ಜ್ಞಾನಿದೇಹವೂಕೂಡ ಸಂಕರ್ಷಣಾಗ್ನಿಯ ದಾಹದಿಂದಲೇ ನಾಶವಾಗುವುದೇ ಹೊರತು ತನ್ನ ಜ್ಞಾನದಿಂದಲ್ಲ.

**ಭಾವವಿಲಾಸಿನೀ**– ಅನ್ಯತ್ ಉಕ್ತಪ್ರಾಕಾರೇಣ ನಷ್ಟಜಗತೋಽನ್ಯತ್ । ದಾಹಾತ್ ಸಂಕರ್ಷಣ-ಮುಖಾನಲೇನ ದಾಹಾತ್ ॥ ೧೨೫ ॥

ಅತೋ ಜಗದ್ಬಾಧಕಥಾ ಸ್ವಾಬೋಧಾದೇವ ಕೇವಲಮ್ ।
ಉಚ್ಚೈರ್ನ ವಾಚ್ಯಾ ವಿದ್ವತ್ಸು ಮಹಾಹಾಸ್ಯಾಸ್ಪದಾ ಹಿ ಸಾ ॥ ೧೨೬ ॥

**ಅರ್ಥ** – ಅತಃ= ಆದ್ದರಿಂದ, ಜಗದ್ಬಾಧಕಥಾ= ಜ್ಞಾನದಿಂದ ಜಗತ್ತಿನ ನಾಶಕಥೆಯು, ಕೇವಲಂ= ಕೇವಲ, ಸ್ವಾಬೋಧಾದೇವ= ನಿನ್ನ ಅಜ್ಞಾನದಿಂದಲೇ ಆಗಿದೆ, ಸಾ= ಆ ಕಥೆಯು, ಮಹಾಹಾಸ್ಯಾಸ್ಪದಾಂ= ಬಹಳ ಹಾಸ್ಯಾಸ್ಪದವಾಗಿದೆ ಆದ್ದರಿಂದ, ವಿದ್ವತ್ಸು= ವಿದ್ವಾಂಸರ ಮಧ್ಯದಲ್ಲಿ, ಉಚ್ಚೈಃ= ಗಟ್ಟಿಯಾಗಿ, ನ ವಾಚ್ಯಾ= ಹೇಳಲ್ಪಡಬಾರದು.

**ಅನುವಾದ** – ಆದ್ದರಿಂದ ಜ್ಞಾನದಿಂದ ಜಗತ್ತಿನ ನಾಶದ ಕಥೆಯು ಕೇವಲ ನಿನ್ನ ಅಜ್ಞಾನ ಮೂಲಕವೇ ಆಗಿದೆ. ಆ ಕಥೆಯು ಬಹಳ ಹಾಸ್ಯಾಸ್ಪದವಾದುದರಿಂದ ವಿದ್ವಾಂಸರ ಸಭೆಯಲ್ಲಿ ಅದನ್ನು ಗಟ್ಟಿಯಾಗಿ ಹೇಳಬಾರದು.

**ಭಾವವಿಲಾಸಿನೀ**–ಅತಃ ದೃಷ್ಟಜಗತಃ ಉಕ್ತವಿಧಯೈವ ನಾಶಾತ್ । ಜಗದಂತರಸ್ಯ ಚ ಭಾವಾತ್ । ಸಾ ಜ್ಞಾನಾನ್ನಾಶಕಥಾ ॥ ೧೨೬ ॥

**ವಿವರಣೆ** – ದೃಷ್ಟವಾದ ಜಗತ್ತಿನ ನಾಶವು ಶ್ರುತಿಪುರಾಣಾದಿಗಳ ಆಧಾರದಿಂದ ನಾವು ಹೇಳಿದಂತೆಯೇ ಆಗುತ್ತದೆ. ಬೇರೆ ಇನ್ನೊಂದು ಜಗತ್ತು ಇಲ್ಲ. ಆದ್ದರಿಂದ ನೀನು ಹೇಳುವ ಜಗತ್ತಿಗೆ ಜ್ಞಾನದಿಂದ ನಾಶದ ಕಥೆಯು ವ್ಯರ್ಥವಾದುದು ಎಂದು ಅಭಿಪ್ರಾಯ.

ಇತೋಽನ್ಯಃ ಸರ್ವಸಂಹಾರೋ ನ ಶ್ರೌತೋ ನಾಪಿ ಯೌಕ್ತಿಕಃ ।
ಘಟಾದಿಸರ್ವನಾಶೋ ಹಿ ಸ್ವಸ್ವಕಾರಣಶೇಷವಾನ್ ॥ ೧೨೭ ॥

**ಅರ್ಥ** – ಇತೋನ್ಯಃ= ಬ್ರಹ್ಮ ಪ್ರಲಯಕ್ಕಿಂತ ಭಿನ್ನವಾದ, ಸರ್ವಸಂಹಾರಃ= ಸರ್ವ ನಾಶವು, ಶ್ರೌತೋ ನ= ಶ್ರುತಿಯಲ್ಲಿ ಹೇಳಲ್ಪಟ್ಟಿಲ್ಲ, ಯೌಕ್ತಿಕೋಪಿ ನ= ಮತ್ತು ಯುಕ್ತಿಯಿಂದಲೂ ಸಿದ್ಧವಾಗುವುದಿಲ್ಲ, ಹಿ= ಏಕೆಂದರೆ, ಘಟಾದಿ ಸರ್ವನಾಶಃ= ಘಟಾದಿ ಸರ್ವನಾಶವೂ ಸಹ, ಸ್ವಸ್ವಕಾರಣಶೇಷವಾನ್= ತನ್ನ ತನ್ನ ಕಾರಣಗಳೇ ಶೇಷವಾಗಿ ಉಳ್ಳದ್ದೇ ಆಗಿದೆ.

**ಅನುವಾದ –** ಬ್ರಹ್ಮ ಪ್ರಲಯಕ್ಕಿಂತ ವ್ಯತಿರಿಕ್ತವಾದ ಬ್ರಹ್ಮವ್ಯತಿರಿಕ್ತವಾದ ಪ್ರಕೃತಿ ಪ್ರಾಕೃತ ಸರ್ವನಾಶವು ಶ್ರುತಿಯಲ್ಲಿ ಎಲ್ಲಿಯೂ ಹೇಳಲ್ಪಟ್ಟಿಲ್ಲ ಮತ್ತು ಯುಕ್ತಿಯಿಂದಲೂ ಸಿದ್ಧವಾಗುವುದಿಲ್ಲ. ಏಕೆಂದರೆ ಘಟಾದಿಗಳ ನಾಶವೆಲ್ಲವೂ ಘಟಾದಿಗಳ ಕಾರಣವನ್ನು ಶೇಷವನ್ನಾಗಿ ಹೊಂದಿರುವುವೇ ಆಗಿವೆ.

**ಭಾವವಿಲಾಸಿನೀ–** ಇತಃ ಬ್ರಹ್ಮಪ್ರಲಯಾತ್ । ಸರ್ವಸಂಹಾರಃ ಬ್ರಹ್ಮವ್ಯತಿರಿಕ್ತಪ್ರಕೃತಿಪ್ರಾಕೃತಾಖ್ಯ-ಸಕಲಜಗತ್‌ಸಂಹಾರಃ ॥ ೧೨೭ ॥

ದಾಹೇನ ಕಾರ್ಯನಾಶೇಪಿ ಭಸ್ಮಶೇಷಃ ಪ್ರದೃಶ್ಯತೇ ।
ಸ್ವಸ್ವಾವಯವನಾಶೇಪಿ ಸೂಕ್ಷ್ಮಸೂಕ್ಷ್ಮತದಂಶಕಾಃ ।
ಶಿಷ್ಟಾ ಭವಂತಿ ತದ್ವಸ್ತು ಕಥಂ ಸ್ಯಾದಸದೇವ ಹಿ ॥ ೧೨೮ ॥

**ಅರ್ಥ –** ದಾಹೇನ= ದಾಹದಿಂದ, ಕಾರ್ಯನಾಶೇಪಿ= ಕಾರಣ ಸಹಿತ ಕಾರ್ಯ ನಾಶವಾದರೂ, ಭಸ್ಮಶೇಷಃ= ಭಸ್ಮರೂಪವಾದ ಅವಶೇಷವು, ಪ್ರದೃಶ್ಯತೇ= ಕಾಣಲ್ಪಡುತ್ತದೆ, ಸ್ವಸ್ವಾವಯವನಾಶೇಪಿ= ತನ್ನ ಮತ್ತು ತನ್ನ ಅವಯವಗಳ ನಾಶವಾದರೂ, ಸೂಕ್ಷ್ಮಸೂಕ್ಷ್ಮ ತದಂಶಕಾಃ= ಸೂಕ್ಷ್ಮವಾದ ಮತ್ತು ಸೂಕ್ಷ್ಮತರವಾದ ಅದರ ಅಂಶಗಳು, ಶಿಷ್ಟಾಭವಂತಿ= ಉಳಿಯುತ್ತವೆ, ತತ್= ಆದ್ದರಿಂದ, ವಸ್ತು= ಯಾವ ವಸ್ತುವಾದರೂ, ಅಸದೇವ= ಸರ್ವ ನಾಶವುಳ್ಳದ್ದಾಗಿ, ಕಥಂ ಸ್ಯಾತ್= ಹೇಗೆ ಆಗುತ್ತದೆ?

**ಅನುವಾದ –** ದಾಹದಿಂದ ಕಾರಣಸಹಿತವಾದ ಕಾರ್ಯನಾಶವಾದರೂ ಭಸ್ಮವು ಅವಶೇಷವಾಗಿ ಕಾಣುತ್ತದೆ. ಅನ್ಯತ್ರ ತನ್ನ ಮತ್ತು ತನ್ನ ಅವಯವಗಳ ನಾಶವಾದರೂ ಸೂಕ್ಷ್ಮ ಸೂಕ್ಷ್ಮತರವಾದ ಅವಯವದ ಅಂಶಗಳು ಉಳಿಯುತ್ತವೆ. ಆದ್ದರಿಂದ ವಸ್ತುವಿಗೆ ನಿಶ್ಶೇಷನಾಶವು ಹೇಗೆ ಉಂಟಾಗುತ್ತದೆ?

ಅತೋ ಯಾ ಯಾ ತ್ವಯೋಚ್ಯೇತ ಸಾ ಸಾ ನಾಶಪರಂಪರಾ ।
ಕಥಂ ಮುಂಚೇದುಪಾದಾನಸೂಕ್ಷ್ಮಾಂಶಾಂತಪರಂಪರಾಮ್ ॥ ೧೨೯ ॥

**ಅರ್ಥ –** ಅತಃ= ಆದ್ದರಿಂದ, ತ್ವಯಾ= ನಿನ್ನಿಂದ, ಯಾ ಯಾ ನಾಶಪರಂಪರಾ= ಯಾವ ಯಾವ ನಾಶ ಪರಂಪರೆಯು, ಉಚ್ಯೇತ= ಹೇಳಲ್ಪಡುತ್ತದೆಯೋ ಆ ಪರಂಪರೆಯು, ಕಥಂ= ಹೇಗೆ, ಉಪಾದಾನಸೂಕ್ಷ್ಮಾಂಶಾಂತಪರಂಪರಾಂ= ಉಪಾದಾನವಾದ ಸೂಕ್ಷ್ಮ ಅಂಶಗಳ ಮತ್ತು ಅದರ ಅಂಶಗಳ ಪರ್ಯಂತವಾದ ಪರಂಪರೆಯನ್ನು, ಮುಂಚೇತ್= ತ್ಯಜಿಸುತ್ತದೆ?

**ಅನುವಾದ –** ಆದ್ದರಿಂದ ನೀನು ಯಾವ ಯಾವ ನಾಶ ಪರಂಪರೆಯನ್ನು ಹೇಳುತ್ತೀಯೋ, ಆ ಪರಂಪರೆ ಎಲ್ಲವೂ ಸೂಕ್ಷ್ಮ ಸೂಕ್ಷ್ಮತರವಾದ ಉಪಾ-ದಾನಾಂಶಗಳ ಪರಂಪರೆಯನ್ನು ಹೇಗೆ ತ್ಯಜಿಸುತ್ತದೆ?

**ಭಾವವಿಲಾಸಿನೀ–** ಕಾರ್ಯನಾಶೇऽಪಿ ಸಕಾರಣಕಾರ್ಯನಾಶೇऽಪಿ ॥ ೧೨೮-೧೨೯ ॥

**ಪರಂಪರಾ ದ್ವಿರೂಪೇಯಂ ಪ್ರಕೃತೌ ಪರ್ಯವಸ್ಯತಿ ।**
**ಸರ್ವಸ್ಯಾಂತೇ ಯತಃ ಸೈವ ಶಿಷ್ಟಾ ನಷ್ಟಾ ಚ ನೈವ ಸಾ ॥ ೧೩೦ ॥**

**ಅರ್ಥ –** ದ್ವಿರೂಪಾ= ಕಾರ್ಯಕಾರಣ ನಾಶರೂಪವಾದ, ಇಯಂ ಪರಂಪರಾ= ಘಟದಿಂದ ಆರಂಭಿಸಿ ಪ್ರಕೃತಿಯವರೆಗೂ ಇರುವ ಈ ಪರಂಪರೆಯು, ಪ್ರಕೃತೌ= ಮೂಲ ಪ್ರಕೃತಿಯಲ್ಲಿ, ಪರ್ಯವಸ್ಯತಿ= ಪರ್ಯವಸಾನವನ್ನು ಹೊಂದುತ್ತದೆ, ಯತಃ= ಯಾವ ಕಾರಣದಿಂದ, ಸೈವ= ಆ ಮೂಲಪ್ರಕೃತಿಯೇ, ಸರ್ವಸ್ಯಾಂತೇ= ಸರ್ವಕಾರ್ಯದ್ರವ್ಯಗಳ ನಾಶದ ಕೊನೆಯಲ್ಲಿ, ಶಿಷ್ಟಾ= ಉಳಿಯುತ್ತದೆಯೋ ಆ ಕಾರಣದಿಂದ, ಸಾ= ಆ ಪ್ರಕೃತಿಯು, ನೈವ ನಷ್ಟಾ= ಎಂದೂ ನಾಶವನ್ನು ಹೊಂದುವುದಿಲ್ಲ.

**ಅನುವಾದ – ಘಟಾದಿಗಳನ್ನು ಆರಂಭಿಸಿ ಪ್ರಕೃತಿಯವರೆಗೆ ಇರುವ ಕಾರ್ಯಕಾರಣ ನಾಶರೂಪವಾದ ಈ ಪರಂಪರೆಯು ಪ್ರಕೃತಿಯಲ್ಲಿ ಪರ್ಯವಸಾನವನ್ನು ಹೊಂದುತ್ತದೆ. ಎಲ್ಲ ಕಾರ್ಯಗಳ ನಾಶವಾದರೂ ಕೊನೆಯಲ್ಲಿ ಪ್ರಕೃತಿಯು ಉಳಿಯುವುದರಿಂದ ಆ ಪ್ರಕೃತಿಯು ನಾಶವನ್ನು ಹೊಂದುವುದಿಲ್ಲ.**

**ಭಾವವಿಲಾಸಿನೀ–** ದ್ವಿರೂಪಾ ಕಾರಣಕಾರ್ಯನಾಶಾರೂಪಾ । ಇಯಂ ಘಟಮಾರಭ್ಯ-ಪ್ರಕೃತಿಪರ್ಯಂತಾ । ಸೈವ ಪ್ರಕೃತಿರೇವ ॥ ೧೩೦ ॥

**ನಾಶತ್ವಾದ್ ವಿಮತೋ ನಾಶಃ ಸ್ಯಾದ್ ಭಾವಾಂತರಶೇಷವಾನ್ ।**
**ಘಟನಾಶವದಿತ್ಯೇಷಾ ವಿದೋಷಾ ಯುಕ್ತಿರಸ್ತಿ ಹಿ ॥ ೧೩೧ ॥**

**ಅರ್ಥ –** ವಿಮತೋ ನಾಶಃ= ವಿಪ್ರತಿಪನ್ನವಾದ ಜಗನ್ನಾಶವು, ಭಾವಾಂತರಶೇಷವಾನ್ ಸ್ಯಾತ್= ಇನ್ನೊಂದು ಭಾವವನ್ನು ಶೇಷವನ್ನಾಗಿ ಹೊಂದಿರುತ್ತದೆ, ನಾಶತ್ವಾತ್= ನಾಶವಾದ ಕಾರಣದಿಂದ, ಘಟನಾಶವತ್= ಘಟನಾಶದಂತೆ, ಇತಿ= ಎಂಬ, ಏಷಾ= ಈ, ವಿದೋಷಾ= ನಿರ್ದುಷ್ಟವಾದ, ಯುಕ್ತಿಃ= ಅನುಮಾನವು, ಅಸ್ತಿ ಹಿ= ಇದೆಯಷ್ಟೆ.

**ಅನುವಾದ – ವಿಮತೋ ನಾಶಃ ಭಾವಾಂತರಶೇಷವಾನ್ ನಾಶತ್ವಾತ್, ಘಟನಾಶವತ್ ಎಂಬ ನಿರ್ದುಷ್ಟವಾದ ಅನುಮಾನವು ಸಹ ಭಾವಾಂತರ-ಶೇಷವನ್ನೇ ಸಾಧಿಸಿಕೊಡುವುದಷ್ಟೆ.**

**ಭಾವವಿಲಾಸಿನೀ–**ನಿರೂಪಿತಪ್ರಮೇಯತಃ ಸಿದ್ಧಮನುಮಾನಮಾಹ–**ನಾಶತ್ವಾದಿತಿ**॥ ವಿಮತೋ ನಾಶಃ ಪರೋದೀರಿತಸರ್ವನಾಶಃ ॥ ೧೩೧ ॥

ನಿಃಶೇಷವಸ್ತುನಾಶಸ್ಯ ನಾಶಮಾತ್ರೇಽಪ್ಯದರ್ಶನಾತ್ ।
ವಕ್ತ್ರಾಭಾಸೋಕ್ತಿಮಾತ್ರೇಣ ನೈವ ಸ್ಯಾದ್ಧಿ ಸ ಯೌಕ್ತಿಕಃ ॥ ೧೩೨ ॥

**ಅರ್ಥ** – ನಾಶಮಾತ್ರೇಪಿ= ಯಾವ ನಾಶದಲ್ಲಿಯೂ ಕೂಡ, ನಿಃಶೇಷ ವಸ್ತುನಾಶಸ್ಯ= ನಿಶ್ಶೇಷ ವಸ್ತುನಾಶವು, ಅದರ್ಶನಾತ್= ಕಂಡುಬರುವುದಿಲ್ಲವಾದ್ದರಿಂದ, ವಕ್ತೃ(ಕ್ತುಃ)= ಪ್ರಯೋಗವನ್ನು ಮಾಡುವವನ, ಆಭಾಸೋಕ್ತಿಮಾತ್ರೇಣ= ಕೇವಲ ಯುಕ್ತ್ಯಾಭಾಸ ಪ್ರಯೋಗದಿಂದ, ಸಃ= ಆ ನಿಶ್ಶೇಷನಾಶವು, ಯೌಕ್ತಿಕಃ= ಯುಕ್ತಿಸಮ್ಮತವಾದುದ್ದಾಗಿ, ನೈವ ಸ್ಯಾತ್= ಆಗುವುದಿಲ್ಲ.

**ಅನುವಾದ** – ಯಾವ ನಾಶದಲ್ಲಿಯೂ ನಿಶ್ಶೇಷವಸ್ತುನಾಶವು ಕಂಡುಬರುವುದಿಲ್ಲ ವಾದ್ದರಿಂದ ಪ್ರಯೋಗವನ್ನು ಮಾಡುವವನು ಕೇವಲ ಒಂದು ಆಭಾಸಾನುಮಾನವನ್ನು ಪ್ರಯೋಗ ಮಾಡಿದ ಕಾರಣದಿಂದ ನಿಶ್ಶೇಷನಾಶವು ಯುಕ್ತಿ ಸಮ್ಮತವಾದುದೆಂದು ಸಿದ್ಧವಾಗುವುದಿಲ್ಲ.

**ಭಾವವಿಲಾಸಿನೀ**– ಯೌಕ್ತಿಕೋ ನ ಹಿ ॥ ೧೩೨ ॥

ಅದೃಷ್ಟಕಲ್ಪನಾದೋಷೋ ಯತಃ ಸರ್ವತ್ರ ಸಂಚರೇತ್ ।
ಶ್ರುತಯಶ್ಚ ಪುರಾಣಾನಿ ಮನ್ಮತಸ್ಯೈವ ಸಾಕ್ಷಿಣಃ ॥ ೧೩೩ ॥

**ಅರ್ಥ** – ಯತಃ= ಏಕೆಂದರೆ, ಸರ್ವತ್ರ= ಯಾವ ಅನುಮಾನವನ್ನು ಮಾಡಿದರೂ ಎಲ್ಲ ಕಡೆಗಳಲ್ಲಿಯೂ, ಅದೃಷ್ಟಕಲ್ಪನಾದೋಷಃ= ಅದೃಷ್ಟ ಕಲ್ಪನೆ ಎಂಬ ದೋಷವು, ಸಂಚರೇತ್= ಉಂಟಾಗುತ್ತದೆ, ಶ್ರುತಯಃ= ಶ್ರುತಿಗಳು, ಪುರಾಣಾನಿ ಚ= ಮತ್ತು ಪುರಾಣಗಳು, ಮನ್ಮತಸ್ಯೈವ= ನನ್ನ ಮತಕ್ಕೇ, ಸಾಕ್ಷಿಣಃ= ಸಾಕ್ಷಿಗಳಾಗಿವೆ.

**ಅನುವಾದ** – ನಿಶ್ಶೇಷ ನಾಶವನ್ನು ಸಾಧಿಸಲು ಯಾವ ಅನುಮಾನವನ್ನು ಪ್ರಯೋಗ ಮಾಡಿದರೂ ಅಲ್ಲಿ ಅದೃಷ್ಟಕಲ್ಪನೆ ಎಂಬ ದೋಷವು ಉಂಟಾಗುತ್ತದೆ. ಅಲ್ಲದೆ, ಶ್ರುತಿ ಮತ್ತು ಪುರಾಣಗಳು ನಾವು ಹೇಳಿದ ಅರ್ಥಕ್ಕೇ ಸಾಕ್ಷಿಗಳಾಗಿವೆ.

**ಭಾವವಿಲಾಸಿನೀ**– ಕುತೋ ನ ಯೌಕ್ತಿಕ ಇತ್ಯುತ ಆಹ – ಅದೃಷ್ಟೇತಿ ॥ ೧೩೩ ॥

ಕಿಂ ಚ ಸರ್ವವಿನಾಶೋ ನ ನಾಶಸ್ಯಾಸ್ಯಾವಿನಾಶನಾತ್ ।
ನಾಪಿ ಭಾವಸ್ಯ ಸರ್ವಸ್ಯ ನಾಶೋ ಬ್ರಹ್ಮಾವಿನಾಶನಾತ್ ॥ ೧೩೪ ॥

**ಅರ್ಥ** – ಕಿಂಚ= ಮತ್ತು, ಅಸ್ಯ ನಾಶಸ್ಯ= ಈ ಜಗನ್ನಾಶಕ್ಕೆ, ಅವಿನಾಶನಾತ್= ನಾಶವಿಲ್ಲದಿರುವುದರಿಂದ, ಸರ್ವವಿನಾಶಃ= ಸರ್ವ ವಿನಾಶವು, ನ= ಉಂಟಾಗುವುದಿಲ್ಲ, ಅಪಿ= ಅಥವಾ, ಸರ್ವಸ್ಯ ಭಾವಸ್ಯ ನಾಶಃ= ಸರ್ವಭಾವನಾಶವೂ, ನ= ಆಗುವುದಿಲ್ಲ

ಬ್ರಹ್ಮಾವಿನಾಶನಾತ್= ಏಕೆಂದರೆ ಸರ್ವಭಾವ ಮಧ್ಯಪತಿತನಾದ ಬ್ರಹ್ಮನಿಗೇ ನಾಶ ಉಂಟಾಗುವುದಿಲ್ಲ.

**ಅನುವಾದ –** ಮತ್ತು ನಿನಗೆ ಅಭಿಮತವಾದ ಜಗನ್ನಾಶಕ್ಕೆ ನಾಶವಿಲ್ಲದಿರುವುದರಿಂದ ಜಗನ್ನಾಶವು ಸರ್ವವಿನಾಶರೂಪವಾಗುವುದಿಲ್ಲ. ಅಥವಾ ಸರ್ವಭಾವ ವಿನಾಶರೂಪವೂ ಆಗುವುದಿಲ್ಲ. ಏಕೆಂದರೆ ಸರ್ವಭಾವಗಳಲ್ಲಿ ಸೇರಿದ ಭಾವರೂಪನಾದ ಬ್ರಹ್ಮನಿಗೆ ನಾಶವುಂಟಾಗುವುದಿಲ್ಲ.

**ಭಾವವಿಲಾಸಿನೀ–** ಯಯಾ ಕಯಾಚನ ಯುಕ್ತ್ಯಾ ಸರ್ವನಾಶಂ ಸಾಧಯತೋಽಪಿ ಸ್ವೋಕ್ತಯುಕ್ತ್ಯೈವಾಂತತಃಸಾಧ್ಯಮಾನಸಕಲಜಗನ್ನಾಶಸ್ಯೈವೋರ್ವರಿತತ್ವೇನ ಸರ್ವನಾಶ-ಪ್ರತಿಜ್ಞೈವೇಯಂ ವ್ಯಾಹತಾ ಸ್ಯಾದಿತ್ಯಾಹ – **ಕಿಂಚೇತಿ** ॥ ಅಸ್ಯ ಸಾಧ್ಯಮಾನಸರ್ವನಾಶಾಖ್ಯಸ್ಯ । ತಸ್ಯಾಪಿ ನಾಶೇ ಪುನಃ ಸರ್ವಜಗದುನ್ಮಜ್ಜನಪ್ರಸಂಗಾದಿತಿ ಭಾವಃ । ಅಸ್ತು ತರ್ಹಿ ಸರ್ವಭಾವವಿನಾಶ ಇತ್ಯತ ಆಹ – **ನಾಪೀತಿ** ॥ ಪ್ರಾಚೀನಪಕ್ಷೇಽಪೀದಂ ದೂಷಣಮನುಸಂಧೇಯಮ್ ॥ ೧೩೪ ॥

**ವಿವರಣೆ –** ಯಾವ ಯುಕ್ತಿಯಿಂದ ಜಗನ್ನಾಶವನ್ನು ಸಾಧಿಸಿದರೂ ಆ ಯುಕ್ತಿಯಿಂದ ಸಿದ್ಧವಾದ ಜಗನ್ನಾಶವೇ ಕೊನೆಯಲ್ಲಿ ಉಳಿಯುವುದರಿಂದ ಸರ್ವನಾಶಪ್ರತಿಜ್ಞೆಯೇ ವ್ಯಾಹತವಾದುದು ಎಂದು ಇಲ್ಲಿ ಹೇಳುತ್ತಾರೆ. ಜಗನ್ನಾಶವು ನಾಶವಾದರೆ ಪುನಃ ಜಗತ್ತು ಹುಟ್ಟುವ ಪ್ರಸಂಗವು ಬರುತ್ತದೆ. ಸರ್ವಭಾವನಾಶವು ಜಗನ್ನಾಶವೆಂದರೆ ಬ್ರಹ್ಮನಿಗೂ ನಾಶವುಂಟಾಗುತ್ತದೆ ಮತ್ತು ಈ ದೋಷವು ಸರ್ವವಿನಾಶ ಎಂಬ ಪಕ್ಷದಲ್ಲಿಯೂ ಸಮಾನವಾದುದು.

**ಬ್ರಹ್ಮಭಿನ್ನಸ್ಯ ಭಾವಸ್ಯ ನಾಶೇ ಜೀವೋಽಪಿ ನಂಕ್ಷ್ಯತಿ ।**
**ಮಿಥ್ಯಾಭೂತೋಽಸ್ತಿ ತದ್ಭೇದಃ ಪರಮಾರ್ಥೋ ನ ಕುತ್ರಚಿತ್ ॥ ೧೩೫ ॥**

**ಅರ್ಥ –** ಬ್ರಹ್ಮಭಿನ್ನಸ್ಯ= ಬ್ರಹ್ಮಭಿನ್ನವಾದ, ಭಾವಸ್ಯ= ಭಾವದ, ನಾಶೇ= ನಾಶವೆಂದು ಹೇಳಿದರೆ, ಜೀವೋಽಪಿ= ಜೀವನೂ ಕೂಡ, ನಂಕ್ಷ್ಯತಿ= ನಾಶವನ್ನು ಹೊಂದುವನು, ಮಿಥ್ಯಾಭೂತಃ= ಮಿಥ್ಯಾಭೂತವಾದ, ತದ್ಭೇದಃ= ಬ್ರಹ್ಮಭೇದವು, ಅಸ್ತಿ= ಜೀವನಲ್ಲಿ ಇದೆ, ಪರಮಾರ್ಥಃ= ಪಾರಮಾರ್ಥಿಕವಾದ ಬ್ರಹ್ಮಭೇದವು, ಕುತ್ರಚಿತ್ ನ= ಎಲ್ಲಿಯೂ ಇಲ್ಲ.

**ಅನುವಾದ –** ಜಗನ್ನಾಶವೆಂದರೆ ಬ್ರಹ್ಮಭಿನ್ನಸರ್ವನಾಶವೆಂದು ಅಂಗೀಕರಿಸಿದರೆ ಜೀವನಿಗೂ ನಾಶವುಂಟಾಗುವ ಪ್ರಸಂಗವು ಬರುತ್ತದೆ. ಮಿಥ್ಯಾಭೂತವಾದ ಬ್ರಹ್ಮಭೇದವು ಜೀವನಲ್ಲಿಯೂ ಇದೆ. ಪಾರಮಾರ್ಥಿಕವಾದ ಬ್ರಹ್ಮಭೇದವು ಎಲ್ಲಿಯೂ ಇಲ್ಲ.

**ಭಾವವಿಲಾಸಿನೀ–** ತರ್ಹಿ ಬ್ರಹ್ಮವ್ಯತಿರಿಕ್ತಭಾವಸ್ಯ ನಾಶೋಽಸ್ತ್ವಿತ್ಯತ ಆಹ – **ಬ್ರಹ್ಮಭಿನ್ನಸ್ಯೇತಿ ॥** ಜೀವಸ್ಯಾಪಿ ಬ್ರಹ್ಮಭಿನ್ನತ್ವಾದಿತಿಭಾವಃ । ನನು ಪರಮಾರ್ಥತೋ ಮಯಾಜೀವಬ್ರಹ್ಮ-ಭೇದಾನಂಗೀಕಾರಾತ್ ಕಥಂ ಬ್ರಹ್ಮಭಿನ್ನೇತ್ಯುಕ್ತೇ ಜೀವಸ್ಯ ಪ್ರಾಪ್ತಿರಿತಿ ಚೇತ್ ತರ್ಹಿ ಪಾರಮಾರ್ಥಿಕಭೇದಸ್ಯ ತ್ವಯಾ ಕ್ವಾಪ್ಯನಂಗೀಕಾರಾತ್‌ಬ್ರಹ್ಮಭಿನ್ನಪದೇನೈವ ಜಗತೋಽಪ್ಯಪ್ರಾಪ್ತಿಃ ಸ್ಯಾತ್ । ಅಪಾರಮಾರ್ಥಿಕಭೇದಮಾದಾಯ ಜಗತಃ ಪ್ರಾಪ್ತಿಶ್ಚೇತ್ ತತ ಏವ ಜೀವಸ್ಯಾಪಿ ಪ್ರಾಪ್ತಿಃ ಸ್ಯಾದಿತ್ಯಾಹ – **ಮಿಥ್ಯಾಭೂತ ಇತಿ ॥** ತತ್ ಭೇದಃ ಜೀವೇಶ್ವರಭೇದಃ ॥ ೧೩೫ ॥

**ವಿವರಣೆ** – ಜೀವನು ಬ್ರಹ್ಮಭಿನ್ನಭಾವನಾದುದರಿಂದ ಜೀವನಿಗೂ ನಾಶವಾಗಲಿ ಎಂಬ ಆಪತ್ತಿಯು ಬರುತ್ತದೆ. ಜೀವನಲ್ಲಿ ಬ್ರಹ್ಮಭೇದವಿದ್ದರೂ ಅದು ಅಪಾರಮಾರ್ಥಿಕ, ನಾನು ಪಾರಮಾರ್ಥಿಕ ಬ್ರಹ್ಮಭೇದವುಳ್ಳ ಭಾವವಸ್ತುವಿಗೆ ನಾಶವನ್ನು ಅಂಗೀಕರಿಸುತ್ತೇನೆ ಎಂದು ಹೇಳಿದರೆ ಆಗ ಜೀವನ ನಾಶದ ಪ್ರಸಂಗವು ಬರದಿದ್ದರೂ ಜಗತ್ತಿನಲ್ಲಿಯೂ ಬ್ರಹ್ಮಪ್ರತಿಯೋಗಿಕವಾದ ಪಾರಮಾರ್ಥಿಕಭೇದವು ಇಲ್ಲದಿರುವುದರಿಂದ ಜಗತ್ತಿನ ನಾಶವು ಉಂಟಾಗುವುದಿಲ್ಲ ಎಂಬ ಪ್ರಸಂಗವು ಬರುತ್ತದೆ. ಜಗತ್ತಿನ ನಾಶವನ್ನು ಉಪಪಾದನೆ ಮಾಡಲು ಅಪಾರಮಾರ್ಥಿಕಭೇದವನ್ನು ತೆಗೆದುಕೊಂಡರೆ ಅದು ಜೀವನಲ್ಲಿಯೂ ಇರುವುದರಿಂದ ಜೀವನಿಗೂ ನಾಶವಾಗಲಿ ಎಂಬ ಪ್ರಸಂಗವು ಬಂದೇ ಬರುತ್ತದೆ.

ಭಾವಕಾರ್ಯಸ್ಯ ಸರ್ವಸ್ಯ ನಾಶ ಆಶಾಸ್ಯತೇ ಯದಿ ।
ಜೀವಸ್ಯ ಜೀವಧರ್ಮಾಣಾಂ ಕಾಲಾದೇರ್ಗಗನಸ್ಯ ಚ ।
ವಿನಾಶೋಽನಾದಿಭಾವಾನಾಂ ಭವೇದಾಕಸ್ಮಿಕಸ್ತದಾ ॥ ೧೩೬ ॥

**ಅರ್ಥ** – ಯದಿ= ಒಂದು ಪಕ್ಷ, ಸರ್ವಸ್ಯ= ಎಲ್ಲಾ, ಭಾವಕಾರ್ಯಸ್ಯ= ಭಾವರೂಪವಾದ ಕಾರ್ಯದ, ನಾಶಃ= ನಾಶವು, ಆಶಾಸ್ಯತೇ= ಅಂಗೀಕರಿಸಲ್ಪಡುವುದಾದರೆ, ತದಾ= ಆಗ, ಅನಾದಿಭಾವಾನಾಂ= ಅನಾದಿಭಾವಗಳಾದ, ಜೀವಸ್ಯ= ಜೀವನಿಗೂ, ಜೀವಧರ್ಮಾಣಾಂ= ಜೀವಧರ್ಮಗಳಾದ ಅಲ್ಪಜ್ಞತ್ವಾದಿಗಳಿಗೂ, ಕಾಲಾದೇಃ= ಕಾಲಾದಿಗಳಿಗೂ, ಚ= ಮತ್ತು, ಗಗನಸ್ಯ= ಗಗನಕ್ಕೂ, ವಿನಾಶಃ= ವಿನಾಶವು, ಆಕಸ್ಮಿಕಃ= ನಿಷ್ಕಾರಣವಾಗಿ, ಭವೇತ್= ಆಗುತ್ತದೆ.

**ಅನುವಾದ** – ಜಗನ್ನಾಶವೆಂದರೆ ಸರ್ವಭಾವಕಾರ್ಯನಾಶವೆಂದು ಅಂಗೀಕರಿಸಿದರೆ ಆಗ ಅನಾದಿಭಾವಗಳಾದ ಜೀವನಿಗೆ, ಜೀವಧರ್ಮಗಳಾದ ಅಲ್ಪಜ್ಞತ್ವಾದಿಗಳಿಗೆ, ಕಾಲಾದಿಗಳಿಗೆ ಮತ್ತು ಗಗನಕ್ಕೆ ವಿನಾಶವು ಕಾರಣರಹಿತವೆಂದು ಆದೀತು.

**ಭಾವವಿಲಾಸಿನೀ–** ಪಕ್ಷಾಂತರಮಾಶಂಕ್ಯ ದೂಷಯತಿ – **ಭಾವೇತಿ ॥** ಜೀವಸ್ಯ ಜೀವೋಪಾಧಿ-ಭೂತಲಿಂಗದೇಹಸ್ಯ । ತದುಪಹಿತಜೀವಸ್ಯ ವಾ । ಜೀವಧರ್ಮಾಣಾಂ ಅಲ್ಪಜ್ಞಾತ್ವಾದೀ-ನಾಮ್ ॥ ೧೩೬ ॥

**ವಿವರಣೆ** – ಇಲ್ಲಿ ಪಕ್ಷಾಂತರವನ್ನು ಆಶಂಕಿಸಿ ದೂಷಿಸುತ್ತಾರೆ. ಜೀವನೆಂದರೆ ಜೀವನ ಉಪಾಧಿಗಳಾದ ಲಿಂಗದೇಹ ಅಥವಾ ಆ ಲಿಂಗದೇಹದಿಂದ ಉಪಹಿತನಾದ ಜೀವ ಎಂದು ಇಟ್ಟುಕೊಳ್ಳಬೇಕು. ಜೀವಧರ್ಮಗಳು ಎಂದರೆ ಅಲ್ಪಜ್ಞತ್ವಾದಿಗಳನ್ನು ತೆಗೆದುಕೊಳ್ಳಬೇಕು ಎಂದು ಅಭಿಪ್ರಾಯ.

ಬ್ರಹ್ಮಾನ್ಯಾನಾದಿನಾಶೇ ತು ನಶ್ಯೇದ್ ಬ್ರಹ್ಮಾಪಿ ತಾದೃಶಮ್ ।
ಅತಃ ಸರ್ವವಿನಾಶೋಽಯಂ ವಿದ್ವದಗ್ರೇ ನ ಶೋಭತೇ ॥ ೧೩೭ ॥

**ಅರ್ಥ** – ಬ್ರಹ್ಮಾನ್ಯಾನಾದಿನಾಶೇ ತು= ಬ್ರಹ್ಮಭಿನ್ನವಾದ ಅನಾದಿ ನಾಶವನ್ನು ಒಪ್ಪಿದರೆ, ತಾದೃಶಂ= ಅನಾದಿಭಾವರೂಪನಾದ, ಬ್ರಹ್ಮಾಪಿ= ಬ್ರಹ್ಮನೂ, ನಶ್ಯೇತ್= ನಾಶವನ್ನು ಹೊಂದಲಿ, ಅತಃ= ಆದ್ದರಿಂದ, ಅಯಂ ಸರ್ವವಿನಾಶಃ= ಈ ಸರ್ವಜಗನ್ನಾಶವು, ವಿದ್ವದಗ್ರೇ= ವಿದ್ವಾಂಸರ ಎದುರಿನಲ್ಲಿ, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ** – ಜಗನ್ನಾಶವೆಂದರೆ ಬ್ರಹ್ಮಾನ್ಯವಾದ ಅನಾದಿ ವಸ್ತುವಿನ ನಾಶವೆಂದು ಅಂಗೀಕರಿಸಿದರೆ ಅನಾದಿ ಭಾವರೂಪವಾದ ಬ್ರಹ್ಮನೂ ನಾಶವನ್ನು ಹೊಂದಲಿ ಎಂಬ ಆಪತ್ತಿಯು ಬರುತ್ತದೆ. ಆದ್ದರಿಂದ ಇಂತಹ ಸರ್ವವಿನಾಶವು ವಿದ್ವಾಂಸರ ಎದುರಿನಲ್ಲಿ ಶೋಭಿಸುವುದಿಲ್ಲ.

**ಭಾವವಿಲಾಸಿನೀ**– ನನು ಬ್ರಹ್ಮಾನ್ಯಜಡಭೂತಸಕಲಭಾವನಾಶ ಏವ ಸರ್ವನಾಶೋಂಗೀಕ್ರಿಯತೇ . ಅತಃ ಕೋ ದೋಷ ಇತಿ ಚೇತ್ । ನ । ಅನಾದಿತ್ವೇನಾಂಗೀಕೃತಗಗನಾದೀನಾಂ ನಾಶ-ಪ್ರಸಂಗಾತ್ । ಅಸ್ತು ಕೋ ದೋಷ ಇತ್ಯತ ಆಹ – ಬ್ರಹ್ಮಾನ್ಯೇತಿ ॥ ತಾದೃಶಂ ಅನಾದಿಭಾವ-ಭೂತಮ್ । ಅನಶ್ವರಬ್ರಹ್ಮ- ವದನಾದಿಭಾವಾನಾಂ ಗಗನಾದೀನಾಮವಿನಾಶಿ ಸರ್ವನಾಶ-ನಿಷ್ಠತ್ವೇನ ನಾಶಾಸಂಪಾದಕಜಡತ್ವಪ್ರವೇಶಮಾತ್ರೇಣ ನಾಶ್ಯತ್ವಾಶಾಯೋಗಾದಿತಿ ಭಾವಃ । ಏವಮಪ್ಯನ್ಯೋನ್ಯಾಭಾವಾತ್ಮಕಜೀವಬ್ರಹ್ಮಭೇದಸ್ಯಾನಷ್ಟತ್ವೇನ ತ್ವದಭೀಷ್ಟಾಸಿದ್ಧೇಃ ಬ್ರಹ್ಮಧರ್ಮ-ತಯಾಪ್ರತೀಯಮಾನ ಜಡಭೂತತ್ವದೈಕ್ಯಸ್ಯೈವ ನಷ್ಟತ್ವೇನೇಷ್ಟಹಾನೇಶ್ಚೇತ್ಯಪ್ಯೂಹ್ಯಮ್ । ನಿತ್ಯತ್ವಶ್ರುತಿಬಲಾನ್ನ ಬ್ರಹ್ಮಣೋ ನಾಶ ಇತಿ ಚೇತ್ ತತ ಏವ ಗಗನಾದೀನಾಮಪಿ ನಾಶ ಇತಿ ಸಂತೋಷ್ಟವ್ಯಮ್ । ''ಆಕಾಶವತ್ಸರ್ವಗತಶ್ಚ ನಿತ್ಯ'' ಇತಿ ಶ್ರುತ್ಯಾ ಬ್ರಹ್ಮಣಃ ಸಂದಿಗ್ಧಯೋಃ ಸರ್ವಗತತ್ವನಿತ್ಯತ್ವಯೋರ್ದೃಷ್ಟಾಂತತಯೋಕ್ತಗಗನೇ ನಿಶ್ಚಿತಯೋಸ್ತಯೋಃ ಸತ್ತ್ವಸ್ಯ ಶ್ರುತ್ಯಭಿ-ಪ್ರೇತತ್ವಾತ್ । ಅತ ಏವ ಗಗನನಿತ್ಯತ್ವಾದೇರೌಪಚಾರಿಕತ್ವಮ್ । ದೃಷ್ಟಾಂತಸ್ಯ ಭಂಗೇ ದಾರ್ಷ್ಟಾಂತಿಕಸ್ಯ ಸುತರಾಂ ಭಗ್ನತ್ವೇನ ಬ್ರಹ್ಮಣಿ ತತೋಽಪ್ಯತಿಶಯಿತೌಪಚಾರಿಕತ್ವಪ್ರಾಪ್ತೇಃ । ಅತಃ ಶ್ರುತಿಸಿದ್ಧ ನಿತ್ಯತ್ವವತಾಂ ನಾಶಾಯೋಗಾತ್ । ಕೇವಲಂ ಸ್ವಮತಬಲೇನ ಪದಾರ್ಥಾನಾಂ ನಾಶಾಂಗೀಕರೇ ಚ ನಿರೀಶ್ವರಾದಿಭಿಃ ತವ ಬ್ರಹ್ಮಣ ಏವ ನಾಶಯಿತುಂ ಶಕ್ಯತ್ವಾಚ್ಚ । ಅಯಂ ಇದಾನೀಮಭಾವಾತ್ಕಾಲಾಂತರೇ ಕಲ್ಪ್ಯಮಾನಃ । ಕದಾಚಿದಸ್ಯ ಸರ್ವಸ್ಯ ನಾಶೋ ಭವಿಷ್ಯತೀತಿ

ವಾ ಸಕಾಲಃ ಸರ್ವವಿನಾಶವಾನಿತಿ ವಾ ಸಾಧಯತಾ ಕಾಲಸ್ಯಾವಶ್ಯಮಂಗೀಕಾರ್ಯತ್ವಾದಿತಿ ಭಾವಃ ॥ ೧೩೭ ॥

**ವಿವರಣೆ** – ನಾನು ಬ್ರಹ್ಮಾನ್ಯವಾದ ಜಡವಾದ ಸಕಲ ಭಾವಗಳ ನಾಶವನ್ನು ಸರ್ವನಾಶವೆಂದು ಅಂಗೀಕರಿಸುತ್ತೇನೆ. ಆಗ ಏನು ದೋಷ ಎಂಬ ಪ್ರಶ್ನೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಆಗ ಅನಾದಿಯಾದ ಗಗನಾದಿಗಳಿಗೂ ನಾಶ ಉಂಟಾಗಬೇಕಾಗುತ್ತದೆ. ಗಗನದ ನಾಶವನ್ನು ಒಪ್ಪುತ್ತೇನೆ ಏನು ದೋಷವೆಂದು ಕೇಳಿದರೆ ನಾಶಹೊಂದದ ಬ್ರಹ್ಮನಂತೆ ಅನಾದಿ ಭಾವರೂಪವಾದ ಗಗನಾದಿಗಳಿಗೂ ಸಹ ಜಡತ್ವವು ನಾಶಸಂಪಾದಕವಾಗುವುದಿಲ್ಲ. ಏಕೆಂದರೆ ಅಂತಹ ಜಡತ್ವವು ನಾಶರಹಿತವಾದ ನಿನಗೆ ಅಭಿಮತವಾದ ಸರ್ವನಾಶದಲ್ಲಿಯೂ ಇದೆ. ಆದ್ದರಿಂದ ಜಡತ್ವವು ಅಪ್ರಯೋಜಕವಾದ್ದರಿಂದ ಅನಾದಿ ಭಾವರೂಪವಾದ ಗಗನಕ್ಕೆ ನಾಶವನ್ನು ಒಪ್ಪಿದರೆ ಬ್ರಹ್ಮನಿಗೂ ನಾಶವುಂಟಾಗಲಿ ಎಂಬ ಪ್ರಸಂಗವು ಬರುತ್ತದೆ. ಅಷ್ಟೇ ಅಲ್ಲದೆ ಜೀವಬ್ರಹ್ಮಭೇದವು ನಿನ್ನ ಮತದಂತೆ ಅನಾದಿ. ಆದರೆ ಭಾವರೂಪವಲ್ಲ. ಅದು ಅನ್ಯೋನ್ಯಾಭಾವರೂಪವಾದುದು. ಆದ್ದರಿಂದ ಅದಕ್ಕೆ ನಾಶವಿಲ್ಲದಿರುವುದರಿಂದ ಮೋಕ್ಷದಲ್ಲಿ ಅನುವೃತ್ತವಾಗಲಿ ಎಂಬ 'ಪ್ರಸಂಗವು ಬರುವುದರಿಂದ ನಿನ್ನ ಅಭೀಷ್ಟವು ಸಿದ್ಧವಾಗುವುದಿಲ್ಲ. ಅಲ್ಲದೆ, ಬ್ರಹ್ಮನಲ್ಲಿ ನೀನು ಅಂಗೀಕರಿಸುವ ಐಕ್ಯವು ಜಡರೂಪವಾದುದು ಮತ್ತು ಭಾವರೂಪವಾದುದು. ಅದಕ್ಕೆ ನಾಶವುಂಟಾಗಲಿ ಎಂಬ ಅನಿಷ್ಟಪ್ರಸಂಗವು ಬರುತ್ತದೆ. ನಿತ್ಯತ್ವಶ್ರುತಿ ಇರುವುದರಿಂದ ಬ್ರಹ್ಮನಿಗೆ ನಾಶವಿಲ್ಲವೆಂದು ಹೇಳಿದರೆ ಅದೇ ಕಾರಣದಿಂದ ಗಗನಕ್ಕೂ ನಾಶವಿಲ್ಲವೆಂದು ಒಪ್ಪಬೇಕು. ಬ್ರಹ್ಮನ ಸರ್ವಗತತ್ವ ಮತ್ತು ನಿತ್ಯತ್ವಗಳು ಸಂದಿಗ್ಧವಾಗಿರುವುದರಿಂದ ಆಕಾಶವತ್ ಸರ್ವಗತಶ್ಚ ನಿತ್ಯಃ ಎಂಬ ಶ್ರುತಿಯು ಆಕಾಶವನ್ನು ದೃಷ್ಟಾಂತವಾಗಿ ಕೊಟ್ಟು ಆಕಾಶದ ಸರ್ವಗತತ್ವ ಮತ್ತು ನಿತ್ಯತ್ವಗಳಿಂದ ಬ್ರಹ್ಮನ ಸರ್ವಗತತ್ವ ಮತ್ತು ನಿತ್ಯತ್ವಗಳನ್ನು ಸಾಧಿಸುತ್ತದೆ. ಆದ್ದರಿಂದಲೇ ಗಗನದ ನಿತ್ಯತ್ವಾದಿಗಳು ಔಪಚಾರಿಕವಲ್ಲ. ಒಂದು ಪಕ್ಷ ದೃಷ್ಟಾಂತವಾದ ಗಗನದ ನಿತ್ಯತ್ವಾದಿಗಳು ಔಪಚಾರಿಕವಾಗಿ ಸರ್ವಗತತ್ವಾದಿಗಳು ಭಗ್ನವಾಗುವುದಾದರೆ ದಾರ್ಷ್ಟಾಂತಿಕವಾದ ಬ್ರಹ್ಮನಲ್ಲಿ ಅದಕ್ಕಿಂತಲೂ ಅತಿಶಯಿತವಾಗಿ ಸರ್ವಗತತ್ವ ಮತ್ತು ನಿತ್ಯತ್ವಗಳು ಭಗ್ನವಾಗುತ್ತದೆ. ಆದ್ದರಿಂದ ಶ್ರುತಿಯು ಯಾವುದಕ್ಕೆ ನಿತ್ಯತ್ವವನ್ನು ಹೇಳುತ್ತದೆಯೋ, ಅದಕ್ಕೆ ಕೇವಲ ನಿನ್ನ ಮತದ ಪ್ರಕ್ರಿಯೆಯಂತೆ ನಾಶವನ್ನು ಅಂಗೀಕರಿಸಲು ಬರುವುದಿಲ್ಲ. ಇಲ್ಲದಿದ್ದರೆ ನಿರೀಶ್ವರವಾದಿಯೂ ಸಹ ತನ್ನ ಮತದ ಪ್ರಕ್ರಿಯೆಯಂತೆ ನಿನ್ನ ಬ್ರಹ್ಮನಿಗೂ ನಾಶವನ್ನು ಸಾಧಿಸಬಹುದು. ಇನ್ನು ಅನುಮಾನಗಳಿಂದ ಯಾವುದಾದರೂ ಕಾಲದಲ್ಲಿ ಸರ್ವವಿನಾಶವನ್ನು ಸಾಧಿಸುವುದಾದರೆ ಆಗ ಆ ಕಾಲವೇ ಅವಿನಾಶಿಯಾಗಿ ಉಳಿಯುವುದರಿಂದ ಆಗಲೂ ಸರ್ವವಿನಾಶವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಅಣುತ್ವೇಶವಶತ್ವಾದೇರನಾದೇರವಿನಾಶನಾತ್ ।**
**ಜೀವಬ್ರಹ್ಮೈಕತಾಶಾ ಚ ದುರಾಶೈವಾಭವತ್ ತವ ॥ ೧೩೮ ॥**

**ಅರ್ಥ –** ಅನಾದೇಃ= ಅನಾದಿಯಾದ, ಅಣುತ್ವೇಶವಶತ್ವಾದೇಃ= ಅಣುತ್ವ ಮತ್ತು ಈಶ ವಶತ್ವ ಮೊದಲಾದ ಧರ್ಮಗಳಿಗೆ, ಅವಿನಾಶನಾತ್= ನಾಶವಿಲ್ಲದಿರುವುದರಿಂದ, ಜೀವಬ್ರಹ್ಮೈಕತಾಶಾ= ಜೀವಬ್ರಹ್ಮೈಕ್ಯಾಶೆಯು, ತವ= ನಿನ್ನ, ದುರಾಶೈವ= ದುರಾಸೆಯೇ, ಅಭವತ್= ಆಯಿತು.

**ಅನುವಾದ –** ಅನಾದಿಯಾದ ಅಣುತ್ವ ಈಶತ್ವ ಮೊದಲಾದ ಧರ್ಮಗಳಿಗೆ ವಿನಾಶವಿಲ್ಲದಿರುವುದರಿಂದ ನಿನ್ನ ಜೀವಬ್ರಹ್ಮೈಕ್ಯಾಶೆಯು ದುರಾಶೆಯೇ ಆಯಿತು.

**ಭಾವವಿಲಾಸಿನೀ–** ಕಿಂಚ ಐಕ್ಯರಕ್ಷಣಾಯ ಖಲ್ವಯಂ ಸರ್ವವಿನಾಶೋಽಂಗೀಕ್ರಿಯತೇ । ಬ್ರಹ್ಮಾತಿರಿಕ್ತಭಾವರೂಪಜಡಮಾತ್ರವಿನಾಶಾಂಗೀಕಾರೇ ಚ "ಅವಿನಾಶೀ ವಾ ಅರೇಯ-ಮಾತ್ಮಾನುಚ್ಛಿತ್ತಿ ಧರ್ಮೇ"ತಿ ಶ್ರುತಾವನುಚ್ಛಿತ್ತಿರೇವ ಧರ್ಮೋ ಯಸ್ಯೇತಿ ಸಮಾಸಾಂಗೀಕಾರೇ ಪೌನರುಕ್ತ್ಯಭಯೇನ ನ ವಿದ್ಯತೇ ಉಚ್ಛಿತ್ತಿರ್ಯೇಷಾಂ ತೇ ಧರ್ಮಾ ಯಸ್ಯೇತ್ಯೇವ ವಕ್ತವ್ಯತಯಾ ನಿತ್ಯತ್ವೇನ ಪ್ರಮಿತಜೀವಧರ್ಮಾಣಾಂ ಧರ್ಮ್ಯಭಿನ್ನತಯಾ ಚೇತನರೂಪಾಣಾಂ ಚ ನಾಶಪ್ರಸಕ್ತೇರೇವಾಭಾವೇನ ತದೈಕ್ಯಸ್ಯಾನವಸರ ಏವೇತಿ ಭಾವೇನಾಹ – **ಅಣುತ್ವೇತಿ ॥** ಆದಿಪದೇನ "ನಿತ್ಯಾನಂದೋ ನಿತ್ಯಜ್ಞಾನೋ ನಿತ್ಯಬಲಃ ಪರಮಾತ್ಮಾ । ಸ್ವಾಭಾವಿಕೀ ಜ್ಞಾನಬಲ-ಕ್ರಿಯಾಚೇ" ಇತ್ಯಾದಿಶ್ರುತ್ಯಾ ಚ ನಿತ್ಯತಯೋಕ್ತಭಗವತ್‌ಧರ್ಮಾಣಾಂ ಸಂಗ್ರಹಃ । ಚೇತಾನಾತಿರಿಕ್ತಕಾಲಾಕಾಶಾದಿ ಜಡಜಗನ್ಮಾತ್ರನಾಶಸಾಧನೇ ಜೀವಬ್ರಹ್ಮಣೋ-ರ್ಬಹಿರ್ಭೂತತ್ವಾದಿತಿ ಭಾವಃ । ಅಥ ಯದಿ ಚಿನ್ಮಾತ್ರಮಂಗೀಕೃತ್ಯ ಶ್ರುತಿಮನಾದೃತ್ಯ ಚ ಭಾವರೂಪಚಿದ್ಧರ್ಮಾಣಾಂ ಭಾವರೂಪಜಗತಶ್ಚನಾಶೇಽಂಗೀಕ್ರಿಯತೇ । ತದಾಪ್ಯೈಕ್ಯಸ್ಯೈವ ನಷ್ಟತ್ವೇನೈಕ್ಯಾಭಾವಸ್ಯ ಚಾವಿಷ್ಟತ್ವೇನಭವದನಿಷ್ಟಸ್ಯಾಪರಿಹಾರಾತ್ । ಅಥ ಯದಿ ಧರ್ಮಧರ್ಮಿಣೋರಭೇದಮಂಗೀಕೃತ್ಯ ತದೈಕ್ಯಂ ರಿರಕ್ಷಿಸಿ । ತದಾತ್ವದೀಯಮೃತಸಂಜೀವನೇನೈವ ಪುನರುಜ್ಜೀವಿತಾಃ ಸರ್ವಜ್ಞಾದಯೋ ಧರ್ಮಾಃ ಕಿಂಚಿತ್ ಜ್ಞಾತ್ವಾದಯೋ ಜೀವ-ಧರ್ಮಾಶ್ಚೋಭಯತೋ ಗೃಹೀತಮುದ್ಗರಾಸ್ತವೈಕ್ಯಮೇವ ರಾಮಭಟಾರಾಕ್ಷಸಚಮೂಮಿವ ಹನ್ಯುಃ । ಏವಂ ಚ ಜಗನ್ನಾಶಾಯ ಪ್ರಯತಮಾನಸ್ಯತವೈವ ನಾಶೋಽಭೂದಿತಿ ಚ ದುರಾಶೈವಾಭವತ್ ತವೇತ್ಯವಧಾರಯತೋ ಭಾವಃ ॥ ೧೩೮ ॥

**ವಿವರಣೆ –** ಐಕ್ಯವನ್ನು ರಕ್ಷಿಸುವುದಕ್ಕೋಸ್ಕರ ನೀನು ಹೀಗೆ ಸರ್ವವಿನಾಶವನ್ನು ಅಂಗೀಕರಿಸುತ್ತಿದ್ದೀಯೆ. ಬ್ರಹ್ಮಾತಿರಿಕ್ತವಾದ ಭಾವರೂಪವಾದ ವಸ್ತುವಿಗೆ ನಾಶವನ್ನು ಅಂಗೀಕರಿಸಿದರೆ ಅವಿನಾಶೀವಾ ಅರೇ ಆಯಮಾತ್ಮಾ ಅನುಚ್ಛಿತ್ತಿ ಧರ್ಮಾ ಎಂಬ ಶ್ರುತಿಯ ವಿರೋಧವು ಬರುತ್ತದೆ. ಅಲ್ಲಿ ಅನುಚಿತ್ತಿಃ ಧರ್ಮಃ ಯಸ್ಯ ಎಂದು

ವಿಗ್ರಹವನ್ನು ಮಾಡಿ ಆತ್ಮನಿಗೆ ನಾಶವಿಲ್ಲ ಎಂದು ಅರ್ಥವನ್ನು ಮಾಡಿದರೆ ಅದೇ ಅರ್ಥವನ್ನು ಹೇಳುವ ಅವಿನಾಶೀ ಎಂಬ ಪದದಿಂದ ಪುನರುಕ್ತಿಯು ಬರುವುದರಿಂದ ಹಾಗೆ ಅರ್ಥವನ್ನು ಮಾಡದೆ ನವಿದ್ಯತೇ ಉಚ್ಛಿತ್ತಿಃ ಯೇಷಾಂ, ತೇಚತೇ ಧರ್ಮಾಶ್ಚ ಎಂದು ವಿಗ್ರಹವನ್ನು ಮಾಡಿ ಧರ್ಮಗಳ ನಾಶಾಭಾವವನ್ನೇ ಹೇಳಬೇಕು. ಜೀವಧರ್ಮಗಳಾದ ನಿತ್ಯತ್ವಾದಿಗಳು ಚೇತನರೂಪವಾದುದರಿಂದ ನಾಶವನ್ನು ಹೊಂದುವುದಿಲ್ಲ ಎಂದಾಯಿತು. ಆದ್ದರಿಂದ ನಿನಗೆ ಅಭಿಮತವಾದ ಸರ್ವವಿನಾಶವು ಸಿದ್ಧವಾಗುವುದಿಲ್ಲ. ನಿತ್ಯತ್ವಾದಿಧರ್ಮಗಳು ಚೇತನರೂಪವೆಂದು ಅಂಗೀಕರಿಸಿದರೆ ಅವುಗಳಿಗೆ ನಾಶಪ್ರಸಕ್ತಿಯೇ ಇಲ್ಲದಿರುವುದರಿಂದ ನಿನ್ನ ಐಕ್ಯಕ್ಕೆ ಅವಕಾಶವೇ ಇಲ್ಲ. ಇಲ್ಲಿ ಅಣುತ್ವ ಈಶವಶತ್ವಾದಿಗಳು ಎಂಬಲ್ಲಿ ಆದಿ ಪದದಿಂದ ನಿತ್ಯತ್ವಾದಿಧರ್ಮಗಳನ್ನು ಮತ್ತು ಬ್ರಹ್ಮನ ನಿತ್ಯಾನಂದ ಜ್ಞಾನಬಲಾದಿ ಧರ್ಮಗಳನ್ನು ತೆಗೆದುಕೊಳ್ಳಬೇಕು. ಏಕೆಂದರೆ 'ನಿತ್ಯಾನಂದೋ ನಿತ್ಯಜ್ಞಾನಬಲಃ, ಪರಾಸ್ಯ ಶಕ್ತಿರ್ವಿವಿಧೈವ ಶ್ರೂಯತೇ। ಸ್ವಾಭಾವಿಕೀ ಜ್ಞಾನಬಲಕ್ರಿಯಾ ಚ' ಮೊದಲಾದ ಶ್ರುತಿಗಳಿಂದ ಪರಮಾತ್ಮನ ಬಲಗಳು ನಿತ್ಯಬಲಗಳೆಂದು ಸಿದ್ಧವಾಗುತ್ತವೆ. ಚೇತನಾತಿರಿಕ್ತವಾದ ಕಾಲಾಕಾಶಾದಿಜಡ ಜಗತ್ತಿಗೆ ಮಾತ್ರ ನಾಶವನ್ನು ಸಾಧಿಸಿದರೆ ಜೀವಬ್ರಹ್ಮರು ಇದರಿಂದ ಬಹಿರ್ಭೂತರಾಗುವುದರಿಂದ ಅವರ ಐಕ್ಯದ ಪ್ರಸಕ್ತಿಯೇ ಇಲ್ಲ. ಒಂದು ಪಕ್ಷ ಚಿನ್ಮಾತ್ರವನ್ನು ಅಂಗೀಕರಿಸಿ, ಶ್ರುತಿಯನ್ನು ಧಿಕ್ಕರಿಸಿ ಭಾವರೂಪವಾದ ಚಿದ್ಧರ್ಮಗಳಿಗೂ ಮತ್ತು ಜಗತ್ತಿಗೂ ನಾಶವನ್ನು ಅಂಗೀಕರಿಸಿದರೆ ಚಿದ್ಧರ್ಮವಾದ ಭಾವರೂಪವಾದ ಐಕ್ಯವೇ ನಷ್ಟವಾಗುವುದರಿಂದ ನಿನಗೆ ಅನಿಷ್ಟವಾಗುತ್ತದೆ. ಮತ್ತು ಐಕ್ಯಾಭಾವವು ಭಾವರೂಪವಲ್ಲವಾದ್ದರಿಂದ ಅದೇ ಉಳಿದು ಅದರಿಂದಲೂ ನಿನಗೆ ಅನಿಷ್ಟವಾಗುತ್ತದೆ. ಒಂದು ಪಕ್ಷ ಧರ್ಮಧರ್ಮಿಗಳಿಗೆ ಅಭೇದವನ್ನು ಅಂಗೀಕರಿಸಿ ನೀನು ಐಕ್ಯವನ್ನು ರಕ್ಷಿಸಲು ಬಯಸಿದರೆ ಧರ್ಮ-ಧರ್ಮಿಗಳ ಐಕ್ಯವೆಂಬ ಮೃತಸಂಜೀವನೌಷಧಿಯೇ ಪರಮಾತ್ಮನ ಸರ್ವಜ್ಞತ್ವಾದಿಧರ್ಮಗಳನ್ನು, ಜೀವನ ಅಲ್ಪಜ್ಞತ್ವಾದಿಧರ್ಮಗಳನ್ನು ಉಜ್ಜೀವನಗೊಳಿಸುವುದರಿಂದ ಈ ಸರ್ವಜ್ಞತ್ವ ಮತ್ತು ಅಲ್ಪಜ್ಞತ್ವ ಧರ್ಮಗಳು ನಿನ್ನ ಐಕ್ಯದ ಎರಡು ಕಡೆಯಲ್ಲಿಯೂ ದೊಣ್ಣೆಗಳನ್ನು ಹಿಡಿದುಕೊಂಡು ನಿಂತು ರಾಮಭಟರು ರಾಕ್ಷಸ ಸೈನ್ಯವನ್ನು ನಾಶಮಾಡಿದಂತೆ ಐಕ್ಯವನ್ನು ಕೊಲ್ಲುತ್ತವೆ. ಆದ್ದರಿಂದ ಜಗತ್ತಿನ ನಾಶವನ್ನು ಸಂಪಾದಿಸಲು ಹೊರಟ ನೀನೇ ನಾಶವನ್ನು ಹೊಂದುವಿ ಎಂಬ ಅಭಿಪ್ರಾಯದಿಂದ ನಿನ್ನ ಆಶೆಯು ದುರಾಶೆಯೇ ಆಗುತ್ತದೆ ಎಂದು ಗ್ರಂಥಕಾರರು ಹೇಳಿದ್ದಾರೆ.

**ಅನಾದಿಭಾವಭೂತಾನಾಮೇತೇಷಾಂ ಪರಮಾತ್ಮವತ್ ।**
**ಅಜ್ಞಾನೋಪಾದಾನತಾ ತೇ ನ ಮಿಥ್ಯಾತ್ವಂ ಚ ನ ಯುಕ್ತಿಮತ್॥ ೧೩೬ ॥**

**ಅರ್ಥ** – ಅನಾದಿಭಾವಭೂತಾನಾಂ= ಅನಾದಿ ಭಾವಭೂತವಾದ, ಏತೇಷಾಂ= ಈ ಧರ್ಮಗಳಿಗೆ, ತೇ= ನಿನ್ನ ಮತದಲ್ಲಿ, ಪರಮಾತ್ಮವತ್= ಪರಮಾತ್ಮನಂತೆ, ಅಜ್ಞಾನೋಪಾದಾನತಾ= ಅಜ್ಞಾನೋಪಾದಾನತ್ವವು, ನ= ಇಲ್ಲ ಆದ್ದರಿಂದ, ಮಿಥ್ಯಾತ್ವಂ ಚ=

ಅವುಗಳ ಮಿಥ್ಯಾತ್ವವು ಕೂಡ, ನ ಯುಕ್ತಿಮತ್= ಯುಕ್ತಿಯುಕ್ತವಾದುದಲ್ಲ.

**ಅನುವಾದ** – ನಿನ್ನ ಮತದಲ್ಲಿ ಪರಮಾತ್ಮನಿಗೆ ಹೇಗೆ ಅಜ್ಞಾನೋಪಾದಾನಕತ್ವವಿಲ್ಲವೋ ಹಾಗೆ ಅನಾದಿಭಾವಭೂತಗಳಾದ ಈ ಅಲ್ಪಜ್ಞತ್ವಾದಿಧರ್ಮಗಳು ಸಹ ಅಜ್ಞಾನೋಪಾದಾನಕವಲ್ಲ. ಆದ್ದರಿಂದ ಅವುಗಳ ಮಿಥ್ಯಾತ್ವವು ಯುಕ್ತಿಯುಕ್ತವಾಗುವುದಿಲ್ಲ.

**ಭಾವವಿಲಾಸಿನೀ**– ತೇ ಮತೇ । ಅಜ್ಞಾನೋಪಾದಾನತಾ ಮಿಥ್ಯಾತ್ವಂ ಚೇತಿ ಸಂಬಂಧಃ ॥೧೩೯॥

**ಸಾದೇರನಾದೇಃ ಸರ್ವಸ್ಯ ಬ್ರಹ್ಮಣೋಽನ್ಯಸ್ಯ ವೈ ಕ್ಷಯಃ ।**
**ಉಕ್ತರೀತ್ಯಾ ಸ ನೈವಾಭೂದ್ ಯೋ ಮಾಯಾವಾದಿನಾಂ ಮತಃ॥ ೧೪೦ ॥**

**ಅರ್ಥ** – ಮಾಯಾವಾದಿನಾಂ= ಮಾಯಾವಾದಿಗಳಿಗೆ, ಮತಃ= ಅಭಿಪ್ರೇತವಾದ, ಬ್ರಹ್ಮಣಃ ಅನ್ಯಸ್ಯ= ಬ್ರಹ್ಮನಿಂದ ಭಿನ್ನನಾದ, ಸಾದೇಃ= ಜನ್ಯವಾದ ಮತ್ತು, ಅನಾದೇಃ= ಅನಾದಿಯಾದ, ಸರ್ವಸ್ಯ= ಎಲ್ಲದಕ್ಕೂ, ಯಃ= ಯಾವ, ಕ್ಷಯಃ= ನಾಶವು ಇದೆಯೋ, ಸಃ= ಅಂತಹ ನಾಶವು, ಉಕ್ತರೀತ್ಯಾ= ಹಿಂದೆ ಹೇಳಿದ ರೀತಿಯಿಂದ, ನೈವ ಅಭೂತ್= ಸಿದ್ಧವಾಗಲಿಲ್ಲ.

**ಅನುವಾದ** – ಮಾಯಾವಾದಿಗಳಿಗೆ ಅಭಿಮತವಾದ ಬ್ರಹ್ಮಾತಿರಿಕ್ತವಾದ ಸಾದಿ ಮತ್ತು ಅನಾದಿಗಳಾದ ಎಲ್ಲದರ ಕ್ಷಯವು ನಾವು ಮೇಲೆ ಹೇಳಿದ ರೀತಿಯಿಂದ ಎಂದರೆ ಸಂಕರ್ಷಣಮುಖಾಗ್ನಿಯಿಂದಲೇ ಎಲ್ಲವೂ ನಾಶವನ್ನು ಹೊಂದುವುದರಿಂದ ಸಿದ್ಧವಾಗುವುದೇ ಇಲ್ಲ.

**ಭಾವವಿಲಾಸಿನೀ**– ಉಕ್ತರೀತ್ಯಾ ಸಂಕರ್ಷಣಮುಖಾಗ್ನಿನೇತ್ಯಾದ್ಯುಕ್ತರೀತ್ಯಾ ॥ ೧೪೦ ॥

**ಸಾದ್ಯದೃಷ್ಟೈಃ ಸಹಾನ್ಯಸ್ಯ ಕಾರ್ಯಮಾತ್ರಸ್ಯ ಚ ಕ್ಷಯೇ ।**
**ಯಃ ಪುನಃ ಕಾರಣಾಭಾವಾತ್ ಸೃಷ್ಟ್ಯಭಾವಸ್ತು ಕಥ್ಯತೇ ।**
**ಚಿತ್ರಂ ಸ ತಾರ್ಕಿಕೋಕ್ತೋಽಪಿ ಪ್ರತಿತರ್ಕಹತೋ ಭವೇತ್ ॥ ೧೪೧ ॥**

**ಅರ್ಥ** – ಸಾದ್ಯದೃಷ್ಟೈಃ ಸಹ= ಜನ್ಯವಾದ ಅದೃಷ್ಟದ ಜೊತೆಯಲ್ಲಿ, ಅನ್ಯಸ್ಯ ಕಾರ್ಯಮಾತ್ರಸ್ಯ= ಮಹೀಧರಾದಿ ಕಾರ್ಯಗಳಿಗೆ, ಕ್ಷಯೇ= ನಾಶವುಂಟಾಗುತ್ತಿರಲು, ಕಾರಣಾಭಾವಾತ್= ಕಾರಣವಾದ ಅದೃಷ್ಟವಿಲ್ಲದಿರುವುದರಿಂದ, ಯಃ= ಯಾವ, ಪುನಃ ಸೃಷ್ಟ್ಯಭಾವಃ= ಪುನಃ ಸೃಷ್ಟಿಯ ಅಭಾವವು, ಕಥ್ಯತೇ= ಹೇಳಲ್ಪಡುತ್ತದೆಯೋ, ಸಃ= ಅದು, ತಾರ್ಕಿಕೋಕ್ತೋಽಪಿ= ತಾರ್ಕಿಕನಿಂದ ಹೇಳಲ್ಪಟ್ಟಿದ್ದರೂ, ಪ್ರತಿತರ್ಕಹತೋ ಭವೇತ್= ಪ್ರತಿತರ್ಕ ಪರಾಹತವಾಗುತ್ತದೆ, ಚಿತ್ರಂ= ಇದು ಆಶ್ಚರ್ಯ!

**ಅನುವಾದ** – ಜನ್ಯವಾದ ಅದೃಷ್ಟದ ಜೊತೆಯಲ್ಲಿ ಮಹೀಮಹೀಧರಾದಿ ಸರ್ವಕಾರ್ಯಗಳು ನಾಶವನ್ನು ಹೊಂದಿದ ಮೇಲೆ ಪುನಃ ಸೃಷ್ಟಿಗೆ ಕಾರಣವಾದ ಅದೃಷ್ಟವು ಇಲ್ಲದಿರುವುದರಿಂದ ಪುನಃ ಸೃಷ್ಟಿಯು ಉಂಟಾಗುವುದಿಲ್ಲ ಎಂದು ತಾರ್ಕಿಕರು ಏನು ಹೇಳುತ್ತಾರೆಯೋ ಅದು ಪ್ರತಿತರ್ಕ ಪರಾಹತವಾಗುತ್ತದೆ. ಇದು ಆಶ್ಚರ್ಯ!

**ಭಾವವಿಲಾಸಿನೀ–** ಮಯಾವಾದ್ಯಭಿಮತಂ ಬ್ರಹ್ಮವ್ಯತಿರಿಕ್ತಸಾದ್ಯನಾದಿಜಗನ್ನಾಶಾಖ್ಯಸರ್ವನಾಶಂ ದೂಷಯಿತ್ವಾ ಸಾದಿಭಿಃ ಸರ್ವಾದೃಷ್ಟೈಃ ಸಹ ಸಾದಿಜಗತಾಂ ಸರ್ವೇಷಾಂ ನಾಶಂ ಪುನಃ ಕಾರ್ಯಮಾತ್ರಸ್ಯ ಸರ್ವಥಾನುತ್ಪತ್ತಿಂ ವದತಸ್ತಾರ್ಕಿಕಸ್ಯ ಸರ್ವನಾಶಂ ದೂಷಯತಿ–**ಸಾದೀತಿ**॥ ಸಾದಿಭಿರುತ್ಪತ್ತಿಸಹಿತೈಃ ।ಅದೃಷ್ಟೈಃ ಸರ್ವಾದೃಷ್ಟೈಃ । ಅನ್ಯಸ್ಯ ಮಹೀಮಹೀಧರಾದೇಃ । ಕಾರಣಾಭಾವಾತ್ ಕಾರಣೀಭೂತಾದೃಷ್ಟಾಭಾವಾತ್ । ಸಃ ಸೃಷ್ಟ್ಯಭಾವಃ ॥ ೧೪೧ ॥

**ವಿವರಣೆ** – ಮಾಯಾವಾದಿಗಳಿಗೆ ಅಭಿಮತವಾದ ಬ್ರಹ್ಮವ್ಯತಿರಿಕ್ತವಾದ ಸರ್ವನಾಶವನ್ನು ದೂಷಿಸಿ ತಾರ್ಕಿಕರಿಗೆ ಅಭಿಮತವಾದ ನಾಶವನ್ನು ದೂಷಿಸುತ್ತಾರೆ. ಅದೃಷ್ಟದ ಜೊತೆಯಲ್ಲಿ ಕಾರ್ಯಮಾತ್ರವು ನಾಶವನ್ನು ಹೊಂದುತ್ತಿರಲು ಪುನಃ ಕಾರ್ಯೋತ್ಪತ್ತಿಗೆ ಬೇಕಾದ ಅದೃಷ್ಟವು ಇಲ್ಲದಿರುವುದರಿಂದ ಪುನಃ ಜಗತ್ತಿನ ಸೃಷ್ಟಿಯಾಗುವುದಿಲ್ಲ ಎಂದು ತಾರ್ಕಿಕರ ಮತ. ತಾರ್ಕಿಕರೇ ಈ ವಾದವನ್ನು ಹೇಳಿದರೂ ಅದು ಪ್ರತಿತರ್ಕ- ಪರಾಹತವಾಗುವುದರಿಂದ ಆಶ್ಚರ್ಯಕರವಾದುದು ಎಂದು ಗ್ರಂಥಕಾರರ ಅಭಿಪ್ರಾಯ.

ಬ್ರಹ್ಮಣಃ ಶತವರ್ಷಾಖ್ಯಪರಾಂತೇ ಯೋ ಮಹಾಲಯಃ ।
ಸರ್ವಕಾರ್ಯಕರಂಡಸ್ಯ ಬ್ರಹ್ಮಾಂಡಸ್ಯಾಸ್ಯ ಸಪ್ತಭಿಃ ॥ ೧೪೨ ॥

ಯುಕ್ತಸ್ಯಾವರಣೈರಸ್ಮಿನ್ ಜಾಯಮಾನೇ ಪುನಃ ಪುನಃ ।
ಅನಾದಿತೋಽನುವೃತ್ತೇ ಚ ಸ್ರಷ್ಟಂ ಸ್ರಷ್ಟ್ಯಂತರಾನ್ವಿತೇ ॥ ೧೪೩ ॥

ಕಾರ್ಯಮಾತ್ರಲಯೇ ತಾವತ್ ಕಾರ್ಯಾದೃಷ್ಟಸ್ಯ ಸರ್ವಥಾ ।
ಲಯೋ ನಾಜಾಯತ ಕಿಲ ಕಥಂ ಸೋಽಂತೇ ಭವಿಷ್ಯತಿ ॥ ೧೪೪ ॥

**ಅರ್ಥ** – ಬ್ರಹ್ಮಣಃ= ಬ್ರಹ್ಮದೇವರ, ಶತವರ್ಷಾಖ್ಯಪರಾಂತೇ= ನೂರು ವರ್ಷ ರೂಪವಾದ ಪರಾಂತದಲ್ಲಿ, ಸರ್ವಕಾರ್ಯಕರಂಡಸ್ಯ= ಎಲ್ಲ ಕಾರ್ಯಗಳಿಗೆ ಆಶ್ರಯವಾದ, ಸಪ್ತಭಿಃ ಆವರಣೈಃ ಯುಕ್ತಸ್ಯ= ಏಳು ಆವರಣಗಳಿಂದ ಕೂಡಿದ, ಅಸ್ಯ ಬ್ರಹ್ಮಾಂಡಸ್ಯ= ಈ ಬ್ರಹ್ಮಾಂಡದ, ಯಃ= ಯಾವ, ಮಹಾಲಯಃ= ಮಹಾಪ್ರಲಯವು ಉಂಟಾಗುತ್ತದೆಯೋ, ಅಸ್ಮಿನ್= ಈ ಮಹಾಪ್ರಲಯ, ಪುನಃ ಪುನಃ= ಮತ್ತೆ ಮತ್ತೆ, ಜಾಯಮಾನೇ=

ಸಂಭವಿಸುತ್ತಿರಲು, ಚ= ಮತ್ತು, ಅನಾದಿತಃ= ಅನಾದಿಕಾಲದಿಂದಲೂ, ಅನುವೃತ್ತೇ= ಅನುವೃತ್ತವಾಗುತ್ತಿರಲು, ಸ್ಪಷ್ಟಂ= ಸ್ಪಷ್ಟವಾಗಿ, ಸೃಷ್ಟ್ಯಂತರಾನ್ವಿತೇ= ಇನ್ನೊಂದು ಸೃಷ್ಟಿಯಿಂದ ಕೂಡಿರುತ್ತಿರಲು, ಕಾರ್ಯಮಾತ್ರ ಲಯೇ= ಕಾರ್ಯಮಾತ್ರದ ನಾಶವಾದರೂ, ತಾವತ್= ಮೊದಲನೆಯದಾಗಿ, ಕಾರ್ಯಾದೃಷ್ಟಸ್ಯ= ಜನ್ಯವಾದ ಅದೃಷ್ಟಕ್ಕೆ, ಸರ್ವಥಾ ಲಯಃ= ಪರಿಪೂರ್ಣವಾದ ವಿನಾಶವು, ನಾಜಾಯತ ಕಿಲ= ಉಂಟಾಗಲಿಲ್ಲವಷ್ಟೆ, ಅಂತೇ= ಕೊನೆಯಲ್ಲಿ, ಸಃ= ಅಂತಹ ಪರಿಪೂರ್ಣ ವಿನಾಶವು, ಕಥಂ= ಹೇಗೆ, ಭವಿಷ್ಯತಿ= ಉಂಟಾಗುತ್ತದೆ.

**ಅನುವಾದ** – ಬ್ರಹ್ಮದೇವರ ನೂರು ವರ್ಷ ಪರ್ಯಂತವಾದ ಪರಶಬ್ದವಾಚ್ಯವಾದ ಕಾಲದ ಕೊನೆಯಲ್ಲಿ ಯಾವ ಮಹಾಪ್ರಲಯವು ಉಂಟಾಗುತ್ತದೆಯೋ ಆಗ ಆ ಮಹಾಪ್ರಲಯದ ಬಳಿಕ ಸರ್ವಕಾರ್ಯಾಶ್ರಯವಾದ ಸಪ್ತಾವರಣಗಳಿಂದ ಕೂಡಿದ ಬ್ರಹ್ಮಾಂಡವು ಪುನಃ ಪುನಃ ಹುಟ್ಟುತ್ತದೆ. ಈ ಮಹಾಪ್ರಲಯವು ಮತ್ತು ಬ್ರಹ್ಮಾಂಡದ ಸೃಷ್ಟಿಯು ಅನಾದಿಕಾಲದಿಂದಲೂ ಸಂಭವಿಸುತ್ತ ಬಂದಿವೆ. ಆದ್ದರಿಂದ ಕಾರ್ಯಮಾತ್ರದ ನಾಶವುಂಟಾದರೂ ಕಾರ್ಯಾದೃಷ್ಟದ ನಾಶವು ಉಂಟಾಗಲಿಲ್ಲ. ಅದು ಈಗ ಉಂಟಾಗದಿರುವುದರಿಂದ ಕೊನೆಯಲ್ಲಾದರೂ ಸರ್ವಥಾ ಅದೃಷ್ಟ ನಾಶವು ಹೇಗೆ ಉಂಟಾಗುತ್ತದೆ?

**ಭಾವವಿಲಾಸಿನೀ**– ಅಸ್ಮಿನ್ ಮಹಾಪ್ರಲಯೇ ಪುನಃ ಪುನರ್ಜಾಯಮಾನೇ ಸತೀತಿ ಸಂಬಂಧಃ । ಅದೃಷ್ಟಸ್ಯ ಸರ್ವಥಾ ಸರ್ವಾತ್ಮನಾ ಲಯಃ । ಸರ್ವಾದೃಷ್ಟಲಯ ಇತಿ ಯಾವತ್ । ಸಃ ಸರ್ವಾದೃಷ್ಟಲಯಃ । ಅಂತೇ ತ್ವದಭಿಮತಚರಮಬ್ರಹ್ಮಲಯೇ ॥ ೧೪೨- ೧೪೪ ॥

**ವಿವರಣೆ** – ತಾರ್ಕಿಕರು ಈಗ ಪ್ರಲಯದಲ್ಲಿ ಕಾರ್ಯದ್ರವ್ಯವು ನಾಶವನ್ನು ಹೊಂದಿ ಬ್ರಹ್ಮಾಂಡಗಳು ಮತ್ತೆ ಮತ್ತೆ ಹುಟ್ಟಿದರೂ ಕೊನೆಯಲ್ಲಿ ಅದೃಷ್ಟದ ಜೊತೆಯಲ್ಲಿ ಬ್ರಹ್ಮಾಂಡವು ನಾಶವನ್ನು ಹೊಂದುತ್ತದೆ. ಪುನಃ ಬ್ರಹ್ಮಾಂಡದ ಸೃಷ್ಟಿಯಾಗುವುದಿಲ್ಲ ಎಂದು ಒಪ್ಪುತ್ತಾರೆ. ಅದಕ್ಕೆ ಇಲ್ಲಿ ದೋಷವನ್ನು ಹೇಳುತ್ತಾರೆ. ಈ ಬ್ರಹ್ಮಾಂಡ ನಾಶವಾದರೂ ಹೇಗೆ ಅದೃಷ್ಟವು ನಾಶವಾಗದಿರುವುದರಿಂದ ಇನ್ನೋಂದು ಬ್ರಹ್ಮಾಂಡವು ಹುಟ್ಟುತ್ತದೆಯೋ, ಅದರಂತೆ ನಿನ್ನ ದೃಷ್ಟಿಯಲ್ಲಿ ಕೊನೆಯದಾದ ಬ್ರಹ್ಮಾಂಡವು ನಾಶವಾದರೂ ಆಗಲೂ ಅದೃಷ್ಟವು ನಾಶವಾಗುವುದಿಲ್ಲವಾದ್ದರಿಂದ ಬ್ರಹ್ಮಾಂಡಾಂತರವು ಹುಟ್ಟಿಯೇ ಹುಟ್ಟುತ್ತದೆ ಎಂದು ಅಭಿಪ್ರಾಯ.

**ನ ಹ್ಯೇತೇಭ್ಯೋ ಲಯೇಭ್ಯಶ್ಚ ಸ್ಯಾದನ್ಯೋಽಭ್ಯಧಿಕೋ ಲಯಃ ।**
**ಏಭ್ಯೋ ಬ್ರಹ್ಮಾದಿದೇವೇಭ್ಯೋ ಜ್ಞಾನೀ ಕೋಽಭ್ಯಧಿಕೋ ವದ॥ ೧೪೫ ॥**

**ಅರ್ಥ** – ಏತೇಭ್ಯಃ ಲಯಭ್ಯಃ= ಈ ಪ್ರಲಯಗಳಿಗಿಂತ, ಅನ್ಯಃ= ಭಿನ್ನವಾದ, ಅಭ್ಯಧಿಕಃ= ಇದಕ್ಕಿಂತಲೂ ಉತ್ತಮವಾದ, ಲಯಃ= ಲಯವು, ನ ಹಿ= ಇಲ್ಲವಷ್ಟೆ, ಏಭ್ಯಃ= ಈ, ಬ್ರಹ್ಮಾದಿ

ದೇವೇಭ್ಯಃ= ಬ್ರಹ್ಮಾದಿ ದೇವತೆಗಳಿಗಿಂತಲೂ, ಅಭ್ಯಧಿಕಃ= ಶ್ರೇಷ್ಠನಾದ, ಜ್ಞಾನೀ= ಜ್ಞಾನಿಯು, ಕಃ= ಯಾವನು ಎಂದು, ವದ= ಹೇಳು.

**ಅನುವಾದ –** ಈ ಪ್ರಲಯಗಳಿಗಿಂತಲೂ ಉತ್ತಮವಾದ ಮತ್ತು ಭಿನ್ನವಾದ ಇನ್ನೊಂದು ಲಯವು ಇಲ್ಲವಷ್ಟೆ. ಅನಾದಿಕಾಲದಿಂದಲೂ ಅನುವೃತ್ತರಾದ ಬ್ರಹ್ಮಾದಿ ದೇವತೆಗಳಿಗಿಂತಲೂ ಉತ್ತಮರಾದವರು ಯಾರು ಎಂದು ಹೇಳು.

**ಭಾವವಿಲಾಸಿನೀ–** ಏಭ್ಯಃ ಅನಾದಿಕಾಲಮಾರಭ್ಯೇದಾನೀಂತನಬ್ರಹ್ಮಪರ್ಯಂತಮನುಭೂತ-ತತ್ತದ್ದೇವೇಭ್ಯಃ ॥ ೧೪೫ ॥

**ಕಾಲಸ್ಯಾಂತ್ಯಸ್ಯ ಶೃಂಗಂ ನ ನಾಪಿ ತದ್ಗಲಯಸ್ಯ ಚ ।**
**ಅದೃಷ್ಟಕಲ್ಪನಾದೋಷೋ ಹ್ಯದೃಷ್ಟಂ ಕಲ್ಪಯತ್ಯಹೋ ॥ ೧೪೬ ॥**

**ಅರ್ಥ –** ಅಂತ್ಯಸ್ಯ ಕಾಲಸ್ಯ= ನೀನು ಒಪ್ಪುವ ಕೊನೆಯ ಕಾಲಕ್ಕೆ, ಶೃಂಗಂ ನ= ಯಾವ ಕೊಂಬೂ ಇಲ್ಲ, ಅಪಿ= ಮತ್ತು, ತದ್ಗ ಲಯಸ್ಯ ಚ= ಆಗಿರುವ ಪ್ರಲಯಕ್ಕೂ ಸಹ, ನ= ಯಾವ ಕೊಂಬೂ ಇಲ್ಲ, ಅದೃಷ್ಟಕಲ್ಪನಾ ದೋಷಃ= ನಿನ್ನ ಅದೃಷ್ಟಕಲ್ಪನಾ ದೋಷವು, ಅದೃಷ್ಟಂ= ಪ್ರಮಾಣದಿಂದ ಅದೃಷ್ಟವಾದುದನ್ನು, ಕಲ್ಪಯತಿ= ಕಲ್ಪಿಸುತ್ತದೆ, ಅಹೋ= ಆಶ್ಚರ್ಯ.

**ಅನುವಾದ –** ಯಾವ ಮಹಾಪ್ರಲಯಕಾಲದ ನಂತರ ಇನ್ನೊಂದು ಜಗತ್ತು ಉಂಟಾಗುವುದಿಲ್ಲವೆಂದು ಹೇಳುತ್ತೀಯೋ ಅಂತಹ ಪ್ರಲಯಕಾಲಕ್ಕೆ ಯಾವ ಕೊಂಬೂ ಇಲ್ಲವಷ್ಟೆ. ಅಥವಾ ಆ ಕಾಲದಲ್ಲಿರುವ ಪ್ರಲಯಕ್ಕಾದರೂ ಯಾವ ಕೊಂಬೂ ಇಲ್ಲವಷ್ಟೆ. ನಿನ್ನ ಅದೃಷ್ಟಕಲ್ಪನಾದೋಷವೇ ಅದೃಷ್ಟವಾದ ಇನ್ನೊಂದು ಜಗತ್ತನ್ನು ಕಲ್ಪಿಸುತ್ತದೆ ಎಂಬುದು ಆಶ್ಚರ್ಯ.

**ಭಾವವಿಲಾಸಿನೀ–** ಅದೃಷ್ಟಂ ಜಗದಂತರಜನಕಾದೃಷ್ಟಮ್ ॥ ೧೪೬ ॥

**ವಿಮತಃ ಪ್ರಲಯೋಽದೃಷ್ಟಶೇಷವಾನ್ ಪ್ರಲಯತ್ವತಃ ।**
**ಯಥಾಽಯಂ ಪ್ರಲಯಶ್ಚೇತಿ ಯುಕ್ತಿಂ ಕೋಽತ್ಯೇತಿ ತತ್ ಸತಾಂ ॥ ೧೪೭ ॥**

**ಅರ್ಥ –** ತತ್= ಆದ್ದರಿಂದ, ಸತಾಂ= ಸಜ್ಜನರು ಪ್ರಯೋಗಿಸುವ, ವಿಮತಃ ಪ್ರಲಯಃ= ವಿಮತವಾದ ಪ್ರಲಯವು, ಅದೃಷ್ಟಶೇಷವಾನ್= ಅದೃಷ್ಟ ಶೇಷವನ್ನು ಹೊಂದಿದ್ದಾಗಿದೆ, ಪ್ರಲಯತ್ವತಃ= ಪ್ರಲಯವಾದ್ದರಿಂದ, ಯಥಾಯಂ ಪ್ರಲಯಃ= ಈ ಪ್ರಲಯದಂತೆ, ಇತಿ ಯುಕ್ತಿಂ ಚ= ಎಂಬ ಯುಕ್ತಿಯನ್ನೂ ಸಹ, ಕಃ= ಯಾವನು, ಅತ್ಯೇತಿ= ದಾಟುತ್ತಾನೆ?

**ಅನುವಾದ** – ಆದ್ದರಿಂದ ಸಜ್ಜನರು ಪ್ರಯೋಗಿಸುವ ವಿಮತಃ ಪ್ರಲಯಃ ಅದೃಷ್ಟ ಶೇಷವಾನ್ ಪ್ರಲಯತ್ವಾತ್ ಇದಾನೀಂತನಪ್ರಲಯವತ್ ಎಂಬ ಯುಕ್ತಿಯನ್ನು ಸಹ ಯಾವನು ದಾಟುತ್ತಾನೆ?

**ಭಾವವಿಲಾಸಿನೀ**– ತತ್ಕಲ್ಪನಾಪ್ರಕಾರಮೇವಾನುಮಾನರಚನಯಾऽऽಹ – **ವಿಮತ ಇತಿ** ॥ ತತ್ತಸ್ಮಾತ್ ॥ ೧೪೭ ॥

**ವಿವರಣೆ** – ತಾರ್ಕಿಕರು ಕೊನೆಯ ಪ್ರಲಯದಲ್ಲಿ ಅದೃಷ್ಟವು ನಾಶವಾಗುವುದರಿಂದ ಅದೃಷ್ಟಶೇಷವನ್ನು ಒಪ್ಪುವುದಿಲ್ಲ. ಗ್ರಂಥಕಾರರು ಈ ನಿರ್ದುಷ್ಟವಾದ ಅನುಮಾನದಿಂದ ಆಗಲೂ ಅದೃಷ್ಟಶೇಷವನ್ನು ಸಾಧಿಸಿ ಪುನಃ ಜಗದುತ್ಪತ್ತಿಯನ್ನು ಸಮರ್ಥಿಸುತ್ತಾರೆ.

ಕಿಂ ಚಾಂತ್ಯಾ ಸಾಪಿ ಸೃಷ್ಟಿಸ್ತೇ ಸರ್ವಸೃಷ್ಟ್ಯುಪಮಾ ಭವೇತ್ ।
ಜ್ಞಾನಿಮಾತ್ರಾವೃತಾ ಸಾ ನ ಪಶುಪಕ್ಷ್ಯಾದಿಸಂವೃತಾ ।
ತಸ್ಯಾಂ ಚ ಜ್ಞಾನಿಮಾತ್ರಸ್ಯಾದೃಷ್ಟನಾಶಸ್ತು ಪೂರ್ವವತ್ ॥ ೧೪೮ ॥

**ಅರ್ಥ** – ಕಿಂಚ= ಮತ್ತು, ಅಂತ್ಯಾ= ಕೊನೆಯದಾದ, ತೇ= ನಿನಗೆ ಅಭಿಮತವಾದ, ಸಾಪಿ ಸೃಷ್ಟಿಃ= ಆ ಸೃಷ್ಟಿಯೂ ಕೂಡ, ಸರ್ವಸೃಷ್ಟ್ಯುಪಮಾ= ಅಲ್ಲಿಯವರೆಗಿನ ಸರ್ವಸೃಷ್ಟಿಗಳಿಗೆ ಸದೃಶವಾಗಿಯೇ, ಭವೇತ್= ಆಗುತ್ತದೆ, ಸಾ= ಆ ಸೃಷ್ಟಿಯು, ಪಶುಪಕ್ಷ್ಯಾದಿಸಂವೃತಾ= ಪಶುಪಕ್ಷ್ಯಾದಿಗಳಿಂದ ಕೂಡಿದುದಾಗಿ ಇದೆ, ಜ್ಞಾನಿಮಾತ್ರ ವೃತಾ ನ= ಕೇವಲ ಅಪರೋಕ್ಷ ಜ್ಞಾನಿಗಳಿಂದ ಕೂಡಿದುದಾಗಿಲ್ಲ, ತಸ್ಯಾಂ ಚ= ಆ ಸೃಷ್ಟಿಯಲ್ಲಾದರೂ, ಪೂರ್ವವತ್= ಹಿಂದಿನ ಸೃಷ್ಟಿಗಳಂತೆ, ಜ್ಞಾನಿಮಾತ್ರಸ್ಯ ನಾಶಸ್ತು= ಕೇವಲ ಜ್ಞಾನಿಗಳ ನಾಶವಾದರೂ, ಅದೃಷ್ಟಃ= ಅದೃಷ್ಟವಾಗಿದೆ.

**ಅನುವಾದ** – ಮತ್ತು ನಿನಗೆ ಅಭಿಮತವಾದ ಕೊನೆಯ ಸೃಷ್ಟಿಯೂ ಕೂಡ ಅಲ್ಲಿಯವರೆಗಿನ ಎಲ್ಲಾ ಸೃಷ್ಟಿಗಳಿಗೆ ಸದೃಶವೇ ಆಗುತ್ತದೆ. ಏಕೆಂದರೆ ಆ ಸೃಷ್ಟಿಯು ಕೇವಲ ಜ್ಞಾನಿಗಳಿಂದ ಕೂಡಿದುದೇ ಆಗಿಲ್ಲ. ಪಶುಪಕ್ಷ್ಯಾದಿಗಳಿಂದಲೂ ಕೂಡಿದುದಾಗಿದೆ. ಅಲ್ಲಿ ಕೇವಲ ಜ್ಞಾನಿಗಳಿಗೆ ಮಾತ್ರ ನಾಶವಲ್ಲ. ಹಿಂದಿನ ಸೃಷ್ಟಿಗಳಂತೆ ಅಜ್ಞಾನಿಗಳಿಗೂ ನಾಶವಿದೆ.

**ಭಾವವಿಲಾಸಿನೀ**–ಯುಕ್ತ್ಯಂತರೇಣಾಪಿ ತಾರ್ಕಿಕಾಭಿಮತಂ ಸರ್ವನಾಶಂ ದೂಷಯತಿ–**ಕಿಂಚೇತಿ**॥ ಪಶುಪಕ್ಷ್ಯಾದಿಸಂವೃತಾ ಸಾ ತ್ವದಭಿಮತಸರ್ವನಾಶಾತ್ಪೂರ್ವಂವಿದ್ಯಮಾನಾ ಸೃಷ್ಟಿಃ ಜ್ಞಾನಿಮಾತ್ರಾವೃತಾ ನೇತಿ ಸಂಬಂಧಃ । ತಸ್ಯಾಂ ಸೃಷ್ಟೌ । ಜ್ಞಾನಿಮಾತ್ರಸ್ಯ ಸಕಲಾಪರೋಕ್ಷಜ್ಞಾನಿಸಮುದಾಯಸ್ಯೇತ್ಯರ್ಥಃ ॥ ೧೪೮ ॥

**ವಿವರಣೆ** – ನಿನಗೆ ಅಭಿಮತವಾದ ಕೊನೆಯ ಸೃಷ್ಟಿಯಲ್ಲಿ ಅಜ್ಞಾನಿಗಳೂ ಇದ್ದಾರೆ. ಆದ್ದರಿಂದ ಅವರ ನಾಶವಾಗುವಾಗ ಅದೃಷ್ಟವು ಪೂರ್ಣವಾಗಿ ನಾಶವಾಗುವುದಿಲ್ಲ. ಪುನಃ

ಸೃಷ್ಟ್ಯಂತರಕ್ಕೆ ಬೇಕಾದ ಅದೃಷ್ಟವು ಇದ್ದೇ ಇರುತ್ತದೆ. ಆದ್ದರಿಂದ ಅದನ್ನು ಕೊನೆಯ ಸೃಷ್ಟಿ ಎಂದು ಅಂಗೀಕರಿಸಲು ಬರುವುದಿಲ್ಲ ಎಂದು ಅಭಿಪ್ರಾಯ.

**ಸರ್ವಾದೃಷ್ಟವಿನಾಶಸ್ತು ಹೇತ್ವಭಾವಾನ್ನ ಯೌಕ್ತಿಕಃ ।**
**ತಸ್ಮಾದ್ ವೈದಿಕತರ್ಕಾಗ್ರೇ ಶುಷ್ಕತರ್ಕೋ ನ ಶೋಭತೇ ॥ ೧೪೯ ॥**

**ಅರ್ಥ** –ಸರ್ವಾದೃಷ್ಟವಿನಾಶಸ್ತು= ಎಲ್ಲ ಅದೃಷ್ಟಗಳ ವಿನಾಶವಾದರೂ, ಹೇತ್ವಭಾವಾತ್= ಅದನ್ನು ಸಾಧಿಸುವ ಹೇತುವಿಲ್ಲದಿರುವುದರಿಂದ, ನ ಯೌಕ್ತಿಕಃ= ಯುಕ್ತಿಯುಕ್ತವಾದುದಲ್ಲ, ತಸ್ಮಾತ್= ಆದ್ದರಿಂದ, ವೈದಿಕತರ್ಕಾಗ್ರೇ= ವೇದಮೂಲವಾದ ತರ್ಕದ ಎದುರಿನಲ್ಲಿ, ಶುಷ್ಕತರ್ಕಃ= ಶುಷ್ಕತರ್ಕವು, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ** – ಸರ್ವಾದೃಷ್ಟದ ನಾಶವನ್ನು ಸಾಧಿಸುವ ಹೇತುವಿಲ್ಲದಿರುವುದರಿಂದ ಸರ್ವಾದೃಷ್ಟನಾಶವು ಯುಕ್ತಿಯುಕ್ತವಾದುದಲ್ಲ. ಆದ್ದರಿಂದ ವೇದಮೂಲವಾದ ತರ್ಕದ ಎದುರಿನಲ್ಲಿ ಶುಷ್ಕತರ್ಕವು ಶೋಭಿಸುವುದಿಲ್ಲ.

**ಭಾವವಿಲಾಸಿನೀ**– ಸರ್ವಾದೃಷ್ಟವಿನಾಶಃ ಸಕಲಪಶುಪಕ್ಷ್ಯಾದಿಜೀವನಿಷ್ಠಾದೃಷ್ಟವಿನಾಶಃ- ಹೇತ್ವಭಾವಾತ್ ಅಪರೋಕ್ಷಜ್ಞಾನಾಖ್ಯಹೇತ್ವಭಾವಾತ್ ॥ ೧೪೯ ॥

**ಸೂರ್ಯಾಚಂದ್ರಮಸೌ ಧಾತಾ ಯಥಾ ಪೂರ್ವಮಕಲ್ಪಯತ್ ।**
**ಇತಿ ಶ್ರುತಿರನಾದ್ಯಂತಕಾಲೀನಾಮನ್ವಗ್ರಹೀದ್ಧಿ ನಃ ॥ ೧೫೦ ॥**

**ಅರ್ಥ** – ಧಾತಾ= ಜಗದ್ಧಾತೃವಾದ ಹರಿಯು, ಸೂರ್ಯಾಚಂದ್ರಮಸೌ= ಸೂರ್ಯ ಚಂದ್ರರನ್ನು, ಯಥಾ ಪೂರ್ವಂ= ಹಿಂದಿನಂತೆಯೇ, ಅಕಲ್ಪಯತ್= ಸೃಷ್ಟಿಸಿದನು, ಇತಿ ಶ್ರುತಿಃ= ಎಂಬ ಶ್ರುತಿಯು, ನಃ= ನಮ್ಮ, ಅನಾದ್ಯನಂತಕಾಲೀನಾಂ= ಅನಾದ್ಯನಂತ ಕಾಲದಲ್ಲಿರುವ ದೇವತೆಗಳನ್ನು (ದೇವತೆಗಳ ಸೃಷ್ಟಿಯನ್ನು), ಅನ್ವಗ್ರಹೀತ್= ಅನುಗ್ರಹಿಸಿತು.

**ಅನುವಾದ** – ಜಗದ್ಧಾತೃವಾದ ಹರಿಯು ಸೂರ್ಯಚಂದ್ರರನ್ನು ಮೊದಲಿನಂತೆಯೇ ಸೃಷ್ಟಿಸಿದನು ಎಂಬ ಶ್ರುತಿಯು ಅನಾದ್ಯನಂತಕಾಲದಲ್ಲಿ ನಾವು ಅಂಗೀಕರಿಸುವ ದೇವತೆಗಳ ಸೃಷ್ಟಿಯನ್ನು ಅನುಗ್ರಹಿಸುತ್ತದೆ.

**ಭಾವವಿಲಾಸಿನೀ**– ಅನ್ವಗ್ರಹೀತ್ ಅನುಗ್ರಹಮಕರೋತ್ ॥ ೧೫೦ ॥

**ತತೋ ವೈಕುಂಠಮಗಮದ್ ಭಾಸ್ವರಂ ತಮಸಃ ಪರಂ ।**
**ಯತ್ರ ನಾರಾಯಣಃ ಸಾಕ್ಷಾನ್ನ್ಯಾಸಿನಾಂ ಪರಮಾ ಗತಿಃ ॥ ೧೫೧ ॥**

**ಶಾಂತಾನಾಂ ನ್ಯಸ್ತದಂಡಾನಾಂ ಯತೋ ನಾವರ್ತತೇ ಯತಿಃ ।**
**ಇತಿ ಭಾಗವತೇ ವೈಕುಂಠಾಖ್ಯಾ ಭಗವತಃ ಪುರೀ ॥ ೧೫೨ ॥**

**ತಮಃಶಬ್ದೋದಿತಾಜ್ಞಾನಾದ್ ಬಹಿರ್ಭೂತಾಽತಿಭಾಸ್ವರಾ ।**
**ಪುನರಾವೃತ್ತಿತಃ ಶೂನ್ಯಾ ಗತಿಶ್ಚ ಪರಮೋಚ್ಯತೇ ।**
**ಇತೋಽತಿರಿಕ್ತಃ ಪರಮೋ ಮೋಕ್ಷಃ ಕಃ ಸ್ಯಾದ್ ವಿವೇಕಿನಾಮ್ ॥ ೧೫೩ ॥**

**ಅರ್ಥ –** ತತಃ= ಅನಂತರ, ಯತ್ರ= ಯಾವ ಲೋಕದಲ್ಲಿ, ಶಾಂತಾನಾಂ= ಶಾಂತರಾದ, ನ್ಯಸ್ತದಂಡಾನಾಂ= ಸರ್ವಾಭಯಪ್ರದರಾದ, ನ್ಯಾಸಿನಾಂ= ಸಂನ್ಯಾಸಿಗಳಿಗೆ, ಪರಮಾಗತಿಃ= ಪರಮಪ್ರಾಪ್ಯನಾದ, ನಾರಾಯಣಃ= ನಾರಾಯಣನು, ಸಾಕ್ಷಾತ್= ಪ್ರತ್ಯಕ್ಷವಾಗಿದ್ದಾನೆಯೋ, ಯತಃ= ಮತ್ತು ಯಾವ ಲೋಕದಿಂದ, ಯತಿಃ= ಯತಿಯಾದವನು, ನಾವರ್ತತೇ= ಹಿಂದಿರುಗಿ ಬರುವುದಿಲ್ಲವೋ ಅಂತಹ, ತಮಸಃ ಪರಂ= ಅಜ್ಞಾನದೂರವಾದ, ಭಾಸ್ವರಂ= ಪ್ರಕಾಶಮಾನವಾದ, ವೈಕುಂಠಂ= ವೈಕುಂಠ ಲೋಕವನ್ನು ಕುರಿತು, ಅಗಮತ್= ಹೋದನು, ಇತಿ= ಈ ರೀತಿಯಾಗಿ, ಭಾಗವತೇ= ಭಾಗವತದಲ್ಲಿ, ವೈಕುಂಠಾಖ್ಯಾ= ವೈಕುಂಠ ಎಂಬ ಹೆಸರಿನ, ಭಗವತಃ ಪುರೀ= ಭಗವಂತನ ಪಟ್ಟಣವು, ತಮಃ ಶಬ್ದೋದಿತ ಅಜ್ಞಾನಾದ್ಬಹಿರ್ಭೂತಾ= ತಮಃ ಶಬ್ದದಿಂದ ಹೇಳಲ್ಪಟ್ಟ ಅಜ್ಞಾನದಿಂದ ಬಹಿರ್ಭೂತವಾಗಿ, ಅತಿಭಾಸ್ವರಾಂ= ಅತ್ಯಂತ ಪ್ರಕಾಶಮಾನವಾಗಿ, ಪುನರಾವರ್ತಿ ಶೂನ್ಯಾ= ಪುನರಾವರ್ತಿ ಶೂನ್ಯವಾದ, ಪರಮಾಗತಿಃ= ಪರಮ ಪ್ರಾಪ್ಯಸ್ಥಾನವೆಂದು, ಉಚ್ಯತೇ= ಹೇಳಲ್ಪಡುತ್ತದೆಯೋ, ಇತಃ= ಇದಕ್ಕಿಂತ, ಅತಿರಿಕ್ತಃ= ಭಿನ್ನವಾದ, ಪರಮ ಮೋಕ್ಷಃ= ಪರಮ ಮೋಕ್ಷವು, ವಿವೇಕಿನಾಂ= ವಿವೇಕವುಳ್ಳವರಿಗೆ, ಕಃ ಸ್ಯಾತ್= ಯಾವುದು ಆಗುತ್ತದೆ?

**ಅನುವಾದ –** ಅನಂತರ ಎಲ್ಲಿ ಶಾಂತರಾದ, ಅಭಯಪ್ರದರಾದ ಸಂನ್ಯಾಸಿಗಳಿಗೆ ಪರಮಪ್ರಾಪ್ಯನಾದ ನಾರಾಯಣನು ಪ್ರತ್ಯಕ್ಷವಾಗಿ ಇದ್ದಾನೆಯೋ ಮತ್ತು ಯಾವ ಲೋಕಕ್ಕೆ ಹೋದ ಯತಿಯು ಹಿಂದಿರುಗಿ ಬರುವುದಿಲ್ಲವೋ, ಅಂತಹ ಅಜ್ಞಾನ ದೂರವಾದ ಪ್ರಕಾಶಮಾನವಾದ ವೈಕುಂಠಲೋಕಕ್ಕೆ ಹೋದನು ಎಂದು ಭಾಗವತದಲ್ಲಿ ವೈಕುಂಠವೆಂಬ ಭಗವಂತನ ಪಟ್ಟಣವು ತಮಃ ಶಬ್ದದಿಂದ ಹೇಳಲ್ಪಟ್ಟ ಅಜ್ಞಾನದಿಂದ ವಿದೂರವೆಂದೂ, ಅತ್ಯಂತ ಭಾಸ್ವರವಾದುದೆಂದೂ, ಪುನರಾವರ್ತಿ ಶೂನ್ಯವಾದ ಶ್ರೇಷ್ಠವಾದ ಗಮ್ಯಸ್ಥಾನವೆಂದೂ ಹೇಳಲ್ಪಟ್ಟಿದೆ. ವಿವೇಕಿಗಳಾದವರಿಗೆ ಇದಕ್ಕಿಂತ ಅತಿರಿಕ್ತವಾದ ಪರಮ ಮೋಕ್ಷವು ಯಾವುದಿದೆ?

**ಭಾವವಿಲಾಸಿನೀ–** ವೈಕುಂಠಪ್ರಾಪ್ತ್ಯತಿರಿಕ್ತಮೋಕ್ಷಾಭಾವಂ ಸಯುಕ್ತಿಕಪ್ರಮಾಣವಚನೇನೋಪಪಾದಯತಿ – **ತತ ಇತಿ ॥** ಇತಿಶಬ್ದಾತ್ ಪೂರ್ವಂ ವಿದ್ಯಮಾನಂ ಸರ್ವಂಭಾಗವತವಾಕ್ಯಮ್ ॥ ೧೫೧-೧೫೨ ॥

ತಮಸಃ ಪರಮಿತ್ಯಸ್ಯಾರ್ಥಮಾಹ – ತಮ ಇತಿ ॥ ಯತೋನಾವರ್ತತ ಇತ್ಯಸ್ಯ ಫಲಿತಾರ್ಥಮಾಹ – **ಪುನರಿತಿ ॥** ಪರಮಾ ಗತಿರಿತಿ ಸಂಬಂಧಃ । ಇತಃ ಅಜ್ಞಾನನಿವೃತ್ತಿಸ್ಥಲಾತ್ । ಅಪುನರಾವೃತ್ತಿಸ್ಥಲಾದಿತಿ ಯಾವತ್ ॥ ೧೫೩ ॥

**ಮರ್ತ್ಯೋ್ರ್ಮೃತ್ಯುವ್ಯಾಲಭೀತೋ ಲೋಕಾನ್ಸರ್ವಾಂಶ್ಚ ನಿರ್ಭಯಾನ್ ।**
**ನಾದ್ರಾಕ್ಷೀತ್ ಕಿಲ ಪಾದಾಬ್ಜಂ ಪ್ರಾಪ್ಯ ವಿಷ್ಣೋರ್ಯದೃಚ್ಛಯಾ ।**
**ಸ್ವಸ್ಥಃ ಶೇತೇ ಮೃತ್ಯುರಸ್ಮಾದಪೈತೀತ್ಯಾಹ ದೇವಕೀ ॥ ೧೫೪ ॥**

**ಅರ್ಥ –** ಮೃತ್ಯುವ್ಯಾಲಭೀತಃ= ಮೃತ್ಯು ಎಂಬ ವನಸರ್ಪಕ್ಕೆ ಹೆದರಿದ, ಮರ್ತ್ಯಃ= ಮನುಷ್ಯನು, ಸರ್ವಾನ್ ಲೋಕಾನ್= ಸ್ವರ್ಗಾದಿ ಎಲ್ಲ ಲೋಕಗಳನ್ನು, ನಿರ್ಭಯಾನ್= ಭಯರಹಿತವೆಂದು, ನಾದ್ರಾಕ್ಷೀತ್ಕಿಲ= ಕೇಳಲಿಲ್ಲವಷ್ಟೆ, ಯದೃಚ್ಛಯಾ= ದೈವೇಚ್ಛೆಯಿಂದ, ವಿಷ್ಣೋಃ= ವಿಷ್ಣುವಿನ, ಪಾದಾಬ್ಜಂ= ಪಾದಕಮಲವನ್ನು, ಪ್ರಾಪ್ಯ= ಹೊಂದಿ, ಸ್ವಸ್ಥಃ= ನಿರಾತಂಕವಾಗಿ, ಶೇತೇ= ಮಲಗುತ್ತಾನೆ, ಅಸ್ಮಾತ್= ಅಂತಹ ಅವನಿಂದ, ಮೃತ್ಯುಃ= ಮೃತ್ಯುವು, ಅಪಯಾತಿ= ದೂರಹೋಗುತ್ತದೆ, ಇತಿ= ಎಂದು, ದೇವಕೀ= ದೇವಕಿಯು, ಆಹ= ಹೇಳಿದ್ದಾಳೆ.

**ಅನುವಾದ –** ಮೃತ್ಯು ಎಂಬ ವನಸರ್ಪಕ್ಕೆ ಹೆದರಿದ ಮನುಷ್ಯನು ಭಯದಿಂದ ಬೇರೆ ಬೇರೆ ಲೋಕಗಳಿಗೆ ಓಡಿದರೂ ಸ್ವರ್ಗಾದಿ ಲೋಕಗಳನ್ನು ನಿರ್ಭಯವೆಂದು ತಿಳಿಯದೆ ದೈವೇಚ್ಛೆಯಿಂದ ವಿಷ್ಣುವಿನ ಪಾದಕಮಲವನ್ನು ಹೊಂದಿ ನಿರಾತಂಕವಾಗಿ ಮಲಗುತ್ತಾನೆ. ಅವನಿಂದ ಮೃತ್ಯುವು ದೂರವಾಗುತ್ತದೆ ಎಂದು ದೇವಕಿಯು ಹೇಳಿದ್ದಾಳೆ.

**ಭಾವವಿಲಾಸಿನೀ–** ಮರ್ತ್ಯೋ್ ಮೃತ್ಯುವ್ಯಾಲಭೀತಃ ಪಲಾಯಂಲ್ಲೋಕಾನ್- ಸರ್ವಾನ್ನಿರ್ಭ- ಯಾನ್ನಾಧ್ಯಗಚ್ಛತ್ । ತ್ವತ್ಪಾದಾಬ್ಜಂ ಪ್ರಾಪ್ಯ ಯದೃಚ್ಛಯಾಂತೇ ಸ್ವಸ್ಥಃಶೇತೇ ಮೃತ್ಯುರಸ್ಮಾದಪೈತೀತಿ ಭಾಗವತಸ್ಥದೇವಕೀವಾಕ್ಯಮರ್ಥತಃ ಪಠನ್ ಮೃತ್ಯುವಿದೂರಸ್ಥಾನತ್ವಾದ್ವೈಕುಂಠಸ್ಯೈವ ಪರಮಮೋಕ್ಷತ್ವಮಿತ್ಯಾಹ – ಮರ್ತ್ಯ ಇತಿ ॥ ವ್ಯಾಲಃ ವನಸರ್ಪಃ । ಸರ್ವಾನ್ ಸತ್ಯಕೈಲಾಸಸ್ವರ್ಗಾದೀನ್ । ನಿರ್ಭಯಾನ್ ಮೃತ್ಯುಭಯರಹಿತಾನ್ । ತ್ವತ್ಪಾದಾಬ್ಜಂ ವೈಕುಂಠ- ಪುರೀಸ್ಥಸ್ಯ ತವಪಾದಾಬ್ಜಮ್ । ಅಂತೇ ಸರ್ವಲೋಕಪಲಾಯನಾವಸಾನೇ । ಶೇತೇ - ರಮಣೀಯಶಯ್ಯಾಯಾಂ ಮುಕ್ತಃ ಸ್ವರ್ನಾರ್ಯಾ ಸಹ ಶೇತೇ । ಅಸ್ಮಾತ್ ವೈಕುಂಠಪುರೇ ತ್ವಚ್ಚರಣಸಮೀಪಸ್ಥಮುಕ್ತಾತ್ । ಇತಃ ಏತತ್ ವಚನಬಲಾತ್ । ಜೀವನ್ಮುಕ್ತೌ ಸ್ಥಿತಶುಕವಾಮದೇವಾದೀನಾಮಿತ್ಯರ್ಥಃ । ಯದ್ಯಸ್ಮಾತ್ । ಮೃತ್ಯುರ್ಮರಣಮ್ । ತತಃ ಮರಣರಾಹಿತ್ಯೇನ ಜೀವನ್ಮುಕ್ತಿತೋಽಪ್ಯತಿಶಯಿತತ್ವಾತ್ ॥ ೧೫೪-೧೫೫ ॥

**ವಿವರಣೆ –** 'ಮರ್ತ್ಯೋ್ ಮೃತ್ಯುವ್ಯಾಲಭೀತಃ ಪಲಾಯನ್ ಲೋಕಾನ್ ಸರ್ವಾನ್ ನಿರ್ಭಯಾನ್ ನಾಧ್ಯಗಚ್ಛತ್ । ತ್ವತ್ಪಾದಾಬ್ಜಂ ಪ್ರಾಪ್ಯ ಯದೃಚ್ಛಯಾಂತೇ ಸ್ವಸ್ಥಃ ಶೇತೇ ಮೃತ್ಯುರಸ್ಮಾದಪೈತಿ' ಎಂಬ ಭಾಗವತದಲ್ಲಿನ ದೇವಕಿಯ ವಾಕ್ಯವನ್ನು ಅರ್ಥತಃ ಸಂಗ್ರಹಿಸಿ ಮೃತ್ಯುರಹಿತಸ್ಥಾನವಾದುದರಿಂದ ವೈಕುಂಠವೇ ಪರಮ ಮೋಕ್ಷವೆಂದು ಸಾಧಿಸುತ್ತಾರೆ.

ಸರ್ವಾನ್ ಲೋಕಾನ್ ಎಂದರೆ ಸತ್ಯ, ಕೈಲಾಸ ಎಲ್ಲ ಲೋಕಗಳನ್ನು ಎಂದು ಅರ್ಥ, ತ್ವತ್ಪಾದಾಬ್ಜಂ ಎಂದರೆ ವೈಕುಂಠದಲ್ಲಿರುವ ನಿನ್ನ ಪಾದಕಮಲಗಳನ್ನು ಎಂದು ಅರ್ಥ. ಜೀವನ್ಮುಕ್ತಿಯಲ್ಲಿರುವ ಶುಕವಾಮದೇವಾದಿಗಳಿಗೂ ಮರಣವಿದೆ. ಇಲ್ಲಿ ಮೃತ್ಯು ದೂರವಾದ ಲೋಕವೆಂದು ಹೇಳಿದ್ದರಿಂದ ಅದು ಜೀವನ್ಮುಕ್ತಿ ದೆಶೆಯಲ್ಲ, ಪರಮ ಮೋಕ್ಷವೆಂದೇ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

ಇತೋಽಪಿ ಕೃಷ್ಣಚರಣಪ್ರಾಪ್ತಿರೇವಾಮೃತಂ ಸತಾಮ್ ।
ಜೀವನ್ಮುಕ್ತೌ ಚ ಯನ್ಮೃತ್ಯುಃ ತತೋ ಮುಕ್ತಿರಿಯಂ ಪರಾ ॥ ೧೫೫ ॥

ಆಬ್ರಹ್ಮಭವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಮಾಮುಪೇತ್ಯ ತು ಕೌಂತೇಯ ಪುನರ್ಜನ್ಮ ನ ವಿದ್ಯತೇ ॥ ೧೫೬ ॥

ಇತಿ ಗೀತೋದಿತಾಂ ವಾಣೀಮನುಸ್ಮರ ನ ವಿಸ್ಮರ ।
ಜೀವನ್ಮುಕ್ತೌ ತು ಯಜ್ಜನ್ಮ ತತೋ ಮುಕ್ತಿರಿಯಂ ಪರಾ ॥ ೧೫೭ ॥

**ಅರ್ಥ** – ಇತೋಽಪಿ= ಈ ಕಾರಣದಿಂದಲೂ, ಸತಾಂ= ಸಜ್ಜನರಿಗೆ, ಕೃಷ್ಣಚರಣಪ್ರಾಪ್ತಿರೇವ= ಶ್ರೀಕೃಷ್ಣಚರಣಪ್ರಾಪ್ತಿಯೇ, ಅಮೃತಂ= ಮೋಕ್ಷವು, ಜೀವನ್ಮುಕ್ತಾ ಚ= ಜೀವನ್ಮುಕ್ತಿದೆಶೆಯಲ್ಲಾದರೂ, ಯನ್ಮೃತ್ಯುಃ= ಯಾವ ಮೃತ್ಯುವಿದೆಯೋ, ತತಃ= ಆ ಕಾರಣದಿಂದ, ಇಯಂ= ಈ ಮುಕ್ತಿಯು, ಪರಾಮುಕ್ತಿಃ= ಪರಮಮುಕ್ತಿಯು.

ಅರ್ಜುನ= ಎಲೈ ಅರ್ಜುನನೇ, ಆಬ್ರಹ್ಮಭವನಾತ್= ಬ್ರಹ್ಮದೇವರ ಮನೆಯವರೆಗೆ ಹೋಗುವ, ಲೋಕಾಃ= ಜೀವರು, ಪುನರಾವರ್ತಿನಃ= ಪುನಃ ಆವರ್ತಿಯನ್ನು ಉಳ್ಳವರು (ಹಿಂದಿರುಗಿ ಬರುವವರು), ಕೌಂತೇಯ= ಎಲೈ ಕೌಂತೇಯನೆ, ಮಾಮುಪೇತ್ಯ ತು= ಆದರೆ ನನ್ನನ್ನು ಹೊಂದಿ, ಪುನರ್ಜನ್ಮ= ಪುನರ್ಜನ್ಮವು, ನ ವಿದ್ಯತೇ= ಇರುವುದಿಲ್ಲ, ಇತಿ= ಎಂಬುದಾಗಿ, ಗೀತೋದಿತಾಂ= ಗೀತೆಯಲ್ಲಿ ಹೇಳಲ್ಪಟ್ಟ, ವಾಣೀಂ= ಮಾತನ್ನು, ಅನುಸ್ಮರ= ನೆನಪಿಸಿಕೋ, ನವಿಸ್ಮರ= ಮರೆಯಬೇಡ, ಯತ್= ಯಾವ ಕಾರಣದಿಂದ, ಜೀವನ್ಮುಕ್ತೌ ತು= ಜೀವನ್ಮುಕ್ತಿಯಲ್ಲಿಯೂ ಸಹ, ಜನ್ಮ= ಪುನರ್ಜನ್ಮವಿದೆಯೋ, ತತಃ= ಆ ಕಾರಣದಿಂದ, ಇಯಂ= ಈ ಕೃಷ್ಣದೇವರು ಹೇಳಿರುವುದು, ಪರಾಮುಕ್ತಿಃ= ಪರಮ ಮೋಕ್ಷರೂಪವಾಗಿದೆ.

**ಅನುವಾದ** – ಜೀವನ್ಮುಕ್ತಿದೆಶೆಯಲ್ಲಿ ಮೃತ್ಯು ಇರುವುದರಿಂದ ಅದಕ್ಕಿಂತ ಉತ್ತಮವಾದ ಮುಕ್ತಿಯು ಸಜ್ಜನರ ಪಾಲಿಗೆ ಶ್ರೀಕೃಷ್ಣಚರಣಪ್ರಾಪ್ತಿಯೇ ಆಗಿದೆ. ಎಲೈ ಅರ್ಜುನನೇ, ಬ್ರಹ್ಮಸದನದವರೆಗೆ ಹೋಗುವ ಜೀವರು ಪುನಃ ಹಿಂದಿರುಗಿ ಬರುತ್ತಾರೆ. ಆದರೆ ಕೌಂತೇಯನೇ, ನನ್ನನ್ನು ಹೊಂದಿದವನಿಗೆ ಪುನರ್ಜನ್ಮವು ಇರುವುದಿಲ್ಲ ಎಂಬ ಗೀತೆಯ ವಾಕ್ಯವನ್ನು ಸ್ಮರಿಸಿಕೋ, ಮರೆಯಬೇಡ.

ಜೀವನ್ಮುಕ್ತಿಯಲ್ಲಿಯೂ ಸಹ ಪುನರ್ಜನ್ಮವಿರುವುದರಿಂದ ಕೃಷ್ಣದೇವರು ಹೇಳಿರುವುದು ಪರಮ ಮೋಕ್ಷವೇ ಆಗಿದೆ. ಈ ರೀತಿಯಲ್ಲಿ ಗೀತೆಯಲ್ಲಿ ಹೇಳಿದ ಮಾತನ್ನು ಸ್ಮರಿಸು. ಮರೆಯಬೇಡ. ಜೀವನ್ಮುಕ್ತಿಯಲ್ಲಿಯೂ ಜನ್ಮವಿರುವುದರಿಂದ ಇದು ಪರಮಮೋಕ್ಷವೇ ಆಗಿದೆ.

**ಭಾವವಿಲಾಸಿನೀ–** ಗೀತಾವಾಕ್ಯೇऽಪಿ ಕೃಷ್ಣಸಮೀಪಪ್ರಾಪ್ತೇರೇವ ಪುನರ್ಜನ್ಮಾಖ್ಯ-ಸಂಸಾರದೂರೀಕರಣಸಾಮರ್ಥ್ಯೋಕ್ತೇಃ ಸೈವ ಪರಮಮುಕ್ತಿರಿತ್ಯಾಹ – **ಆಬ್ರಹ್ಮೇತಿ** ॥ ಯದ್ಯಪ್ಯ-ನಂತಾಸನಶ್ವೇತದ್ವೀಪಯೋಃ ಪುನರಾವೃತ್ತಿಯುಕ್ತತ್ವಶಂಕಾನಿರಾಸಾಯ ಮುಕ್ತಾನಾಮು-ಪ್ಯಾವಾಸತ್ವೇನಾಪ್ಯಂಗೀಕೃತಾಂತರಿಕ್ಷಸ್ವರ್ಗಾದಿಲೋಕಾನಾಂ ಚ ಪುನರಾವೃತ್ತ್ಯೈವ ಯುಕ್ತಜನ-ಭರಿತತ್ವಶಂಕಾನಿರಾಸಾಯ ಚ ಭಗವತ್ಪಾದೈರೇವ ಪೂರ್ವಾರ್ಧಸ್ಯ ಮೇರುಸ್ಥಿತಬ್ರಹ್ಮ-ಸದನಾದರ್ವಾಕ್ತನಲೋಕಾನಾಂ ಪುನರಾವೃತ್ತ್ಯೈವ ಯುಕ್ತಜನಭರಿತತ್ವಮೇವಾರ್ಥ ಉಕ್ತಃ । ತಥಾಪಿ ವಕ್ತುಃ ಕೃಷ್ಣಸ್ಯವ್ಯಾಖ್ಯಾತುರಾಚಾರ್ಯಸ್ಯ ಚ ಪ್ರಾಕೃತಮೇರುಸ್ಥಬ್ರಹ್ಮಭವನಸಾಮ್ಯೇನ ಸತ್ಯಲೋಕಸ್ಯ ಕೈಮುತ್ಯ ತನೇದರ್ವಾಕ್ತನಲೋಕಾನಾಂ ಚ ಜನ್ಮಾದಿಯೋಗ್ಯ-ಪ್ರಕೃತಿಬದ್ಧಜನಯುಕ್ತತಾಪ್ಯಭಿಮತಾ । ಅನ್ಯಥಾ ಮಾಮುಪೇತ್ಯೇತಿ ಸ್ವಲೋಕಗಮನಸ್ಯೈವ ವಿಶಿಷ್ಯ ಪುನರ್ಭವವಿದೂರತ್ವಕಥನವಿರೋಧಾತ್ । ತಥಾಪಿ ಮುಕ್ತಾಮುಕ್ತಜನಸ್ಥಾನತಯಾ ತೇಷಾಮಪಿ ಲೋಕಾನಾಮೇಕಾಂಶೇನ ಸ್ವಲೋಕಸಾಮ್ಯಮಾಗತಮಿತಿ ಚೇನ್ನ । ಮಾಮುಪೇತ್ಯೇತಿ ವದತಃ ಕೃಷ್ಣಸ್ಯ ತಲ್ಲೋಕಸ್ಥಮುಕ್ತಾನಾಂ ಜನ್ಮವೈಧುರ್ಯೇऽಪಿ ಶ್ವೇತದ್ವೀಪಸ್ಥಸ್ವಪ್ರಾಪ್ತ್ಯೇಕನಿಮಿತ್ತತ್ವಸ್ಯ ತೇಷ್ವಪಿ ಲೋಕೇಷುಸ್ಥಿತಸ್ವಮೂರ್ತಿವಿಶೇಷಪ್ರಾಪ್ತಿನಿಮಿತ್ತತ್ವಸ್ಯ ಚ ಅಭಿಪ್ರೇತತ್ವೇನ ತಲ್ಲೋಕಮಹಿಮ-ತ್ವಾಭಾವೇ ತಾತ್ಪರ್ಯಾತ್ । ಅತೋ ನ ಪ್ರಕೃತಾನುಪಯೋಗಃ । ಏತತ್ ವಾಕ್ಯೋಕ್ತಮುಕ್ತೇರಪಿ ಜೀವನ್ಮೋಕ್ಷಾದತಿಶಯಮಾಹ – **ಜೀವದಿತಿ** ॥ ಯದ್ಯಸ್ಮಾತ್ । ಪ್ರಾಕ್ ಮರಣಾಭಾವೇನಾತಿಶಯ ಉಕ್ತಃ । ಇದಾನೀಂ ಜನನಾಭಾವೇನಾತೋ ನ ಪೌನರುಕ್ತ್ಯಮ್ ॥ ೧೫೬-೧೫೭॥

**ವಿವರಣೆ** – ಗೀತೆಯ ವಾಕ್ಯದಲ್ಲಿಯೂ ಸಹ ಕೃಷ್ಣ ಸಮೀಪ ಪ್ರಾಪ್ತಿಯನ್ನೇ ಪುನರ್ಜನ್ಮ ರೂಪವಾದ ಸಂಸಾರನಿರಾಕರಣಸಮರ್ಥವೆಂದು ಹೇಳಿರುವುದರಿಂದ ಕೃಷ್ಣಸಮೀಪ ಪ್ರಾಪ್ತಿಯೇ ಪರಮಮೋಕ್ಷವೆಂದು ಇಲ್ಲಿ ಹೇಳುತ್ತಾರೆ. ಯದ್ಯಪಿ ಅನಂತಾಸನ ಶ್ವೇತದ್ವೀಪವನ್ನು ತಲುಪಿದ ಜೀವರಿಗೆ ಪುನರಾವೃತ್ತಿ ಉಂಟು ಎಂಬ ಶಂಕೆಯನ್ನು ನಿರಾಕರಿಸುವುದಕ್ಕಾಗಿ ಮುಕ್ತರಿಗೂ ಆವಾಸಸ್ಥಾನವಾದ ಅಂತರಿಕ್ಷ ಸ್ವರ್ಗಾದಿ ಲೋಕಗಳೂ ಸಹ ಪುನರಾವೃತ್ತಿ ಉಳ್ಳಂತಹ ಜೀವರಿಂದಲೇ ತುಂಬಿದೆ ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಆಚಾರ್ಯರೇ ಈ ವಾಕ್ಯಕ್ಕೆ ಬೇರೆ ರೀತಿಯ ಅರ್ಥವನ್ನು ಮಾಡಿ ಮೇರುಪರ್ವತದಲ್ಲಿರುವ ಬ್ರಹ್ಮಸದನಕ್ಕಿಂತ ಕೆಳಗಿನ ಲೋಕಗಳನ್ನು ತಲುಪಿದ ಜೀವರಿಗೆ ಪುನರಾವರ್ತಿ ಇದೆ ಎಂದು ಅರ್ಥವನ್ನು ಹೇಳಿದ್ದಾರೆ. ಆದರೂ ಸಹ ಈ ವಾಕ್ಯವನ್ನು ಹೇಳುವ ಕೃಷ್ಣನಿಗೂ ಮತ್ತು ವ್ಯಾಖ್ಯಾನ ಮಾಡುವ ಆಚಾರ್ಯರಿಗೂ ಪ್ರಾಕೃತವಾದ ಮೇರು ಪರ್ವತದಲ್ಲಿರುವ ಬ್ರಹ್ಮಸದನಕ್ಕೆ ಸದೃಶವಾಗಿರುವುದರಿಂದ ಸತ್ಯಲೋಕವು ಮತ್ತು

ಕೈಮುತ್ಯ ನ್ಯಾಯದಿಂದ ಮೇರುವಿನಲ್ಲಿರುವ ಬ್ರಹ್ಮಸದನದ ಕೆಳಗಿರುವ ಲೋಕಗಳೂ ಸಹ ಪುನರ್ಜನ್ಮಯೋಗ್ಯವಾದ ಪ್ರಕೃತಿಬದ್ಧವಾದ ಜೀವರಿಂದ ಕೂಡಿದೆ ಎಂಬುದು ಅಭಿಪ್ರೇತವಾದುದು. ಇಲ್ಲದಿದ್ದರೆ 'ಮಾಮುಪೇತ್ಯ ಎಂಬ ಉತ್ತರಾರ್ಧದಲ್ಲಿ ತನ್ನ ಲೋಕವನ್ನು ಹೊಂದಿದವರಿಗೆ ಮಾತ್ರ ಪುನರ್ಜನ್ಮವಿಲ್ಲ ಎಂದು ವಿಶೇಷವಾಗಿ ಹೇಳುವುದು ವಿರುದ್ಧವಾಗುತ್ತದೆ. ಆದರೂ ಮುಕ್ತಾಮುಕ್ತಜನರ ಆವಾಸಸ್ಥಾನ-ವಾಗಿರುವುದರಿಂದ ಆ ಲೋಕಗಳಿಗೂ ಸ್ವಲೋಕ ಸಾಮ್ಯವು ಉಂಟಾಯಿತು ಎಂಬ ಶಂಕೆಯು ಸರಿಯಲ್ಲ. ನನ್ನನ್ನು ಹೊಂದಿದವರಿಗೆ ಪುನರ್ಜನ್ಮವಿಲ್ಲ ಎಂದು ಹೇಳುವ ಕೃಷ್ಣನ ಮಾತಿಗೆ ಆ ಲೋಕದಲ್ಲಿರುವವರಿಗೆ ಜನ್ಮವು ಇಲ್ಲದಿದ್ದರೂ ಸಹ ಅದು ಶ್ವೇತದ್ವೀಪಾದಿಗಳಲ್ಲಿರುವ ತನ್ನ ಪಾದಪ್ರಾಪ್ತಿಯ ನಿಮಿತ್ತದಿಂದ ಮಾತ್ರ ಮತ್ತು ಶ್ವೇತದ್ವೀಪಾದಿಗಳಲ್ಲಿರುವ ತನ್ನ ರೂಪವಿಶೇಷಗಳ ಸಮೀಪಪ್ರಾಪ್ತಿಯ ನಿಮಿತ್ತದಿಂದ ಮಾತ್ರ ಎಂದು ಅಭಿಪ್ರೇತವೇ ಹೊರತು ಅದು ಆ ಶ್ವೇತದ್ವೀಪಾದಿಲೋಕಗಳ ಮಹಿಮೆ ಎಂದು ಅಭಿಪ್ರಾಯವಲ್ಲ. ಆದ್ದರಿಂದ ಈ ವಾಕ್ಯವು ಪ್ರಕೃತ ಅನುಪಯುಕ್ತವಾಗಿಲ್ಲ. ಹಿಂದಿನ ಶ್ಲೋಕದಲ್ಲಿ ಮರಣಾಭಾವ ಪ್ರಯುಕ್ತವಾಗಿ ವಿಷ್ಣುಲೋಕಕ್ಕೆ ಅತಿಶಯವು ಹೇಳಲ್ಪಟ್ಟಿತು. ಈ ಶ್ಲೋಕದಲ್ಲಿ ಜನನಾಭಾವಪ್ರಯುಕ್ತವಾಗಿ ವಿಷ್ಣುಲೋಕಕ್ಕೆ ಅತಿಶಯವನ್ನು ಹೇಳುವುದರಿಂದ ಪುನರುಕ್ತಿದೋಷವಿಲ್ಲ ಎಂದು ಅಭಿಪ್ರಾಯ.

**ಸಾ ಚ ವಿಷ್ಣೋಃ ಸಮೀಪಾಪ್ತಿಃ ತದಂಘ್ರಿಪ್ರಾಪ್ತಿರೇವ ವಾ ।**
**ತಲ್ಲೋಕೇಷು ಸ್ಥಿತಿರ್ವಾऽಭೂತ್ ತೇನೈಕ್ಯಂ ತ್ವಷ್ಟಮೋ ರಸಃ ॥ ೧೫೮ ॥**

**ಅರ್ಥ** – ಸಾ ಚ= ಆ ಮೋಕ್ಷವಾದರೂ, ವಿಷ್ಣೋಃ ಸಮೀಪ ಪ್ರಾಪ್ತಿಃ= ವಿಷ್ಣುವಿನ ಸಮೀಪ ಪ್ರಾಪ್ತಿ, ವಾ= ಅಥವಾ, ತದಂಘ್ರಿಪ್ರಾಪ್ತಿರೇವ= ವಿಷ್ಣುವಿನ ಪಾದದ ಪ್ರಾಪ್ತಿಯೇ, ವಾ= ಅಥವಾ, ತಲ್ಲೋಕೇಷು= ವಿಷ್ಣುಲೋಕಗಳಲ್ಲಿ, ಸ್ಥಿತಿಃ= ಅವಸ್ಥಾನರೂಪವಾಗಿ, ಅಭೂತ್= ಆಯಿತು, ಐಕ್ಯಂ ತು= ವಿಷ್ಣುವಿನಿಂದ ಐಕ್ಯವಾದರೂ, ಅಷ್ಟಮೋ ರಸಃ= ಎಂಟನೆಯ ರಸದಂತೆ ಅಪ್ರಾಮಾಣಿಕವಾದುದು.

**ಅನುವಾದ** – ಆ ಮೋಕ್ಷವಾದರೂ ವಿಷ್ಣುವಿನ ಸಮೀಪ ಪ್ರಾಪ್ತಿ ಅಥವಾ ವಿಷ್ಣುವಿನ ಪಾದಪ್ರಾಪ್ತಿ ಅಥವಾ ವಿಷ್ಣುಲೋಕದಲ್ಲಿ ಆವಾಸರೂಪವಾಯಿತು. ವಿಷ್ಣುವಿನ ಐಕ್ಯವು ಎಂಟನೆಯ ರಸದಂತೆ ಅಪ್ರಾಮಾಣಿಕವಾಯಿತು.

**ಅಸ್ಪಷ್ಟವಚನಸ್ಯಾರ್ಥಂ ಸ್ಪಷ್ಟೋಕ್ತೇರನುಸಾರತಃ ।**
**ಪ್ರಾಹುಃ ಸರ್ವೇ ಯತಃ ಪೂರ್ವೇ ತನ್ಮಾಕುರ್ವೇಕತಾಭ್ರಮಮ್ ॥ ೧೫೯ ॥**

**ಅರ್ಥ** – ಯತಃ= ಯಾವ ಕಾರಣದಿಂದ, ಪೂರ್ವೇ ಸರ್ವೇ= ಪ್ರಾಚೀನರೆಲ್ಲರೂ ಸಹ, ಅಸ್ಪಷ್ಟವಚನಸ್ಯ= ಅಸ್ಪಷ್ಟವಾದ ವಾಕ್ಯದ, ಅರ್ಥಂ= ಅರ್ಥವನ್ನು, ಸ್ಪಷ್ಟೋಕ್ತೇಃ= ಸ್ಪಷ್ಟವಚನಕ್ಕೆ,

ಅನುಸಾರತಃ= ಅನುಸಾರವಾಗಿ, ಪ್ರಾಹುಃ= ಹೇಳುತ್ತಾರೆಯೋ, ತತ್= ಆ ಕಾರಣದಿಂದ, ಏಕತಾಭ್ರಮಂ= ಐಕ್ಯಭ್ರಮವನ್ನು, ಮಾ ಕುರು= ಮಾಡಬೇಡ.

**ಅನುವಾದ –** ಯಾವ ಕಾರಣದಿಂದ ಪ್ರಾಚೀನರೆಲ್ಲರೂ ಅಸ್ಪಷ್ಟವಚನಗಳ ಅರ್ಥವನ್ನು ಸ್ಪಷ್ಟವಾಕ್ಯಗಳಿಗೆ ಅನುಸಾರವಾಗಿ ಹೇಳುತ್ತಾರೆಯೋ ಆ ಕಾರಣದಿಂದ ಐಕ್ಯಭ್ರಮವನ್ನು ಹೊಂದಬೇಡ.

**ಭಾವವಿಲಾಸಿನೀ–** ಏತಾಭ್ಯಾಂ ಏವ ವಾಕ್ಯಾಭ್ಯಾಂ ಹರೇರ್ಮುಕ್ತಸ್ಯ ಚ ಭೇದೋಽಪಿ ಸಿದ್ಧಇತ್ಯಾಹ – **ಸಾಚೀತಿ** ॥ ತೇನ ಪ್ರಾಪ್ತಪ್ರಾಪ್ಯಭಾವಸ್ಯ ಭೇದಘಟಿತತ್ವೇನ ಸ್ಪಷ್ಟೈತದ್ವಾಕ್ಯ ವಿರೋಧಾತ್ ಅಸ್ಪಷ್ಟ ಭವದಭಿಲಷಿತೈಕ್ಯವಚನಾನ್ಯಪಿ ನ ಹರಿವಿಮುಕ್ತಯೋರೈಕ್ಯಪರಾಣೀತ್ಯಹ – **ಅಸ್ಪಷ್ಟೇತಿ** ॥ ೧೫೮-೧೫೯ ॥

**ವಿವರಣೆ –** ಹೀಗೆ ಪರಮಮುಕ್ತಿಯಲ್ಲಿಯೂ ಸಾಯುಜ್ಯಾದಿಭೇದವೇ ಇರುವುದರಿಂದ ನಿನ್ನ ಐಕ್ಯವಾರ್ತೆಯು ಕತ್ತಲೆಯಲ್ಲಿ ಮುಳುಗಿದೆ ಎಂದು ಅಭಿಪ್ರಾಯ. ಶ್ರುತಿಗಳಿಗೆ ಐಕ್ಯಪರವಾಗಿ ಅರ್ಥವನ್ನು ಹೇಳಿದರೆ ಇಂತಹ ಸ್ಪಷ್ಟವಚನಗಳ ವಿರೋಧವು ಬರುತ್ತದೆ ಎಂದು ಇಲ್ಲಿ ಉಪಪಾದನೆ ಮಾಡುತ್ತಾರೆ.

**ಅನಂತಾಸನವೈಕುಂಠಶ್ವೇತದ್ವೀಪಾಭಿದಾಸ್ತ್ರಯಃ ।**
**ಜ್ಯೋತಿಷ್ಮಂತೋ ಯತ್ರ ಲೋಕಾಸ್ತತ್ರ ಮಾಮಮೃತಂ ಕೃಧಿ ॥ ೧೬೦ ॥**

**ಅರ್ಥ –** ಯತ್ರ= ಎಲ್ಲಿ, ಅನಂತಾಸನವೈಕುಂಠಶ್ವೇತದ್ವೀಪಾಭಿದಾಃ= ಅನಂತಾಸನ ವೈಕುಂಠ ಮತ್ತು ಶ್ವೇತದ್ವೀಪವೆಂಬ, ಜ್ಯೋತಿಷ್ಮಂತಃ= ಪ್ರಕಾಶಮಾನವಾದ, ತ್ರಯಃ ಲೋಕಾಃ= ಮೂರು ಲೋಕಗಳು ಇವೆಯೋ, ತತ್ರ= ಅಲ್ಲಿ, ಮಾಂ= ನನ್ನನ್ನು, ಅಮೃತಂ ಕೃಧಿ= ಮುಕ್ತನನ್ನಾಗಿ ಮಾಡು.

**ಅನುವಾದ –** ಎಲ್ಲಿ ಅನಂತಾಸನ, ವೈಕುಂಠ ಮತ್ತು ಶ್ವೇತದ್ವೀಪವೆಂಬ ಮೂರು ಪ್ರಕಾಶಮಾನವಾದ ಪಟ್ಟಣಗಳು ಇವೆಯೋ ಅಲ್ಲಿ ನನ್ನನ್ನು ಮುಕ್ತನನ್ನಾಗಿ ಮಾಡು.

**ವಿವರಣೆ –** ಇನ್ನು ವೇದವಾಕ್ಯಗಳಿಂದಲೂ ವೈಕುಂಠಾದಿ ಮೂರು ವಿಷ್ಣುಲೋಕಗಳೇ ಪರಮಮೋಕ್ಷವೆಂದು ಸಮರ್ಥನೆ ಮಾಡುತ್ತಾರೆ. ಸೂರ್ಯ ಅಗ್ನಿ ಮೊದಲಾದ ಪ್ರಕಾಶಗಳಿಲ್ಲದಿದ್ದರೂ ಯಾವ ಲೋಕವು ನಿತ್ಯವೂ ಪ್ರಕಾಶಮಾನವಾಗಿದೆಯೋ ಅಂತಹ ವೈಕುಂಠಾದಿ ಲೋಕಗಳಲ್ಲಿ ಎಂದು ಶ್ರುತಿಯ ಅರ್ಥ.

**ಇತಿ ಶ್ರುತೌ ಯತೋ ವಿಷ್ಣೋರ್ಲೋಕೇಷ್ವಮೃತತೋದಿತಾ ।**
**ತತಸ್ತಲ್ಲೋಕಗಮನಂ ಮಹಾಮೋಕ್ಷೋ ಭವೇದ್ ಧ್ರುವಮ್ ॥ ೧೬೧ ॥**

**ಅರ್ಥ** – ಇತಿ ಶ್ರುತೌ= ಮೇಲೆ ಹೇಳಿದ ಶ್ರುತಿಯಲ್ಲಿ, ಯತಃ= ಯಾವ ಕಾರಣದಿಂದ, ವಿಷ್ಣೋಃ ಲೋಕೇಷು= ವಿಷ್ಣುವಿನ ಲೋಕಗಳಲ್ಲಿ, ಅಮೃತತಾ= ಮರಣ ರಾಹಿತ್ಯವು, ಉದಿತಾ= ಹೇಳಲ್ಪಟ್ಟಿದೆಯೋ, ತತಃ= ಆ ಕಾರಣದಿಂದ, ತಲ್ಲೋಕಗಮನಂ= ಆ ಲೋಕಪ್ರಾಪ್ತಿಯು, ಧ್ರುವಂ= ನಿಶ್ಚಿತವಾಗಿ, ಮಹಾಮೋಕ್ಷೋ ಭವೇತ್= ಪರಮ ಮೋಕ್ಷವೇ ಆಗುತ್ತದೆ.

**ಅನುವಾದ** – ಮೇಲೆ ಸೂಚಿಸಿದ ಶ್ರುತಿಯಲ್ಲಿ ಯಾವ ಕಾರಣದಿಂದ ವಿಷ್ಣು ಲೋಕಗಳಲ್ಲಿ ಅಮೃತತ್ವವು ಹೇಳಲ್ಪಟ್ಟದೆಯೋ ಆ ಕಾರಣದಿಂದ ಅಂತಹ ಲೋಕಪ್ರಾಪ್ತಿಯೇ ನಿಶ್ಚಯವಾಗಿ ಮಹಾಮೋಕ್ಷವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಇದಾನೀಂ ಶ್ರುತಿಭಿರಪಿ ವೈಕುಂಠಪುರ್ಯಾದಿಭಗವತ್ಪುರತ್ರಯಸ್ಯೈವ ಪರಮಮೋಕ್ಷತ್ವಂ ಸಾಧಯತಿ –**ಜ್ಯೋತಿಷ್ಮಂತ ಇತ್ಯಾದಿನಾ** ॥ ಯತ್ರ ಪ್ರದೇಶೇ । ಜ್ಯೋತಿಷ್ಮಂತಃ ಸೂರ್ಯಾಗ್ನ್ಯಾದಿಪ್ರಕಾಶಂ ವಿನಾಪಿ ಅಜಸ್ರಂ ಪ್ರಕಾಶವಂತಃ ಲೋಕಾಃ ಸಂತಿ । ತತ್ರ ತತ್ ಪ್ರದೇಶಸ್ಥಲೋಕೇಷು ಮಾಮಮೃತಂ ಕೃಧಿ ಕುರು । ಇತಿ ಶ್ರುತೌ ಏವಮರ್ಥಕ ಶ್ರುತೌ । ಅಮೃತತಾ ಮರಣರಹಿತತಾ ॥ ೧೬೦, ೧೬೧ ॥

ಯತೋಽತ್ರೈವ ಶ್ರುತಿಃ ಸ್ಪಷ್ಟಂ ವಿಷ್ಣೋರ್ಲೋಕೇ ಮಹೀಯತೇ ।
ಇತ್ಯಾಹ ತದಿಮೇ ಲೋಕಾಸ್ತಸ್ಯೈವ ಸ್ಯುರ್ನ ಸಂಶಯಃ ॥ ೧೬೨ ॥

**ಅರ್ಥ** – ಯತಃ= ಯಾವ ಕಾರಣದಿಂದ, ಅತ್ರೈವ= ಪವಮಾನ ಮಂಡಲದ ಕೊನೆಯ ಸೂಕ್ತವಾದ ಈ ಸೂಕ್ತದಲ್ಲಿಯೇ, ಶ್ರುತಿಃ= ಶ್ರುತಿಯು, ಸ್ಪಷ್ಟಂ= ಸ್ಪಷ್ಟವಾಗಿ, ವಿಷ್ಣೋಃ ಲೋಕೇ= ವಿಷ್ಣುವಿನ ಲೋಕದಲ್ಲಿ, ಮಹೀಯತೇ= ಆನಂದಪಡುತ್ತಾನೆ, ಇತ್ಯಾಹ= ಎಂದು ಹೇಳಿದೆಯೋ, ತತ್= ಆ ಕಾರಣದಿಂದ, ಇಮೇ ಲೋಕಾಃ= ಈ ಲೋಕಗಳು, ತಸ್ಯೈವ ಸ್ಯುಃ= ಆ ವಿಷ್ಣುವಿನ ಲೋಕಗಳೇ ಆಗುತ್ತವೆ, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ** – ಯಾವ ಕಾರಣದಿಂದ ಈ ಸೂಕ್ತದಲ್ಲಿಯೇ ಯತ್ರತತ್ ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತೇ ಎಂಬ ವಾಕ್ಯವು ಸ್ಪಷ್ಟವಾಗಿ ಈ ಲೋಕಗಳನ್ನು ಹೇಳುತ್ತದೆಯೋ ಆ ಕಾರಣದಿಂದ ಈ ಲೋಕಗಳು ವಿಷ್ಣುಲೋಕವೇ ಆಗುತ್ತದೆ. ಇದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ**– ಅತ್ರೈವ ಅಸ್ಮಿನ್ ಸೂಕ್ತ ಏವ । ಶ್ರುತಿಃ ಯತ್ರ ತತ್ಪರಮಂ ಪದಂ ವಿಷ್ಣೋರ್ಲೋಕೇ ಮಹೀಯತ ಇತಿ ಶ್ರುತಿಃ । ತತ್ ತಸ್ಮಾತ್ ಅತ್ರೈವ ವಾಕ್ಯಾಂತರೇ ಸ್ಪಷ್ಟಂ ವಿಷ್ಣುಲೋಕತ್ವಶ್ರವಣಾತ್ । ಇಮೇ ಜ್ಯೋತಿಷ್ಮಂತ ಇತಿ ವಾಕ್ಯೋಕ್ತಾಃ । ಅತ್ರ ಸಾಮಾನ್ಯೋಕ್ತಾವಪಿ ಏತತ್ ಪ್ರಕರಣಸ್ಥವಿಶಿಷ್ಯೋಕ್ತಿಬಲಾತ್ ಅತ್ರಾಪಿ ವಿಷ್ಣುಲೋಕತ್ವನಿರ್ಣಯಃ । ಬಹುವಚನಾಲ್ಲೋಕಾನಾಂ ತ್ರಿತ್ವಂ ಚ ಗಮ್ಯತ ಇತಿ ಭಾವಃ ॥ ೧೬೨ ॥

**ವಿವರಣೆ –** ಈ ಸೂಕ್ತದಲ್ಲಿ ಯತ್ರ ಎಂದು ಸಾಮಾನ್ಯವಾಗಿ ಲೋಕವನ್ನು ಹೇಳಿದ್ದರೂ ವಿಷ್ಣೋರ್ಲೋಕೇ ಮಹೀಯತೇ ಎಂಬಲ್ಲಿ ವಿಷ್ಣುವಿನ ಲೋಕವೆಂದು ಹೇಳಿರುವುದರಿಂದ ಮತ್ತು ಜ್ಯೋತಿಷ್ಮಂತಃ ಎಂಬಲ್ಲಿ ಬಹುವಚನ ಪ್ರಯೋಗವಿರುವುದರಿಂದ ಈ ಲೋಕಗಳು ಮೂರು ಸಂಖ್ಯೆವುಳ್ಳವು ಎಂದು ಸಿದ್ಧವಾಗುತ್ತದೆ. ಪ್ರಸಿದ್ಧವಾದ ಮೂರು ಲೋಕಗಳೆಂದರೆ ಅವು ಶ್ವೇತದ್ವೀಪ ಅನಂತಾಸನ ಮತ್ತು ವೈಕುಂಠಗಳೇ ಆಗಬೇಕು ಎಂದು ಅಭಿಪ್ರಾಯ.

**ಉಕ್ತಸ್ಮೃತೇಶ್ಚ ಸಂಮತ್ಯಾ ಲೋಕೋಽಯಂ ವೈಷ್ಣವೋ ಭವೇತ್ ।**
**ಅತಃ ಸಲೋಕತಾಂ ಮೋಕ್ಷೋ ಸಾಲೋಕ್ಯಂ ಚ ಶ್ರುತಿರ್ಜಗೌ ॥ ೧೬೩ ॥**

**ಅರ್ಥ –** ಉಕ್ತಸ್ಮೃತೇಶ್ಚಸಂಮತ್ಯಾ= ತತೋವೈಕುಂಠ ಮಗಮತ್ ಎಂದು ಹಿಂದೆ ಹೇಳಿದ ಸ್ಮೃತಿಯ ಸಂವಾದದಿಂದಲೂ, ಅಯಂ ಲೋಕಃ= ಈ ಲೋಕವು, ವೈಷ್ಣವೋ ಭವೇತ್= ವೈಷ್ಣವ ಲೋಕವೇ ಆಗುತ್ತದೆ, ಅತಃ= ಆದ್ದರಿಂದ, ಶ್ರುತಿಃ= ಶ್ರುತಿಯು, ಸಲೋಕತಾಂ= ವಿಷ್ಣುವಿನ ಸಮಾನಲೋಕಸ್ಥಾನವನ್ನು ಹೇಳಿ, ಮೋಕ್ಷಃ= ಮೋಕ್ಷವು, ಸಾಲೋಕ್ಯಂ= ಸಾಲೋಕ್ಯರೂಪವಾದುದೆಂದು, ಜಗೌ= ಹೇಳಿತು.

**ಅನುವಾದ –** ತತೋ ವೈಕುಂಠಮಗಮತ್ ಎಂಬ ಶ್ರುತಿಯ ಸಂವಾದದಿಂದಲೂ ಸಹ ಈ ಲೋಕವು ವಿಷ್ಣುಲೋಕವೆಂದೇ ಸಿದ್ಧವಾಗುತ್ತದೆ. ಆದ್ದರಿಂದ ಶ್ರುತಿಯು ಸಮಾನಲೋಕಸ್ಥಿತಿಯನ್ನು ಹೇಳಿ ಮೋಕ್ಷವು ಸಾಲೋಕ್ಯರೂಪವಾದುದೆಂದು ಹೇಳಿದೆ.

**ಭಾವವಿಲಾಸಿನೀ–** ಉಕ್ತಸ್ಮೃತೇಃ ತತೋ ವೈಕುಂಠಮಿತಿ ಸ್ಮೃತೇಃ । ಅತಃ ಲೋಕಸ್ಯೈವ ಮೋಕ್ಷಸ್ಥಾನತ್ವಾತ್। ಶ್ರುತಿಃ ಗಚ್ಛೇದ್ ಬ್ರಹ್ಮಸಲೋಕತಾಮಿತ್ಯಾದಿ ಶ್ರುತಿಃ । ಮುಕ್ತಿಸ್ಥಾನಸ್ಯ ಲೋಕತ್ವಾಭಾವೇಮೋಕ್ಷಸ್ಯ ಸಾಲೋಕ್ಯಮಿತಿ ವ್ಯವಹಾರೋ ನ ಸ್ಯಾದಿತಿ ಭಾವಃ ॥ ೧೬೩ ॥

**ವಿವರಣೆ –** ವಿಷ್ಣುವಿನ ಲೋಕವೇ ಮೋಕ್ಷಸ್ಥಾನವಾದುದರಿಂದ ಗಚ್ಛೇತ್ ಬ್ರಹ್ಮ ಸಲೋಕತಾಂ ಮೊದಲಾದ ಶ್ರುತಿಯು ಸಾಲೋಕ್ಯವನ್ನು ಹೇಳುತ್ತದೆ. ಮುಕ್ತಿಸ್ಥಾನವು ಲೋಕವಾಗದಿದ್ದರೆ ಮೋಕ್ಷವು ಸಾಲೋಕ್ಯರೂಪವಾಗಲು ಸಾಧ್ಯವಿಲ್ಲವಾದ್ದರಿಂದ ಸಾಲೋಕ್ಯ ಮೋಕ್ಷವೆಂದು ವ್ಯವಹಾರ ಮಾಡುವುದೇ ಅನುಪಪನ್ನವಾಗುತ್ತದೆ ಎಂದು ಅಭಿಪ್ರಾಯ.

ಆಬ್ರಹ್ಮಭುವನಾಲ್ಲೋಕಾಃ ಪುನರಾವರ್ತಿನೋಽರ್ಜುನ ।
ಇತ್ಯುಕ್ತೇಃ ಸ ಚ ಲೋಕೋಽಯಂ ವಿಷ್ಣೋರ್ಲೋಕೋ ನ ಸಂಶಯಃ ॥ ೧೬೪ ॥

**ಅರ್ಥ –** ಅರ್ಜುನ= ಎಲೈ ಅರ್ಜುನನೇ, ಆಬ್ರಹ್ಮಭುವನಾತ್= ಬ್ರಹ್ಮಸದನದವರೆಗೆ ಇರುವ, ಲೋಕಾಃ= ಲೋಕಗಳು, ಪುನರಾವರ್ತಿನಃ= ಪುನರಾವೃತ್ತಿ ಉಳ್ಳವು, ಇತ್ಯುಕ್ತೇಃ=

ಎಂದು ಹೇಳಿರುವುದರಿಂದ, ಸ ಚಾಯಂ ಲೋಕಃ= ಮೊದಲು ಹೇಳಿದ ಈ ಲೋಕವು, ವಿಷ್ಣೋಃ ಲೋಕಃ= ವಿಷ್ಣುವಿನ ಲೋಕವೇ, ನ ಸಂಶಯಃ= ಈ ವಿಷಯದಲ್ಲಿ ಸಂಶಯವಿಲ್ಲ.

**ಅನುವಾದ** – ಎಲೈ ಅರ್ಜುನನೇ! ಬ್ರಹ್ಮಭವನದವರೆಗೆ ಇರುವ ಲೋಕಗಳು ಪುನರಾವರ್ತಿವುಳ್ಳವು ಎಂದು ಹೇಳಿರುವುದರಿಂದ ಸಾಲೋಕ್ಯ ಮೋಕ್ಷ ಘಟಕವಾದ ಲೋಕವು ವಿಷ್ಣುಲೋಕವೇ ಆಗುತ್ತದೆ. ಇದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ**– ಸ ಚ ಸಲೋಕತಾಮಿತ್ಯಾದಿಶ್ರುತ್ಯುಕ್ತಲೋಕಃ । ಬ್ರಹ್ಮಭುವನಪರ್ಯಂತ-ಲೋಕಾನಾಂ ಪುನರಾವೃತ್ತ್ಯುಕ್ತೇಃ ಸಾಲೋಕ್ಯಮೋಕ್ಷಘಟಕಲೋಕೋ ವಿಷ್ಣುಲೋಕ ಏವ ಭವೇದಿತಿ ಭಾವಃ । ಉಪಲಕ್ಷಣಂ ಚೈತತ್ । ವಿಷ್ಣೋರ್ಲೋಕೇಮಹೀಯತ ಇತಿ ಸ್ಪಷ್ಟಶ್ರುತಿ ಸಮಾಖ್ಯಯಾ ಚೇತ್ಯಪಿ ದ್ರಷ್ಟವ್ಯಮ್ ॥ ೧೬೪ ॥

## ಸರ್ವಲೋಕಕ್ಷಯೇ ಯಸ್ತು ಮೋಕ್ಷೋಽಸೌ ನೇಕ್ಷ್ಯತೇ ಕ್ವಚಿತ್॥ ೧೬೫ ॥

**ಅರ್ಥ** – ಯಸ್ತು ಮೋಕ್ಷಃ= ಯಾವ ವೈಕುಂಠಾದಿ ಲೋಕರೂಪವಾದ ಮೋಕ್ಷವಿದೆಯೋ ಅದು, ಸರ್ವಲೋಕಕ್ಷಯೇ= ಎಲ್ಲ ಲೋಕಗಳ ನಾಶವನ್ನು ಹೇಳುವ ವಾಕ್ಯಗಳಲ್ಲಿ, ಕ್ವಚಿತ್= ಎಲ್ಲಿಯೂ, ನೇಕ್ಷ್ಯತೇ= ಕಂಡುಬರುವುದಿಲ್ಲ.

**ಅನುವಾದ** – ಎಲ್ಲ ಲೋಕಗಳ ನಾಶವನ್ನು ಹೇಳುವ ವಾಕ್ಯಗಳಲ್ಲಿ ನಾಶವನ್ನು ಹೊಂದುವ ಲೋಕಗಳ ಪಂಕ್ತಿಯಲ್ಲಿ ವೈಕುಂಠಲೋಕದ ಹೆಸರು ಎಲ್ಲಿಯೂ ಕಂಡುಬರುವುದಿಲ್ಲ.

**ಭಾವವಿಲಾಸಿನೀ**– ವಿಷ್ಣೋರ್ಲೋಕಸ್ಯ ಮೋಕ್ಷಸ್ಥಾನತ್ವೇ ಯುಕ್ತ್ಯಂತರಂ ಚಾಹ – **ಸರ್ವೇತಿ** ॥ ಸರ್ವಲೋಕಕ್ಷಯೇ ಸರ್ವಲೋಕಾನಾಂ ಕ್ಷಯೋ ಯಸ್ಮಿನ್‌ಪ್ರತಿಪಾದ್ಯತೇ ಸ ಸರ್ವಲೋಕ-ಕ್ಷಯಃ । ಕ್ಷಯ ಇತ್ಯುಪಲಕ್ಷಣಮ್ । ಜನ್ಮಾಪಿ ಗ್ರಾಹ್ಯಮ್ । ಸರ್ವಲೋಕಾನಾಂ ಕ್ಷಯಜನ್ಮ-ಪ್ರತಿಪಾದಕವಾಕ್ಯಮಿತ್ಯರ್ಥಃ । ತಸ್ಮಿನ್ ಸ್ಥಾನಂ ಮದೀಯಂ ಸಹ ವಿಶ್ವಮೇತತ್ ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ। ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ ಕಾಲಾತ್ಮನಃ ಪಶ್ಯತಿ ಕೋ ಭವಿಷ್ಯ-ದಿತ್ಯಾದಿಪ್ರಲಯವಾಚಕವಾಕ್ಯೇ ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುವರ್ಲೋಕಶ್ಚ ನಾಭಿತಃ । ಹೃದಾ ಸ್ವರ್ಲೋಕ ಉರಸಾ ಮಹರ್ಲೋಕೋ ಮಹಾತ್ಮನಃ । ''ಗ್ರೀವಾಯಂ ಜನಲೋಕಶ್ಚ ತಪೋಲೋಕಶ್ಚ ನೇತ್ರಯೋಃ । ಮೂರ್ಧಾಭಿಃ ಸತ್ಯಲೋಕಶ್ಚ ಬ್ರಾಹ್ಮೋ ಲೋಕಃ ಸನಾತನ'' ಇತ್ಯಾದಿಜನ್ಮವಾಚಕವಾಕ್ಯೇ ಚ ಯಃ ವೈಕುಂಠಲೋಕಃ ನೇಕ್ಷ್ಯತೇ ನ ಶ್ರೂಯತೇ । ಅಸೌ ವೈಕುಂಠಲೋಕಃ ಮೋಕ್ಷ ಏವ ಮುಚ್ಯತೇ ಅತ್ರೇತಿ ವ್ಯುತ್ಪತ್ತ್ಯಾ ಮುಕ್ತಿಸ್ಥಾನಮೇವೇತ್ಯರ್ಥಃ । ವೈಕುಂಠಾದಧೋ ವಿದ್ಯಮಾನಸ್ವರ್ಲೋಕಮಾರಭ್ಯ ತಸ್ಮಾದಧೋವಿದ್ಯಮಾನಲೋಕಾನಮೇವ ಕ್ಷಯಕಥನಾಜ್ಜನ್ಮಕಥನಾಚ್ಚ ವೈಕುಂಠಲೋಕಸ್ಯೋಭಯಕೋಟಾವಪ್ಯಪ್ರವೇಶಿತತ್ವೇನಜನ್ಮ-ಕ್ಷಯರಹಿತಲೋಕತ್ವಮರ್ಥಾಲ್ಲಭ್ಯತೇ । ಅತಸ್ತಸ್ಯೈವ ಮುಕ್ತಿಸ್ಥಾನತ್ವಮಿತಿ ಭಾವಃ ॥ ೧೬೫ ॥

**ವಿವರಣೆ –** ವಿಷ್ಣುವಿನ ಲೋಕವೇ ಮೋಕ್ಷಸ್ಥಾನವೆಂಬ ವಿಷಯದಲ್ಲಿ ಇನ್ನೊಂದು ಯುಕ್ತಿಯನ್ನು ಹೇಳುತ್ತಾರೆ. ಸರ್ವಲೋಕಕ್ಷಯಪ್ರತಿಪಾದಕವಾಕ್ಯಗಳಲ್ಲಿ ಎಂಬುದನ್ನು ಉಪಲಕ್ಷಣವಾಗಿ ತೆಗೆದುಕೊಂಡು ಸರ್ವಲೋಕಗಳ ಉತ್ಪತ್ತಿಯನ್ನು ಹೇಳುವ ವಾಕ್ಯಗಳಲ್ಲಿಯೂ ಎಂಬ ಅರ್ಥವನ್ನು ತೆಗೆದುಕೊಳ್ಳಬೇಕು. 'ಸ್ಥಾನಂ ಮದೀಯಂ ಸಹವಿಶ್ವಮೇತತ್ ಕ್ರೀಡಾವಸಾನೇ ದ್ವಿಪರಾರ್ಧಸಂಜ್ಞೇ । ಭ್ರೂಭಂಗಮಾತ್ರೇಣ ಹಿ ಸಂದಿಧಕ್ಷೋಃ ಕಾಲಾತ್ಮನಃ ಪಶ್ಯತಿ ಕೋ ಭವಿಷ್ಯತ್' ಇವೇ ಮೊದಲಾದ ಪ್ರಲಯವಾಚಕ ವಾಕ್ಯಗಳಲ್ಲಿಯೂ 'ಭೂರ್ಲೋಕಃ ಕಲ್ಪಿತಃ ಪದ್ಭ್ಯಾಂ ಭುರ್ವಲೋಕಸ್ತು ನಾಭಿತಃ । ಹೃದಾಸ್ವರ್ಲೋಕ ಉರಸಾ ಮಹರ್ಲೋಕೋ ಮಹಾತ್ಮನಃ । ಗ್ರೀವಾಯಾಂ ಜನಲೋಕಶ್ಚ ತಪೋಲೋಕಶ್ಚ ನೇತ್ರಯೋಃ । ಮೂರ್ಧಭಿಃ ಸತ್ಯಲೋಕಶ್ಚ ಬ್ರಾಹ್ಮೋಲೋಕಃ ಸನಾತನಃ' ಇವೇ ಮೊದಲಾದ ಜನ್ಮವಾಚಕವಾಕ್ಯಗಳಲ್ಲಿಯೂ ಸಹ ವೈಕುಂಠಲೋಕದ ಉಲ್ಲೇಖವು ಕಂಡುಬರುವುದಿಲ್ಲ. ಆದ್ದರಿಂದ ಅತ್ರ ಮುಚ್ಯತೇ ಇಲ್ಲಿ ಮುಕ್ತನಾಗುತ್ತಾನೆ ಎಂಬ ವ್ಯುತ್ಪತ್ತಿಯಿಂದ ವೈಕುಂಠಲೋಕವೇ ಮೋಕ್ಷವೆಂದು ಕರೆಯಲ್ಪಡುತ್ತದೆ. ವೈಕುಂಠಲೋಕದ ಕೆಳಗೆ ಇರುವ ಸ್ವರ್ಗಲೋಕದಿಂದ ಹಿಡಿದು ಕೆಳಗಿನ ಎಲ್ಲ ಲೋಕಗಳಿಗೂ ಉತ್ಪತ್ತಿ ಮತ್ತು ನಾಶವನ್ನು ಹೇಳಿರುವುದರಿಂದ ವೈಕುಂಠಲೋಕವು ಈ ಎರಡು ಕೋಟಿಗಳಿಗಿಂತ ಹೊರಗೆ ಇರುವುದರಿಂದ ವೈಕುಂಠಲೋಕಕ್ಕೆ ಉತ್ಪತ್ತಿನಾಶರಾಹಿತ್ಯವು ಅರ್ಥಾತ್ ಲಭ್ಯವಾಗುತ್ತದೆ. ಆದ್ದರಿಂದ ಅದೇ ಮುಕ್ತಿಸ್ಥಾನ ಎಂದು ಅಭಿಪ್ರಾಯ.

**ಪವಮಾನೋಽತ್ರ ಯತ್ ಪ್ರಾರ್ಥ್ಯೋ ವಾಯೋಶ್ಚ ತದನುಜ್ಞಯಾ ।**
**ತಲ್ಲೋಕಪ್ರಾಪಕತ್ವಂ ತತ್ ಸಿದ್ಧಂ ಗುರುಶಿರೋಮಣೇಃ ॥ ೧೬೬ ॥**

**ಅರ್ಥ –** ಅತ್ರ= ನಾನಾನಂ ಎಂದು ಪ್ರಾರಂಭವಾಗುವ ಪವಮಾನ ಮಂಡಲದ ಈ ಕೊನೆಯ ಸೂಕ್ತದಲ್ಲಿ, ಯತ್= ಯಾವ ಕಾರಣದಿಂದ, ಪವಮಾನಃ= ಪವಮಾನನು, ಪ್ರಾರ್ಥ್ಯಃ= ಪ್ರಾರ್ಥಿಸಲ್ಪಡುತ್ತಾನೆಯೋ, ತತ್= ಆ ಕಾರಣದಿಂದ, ಗುರುಶಿರೋಮಣೇಃ= ಗುರುಶಿರೋಮಣಿಗಳಾದ, ವಾಯೋಶ್ಚ= ವಾಯುದೇವರಿಗೂ, ತದನುಜ್ಞಯಾ= ವಿಷ್ಣುವಿನ ಅನುಮತಿಯಿಂದ, ತಲ್ಲೋಕಪ್ರಾಪಕತ್ವಂ= ವಿಷ್ಣುಲೋಕಪ್ರಾಪಕತ್ವವು, ಸಿದ್ಧಂ= ಸಿದ್ಧವಾಗುತ್ತದೆ.

**ಅನುವಾದ –** ಯಾವ ಕಾರಣದಿಂದ ನಾನಾನಂ ಎಂದು ಪ್ರಾರಂಭವಾಗುವ ಪವಮಾನ ಮಂಡಲದ ಈ ಕೊನೆಯ ಸೂಕ್ತದಲ್ಲಿ ಪವಮಾನನು ಪ್ರಾರ್ಥಿಸಲ್ಪಡುತ್ತಾನೆಯೋ ಆ ಕಾರಣದಿಂದ ಗುರುಶಿರೋಮಣಿಗಳಾದ ವಾಯುದೇವರಿಗೆ ವಿಷ್ಣು ಲೋಕಪ್ರಾಪಕತ್ವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅತ್ರ ನಾನಾನಮಿತ್ಯಾದಿವರ್ಗತ್ರಯಾತ್ಮಕಸೂಕ್ತೇ । ತದನುಜ್ಞಾಯಾಯ ಹರ್ಯನುಜ್ಞಾಯಾ । ತಲ್ಲೋಕಪ್ರಾಪಕತ್ವಂ ವಿಷ್ಣುಲೋಕಪ್ರಾಪಕತ್ವಮ್ । ತತ್ ತಸ್ಮಾತ್ ಮೋಕ್ಷಂ ಪ್ರಾಪಯೇತಿ.ಪ್ರಾರ್ಥಿತತ್ವಾತ್ ॥ ೧೬೬ ॥

**ಅಂತೇ ಜ್ಞಾನಾದ್ ಬ್ರಹ್ಮಲೋಕಮಭಿಸಂಪದ್ಯತೇ ಕಿಲ ।**
**ಆವರ್ತತೇ ನ ಸ ಪುನಃ ಪುನರಾವರ್ತತೇ ನ ಸಃ ।**
**ದ್ವಿರುಕ್ತ್ಯೇತ್ಥಂ ನಿರಣಯತ್ ಪುನರಾವೃತ್ತಿಶೂನ್ಯತಾಂ ॥ ೧೬೭ ॥**

**ಅರ್ಥ –** ಅಂತೇ= ಕೊನೆಯಲ್ಲಿ, ಜ್ಞಾನಾತ್= ಜ್ಞಾನದಿಂದ, ಬ್ರಹ್ಮಲೋಕಂ= ಬ್ರಹ್ಮಲೋಕವನ್ನು, ಅಭಿಸಂಪದ್ಯತೇ ಕಿಲ= ಹೊಂದುತ್ತಾನಷ್ಟೆ, ಸಃ= ಆ ಅಧಿಕಾರಿಯು, ಪುನಃ= ಮತ್ತೆ, ನ ಆವರ್ತತೇ= ಹಿಂದಿರುಗುವುದಿಲ್ಲ, ಸಃ= ಆ ಅಧಿಕಾರಿಯು, ಪುನಃ= ಮತ್ತೆ, ನ ಆವರ್ತತೇ= ಹಿಂದಿರುಗುವುದಿಲ್ಲ ಎಂದು, ದ್ವಿರುಕ್ತ್ಯಾ= ಎರಡು ಸಲ ಹೇಳುವುದರಿಂದ, ಪುನರಾವೃತ್ತಿಶೂನ್ಯತಾಂ= ಪುನರಾವರ್ತಿರಾಹಿತ್ಯವನ್ನು, ನಿರಣಯತ್= ಶ್ರುತಿಯು ನಿರ್ಣಯಿಸಿದೆ.

**ಅನುವಾದ – ಕೊನೆಯಲ್ಲಿ ಜ್ಞಾನದಿಂದ ಅಧಿಕಾರಿಯು ಬ್ರಹ್ಮಲೋಕವನ್ನು ಹೊಂದುತ್ತಾನಷ್ಟೆ. ಅವನು ಸಂಸಾರಕ್ಕೆ ಹಿಂದಿರುಗುವುದಿಲ್ಲ, ಅವನು ಸಂಸಾರಕ್ಕೆ ಹಿಂದಿರುಗುವುದಿಲ್ಲ ಎಂದು ಎರಡು ಬಾರಿ ಹೇಳಿ ಶ್ರುತಿಯು ಆ ಬ್ರಹ್ಮಲೋಕವು ಪುನರಾವರ್ತಿರಹಿತವಾದುದೆಂದು ನಿರ್ಣಯಿಸಿತು.**

**ಭಾವವಿಲಾಸಿನೀ–** ಅಧುನಾ ''ಅರಶ್ಚ ಹಿ ವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ ತದಶ್ವತ್ಥಃ ಸೋಮಸವನಸ್ತದಪರಾಜಿತಾ ಪೂರ್ಬ್ರಹ್ಮಣಃ ಪ್ರಭುವಿಮಿತಮಿತಿ ಸಖಲ್ವೇವಂ ವರ್ತಯನ್ಯಾವದಾಯುಷಂ ಬ್ರಹ್ಮಲೋಕಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ ಇತಿ ಚ ಬ್ರಹ್ಮಲೋಕಸಮಾಖ್ಯಾಯಾ ಏಕಾರ್ಥಪ್ರತಿಪಾದಕಂ ಛಂದೋಗೋಪನಿಷದಷ್ಟಪ್ರಪಾಠಕ ಭಾಗಾದ್ವಯಸ್ಥವಾಕ್ಯಂ ಮನಸಿ ನಿಧಾಯ ವೈಕುಂಠಪುರ್ಯಾ ಏವಪರಮಮುಕ್ತಿಸ್ಥಾನತ್ವಂ ವರ್ಣಯತಿ – **ಅಂತ ಇತಿ** ॥ ಸಖಲ್ವೇವಮಿತಿ ವಾಕ್ಯಸ್ಯಾರ್ಥಕಥನಮಿದಮ್ । ನಿರಣಯತ್ ಬ್ರಹ್ಮಲೋಕಪದೋಕ್ತವೈಕುಂಠಲೋಕಸ್ಯ ಪುನರಾವೃತ್ತಿ ಶೂನ್ಯತಾಂ ನಿಶ್ಚಿತವತೀ ॥ ೧೬೭ ॥

**ವಿವರಣೆ –** ಈಗ 'ಅರಶ್ಚ ಹಿ ವೈಣ್ಯಶ್ಚಾರ್ಣವೌ ಬ್ರಹ್ಮಲೋಕೇ ತದಶ್ವತ್ಥಃ ಸೋಮಸವನಃ ತದಪರಾಜಿತಾ ಪೂಃ ಬ್ರಹ್ಮಣಃ ಪ್ರಭುವಿಮಿತಂ' ಎಂಬ ವಾಕ್ಯವನ್ನು ಮತ್ತು 'ಸಖಲ್ವೇವಂ ವರ್ತಯನ್ ಯಾವದಾಯುಷಂ ಬ್ರಹ್ಮಲೋಕಮಭಿಸಂಪದ್ಯತೇ ನ ಚ ಪುನರಾವರ್ತತೇ ನ ಚ ಪುನರಾವರ್ತತೇ' ಎಂಬ ಛಾಂದೋಗ್ಯೋಪನಿಷತ್ತಿನ ಅದೇ ಅಧ್ಯಾಯದಲ್ಲಿ ಬರುವ ಇನ್ನೊಂದು ವಾಕ್ಯವನ್ನು ಮನಸ್ಸಿನಲ್ಲಿಟ್ಟುಕೊಂಡು ವೈಕುಂಠಲೋಕವೇ ಪರಮಮೋಕ್ಷವೆಂದು ಸಮರ್ಥಿಸುತ್ತಾರೆ.

**ಲೋಕೋಽಯಂ ಬ್ರಹ್ಮಣೋ ವಿಷ್ಣೋರಪರಾಜಿತಪೂಃ ಕಿಲ ।**
**ಕುಯುಕ್ತ್ಯಾ ಮೃತ್ಯುನಾ ದೋಷೈಃ ಪರಾಜಿಗ್ಯೇ ಯತೋ ನ ಸಾ॥ ೧೬೮ ॥**

**ಅರ್ಥ** – ಅಯಂ ಲೋಕಃ= ಈ ಲೋಕವು, ವಿಷ್ಣೋಃ ಬ್ರಹ್ಮಣಃ= ಬ್ರಹ್ಮನೆಂದು ಕರೆಯಲ್ಪಡುವ ವಿಷ್ಣುವಿನ, ಅಪರಾಜಿತಪೂಃ ಕಿಲ= ಅಪರಾಜಿತವೆಂಬ ಪಟ್ಟಣವಷ್ಟೆ, ಯತಃ= ಏಕೆಂದರೆ, ಸಾ= ಆ ಪಟ್ಟಣವು, ಕುಯುಕ್ತ್ಯಾ= ದುಷ್ಟಯುಕ್ತಿಗಳಿಂದಾಗಲೀ, ಮೃತ್ಯುನಾ= ಮರಣದಿಂದಾಗಲೀ, ದೋಷೈಃ= ದೋಷದಿಂದಾಗಲೀ, ನ ಪರಾಜಿಗ್ಯೇ= ಸೋಲಿಸಲ್ಪಡಲಿಲ್ಲ.

**ಅನುವಾದ – ಈ ಲೋಕವು ಬ್ರಹ್ಮಶಬ್ದವಾಚ್ಯನಾದ ವಿಷ್ಣುವಿನ ಅಪರಾಜಿತಾ ಎಂಬ ಹೆಸರಿನ ಪಟ್ಟಣವಷ್ಟೆ. ಏಕೆಂದರೆ ಅದು ದುಷ್ಟಯುಕ್ತಿಗಳಿಂದಾಗಲೀ ಮರಣದಿಂದಾಗಲೀ ಅಥವಾ ದೋಷಗಳಿಂದಾಗಲೀ ಪರಾಜಯವನ್ನು ಹೊಂದುವುದಿಲ್ಲ.**

**ಭಾವವಿಲಾಸಿನೀ**– ಸತ್ಯಲೋಕಸ್ಥಿತಸ್ಯ ಚತುರ್ಮುಖಬ್ರಹ್ಮಣಃ ದ್ವಿಪರಾರ್ಧಾವಸಾನೇ ಪ್ರಲಯಶ್ರವಣೇನ ಪುನರಾವೃತ್ತಿಶೂನ್ಯತ್ವಾಯೋಗಾತ್ ಪರಬ್ರಹ್ಮಾಖ್ಯವಿಷ್ಣೋರ್ಲೋಕ ಏವಾಯಂ ಬ್ರಹ್ಮಲೋಕ ಇತಿ ಭಾವೇನೋಕ್ತಮ್ – **ಲೋಕೋಽಯಮಿತಿ** ॥ ಶ್ರುತೇರಂಶಾಂತರಸ್ಥಪದಯೋರರ್ಥಮಾಹ – **ಕುಯುಕ್ತ್ಯೇತಿ** ॥ ತತಃ ಸಾ ಮೃತ್ಯುರಸ್ಮಾದಪ್ಯೇತೀತಿ ನ ಯತ್ರ ಮಾಯೇತಿ ಚ ಸ್ಮೃತ್ಯುಕ್ತಾ ವೈಕುಂಠಪುರೀ ಅಪರಾಜಿತಪೂರಿತಿ ಸಂಬಂಧಃ ॥ ೧೬೮ ॥

**ವಿವರಣೆ** – ಸತ್ಯಲೋಕದಲ್ಲಿರುವ ಚತುರ್ಮುಖಬ್ರಹ್ಮನಿಗೂ ದ್ವಿಪರಾರ್ಧಾವಸಾನದಲ್ಲಿ ಪ್ರಲಯವು ಕಂಡುಬರುವುದರಿಂದ ಸತ್ಯಲೋಕಕ್ಕೂ ಸಹ ಪುನರಾವರ್ತಿಶೂನ್ಯತ್ವವು ಉಪಪನ್ನವಾಗುವುದಿಲ್ಲ. ಪರಬ್ರಹ್ಮನಾದ ವಿಷ್ಣುವಿನ ಲೋಕಕ್ಕೇ ಪುನರಾವರ್ತಿರಾಹಿತ್ಯವು ಉಪಪನ್ನವಾಗುತ್ತದೆ ಎಂದು ಇಲ್ಲಿ ಪ್ರತಿಪಾದಿಸುತ್ತಾರೆ.

**ಸತ್ತ್ವಚಿತ್ತ್ವವಿಭುತ್ವಾದ್ಯೈಃ ಸತ್ತ್ವಪ್ರಭೋಃ (ಸಾ ಪ್ರಭೋಃ) ಸಂಮಿತಾ ಕಿಲ ।**
**ಹಿರಣ್ಮಯ್ಯಾಃ ಪುರಸ್ತಸ್ಯಾಃ ಪರಂ ಬ್ರಹ್ಮ ಪ್ರಭುಃ ಕಿಲ ॥ ೧೬೯ ॥**

**ಅರ್ಥ** – ಸಾ= ಆ ವೈಕುಂಠಪುರಿಯು, ಸತ್ತ್ವಚಿತ್ತ್ವವಿಭುತ್ವಾದ್ಯೈಃ= ಜನನ ಮರಣಾದಿ ದೋಷರಾಹಿತ್ಯ, ಚೈತನ್ಯರೂಪತ್ವ ಮತ್ತು ವ್ಯಾಪ್ತತ್ವಾದಿ ಗುಣಗಳಿಂದ, ಪ್ರಭೋಃ= ಪ್ರಭುವಾದ ಹರಿಗೆ, ಸಂಮಿತಾ ಕಿಲ= ಸದೃಶವಾಗಿದೆಯಷ್ಟೆ, ಹಿರಣ್ಮಯ್ಯಾಃ= ಸುವರ್ಣಮಯವಾದ, ತಸ್ಯಾಃ ಪುರಃ= ಆ ಪಟ್ಟಣಕ್ಕೆ, ಪರಂಬ್ರಹ್ಮ= ಪರಬ್ರಹ್ಮನು, ಪ್ರಭುಃ ಕಿಲ= ಪ್ರಭುವಷ್ಟೆ.

**ಅನುವಾದ – ಆ ಪಟ್ಟಣವು ಪ್ರಭುವಾದ ನಾರಾಯಣನಿಗೆ ಜನನಮರಣಾದಿ ದೋಷರಾಹಿತ್ಯ ಚೇತನರೂಪತ್ವ ಮತ್ತು ವಿಭುತ್ವಾದಿಧರ್ಮಗಳಿಂದ**

ಸದೃಶವಾಗಿದೆಯಷ್ಟೆ, ಸ್ವರ್ಣಮಯವಾದ ಆ ಪಟ್ಟಣಕ್ಕೆ ಪರಬ್ರಹ್ಮನಾದ ನಾರಾಯಣನೇ ಅಧಿಪತಿಯಷ್ಟೆ.

**ಭಾವವಿಲಾಸಿನೀ**– ಪ್ರಭುಣಾ ನಾರಾಯಣೇನ ವಿಶೇಷೇಣ ಮಿತಮುಪಮಿತಮಿತಿ ಪ್ರಭುವಿಮಿತಮಿತಿ ಪದಸ್ಯಾರ್ಥಕಥನಮ್ – **ಸತ್ತ್ವಾಚಿತ್ತ್ವಾದ್ಯೈ**ರಿತಿ ॥ ಸತ್ತ್ವಂಜನನಮರಣಬಂಧಾದಿದೋಷರಹಿತತ್ವಮ್ । ವಿಶಿಷ್ಯೋಪಮಾ ಚೇತನತ್ವಂ ವಿನಾ ನ ಘಟತ ಇತಿ ಚಿತ್ತ್ವಮಪಿ ಗೃಹೀತವ್ । ಅನೇನ ವೈಕುಂಠಸ್ಯ ಲಕ್ಷ್ಮ್ಯಾತ್ಮಕತ್ವಮಪಿ ಸೂಚಿತಮ್ । ವ್ಯಾಪ್ತತ್ವಾದಿಬಹುಗುಣೈರ್ಹರಿಸಮಾಯಾ ಅಪಿ ತಸ್ಯಾಃಸ್ವಾಮೀ ಹರಿರೇವೇತಿ ಸೂಚನಾಯ ಪ್ರಭುಪದಮಿತಿ ಭಾವೇನೋಕ್ತಮ್ – **ಹಿರಣ್ಮಯ್ಯಾ ಇತಿ** ॥ ಪುರಃ ಪುರ್ಯಾಃ ॥ ೧೯ ॥

**ವಿವರಣೆ** – ಆ ಪಟ್ಟಣಕ್ಕೆ ಚೈತನ್ಯರೂಪತ್ವವನ್ನು ಮತ್ತು ವ್ಯಾಪ್ತತ್ವವನ್ನು ಹೇಳಿರುವುದರಿಂದ ಆ ಪಟ್ಟಣವು ವ್ಯಾಪ್ತ ಚೇತನಳಾದ ಲಕ್ಷ್ಮೀರೂಪವಾದುದು ಎಂದು ಸೂಚಿಸುತ್ತಾರೆ. ಮತ್ತು ದೇಶಕಾಲಗಳಲ್ಲಿ ಸಮವ್ಯಾಪ್ತಗಳಾದ ಲಕ್ಷ್ಮಿಗೂ ನಾರಾಯಣನು ಪ್ರಭುವೆಂದು ಸೂಚಿಸುತ್ತಾರೆ.

**ಇತಿ ಛಂದೋಗೋಪನಿಷಜ್ಜಗೌ ಯತ್ತಜ್ಜಗತ್ಪ್ರಭೋಃ ।**
**ವೈಕುಂಠಾಖ್ಯೈವ ನಗರೀ ಸಾ ಪುರೀತಿ ಮತಿರ್ಮಮ ॥ ೧೭೦ ॥**

**ಅರ್ಥ** – ಇತಿ= ಈ ರೀತಿಯಾಗಿ, ಛಂದೋಗೋಪನಿಷತ್= ಛಂದೋಗ್ಯೋಪನಿಷತ್ತು, ಜಗತ್ಪ್ರಭೋಃ= ಜಗತ್ ಪ್ರಭುವಿನ, ಯತ್= ಯಾವ ಪಟ್ಟಣವನ್ನು, ಜಗೌ= ಹೇಳಿತೋ, ಸಾ ಪುರೀ= ಆ ಪಟ್ಟಣವು, ವೈಕುಂಠಾಖ್ಯೈವ ನಗರೀ= ವೈಕುಂಠಪಟ್ಟಣವೆಂದೇ, ಮಮ ಮತಿಃ= ನನ್ನ ಅಭಿಪ್ರಾಯ.

**ಅನುವಾದ** – ಹೀಗೆ ಛಾಂದೋಗ್ಯೋಪನಿಷತ್ತು ಜಗತ್ಪ್ರಭುವಿನ ಯಾವ ಪಟ್ಟಣವನ್ನು ವರ್ಣಿಸಿತೋ ಆ ಪಟ್ಟಣವು ವೈಕುಂಠಾಖ್ಯ ಪಟ್ಟಣವೆಂದೇ ನನ್ನ ಅಭಿಪ್ರಾಯ.

**ಭಾವವಿಲಾಸಿನೀ**– ಯದ್ಯಸ್ಮಾತ್ । ತತ್ ತಸ್ಮಾತ್ ಉಕ್ತಸ್ಮೃತ್ಯಾ ಅಪರಾಜಿತಪುರತ್ವಸ್ಯ ಯತೋ ನಾವರ್ತತೇ ಯತಿರಿತಿ ಸ್ಮೃತ್ಯಾ ಪುನರಾವೃತ್ತಿರಾಹಿತ್ಯಸ್ಯ ಚ ವೈಕುಂಠ ಏವ ಸಂಭವಾತ್ ॥೧೭೦॥

**ಯತ್ರಾಶ್ವತ್ಥೋಽಮೃತಸ್ಯಂದೀ ಯತ್ರಾರಣ್ಯೌ ಸುಧಾರ್ಣವೌ ।**
**ಸಾಽಶ್ವತ್ಥಪ್ರಿಯದುಗ್ಧಾಬ್ಧಿಶಾಯಿನಃ ಪೂರ್ನ ಸಂಶಯಃ ॥ ೧೭೧ ॥**

**ಅರ್ಥ** – ಯತ್ರ= ಎಲ್ಲಿ, ಅಮೃತಸ್ಯಂದೀ= ಅಮೃತರಸವನ್ನು ಸುರಿಸುವ, ಅಶ್ವತ್ಥಃ= ಅಶ್ವತ್ಥವೃಕ್ಷವಿದೆಯೋ, ಅರಣ್ಯಂ= ಅರ ಮತ್ತು ಣ್ಯ ಎಂಬ, ಸುಧಾರ್ಣವೌ= ಸುಧಾ ಸಮುದ್ರಗಳು ಇವೆಯೋ, ಸಃ= ಆ ಪಟ್ಟಣವು, ಅಶ್ವತ್ಥಪ್ರಿಯದುಗ್ಧಾಬ್ಧಿಶಾಯಿನಃ= ಅಶ್ವತ್ಥ

ಪ್ರಿಯನಾದ ಕ್ಷೀರಾಬ್ಧಿಶಾಯಿಯಾದ ನಾರಾಯಣನ, ಪೂಃ= ಪಟ್ಟಣವೇ, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ** – ಎಲ್ಲಿ ಅಮೃತರಸವನ್ನು ಸುರಿಸುವ ಅಶ್ವತ್ಥವೃಕ್ಷವಿದೆಯೋ ಮತ್ತು ಎಲ್ಲಿ ಅರ ಮತ್ತು ಣ್ಯ ಎಂಬ ಹೆಸರಿನ ಎರಡು ಸುಧಾಸಮುದ್ರಗಳು ಇವೆಯೋ ಆ ಪಟ್ಟಣವು ಅಶ್ವತ್ಥಪ್ರಿಯನಾದ ಕ್ಷೀರಸಮುದ್ರಶಾಯಿಯಾದ ನಾರಾಯಣನ ಪಟ್ಟಣವೇ ಎಂಬ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ**– ನಿಮಿತ್ತಾಂತರಂ ಚಾಹ – ಅಶ್ವತ್ಥ ಇತಿ ॥ ಅರಣ್ಯೌ ಅರಶ್ಚಣ್ಯಶ್ಚಾರಣ್ಯೌ । ಅರಸಂಜ್ಞ ಏಕಃ । ಣ್ಯಸಂಜ್ಞಶ್ಚಾಪರ ಇತ್ಯರ್ಥಃ । ''ಋಷ ದಾಹ'' ಇತಿ ಧಾತೋರ್ಡಪ್ರತ್ಯಯೇ ಕೃತೇ ರಪದೋದಿತದುಃಖವಿರುದ್ಧಸುಖರೂಪತ್ವಾತ್ ಋಗತಾವಿತಿ ಧಾತೋಃ ಪಚಾದ್ಯಚಿ ಋವರ್ಣಸ್ಥಾನೇ ಗುಣೇ ಚ ಕೃತೇ ಜ್ಞಾನರೂಪತ್ವಾಚ್ಚಾರಪದವಾಚ್ಯ ಏಕಃ ಣಪದೋಕ್ತ ಸುಖ-ರೂಪತ್ವಾತ್ ಯಪದೋಕ್ತಜ್ಞಾನರೂಪತ್ವಾಚ್ಚಣ್ಯಪದವಾಚ್ಯೋಽಪರಃ । ಉಭಾವಪಿ ಜ್ಞಾನಸುಖ-ರೂಪತಯಾ ತತ್ಪದವಾಚ್ಯಾವಿತಿ ಭಾವಃ । ಸಾ ಅಶ್ವತ್ಥಸುಧಾಸಮುದ್ರಾಶ್ರಯೀಭೂತಾ ॥೧೭೧॥

**ವಿವರಣೆ** – ಅರ ಮತ್ತು ಣ್ಯ ಎಂಬುವು ಎರಡು ಸುಧಾಸಮುದ್ರಗಳು. ಇವುಗಳನ್ನು ಕೆಲವು ಬಾರಿ ಸುಧಾಸರೋವರಗಳು ಎಂದೂ ಕರೆಯುವುದುಂಟು. ಅರ ಎಂಬ ಶಬ್ದದ ನಿಷ್ಪತ್ತಿಯು ಹೀಗಿದೆ. ಋಷ ದಾಹೇ ಎಂಬ ಧಾತುವಿನ ಮೇಲೆ ಅಪ್ರತ್ಯಯವು ಬಂದು ರ ಎಂದು ರೂಪವಾಗುತ್ತದೆ. ರ ಎಂದರೆ ದುಃಖವೆಂದು ಅರ್ಥ. ಅರ ಎಂದರೆ ದುಃಖವಿರುದ್ಧ ಸುಖರೂಪವಾದುದು ಎಂದು ಅರ್ಥ. ಅಥವಾ ಋ ಗತೌ ಎಂಬ ಧಾತುವಿನ ಮೇಲೆ ಪಚಾದ್ಯಚ್ ಪ್ರತ್ಯಯವನ್ನು ಮಾಡಿ ಋ ವರ್ಣಕ್ಕೆ ಗುಣವು ಬಂದರೆ ಅರ ಎಂಬ ಶಬ್ದವು ನಿಷ್ಪನ್ನವಾಗುತ್ತದೆ. ಆಗ ಅರ ಎಂದರೆ ಜ್ಞಾನಾತ್ಮಕವಾದುದು ಎಂದು ಅರ್ಥ. ಣ್ಯ ಎಂಬಲ್ಲಿ ಣ ಕಾರವು ಸುಖವನ್ನು ಹೇಳುತ್ತದೆ, ಯ ಕಾರವು ಜ್ಞಾನರೂಪತ್ವವನ್ನು ಹೇಳುತ್ತದೆ. ಆದ್ದರಿಂದ ರ ಎಂದರೂ ಸುಖಜ್ಞಾನಾತ್ಮಕವಾದುದು ಎಂದು ಅರ್ಥ. ಣ್ಯ ಎಂದರೂ ಅದೇ ಅರ್ಥ. ಲಕ್ಷ್ಮ್ಯಾತ್ಮಕವಾದ ಈ ಎರಡು ಸುಧಾಸಮುದ್ರಗಳು ಸುಖಜ್ಞಾನರೂಪವಾಗಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಗೀತೆಯಲ್ಲಿ ವಿಭೂತಿ ಅಧ್ಯಾಯದಲ್ಲಿ ಅಶ್ವತ್ಥಶ್ಸರ್ವವೃಕ್ಷಾಣಾಂ ಎಂದು ಹೇಳಿರುವುದರಿಂದ ನಾರಾಯಣನನ್ನು ಅಶ್ವತ್ಥಪ್ರಿಯ ಎಂದು ಇಲ್ಲಿ ಕರೆದಿದ್ದಾರೆ. ಕ್ಷೀರಸಮುದ್ರಶಾಯಿತ್ವವಂತೂ ಪ್ರಸಿದ್ಧವಾದುದು ಎಂದು ಅಭಿಪ್ರಾಯ.

**ಕಿಂ ಚ ಶ್ರುತಿರ್ಯತಃ ಸ್ಪಷ್ಟಮಮೃತೇನಾವೃತಾಂ ಪುರೀಂ ।**
**ಆಹ ತೇನಾಪಿ ಮುಕ್ತಸ್ಯ ಪುರೀ ಸೇಯಂ ನ ಸಂಶಯಃ ॥ ೧೭೨ ॥**

**ಅರ್ಥ** – ಕಿಂಚ= ಮತ್ತು, ಶ್ರುತಿಃ= ಶ್ರುತಿಯು, ಯತಃ= ಯಾವ ಕಾರಣದಿಂದ, ಸ್ಪಷ್ಟಂ= ಸ್ಪಷ್ಟವಾಗಿ, ಅಮೃತೇನ= ಮುಕ್ತರಿಂದ, ಆವೃತಾಂ= ತುಂಬಿರುವ, ಪುರೀಂ= ಪಟ್ಟಣವೆಂದು,

ಆಹ= ಹೇಳಿತೋ, ತೇನಾಪಿ= ಆ ಕಾರಣದಿಂದಲೂ ಕೂಡ, ಸೇಯಂ= ಅಂತಹ ಈ ಪಟ್ಟಣವು, ಮುಕ್ತಸ್ಯ ಪುರೀ= ಮುಕ್ತರ ಪಟ್ಟಣ, ನ ಸಂಶಯಃ= ಈ ವಿಷಯದಲ್ಲಿ ಸಂಶಯವಿಲ್ಲ.

**ಅನುವಾದ –** ಮತ್ತು ಯಾವ ಕಾರಣದಿಂದ ಶ್ರುತಿಯು ಸ್ಪಷ್ಟವಾಗಿ ಇದನ್ನು ಮುಕ್ತರಿಂದ ತುಂಬಿದ ಪಟ್ಟಣವೆಂದು ಹೇಳಿತೋ ಆ ಕಾರಣದಿಂದಲೂ ಸಹ ಈ ಪಟ್ಟಣವು ಮುಕ್ತರ ಪಟ್ಟಣವೇ ಎಂಬ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ''ಯೋ ವೈತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಮಿ''ತಿ ಶ್ರುತ್ಯರ್ಥಪರ್ಯಾಲೋಚನಾಯಾಪಿ ಮುಕ್ತಾನಾಮಾವಾಸಭೂತಾ ಪುರ್ಯೇವ । ಸಾ ಚ ಪೂರ್ವೋತ್ತರಪರ್ಯಾಲೋಚನಯಾ ವೈಕುಂಠನಗರೀತ್ಯಾಹ – **ಕಿಂಚೇತಿ** ॥ ೧೭೨ ॥

**ವಿವರಣೆ –** ಇಲ್ಲಿ 'ಯೋವೈತಾಂ ಬ್ರಹ್ಮಣೋ ವೇದ ಅಮೃತೇನಾವೃತಾಂ ಪುರೀಂ' ಎಂಬ ಶ್ರುತಿಯನ್ನು ವಿಮರ್ಶೆ ಮಾಡಿ ವೈಕುಂಠಾಖ್ಯಪಟ್ಟಣವೇ ಮುಕ್ತರ ಆವಾಸಸ್ಥಾನವಾದುದು ಎಂದು ಸಮರ್ಥಿಸುತ್ತಾರೆ.

**ಜಾತ್ಯೇಕವಚನಂ ಚೇದಮಾವೃತಾಮಿತಿ ಕೀರ್ತನಾತ್ ।**
**ಅತೋಽಮೃತೈಃ ಪೂರ್ಣಪುರೀ ನಾರಾಯಣಪುರೀ ಧ್ರುವಮ್ ॥ ೧೭೩ ॥**

**ಅರ್ಥ –** ಇದಂ= ಅಮೃತೇನ ಎಂಬಲ್ಲಿರುವ ಏಕವಚನವು, ಆವೃತಾಮಿತಿ= ತುಂಬಿರುವ ಎಂದು, ಕೀರ್ತನಾತ್= ಹೇಳಿರುವುದರಿಂದ, ಜಾತ್ಯೇಕವಚನಂ= ಜಾತ್ಯೇಕ ವಚನವಾಗಿದೆ, ಅತಃ= ಆದ್ದರಿಂದ, ಅಮೃತೈಃ= ಮುಕ್ತರಿಂದ, ಪೂರ್ಣಪುರೀ= ತುಂಬಿರುವ ಪಟ್ಟಣವು, ಧ್ರುವಂ= ನಿಶ್ಚಯವಾಗಿ, ನಾರಾಯಣಪುರೀ= ನಾರಾಯಣನ ಪಟ್ಟಣವೇ ಆಗಿದೆ.

**ಅನುವಾದ –** ಆವೃತಾಂ ಎಂಬ ಪದದಿಂದ ತುಂಬಿದೆ ಎಂದು ಹೇಳಿರುವುದರಿಂದ ಅಮೃತೇನ ಎಂಬಲ್ಲಿರುವ ಏಕವಚನವು ಗುಂಪು ಎಂಬ ಅರ್ಥಕೊಡುವ ಏಕವಚನ. ಆದ್ದರಿಂದ ಮುಕ್ತರಿಂದ ತುಂಬಿರುವ ಈ ಪಟ್ಟಣವು ನಿಶ್ಚಯವಾಗಿ ನಾರಾಯಣನ ಪಟ್ಟಣವೇ ಸರಿ.

**ಭಾವವಿಲಾಸಿನೀ–** ಇದಂ ಅಮೃತೇನೇತಿ ಪದಮ್ । ಪೂರ್ಣತ್ವಾಪರಪರ್ಯಾಯಾವೃತತ್ವಸ್ಯ ಬಹುಮುಕ್ತಜನಸಾಪೇಕ್ಷತ್ವಾದಿತಿ ಭಾವಃ ॥ ೧೭೩ ॥

**ವಿವರಣೆ –** ಅಮೃತೇನ ಎಂಬ ಶಬ್ದಕ್ಕೆ ಮುಕ್ತನಿಂದ ಎಂದು ಏಕವಚನದ ಅರ್ಥವನ್ನು ಮಾಡಿದರೆ ಒಂದು ಪಟ್ಟಣವು ಒಬ್ಬನಿಂದ ತುಂಬಿರಲು ಸಾಧ್ಯವಿಲ್ಲವಾದ್ದರಿಂದ, ಮುಕ್ತಸಮೂಹದಿಂದ ಎಂದು ಅರ್ಥವನ್ನು ಮಾಡಬೇಕು. ಏಕವಚನಾಂತವಾದ ಒಂದು

ಶಬ್ದವು ಆ ಗುಂಪಿನ ಅನೇಕ ವ್ಯಕ್ತಿಗಳನ್ನು ಹೇಳಿದರೆ ಇದಕ್ಕೆ ಜಾತ್ಯೇಕವಚನವೆಂದು ಹೇಳುತ್ತಾರೆ. ಆದ್ದರಿಂದ ಅಮೃತೇನ ಎಂಬಲ್ಲಿರುವ ಏಕವಚನವು ಜಾತ್ಯೇಕವಚನ ಎಂದು ಅಭಿಪ್ರಾಯ.

**ದೇವಾನಾಂ ಪೂರಯೋಧ್ಯೇತಿ ಯದಯೋಧ್ಯಾಭಿದಾಂ ಪುರಃ ।**
**ಪ್ರಾದಾತ್ ತಸ್ಯಾಃ ಶ್ರುತಿಃ ಪೂರ್ವಂ ತದ್ವಿಷ್ಣೋರೇವ ಸಾ ಪುರೀ ॥ ೧೭೪ ॥**

**ಅರ್ಥ –** ಯತ್= ಯಾವ ಕಾರಣದಿಂದ, ಶ್ರುತಿಃ= ವೇದವು, ಪೂರ್ವಂ= ಇದಕ್ಕೆ ಮೊದಲ ಭಾಗದಲ್ಲಿ, ತಸ್ಯಾಃ ಪುರಃ= ಆ ಪಟ್ಟಣಕ್ಕೆ, ಅಯೋಧ್ಯಾಭಿದಾಂ= ಅಯೋಧ್ಯೆ ಎಂಬ ಹೆಸರನ್ನು, ಪ್ರಾದಾತ್= ಕೊಟ್ಟಿತ್ತೋ, ತತ್= ಆ ಕಾರಣದಿಂದ, ದೇವಾನಾಂ= ಮುಕ್ತ ದೇವತೆಗಳ, ಪೂಃ= ಪಟ್ಟಣವು, ಅಯೋಧ್ಯಾ= ಅಯೋಧ್ಯಾ ಎಂಬ ಹೆಸರುಳ್ಳದ್ದು, ಇತಿ= ಎಂಬ ಕಾರಣದಿಂದ, ಸಾ ಪುರೀ= ಆ ಪಟ್ಟಣವು, ವಿಷ್ಣೋರೇವ= ವಿಷ್ಣುವಿನ ಪಟ್ಟಣವೇ ಆಗಿದೆ.

**ಅನುವಾದ – ಮುಕ್ತದೇವತೆಗಳ ಪಟ್ಟಣಕ್ಕೆ ಅಯೋಧ್ಯೆ ಎಂಬ ಹೆಸರಿದೆ ಎಂಬುದು ಪ್ರಸಿದ್ಧವಾದುದು. ಇದೇ ಶ್ರುತಿಯು ಹಿಂದಿನ ಭಾಗದಲ್ಲಿ ಯಾವ ಕಾರಣದಿಂದ ಆ ಪಟ್ಟಣಕ್ಕೆ ಅಯೋಧ್ಯೆ ಎಂಬ ಹೆಸರನ್ನು ನೀಡಿದೆಯೋ ಆ ಕಾರಣದಿಂದ ಅದು ವಿಷ್ಣುವಿನದೇ ಪಟ್ಟಣವೆಂದು ಸಿದ್ಧವಾಗುತ್ತದೆ.**

**ಭಾವವಿಲಾಸಿನೀ–** ಏತಚ್ಛ್ರುತ್ಯುಕ್ತಾಮೃತಪುರ್ಯಾ ವಿಷ್ಣುಪುರೀತ್ವೇ ಜ್ಞಾಪಕದ್ವಯಮಾಹ – **ದೇವಾನಾಮಿತಿ** ॥ ದೇವಾನಾಂ ಮುಕ್ತದೇವಾನಾಂ ಪುರಃಪುರ್ಯಾಃ । ತಸ್ಯಾಃ ''ಯೋ ವೈ ತಾಮಿ''ತಿ ಶ್ರುತ್ಯುಕ್ತಾಯಾಃ । ಪೂರ್ವಂ ಯೋವೈತಾಮಿತಿ ವಾಕ್ಯಾತ್ ಪೂರ್ವಭಾಗೇ ॥೧೭೪॥

**ನಾನಾಜನಪದಾಕೀರ್ಣಂ ವೈಕುಂಠಂ ತದ್ಧರೇಃ ಪದಮ್ ।**
**ತನ್ಮಧ್ಯೇ ನಗರೀ ದಿವ್ಯಾ ಸಾಽಯೋಧ್ಯೇತಿ ಪ್ರಕೀರ್ತಿತಾ ।**
**ಇತಿ ಪಾದ್ಮಸ್ಯ ವಚನಾದ್ ಯದಯೋಧ್ಯಾ ಹರೇಃ ಪುರೀ ॥ ೧೭೫ ॥**

**ಅರ್ಥ –** ನಾನಾಜನಪದಾಕೀರ್ಣಂ= ನಾನಾಜನಸಮೂಹಗಳಿಂದ ತುಂಬಿರುವ, ತದ್ವೈಕುಂಠಂ= ಆ ವೈಕುಂಠವು, ಹರೇಃ ಪದಂ= ಹರಿಯ ಸ್ಥಾನವಾಗಿದೆ, ತನ್ಮಧ್ಯೇ= ಆ ವೈಕುಂಠ ಪಟ್ಟಣದ ಮಧ್ಯದಲ್ಲಿ, ದಿವ್ಯಾ= ದಿವ್ಯವಾದ, ನಗರೀ= ನಗರವಿದೆ, ಸಾ= ಆ ನಗರಿಯು, ಅಯೋಧ್ಯಾ ಇತಿ= ಅಯೋಧ್ಯೆ ಎಂದು, ಪ್ರಕೀರ್ತಿತಾ= ಕರೆಯಲ್ಪಡುತ್ತದೆ, ಇತಿ= ಈ ರೀತಿಯಾದ, ಪಾದ್ಮಸ್ಯ ವಚನಾತ್= ಪಾದ್ಮ ಪುರಾಣದ ವಚನವಿರುವುದರಿಂದ, ಯತ್= ಯಾವ ಕಾರಣದಿಂದ, ಅಯೋಧ್ಯಾ= ಅಯೋಧ್ಯೆಯು, ಹರೇಃ ಪುರೀ= ಹರಿಯ ಪಟ್ಟಣವಾಗಿದೆಯೋ (ಆದ್ದರಿಂದ ಇಲ್ಲಿ ಹೇಳಿದ ವೈಕುಂಠವೂ ಸಹ ಹರಿಯ ಪಟ್ಟಣವೇ ಆಗಿದೆ).

**ಅನುವಾದ** – ನಾನಾಜನಸಮೂಹದಿಂದ ಕೂಡಿರುವ ಆ ವೈಕುಂಠವು ಹರಿಯ ವಾಸಸ್ಥಾನವಾಗಿದೆ. ಆ ವೈಕುಂಠಲೋಕದ ಮಧ್ಯದಲ್ಲಿ ದಿವ್ಯವಾದ ಅಯೋಧ್ಯೆ ಎಂಬ ಪಟ್ಟಣವಿದೆ ಎಂದು ಪಾದ್ಮಪುರಾಣವಚನವು ಹರಿಯ ಪಟ್ಟಣವನ್ನು ಅಯೋಧ್ಯೆ ಎಂದು ಕರೆದಿರುವುದರಿಂದ ಇಲ್ಲಿಯೂ ಸಹ ವೈಕುಂಠವೇ ಅಂತಹ ಲೋಕವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಅಯೋಧ್ಯಾಭಿಧಾ ಚ ವೈಕುಂಠನಗರಾರ್ಯಾ ಏವೇತ್ಯತ್ರ ಪ್ರಮಾಣಮಾಹ – **ನಾನೇತಿ** ॥ ಸಾ ವೈಕುಂಠಮಧ್ಯನಗರೀ । ಯದ್ಯಸ್ಮಾತ್ ತಸ್ಮಾದಯೋಧ್ಯಾಪದಸ್ಯ ವೈಕುಂಠಾಂತಃ ಪುರವಾಚಕತ್ವಾತ್ । ತತ್ಪದಸಮಭಿವ್ಯಾಹೃತಾ ಅಮೃತೇನಾವೃತಾ ಪುರೀ ನಾರಾಯಣಪುರೀತಿ ಪೂರ್ವೇಣಾನ್ವಯಃ ॥ ೧೭೫ ॥

ವಿಭ್ರಾಜಮಾನಾಂ ಹರಿಣೀಮಿತಿ ಸ್ವೈವ ಶ್ರುತಿಃ ಪುನಃ ।
ಹರಿಣೀಮಾಹ ತೇನಾಪಿ ಹರೇರೇವ ಪುರೀ ಭವೇತ್ ॥ ೧೭೬ ॥

**ಅರ್ಥ** – ಸ್ವೈವ ಶ್ರುತಿಃ= ಅದೇ ವೇದವೇ, ಪುನಃ= ಮತ್ತೆ, ವಿಭ್ರಾಜಮಾನಾಂ= ಪ್ರಕಾಶಮಾನವಾದ, ಹರಿಣೀಂ= ಹರಿ ಸಂಬಂಧಿಯಾದ, ಇತಿ= ಎಂದು, ಹರಿಣೀಂ= ಹರಿಣೀ ಎಂದು, ಆಹ= ಹೇಳಿದೆ, ತೇನಾಪಿ= ಆ ಕಾರಣದಿಂದಲೂ ಸಹ ಆ ಪಟ್ಟಣವು, ಹರೇರೇವ ಪುರೀ= ಹರಿಯ ಪಟ್ಟಣವೇ, ಭವೇತ್= ಆಗುತ್ತದೆ.

**ಅನುವಾದ** – ಅದೇ ಶ್ರುತಿಯು ಸ್ವಲ್ಪ ಮುಂದಿನ ಭಾಗದಲ್ಲಿ ಆ ಪಟ್ಟಣವನ್ನು ವಿಭ್ರಾಜಮಾನಾಂ ಹರಿಣೀಂ ಎಂದು ವರ್ಣಿಸಿದೆ. ಹರಿಣೀಂ ಎಂದರೆ ಹರಿ ಸಂಬಂಧಿನಿಯಾದುದು ಎಂದು ಅರ್ಥ. ಆ ಕಾರಣದಿಂದಲೂ ಅದು ಹರಿಯ ಪಟ್ಟಣವೇ ಆಗುತ್ತದೆ.

**ಭಾವವಿಲಾಸಿನೀ**– ಸ್ವೈವ ಯೋವೈತಾಮಿತಿ ವಾಕ್ಯವತೀ ಶ್ರುತಿಃ । ಯಜುಃ ಶಾಖೈಕದೇಶರೂಪಾ । ವಿಭ್ರಾಜಮಾನಾಂ ಹರಿಣೀಂ ಯಶಸಾ ಸಂಪರೀವೃತಾಮಿತಿ ಶ್ರುತಿಃ । ಹರಿಣೀಂ ಹರೇರಿಯಮಿತಿ ವ್ಯುತ್ಪತ್ತ್ಯಾ ಹರಿಣೀಶಬ್ದವಾಚ್ಯಾ । ತೇನ ಹರಿಣೀಶಬ್ದೇನ ॥ ೧೭೬ ॥

ಪುರೀಂ ಹಿರಣ್ಮಯೀಂ ಬ್ರಹ್ಮಾ ವಿವೇಶೇತಿ ಯತಃ ಶ್ರುತಿಃ ।
ಬ್ರಹ್ಮಣೋಽಂತೇ ಪ್ರವೇಶಾರ್ಹಾಮಾಹ ತೇನಾಪಿ ಸಾ ಪುರೀ ॥ ೧೭೭ ॥

ವಿಷ್ಣೋರೇವ ಪುರೀ ಬ್ರಹ್ಮನಾಮ್ನಸ್ತಸ್ಯೈವ ಪೂಸ್ತ್ವತಃ ।
ಕ್ವಚಿದ್ ಬ್ರಹ್ಮಪುರೀತ್ಯುಕ್ತಾ ಸೈವ ಬ್ರಹ್ಮಾ ವಿಶೇದ್ಧಿ ಯಾಂ ॥ ೧೭೮ ॥

**ಅರ್ಥ** – ಯತಃ= ಯಾವ ಕಾರಣದಿಂದ, ಶ್ರುತಿಃ= ಶ್ರುತಿಯು, ಬ್ರಹ್ಮಾ= ಬ್ರಹ್ಮದೇವರು, ಹಿರಣ್ಮಯೀಂ ಪುರೀಂ= ಸುವರ್ಣಮಯವಾದ ಪಟ್ಟಣವನ್ನು, ವಿವೇಶ= ಪ್ರವೇಶಿಸಿದರು,

ಇತಿ= ಎಂದು, ಅಂತೇ= ದ್ವಿಪರಾರ್ಧದ ಕೊನೆಯಲ್ಲಿ, ಬ್ರಹ್ಮಣಃ= ಚತುರ್ಮುಖ ಬ್ರಹ್ಮದೇವರ, ಪ್ರವೇಶಾರ್ಹಾಂ= ಪ್ರವೇಶಕ್ಕೆ ಯೋಗ್ಯವೆಂದು, ಆಹ= ಹೇಳಿದೆಯೋ, ತೇನಾಪಿ= ಆ ಕಾರಣದಿಂದಲೂ ಕೂಡ, ಸಾ ಪುರೀ= ಆ ಪಟ್ಟಣವು, ವಿಷ್ಣೋರೇವ ಪುರೀ= ವಿಷ್ಣುವಿನ ಪಟ್ಟಣವೇ ಆಗಿದೆ, ಬ್ರಹ್ಮನಾಮ್ನಃ= ಬ್ರಹ್ಮಶಬ್ದದ ಮುಖ್ಯಾರ್ಥವಾದ, ತಸ್ಯೈವ= ಆ ವಿಷ್ಣುವಿನ, ಪೂಃ= ಪಟ್ಟಣವಾಗಿದೆ, ಅತಃ= ಆದ್ದರಿಂದ, ಸಾ ಏವ= ಆ ಪಟ್ಟಣವೇ, ಕ್ವಚಿತ್= ಕೆಲವೊಮ್ಮೆ, ಬ್ರಹ್ಮಪುರೀ= ಬ್ರಹ್ಮನ ಪುರವು, ಇತಿ= ಎಂದು, ಉಕ್ತಾ= ಹೇಳಲ್ಪಟ್ಟಿದೆ, ಯಾಂ= ಯಾವ ಪಟ್ಟಣವನ್ನು, ಬ್ರಹ್ಮಾ= ಚತುರ್ಮುಖಬ್ರಹ್ಮನು, ವಿಶೇದ್ಧಿ= ಪ್ರವೇಶಿಸುತ್ತಾನೆಯೋ.

**ಅನುವಾದ –** ಶ್ರುತಿಯು ಸುವರ್ಣಮಯವಾದ ಪಟ್ಟಣವನ್ನು ಚತುರ್ಮುಖ ಬ್ರಹ್ಮನು ಪ್ರವೇಶಿಸಿದನು ಎಂದು ದ್ವಿಪರಾರ್ಧಾವಸಾನದಲ್ಲಿ ಆ ಪಟ್ಟಣಕ್ಕೆ ಬ್ರಹ್ಮಪ್ರವೇಶ ಯೋಗ್ಯತ್ವವನ್ನು ಹೇಳಿರುವುದರಿಂದಲೂ ಆ ಪಟ್ಟಣವು ವಿಷ್ಣುಲೋಕವಾದ ವೈಕುಂಠವೇ ಆಗಿದೆ. ಆ ಪಟ್ಟಣವು ಬ್ರಹ್ಮಶಬ್ದವಾಚ್ಯನಾದ ವಿಷ್ಣುವಿನ ಪಟ್ಟಣವಾದ್ದರಿಂದ ಕೆಲವೊಮ್ಮೆ ಅದು ಬ್ರಹ್ಮಪುರಿ ಎಂದೂ ಕರೆಯಲ್ಪಡುತ್ತದೆ. ಚತುರ್ಮುಖಬ್ರಹ್ಮನು ಆ ಪಟ್ಟಣವನ್ನೇ ಪ್ರವೇಶಿಸುತ್ತಾನೆ.

**ಭಾವವಿಲಾಸಿನೀ–** ಅಂತೇ ದ್ವಿಪರಾರ್ಧಾವಸಾನಕಾಲೇ । ತೇನ ಮುಕ್ತಬ್ರಹ್ಮಪ್ರವೇಶ-ಯೋಗ್ಯತ್ವೇನ ॥ ೧೭೭ ॥

ಅಧುನಾ ಛಂದೋಗೋಪನಿಷತ್ ಪ್ರೋಕ್ತಬ್ರಹ್ಮಪೂಃ ಶಬ್ದಾರ್ಥಮಾಹ – **ವಿಷ್ಣೋರಿತಿ ॥ ಕ್ವಚಿತ್** ಯೋವೈತಾಮಿತ್ಯತ್ರ ಬ್ರಹ್ಮಣಃ ಪುರೀಮಿತ್ಯುಕ್ತಾ । ತತ್ರತ್ಯಬ್ರಹ್ಮಪುರೀಶಬ್ದಸ್ಯಾತ್ರಾ ವ್ಯಾಖ್ಯಾನೇ ನಿಮಿತ್ತಂ ಸೂಚಯತಿ – **ಬ್ರಹ್ಮಾ- ವಿಶೇದ್ಧಿ ಯಾಮಿತಿ ॥** ಅತ್ರ ಬ್ರಹ್ಮಪ್ರವೇಶಯೋಗ್ಯತ್ವಕಥನಾತ್ ತತ್ರಾಪಿ ಬ್ರಹ್ಮಪುರೀ ವಿಷ್ಣುಪುರ್ಯೇವ ಭವೇತ್ । ನಹಿ ಪೂರ್ವಮಪಿಸತ್ಯಲೋಕಾಖ್ಯಬ್ರಹ್ಮಪುರೇ ಸ್ಥಿತಸ್ಯ ಸತ್ಯಲೋಕಾಖ್ಯಬ್ರಹ್ಮಪುರೀಪ್ರವೇಶ ಏವ ಫಲಮ್ । ಅಥವಾ ಬ್ರಹ್ಮಣಃ ಪ್ರವೇಶ-ಯೋಗ್ಯತ್ವಾತ್ ವೈಕುಂಠಪುರ್ಯೇವ ಬ್ರಹ್ಮಪುರೀತಿ ವೈಕುಂಠ ಏವ ಗಜಪ್ರವೇಶಯೋಗ್ಯ-ಶಾಲಾಯಾಂ ಗಜಶಾಲಶಬ್ದವತ್ ಬ್ರಹ್ಮಪುರೀ ಶಬ್ದಪ್ರಯೋಗಸ್ಯ ನಿಮಿತ್ತಾಂತರ ಸೂಚನಾರ್ಥ-ಮತ್ರ ವ್ಯಾಖ್ಯಾನಮ್ ॥ ೧೭೮ ॥

**ವಿವರಣೆ –** ಯಜುಃಶಾಖೆಯ ಮಂತ್ರದಲ್ಲಿ ವಿಭ್ರಾಜಮಾನಾಂ ಹರಿಣೀಂ ಎಂದು ಹೇಳಲ್ಪಟ್ಟಿರುವ ಪಟ್ಟಣವೇ ಛಾಂದೋಗ್ಯೋಪನಿಷತ್ತಿನಲ್ಲಿ ಬ್ರಹ್ಮಪುರೀ ಎಂದು ಹೇಳಲ್ಪಟ್ಟಿದೆ. ಆ ಪಟ್ಟಣವನ್ನು ಚತುರ್ಮುಖಬ್ರಹ್ಮನು ಪ್ರವೇಶಿಸುತ್ತಾನೆ. ಅದು ಸತ್ಯಲೋಕವಲ್ಲ. ಏಕೆಂದರೆ ಮೊದಲೇ ಸತ್ಯಲೋಕವನ್ನು ಪ್ರವೇಶಿಸಿ ಅಲ್ಲಿಯೇ ವಾಸವಾಗಿರುವ ಬ್ರಹ್ಮನಿಗೆ ಇನ್ನೊಮ್ಮೆ ಸತ್ಯಲೋಕಪ್ರವೇಶವನ್ನು ಹೇಳುವುದು ಅನುಚಿತವಾಗುತ್ತದೆ. ಆದ್ದರಿಂದ ಆ ಲೋಕವನ್ನು ವೈಕುಂಠಲೋಕವೆಂದೇ ಹೇಳಬೇಕು. ಅಥವಾ ಬ್ರಹ್ಮನೆಂದರೆ ನಾರಾಯಣನೆಂದೂ ಅರ್ಥವನ್ನು ಇಟ್ಟುಕೊಳ್ಳಬಹುದು. ಗಜವು

ವಾಸಿಸುವ ಶಾಲೆಯನ್ನು ಗಜಶಾಲೆ ಎಂದು ಕರೆದಂತೆ ಪರಬ್ರಹ್ಮನು ವಾಸಿಸುವ ಸ್ಥಾನವನ್ನು ಬ್ರಹ್ಮಪುರೀ ಎಂದೂ ಕರೆಯಬಹುದು. ಅಂತೂ ಆ ಪಟ್ಟಣವು ಸತ್ಯಲೋಕವಲ್ಲ, ವೈಕುಂಠವೆಂಬ ಪಟ್ಟಣವೇ ಆಗಿದೆ ಎಂದು ಅಭಿಪ್ರಾಯ.

**ಯೇ ತು ಲೋಕಾಂತರಪ್ರಾಪ್ತಿಂ ಮೋಕ್ಷಂ ನಾಚಕ್ಷತೇ ಬುಧಾಃ ।**
**ತೇಷಾಂ ವೃಥಾಽರ್ಚಿರಾದ್ಯಧ್ವನೋರ್ಧ್ವೋರ್ಧ್ವಗಮನಂ ಭವೇತ್ ॥ ೧೭೯ ॥**

**ಅರ್ಥ** – ಯೇ ತು= ಯಾವ, ಬುಧಾಃ= ವಿದ್ವಾಂಸರು, ಲೋಕಾಂತರ ಪ್ರಾಪ್ತಿಂ= ಲೋಕಾಂತರ ಪ್ರಾಪ್ತಿಯನ್ನು, ಮೋಕ್ಷಂ= ಮೋಕ್ಷವೆಂದು, ನಾಚಕ್ಷತೇ= ಹೇಳುವುದಿಲ್ಲವೋ, ತೇಷಾಂ= ಅವರಿಗೆ, ಅರ್ಚಿರಾದ್ಯಧ್ವನಾ= ಅರ್ಚಿರಾದಿ ಮಾರ್ಗದಿಂದ, ಊರ್ಧ್ವೋರ್ಧ್ವಗಮನಂ= ಮೇಲೆ ಮೇಲೆ ಹೋಗುವುದು, ವೃಥಾ ಭವೇತ್= ವ್ಯರ್ಥವಾಗುತ್ತದೆ.

**ಅನುವಾದ – ಯಾವ ವಿದ್ವಾಂಸರು ಲೋಕಾಂತರಪ್ರಾಪ್ತಿಯನ್ನು ಮೋಕ್ಷವೆಂದು ಹೇಳುವುದಿಲ್ಲವೋ ಅವರಿಗೆ ಅರ್ಚಿರಾದಿಮಾರ್ಗದಿಂದ ಮೇಲ್ಮುಖ ಮೇಲ್ಮುಖವಾಗಿ ಹೋಗುವುದು ವ್ಯರ್ಥವಾಗುತ್ತದೆ.**

**ಭಾವವಿಲಾಸಿನೀ–** ಊರ್ಧ್ವೋರ್ಧ್ವಲೋಕಗಮನರೂಪಾರ್ಚಿರಾದಿಮಾರ್ಗ ಪರ್ಯಾಲೋಚನಯಾಪಿ ವೈಕುಂಠಪುರ್ಯೇವ ಮುಕ್ತಿಪುರೀತ್ಯಾಹ – **ಯೇತ್ವಿತಿ** ॥ ೧೭೯ ॥

ಬ್ರಹ್ಮಜ್ಞಾನೇನ ಸರ್ವಸ್ಯ ನಾಶೇ ಬ್ರಹ್ಮಾಭವತ್ ಸ್ವಯಂ ।
ಕ್ವ ಗಚ್ಛೇದಪರಿಚ್ಛಿನ್ನೋ ಮಾರ್ಗಃ ಕಸ್ಯಾಪವರ್ಗದಃ ॥ ೧೮೦ ॥

**ಅರ್ಥ** – ಬ್ರಹ್ಮಜ್ಞಾನೇನ= ಬ್ರಹ್ಮಜ್ಞಾನದಿಂದ, ಸರ್ವಸ್ಯ ನಾಶೇ= ಎಲ್ಲದಕ್ಕೂ ನಿವೃತ್ತಿ ಉಂಟಾದರೆ, ಸ್ವಯಂ= ಆ ಜೀವನೇ ತಾನು ಇದ್ದಲ್ಲಿಯೇ, ಬ್ರಹ್ಮಾಭವತ್= ಬ್ರಹ್ಮನಾಗುತ್ತಾನೆ, ಅಪರಿಚ್ಛಿನ್ನಃ= ಪರಿಚ್ಛೇದರಹಿತನಾದ ಅವನು, ಕ್ವ ಗಚ್ಛೇತ್= ಎಲ್ಲಿಗೆ ಹೋಗಲು ಸಾಧ್ಯ? ಮಾರ್ಗಃ= ಅರ್ಚಿರಾದಿಮಾರ್ಗವು, ಕಸ್ಯ= ಯಾವನಿಗೆ, ಅಪವರ್ಗದಃ= ಮೋಕ್ಷವನ್ನು ಉಂಟು ಮಾಡುತ್ತದೆ?

**ಅನುವಾದ – ಬ್ರಹ್ಮಜ್ಞಾನದಿಂದ ಸರ್ವವೂ ನಿವೃತ್ತವಾದರೆ ಜೀವನು ತಾನು ಇದ್ದಲ್ಲಿಯೇ ಬ್ರಹ್ಮನಾಗುತ್ತಾನೆ. ಅಪರಿಚ್ಛಿನ್ನನಾದ ಅವನು ಎಲ್ಲಿಗೆ ಹೋಗಲು ಸಾಧ್ಯ? ಅರ್ಚಿರಾದಿಮಾರ್ಗವು ಯಾರಿಗೆ ಮೋಕ್ಷವನ್ನು ಕೊಡುತ್ತದೆ?**

**ಭಾವವಿಲಾಸಿನೀ–** ಅಭವತ್ ಯತ್ರ ತಿಷ್ಠತಿ ತತ್ರೈವಾಭವದಿತ್ಯರ್ಥಃ ॥ ೧೮೦ ॥

**ಅತೋ ವೈಕುಂಠಾದಿಲೋಕಪ್ರಾಪ್ತಿರ್ಮುಕ್ತಿರ್ವಿವೇಕಿನಾಂ ।**
**ಅನ್ಯಾ ತು ಮುಕ್ತಿರಾಮ್ನಾಯನ್ಯಾಯಚ್ಛೇದಾಯ ಕೇವಲಂ ॥ ೧೮೧ ॥**

**ಅರ್ಥ** – ಅತಃ= ಆದ್ದರಿಂದ, ವಿವೇಕಿನಾಂ= ವಿವೇಕವುಳ್ಳವರಿಗೆ, ವೈಕುಂಠಾದಿ ಲೋಕಪ್ರಾಪ್ತಿಃ= ವೈಕುಂಠಾದಿ ಲೋಕಪ್ರಾಪ್ತಿಯೇ, ಮುಕ್ತಿಃ= ಪರಮ ಮೋಕ್ಷ ರೂಪವಾದುದು, ಅನ್ಯಾ ತು= ಇದಕ್ಕಿಂತ ಬೇರೆಯಾದ, ಮುಕ್ತಿಃ= ಮುಕ್ತಿಯ ಅಂಗೀಕಾರವು, ಕೇವಲಂ= ಕೇವಲ, ಆಮ್ನಾಯನ್ಯಾಯಚ್ಛೇದಾಯ= ವೇದದ ನ್ಯಾಯವನ್ನು ನಾಶಮಾಡುವುದಕ್ಕಾಗಿ ಇದೆ.

**ಅನುವಾದ** – ಅರ್ಚಿರಾದಿಲೋಕದ ಆರೋಹಣವನ್ನು ಮೋಕ್ಷಮಾರ್ಗವೆಂದು ಹೇಳಿರುವುದರಿಂದ ವಿವೇಕವುಳ್ಳವರಿಗೆ ವೈಕುಂಠಾದಿಲೋಕಪ್ರಾಪ್ತಿಯೇ ಪರಮ ಮೋಕ್ಷರೂಪವಾದುದು. ಅದನ್ನು ಬಿಟ್ಟು ಬೇರೆ ಮೋಕ್ಷವು ಅಂಗೀಕೃತವಾದರೆ ಅದು ಕೇವಲ ವೇದೋಕ್ತನ್ಯಾಯಗಳನ್ನು ನಾಶಮಾಡುವುದೇ ಆಗಿದೆ.

**ಭಾವವಿಲಾಸಿನೀ**– ಅತಃ ಅರ್ಚಿರಾದಿಲೋಕಾರೋಹಸ್ಯ ಮೋಕ್ಷಮಾರ್ಗತ್ವಕಥನಾತ್ ॥ ೧೮೧॥

**ಖಗೇಂದ್ರಧ್ವಜಪಾದಾಬ್ಜಯುಗಮೂಲನಿಷೇವಣಂ ।**
**ಯತೋ ಭಾಗವತೇ ಸ್ಪಷ್ಟಮಪವರ್ಗಾಖ್ಯಮೀರಿತಂ ॥ ೧೮೨ ॥**

**ಅತೋ ವೈಕುಂಠಲೋಕಸ್ಥಮುಕುಂದಪದಸನ್ನಿಧೌ ।**
**ಸ್ಥಿತಿರೇವ ಮುಮುಕ್ಷೂಣಾಂ ಮೋಕ್ಷೋ ವ್ಯಾಸಾನುಶಾಸನಾತ್ ॥ ೧೮೩ ॥**

**ಅರ್ಥ** – ಯತಃ= ಯಾವ ಕಾರಣದಿಂದ, ಖಗೇಂದ್ರಧ್ವಜಪಾದಾಬ್ಜಯುಗಮೂಲ ನಿಷೇವಣಂ= ಗರುಡಧ್ವಜನಾದ ವಿಷ್ಣುವಿನ ಪಾದಕಮಲಯುಗಳಗಳ ಮೂಲದ ಸೇವೆಯೇ, ಭಾಗವತೇ= ಭಾಗವತದಲ್ಲಿ, ಸ್ಪಷ್ಟಂ= ಸ್ಪಷ್ಟವಾಗಿ, ಅಪವರ್ಗಾಖ್ಯಂ= ಮೋಕ್ಷವೆಂಬ ಹೆಸರನ್ನು ಹೊಂದಿದೆ ಎಂದು, ಈರಿತಂ= ಹೇಳಲ್ಪಟ್ಟಿದೆಯೋ, ಅತಃ= ಆ ಕಾರಣದಿಂದ, ಮುಮುಕ್ಷೂಣಾಂ= ಮುಮುಕ್ಷುಗಳಿಗೆ, ವ್ಯಾಸಾನುಶಾಸನಾತ್= ವೇದವ್ಯಾಸರ ಅನುಶಾಸನದಂತೆ, ವೈಕುಂಠಲೋಕಸ್ಥಮುಕುಂದಪದಸನ್ನಿಧೌ= ವೈಕುಂಠ ಲೋಕದಲ್ಲಿರುವ ಮುಕುಂದನ ಪಾದದ ಸಮೀಪದಲ್ಲಿ, ಸ್ಥಿತಿರೇವ= ಇರುವುದೇ, ಮೋಕ್ಷಃ= ಪರಮ ಮೋಕ್ಷವೆಂದು ಸಿದ್ಧವಾಗುತ್ತದೆ.

**ಅನುವಾದ** – ಯಾವ ಕಾರಣದಿಂದ ಭಾಗವತದಲ್ಲಿ ಸ್ಪಷ್ಟವಾಗಿ ಗರುಡಧ್ವಜನ ಪಾದಕಮಲಗಳ ಸೇವೆಯೇ ಮೋಕ್ಷವೆಂದು ಕರೆಯಲ್ಪಡುತ್ತದೆ ಎಂದು ಹೇಳಲ್ಪಟ್ಟಿದೆಯೋ ಆ ಕಾರಣದಿಂದ ವೇದವ್ಯಾಸರ ಅನುಶಾಸನಕ್ಕೆ ಅನುಸಾರವಾಗಿ

ಮುಮುಕ್ಷುಗಳಿಗೆ ವೈಕುಂಠಲೋಕದಲ್ಲಿ ಮುಕುಂದನ ಪಾದದ ಸಮೀಪದಲ್ಲಿ ಇರುವುದೇ ಪರಮ ಮೋಕ್ಷರೂಪವಾದುದು ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅಧುನಾ ''ಸ ವೈ ಮಹಾಭಾಗವತಃ ಪರೀಕ್ಷಿದ್ಯೇನಾಪವರ್ಗಾಖ್ಯಮದಭ್ರಬುದ್ಧಿಃ । ಜ್ಞಾನೇನ ವೈಯಾಸಿಕಿಶಬ್ದಿತೇನ ಭೇಜೇ ಖಗೇಂದ್ರಧ್ವಜಪಾದಮೂಲಮಿ''ತಿ ಮೋಕ್ಷಪ್ರತಿಪಾದಕಭಾಗವತವಾಕ್ಯಪರ್ಯಾಲೋಚನಯಾಪಿ ವೈಕುಂಠಸ್ಥನಾರಾಯಣಚರಣಾರವಿಂದ-ಸಮೀಪಪ್ರಾಪ್ತಿರೇವ ಮುಕ್ತಿರಿತ್ಯಾಹ – **ಖಗೇಂದ್ರೇತಿ** ॥ ಸ್ವಮಾತುರ್ಗರ್ಭೇ ಸ್ವರಕ್ಷಣಾಯ ಪರ್ಯಾವರ್ತಮಾನಂ ಕೃಷ್ಣಂ ಪರಿತಃ ಈಕ್ಷತ ಇತಿ ಪರೀಕ್ಷಿತ್ । ಉತ್ಪತ್ತಿಸಮಯ ಏವಾಪರೋಕ್ಷಜ್ಞಾನಿತಯಾ ಜೀವನ್ಮುಕ್ತ ಇತಿ ಭಾವಃ। ಇದಂ ಚ ವಿಶೇಷಣಮ್ ಅಸ್ಯ ಫಲತಯಾ ಕಥ್ಯಮಾನಾ ಮುಕ್ತಿಃ ಪರಮಮುಕ್ತಿರಿತಿ ಸೂಚನಾರ್ಥಮ್ । ವಿಷ್ಣುಭಕ್ತಸ್ಯೈವ ಬ್ರಹ್ಮಜ್ಞಾನೇಽಧಿಕಾರ ಇತಿ ಸೂಚನಾಯ ಮಹಾಭಾಗವತ ಇತಿ ವಿಶೇಷಣಮ್ । ತಸ್ಯ ಚ ಶ್ರೋತೃತ್ವಸಂಪತ್ತಿಸೂಚನಾಯಾದಭ್ರಬುದ್ಧಿರಿತ್ಯುಕ್ತಮ್ । ವೈಯಾಸಿಕಿಶಬ್ದಿತೇನ ವ್ಯಾಸಪುತ್ರಶುಕನಿರೂಪಿತೇನ । ಜ್ಞಾನೋಪದೇಷ್ಟುಗುರೋರಪಿ ವಿಷ್ಣುರೂಪವ್ಯಾಸಪುತ್ರತ್ವೇನ ವೈಷ್ಣವತ್ವ ಸೂಚನಾಯ ವಕ್ತೃಪ್ರಸಕ್ತಿಸೂಚನಾಯ ಚ ವೈಯಾಸಿಕಿಪದವಮ್ । ಜ್ಞಾನಂ ಚ ವೈಷ್ಣವಪುರಾಣೇನ ತದುಪಬೃಂಹಿತವೇದೇನ ಚೋತ್ಪನ್ನಂ ವಿಷ್ಣೋಃ ಸರ್ವೋತ್ತಮತ್ವವಿಷಯಮೇವ ಭವೇದಿತಿ ಸೂಚನಾಯ ಯೇನೇತ್ಯುಕ್ತಮ್ । ಶುಕಮುಖಾತ್ ಭಾಗವತಶ್ರವಣಜನಿತೇನೇತ್ಯರ್ಥಃ । ಹರಿಚರಣಾವಿಂದಪ್ರಾಪ್ತ್ಯತಿರಿಕ್ತಮೋಕ್ಷಾಭಾವಸೂಚನಾಯ ತಸ್ಯಾ ಏವ ಮೋಕ್ಷತ್ವಸೂಚನಾಯ ಚ ಅಪವರ್ಗಾಖ್ಯಮಿತಿಫಲವಿಶೇಷಣಮ್ । ಉಪಚಾರೇಣಾತ್ರಾಪವರ್ಗಶಬ್ದಪ್ರವೃತ್ತಿರಿತಿಶಂಕಾನಿರಾಸಾಯ ಆಖ್ಯಾಮಿತ್ಯುಕ್ತಮ್ । ''ಆಖ್ಯಾಹ್ವೇ ಅಭಿಧಾನಂ ಚ ನಾಮಧೇಯಂ ಚ ನಾಮಚೇ''ತಿಲಿಂಗಾನುಶಾಸನಾತ್ ''ಖ್ಯಾಪ್ರಕಥನ'' ಇತಿ ಧಾತುವ್ಯಾಖ್ಯಾನಾಚ್ಚಾಯಮೇವ ಮುಖ್ಯಾಪವರ್ಗ ಇತಿ ಭಾವಃ। ಮುಕ್ತಿದಶಾಯಾಮಪಿ ಹರೇಃ ಸಾಕಾರತ್ವಂ ಪಕ್ಷ್ಯಾದಿಜೀವಾನಾಂ ಚ ಮುಕ್ತೌವಿದ್ಯಮಾನತ್ವಂ ತತ್ ತಾರತಮ್ಯಂ ಮುಕ್ತಾವಪಿ ಚೇತನತಾತಿರಿಕ್ತ ಶುದ್ಧಜಡ ಸದ್ಭಾವಂ ಸೇವ್ಯಸೇವಕಭಾವೇನ ತತ್ರಾಪಿ ಮುಕ್ತ ಪರಮಾತ್ಮನೋರ್ಭೇದಂ ಚ ಸೂಚಯಿತುಂ ''ಖಗೇಂದ್ರಧ್ವಜಪಾದಮೂಲಂ ಭೇಜ'' ಇತಿ ಚೋಕ್ತಮ್ । ಅನ್ಯಥಾ ಪದೇ ಇತ್ಯವಕ್ಷ್ಯತ್ । ಭೇಜ ಇತ್ಯತೀತೋಕ್ತಿಸ್ತು ''ಏಷ್ಯತ್ವನಿಶ್ಚಿತಂ ಯತ್ಸ್ಯಾದತೀತತ್ವೇನ ಭಣ್ಯತ'' ಇತಿ ನ್ಯಾಯಾತ್ । ಇದಂ ಚೈತಾದೃಶಜ್ಞಾನಸ್ಯಫಲಸಂಶಯನಿರಾಸಾರ್ಥಮ್ । ಅತೀತಕಲ್ಪೇಽಪಿ ಮುಕ್ತಪರೀಕ್ಷಿತ್ ಸಂಗ್ರಹಾರ್ಥಂ ವಾ ಭೇಜ ಇತ್ಯುಕ್ತಮ್। ಯೇನೇತ್ಯಸ್ಯ ತದಹಂ ತೇಽಭಿಧಾಸ್ಯಮೀತ್ಯನೇನಾನ್ವಯಃ ॥ ೧೮೨-೧೮೩ ॥

**ವಿವರಣೆ** – ಈಗ 'ಸವೈ ಮಹಾಭಾಗವತಃ ಪರೀಕ್ಷಿತ್ ಯೇನಾಪವರ್ಗಾಖ್ಯಮದಭ್ರಬುದ್ಧಿಃ । ಜ್ಞಾನೇನ ವೈಯಾಸಕಿಶಬ್ದಿತೇನ ಭೇಜೇ ಖಗೇಂದ್ರಧ್ವಜಪಾದಮೂಲಂ' ಎಂದು ಮೋಕ್ಷವನ್ನು ಪ್ರತಿಪಾದಿಸುವ ಭಾಗವತ ವಾಕ್ಯದ ವಿಮರ್ಶೆಯಿಂದಲೂ ವೈಕುಂಠದಲ್ಲಿರುವ ನಾರಾಯಣನ ಪಾದಕಮಲಗಳ ಸಮೀಪಪ್ರಾಪ್ತಿಯೇ ಮೋಕ್ಷವೆಂದು

ಸಮರ್ಥನೆ ಮಾಡುತ್ತಾರೆ. ತನ್ನ ತಾಯಿಯ ಗರ್ಭದಲ್ಲಿ ತನ್ನನ್ನು ರಕ್ಷಣೆ ಮಾಡಲು ಸುತ್ತಲೂ ಸುತ್ತುತ್ತಿರುವ ಕೃಷ್ಣನನ್ನು ಯಾವಾಗಲೂ ನೋಡುತ್ತಿದ್ದುದ್ದರಿಂದ ಪರೀಕ್ಷಿತನಿಗೆ ಪರೀಕ್ಷಿತ್ ಎಂದು ಹೆಸರು. ಈ ವಿಶೇಷಣದಿಂದ ಅವನು ಜನ್ಮಸಮಯದಲ್ಲಿಯೇ ಅಪರೋಕ್ಷ ಜ್ಞಾನಿಯಾದುದರಿಂದ ಜೀವನ್ಮುಕ್ತನೆಂದು ಸೂಚಿಸುತ್ತಾರೆ. ಭಾಗವತ ಶ್ರವಣದ ಫಲವಾದ ಮೋಕ್ಷವು ಪರಮ ಮೋಕ್ಷವೆಂದು ತಿಳಿಸಲು ಈ ವಿಶೇಷಣವು ಉಪಯುಕ್ತವಾಗುತ್ತದೆ. ಜೀವನ್ಮುಕ್ತನು ಮಾಡುವ ಸಾಧನೆಗೆ ಜೀವನ್ಮುಕ್ತಿಯೇ ಫಲವಲ್ಲವಷ್ಟೆ. ಪರಮ ಮೋಕ್ಷವೇ ಫಲವಾಗಬೇಕಷ್ಟೆ? ವಿಷ್ಣುಭಕ್ತನಾದವನಿಗೇ ಬ್ರಹ್ಮಜ್ಞಾನದಲ್ಲಿ ಅಧಿಕಾರವೆಂದು ತಿಳಿಸಲು 'ಮಹಾಭಾಗವತಃ' ಎಂಬ ವಿಶೇಷಣವನ್ನು ಕೊಟ್ಟಿದ್ದಾರೆ. ಅವನಲ್ಲಿ ಶ್ರೋತೃವಿನಲ್ಲಿ ಇರಬೇಕಾದ ಎಲ್ಲ ಗುಣಗಳು ಇವೆ ಎಂದು ಸೂಚಿಸಲು ಅವನನ್ನು 'ಅದಭ್ರಬುದ್ಧಿ' ಎಂದು ಹೇಳಿದ್ದಾರೆ. ಶುಕಾಚಾರ್ಯರನ್ನು 'ವೈಯ್ಯಾಸಕಿ', ವ್ಯಾಸಪುತ್ರ ಎಂದು ಕರೆದಿರುವುದರಿಂದ ಜ್ಞಾನೋಪದೇಶವನ್ನು ಮಾಡುವ ಗುರುಗಳೂ ಸಹ ವಿಷ್ಣುವಿನ ಅವತಾರವಾದ ವ್ಯಾಸಪುತ್ರರಾದುದರಿಂದ ಅವರು ವೈಷ್ಣವರು ಆದ್ದರಿಂದ ವಕ್ತೃವಿನಲ್ಲಿ ಇರಬೇಕಾದ ಎಲ್ಲ ಗುಣಗಳು ಅವರಲ್ಲಿವೆ ಎಂದು ಸೂಚಿಸುತ್ತಾರೆ. ಜ್ಞಾನವಾದರೂ ವೈಷ್ಣವ ಪುರಾಣಗಳಿಂದ ಉಪಬೃಂಹಿತವಾದ ವೇದದಿಂದ ಉತ್ಪನ್ನವಾದ ವಿಷ್ಣುಸರ್ವೋತ್ತಮತ್ವ ಜ್ಞಾನವೇ ಮೋಕ್ಷದಾಯಕವೆಂದು ಸೂಚಿಸಲು ವೈಯ್ಯಾಸಕಿಶಬ್ದಿತೇನ ಎಂದು ಅಂತಹ ಶುಕಾಚಾರ್ಯರ ಉಪದೇಶದಿಂದ ಉತ್ಪನ್ನವಾದ ಜ್ಞಾನವೆಂದು ತಿಳಿಸಿದ್ದಾರೆ. ಹರಿಚರಣಾರವಿಂದಪ್ರಾಪ್ತಿಯೇ ಮೋಕ್ಷ. ಅದಕ್ಕಿಂತ ಅತಿರಿಕ್ತವಾದ ಮೋಕ್ಷವಿಲ್ಲವೆಂದು ಸೂಚಿಸಲು ಅಪವರ್ಗಾಖ್ಯಂ ಎಂದು ಫಲಕ್ಕೆ ವಿಶೇಷಣವನ್ನು ನೀಡಿದ್ದಾರೆ. ಆಖ್ಯಾ ಎಂದರೆ ಆ ಶಬ್ದದ ಮುಖ್ಯವಾದ ಅರ್ಥ ಎಂದು ಕೋಶಗಳಿಂದ ಸಿದ್ಧವಾಗುತ್ತದೆ. ಅಪವರ್ಗಾಖ್ಯ ಎಂದು ಹೇಳಿರುವುದರಿಂದ ಈ ಮೋಕ್ಷವು ಪರಮಮೋಕ್ಷವೇ ಹೊರತು ಅವಾಂತರ ಮೋಕ್ಷವಲ್ಲವೆಂದು ಸಿದ್ಧವಾಗುತ್ತದೆ. ಮೋಕ್ಷಾವಸ್ಥೆಯಲ್ಲಿಯೂ ಹರಿಗೆ ಸಾಕಾರತ್ವ, ಪಕ್ಷ್ಯಾದಿ ಜೀವಗಳ ಸ್ಥಿತಿ, ಅವುಗಳ ತಾರತಮ್ಯ, ಮೋಕ್ಷದಲ್ಲಿಯೂ ಚೇತನಾತಿರಿಕ್ತವಾದ ಶುದ್ಧ ಜಡದ ಸದ್ಭಾವ, ಸೇವ್ಯಸೇವಕಭಾವವಿರುವುದರಿಂದ ಅಲ್ಲಿಯೂ ಮುಕ್ತರಿಗೂ ಮತ್ತು ಪರಮಾತ್ಮನಿಗೂ ಭೇದ ಈ ಎಲ್ಲ ಪ್ರಮೇಯಗಳನ್ನು ಸೂಚಿಸಲು ಖಗೇಂದ್ರಧ್ವಜ ಪಾದಮೂಲಂ ಭೇಜೇ ಎಂದು ಹೇಳಿದ್ದಾರೆ. ಇಲ್ಲದಿದ್ದರೆ ಪೇದೇ ಎಂದಿಷ್ಟೇ ಹೇಳಬಹುದಾಗಿದ್ದಿತು. ಭೇಜೇ ಎಂಬ ಭೂತಕಾಲದ ಲಿಟ್‌ಪ್ರಯೋಗವು 'ಏಷ್ಯದ್ ವಿನಿಶ್ಚಿತಂ ಯತ್ ಸ್ಯಾದತೀತತ್ವೇನ ಭಣ್ಯತೇ' ಎಂಬ ನ್ಯಾಯದಿಂದ ಪರೀಕ್ಷಿತ್ ರಾಜನಿಗೆ ಮೋಕ್ಷವು ನಿಶ್ಚಿತ ಎಂಬ ಅಭಿಪ್ರಾಯದಿಂದ ಇದೆ. ಫಲದ ವಿಷಯದಲ್ಲಿ ಸಂಶಯವಿಲ್ಲ, ನಿಶ್ಚಯವಿದೆ ಎಂದು ತಿಳಿಸಲು ಹೀಗೆ ಪ್ರಯೋಗ ಮಾಡಿದ್ದಾರೆ. ಅಥವಾ ಹಿಂದಿನ ಕಲ್ಪದಲ್ಲಿ ಮುಕ್ತನಾದ ಪರೀಕ್ಷಿತ್‌ರಾಜನು ಪರಮಾತ್ಮನ ಪಾದವನ್ನು ಹೊಂದಿದನು ಎಂದೂ ಅರ್ಥವನ್ನು ಮಾಡಬಹುದು. ಭಾಗವತ ಶ್ಲೋಕದಲ್ಲಿರುವ ಯೇನ ಎಂಬ ಪದಕ್ಕೆ 'ತದಹಂ

ತೇ ಅಭಿಧಾಸ್ಯಾಮಿ' ಎಂದು ಮುಂದಿನ ಶ್ಲೋಕದಿಂದ ಅನ್ವಯವಿದೆ.

**ಅತೀತಕಲ್ಪಮುಕ್ತಂ ಚಾಪ್ಯೇಷಾ ವಾಗೇವ ಯದ್ ವದೇತ್ ।**
**ಪುರಾಣಸ್ಯ ಸದೇದೃಕ್ತ್ವಾತ್ ತೇನ ಭೇಜ ಇತೀರಿತಂ ॥ ೧೮೪ ॥**

**ಅರ್ಥ** – ಯತ್= ಯಾವ ಕಾರಣದಿಂದ, ಏಷಾ ವಾಗೇವ= ಈ ವಾಕ್ಯವೇ, ಅತೀತ ಕಲ್ಪಮುಕ್ತಂ ಚಾಪಿ= ಹಿಂದಿನ ಕಲ್ಪದಲ್ಲಿ ಮುಕ್ತನಾದ ಪರೀಕ್ಷಿತನನ್ನೂ, ವದೇತ್= ಹೇಳುತ್ತದೆಯೋ, ಪುರಾಣಸ್ಯ= ಪುರಾಣವು, ಸದಾ= ಯಾವಾಗಲೂ, ಈದೃಕ್ತ್ವಾತ್= ಹೀಗೆಯೇ ಇರುವುದರಿಂದ, ತೇನ= ಆ ಕಾರಣದಿಂದ, ಭೇಜ ಇತಿ= ಹೊಂದಿದನು ಎಂದು, ಈರಿತಂ= ಹೇಳಲ್ಪಟ್ಟಿದೆ.

**ಅನುವಾದ** – ಇದೇ ವಾಕ್ಯವು ಹಿಂದಿನ ಕಲ್ಪದಲ್ಲಿ ಮುಕ್ತನಾದ ಪರೀಕ್ಷಿತ್‌ರಾಜನನ್ನೂ ಹೇಳುವುದರಿಂದ ಮತ್ತು ಪುರಾಣವು ಯಾವಾಗಲೂ ಇದೇ ರೀತಿ ಇರುವುದರಿಂದ ಭೇಜೇ ಎಂದು ಭೂತಕಾಲದ ಪ್ರಯೋಗವು ಮಾಡಲ್ಪಟ್ಟಿದೆ.

**ಭಾವವಿಲಾಸಿನೀ**–ಇಮಮೇವಾರ್ಥಂ ವಿಸ್ತರೇಣ ಪ್ರದರ್ಶಯತಿ ॥ **ಅತೀತೇತ್ಯಾದಿನಾ** ॥ ಯದ್ಯಪಿ ಶೌನಕಾದೀನ್ ಪ್ರತಿ ಕಾಥಾಕಥನಾಯ ಚಿರಕಾಲಾತೀತಪರೀಕ್ಷಿತ್ ಕಥಾಕಥಾನೋದ್ಯಸ್ಯ ಸೂತಸ್ಯ ತದೀಯವಾಕ್ಯಾನುವಾದಕಸ್ಯ ವ್ಯಾಸಸ್ಯ ಚ ಭೇಜ ಇತ್ಯೇವ ಪ್ರಯೋಗ ಉಚಿತಃ । ತಥಾಪ್ಯ ಪವರ್ಗಾತ್ಮಕಸ್ಯ ವೈಕುಂಠಾಂತಃ ಪುರಸ್ಥ ಹರಿಚರಣ ಸಮೀಪಗಮನಸ್ಯ ಬ್ರಹ್ಮಣಃ ಪರಾಂತಕಾಲ ಏವ ಸಂಭವಾತ್ ಶಂಕಾಸಮಾಧಾನಂ ಚೇತಿ ದ್ರಷ್ಟವ್ಯಮ್ । ಅತೀತಕಲ್ಪಮುಕ್ತಂ ಅತೀತಬ್ರಹ್ಮಕಲ್ಪೇ ಮುಕ್ತಮ್ । ಯತ್ ಯಸ್ಮಾತ್ । ನನು ತದಾನೀಂತನ ಭಾಗವತಜ್ಞಾನಸ್ಯ ಮುಕ್ತಿದಾಯಕತ್ವೇ ಇದಾನೀಂತನ ಭಗವತಜ್ಞಾನಸ್ಯ ಕಿಮಾಗತಮಿತ್ಯುತ ಉಕ್ತಮ್ । ಪುರಾಣಸ್ಯ ಸದೇದೃಕ್ತ್ವಾದಿತಿ । ಈದೃಕ್ತ್ವಾತ್ ಪದಪೌರ್ವಾಪರ್ಯವ್ಯತ್ಯಾಸಮಾತ್ರೇಽಪಿ ಶಬ್ದತೋರ್ಥ ತಶ್ಚೈಕಪ್ರಕಾರತ್ವಾತ್ । ಏವಂಚ ತದಾನೀಂತನ ಭಾಗವತಜ್ಞಾನಸ್ಯ ಫಲದಾಯಕತ್ವೋಕ್ತೌ ಅಸ್ಯಾಪಿ ತದುಕ್ತಂ ಸ್ಯಾದಿತಿ ಭಾವೇನ ತದುದಾಹರಣಮಿತಿ ಭಾವಃ ॥ ೧೮೪ ॥

**ವಿವರಣೆ** – ಹಿಂದಿನ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಇಲ್ಲಿ ಸ್ಪಷ್ಟಪಡಿಸುತ್ತಾರೆ. ಶೌನಕರು ಸೂತರನ್ನು ಕುರಿತು ಕಥೆಯನ್ನು ಹೇಳುವಾಗ ಅದಕ್ಕಿಂತ ಬಹುಕಾಲ ಮುಂಚೆಯೇ ಪರೀಕ್ಷಿದ್ರಾಜನ ನಿರ್ಯಾಣವು ಆಗಿರುವುದರಿಂದ ಭೇಜೇ ಎಂಬ ಲಿಟ್ ಪ್ರಯೋಗವು ಉಚಿತವಾಗುತ್ತದೆ. ಆದರೂ ಅಪವರ್ಗ ಎಂದು ಕರೆಸಲ್ಪಡುವ ಪರಮಮೋಕ್ಷವು ಬ್ರಹ್ಮದೇವರ ದ್ವಿಪರಾರ್ಧಾವಸಾನದಲ್ಲಿಯೇ ಆಗುವುದರಿಂದ ಈಗ ಇನ್ನೂ ಆಗದೇ ಇರುವುದರಿಂದ ಭೇಜೇ ಎಂಬ ಲಿಟ್‌ಪ್ರಯೋಗವು ಹೇಗೆ ಎಂಬ ಶಂಕೆಯು ಮತ್ತು ಸಮಾಧಾನವು ಉಪಪನ್ನವಾಗುತ್ತದೆ ಎಂದು ತಿಳಿಯಬೇಕು. ಅತೀತಕಲ್ಪದ ಭಾಗವತ ಜ್ಞಾನಕ್ಕೆ ಮೋಕ್ಷದಾಯಕತ್ವವಿದ್ದರೂ ಈ ಕಾಲದಲ್ಲಿರುವ

ಭಾಗವತದ ಜ್ಞಾನಕ್ಕೆ ಮೋಕ್ಷದಾಯಕತ್ವವು ಹೇಗೆ ಸಿದ್ಧವಾಗುತ್ತದೆ ಎಂಬುದಕ್ಕೆ 'ಸದಾ ಈದೃಕ್ತ್ವಾತ್' ಎಂಬ ಸಮಾಧಾನವನ್ನು ಹೇಳುತ್ತಾರೆ. ಪುರಾಣಗಳಲ್ಲಿ ಪದಗಳ ಪೌರ್ವಾಪರ್ಯ ವ್ಯತ್ಯಾಸವು ಮಾತ್ರವಿದ್ದರೂ ಶಬ್ದದ ದೃಷ್ಟಿಯಿಂದ (ಪರ್ಯಾಯ ಪದಗಳ ಉಪಯೋಗದಿಂದ) ಮತ್ತು ಅರ್ಥದ ದೃಷ್ಟಿಯಿಂದ ಏಕಪ್ರಕಾರವಾಗಿರುವುದರಿಂದ ಹಿಂದಿನ ಕಲ್ಪದ ಭಾಗವತವು ಮೋಕ್ಷಜನಕವಾದ ಜ್ಞಾನವನ್ನು ಉಂಟು ಮಾಡಿದರೆ ಈ ಕಲ್ಪದ ಭಾಗವತವು ಸಹ ಮೋಕ್ಷಜನಕವಾದ ಜ್ಞಾನವನ್ನು ಉಂಟು ಮಾಡುತ್ತದೆ ಎಂದು ಅಭಿಪ್ರಾಯ.

ಆಗಾಮಿನೋಽಪಿ ನಿರ್ಣೀತ್ಯೈ ವಾಗೇವಂ ವರ್ತತೇ ಕಿಲ ।
ಅಪವರ್ಗಾಖ್ಯಮಿತ್ಯುಕ್ತೇರಗ್ರೇಽನ್ಯೋಽರ್ಥೋ ನ ಶೋಭತೇ ॥ ೧೮೫ ॥

**ಅರ್ಥ** – ಆಗಾಮಿನೋಽಪಿ= ಮುಂದೆ ಬರುವ ಪರೀಕ್ಷಿದ್ರಾಜನಿಗೂ ಸಹ, ನಿರ್ಣೀತ್ಯೈ= ಮೋಕ್ಷವನ್ನು ನಿರ್ಣಯಿಸುವುದಕ್ಕಾಗಿ, ವಾಕ್= ಪುರಾಣವಾಕ್ಯವು, ಏವಂ= ಈ ರೀತಿಯಲ್ಲಿ, ವರ್ತತೇ ಕಿಲ= ಇರುತ್ತದೆಯಷ್ಟೆ, ಅಪವರ್ಗಾಖ್ಯಂ= ಅಪವರ್ಗ ಎಂಬ ಹೆಸರಿನ, ಇತ್ಯುಕ್ತೇಃ= ಈ ಉಕ್ತಿಯ, ಅಗ್ರೇ= ಎದುರಿನಲ್ಲಿ, ಅನ್ಯೋಽರ್ಥಃ= ಬೇರೆ ಅರ್ಥವು, ನ ಶೋಭತೇ= ಶೋಭಿಸುವುದಿಲ್ಲ.

**ಅನುವಾದ** – ಮುಂದಿನ ಕಲ್ಪದಲ್ಲಿ ಬರುವ ಪರೀಕ್ಷಿದ್ರಾಜರಿಗೂ ಸಹ ಮೋಕ್ಷರೂಪ ಫಲವನ್ನು ನಿರ್ಣಯಿಸುವುದಕ್ಕಾಗಿ ಇಲ್ಲಿ ಭೇಜೇ ಎಂಬ ಪ್ರಯೋಗವಿದೆ. ಅಪವರ್ಗಾಖ್ಯಂ ಎಂದು ಹೇಳಿರುವುದರಿಂದ ಇದೇ ಪರಮಮೋಕ್ಷವೆಂದು ಸಿದ್ಧವಾಗುತ್ತದೆ. ಈ ಅರ್ಥದ ಎದುರಿನಲ್ಲಿ ಈ ಶಬ್ದಕ್ಕೆ ಬೇರೆ ಅರ್ಥವನ್ನು ಹೇಳಿದರೆ ಅದು ಶೋಭಿಸುವುದಿಲ್ಲ.

**ಭಾವವಿಲಾಸಿನೀ**– ಅನ್ಯೋಽರ್ಥಃ ಜೀವನ್ಮುಕ್ತಿತ್ವ ಕಥನಮ್ ॥ ೧೮೫ ॥

ಜ್ಞಾನಸಾಧ್ಯತ್ವಕಥನಾತ್ ಸಿದ್ಧಾ ಪರಮಮೋಕ್ಷತಾ ॥ ೧೮೬ ॥

ಸೇವ್ಯಸೇವಕಭಾವಶ್ಚ ಯತೋ ಭೇಜೇ ಇತೀರ್ಯತೇ ।
ಅತೋ ಜೀವೇಶಭೇದಸ್ಯ ಮುಕ್ತಾವಪ್ಯನುವರ್ತನಂ ॥ ೧೮೭ ॥

ಸಾಕಾರತ್ವಂ ಚ ಪಾದೋಕ್ತ್ಯಾ ರಥೋಕ್ತ್ಯಾ ಭೋಗಸಾಧನಂ ।
ತಾರತಮ್ಯಂ ಚ ಜೀವೇಷು ಖಗೇಂದ್ರತ್ವಸ್ಯ ಕೀರ್ತನಾತ್ ।
ಖಗಾದಿಜೀವರಾಶಿಶ್ಚ ಮುಕ್ತಾವಸ್ತೀತಿ ಗಮ್ಯತೇ ॥ ೧೮೮ ॥

**ಅರ್ಥ** – ಜ್ಞಾನಸಾಧ್ಯತ್ವಕಥನಾತ್= ಫಲವು ಜ್ಞಾನಸಾಧ್ಯವೆಂದು ಹೇಳಿರುವುದರಿಂದ, ಪರಮಮೋಕ್ಷತಾ= ಪರಮ ಮೋಕ್ಷವೆಂದು, ಸಿದ್ಧಾ= ಸಿದ್ಧವಾಗುತ್ತದೆ, ಯತಃ= ಯಾವ ಕಾರಣದಿಂದ, ಭೇಜೇ ಇತಿ= ಸೇವಿಸಿದನು ಎಂದು, ಈರ್ಯತೇ= ಹೇಳಲ್ಪಡುತ್ತದೆಯೋ, ಅತಃ= ಆ ಕಾರಣದಿಂದ, ಮುಕ್ತೌ= ಮುಕ್ತಿಯಲ್ಲಿಯೂ ಸಹ, ಜೀವೇಶಭೇದಸ್ಯ= ಜೀವೇಶ್ವರ ಭೇದದ, ಅನುವರ್ತನಂ= ಅನುವೃತ್ತಿಯು, ಸೇವ್ಯಸೇವಕಭಾವಶ್ಚ= ಮತ್ತು ಸೇವ್ಯ ಸೇವಕಭಾವವು ಸಿದ್ಧವಾಗುತ್ತದೆ, ಪಾದೋಕ್ತ್ಯಾ= ಹರಿಯ ಪಾದವನ್ನು ಹೇಳಿರುವುದರಿಂದ, ಸಾಕಾರತ್ವಂ ಚ= ಸಾಕಾರತ್ವವೂ, ರಥೋಕ್ತ್ಯಾ= ಖಗೇಂದ್ರಧ್ವಜ ಎಂದು ರಥವನ್ನು ಹೇಳಿರುವುದರಿಂದ, ಭೋಗಸಾಧನಂ= ಭೋಗಸಾಧನವೂ, ಖಗೇಂದ್ರತ್ವಸ್ಯ= ಪಕ್ಷಿಗಳ ಒಡೆಯ ಎಂದು, ಕೀರ್ತನಾತ್= ಹೇಳಿರುವುದರಿಂದ, ಜೀವೇಷು= ಜೀವರಲ್ಲಿ, ತಾರತಮ್ಯಂ ಚ= ತಾರತಮ್ಯವೂ, ಖಗಾದಿಜೀವರಾಶಿಶ್ಚ= ಪಕ್ಷಿ ಮೊದಲಾದ ಜೀವರಾಶಿಯೂ, ಮುಕ್ತೌ= ಮೋಕ್ಷದಲ್ಲಿ, ಅಸ್ತೀತಿ= ಇದೆ ಎಂದು, ಗಮ್ಯತೇ= ಸಿದ್ಧವಾಗುತ್ತದೆ.

**ಅನುವಾದ** – ಅಪವರ್ಗರೂಪವಾದ ಫಲವು ಜ್ಞಾನಸಾಧ್ಯವೆಂದು ಹೇಳಿರುವುದರಿಂದ ಅದು ಪರಮಮೋಕ್ಷವೆಂದೂ, ಭೇಜೇ ಎಂದು ಹೇಳಿರುವುದರಿಂದ ಮೋಕ್ಷದಲ್ಲಿಯೂ ಸೇವ್ಯ-ಸೇವಕಭಾವವು ಮತ್ತು ಜೀವೇಶಭೇದದ ಅನುವೃತ್ತಿಯು ಇದೆ ಎಂದೂ, ಹರಿಯ ಪಾದವನ್ನು ಹೇಳಿರುವುದರಿಂದ ಹರಿಗೆ ಸಾಕಾರತ್ವವಿದೆ ಎಂದೂ, ಖಗೇಂದ್ರಧ್ವಜ ಎಂದು ರಥವನ್ನು ಹೇಳಿರುವುದರಿಂದ ಮೋಕ್ಷದಲ್ಲಿ ಭೋಗಸಾಧನಗಳು ಇವೆ ಎಂದೂ, ಪಕ್ಷಿಗಳ ಒಡೆಯ ಎಂದು ಹೇಳಿರುವುದರಿಂದ ಮೋಕ್ಷದಲ್ಲಿ ಪಕ್ಷಿ ಮೊದಲಾದ ಜೀವರಾಶಿಯೂ ಮತ್ತು ಅವುಗಳಲ್ಲಿ ತಾರತಮ್ಯವೂ ಇದೆ ಎಂದೂ ತಿಳಿಯುತ್ತದೆ.

**ಭಾವವಿಲಾಸಿನೀ**– ಯುಕ್ತ್ಯಂತರಂ ಚಾಹ – ಜ್ಞಾನೇತಿ ॥ ೧೮೬, ೧೮೭, ೧೮೮ ॥

ಏತತ್ ಸಮಸ್ತಂ ತತ್ರಾಪಿ ಸಿದ್ಧಂ ವಾಕ್ಯಾರ್ಥವೇದಿನಾಂ ॥ ೧೮೯ ॥

**ಅರ್ಥ** – ವಾಕ್ಯಾರ್ಥವೇದಿನಾಂ= ವಾಕ್ಯಾರ್ಥವನ್ನು ಬಲ್ಲವರಿಗೆ, ಏತತ್ಸಮಸ್ತಂ= ಇವೆಲ್ಲವೂ, ತತ್ರಾಪಿ= ಮೋಕ್ಷದಲ್ಲಿಯೂ ಕೂಡ, ಸಿದ್ಧಂ= ಸಿದ್ಧವಾಗುತ್ತವೆ.

**ಅನುವಾದ** – ವಾಕ್ಯಾರ್ಥವನ್ನು ಬಲ್ಲವರಿಗೆ ಮೋಕ್ಷದಲ್ಲಿಯೂ ಇವೆಲ್ಲವೂ ಸಿದ್ಧವಾಗುತ್ತವೆ.

**ಭಾವವಿಲಾಸಿನೀ**– ತತ್ರಾಪಿ ಮುಕ್ತಾವಪಿ ॥ ೧೮೯-೧೯೦ ॥

ಮಹಾಭಾಗವತೋಽನಲ್ಪಬುದ್ಧಿಃ ಪಾಂಡವವಂಶಜಃ ।
ಅಧಿಕಾರೀ ವ್ಯಾಸಪುತ್ರಃ ಶುಕೋ ಯೋಗೀಶ್ವರೋ ಗುರುಃ ॥ ೧೯೦ ॥

**ತಾದೃಶಾಚಾರ್ಯಸಂಪತ್ತೌ ತಸ್ಯ ಜ್ಞಾನೇನ ಯತ್ಫಲಂ ।**
**ಮಹಾಮೋಕ್ಷಃ ಕಥಂ ನಾಸೌ ಯನ್ಮಾರ್ಗೋಽದ್ಯಾಪಿ ಯೋಗಿನಾಮ್ ॥ ೧೯೧ ॥**

**ಅರ್ಥ** – ಮಹಾಭಾಗವತಃ= ಮಹಾಭಾಗವತನೂ, ಅನಲ್ಪಬುದ್ಧಿಃ= ಮಹಾ ಮೇಧಾವಿಯೂ, ಪಾಂಡವವಂಶಜಃ= ಪಾಂಡವ ವಂಶದಲ್ಲಿ ಉತ್ಪತ್ತಿಯಾದವನೂ ಆದ ಪರೀಕ್ಷಿತನು, ಅಧಿಕಾರೀ= ಶ್ರವಣಾಧಿಕಾರಿಯಾಗಿದ್ದಾನೆ, ವ್ಯಾಸಪುತ್ರಃ= ವೇದವ್ಯಾಸದೇವರ ಪುತ್ರರಾದ, ಯೋಗೀಶ್ವರಃ= ಯೋಗೀಶ್ವರರಾದ, ಶುಕಃ= ಶುಕಾಚಾರ್ಯರು, ಗುರುಃ= ಗುರುಗಳಾಗಿದ್ದಾರೆ, ತಾದೃಶಾಚಾರ್ಯಸಂಪತ್ತೌ= ಅಂತಹ ಗುರುಗಳು ದೊರಕಿದಾಗ, ತಸ್ಯ ಜ್ಞಾನೇನ= ಅವರ ಉಪದೇಶದಿಂದ ಉಂಟಾದ ಜ್ಞಾನದಿಂದ, ಯತ್ಫಲಂ= ಯಾವ ಫಲವು ಉಂಟಾಗುತ್ತದೆಯೋ, ಅಸೌ= ಅದು, ಕಥಂ= ಹೇಗೆ, ಮಹಾಮೋಕ್ಷಃ ನ= ಪರಮ ಮೋಕ್ಷವಾಗುವುದಿಲ್ಲ? ಏಕೆಂದರೆ, ಯನ್ಮಾರ್ಗಃ= ಯಾವ ಪರೀಕ್ಷಿದ್ರಾಜನು ಮಾಡಿದ ಭಾಗವತ ಶ್ರವಣ ಮಾರ್ಗವು, ಅಸ್ಯ ಅಪಿ= ಈಗಲೂ ಕೂಡ, ಯೋಗಿನಾಂ= ಮುಮುಕ್ಷುಗಳಿಗೆ ಅಪೇಕ್ಷಿತವಾಗಿದೆ.

**ಅನುವಾದ** – ಮಹಾಭಾಗವತನಾದ, ಮಹಾಮೇಧಾವಿಯಾದ ಪಾಂಡವ ವಂಶಜಾತನಾದ ಪರೀಕ್ಷಿದ್ರಾಜನು ಅಧಿಕಾರಿ, ವೇದವ್ಯಾಸರ ಪುತ್ರರಾದ, ಯೋಗೀಶ್ವರರಾದ ಶುಕಾಚಾರ್ಯರು ಗುರುಗಳು. ಅಂತಹ ಗುರುಗಳು ದೊರೆತಾಗ ಅವರ ಉಪದೇಶದಿಂದ ಉಂಟಾದ ಜ್ಞಾನದಿಂದ ಯಾವ ಫಲವು ಉಂಟಾಗುತ್ತದೆಯೋ ಅದು ಹೇಗೆ ಪರಮಮೋಕ್ಷವಾಗದೇ ಇರಲು ಸಾಧ್ಯ? ಏಕೆಂದರೆ ಈಗಲೂ ಸಹ ಮುಮುಕ್ಷುಗಳಾದ ಯೋಗಿಗಳು ಪರೀಕ್ಷಿದ್ರಾಜನು ಅನುಸರಿಸಿದ ಭಾಗವತಶ್ರವಣಮಾರ್ಗವನ್ನೇ ಅನುಸರಿಸುತ್ತಾರೆ.

**ಭಾವವಿಲಾಸಿನೀ**– ಪರಮಮೋಕ್ಷತ್ವೇ ಪ್ರಬಲಯುಕ್ತಿಂ ಚಾಹ – ತಾದೃಶೇತಿ ॥ ತಸ್ಯ ಶಿಷ್ಯಸ್ಯ ಜೀವನ್‌ಮುಕ್ತೇರಪರೋಕ್ಷಣಜ್ಞಾನಾವಸ್ಥಾತ್ಮಕತ್ವೇಽಪಿ ತತ್ ಫಲತ್ವಾಭಾವಾತ್ । ಅಪರೋಕ್ಷಜ್ಞಾನಿನಾ ಸಾಕ್ಷಾಚ್ಚಿವೇನ ಶುಕೇನಾಪರೋಕ್ಷಜ್ಞಾನಿನಂ ಪರೀಕ್ಷಿತಂ ಪ್ರತ್ಯುಪದಿಷ್ಟ-ಜ್ಞಾನಫಲತಯೋಚ್ಯಮಾನೋಽಯಂ ಮೋಕ್ಷಃ ಕಥ ನಂ ಪರಮಮೋಕ್ಷ ಇತಿ ಭಾವಃ । ಯನ್ಮಾರ್ಗಃ ಯಸ್ಯ ಪರೀಕ್ಷಿತೋ ಮಾರ್ಗಃ । ಭಾಗವತಶ್ರವಣಮಿತಿ ಯಾವತ್ । ಯೋಗಿನಾ-ಮೇಕ್ಷಿತ ಇತ್ಯರ್ಥಃ ॥ ೧೯೧ ॥

**ನ ತದ್ ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ ।**
**ಯದ್ ಗತ್ವಾ ನ ನಿವರ್ತಂತೇ ತದ್ ಧಾಮ ಪರಮಂ ಮಮ ॥ ೧೯೨ ॥**

**ಇತಿ ಗೀತಾಸು ಕೃಷ್ಣೇನ ಸ್ವಲೋಕಗಮನಸ್ಯ ಯತ್ ।**
**ಪುನರಾವೃತ್ತಿಶೂನ್ಯತ್ವಂ ಪರಮತ್ವಂ ಚ ಕೀರ್ತಿತಂ ।**
**ಅತಸ್ತತ್ ಪರಮಂ ಧಾಮ ತದೇವ ಚ ಪರಾತ್ಪರಂ ॥ ೧೯೩ ॥**

**ಅರ್ಥ –** ತತ್= ಆ ವೈಕುಂಠಲೋಕವನ್ನು, ಸೂರ್ಯಃ= ಸೂರ್ಯನು, ನ ಭಾಸಯತೇ= ಪ್ರಕಾಶಿಸುವುದಿಲ್ಲ, ಶಶಾಂಕಃ= ಚಂದ್ರನು, ನ= ಪ್ರಕಾಶಿಸುವುದಿಲ್ಲ, ಪಾವಕಃ= ಅಗ್ನಿಯು, ನ= ಪ್ರಕಾಶಿಸುವುದಿಲ್ಲ, ಯದ್ಗತ್ವಾ= ಎಲ್ಲಿಗೆ ಹೋಗಿ, ನ ನಿವರ್ತಂತೇ= ಹಿಂದಿರುಗಿ ಬರುವುದಿಲ್ಲವೋ, ತತ್= ಅದು, ಮಮ= ನನ್ನ, ಪರಮಂ ಧಾಮ= ಶ್ರೇಷ್ಠವಾದ ಆವಾಸಸ್ಥಾನವಾಗಿದೆ, ಇತಿ= ಈ ರೀತಿಯಾಗಿ, ಗೀತಾಸು= ಭಗವದ್ಗೀತೆಯಲ್ಲಿ, ಕೃಷ್ಣೇನ= ಕೃಷ್ಣನಿಂದ, ಯತ್= ಯಾವ ಕಾರಣದಿಂದ, ಸ್ವಲೋಕಗಮನಸ್ಯ= ತನ್ನ ಲೋಕ ಪ್ರಾಪ್ತಿಗೆ, ಪುನರಾವೃತ್ತಿ ಶೂನ್ಯತ್ವಂ= ಪುನರಾವೃತ್ತಿರಾಹಿತ್ಯವು, ಪರಮತ್ವಂ ಚ= ಮತ್ತು ಪರಮತ್ವವು, ಕೀರ್ತಿತಂ= ಹೇಳಲ್ಪಟ್ಟಿದೆಯೋ, ಅತಃ= ಆದ್ದರಿಂದ, ತತ್= ಅದು, ಪರಮಂ ಧಾಮ= ಶ್ರೇಷ್ಠವಾದ ಲೋಕ, ತದೇವ= ಅದೇ, ಪರಾತ್ಪರಂ= ಪರಾತ್ಪರವಾದುದು.

**ಅನುವಾದ –** ಆ ಲೋಕವನ್ನು ಸೂರ್ಯನು ಪ್ರಕಾಶಿಸುವುದಿಲ್ಲ, ಚಂದ್ರನು ಪ್ರಕಾಶಿಸುವುದಿಲ್ಲ, ಅಗ್ನಿಯು ಪ್ರಕಾಶಿಸುವುದಿಲ್ಲ. ಎಲ್ಲಿಗೆ ಹೋಗಿ ಯೋಗಿಯು ಹಿಂದಿರುಗಿ ಬರುವುದಿಲ್ಲವೋ ಅದು ನನ್ನ ಶ್ರೇಷ್ಠವಾದ ಆವಾಸಸ್ಥಾನ ಎಂದು ಗೀತೆಯಲ್ಲಿ ಕೃಷ್ಣನಿಂದ ಯಾವ ಕಾರಣದಿಂದ ಸ್ವಲೋಕಪ್ರಾಪ್ತಿಗೆ ಪುನರಾವೃತ್ತಿ ರಾಹಿತ್ಯವು ಮತ್ತು ಪರಮತ್ವವು ಹೇಳಲ್ಪಟ್ಟಿದೆಯೋ ಆದ್ದರಿಂದ ಆ ಲೋಕವೇ ಕೃಷ್ಣನ ಪರಮ ಆವಾಸಸ್ಥಾನ ಮತ್ತು ಅದೇ ಜೀವನ್ಮುಕ್ತಿಗಿಂತಲೂ ಶ್ರೇಷ್ಠವಾದುದು.

**ಭಾವವಿಲಾಸಿನೀ–** ಗೀತಾವಾಕ್ಯಾಂತರೇಣಾಪಿ ವೈಕುಂಠಸ್ಯಾಪುನರಾವೃತ್ತಿಸ್ಥಾನತ್ವಂ ಸ್ಪಷ್ಟಮಾಹ – **ನ ತದಿತಿ।** ಪರಾತ್ ಜೀವನ್ಮೋಕ್ಷಾತ್ ॥ ೧೯೨, ೧೯೩ ॥

ಯತ್ರ ತ್ವಸ್ಯೇತಿ ವಾಕ್ಯಂ ಚ ಸ್ಪಷ್ಟಶ್ರುತ್ಯುಕ್ತಮಾರ್ಗತಃ ।
ಅಚಚಕ್ಷೇ ಪರಂ ಮೋಕ್ಷಮಿಮಮೇವ ನ ಚಾಪರಮ್ ॥ ೧೯೪ ॥

ವಾಕ್ಯಾರ್ಥಸ್ಯ ಪ್ರಕಾರಶ್ಚ ಪೂರ್ವಮೇವ ನಿರೂಪಿತಃ ।
ತಯೋರ್ನಿರವಕಾಶಸ್ಯ ಪ್ರಾಬಲ್ಯಂ ಸಾವಕಾಶತಃ ॥ ೧೯೫ ॥

**ಅರ್ಥ –** ಯತ್ರತ್ವಸ್ಯೇತಿ ವಾಕ್ಯಂ ಚ= ಯತ್ರತ್ವಸ್ಯ ಎಂಬ ವಾಕ್ಯವಾದರೂ, ಸ್ಪಷ್ಟಶ್ರುತ್ಯುಕ್ತ ಮಾರ್ಗತಃ= ಸ್ಪಷ್ಟವಾದ ಶ್ರುತಿಯು ಹೇಳಿದ ಮಾರ್ಗಕ್ಕೆ ಅನುಸಾರವಾಗಿ, ಇಮಮೇವ= ಈ ಪರಮಧಾಮವನ್ನೇ, ಪರಂ ಮೋಕ್ಷಂ= ಶ್ರೇಷ್ಠವಾದ ಮೋಕ್ಷವೆಂದೂ, ಅಪರಂ= ಇನ್ನೊಂದು, ನ ಚ= ಪರಮ ಮೋಕ್ಷವಲ್ಲವೆಂದೂ, ಆಚಚಕ್ಷೇ= ಹೇಳಿತು, ವಾಕ್ಯಾರ್ಥಸ್ಯ= ಯತ್ರತ್ವಸ್ಯ

ಎಂಬ ವಾಕ್ಯಕ್ಕೆ, ಪ್ರಕಾರಶ್ಚ= ಅರ್ಥ ಮಾಡುವ ಪ್ರಕಾರವಾದರೂ, ಪೂರ್ವಮೇವ= ಮೊದಲೇ, ನಿರೂಪಿತಃ= ನಿರೂಪಿಸಲ್ಪಟ್ಟಿದೆ, ತಯೋಃ= ಆ ಎರಡು ವಾಕ್ಯಗಳಲ್ಲಿ, ನಿರವಕಾಶಸ್ಯ= ನಿರವಕಾಶವಾದ ವಾಕ್ಯಕ್ಕೆ, ಸಾವಕಾಶತಃ= ಸಾವಕಾಶವಾದ ಯತ್ರತ್ವಸ್ಯ ಎಂಬ ವಾಕ್ಯಕ್ಕಿಂತಲೂ, ಪ್ರಾಬಲ್ಯಂ= ಪ್ರಾಬಲ್ಯವಿದೆ.

**ಅನುವಾದ** – ಯತ್ರ ತ್ವಸ್ಯ ಎಂಬ ವಾಕ್ಯವಾದರೂ ಸ್ಪಷ್ಟವಾದ ನಿರವಕಾಶಶ್ರುತಿಗೆ ಅನುಸಾರವಾಗಿ ಈ ಲೋಕವನ್ನೇ ಪರಮಮೋಕ್ಷವೆಂದು ಹೇಳುತ್ತದೆ. ಬೇರೆ ಲೋಕವನ್ನು ಪರಮಮೋಕ್ಷವೆಂದು ಹೇಳುವುದಿಲ್ಲ. ಯತ್ರ ತ್ವಸ್ಯ ಎಂಬ ವಾಕ್ಯಕ್ಕೆ ಅರ್ಥವನ್ನು ಮಾಡುವ ಪ್ರಕಾರವಾದರೂ ಹಿಂದೆಯೇ ನಿರೂಪಿಸಲ್ಪಟ್ಟಿದೆ. ಯತ್ರತ್ವಸ್ಯ ಎಂಬುದು ಸಾವಕಾಶವಾದ ವಾಕ್ಯ. ಅದಕ್ಕಿಂತ ನಿರವಕಾಶವಾದ ಸ್ಪಷ್ಟ 'ದ್ವಾಸುಪರ್ಣಾದಿ' ಶ್ರುತಿಯೇ ಪ್ರಬಲವಾದುದು.

**ಭಾವವಿಲಾಸಿನೀ**– ಶ್ರುತೀತ್ಯುಪಲಕ್ಷಣಮ್ । ಸ್ಮೃತೀತ್ಯಪಿ ಗ್ರಾಹ್ಯಮ್ । ಇಮಂ ವೈಕುಂಠಮ್ ॥ ೧೯೪-೧೯೫ ॥

**ಅನ್ಯಥಾ ಸುಖಭೋಗಸ್ಯ ಜ್ಞಾನಮಾತ್ರಸ್ಯ ಸರ್ವಥಾ ।**
**ನಿಷೇಧಾತ್ ತಾರ್ಕಿಕಸ್ಯೈವ ಮೋಕ್ಷಃ ಸ್ಯಾನ್ನಾವಯೋರ್ಮತೇ ॥ ೧೯೬ ॥**

**ಅರ್ಥ** – ಅನ್ಯಥಾ= ಇಲ್ಲದಿದ್ದರೆ ಎಂದರೆ ಯತ್ರತ್ವಸ್ಯ ಎಂಬ ವಾಕ್ಯಕ್ಕೆ ತರ್ಕಮುದ್ರೆಯಿಂದ ಅರ್ಥವನ್ನು ಮಾಡದಿದ್ದರೆ, ಸುಖಭೋಗಸ್ಯ= ಸುಖಭೋಗವನ್ನು, ಮತ್ತು, ಜ್ಞಾನಮಾತ್ರಸ್ಯ= ಎಲ್ಲಾ ಜ್ಞಾನವನ್ನು, ಸರ್ವಥಾ= ಸರ್ವಪ್ರಕಾರದಿಂದ, ನಿಷೇಧಾತ್= ನಿಷೇಧ ಮಾಡುವುದರಿಂದ, ತಾರ್ಕಿಕಸ್ಯ= ತಾರ್ಕಿಕನ, ಮೋಕ್ಷ ಏವ= ಮೋಕ್ಷವೇ, ಸ್ಯಾತ್= ಉಂಟಾದೀತು, ಆವಯೋರ್ಮತೇ= ನಮ್ಮಿಬ್ಬರ ಮತದಲ್ಲಿ ಸಮ್ಮತವಾದ ಸುಖಾನುಭವ ರೂಪವಾದ ಮೋಕ್ಷವು, ನ= ಸಿದ್ಧವಾಗಲಾರದು.

ಅನುವಾದ – ಇಲ್ಲದಿದ್ದರೆ ಎಂದರೆ ಯತ್ರತ್ವಸ್ಯ ಎಂಬ ವಾಕ್ಯಕ್ಕೆ ತರ್ಕಮುದ್ರೆಯಿಂದ ವ್ಯಾಖ್ಯಾನವನ್ನು ಮಾಡದಿದ್ದರೆ ಸುಖಭೋಗವನ್ನೂ ಮತ್ತು ಜ್ಞಾನಸಾಮಾನ್ಯವನ್ನೂ ಸರ್ವಥಾ ನಿಷೇಧ ಮಾಡುವುದರಿಂದ ತಾರ್ಕಿಕರ ಮೋಕ್ಷವೇ ಸಿದ್ಧವಾದೀತು. ನಮ್ಮಿಬ್ಬರಿಗೆ ಸಮ್ಮತವಾದ ಸುಖಾನುಭವರೂಪವಾದ ಮೋಕ್ಷವು ಸಿದ್ಧವಾಗಲಾರದು.

**ಭಾವವಿಲಾಸಿನೀ**– ಅನ್ಯಥಾ ಯತ್ರ ತ್ವಸ್ಯೇತಿ ವಾಕ್ಯಸ್ಯ ತರ್ಕಮುದ್ರಾಯಾ ಪ್ರವೃತ್ತ್ಯನಂಗೀಕಾರೇ । ಯದ್ಯಪಿ ಸುಖಭೋಗೋಽಪಿ ಸುಖಾಪರೋಕ್ಷಜ್ಞಾನಮೇವ । ತಥಾಪಿ ಸುಖಾಭಾವಸ್ಯ ಸೂಚನಾಯ ಕೇನ ಕಂ ಜಿಘ್ರೇದಿತಿ ವಿಷಯಾನುಭವಸ್ಯ ಶ್ರುತಾವಪಿ ಪೃಥಕ್‌ಗ್ರಹಣಾತ್

**ಗ್ರಂಥಕೃತಾಪಿ ಪೃಥಕ್ ಗೃಹೀತಮ್ । ಸುಖಭೋಗಸ್ಯ ಸುಖಸಾಧನವಿಷಯಾನುಭವಸ್ಯ । ಮೋಕ್ಷಃ ಷಟ್‌ಬುದ್ಧಿಪದೋದಿತ ಷಟ್‌ವಿಧಜ್ಞಾನೈಃ ಸಹ ಏಕವಿಂಶತಿಪ್ರಭೇದದುಃಖಧ್ವಂಸಾತ್ಮಕಃ । ಆವಯೋಃ ಮೋಕ್ಷೇ ಚ ಸುಖಂ ಜ್ಞಾನಂ ಚಾಸ್ತೀತ್ಯಂಗೀಕುರ್ವತಸ್ತವ ಚ ಮಮಚೇತ್ಯರ್ಥಃ ॥ ೧೯೬ ॥**

ವಿವರಣೆ – ಯದ್ಯಪಿ ಸುಖಭೋಗವೂ ಸಹ ಸುಖಾಪರೋಕ್ಷ ಜ್ಞಾನರೂಪ ವಾದುದೇ. ಆದರೂ 'ಕೇನ ಕಂ ಪಶ್ಯೇತ್' ಎಂಬುದಾಗಿ ಶ್ರುತಿಯಲ್ಲಿಯೂ ವಿಷಯಾನುಭವವನ್ನು ಪ್ರತ್ಯೇಕವಾಗಿ ಹಿಡಿದಿರುವುದರಿಂದ ಗ್ರಂಥಕಾರರೂ ಸಹ ಸುಖಭೋಗ ಮತ್ತು ಜ್ಞಾನವನ್ನು ಪ್ರತ್ಯೇಕವಾಗಿ ಹಿಡಿದಿದ್ದಾರೆ. ತಾರ್ಕಿಕರು ಒಪ್ಪುವ ಮೋಕ್ಷವು ಏಕವಿಂಶತಿ ದುಃಖಧ್ವಂಸರೂಪವಾದುದು. ಆ ಇಪ್ಪತ್ತೊಂದರಲ್ಲಿ ಜ್ಞಾನ ಮತ್ತು ಸುಖಗಳೂ ಸೇರುತ್ತವೆ. ನಾವಿಬ್ಬರು ಮಾತ್ರ ಮೋಕ್ಷದಲ್ಲಿ ಜ್ಞಾನ ಮತ್ತು ಸುಖಗಳ ಅಭಾವವನ್ನು ಒಪ್ಪುವುದಿಲ್ಲ. ಯತ್ರತ್ವಸ್ಯ ಎಂಬ ವಾಕ್ಯವು ಸುಖಾನುಭವ ಮತ್ತು ಜ್ಞಾನಗಳನ್ನು ಸರ್ವಥಾ ನಿಷೇಧ ಮಾಡಿದರೆ ತಾರ್ಕಿಕರ ಮೋಕ್ಷವೇ ಸಿದ್ಧವಾದೀತು ಎಂಬ ಪ್ರಸಂಗವು ಬರುತ್ತದೆ ಎಂದು ಅಭಿಪ್ರಾಯ.

**ಅವಿದ್ಯಾಸ್ತಮಯಾಧಾರೋ ಭಾವಾಂತರವಿಭೇದವಾನ್ ।**
**ಧ್ವಂಸಾಧಾರತ್ವತಃ ಕುಂಭಧ್ವಂಸಾಧಾರಕಪಾಲವತ್ ।**
**ಅನುಮೇಯಂ ಮುಕ್ತಿಕಾಲೇ ಭೇದಂ ಸಾಧಯತಿ ಸ್ಫುಟಮ್ ॥ ೧೯೭ ॥**

**ಅರ್ಥ –** ಅವಿದ್ಯಾಸ್ತಮಯಾಧಾರಃ= ಅವಿದ್ಯಾನಾಶಕ್ಕೆ ಆಧಾರನಾದವನು, ಭಾವಾಂತರ ವಿಭೇದವಾನ್= ಭಾವಾಂತರ ಪ್ರತಿಯೋಗಿಕ ಭೇದವುಳ್ಳವನು, ಧ್ವಂಸಾಧಾರತ್ವತಃ= ಧ್ವಂಸಕ್ಕೆ ಆಶ್ರಯನಾದುದರಿಂದ, ಕುಂಭಧ್ವಂಸಾಧಾರಕಪಾಲವತ್= ಘಟಧ್ವಂಸಕ್ಕೆ ಆಶ್ರಯವಾದ ಕಪಾಲದಂತೆ ಎಂಬ, ಇಯಂ ಅನುಮಾ= ಈ ಅನುಮಾನವು, ಮುಕ್ತಿಕಾಲೇ= ಮುಕ್ತಿಕಾಲದಲ್ಲಿ, ಸ್ಫುಟಂ= ಸ್ಪಷ್ಟವಾಗಿ, ಭೇದಂ ಸಾಧಯತಿ= ಭೇದವನ್ನು ಸಾಧಿಸುತ್ತವೆ.

**ಅನುವಾದ – ಅವಿದ್ಯಾನಾಶಾಧಾರಃ ಭಾವಾಂತರಪ್ರತಿಯೋಗಿಕಭೇದವಾನ್ ಧ್ವಂಸಾಶ್ರಯತ್ವಾತ್ ಕುಂಭಧ್ವಂಸಾಧಾರಕಪಾಲವತ್ ಎಂಬ ಅನುಮಾನದಿಂದ ಮೋಕ್ಷಕಾಲದಲ್ಲಿಯೂ ಸ್ಪಷ್ಟವಾಗಿ ಭೇದವು ಸಿದ್ಧಿಸುತ್ತದೆ.**

**ಭಾವವಿಲಾಸಿನೀ– ಇದಾನೀಂ ಮೋಕ್ಷೇಽಪಿ ಭಾವಾಂತರಾತ್ ಬ್ರಹ್ಮಣೋ ಭೇದಸದ್ಭಾವೇಽನುಮಾನಂ ರಚಯತಿ ॥ ಅವಿದ್ಯೇತಿ ॥ ಅವಿದ್ಯಾಸ್ತಮಯಾಧಾರಃ ಬ್ರಹ್ಮಚೈತನ್ಯಮಿತ್ಯರ್ಥಃ । ಬ್ರಹ್ಮೇತ್ಯುಕ್ತೇ ಸಗುಣ ಬ್ರಹ್ಮಣಾಸಿದ್ಧಾರ್ಥತಾ ಸ್ಯಾದಿತ್ಯತ ಏವಮುಕ್ತಮ್ । ಅಂತರಪದಮುಪರಂಜಕಮ್ । ಧ್ವಂಸಾಧಾರತ್ವತಃ ಧ್ವಂಸಾಧಾರತ್ವಾತ್ । ಅನುಮೇಯಂ ಇಯಮನುಮೇತಿ ಸಂಬಂಧಃ ॥ ೧೯೭ ॥**

ಬ್ರಹ್ಮಾತು ಸರ್ವಜೀವಾಸ್ತಾಂಸ್ತ್ರಿವಿಧಾನ್ ಸ್ವೋದರಸ್ಥಿತಾನ್ ।
ನಿವೇಶ್ಯ ವಿಷ್ಣೋರುದರೇ ಕುಕ್ಷಿಸ್ಥೈರಪರೋಕ್ಷಿಭಿಃ ॥ ೧೯೮ ॥

ಸಾಕಂ ವೈಕುಂಠವಾಹಿನ್ಯಾಂ ಪರಿತೋಽಂತಃಪುರಂ ಹರೇಃ ।
ಮುಕ್ತಾಮುಕ್ತಸ್ಥಲೋಪಾಧೌ ಚಿದ್ರೂಪಜಲಸಂಪದಿ ॥ ೧೯೯ ॥

ವಿರಜಾಯಾಂ ಮಹಾನದ್ಯಾಂ ನಿರ್ದೋಷಾಯಾಂ ಭವಚ್ಛಿದಿ ।
ಮಗ್ನೋ ವಿಧ್ವಸ್ತಸಂಸಾರೋ ಲಿಂಗದೇಹಸ್ಯ ಭಂಗತಃ ॥ ೨೦೦ ॥

ದಿವ್ಯಸ್ವರೂಪಸಂಪನ್ನಃ ಶೇಷವೀಂದ್ರೇಂದ್ರಪೂರ್ವಕೈಃ ।
ಚಿದ್ರೂಪೈಃ ಸನಕಾದ್ಯೈಶ್ಚ ಭೃಗ್ವಾದ್ಯೈಶ್ಚ ಸಮನ್ವಿತಃ ॥ ೨೦೧ ॥

ಕುಕ್ಷಿಂ ಪ್ರವಿಶ್ಯ ಸ್ವಪಿತುಃ ಉಷಿತ್ವಾ ಶತವತ್ಸರಾನ್ ।
ಸೃಷ್ಟಿಕಾಲೇ ಪೂರ್ವಮುಕ್ತಾ ಬ್ರಹ್ಮಾದ್ಯಾ ಯೋಗಿನೋ ಯಥಾ ।
ಜಾತಾ ಸ್ವಯಂಚ ಸ್ವಗಣೈಃ ಸಹ ತದ್ವತ್ ಪ್ರಜಾಯತೇ ॥ ೨೦೨ ॥

**ಅರ್ಥ–** ಬ್ರಹ್ಮಾತು= ಬ್ರಹ್ಮನಾದರೂ, ಸ್ವೋದರಸ್ಥಿತಾನ್= ತನ್ನ ಉದರದಲ್ಲಿರುವ, ತ್ರಿವಿಧಾನ್= ಮೂರು ವಿಧರಾದ, ತಾನ್ ಉದರೇ= ಆ ಜೀವರನ್ನು ಉದರದಲ್ಲಿ, ನಿವೇಶ್ಯ= ಪ್ರವೇಶಗೊಳಿಸಿ, ಕುಕ್ಷಿಸ್ಥೈಃ=ಉದರದಲ್ಲಿರುವ, ಅಪರೋಕ್ಷಿಭಿಃ= ಅಪರೋಕ್ಷಜ್ಞಾನಿಗಳಿಂದ (ಶೇಷ ಗರುಡ ಇಂದ್ರಾದಿಗಳಿಂದ) ಸಾಕಂ= ಕೂಡಿಕೊಂಡು, ಹರೇಃ=ಶ್ರೀಹರಿಯ, ಅಂತಃಪುರಂ= ಅಂತಃಪುರವಾದ, ವೈಕುಂಠದ ಪರಿತಃ=ಸುತ್ತಲೂ ಇರುವ ವೈಕುಂಠವಾಹಿನ್ಯಾಂ= ವೈಕುಂಠದ ನದಿಯಲ್ಲಿ, ಮುಕ್ತಾಮುಕ್ತ ಸ್ಥಲೋಪಾಧೌ=ಮುಕ್ತಾಮುಕ್ತರನ್ನು ಬೇರ್ಪಡಿಸುವುದಕ್ಕೆ ನಿಮಿತ್ತವಾದ, ಚಿದ್ರೂಪಜಲ ಸಂಪದಿ=ಚೇತನಾತ್ಮಕವಾದ ಜಲಸಂಪತ್ತಾದ. ಭವಚ್ಛಿದಿ=ಸಂಸಾರವನ್ನು ಕತ್ತರಿಸುವ, ನಿರ್ದೋಷಾಯಾಂ= ದೋಷ ರಹಿತವಾದ, ವಿರಜಾಯಾಂ=ವಿರಜಾ ಎಂಬ ಮಹಾನದ್ಯಾಂ= ಮಹಾನದಿಯಲ್ಲಿ, ಮಗ್ನಃ= ಮುಳುಗಿದವನಾಗಿ ವಿಧ್ವಸ್ತಸಂಸಾರಃ= ಸಂಸಾರಬಂಧನವನ್ನು ಕಳಚಿಕೊಂಡು, ಲಿಂಗದೇಹಸ್ಯ ಭಂಗತಃ= ಲಿಂಗದೇಹದ ನಾಶದಿಂದ. ದಿವ್ಯಸ್ವರೂಪಸಂಪನ್ನಃ=ವಿಲಕ್ಷಣವಾದ ಸ್ವರೂಪವನ್ನು ಹೊಂದಿದವನಾಗಿ, ಚಿದ್ರೂಪೈಃ= ಚೇತನಸ್ವರೂಪರಾದ, ಶೇಷವೀಂದ್ರೇಂದ್ರಪೂರ್ವಕೈಃ= ಶೇಷಗರುಡ ಇಂದ್ರಾದಿಗಳಿಂದ, ಚೇತನಸ್ವರೂಪರಾದ, ಸನಕಾದ್ಯೈಃ=ಸನಕಾದಿಗಳಿಂದಲೂ, ಭೃಗ್ವಾದ್ಯೈಶ್ಚ= ಭೃಗು ಮೊದಲಾದ ಋಷಿಗಳಿಂದಲೂ, ಸಮನ್ವಿತಃ= ಕೂಡಿಕೊಂಡು, ಸ್ವಪಿತುಃ= ತನ್ನ ತಂದೆಯ, ಕುಕ್ಷಿಂ= ಉದರವನ್ನು, ಪ್ರವಿಶ್ಯ= ಪ್ರವೇಶಮಾಡಿ, ಶತವತ್ಸರಾನ್= ತನ್ನ ನೂರು ವರ್ಷಗಳ

ಕಾಲ, ಉಷಿತ್ವಾ= ವಾಸಮಾಡಿ, ಸೃಷ್ಟಿಕಾಲೇ= ಪುನಃಸೃಷ್ಟಿಕಾಲದಲ್ಲಿ, ಪೂರ್ವಮುಕ್ತಾಃ= ಹಿಂದೆ ಮುಕ್ತರಾದ ಬ್ರಹ್ಮಾದ್ಯಾಃ ಯೋಗಿನಃ ಯಥಾ ಜಾತಾಃ= ಬ್ರಹ್ಮಾದಿಯೋಗಿಗಳು ಹೇಗೆ ಪ್ರಕಟರಾಗುವರೋ, ಸ್ವಗಣ್ಯೈಃ ಸಹ= ತನ್ನ ಜೊತೆಗೆ ಮುಕ್ತರಾದ ಇತರ ಜೀವಗಣದಿಂದ ಕೂಡಿ ಸ್ವಯಂ ಚ= ತಾನೂ ಸಹ, ತದ್ವತ್= ಹಾಗೆಯೇ, ಪ್ರಜಾಯತೇ= ಪ್ರಕಟನಾಗಿ ವಿಹರಿಸುತ್ತಾನೆ.

**ಅನುವಾದ–** ಮೇಲಿನ ಐದು ಶ್ಲೋಕಗಳ ತಾತ್ಪರ್ಯ ಈ ರೀತಿ ಇದೆ. ಬ್ರಹ್ಮನು ಪ್ರಳಯಕಾಲದಲ್ಲಿ ತ್ರಿವಿಧಜೀವರನ್ನು ತನ್ನ ಉದರದಲ್ಲಿಟ್ಟು ವಿಷ್ಣುವಿನ ಉದರದಲ್ಲಿ ಪ್ರವೇಶ ಹೊಂದುತ್ತಾನೆ. ತನ್ನಲ್ಲಿದ್ದ ತ್ರಿವಿಧ ಜೀವರಲ್ಲಿ ಅಪರೋಕ್ಷಜ್ಞಾನಿಗಳಾದ ಶೇಷಗರುಡ, ಇಂದ್ರಾದಿ ಉತ್ತಮಾಧಿಕಾರಿಗಳೂಡನೆ ವೈಕುಂಠಲೋಕದ ಸುತ್ತಲಿರುವ ಮುಕ್ತಾಮುಕ್ತರನ್ನು ಬೇರ್ಪಡಿಸುವಲ್ಲಿ ನಿಮಿತ್ತದಂತಿರುವ, ಲಕ್ಷ್ಮ್ಯಾತ್ಮಕವಾದ ವಿರಜಾನದಿಯಲ್ಲಿ ಸ್ನಾನ ಮಾಡುತ್ತಾನೆ. ಆ ವಿರಜಾನದಿಯಾದರೂ ಸಂಸಾರ ಬಂಧನವನ್ನು ಛೇದನಮಾಡುವ ದೋಷರಹಿತವಾದ ಮಹಾನದಿಯಾಗಿದೆ ಅಲ್ಲಿ ಸ್ನಾನ ಮಾಡಿ ಶೇಷಗರುಡಇಂದ್ರಾದಿ ಮುಕ್ತಿಯೋಗ್ಯರು ಲಿಂಗದೇಹಭಂಗದಿಂದಾಗಿ ಸ್ವಸ್ವರೂಪಸಂಪನ್ನರಾಗುತ್ತಾರೆ. ಇವರೆಲ್ಲರಿಂದ ಕೂಡಿ ಚಿದ್ರೂಪರಾದ ಸನಕಾದಿಗಳು ಭೃಗುಮೊದಲಾದ ಋಷಿಗಳಿಂದಲೂ ಕೂಡಿ ತನ್ನ ತಂದೆಯಾದ ಶ್ರೀಹರಿಯ ಉದರವನ್ನು ಪ್ರವೇಶಿಸುತ್ತಾನೆ. ಅಲ್ಲೂ ಮತ್ತೆ ನೂರು ವರ್ಷಗಳ ಕಾಲ ವಾಸವಾಗಿದ್ದು ಪುನಃ ಸೃಷ್ಟಿಕಾಲ ಬಂದಾಗ ತನ್ನ ಜೊತೆಗೆ ಮುಕ್ತರಾದ ಜೀವಗಣದಿಂದ ಯುಕ್ತನಾಗಿ ಹಿಂದಿನ ಬ್ರಹ್ಮರಂತೆ ವೈಕುಂಠಾದಿಗಳಲ್ಲಿ ಪ್ರಕಟನಾಗಿ ಅನಂತ ಭೋಗಗಳಿಂದ ಆನಂದಾತಿಶಯವನ್ನು ಪಡೆಯುತ್ತಾ ವಿಹರಿಸುತ್ತಾನೆ.

**ಭಾವವಿಲಾಸಿನೀ–** ಪೂರ್ವಮುಪನಿಷದಭಿಪ್ರೇತತಯೋಕ್ತಂ ಮುಕ್ತಿಗಮನ ಪ್ರಕಾರಮೇಕೀಕಾರಾಯ ಪುನರನುವದನ್ ಕಿಂಚಿದಧಿಕಂ ವದನ್ ಭಾಗವತ ವಾಕ್ಯಾರೂಢಂ ಕರೋತಿ ॥ ಬ್ರಹ್ಮೇತ್ಯಾದಿನಾ ॥ ಕುಕ್ಷಿಸ್ಥೈಃ ಸ್ವಕುಕ್ಷಿಸ್ಥೈಃ । ಶೇಷವೀಂದ್ರೇತ್ಯಾದಿಕಂ ಪೂರ್ವಾನುಕ್ತ ಭಾಗವತವಾಕ್ಯಾನುಸಾರೇಣಾತ್ರ ಸಂಗೃಹೀತಮ್ । ''ಕರ್ತೃತ್ವಾತ್ ಸಗುಣಂ ಬ್ರಹ್ಮ ಪ್ರವಿಶ್ಯ ಪುರುಷರ್ಷಭಮಿ''ತ್ಯಸ್ಯಾರ್ಥಸೂಚನಾಯ ಕುಕ್ಷಿಂ ಪ್ರವಿಶ್ಯ ಸ್ವಪಿತುರಿತ್ಯಾದ್ಯುಕ್ತಮ್ । ಅನೇನ ಸಕಲಜೀವೋತ್ತಮಸ್ಯೈವ ಕರ್ತೃತ್ವಾತ್ ಪಿತೃತ್ವಾತ್ ಸಗುಣಂ ಸರ್ವೋತ್ತಮತ್ವಾದಿಗುಣಭರಿತಂ ಇತ್ಯರ್ಥಃ ಸೂಚಿತೋ ಭವತಿ । ಯದ್ವಾ ಕರ್ತೃತ್ವಾತ್ ಸಗುಣಂ ಸಾರ್ವಜ್ಞಸರ್ವಶಕ್ತ್ಯಾದಿ ಸಕಲಗುಣಭರಿತಮ್ । ಶತವತ್ಸರಾನ್ ಬ್ರಹ್ಮಶತವತ್ಸರಾನ್ । ಸೃಷ್ಟಿಕಾಲೇ ಪೂರ್ವಮುಕ್ತಾ ಇತ್ಯಾದಿಕಮಪಿ ಯಥಾ ಪೂರ್ವಂ ಪ್ರಜಾಯತ ಇತಿ ಭಾಗವತ ವಾಕ್ಯಸ್ಯಾರ್ಥ ಸೂಚನಾಯ ಸಂಗೃಹೀತಮ್ । ಅನೇನ ಪೂರ್ವಾಂಪೂರ್ವಮುಕ್ತಾನ್ಯಥಾನತಿಕ್ರಮ್ಯೇತಿ ಯಥಾ ಪೂರ್ವಶಬ್ದಾರ್ಥ ಉಕ್ತೋ ಭವತಿ । ಅಗುಣವ್ಯತಿರೇಕೇಣ ಗುಣಮಿಶ್ರಣರಹಿತೇ ವೈಕುಂಠಾದಿ-

ಲೋಕತ್ರಯೇ ಪ್ರಜಾಯಜತೇ ಪ್ರಕರ್ಷೇಣಾನಂದಾದಿಪ್ರಾದುರ್ಭಾವವಾನ್‌ಭವತೀತಿ ಮೂಲ ಏವೋಕ್ತತ್ವಾತ್ ಸ್ವಪೂರ್ವಮುಕ್ತಾ ಬ್ರಹ್ಮಾದ್ಯಾಃ ಸೃಷ್ಟಿಕಾಲೇ ಯೇಷು ವೈಕುಂಠಾದಿಲೋಕೇಷು ತಿಷ್ಠಂತಿ ತತ್ರೈವ ಸ್ವಯಮಪಿಸ್ಥಿತೋಽಭೂದಿತಿ ಭಾವಃ ॥ ೧೯೮-೨೦೨ ॥

**ವಿವರಣೆ–** ಮೂಲದಲ್ಲಿರುವ ಕುಕ್ಷಿಸ್ಥೈಃ ಎಂದರೆ ತನ್ನ ಉದರದಲ್ಲಿರುವ ಎಂದರ್ಥ. ಕುಕ್ಷಿಸ್ಥ ಅಪರೋಕ್ಷಜ್ಞಾನಿಗಳೆಂದರೆ ಶೇಷಗರುಡ, ಇಂದ್ರಾದಿಗಳು. ಇವರನ್ನು ಇಲ್ಲಿ ಪದಗಳಿಂದ ಹೇಳದಿದ್ದರೂ ಭಾಗವತವಾಕ್ಯನುಸಾರವಾಗಿ ಸ್ವೀಕರಿಸಿದೆ. ಕರ್ತೃತ್ವಾತ್ ಸಗುಣಂ ಬ್ರಹ್ಮಪ್ರವಿಶ್ಯ ಪುರುಷರ್ಷಭಮ್ ಎಂಬ ಭಾಗವತ ವಾಕ್ಯದ ವಿವರಣರೂಪವೇ ಕುಕ್ಷಿಂ ಪ್ರವಿಶ್ಯ ಸ್ವಪಿತುಃ ಎಂಬ ವಾಕ್ಯ. ಶತವತ್ಸರಾನ್ ಎಂದರೆ ಬ್ರಹ್ಮದೇವರ ನೂರುವರ್ಷ ಎಂದರ್ಥ. ಸೃಷ್ಟಿಕಾಲೇ ಪೂರ್ವಮುಕ್ತಾಃ ಎಂಬ ವಾಕ್ಯವು ಯಥಾಪೂರ್ವಂ ಪ್ರಜಾಯತೇ ಎಂಬ ಭಾಗವತ ವಾಕ್ಯದ ಅರ್ಥವನ್ನು ಸೂಚಿಸುತ್ತದೆ. ಬ್ರಹ್ಮದೇವನು ಪ್ರಕರ್ಷೇಣ ಜಾಯತೇ ಎಂದರೆ ಗುಣಮಿಶ್ರವಿಲ್ಲದ ವೈಕುಂಠಾದಿಲೋಕತ್ರಯದಲ್ಲಿ ಪ್ರಕರ್ಷವಾಗಿ ಆನಂದಪ್ರಾದುರ್ಭಾವ ಉಳ್ಳವನಾಗುತ್ತಾನೆ. ಎಂಬ ಭಾಗವತ ಮೂಲಾಭಿಪ್ರಾಯವನ್ನು ಸಂಗ್ರಹಿಸಲಾಗಿದೆ ಪೂರ್ವಮುಕ್ತರಾದ ಬ್ರಹ್ಮಾದಿಗಳು ಸೃಷ್ಟಿಕಾಲದಲ್ಲಿ ವೈಕುಂಠಾದಿಗಳಲ್ಲಿರುವುದರಿಂದ ಅಲ್ಲಿಯೇ ತನ್ನವರೊಂದಿಗೆ ಬ್ರಹ್ಮನೂ ಪ್ರಕಟಗೊಳ್ಳುವನು ಎಂದು ಸ್ವಯಂಚ ಎಂಬ ಪದದಿಂದ ಸೂಚಿಸಲಾಗಿದೆ. ಇನ್ನು ಸಾರೂಪ್ಯಮೋಕ್ಷಪ್ರಕಾರವನ್ನು ವರ್ಣನೆ ಮಾಡುತ್ತಾರೆ.

**ಶುದ್ಧಪ್ರಕೃತ್ಯಂಶತಃ ಸ್ಯುಭೂಷಣಾಯುಧರಾಶಯಃ ।**
**ಮುಕ್ತಾನಾಂ ಕಿಲ ಸರ್ವೇಷಾಂ ಲಿಂಗಭಂಗೇ ಹರೀಚ್ಛಯಾ ॥ ೨೦೩ ॥**

**ಅರ್ಥ–** ಮುಕ್ತಾನಾಂ= ಮುಕ್ತರಾದ ಸರ್ವೇಷಾಂ=ಎಲ್ಲರಿಗೂ ಲಿಂಗಭಂಗೇ= ವಿರಜಾನದಿಯಲ್ಲಿ ಸ್ನಾನಮಾಡಿದ್ದರಿಂದ ಲಿಂಗದೇಹ ಭಂಗವಾದ ಮರುಕ್ಷಣದಿಂದ ಹರೀಚ್ಛಯಾ= ಪರಮಾತ್ಮನ ಇಚ್ಛೆಯಿಂದ ಶುದ್ಧಪ್ರಕೃತ್ಯಂಶತಃ= ವಿಕಾರರಹಿತವಾದ ಪ್ರಕೃತಿಯ ಅಂಶಗಳಿಂದ ಭೂಷಣಯುಧರಾಶಯಃ=ಆಭರಣ ಆಯಂಧ ಮೊದಲಾದ ರಾಶಿಗಳು ಸ್ಯುಃ ಕಿಲ=ಉಂಟಾಗುತ್ತವೆ ಎಂಬುದು ನಿಶ್ಚಯವಷ್ಟೆ

**ಅನುವಾದ– ಮುಕ್ತರಾದ ಎಲ್ಲ ಜೀವರು ನಿರಜಾನದಿಯಲ್ಲಿ ಸ್ನಾನ ಮಾಡಿದಾಗ ಲಿಂಗದೇಹಭಂಗವಾಗುತ್ತದೆ. ಭಂಗವಾದ ಮರುಕ್ಷಣದಲ್ಲಿಯೇ ಪರಮಾತ್ಮನ ಇಚ್ಛೆಯಿಂದ ಯಾವುದೇ ವಿಕಾರವಿಲ್ಲದ ಪ್ರಕೃತಿಯ ಅಂಶಗಳಿಂದ ಭೂಷಣ ಆಯುಧಾದಿಗಳು ಉಂಟಾಗಿ ಅವುಗಳಿಂದ ಮುಕ್ತರು ವಿರಾಜಿಸುತ್ತಾರೆ.**

**ಭಾವವಿಲಾಸಿನೀ–** ಸಾರೂಪ್ಯಮೋಕ್ಷಪ್ರಕಾರಂ ವರ್ಣಯತಿ ॥ **ಶುದ್ಧೇತಿ** ॥ ಲಿಂಗಭಂಗೇ ವಿರಜಾಂಬುಮಜ್ಜನಾಲ್ಲಿಂಗಶರೀರನಾಶೇ ಜಯಮಾನೇ । ತನ್ನಾಶೋತ್ತರಕ್ಷಣ ಏವೇತ್ಯರ್ಥಃ ।

ಶುದ್ಧಪ್ರಕೃತ್ಯಂ ಶತಃ ವಿಕಾರರಹಿತಕೇವಲಪ್ರಕೃತೇರೇವ ನಾನಾವರ್ಣಸೂಕ್ಷ್ಮಾಂಶೈರ್ಹರೀಚ್ಛಯಾ ಭೂಷಣಾಯುಧರಾಶಯಃ ಸ್ಯುರಿತಿ ಸಂಬಂಧಃ । ಶರ್ಕರಾಖಂಡಪರಿವೃತಮುಕ್ತಿಕಾರಾಶಿ-ವನ್ನಾನಾವರ್ಣಾಃ ಸೂಕ್ಷ್ಮತರ ಭಾಸ್ವರಪ್ರಕೃತ್ಯಂಶಾ ಮುಕ್ತಾನಾಂಚಿನ್ಮಯಶಿರಃಪಾಣ್ಯಾ-ದ್ಯವಯವೇಷು ಕಿರೀಟಾದ್ಯಾಕಾರೇಣ ಸಂಲಗ್ನಾ ಭವಂತೀತಿ ಭಾವಃ । ಅಥವಾ ತದಂಗ ಏವಾನಾದಿಕಾಲಮಾರಭ್ಯ ಶುದ್ಧಪ್ರಕೃತ್ಯಂಶತೋ ವಿದ್ಯಮಾನಾ ಭೂಷಣಾಯುಧರಾಶಯಃ ಸ್ಯುಃ ಆವಾರಕಲಿಂಗದೇಹಭಂಗೇ ಸತಿವ್ಯಕ್ತಾಃ ಸ್ಯುಃ । ಲಿಂಗದೇಹಸ್ಯ ಚಿದ್ರೂಪಜೀವ- ದೇಹಕಂಚುಕ-ತಯಾ ಸ್ಥಿತಸ್ಯ ತ್ರಿವಿಧಜವೇಷ್ವಪಿ ಸಾಮ್ಯೇನೈಕತ್ರ ವಿಶೇಷಾಯೋಗಾತ್ ಪ್ರಾಗುಕ್ತಪಕ್ಷ ಏವ ಜ್ಯಾಯಾನ್ ॥ ೨೦೩ ॥

**ವಿವರಣೆ–** ಶ್ಲೋಕದಲ್ಲಿರುವ ಶುದ್ಧಪ್ರಕೃತ್ವಂಶತಃ ಎಂದರೆ ವಿಕಾರರಹಿತವಾದ ಕೇವಲ ಪ್ರಕೃತಿಯ ನಾನಾವರ್ಣದ ಸೂಕ್ಷ್ಮಾಂಶಗಳಿಂದ ಭೂಷಣಾದಿರಾಶಿಗಳು ಉಂಟಾಗುತ್ತವೆ ಎಂದು ಇಲ್ಲಿರುವ ಪ್ರಮೇಯವನ್ನು ಉದಾಹರಣಪೂರ್ವಕವಾಗಿ ಸಮರ್ಥಿಸುತ್ತಾರೆ. ಹೇಗೆ ಸಕ್ಕರೆಯ ತುಂಡಿಗೆ ನೂಣದಗಾಣಿಯು ಮುತ್ತಿಕೊಳ್ಳುತ್ತದೋ ಹಾಗೆ ನಾನಾವರ್ಣದ ಸೂಕ್ಷ್ಮತರವಾದ ಭಾಸ್ವರ ಪ್ರಕೃತ್ಯಂಶಗಳು ಮುಕ್ತರ ಜಿನ್ಮಯವಾದ ತಲೆ, ಕಾಲು ಮೊದಲಾದ ಅವಯನಗಳಲ್ಲಿ ಕಿರೀಟಾದ್ಯಾಕಾರದಿಂದ ಅಂಟಿಕೊಳ್ಳುತ್ತವೆ.

ಅಥವಾ ಆ ದೇಹದ ಅಂಗಗಳಲ್ಲಿ ಅನಾದಿ ಕಾಲದಿಂದ ಶುದ್ಧಪ್ರಕೃತ್ಯಂಶಗಳಿಂದ ಇರುವ ಭೂಷಣಾದಿಗಳು ಆವರಕವಾದ ಲಿಂಗದೇಹವು ಭಂಗವಾದನಂತರ ಅಭಿವ್ಯಕ್ತವಾಗುತ್ತದೆ. ಇದನ್ನು ಸುಂದರ ದೃಷ್ಟಾಂತಪೂರ್ವಕ ಸಮರ್ಥಿಸುತ್ತಾರೆ ಒಂದು ದೇಹದ ಮೇಲೆ ಆವರಕವಾಗಿರುವ ಅಂಗಿಯನ್ನು ತೆಗೆದರೆ ಹೇಗೆ ದೇಹದ ಸ್ವರೂಪ ಅಭಿವ್ಯಕ್ತಿವಾಗುವುದೋ ಹಾಗೆ ಬಿದ್ರೂ ಪದೇಹಕ್ಕೆ ಲಿಂಗದೇಹವು ಆವರಕವಾಗಿದೆ. ಆವರಕವಾದ ಲಿಂಗದೇಹವು ಭಂಗವಾದಾಗ ಚಿದ್ರೂಪವು ಅಭಿವ್ಯಕ್ತವಾಗುತ್ತದೆ ಈ ಲಿಂಗದೇಹವು ತ್ರಿವಿಧಜೀವರಿಗೂ ಸಮಾನವಾಗಿದೆ. ಆದ್ದರಿಂದ ಮೊದಲು ಹೇಳಿದ ಪಕ್ಷವೇ ಯುಕ್ತವಾಗಿದೆ. ಪ್ರಕೃತಿಯ ಒಂದು ಭಾಗಮಾತ್ರ ಸೃಷ್ಟಿಯಲ್ಲಿ ಉಪಯೋಗ. ಉಪಯೋಗಿಸದೇ ಇರುವುದು ಶುದ್ಧಪ್ರಕೃತಿ.

**ಅತಃ ಸಾರೂಪ್ಯಮೋಕ್ಷೋಽಯಂ ಸರ್ವೇಷಾಮಪಿ ಯೋಗಿನಾಮ್ ।**
**ಸಾಲೋಕ್ಯಸಾಮೀಪ್ಯಸಾಯುಜ್ಯಾನಿ ಯೋಗ್ಯತಯಾ ಕಿಲ ॥ ೨೦೪ ॥**

**ಅರ್ಥ–** ಅತಃ= ಆದ್ದರಿಂದ ಅಯಂ,ಸಾರೂಪ್ಯಮೋಕ್ಷಃ=ಈ ಸಾರೂಪ್ಯ ಮೋಕ್ಷವು, ಸರ್ವೇಷಾಂ= ಎಲ್ಲಾ, ಯೋಗಿನಾಂ= ಯೋಗಿಗಳಿಗೆ ಇದೆ. ಯೋಗ್ಯತಯಾ= ಜೀವರ ಯೋಗ್ಯತೆಯಿಂದ, ಸಾಲೋಕ್ಯಸಾಮೀಪ್ಯಸಾಯುಜ್ಯಾನಿ=ಸಾಲೋಕ್ಯ, ಸಾಮೀಪ್ಯ, ಸಾಯುಜ್ಯಗಳೆಂಬ ಬೇರೆ ಮುಕ್ತಿಗಳು (ಲಭಂತೇ) ಕಿಲ=ಸಿಗುತ್ತವೆ ಅಷ್ಟೆ

**ಅನುವಾದ–** ಎಲ್ಲಾಮುಕ್ತರಿಗೂ ಕಿರೀಟಕುಂಡಲಾದಿಗಳು ಅಪೇಕ್ಷಿತವಾದ್ದರಿಂದ ಇವರೆಲ್ಲರೂ ಸಾರೂಪ್ಯಮುಕ್ತರೇ ಆಗಿದ್ದಾರೆ. ಸಾಲೋಕ್ಯ, ಸಾಮೀಪ್ಯ, ಸಾಯುಜ್ಯಗಳೆಂಬ ಮುಕ್ತಿಗಳು ಯೋಗ್ಯತಾನುಸಾರವಾಗಿ ಉತ್ತಮಾಧಿಕಾರಿಗಳಿಗೆ ದೊರೆಯುತ್ತದೆ.

**ಭಾವವಿಲಾಸಿನೀ–** ಅತಃ ಸರ್ವೇಷಾಮಪಿ ಕಿರೀಟಕುಂಡಲಾದ್ಯಲಂಕಾರಸ್ಯಾಪೇಕ್ಷಿತತ್ವಾತ್ । ಯೋಗ್ಯತಯಾ ಸಾಲೋಕ್ಯಾದಿಮೋಕ್ಷತ್ರಯಸ್ಯ ಯಾ ಯೋಗ್ಯತಾ ತಯಾ । ಸಾಚೋತ್ತಮಾಧಿಕಾರಿಣಾಮೇವ ಭವತಿ ನ ಸರ್ವೇಷಾಮಿತಿ ಭಾವಃ । ಸಾಲೋಕ್ಯಾದಿವದಪೂರ್ವಂ ವಾ ಆವೃತತಯಾ ಪ್ರಾಗಪಿವಿದ್ಯಮಾನಂ ವಾ ಸಾರೂಪ್ಯಂ ವಿರಜಾಂಬುನ್ಯಾಮಜ್ಯ ಲಿಂಗಶರೀರಂ ವಿನಾಶ್ಯೋತ್ಥಿತಾನಾಂ ಸರ್ವೇಷಾಂ ತದೈವ ಭವತಿ । ಸಾಲೋಕ್ಯಾದಿತ್ರಯಂ ತು ಪುನಃ ಸೃಷ್ಟಿಕಾಲೇ ಭಗವದುದರಾನ್ನಿಃ ಸೃತಾನಾಂ ಯೋಗ್ಯಾನಾಮುತ್ತಮಾಧಿಕಾರಿಣಾಮೇವ ಭವತಿ । ಸರ್ವಮೋಕ್ಷಾಣಾಮಪಿ ಭಗವದವತಾರಾಣಾಮಿವ ಶಕ್ತ್ಯಾತ್ಮನಾ ಪ್ರಾಕ್‌ಸತಾಂ ವ್ಯಕ್ತೇರೇವ ಜಾಯಾಮಾನತ್ವಾನ್ನೋತ್ಪತ್ತಿರಾಶಂಕನೀಯಾ ॥ ೨೦೪ ॥

**ವಿವರಣೆ–** ಅತಃ ಎಂದರೆ ಎಲ್ಲರಿಗೂ ಕಿರೀಟಕುಂಡಲಾದಿಗಳು ಅಪೇಕ್ಷಿತವಾದ್ದರಿಂದ ಎಂದರ್ಥ. ಯೋಗ್ಯತಯಾ ಎಂದರೆ ಸಾಲೋಕ್ಯ, ಸಾಮೀಪ್ಯ, ಸಾಯುಜ್ಯ ಎಂಬ ಮೂರುವಿಧವಾದ ಮೋಕ್ಷಯೋಗ್ಯತ್ವದಿಂದ ಎಂದರ್ಥ. ಆ ಮೋಕ್ಷಯೋಗ್ಯತೆ ಉತ್ತಮಾಧಿಕಾರಿಗಳಿಗೆ ಮಾತ್ರವಿರುತ್ತದೆ ಬೇರೆಯವರಿಗಿಲ್ಲ. ವಿರಜಾನದಿಯಸ್ನಾನದಿಂದ ಮುಕ್ತರಲಿಂಗದೇಹವು ಭಂಗವಾಗಿ ಎಲ್ಲರೂ ಸಾರೂಪ್ಯಮುಕ್ತರೇ ಆದರೂ ಸಾಲೋಕ್ಯಾದಿ ಉಳಿದ ಮೂರು ಮೋಕ್ಷಕ್ಕೆ ಅಧಿಕಾರಿಗಳು ಉತ್ತಮ ಜೀವರು. ಪುನಃಸೃಷ್ಟಿಕಾಲ ಪ್ರಾಪ್ತವಾದಾಗ ಭಗವಂತನ ಉದರದಿಂದ ಹೂರಬಂದ ಉತ್ತಮಾಧಿಕಾರಿಗಳಿಗೆ ಮಾತ್ರ ಈ ಸಾಲೋಕ್ಯಾದಿ ಮೋಕ್ಷಗಳು ಎಲ್ಲ ಮೋಕ್ಷಗಳು ಭಗವಂತನ ಅವತಾರಗಳಂತೆ ಶಕ್ತ್ಯಾ ಮೊದಲೇ ಇದ್ದು ವ್ಯಕ್ತ್ಯಾ ಪ್ರಕಟವಾಗುವುದರಿಂದ ಉತ್ಪತ್ತಿಯನ್ನು ಆಶಂಕಿಸಬಾರದು.

ಅಸ್ಮದ್ಗುರುರ್ಮುಖ್ಯವಾಯುರ್ಹರೇರ್ನಾಭಿಸರೋರುಹಾತ್ ।
ಉತ್ಪದ್ಯ ಚತುರಾಸ್ಯತ್ವಂ ಪ್ರಾಪ್ಯ ಶಾಸ್ತ್ಯಖಿಲಂ ಜಗತ್ ॥ ೨೦೫ ॥

ಏವಂ ಚಕ್ರೀ ಜಗಚ್ಚಕ್ರಂ ಸದಾ ವರ್ತಯತಿ ಪ್ರಭುಃ ।
ಆದ್ಯಃ ಸ್ಥಿರಚರಾಣಂ ಯೋ ವೇದಗರ್ಭಃ ಸಹರ್ಷಿಭಿಃ ॥ ೨೦೬ ॥

ಯೋಗೀಶ್ವರೈಃ ಕುಮಾರಾದ್ಯೈಃ ಸಿದ್ಧೈರ್ಯೋಗಪ್ರವರ್ತಕೈಃ ।
ಭೇದದೃಷ್ಟ್ಯಾಽಭಿಮಾನೇನ ನಿಸ್ಸಂಗೇನಾಪಿ ಕರ್ಮಣಾ ॥ ೨೦೭ ॥

ಕರ್ತೃತ್ವಾತ್ ಸಗುಣಂ ಬ್ರಹ್ಮ ಪುರುಷಂ ಪುರುಷರ್ಷಭಮ್ ।
ಸ ಸಂಗತ್ಯ ಪುನಃ ಕಾಲೇ ಕಾಲೇನೇಶ್ವರಮೂರ್ತಿನಾ ॥ ೨೦೮ ॥

**ಜಾತೇ ಗುಣವ್ಯತಿಕರೇ ಯಥಾಪೂರ್ವಂ ಪ್ರಜಾಯತೇ ।**
**ಇತಿ ಭಾಗವತೇ ಸ್ಪಷ್ಟಂ ಕಥೇಯಂ ಸಮುದೀರಿತಾ ॥ ೨೦೯ ॥**

**ಸಾಧನಂ ಚಾಸ್ಯ ಜೀವೇಶಭೇದದೃಷ್ಟಿರ್ಹರೌ ಗುರೌ ।**
**ಅಭಿಮಾನಾಭಿಧಾ ಭಕ್ತಿರ್ನಿವೃತ್ತಂ ಕರ್ಮ ಚೋಚ್ಯತೇ ॥ ೨೧೦ ॥**

**ಅರ್ಥ–** ಅಸ್ಮದ್ಗುರುಃ= ನಮ್ಮ ಗುರುಗಳಾದ,ಮುಖ್ಯವಾಯುಃ=ವಾಯುದೇವರು, ಹರೇಃ= ಶ್ರೀಹರಿಯ ನಾಭಿಸರೋರುಹಾತ್ =ನಾಭಿಕಮಲದಿಂದ, ಉತ್ಪದ್ಯ=ಹುಟ್ಟಿ ಚತುರಾಸ್ಯತ್ವಂ=ಚತುರ್ಮುಖಪದವಿಯನ್ನು ಪ್ರಾಪ್ಯ= ಹೊಂದಿ, ಅಖಿಲಂ=ಎಲ್ಲಾ, ಜಗತ್=ಜಗತ್ತನ್ನು ಶಾಸ್ತಿ=ನಿಯಮಿಸುತ್ತಾರೆ. ಏವಂ=ಈ ರೀತಿಯಾಗಿ ಪ್ರಭುಃ-ಸಮರ್ಥನಾದ ಚಕ್ರೀ=ಚಕ್ರಧಾರಿಯಾದ ಶ್ರೀಕೃಷ್ಣನು, ಜಗಚ್ಚಕ್ರಂ=ಜಗಚ್ಚಕ್ರವನ್ನು ಸದಾ= ಯಾವಾಗಲೂ, ವರ್ತಯತಿ= ನಡೆಸುತ್ತಾನೆ, ಯಃ= ಯಾವನು, ಸ್ಥಿರ ಚರಾಣಾಂ=ಸ್ಥಿರವಾದ ಹಾಗೂ ಚರವಾದವಸ್ತುಗಳಿಗೆ, ಆದ್ಯಃ= ಮೊದಲನೆಯವನೋ, ವೇದಗರ್ಭಃ=ವೇದಗಳೇ ತನ್ನಗರ್ಭದಲ್ಲಿಟ್ಟ ಮುಖ್ಯಪಾಣನೋ, ಸಃ= ಅವನು ಸಹರ್ಷಿಭಿಃ= ಋಷಿಗಳಿಂದ ಕೂಡಿಕೊಂಡು. ಯೋಗೀಶ್ವರೈಃ= ಯೋಗಿವರೇಣ್ಯರಾದ ಕುಮಾರಾದ್ಯೈಃ= ಕುಮಾರಾದಿಮುನಿಗಳಿಂದ ಯೋಗಪ್ರವರ್ತಕೈಃ= ಯೋಗಪ್ರವರ್ತಕರಾದ ಸಿದ್ಧೈಃ= ಸಿದ್ಧರಿಂದಲೂ, ಭೇದದೃಷ್ಟ್ಯಾ= ಭೇದಜ್ಞಾನದಿಂದಲೂ ಅಭಿಮಾನೇನ= ಅಭಿಮಾನರೂಪವಾದ ಭಕ್ತಿಯಿಂದ, ನಿಸ್ಸಂಗೇನ= ಫಲಾಪೇಕ್ಷೆ ಇಲ್ಲದೆ ಮಾಡಿದ ಕರ್ಮಣಾ ಅಪಿ= ಕರ್ಮದಿಂದಲೂ. ಕರ್ತೃತ್ವಾತ್ = ಸರ್ವಕರ್ತೃವಾದ್ದರಿಂದ ಸಗುಣಂಬ್ರಹ್ಮ= ಜ್ಞಾನಾನಂದಾದಿ ಗುಣಪೂರ್ಣನಾದ, ಪುರುಷಂ= ಪುರುಷನಾಮಕನಾದ, ಪುರುಷರ್ಷಭಂ= ಪುರುಷೋತ್ತಮನನ್ನು, ಸಃ= ಅವನು, ಸಂಗತ್ಯ= ಪ್ರಲಯದಲ್ಲಿ ಉದರವನ್ನು ಹೊಂದಿ, ಪುನಃ= ಮತ್ತೆ, ಕಾಲೇ ಗುಣವ್ಯತಿಕರೇ= ಗುಣವೈಷಮ್ಯವೆಂದು ಕರೆಯುವ ಸೃಷ್ಟಿಕಾಲವು,ಕಾಲೇನ= ಕಾಲನಾಮಕನಾದ ಈಶ್ವರಮೂರ್ತಿನಾ= ಸರ್ವನಿಯಾಮಕನಾದ ಶ್ರೀಹರಿಯಿಂದ. ಜಾತೇ= ಉಂಟಾಗುತ್ತಿರಲು, ಯಥಾಪೂರ್ವಂ= ಹಿಂದಿನಂತೆ, ಪ್ರಜಾಯತೇ= ನಾಭಿಕಮಲದಿಂದ ಮಹತ್ತತ್ವಾಭಿಮಾನಿಯಾಗಿ ಪ್ರಕಟಗೊಳುತ್ತಾನೆ. ಇತಿ= ಹೀಗೆ, ಭಾಗವತೇ= ಭಾಗವತದಲ್ಲಿ, ಸ್ಪಷ್ಟಂ= ಸ್ಪಷ್ಟವಾಗಿ, ಇಯಂ ಕಥಾ= ಈ ಸೃಷ್ಟಿಪ್ರಲಯಗಳ ಕಥೆಯು ಸಮುದೀರಿತಾ= ಚೆನ್ನಾಗಿ ಹೇಳಲ್ಪಟ್ಟಿದೆ. ಅಸ್ಯ= ಈ ಬ್ರಹ್ಮನಿಗೆ (ಈ ಮೋಕ್ಷಕ್ಕೆ), ಜೀವೇಶಭೇದದೃಷ್ಟಿಃ= ಜೀವಬ್ರಹ್ಮರಭೇದಜ್ಞಾನವೂ, ಹರೌಗುರೌ= ಹರಿಗುರುಗಳಲ್ಲಿ ಅಭಿಮಾನಾಭಿಧಾ ಭಕ್ತಿಃ= ಅಭಿಮಾನವೆಂಬ ಭಕ್ತಿಯೂ, ನಿವೃತ್ತಂ ಕರ್ಮ= ನಿವೃತ್ತಕರ್ಮವೂ, ಸಾಧನಂ= ಮೋಕ್ಷಸಾಧನವೆಂದು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ–** ಮೇಲಿನ ಆರು ಶ್ಲೋಕಗಳ ತಾತ್ಪರ್ಯ ಹೀಗಿದೆ. ನಮ್ಮಗುರುಗಳಾದ ಮುಖ್ಯವಾಯುವು ಮುಂದಿನ ಸೃಷ್ಟಿಯಲ್ಲಿ ಪರಮಾತ್ಮನ ನಾಭಿಕಮಲದಿಂದ ಹುಟ್ಟಿ ಬ್ರಹ್ಮಪದವಿಯನ್ನು ಪಡೆದು ಸಮಗ್ರ ಜಗತ್ತನ್ನು ನಿಯಮಿಸುತ್ತಾನೆ. ಹೀಗೆಯೇ ಪರಮಾತ್ಮನು ಜಗತ್ತಿನ ಸೃಷ್ಟಿ ಲಯಕಾರ್ಯಗಳ ಚಕ್ರವನ್ನು ಯಾವಾಗಲು ನಡೆಸುತ್ತಾನೆ. ಯಾವನು ಸ್ಥಾವರಜಂಗಮಾತ್ಮಕವಾದ ಜಗತ್ತಿಗಿಂತ ಮೊದಲು ಶ್ರೀಹರಿಯಿಂದ ಜನಿಸುವನೋ ಮತ್ತು ವೇದಜ್ಞಾನಿಯಾದ್ದರಿಂದ ವೇದಗರ್ಭ ಎನಿಸುವನೋ ಅವನೇ ಋಷಿಗಳಿಂದ, ಸನತ್ಕುಮಾರಾದಿ ಯೋಗಿಗಳಿಂದ, ಮುಂದಿನಕಲ್ಪದಲ್ಲಿ ಯೋಗಪ್ರವರ್ತಕರಾದ ಸಿದ್ಧರಿಂದಲು ಸಹಿತನಾಗಿ ಹಿಂದಿನ ಕಲ್ಪದ ಬ್ರಹ್ಮಾದಿಗಳಂತೆ ತಾನೂ ಜನಿಸುತ್ತಾನೆ. ಜೀವೇಶಭೇದವನ್ನು ಚೆನ್ನಾಗಿ ತಿಳಿದು ಮುಖ್ಯವಾಯುವು ಪ್ರಸಿದ್ಧವಾದ ತನ್ನ ಅವತಾರಗಳಲ್ಲಿಯೂ ಪರಮಾತ್ಮನ ಮೂಲರೂಪ ಹಾಗು ಅವತಾರ ರೂಪಗಳಲ್ಲಿಯು ಒಂದೇ ರೀತಿಯಾದ ಭಕ್ತಿಯನ್ನು ಮಾಡುತ್ತಾ ಫಲಾಪೇಕ್ಷಾರಹಿತನಾಗಿ ಸರ್ವಜೀವನಿಯಾಮಕ ಗುಣಪರಿ-ಪೂರ್ಣನಾದ ಪರಮಾತ್ಮನನ್ನು ಪ್ರವೇಶಿಸಿ ತನ್ನ ಆಯುಷ್ಯ ಪುರ್ಣವಾದಾಗ ಧ್ಯಾನಮಗ್ನನಾಗಿ, ಕಾಲನಾಮಕನಾದ ಪರಮಾತ್ಮನ ಇಚ್ಛೆಯಿಂದ ಸೃಷ್ಟಿಕಾಲ ಪ್ರಾಪ್ತವಾದಾಗ ಹಿಂದಿನ ಕಲ್ಪದಂತೆ ಶ್ರೀಹರಿಯ ನಾಭಿಕಮಲದಿಂದ ಮಹತ್ತತ್ವಾಭಿಮಾನಿಯಾಗಿ ಮೊದಲು ಜನಿಸುತ್ತಾನೆ. ಜೀವೋತ್ತಮರಾದ ವಾಯುದೇವರಿಂದ ಆರಂಭಿಸಿ ಎಲ್ಲ ಮೋಕ್ಷಯೋಗ್ಯಜೀವರಿಗೆ ಜೀವೇಶ-ಭೇದಜ್ಞಾನ, ಹರಿಗುರುಗಳಲ್ಲಿ ಭಕ್ತಿ ನಿವೃತ್ತಕರ್ಮಾಚರಣೆ ಇವೆಲ್ಲವೂ ಮೋಕ್ಷಸಾಧನ ಎಂದು ಭಾಗವತದಲ್ಲಿ ಸ್ಪಷ್ಟವಾಗಿ ಹೇಳಿದೆ.

**ಭಾವವಿಲಾಸಿನೀ–** ವೇದಗರ್ಭೇ ಯಸ್ಯ ಸ ವೇದಗರ್ಭೋ ಮುಖ್ಯಪ್ರಾಣಃ । ಭವಿಷ್ಯದ್ಭಿ-ರ್ಋಷಿ- ಯೋಗೇಶ್ವರಸಿದ್ಧಾದ್ಯೈಃ ಸಹಸಗುಣಂ ಜ್ಞಾನನಂದಾದಿ ಗುಣಸಹಿತಂ ಬ್ರಹ್ಮ ಪರಬ್ರಹ್ಮಾತ್ಮಕಂ ಪುರುಷರ್ಷಭಂ ನಾರಾಯಣಂ ಸಮೇತ್ಯ ಪ್ರಲಯಕಾಲೇ ತದುದರೇಸ್ಥಿತ್ವೇತ್ಯರ್ಥಃ । ಗುಣವ್ಯತಿಕರೇ ಗುಣವೈಷಮ್ಯಾಖ್ಯ ಸೃಷ್ಟೌ ಜಾಯಮಾನಾಯಾಂ ಸತ್ಯಾಮ್ । ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ । ಯತ್ಪಾದ ಪದ್ಮ ಪರಿಚರ್ಯಯೇತ್ಯಾದಿ ವಾಕ್ಯೈಶ್ಚ ಸತ್ಯಲೋಕಾಧಿಪತ್ಯಸ್ಯಾಪಿ ಸಾಕ್ಷಾತ್ ಮೋಕ್ಷಾಂಗತಯಾ ಜ್ಞಾನಭಕ್ತಿವೈರಾಗ್ಯಾಣಾಮವಾಂತರ-ಫಲತ್ವಸಂಭವಾತ್ ಭೇದದೃಷ್ಟ್ಯಾ ಸ್ವತ್ರತೀಯಾವತಾರೇ ಸಮರ್ಥಿತಭೇದಜ್ಞಾನೇನ । ಅಭಿಮಾನೇನ ಮೂಲರೂಪೇಽವತಾರೇಷು ಚ ಹರಾವೇವ ಕೃತಬಹುಮಾನೇನ ನಿಃಸಂಗೇನ ಫಲಾಪೇಕ್ಷಾಂ ವಿನಾ ಕೃತೇನ ಕರ್ಮಣಾ ರಾಕ್ಷಸಸಂಹರಣಾದಿ ಕರ್ಮಣಾ ಚ ಪ್ರಸನ್ನಭಗವದ-ನುಗ್ರಹಾತ್ ಯಥಾಪೂರ್ವಂ ಪೂರ್ವಬ್ರಹ್ಮಾಣಮನತಿಕ್ರಮ್ಯ ತದುತ್ಪತ್ತಿಪ್ರಕಾರೇಣೇತ್ಯರ್ಥಃ । ಪ್ರಜಾಯತೇ ಮಹತ್ತತ್ವಪ್ರವರ್ತಕಸ್ಥೂಲದೇಹವತ್ತಯೋತ್ಪದ್ಯತ ಇತಿ ತಸ್ಯೈವ ಶ್ಲೋಕಸ್ಯ ಸಂಭವದರ್ಥಾಂತರಮಭಿಪ್ರೇತ್ಯಾಹ – ಅಸ್ಮದ್ಗುರುರಿತಿ ॥ ೨೦೫-೨೧೦ ॥

**ವಿವರಣೆ–** ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ, ಯತ್ಪಾದಪದ್ಮಪರಿಚರ್ಯಯಾ ಇತ್ಯಾದಿ ಭಾಗವತಶ್ಲೋಕಗಳಲ್ಲಿ ಮುಖ್ಯವಾಯುವಿನ ಉತ್ಪತ್ತಿಪ್ರಕಾರವನ್ನು ನಿರೂಪಿಸಿದ್ದಾರೆ. ಇದನ್ನೇ ಇಲ್ಲಿ ವಾದಿರಾಜರು ವಿವರಿಸಿದ್ದಾರೆ. ಚತುರ್ಮುಖಬ್ರಹ್ಮನ ಪದವಿಗೆ ಮುಂದಿನಕಲ್ಪಗಳಲ್ಲಿ ಬರುವ ಜೀವರನ್ನು ಋಜುಗಣವೆಂದು ಕರೆಯುತ್ತಾರೆ. ಆ ಗಣದ ಒಬ್ಬ ಜೀವನು ತನ್ನ 99 ನೆಯ ಜನ್ಮದಲ್ಲಿ ಮುಖ್ಯವಾಯುಪದವಿಯಲ್ಲಿದ್ದು ಪ್ರಳಯದನಂತರ ತನ್ನ ನೂರು ವರ್ಷಕಾಲಾವಧಿಯ ರಾತ್ರಿಕಾಲ ಕಳೆದು ಸೃಷ್ಟಿಕಾಲ ಪ್ರಾಪ್ತವಾದಾಗ ಇಡೀ ಜಗತ್ತಿಗಿಂತ ಮೊದಲು ತಾನೇ ಪರಮಾತ್ಮನಿಂದ ಜನಿಸುತ್ತಾನೆ ಎಂದರ್ಥ.

ಭೇದದೃಷ್ಟ್ಯಾ ಎಂದರೆ ತನ್ನ ಮೂರನೆಯ ಅವತಾರದಲ್ಲಿ ಸಮರ್ಥಿಸಿದ ಭೇದಜ್ಞಾನದಿಂದ ಎಂದರ್ಥ. ಅಭಿಮಾನೇನ ಎಂದರೆ ಮೂಲರೂಪ ಹಾಗು ಅವತಾರರೂಪಗಳಲ್ಲಿ ತೋರಿದ ಭಕ್ತಿಯಿಂದ ಎಂದರ್ಥ. ನಿಸ್ಸಂಗೇನ ಎಂದರೆ ಫಲಾಪೇಕ್ಷೆ ಇಲ್ಲದೇ ಮಾಡಿದ ರಾಕ್ಷಸಸಂಹಾರರೂಪಕರ್ಮದಿಂದಲೂ ಎಂದರ್ಥ ಯಥಾಪೂರ್ವಂ ಪ್ರಜಾಯತೇ ಹಿಂದಿನ ಬ್ರಹ್ಮನಂತೆ ಮಹತ್ತತ್ವಪ್ರವರ್ತಕ ಸ್ಥೂಲದೇಹದಿಂದ ಹುಟ್ಟುವನು ಎಂದರ್ಥ.

**ಮುಖ್ಯಂ ತದುಭಯಂ ಕರ್ಮ ತ್ವಮುಖ್ಯಂ ತತ್ರ ಸಾಧನಮ್ ।**
**ಅತಸ್ತೃತೀಯಂ ತತ್ ಪ್ರೋಕ್ತಂ ಅಪಿಶಬ್ದೋಽಪ್ಯಗರ್ಹಯತ್ ॥ ೨೧೧ ॥**

**ಅರ್ಥ–** ತದುಭಯಂ= ಭೇದದೃಷ್ಟ್ಯಾಭಿಮಾನೇನ ಎಂಬಲ್ಲಿ ಹೇಳಿದ ಜೀವೇಶಭೇದಜ್ಞಾನ ಹಾಗು ಭಕ್ತಿ ಇವೆರಡು. ಮುಖ್ಯಂ= ಪ್ರಧಾನವಾದುವು, ತತ್ರ= ಮೋಕ್ಷ ಸಾಧನಗಳಲ್ಲಿ, ಕರ್ಮ= ಕರ್ಮವು ಅಮುಖ್ಯಂ ಸಾಧನಮ್= ಅಮುಖ್ಯವಾದ ಸಾಧನವು, ಅತಃ= ಆದ್ದರಿಂದ, ತತ್= ಆ ಕರ್ಮವು, ತೃತೀಯಮ್= ಮೂರನೆಯದಾಗಿ (ನಿಸ್ಸಂಗೇನಾಪಿ ಕರ್ಮಣಾ ಎಂದು). ಪ್ರೋಕ್ತಮ್= ಹೇಳಲ್ಪಟ್ಟಿದೆ, ಅಪಿ ಶಬ್ದೋಪಿ = ನಿಸ್ಸಂಗೇನಾಪಿ ಎಂಬಲ್ಲಿರುವ ಅಪಿ ಶಬ್ದವಾದರೂ, ಅಗರ್ಹಯತ್= ಕರ್ಮವನ್ನು ಕನಿಷ್ಠಸಾಧನವನ್ನಾಗಿ (ನಿಂದಿಸಿತು) ಹೇಳಿತು.

**ಅನುವಾದ– ಹಿಂದೆ ಹೇಳಿದ ಸಾಧನಗಳಲ್ಲಿ ಭೇದಜ್ಞಾನ, ಹಾಗೂ ಭಕ್ತಿ ಇವೆರಡು ಪ್ರಧಾನವಾದವುಗಳು. ಕರ್ಮವು ಅಮುಖ್ಯಸಾಧನವಾಗಿದೆ. ಆದ್ದರಿಂದಲೇ ಕರ್ಮವನ್ನು ನಿಸ್ಸಂಗೇನಾಪಿ ಕರ್ಮಣಾ ಎಂದು ಮೂರನೆಯದಾಗಿ ಹೇಳಿದ್ದಾರೆ. ನಿಸ್ಸಂಗೇನಾಪಿ ಎಂಬಲ್ಲಿರುವ ಅಪಿಶಬ್ದವು ಕರ್ಮಕ್ಕೆ ಅಪ್ರಾಧಾನ್ಯವನ್ನು ಸೂಚಿಸುತ್ತದೆ.**

**ಭಾವವಿಲಾಸಿನೀ– ತತ್ರ ಮುಕ್ತೌ ತೇಷು ಸಾಧನೇಷು ವಾ । ಅತಃ ಅಪ್ರಧಾನತ್ವಾತ್ । ತತ್ಫಲಸಂಗರಹಿತಂ ಕರ್ಮ ॥ ೨೧೧ ॥**

**ವಿವರಣೆ–** ವಾದಿರಾಜರು ಒಂದು ಚಮತ್ಕಾರವನ್ನು ಇಲ್ಲಿ ತೋರಿಸುತ್ತಾರೆ ಮೋಕ್ಷಸಾಧನಗಳಲ್ಲಿ ಭೇದಜ್ಞಾನ, ಭಕ್ತಿ ಇವೆರಡು ಪ್ರಧಾನ ಸಾಧನ. ಫಲಾಪೇಕ್ಷಾರಹಿತಕರ್ಮವು ಅಪ್ರಧಾನಸಾಧನ ಎಂಬುದನ್ನು ತಿಳಿಸಲು ಭಾಗವತದಲ್ಲಿ ಭೇದದೃಷ್ಟ್ಯಾಭಿಮಾನೇನ ಎಂದು ಭೇದಜ್ಞಾನವನ್ನು ಮೊದಲು ಹೇಳಿ ಅಭಿಮಾನಾಭಿಧವಾದ ಭಕ್ತಿಯನ್ನು ಎರಡನೆಯದಾಗಿ ಹೇಳಿ ನಿಸ್ಸಂಗೇನಾಪಿ ಕರ್ಮಣಾ ಎಂದು ಕರ್ಮವನ್ನು ಮೂರನೆಯದಾಗಿ ಹೇಳಿದ್ದಾರೆ ಎಂದು.

**ಸಮುಚ್ಚಯಾರ್ಥಂ ಗರ್ಹಾರ್ಥಮಪಿಶಬ್ದೋಽಯಮೀರಿತಃ ।**
**ನಚೇಚ್ಚಶಬ್ದಂ ಪ್ರಬ್ರೂಯಾತ್ ಸೋಽಪಿ ಛಂದೋ ಭಿನತ್ತಿ ನ ॥ ೨೧೨ ॥**

**ಅರ್ಥ–** ಅಯಂ ಅಪಿ ಶಬ್ದಃ = ಈ ಅಪಿ ಶಬ್ದವು, ಸಮುಚ್ಚಯಾರ್ಥಂ=ಸಮುಚ್ಚಯ (ಜೊತೆಗೆ ಸೇರಿಸುವ), ಹಾಗೂ ಗರ್ಹಾರ್ಥಂ= ನಿಂದೆಗಾಗಿ, ಈರಿತಃ= ಹೇಳಲ್ಪಟ್ಟಿದೆ. ನ ಚೇತ್= ಗರ್ಹಾರ್ಥವಿಲ್ಲದಿದ್ದರೆ, ಚಶಬ್ದಂ= ಚ ಎಂಬ ಶಬ್ದವನ್ನು ಪ್ರಬ್ರೂಯಾತ್= ಹೇಳಬಹುದಿತ್ತು ಸೋಽಪಿ= ಆ ಚ ಶಬ್ದವಾದರೂ, ಛಂದಃ= ಛಂದಸ್ಸನ್ನು ನ ಭಿನತ್ತಿ= ಭಂಗಮಾಡುವುದಿಲ್ಲ.

**ಅನುವಾದ–** ಅಪಿಶಬ್ದಕ್ಕೆ ಸಮುಚ್ಚಯ ಹಾಗು ಗರ್ಹಾ (ನಿಂದೆ) ಎಂಬ ಅರ್ಥಗಳಿವೆ. ಪ್ರಕೃತದಲ್ಲಿ ಗರ್ಹಾ ಎಂಬ ಅರ್ಥ ವಿವಕ್ಷಿತವಲ್ಲದಿದ್ದರೆ ಚ ಶಬ್ದವನ್ನೇ ಬಳಸ ಬಹುದಿತ್ತು. ಹಾಗೆ ಬಳಸಿದ್ದರಿಂದ ಛಂದೋಭಂಗವಾಗುತ್ತಿರಲಿಲ್ಲ. ಏಕೆಂದರೆ ನಿಸ್ಸಂಗೇನ ಚ ಕರ್ಮಣಾ ಎಂದರೂ ಯಾವ ಛಂದೋಭಂಗವಾಗುತ್ತಿರಲಿಲ್ಲ. ಅಪಿಶಬ್ದವನ್ನು ಪ್ರಯೋಗಿಸಿದ್ದರಿಂದ ಗರ್ಹಾರ್ಥವೇ ವಿವಕ್ಷಿತವೆಂದು ಸ್ಪಷ್ಟವಾಗುತ್ತದೆ.

**ಭಾವವಿಲಾಸಿನೀ–** ನ ಚೇದ್ಗರ್ಹಾಪೇಕ್ಷಾ ನ ಚೇತ್ । ಸೋಽಪಿ ಚ ಶಬ್ದೋಽಪಿ । ನಿಃಸಂಗೇನ ಚ ಕರ್ಮಣೇತ್ಯುಕ್ತೇಽಪಿ ಛಂದೋಭಂಗಾಭಾವಾದಿತಿ ಭಾವಃ ॥ ೨೧೨ ॥

**ವಿವರಣೆ–** ಅಪಿಶಬ್ದಕ್ಕೆ ಅಮರಕೋಶದಲ್ಲಿ ಗರ್ಹಾಸಮುಚ್ಚಯ ಪ್ರಶ್ನಶಂಕಾ-ಸಂಭಾವನಾಸ್ಪದ ಎಂಬುದಾಗಿ ಗರ್ಹಾ ಸಮುಚ್ಚಯಗಳಲ್ಲದೆ ಪ್ರಶ್ನ, ಶಂಕೆ, ಸಂಭಾವನಾ ಎಂಬ ಅರ್ಥಗಳು ಪ್ರಸಿದ್ಧವಾಗಿದೆ. ಪ್ರಕೃತ ಅಪಿಶಬ್ದವು ಸಮುಚ್ಚಯಾರ್ಥದ ಜೊತೆಗೆ ಗರ್ಹಾರ್ಥವನ್ನೇ ಹೇಳುತ್ತದೆಂದು ನಿಶ್ಚಯ ಮಾಡಿದ್ದಾರೆ.

**ಅಭಿಮಾನೋಽಪ್ಯುಕ್ತರೀತ್ಯಾ ಭಕ್ತಿರೇವ ಭವೇದಸೌ ।**
**ಮೋಕ್ಷಸಾಧನಪಂಕ್ತೌ ಯಃ ಪಠಿತೋ ದಿವ್ಯಯೋಗಿನಾ ॥ ೨೧೩ ॥**

**ಅರ್ಥ–** ಅಸೌ ಅಭಿಮಾನೋಽಪಿ= ಈ ಅಭಿಮಾನವಾದರೂ ಉಕ್ತರೀತ್ಯಾ=ಹಿಂದೆ ಹೇಳಿದ ಪ್ರಕಾರದಿಂದ ಭಕ್ತಿರೇವ= ಭಕ್ತಿಯೇ ಭವೇತ್= ಆಗುತ್ತದೆ. ಏಕೆಂದರೆ ಯಃ= ಯಾವ

**ವಿವರಣೆ–** ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಿಂಚತಾಮೇತಿ, ಯತ್ಪಾದಪದ್ಮಪರಿಚರ್ಯಯಾ ಇತ್ಯಾದಿ ಭಾಗವತಶ್ಲೋಕಗಳಲ್ಲಿ ಮುಖ್ಯವಾಯುವಿನ ಉತ್ಪತ್ತಿಪ್ರಕಾರವನ್ನು ನಿರೂಪಿಸಿದ್ದಾರೆ. ಇದನ್ನೇ ಇಲ್ಲಿ ವಾದಿರಾಜರು ವಿವರಿಸಿದ್ದಾರೆ. ಚತುರ್ಮುಖಬ್ರಹ್ಮನ ಪದವಿಗೆ ಮುಂದಿನಕಲ್ಪಗಳಲ್ಲಿ ಬರುವ ಜೀವರನ್ನು ಋಜುಗಣವೆಂದು ಕರೆಯುತ್ತಾರೆ. ಆ ಗಣದ ಒಬ್ಬ ಜೀವನು ತನ್ನ 99 ನೆಯ ಜನ್ಮದಲ್ಲಿ ಮುಖ್ಯವಾಯುಪದವಿಯಲ್ಲಿದ್ದು ಪ್ರಳಯದನಂತರ ತನ್ನ ನೂರು ವರ್ಷಕಾಲಾವಧಿಯ ರಾತ್ರಿಕಾಲ ಕಳೆದು ಸೃಷ್ಟಿಕಾಲ ಪ್ರಾಪ್ತವಾದಾಗ ಇಡೀ ಜಗತ್ತಿಗಿಂತ ಮೊದಲು ತಾನೇ ಪರಮಾತ್ಮನಿಂದ ಜನಿಸುತ್ತಾನೆ ಎಂದರ್ಥ.

ಭೇದದೃಷ್ಟ್ಯಾ ಎಂದರೆ ತನ್ನ ಮೂರನೆಯ ಅವತಾರದಲ್ಲಿ ಸಮರ್ಥಿಸಿದ ಭೇದಜ್ಞಾನದಿಂದ ಎಂದರ್ಥ. ಅಭಿಮಾನೇನ ಎಂದರೆ ಮೂಲರೂಪ ಹಾಗು ಅವತಾರರೂಪಗಳಲ್ಲಿ ತೋರಿದ ಭಕ್ತಿಯಿಂದ ಎಂದರ್ಥ. ನಿಸ್ಸಂಗೇನ ಎಂದರೆ ಫಲಾಪೇಕ್ಷೆ ಇಲ್ಲದೇ ಮಾಡಿದ ರಾಕ್ಷಸಸಂಹಾರರೂಪಕರ್ಮದಿಂದಲೂ ಎಂದರ್ಥ ಯಥಾಪೂರ್ವಂ ಪ್ರಜಾಯತೇ ಹಿಂದಿನ ಬ್ರಹ್ಮನಂತೆ ಮಹತ್ತತ್ತ್ವಪ್ರವರ್ತಕ ಸ್ಥೂಲದೇಹದಿಂದ ಹುಟ್ಟುವನು ಎಂದರ್ಥ.

**ಮುಖ್ಯಂ ತದುಭಯಂ ಕರ್ಮ ತ್ವಮುಖ್ಯಂ ತತ್ರ ಸಾಧನಮ್ ।**
**ಅತಸ್ತೃತೀಯಂ ತತ್ ಪ್ರೋಕ್ತಂ ಅಪಿಶಬ್ದೋಽಪ್ಯಗರ್ಹಯತ್ ॥ ೨೧೧ ॥**

**ಅರ್ಥ–** ತದುಭಯಂ= ಭೇದದೃಷ್ಟ್ಯಾಭಿಮಾನೇನ ಎಂಬಲ್ಲಿ ಹೇಳಿದ ಜೀವೇಶಭೇದಜ್ಞಾನ ಹಾಗು ಭಕ್ತಿ ಇವೆರಡು. ಮುಖ್ಯಂ= ಪ್ರಧಾನವಾದುವು, ತತ್ರ= ಮೋಕ್ಷ ಸಾಧನಗಳಲ್ಲಿ, ಕರ್ಮ= ಕರ್ಮವು ಅಮುಖ್ಯಂ ಸಾಧನಮ್= ಅಮುಖ್ಯವಾದ ಸಾಧನವು, ಅತಃ= ಆದ್ದರಿಂದ, ತತ್= ಆ ಕರ್ಮವು, ತೃತೀಯಮ್= ಮೂರನೆಯದಾಗಿ (ನಿಸ್ಸಂಗೇನಾಪಿ ಕರ್ಮಣಾ ಎಂದು). ಪ್ರೋಕ್ತಮ್= ಹೇಳಲ್ಪಟ್ಟಿದೆ, ಅಪಿ ಶಬ್ದೋಽಪಿ = ನಿಸ್ಸಂಗೇನಾಪಿ ಎಂಬಲ್ಲಿರುವ ಅಪಿ ಶಬ್ದವಾದರೂ, ಅಗರ್ಹಯತ್= ಕರ್ಮವನ್ನು ಕನಿಷ್ಠಸಾಧನವನ್ನಾಗಿ (ನಿಂದಿಸಿತು) ಹೇಳಿತು.

**ಅನುವಾದ– ಹಿಂದೆ ಹೇಳಿದ ಸಾಧನಗಳಲ್ಲಿ ಭೇದಜ್ಞಾನ, ಹಾಗೂ ಭಕ್ತಿ ಇವೆರಡು ಪ್ರಧಾನವಾದವುಗಳು. ಕರ್ಮವು ಅಮುಖ್ಯಸಾಧನವಾಗಿದೆ. ಆದ್ದರಿಂದಲೇ ಕರ್ಮವನ್ನು ನಿಸ್ಸಂಗೇನಾಪಿ ಕರ್ಮಣಾ ಎಂದು ಮೂರನೆಯದಾಗಿ ಹೇಳಿದ್ದಾರೆ. ನಿಸ್ಸಂಗೇನಾಪಿ ಎಂಬಲ್ಲಿರುವ ಅಪಿಶಬ್ದವು ಕರ್ಮಕ್ಕೆ ಅಪ್ರಾಧಾನ್ಯವನ್ನು ಸೂಚಿಸುತ್ತದೆ.**

**ಭಾವವಿಲಾಸಿನೀ– ತತ್ರ ಮುಕ್ತೌ ತೇಷು ಸಾಧನೇಷು ವಾ । ಅತಃ ಅಪ್ರಧಾನತ್ವಾತ್ । ತತ್ಫಲಸಂಗರಹಿತಂ ಕರ್ಮ ॥ ೨೧೧ ॥**

**ವಿವರಣೆ–** ವಾದಿರಾಜರು ಒಂದು ಚಮತ್ಕಾರವನ್ನು ಇಲ್ಲಿ ತೋರಿಸುತ್ತಾರೆ ಮೋಕ್ಷಸಾಧನಗಳಲ್ಲಿ ಭೇದಜ್ಞಾನ, ಭಕ್ತಿ ಇವೆರಡು ಪ್ರಧಾನ ಸಾಧನ. ಫಲಾಪೇಕ್ಷಾರಹಿತಕರ್ಮವು ಅಪ್ರಧಾನಸಾಧನ ಎಂಬುದನ್ನು ತಿಳಿಸಲು ಭಾಗವತದಲ್ಲಿ ಭೇದದೃಷ್ಟ್ಯಾಭಿಮಾನೇನ ಎಂದು ಭೇದಜ್ಞಾನವನ್ನು ಮೊದಲು ಹೇಳಿ ಅಭಿಮಾನಾಭಿಧವಾದ ಭಕ್ತಿಯನ್ನು ಎರಡನೆಯದಾಗಿ ಹೇಳಿ ನಿಸ್ಸಂಗೇನಾಪಿ ಕರ್ಮಣಾ ಎಂದು ಕರ್ಮವನ್ನು ಮೂರನೆಯದಾಗಿ ಹೇಳಿದ್ದಾರೆ ಎಂದು.

**ಸಮುಚ್ಚಯಾರ್ಥಂ ಗರ್ಹಾರ್ಥಮಪಿಶಬ್ದೋऽಯಮೀರಿತಃ ।**
**ನಚೇಚ್ಚಶಬ್ದಂ ಪ್ರಬ್ರೂಯಾತ್ ಸೋಪಿ ಛಂದೋ ಭಿನತ್ತಿ ನ ॥ ೨೧೨ ॥**

**ಅರ್ಥ–** ಅಯಂ ಅಪಿ ಶಬ್ದಃ = ಈ ಅಪಿ ಶಬ್ದವು, ಸಮುಚ್ಚಯಾರ್ಥಂ=ಸಮುಚ್ಚಯ (ಜೊತೆಗೆ ಸೇರಿಸುವ), ಹಾಗೂ ಗರ್ಹಾರ್ಥಂ= ನಿಂದೆಗಾಗಿ, ಈರಿತಃ= ಹೇಳಲ್ಪಟ್ಟಿದೆ. ನ ಚೇತ್= ಗರ್ಹಾರ್ಥವಿಲ್ಲದಿದ್ದರೆ, ಚಶಬ್ದಂ= ಚ ಎಂಬ ಶಬ್ದವನ್ನು ಪ್ರಬ್ರೂಯಾತ್= ಹೇಳಬಹುದಿತ್ತು ಸೋಪಿ= ಆ ಚ ಶಬ್ದವಾದರೂ, ಛಂದಃ= ಛಂದಸ್ಸನ್ನು ನ ಭಿನತ್ತಿ= ಭಂಗಮಾಡುವುದಿಲ್ಲ.

**ಅನುವಾದ–** ಅಪಿಶಬ್ದಕ್ಕೆ ಸಮುಚ್ಚಯ ಹಾಗು ಗರ್ಹಾ (ನಿಂದೆ) ಎಂಬ ಅರ್ಥಗಳಿವೆ. ಪ್ರಕೃತದಲ್ಲಿ ಗರ್ಹಾ ಎಂಬ ಅರ್ಥ ವಿವಕ್ಷಿತವಲ್ಲದಿದ್ದರೆ ಚ ಶಬ್ದವನ್ನೇ ಬಳಸಬಹುದಿತ್ತು. ಹಾಗೆ ಬಳಸಿದ್ದರಿಂದ ಛಂದೋಭಂಗವಾಗುತ್ತಿರಲಿಲ್ಲ. ಏಕೆಂದರೆ ನಿಸ್ಸಂಗೇನ ಚ ಕರ್ಮಣಾ ಎಂದರೂ ಯಾವ ಛಂದೋಭಂಗವಾಗುತ್ತಿರಲಿಲ್ಲ. ಅಪಿಶಬ್ದವನ್ನು ಪ್ರಯೋಗಿಸಿದ್ದರಿಂದ ಗರ್ಹಾರ್ಥವೇ ವಿವಕ್ಷಿತವೆಂದು ಸ್ಪಷ್ಟವಾಗುತ್ತದೆ.

**ಭಾವವಿಲಾಸಿನೀ–** ನ ಚೇದ್ಗರ್ಹಾಪೇಕ್ಷಾ ನ ಚೇತ್ । ಸೋऽಪಿ ಚ ಶಬ್ದೋऽಪಿ । ನಿಃಸಂಗೇನ ಚ ಕರ್ಮಣೇತ್ಯುಕ್ತೇऽಪಿ ಛಂದೋಭಂಗಾಭಾವಾದಿತಿ ಭಾವಃ ॥ ೨೧೨ ॥

**ವಿವರಣೆ–** ಅಪಿಶಬ್ದಕ್ಕೆ ಅಮರಕೋಶದಲ್ಲಿ ಗರ್ಹಾಸಮುಚ್ಚಯ ಪ್ರಶ್ನಶಂಕಾ-ಸಂಭಾವನಾಸ್ಪದ ಎಂಬುದಾಗಿ ಗರ್ಹಾ ಸಮುಚ್ಚಯಗಳಲ್ಲದೆ ಪ್ರಶ್ನ, ಶಂಕೆ, ಸಂಭಾವನಾ ಎಂಬ ಅರ್ಥಗಳು ಪ್ರಸಿದ್ಧವಾಗಿದೆ. ಪ್ರಕೃತ ಅಪಿಶಬ್ದವು ಸಮುಚ್ಚಯಾರ್ಥದ ಜೊತೆಗೆ ಗರ್ಹಾರ್ಥವನ್ನೇ ಹೇಳುತ್ತದೆಂದು ನಿಶ್ಚಯ ಮಾಡಿದ್ದಾರೆ.

**ಅಭಿಮಾನೋಪ್ಯುಕ್ತರೀತ್ಯಾ ಭಕ್ತಿರೇವ ಭವೇದಸೌ ।**
**ಮೋಕ್ಷಸಾಧನಪಂಕ್ತೌ ಯಃ ಪಠಿತೋ ದಿವ್ಯಯೋಗಿನಾ ॥ ೨೧೩ ॥**

**ಅರ್ಥ–** ಅಸೌ ಅಭಿಮಾನೋಪಿ= ಈ ಅಭಿಮಾನವಾದರೂ ಉಕ್ತರೀತ್ಯಾ=ಹಿಂದೆ ಹೇಳಿದ ಪ್ರಕಾರದಿಂದ ಭಕ್ತಿರೇವ= ಭಕ್ತಿಯೇ ಭವೇತ್= ಆಗುತ್ತದೆ. ಏಕೆಂದರೆ ಯಃ= ಯಾವ

ಅಭಿಮಾನವು ದಿವ್ಯಯೋಗಿನಾ = ಶುಕಾದಿದಿವ್ಯಜ್ಞಾನಿಗಳಿಂದ ಮೋಕ್ಷಸಾಧನಪಂಕ್ತೌ= ಮೋಕ್ಷಸಾಧನಗಳ ಸಾಲಿನಲ್ಲಿ ಪಠಿತಃ= ಹೇಳಲ್ಪಟ್ಟಿದೆ.

**ಅನುವಾದ–** ಭೇದದೃಷ್ಟ್ಯಾ ಅಭಿಮಾನೇನ ಎಂಬಲ್ಲಿ ಅಭಿಮಾನ ಶಬ್ದವು ಭಕ್ತಿ ಎಂಬ ಅರ್ಥವನ್ನು ಹೇಳುತ್ತದೆ. ಏಕೆಂದರೆ ಶುಕಮುನಿಗಳು ಮೋಕ್ಷಸಾಧನಗಳ ಪಂಕ್ತಿಯಲ್ಲಿ ಆ ಶಬ್ದವನ್ನು ಸೇರಿಸಿದ್ದಾರೆ.

**ಭಾವವಿಲಾಸಿನೀ–** ಮೋಕ್ಷಸಾಧನಪಂಕ್ತೌ ಸರ್ವಾವಿವಾದನಿವೃತ್ತಿಕರ್ಮಾಖ್ಯಮೋಕ್ಷಸಾಧನ ಪಂಕ್ತೌ ॥ ೨೧೩ ॥

**ವಿವರಣೆ–** ಭೇದಜ್ಞಾನ, ಭಕ್ತಿ ಮತ್ತು ನಿವೃತ್ತಕರ್ಮವು ಮೋಕ್ಷಸಾಧನವೆಂದು ಸರ್ವಸಮ್ಮತವಾಗಿದೆ. ಶುಕಮುನಿಗಳು ಭಾಗವತದಲ್ಲಿ ಭೇದದೃಷ್ಟ್ಯಾಭಿಮಾನೇನ ಎಂಬುದಾಗಿ ಹೇಳಿರುವುದರಿಂದ ಅಭಿಮಾನಶಬ್ದಕ್ಕೆ ಭಕ್ತಿ ಎಂದೇ ಅರ್ಥ ಬೇರೆ ಅರ್ಥವಲ್ಲ.

ಏವಂ ಪರಾಂತಕಾಲೇ ಸ್ಯಾನ್ಮುಕ್ತತ್ವಂ ಯೋಗ್ಯಯೋಗಿನಾಮ್ ।
ಪರಾಂತಕಾಲೋ ಯನ್ಮುಕ್ತಿಕಾಲಃ ಶ್ರುತಿಷು ಕಥ್ಯತೇ ।
ನಿವೃತ್ತಂ ಕರ್ಮ ಯನ್ಮುಕ್ತ್ಯೈ ತತೋನ್ಯೋಽರ್ಥೋ ನ ಶೋಭತೇ॥ ೨೧೪ ॥

**ಅರ್ಥ–** ಏವಂ=ಹೀಗೆ ಪರಾಂತಕಾಲೇ= ಪರಾಂತಕಾಲದಲ್ಲಿ ಯೋಗ್ಯಯೋಗಿನಾಂ ಮುಕ್ತಿಯೋಗ್ಯರಾದ ಯೋಗಿಗಳಿಗೆ, ಮುಕ್ತತ್ವಂ= ಮುಕ್ತಿಪ್ರಾಪ್ತಿಯು ( ಮುಕ್ತತ್ವವು) ಸ್ಯಾತ್= ಆಗುತ್ತದೆ. ಯತ್= ಏಕೆಂದರೆ, ಪರಾಂತಕಾಲಃ= ಪರಾಂತಕಾಲವು, ಮುಕ್ತಿಕಾಲಃ= ಮೋಕ್ಷಕಾಲವೆಂದು, ಶ್ರುತಿಷು= ಶ್ರುತಿಗಳಲ್ಲಿ ಕಥ್ಯತೇ=ಹೇಳಲ್ಪಡುತ್ತದೆ, ಮತ್ತು ಯತ್= ಯಾವ ಕಾರಣದಿಂದ, ನಿವೃತ್ತಂ ಕರ್ಮ= ನಿವೃತ್ತಕರ್ಮಾನುಷ್ಠಾನವು, ಮುಕ್ತ್ಯೈ= ಮುಕ್ತಿಗಾಗಿ ಇರುತ್ತದೆಯೋ, ತತಃ= ಆ ಕಾರಣದಿಂದ, ಅನ್ಯಃ ಅರ್ಥಃ= ಬೇರೆ ಅರ್ಥವು ನ ಶೋಭತೇ= ಪ್ರಶಸ್ತವಾಗುವುದಿಲ್ಲ.

**ಅನುವಾದ–** ಪರಾಂತಕಾಲದಲ್ಲಿ ಯೋಗ್ಯಜ್ಞಾನಿಗಳಿಗೆ ಮುಕ್ತಿಯು ಲಭಿಸುತ್ತದೆ ಎಂದು ಪರಾಂತಕಾಲದಲ್ಲಿ ಮುಕ್ತಿಯನ್ನು ಹೇಳಿರುವುದರಿಂದ ಮತ್ತು ನಿವೃತ್ತ ಕರ್ಮವು ಮೋಕ್ಷಸಾಧನವೆಂದು ಸರ್ವಸಮ್ಮತವಾದ್ದರಿಂದಲೂ ನಿವೃತ್ತಕರ್ಮದ ಜೊತೆಗೆ ಅಭಿಮಾನಶಬ್ದವನ್ನು ಸೇರಿಸಿರುವುದರಿಂದ ಬೇರೆ ಅರ್ಥವು ಯುಕ್ತವಲ್ಲ.

**ಭಾವವಿಲಾಸಿನೀ–** ಯದ್ಯಸ್ಮಾತ್ । ಶ್ರುತಿಷು ಪರಾಂತಕಾಲೇ ಪರಾಮೃತಾದಿತ್ಯಾದಿಶ್ರುತಿಷು । ಯದ್ಯಸ್ಮಾತ್ । ತತೋ ಮುಕ್ತಿಸಾಧನತ್ವೇನ ಸರ್ವಾಭಿಮತನಿವೃತ್ತಕರ್ಮಣಾ ಸಹ ಪಠಿತ-ತ್ವಾತ್ । ಅನ್ಯೋಽರ್ಥೋ ವ್ಯಾವಹಾರಿಕಭೇದದೃಷ್ಟ್ಯಾ ದೇಹಾದ್ಯಭಿಮಾನೇನ ಪುನರಿಹೈವ

ಜಾಯತ ಇತ್ಯರ್ಥಃ । ಮುಕ್ತ್ಯೈಕಸಾಧನನಿವೃತ್ತಕರ್ಮಣ ಉತ್ಪತ್ತಿಹೇತುತ್ವಾಯೋಗಾದೃಷೀಣಾಂ ಸನತ್ಕುಮಾರಾದಿ ಯೋಗೀಶ್ವರಾಣಾಂ ಯೋಗ ಪ್ರವರ್ತಕಪ್ರಸಿದ್ಧಾನಾಂ ಸಕಲವೇದಪ್ರವರ್ತಕ-ಬ್ರಹ್ಮಣಶ್ಚಾಂತೇ ದೇಹಾಭಿಮಾನಸ್ಯ ಚಾಯೋಗಾತ್ ಪರಾಂತಕಾಲೇ ಪರಿಮುಚ್ಯಂತಿ ಸರ್ವ ಇತಿ ಶ್ರುತಿವಿರೋಧಾಚ್ಚ । ಅತೋಽಸ್ಮದುಕ್ತವಿಧಯಾ ಜ್ಞಾನಭಕ್ತಿವೈರಾಗ್ಯಸಾಧನತ್ರಯೇಣ ಪೂರ್ವಬ್ರಹ್ಮವದಾವಿರ್ಭೂತಾನಂದೋ ಭವತೀತ್ಯೇವಾರ್ಥಃ । ಪರಾಂತಕಾಲೇ ನ ಮೋಕ್ಷಃ ಕಿಂತು ಪುನರಪಿ ಬ್ರಹ್ಮಶತವರ್ಷಾನಂತರಂ ಮೋಕ್ಷ ಇತಿ ಸ್ವಯೂಥ್ಯಃ ಕಶ್ಚಿತ್ತದಪಿ ನ। ಪರಾಂತಕಾಲೇ ಪರಿಮುಚ್ಯಂತಿ ಸರ್ವ ಇತಿ ಶ್ರುತಿವಿರೋಧಾತ್ । ನ ಹ್ಯುದಿತೇ ಜುಹೋತೀತಿ ಶ್ರುತೇರುದಯಾನಂತರಂ ತ್ರಿಂಶದ್ಘಟಿಕೋಪರಿ ಜುಹೋತೀತಿ ಕೋಽಪಿ ಪ್ರೇಕ್ಷಾವಾನರ್ಥಂ ಬ್ರೂತೇ । ''ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇಽಥ ಸಂಪತ್ಸ್ಯತ ಇತಿ ಶ್ರುತೇಃ ಪ್ರಾರಬ್ಧಕರ್ಮ ನಾಶಾನಂತರಂ ಮೋಕ್ಷವಿಲಂಬಾಯೋಗಾಚ್ಚ । ಉಕ್ತವಿಧಾಯಾ ವೈಕುಂಠಾತ್ ಶ್ವೇತದ್ವೀಪಂ ಪ್ರಾಪ್ಯ ಗಮನಸಂಭವೇನ ಬಹುನಾತ್ರ ಕಿಮುಕ್ತೇನ ಯಾವಚ್ಚೇತಂ ನ ಗಚ್ಛತಿ ಯೋಗೀ ತಾವನ್ನ ಮುಕ್ತಸ್ಯಾತ್ ಏಷ ಶಾಸ್ತ್ರಸ್ಯ ನಿರ್ಣಯಃ ವಾಕ್ಯಸ್ಯಾಪ್ಯನುಕೂಲತ್ವಾತ್ । ಪ್ರಾರಬ್ಧಕರ್ಮನಾಶಸ್ತು ಯದ್ಯಪಿ ವಿರಾಜಾತರಣಾವಧಿಸ್ತಥಾಪಿ ಸ ಪ್ರಾರಬ್ಧಕರ್ಮರೂಪ-ಪ್ರಕೃತೇರ್ಬಂಧೋ ಬ್ರಹ್ಮಣಾ ಸಹೈವಭಿದ್ಯತೇ ನ ಸ್ವೇಚ್ಛಯೇತ್ಯರ್ಥಸಂಭವೇನಾಸ್ಯಾಪಿ ವಾಕ್ಯಸ್ಯಾಸ್ಮದನುಕೂಲತ್ವಾತ್ । ಅನ್ಯಥಾ ''ಉಪಾಸತೇ ತೇ ಪುರತಃ ಸಮಾಪ್ನುಯು-ರ್ಬ್ರಹ್ಮಾಣಮಸ್ಮಾನ್ಮತಿಮಾಪ್ಯ ವಿಷ್ಣುಮ್ ॥ ಪ್ರಯಾಂತ್ಯತೋಽನ್ಯೇಽಪಿ ತಮಾಪ್ಯ ತಸ್ಮಾದ್ದರಿಂ ಗತಾ ಮುಕ್ತಿಭಾಜಃ ಪರಾಂತ'' ಇತಿ ಸ್ಪಷ್ಟಾಚಾರ್ಯವಚನವಿರೋಧೇನಾಪ- ಸಿದ್ಧಾಂತಾ-ಪಾತಾದತೋ ಯತ್‌ಕಿಂಚಿದೇ ತತ್ ॥ ೨೧೪ ॥

**ವಿವರಣೆ**– ಭೇದದೃಷ್ಟ್ಯಾಭಿಮಾನೇನ ಎಂಬಲ್ಲಿ ವ್ಯಾವಹಾರಿಕಭೇದದೃಷ್ಟಿ ಹಾಗೂ ದೇಹಾಭಿಮಾನ ಎಂಬ ಅರ್ಥ ಯುಕ್ತವಲ್ಲ. ಅವುಗಳಿಂದ ಪುನಃ ಸಂಸಾರದಲ್ಲಿಯೇ ಹುಟ್ಟಬೇಕಾಗುತ್ತದೆ. ನಿವೃತ್ತಕರ್ಮವು ಪುನರ್ಜನ್ಮಕ್ಕೆ ಕಾರಣವಲ್ಲ.ಪರಾಂತಕಾಲದಲ್ಲಿ ಋಷಿ, ಕುಮಾರಾದಿ ಯೋಗೀಶ್ವರರೇ ಆದಿಯಾದ ಬ್ರಹ್ಮನಿಗೂ ಸಹ ದೇಹಾಭಿಮಾನವು ಕಂಡಿಲ್ಲವಾದ್ದರಿಂದ ಪರಾಂತಕಾಲೇ ಪರಿಮುಚ್ಯಂತಿ ಸರ್ವೇ ಎಂದು ಶ್ರುತಿವಿರೋಧ ಬರುವುದರಿಂದ ಜ್ಞಾನ, ಭಕ್ತಿ ವೈರಾಗ್ಯಗಳೇ ಮುಖ್ಯಸಾಧನ ಎಂದು ಸಿದ್ಧವಾಗುತ್ತದೆ ಮತ್ತು 'ಪ್ರಯಾಂತ್ಯತೋಽನ್ಯೇಪಿ ತಮಾಪ್ಯ ತಸ್ಮಾದ್ಧರಿಂ ಗತಾ ಮುಕ್ತಿಭಾಜಃ ಪರಾಂತೇ' ಎಂದು ಬ್ರಹ್ಮನೊಡನೆ ಪರಾಂತಕಾಲದಲ್ಲಿ ಎಲ್ಲ ಮುಕ್ತಿಯೋಗ್ಯರೂ ಶ್ರೀಹರಿಯನ್ನು ಹೊಂದುವರೆಂದು ಆಚಾರ್ಯರು ಹೇಳಿರುವುದರಿಂದ ಅಭಿಮಾನಶಬ್ದಕ್ಕೆ ದೇಹಾಭಿಮಾನ ಎಂಬ ಅರ್ಥವು ಯುಕ್ತವಲ್ಲ.

**ಪುಮಾನ್ ವಿರಿಂಚತಾಮೇತಿ ಮಾಮೇವೈತಿ ತತಃ ಪರಮ್ ।**
**ಇತ್ಯುಕ್ತ್ಯಾ ಚ ಪುನರ್ಜನ್ಮ ತಸ್ಯೈವ ಸ್ಯಾತ್ ಕಥಂ ವದ ॥ ೨೧೫ ॥**

**ಅರ್ಥ–** ಪುಮಾನ್=ಬ್ರಹ್ಮಪದವಿಯೋಗ್ಯವಾದ ಒಬ್ಬ ಪುರುಷನು ವಿರಿಂಚತಾಂ= ಬ್ರಹ್ಮಪದವಿಯನ್ನು ಏತಿ= ಹೊಂದುತ್ತಾನೆ. ತತಃ ಪರಂ ಅದಾದನಂತರ ಮಾಮೇವ= ನನ್ನನ್ನೇ ಏತಿ=ಹೊಂದುತ್ತಾನೆ. ·ಇತ್ಯುಕ್ತ್ವಾ= ಹೀಗೆ ಹೇಳಿರುವುದರಿಂದ, ತಸ್ಯೈವ= ಆ ಬ್ರಹ್ಮನಿಗೆ ಪುನರ್ಜನ್ಮ= ಪುನರ್ಜನ್ಮವು, ಕಥಂ= ಹೇಗೆ, ಸ್ಯಾತ್= ಆಗುತ್ತದೆ, ವದ= ಹೇಳು.

**ಅನುವಾದ–** ಋಜುಗಣದ ಒಬ್ಬ ಜೀವನು ನೂರುವರ್ಷಗಳಲ್ಲಿ ತನ್ನ ಕರ್ಮಗಳನ್ನಾಚರಿಸಿ ಬ್ರಹ್ಮಪದವಿಯನ್ನು ಪಡೆಯುತ್ತಾನೆ. ಪಡೆದ ನಂತರ ನನ್ನನ್ನೇ ಹೊಂದುತ್ತಾನೆಂದು ಸ್ಪಷ್ಟವಾಗಿ ಭಗವಂತನು ಹೇಳಿರುವುದರಿಂದ ಬ್ರಹ್ಮನಿಗೇ ಪುನರ್ಜನ್ಮ ಹೇಗೆ ಸಾಧ್ಯ?

**ಭಾವವಿಲಾಸಿನೀ–** ''ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್ ವಿರಂಚಿತಾಮೇತಿ ತತಃಪರಂ ಹಿ ಮಾಮ್॥ ಅವ್ಯಾಕೃತಂ ಭಾಗವತೋಽಥ ವೈಷ್ಣವಂ ಪದಂ ಯಥಾಽಹಂ ವಿಬುಧಾಃ ಕಲಾತ್ಯಯೇ ಇತಿ ಭಾಗವತವಾಕ್ಯಾಂತರಂ ಸಮಾಖ್ಯಾಯ ಯಥಾಪೂರ್ವಂ ಪ್ರಜಾಯತ ಇತಿ ವಾಕ್ಯಸ್ಯಾಪ್ಯ-ಸ್ಮದುಕ್ತ ಏವಾರ್ಥ ಇತ್ಯಾಹ–**ಪುಮಾನಿತಿ**॥ ಪುಮಾನ್ ಬ್ರಹ್ಮಪದವೀಯೋಗ್ಯಪುರುಷಃ। ಶತಜನ್ಮಭಿಃ ಸ್ವವಿಹಿತಧರ್ಮಾಚರಣಂ ಕೃತ್ವಾ ವಿರಿಂಚತಾಮೇತಿ ॥ ೨೧೫ ॥

**ವಿವರಣೆ–** ಹಿಂದೆ ಹೇಳಿದ ಪ್ರಮೇಯವನ್ನೇ ಇನ್ನೊಂದು ಭಾಗವತ ಶ್ಲೋಕದ ಸಮಾಖ್ಯೆಯಿಂದ ಸಮರ್ಥಿಸುತ್ತಾರೆ.

ಸ್ವಧರ್ಮನಿಷ್ಠಃ ಶತಜನ್ಮಭಿಃ ಪುಮಾನ್
ವಿರಿಂಚತಾಮೇತಿ ತತಃ ಪರಂಹಿ ಮಾಮ್ ।
ಅವ್ಯಾಕೃತಂ ಭಾಗವತೋಥ ವೈಷ್ಣವಂ
ಪದಂ ಯಥಾಹಂ ವಿಬುಧಾಃ ಕಲಾತ್ಯಯೇ॥ (೪-೨೪-೨೯)

ಎಂದು ಹೇಳಿರುವ ಅರ್ಥವನ್ನು ಇಲ್ಲಿ ಬೇರೆ ಶಬ್ದಗಳಿಂದ ಹೇಳಿದ್ದಾರೆ.

**ಮಾಂ ಲಕ್ಷ್ಮೀಂ ಸ್ವಾತ್ಮವಾಚಿತ್ವೇ ಯಥಾಹಮಿತಿ ರುದ್ರವಾಕ್ ।**
**ನ ಶೋಭತೇ ನ ಹಿ ಸ್ವಾತ್ಮಪ್ರಾಪ್ತಿಸ್ಸ್ವಸ್ಯ ಲಯೇ ಸತಿ ॥ ೨೧೬ ॥**

**ಅರ್ಥ–** ಮಾಂ= ಮಾಂ ಎಂದರೆ ಲಕ್ಷ್ಮೀಂ= ಲಕ್ಷ್ಮಿಯನ್ನು (ಎಂದು ಅರ್ಥ), ಸ್ವಾತ್ಮವಾಚಿತ್ವೇ= ತನ್ನನ್ನೇ ಹೇಳಿದರೆ ಯಥಾಹಂ ಇತಿ= ನನ್ನಂತೆ ಎಂಬ ರುದ್ರವಾಕ್= ರುದ್ರದೇವನ ಮಾತು ನ ಶೋಭತೇ= ಪ್ರಶಸ್ತವಾಗಿ ತೋರುವುದಿಲ್ಲ. ಹಿ= ಏಕೆಂದರೆ ಲಯೇ, ಸತಿ= ಲಯ ಉಂಟಾಗುತ್ತಿರಲು, ಸ್ವಸ್ಯ= ತನಗೆ, ಸ್ವಾತ್ಮಪ್ರಾಪ್ತಿಃ= ಸ್ವಾತ್ಮಪ್ರಾಪ್ತಿಯು, ನ ಹಿ= ಇಲ್ಲವಷ್ಟೇ.

**ಅನುವಾದ–** ಭಾಗವತ ಶ್ಲೋಕದಲ್ಲಿರುವ ಮಾಂ ಎಂಬ ಶಬ್ದದ ಅರ್ಥವನ್ನು ಹೇಳುತ್ತಾರೆ ಮಾಂ ಎಂದರೆ ಲಕ್ಷ್ಮಿಯನ್ನು ಎಂದರ್ಥ ಮಾಡಬಹುದು. ಬ್ರಹ್ಮನು ಮಹಾಲಕ್ಷ್ಮಿಯನ್ನು ಪ್ರವೇಶಿಸುತ್ತಾನೆ ಎಂದರ್ಥವಾಗುವುದು. ನನ್ನನ್ನು ಎಂದು ಅರ್ಥಹೇಳಿದರೆ ಯಾಥಾಹಂ ಎಂದು ಭಾಗವತಲ್ಲಿರುವ ಮಾತು ರುದ್ರದೇವರ ಮಾತಾದ್ದರಿಂದ ಪ್ರಳಯಕಾಲದಲ್ಲಿ ರುದ್ರನಿಗೆ ರುದ್ರಪ್ರಾಪ್ತಿಯು ಇಲ್ಲದಿರುವುದರಿಂದ ಮಾಂ ಎಂದರೆ ನನ್ನನ್ನು ಎಂಬ ಅರ್ಥವು ಶೋಭಿಸುವುದಿಲ್ಲ.

**ಭಾವವಿಲಾಸಿನೀ– ಮಾಮಿತ್ಯಸ್ಯಾರ್ಥಕಥನಾಯೋಕ್ತಮ್ – ಮಾಂ ಲಕ್ಷ್ಮೀಮಿತಿ ॥** ಅಸ್ಯ ಶ್ಲೋಕಸ್ಯ ರುದ್ರವಚನತ್ವಾನ್ಮಾಂ ಸ್ವಾತ್ಮಾನಮಿತ್ಯರ್ಥಃ ಕುತೋ ನೇತ್ಯತ ಆಹ – **ಸ್ವಾತ್ಮವಾಚಿತ್ವ ಇತಿ ॥** ಯಥಾಹಮಿತಿ ರುದ್ರೇಣ ಬ್ರಹ್ಮನಿರ್ಯಾಣಸ್ಯ ಸ್ವನಿರ್ಣಯಂ ದೃಷ್ಟಾಂತತಯಾ ಕಥ್ಯತೇ । ಏವಂ ಚ ಯಥಾ ಲಯೇಽಹಂ ಮಾಂ ಪ್ರವಿಶಾಮಿ ಬ್ರಹ್ಮಾಪಿ ಮಾಂ ಪ್ರವಿಶತೀತ್ಯರ್ಥೋ ವಕ್ತವ್ಯಃ । ತಚ್ಚಾತ್ಮಾಶ್ರಯಾನ್ನ ಶೋಭತೇ । ತಸ್ಮಾದ್ಯಥಾಹಂ ಲಕ್ಷ್ಮೀಂ ಪ್ರವಿಶಾಮಿ ತಥಾ ಬ್ರಹ್ಮಾಪಿ ಲಕ್ಷ್ಮೀಂ ಪ್ರವಿಶತೀತ್ಯೇವಾರ್ಥ ಉಚಿತಃ । ಸರ್ವೇಷಾಮಪಿ ದೇವಾನಾಂ ಲಕ್ಷ್ಮೀದ್ವಾರಾ ವಿಷ್ಣುಪ್ರಾಪ್ತೇಃ ಶಾಸ್ತ್ರಸಿದ್ಧತ್ವಾದಿತಿ ಭಾವಃ । ಉಪಲಕ್ಷಣಂ ಚೈತತ್ । ಯತಃ ಸತ್ಯಲೋಕಸ್ಥಿತಸ್ಯ ಬ್ರಹ್ಮಣಃ ಸ್ವಲೋಕಾದುಪರಿತನವೈಕುಂಠಸ್ಥವಿಷ್ಣುಪ್ರಾಪ್ತಯೇ ಭೂಲೋಕಸ್ಥಿತಕೈಲಾಸ-ಪರ್ವತಸ್ಥಶಿವಪ್ರವೇಶೋ ಲೌಕಿಕಮಾಭಾಣಕಮನುಕರೋತಿ । ಅತೋಽಪಿ ನ ಯುಕ್ತಃ । ಸೋಽಥ ವಿರಿಂಚವೀರ್ಯ ಇತಿ ಭಾಗವತೇ ರುದ್ರಸ್ಯ ಬ್ರಹ್ಮಕುಮಾರತ್ವೋಕ್ತೇಶ್ಚ ನ ಯುಕ್ತ ಇತಿ ದ್ರಷ್ಟವ್ಯಮ್ ॥ ೨೧೬ ॥

**ವಿವರಣೆ–** ಇದು ರುದ್ರದೇವರ ಮಾತು. ಬ್ರಹ್ಮದೇವರ ನಿರ್ಯಾಣಕ್ಕೆ ತಮ್ಮ ನಿರ್ಯಾಣವನ್ನು ದೃಷ್ಟಾಂತವಾಗಿ ಕೊಡುತ್ತಿದ್ದಾರೆ. ಮಾಂ ಎಂಬ ಶಬ್ದವು ಸ್ವಾತ್ಮವಾಚಿ (ರುದ್ರವಾಚಿ) ಯಾದರೆ ಪ್ರಳಯಕಾಲದಲ್ಲಿ ನಾನು ನನ್ನನ್ನು ಪ್ರವೇಶಿಸುವಂತೆ ಬ್ರಹ್ಮದೇವರೂ ನನ್ನನ್ನು ಪ್ರವೇಶಿಸುತ್ತಾರೆ ಎಂಬ ಅರ್ಥವನ್ನು ಹೇಳಬೇಕು. ಹೀಗೆ ಹೇಳಿದರೆ ಆತ್ಮಾಶ್ರಯಾದಿ ದೋಷಗಳು ಬರುತ್ತದೆ. ಆದ್ದರಿಂದ ಮಾಂ ಎಂದರೆ ಲಕ್ಷ್ಮಿಯನ್ನು ಎಂದೇ ಅರ್ಥಮಾಡಬೇಕು.

**ಪದಂ ವೈಷ್ಣವಮೇತೀತಿ ವೈಕುಂಠಗತಿಕೀರ್ತನಾತ್ ।**
**ಪುನರಾವೃತ್ತಿವಾರ್ತಾಽಸ್ಯ ನಿವೃತ್ತೈವಾಭವತ್ ತವ ॥ ೨೧೭ ॥**

**ಅರ್ಥ–** ವೈಷ್ಣವಂ ಪದಂ= ವಿಷ್ಣುಸಂಬಂಧಿಯಾದ ಸ್ಥಾನವನ್ನು ಏತಿ= ಹೊಂದುತ್ತಾನೆ, ಇತಿ= ಎಂದು, ವೈಕುಂಠಗತಿಕೀರ್ತನಾತ್= ವೈಕುಂಠವನ್ನು ಹೋಗುವನೆಂದು ಹೇಳಿದ್ದರಿಂದ, ಅಸ್ಯ= ಈ ಬ್ರಹ್ಮನಿಗೆ, ತವ= ನಿನಗೆ, ಪುನರಾವೃತ್ತಿವಾರ್ತಾ ಏವ=ಹಿಂತಿರುಗುವನೆಂಬ ಕಥೆಯು, ನಿವೃತ್ತಾ ಅಭವತ್= ನಿವೃತ್ತವಾಯಿತು.

**ಅನುವಾದ–** ವಿಷ್ಣುಲೋಕ ಪ್ರಾಪ್ತಿಯಾಗುತ್ತದೆಂದು ಭಾಗವತ ಹೇಳಿರುವುದರಿಂದ ಬ್ರಹ್ಮನಿಗೆ ಪುನರಾವೃತ್ತಿ ( ಪುನರ್ಜನ್ಮ) ಎಂಬುದು ನಿವೃತ್ತವಾಯಿತು.

**ಭಾವವಿಲಾಸಿನೀ–** ಅಥ ಲಕ್ಷ್ಮೀಪ್ರಾಪ್ತ್ಯನಂತರಂ ಭಾಗವತಃ ಭಗವದ್ಭಕ್ತಶಿರೋಮಣಿರ್ಬ್ರಹ್ಮಾ ಅವ್ಯಾಕೃತಂ ವಿಕಾರರಹಿತಂ ವೈಷ್ಣವಂ ವಿಷ್ಣುಸಂಬಂಧಿಪದಂ ಸ್ಥಾನಂ ವೈಕುಂಠಮೇತೀತ್ಯನೇನ ಲಬ್ಧಮರ್ಥಮಾಹ – **ಪದಮಿತಿ** । ತವ ಪುನರಾವೃತ್ತಿವಾರ್ತಾ । ಯಥಾಪೂರ್ವಂ ಪ್ರಜಾಯತ ಇತ್ಯಸ್ಯ ಪೂರ್ವವದ್ ಬ್ರಹ್ಮಾ ಪುನರಪ್ಯುತ್ಪದ್ಯತ ಏವ ನ ತು ವೈಕುಂಠಂ ಪ್ರಾಪ್ನೋತೀತ್ಯರ್ಥ-ಕಥನಮ್ । ತದ್ವಲ್ಲಯಪ್ರತಿಪಾದಕೇಽಸ್ಮಿನ್‌ವಾಕ್ಯೇ ಸ್ಪಷ್ಟಂ ವೈಕುಂಠಗತೇರುಕ್ತತ್ವೇನೈತ-ದ್ವಾಕ್ಯಸಮಾಖ್ಯಯಾ ತಸ್ಮಿನ್ನಪಿ ವಾಕ್ಯೇಽಸ್ಮದ್ ವ್ಯಾಖ್ಯಾನಾನುಸಾರೇಣ ವೈಕುಂಠಗತೇರೇವ ವಕ್ತವ್ಯತ್ವಾದಿತಿ ಭಾವಃ ॥ ೨೧೭ ॥

**ವಿವರಣೆ–** ಲಕ್ಷ್ಮೀಪ್ರಾಪ್ತಿಯ ನಂತರ ಭಗವದ್ಭಕ್ತಶಿರೋಮಣಿಯಾದ ಬ್ರಹ್ಮನು ವಿಕಾರರಹಿತವಾದ ವೈಕುಂಠಸ್ಥಾನವನ್ನು ಹೊಂದುತ್ತಾನೆ (ಪರಂ ಪದಂ ವೈಷ್ಣವ-ಮಾಮನಂತಿ) ಎಂಬ ಭಾಗವತಶ್ಲೋಕದ ತಾತ್ಪರ್ಯವನ್ನು ಇಲ್ಲಿ ಹೇಳುತ್ತಿದ್ದಾರೆ.

ಬ್ರಹ್ಮಣಾ ಸಹ ಮುಕ್ತಃ ಸನ್ ಭೋಗಾನ್ ಭುಂಕ್ತೇ ವಿಪಶ್ಚಿತಾ ।
ಶ್ರುತಿಶ್ಚೈಷಾ ಬ್ರಹ್ಮಣೋಽಂತೇ ಮುಕ್ತಿಮಾಹ ನ ಸಂಸೃತಿಮ್ ॥ ೨೧೮ ॥

**ಅರ್ಥ–** ಮುಕ್ತಃ ಸನ್= ಮುಕ್ತನಾಗಿ ವಿಪಶ್ಚಿತಾ, ಬ್ರಹ್ಮಣಾ ಸಹ= ಜ್ಞಾನಿಯಾದ ಬ್ರಹ್ಮನೊಂದಿಗೆ, ಭೋಗಾನ್= ಮುಕ್ತಭೋಗಗಳನ್ನು, ಭುಂಕ್ತೇ= ಭೋಗಿಸುತ್ತಾನೆ. ಏಷಾ ಶ್ರುತಿಶ್ಚ= ಎಂಬ ಈ ಶ್ರುತಿಯೂ, ಮುಕ್ತಿಂ= ಮುಕ್ತಿಯನ್ನು, ಆಹ= ಹೇಳುತ್ತಿದೆ, ಸಂಸೃತಿಂ ನ= ಸಂಸಾರವನ್ನಲ್ಲ.

**ಅನುವಾದ–** ಮುಕ್ತರಾದವರು ಸರ್ವಜ್ಞನಾದ ಚತುರ್ಮುಖಬ್ರಹ್ಮನೊಂದಿಗೆ ಭೋಗಗಳನ್ನು ಅನುಭವಿಸುತ್ತಾರೆಂದು ಸ್ಪಷ್ಟವಾಗಿ ಹೇಳುವ ಈ ಶ್ರುತಿಯೂ ಬ್ರಹ್ಮನಿಗೆ ಪರಾಂತದಲ್ಲಿ ಮುಕ್ತಿಯನ್ನು ಹೇಳುತ್ತದೆ ಹೊರತು ಸಂಸಾರವನ್ನಲ್ಲ.

**ಭಾವವಿಲಾಸಿನೀ–** ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾವಿಪಶ್ಚಿತೇತಿ ಶ್ರುತ್ಯಾ ಮುಕ್ತೈಃ ಸಹ ಚತುರ್ಮುಖಬ್ರಹ್ಮಣೋ ಮೌಕ್ತಭೋಗಕಥನಾಚ್ಚ ನ ತಸ್ಯ ಪುನರ್ಜನ್ಮೇತ್ಯಾಹ – **ಬ್ರಹ್ಮಣೇತಿ** ॥ ೨೧೮ ॥

**ವಿವರಣೆ–** ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತಾ ಎಂಬ ತೈತ್ತಿರೀಯಶ್ರುತಿಯು ಮುಕ್ತರು ಬ್ರಹ್ಮನ ಜೊತೆಗೆ ಸರ್ವಕಾಮಗಳನ್ನು ಅನುಭವಿಸುತ್ತಾರೆಂದು ಹೇಳುತ್ತಿದೆ. ಹೀಗಿರುವಾಗ ಮುಕ್ತರಿಗಾಗಲೀ, ಬ್ರಹ್ಮನಿಗಾಗಲೀ ಪುನರ್ಜನ್ಮ ಇರಲು ಸಾಧ್ಯವೇ? ಸರ್ವಥಾ ಇಲ್ಲ ಎಂದು ಸಿದ್ಧವಾಗುತ್ತದೆ.

ದತ್ತಂ ಕಿಲ ಬ್ರಹ್ಮಪದಂ ರಾಮೇಣಾಸ್ಮದ್ಧನೂಮತೇ ।
ತಚ್ಚ ನ ಸ್ಯಾದ್ ಯದಿ ಬ್ರಹ್ಮಾ ಸ ಏವ ಸ್ಯಾತ್ ಪುನಃ ಪುನಃ॥ ೨೧೯ ॥

**ಅರ್ಥ–** ರಾಮೇಣ=ಶ್ರೀರಾಮನಿಂದ, ಅಸ್ಮದ್ಧನೂಮತೇ=ನಮ್ಮ ಹನುಮಂತನಿಗೆ, ಬ್ರಹ್ಮಪದಂ=ಬ್ರಹ್ಮಪದವಿಯು, ದತ್ತಂ ಕಿಲ=ಕೊಡಲ್ಪಟ್ಟಿದೆಯಷ್ಟೆ ಯದಿ= ಒಂದು ಪಕ್ಷ, ಸ ಏವ ಬ್ರಹ್ಮ= ಆ ಬ್ರಹ್ಮನೇ, ಪುನಃ ಪುನಃ ಸ್ಯಾತ್= ಪುನಃ ಬ್ರಹ್ಮನಾಗುವುದಾದರೆ, ತಚ್ಚ= ಹನುಮಂತನಿಗೆ ನೀಡಿದ ಬ್ರಹ್ಮಪದವಿಯಾದರೂ, ನ ಸ್ಯಾತ್= ದೊರೆಯಲಾರದು.

**ಅನುವಾದ–** ಶ್ರೀರಾಮನು ಸಂತುಷ್ಟನಾಗಿ ಹನುಮಂತನಿಗೆ ಬ್ರಹ್ಮಪದವಿಯನ್ನು ಕೊಟ್ಟಿದ್ದಾನೆ. ಬ್ರಹ್ಮನು ಪುನಃ ಪುನಃ ಹುಟ್ಟಿ ಬ್ರಹ್ಮನಾಗಿಯೇ ಇರುತ್ತಿದ್ದರೆ ರಾಮನು ಕೊಟ್ಟ ವರವಾದರೂ ಹೇಗೆ ಸತ್ಯವಾದೀತು?

**ಭಾವವಿಲಾಸಿನೀ–** ಅಸ್ಯೈವ ಬ್ರಹ್ಮಣಃ ಪುನರ್ಜನ್ಮಾಭಾವೇ ಯುಕ್ತ್ಯಂತರಂ ಚಾಹ – **ದತ್ತಮಿತಿ** ॥ ತತ್ ಹನೂಮತೋ ಭವಿಷ್ಯತ್ ಬ್ರಹ್ಮಪದವೀದಾನಮ್ ॥ ೨೧೯ ॥

**ವಿವರಣೆ–** ಹನುಮಂತನು ರಾಜ್ಯಾಭಿಷೇಕಾನಂತರದಲ್ಲಿ ನನಗೆ ಕೊಡುವುದಾದರೆ ನಿನ್ನಲ್ಲಿ ನಿರ್ಮಲಭಕ್ತಿ ಹಾಗೂ ನಿರುಪಾಧಿಕವಾದ ಪರಮಾನುಗ್ರಹ ಇವನ್ನೇ ಕೊಡು ಎಂದಾಗ ಶ್ರೀರಾಮನು ಇತೀರಿತಸ್ತಸ್ಯ ದದೌ ಸ ತದ್ ದ್ವಯಂ ಪದಂ ವಿಧಾತುಃ ಸಕಲೈಶ್ಚ ಶೋಭನಮ್ ಎಂದು ಆಚಾರ್ಯರು ತಿಳಿಸಿದಂತೆ ಅವೆರಡರ ಜೊತೆಗೆ ಬ್ರಹ್ಮಪದವಿಯನ್ನು ಕೊಟ್ಟನು ಒಂದು ವೇಳೆ ಬ್ರಹ್ಮನು ಪುನಃ ಹುಟ್ಟಿ ಬ್ರಹ್ಮನಾಗಿಯೇ ಇರುವುದಾದರೆ ಶ್ರೀರಾಮನ ಬ್ರಹ್ಮಪದವಿಪ್ರದಾನವಾದರೂ ಹೇಗೆ ಸತ್ಯವಾದೀತು?

ನ ಚೇತ್ ಶ್ರುತಿಃ ಕಥಂ ಪ್ರಾಹ ಪವಮಾನಃ ಪ್ರಜಾಪತಿಃ ।
ಇತ್ಯಾದ್ಯಾ ಪವಮಾನಸ್ಯ ಪ್ರಜಾಪತಿಪದಂ ವದ ॥ ೨೨೦ ॥

**ಅರ್ಥ–** ನ ಚೇತ್= ವಾಯುದೇವನು ಬ್ರಹ್ಮಪದವಿಗೆ ಬರುವದಿಲ್ಲವೆಂದರೆ ಪವಮಾನಃ ಪ್ರಜಾಪತಿಃ=ವಾಯುವೇ ಬ್ರಹ್ಮನು ಇತ್ಯಾದ್ಯಾಃ= ಇದೇ ಮೊದಲಾದ, ಶ್ರುತಿಃ= ಶ್ರುತಿಗಳು ಪವಮಾನಸ್ಯ= ವಾಯುದೇವನಿಗೆ ಪ್ರಜಾಪತಿ ಪದಂ=ಬ್ರಹ್ಮಪದವನ್ನು ಕಥಂ= ಹೇಗೆ, ಪ್ರಾಹ= ಹೇಳುತ್ತವೆ, ವದ= ಹೇಳು.

**ಅನುವಾದ–** ವಾಯುವು ಬ್ರಹ್ಮಪದವಿಗೆ ಬರದಿದ್ದರೆ ಪವಮಾನಃ ಪ್ರಜಾಪತಿಃ ಎಂಬ ಶ್ರುತಿಯಲ್ಲಿ ಪ್ರಜಾಪತಿಪದವು ವಾಯುದೇವನಿಗೆ ಹೇಗೆ ಕೂಡುತ್ತದೆ? ಆದ್ದರಿಂದ ವಾಯುದೇವನು ಬ್ರಹ್ಮಪದವಿಗೆ ಬರುತ್ತಾನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ವಾಯೋರ್ಬ್ರಹ್ಮಪದಾನಂಗೀಕಾರೇ ಶ್ರುತಿವಿರೋಧಂ ಚಾಹ – **ನಚೇದಿತಿ** ॥ ಆದಿಪದೇನ ಮಾರುತಸ್ಯ ವೇಧಸ ಇತಿ ಶ್ರುತಿಂ ಗೃಹ್ಣಾತಿ ॥ ೨೨೦ ॥

**ವಿವರಣೆ–** ಇತ್ಯಾದ್ಯಾಃ ಎಂಬಲ್ಲಿರುವ ಆದಿಪದರಿಂದ ಮಾರುತಸ್ಯ ವೇಧಸಃ ಎಂಬ ಶ್ರುತಿಯನ್ನಿಟ್ಟುಕೊಳ್ಳಬೇಕು. ಹೀಗೆ ವಾಯುವೇ ಬ್ರಹ್ಮಪದವಿಗೆ ಬರುತ್ತಾನೆಂದು ಅನೇಕ ಶ್ರುತಿಗಳು ಸಾರುತ್ತಿವೆ.

**ತಸ್ಮಾಲ್ಲಯೇ ಹರೇಃ ಕುಕ್ಷಿಂ ಪ್ರವಿಶ್ಯಾಂತೇ ಲಯಸ್ಯ ಸಃ ।**
**ವೈಕುಂಠಾದಿಪುರಸ್ಥಃ ಸ್ಯಾತ್ ಇತ್ಯೇವಾರ್ಥಃ ಪುಮರ್ಥಕೃತ್ ॥ ೨೨೧ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಲಯೇ=ಪ್ರಳಯದಲ್ಲಿ ಹರೇಃ= ಶ್ರೀಹರಿಯ, ಕುಕ್ಷಿಂ= ಉದರವನ್ನು, ಪ್ರವಿಶ್ಯ=ಪ್ರವೇಶಿಸಿ, ಲಯಸ್ಯ=ಪ್ರಳಯಕಾಲದ, ಅಂತೇ=ಕೂನೆಯಲ್ಲಿ, ಸಃ= ಬ್ರಹ್ಮನು, ವೈಕುಂಠಾದಿಪುರಸ್ಥಃ= ವೈಕುಂಠಾದಿಪುರಗಳಲ್ಲಿರುವವನಾಗಿ, ಸ್ಯಾತ್= ಆಗುತ್ತಾನೆ. ಇತ್ಯೇವ, ಅರ್ಥಃ=ಇದೇ ಅರ್ಥವು ಪುಮರ್ಥಕೃತ್=ಪುರುಷಾರ್ಥಪ್ರದವಾಗುತ್ತದೆ.

**ಅನುವಾದ–** ಬ್ರಹ್ಮನು ಪ್ರಳಯಕಾಲದಲ್ಲಿ ಶ್ರೀಹರಿಯ ಉದರವನ್ನು ಪ್ರವೇಶಿಸಿ ಲಯಕಾಲ ಮುಗಿದ ನಂತರ ಶ್ರೀಹರಿಯ ವೈಕುಂಠಾದಿ ಪುರವನ್ನು ಸೇರಿ ಅಲ್ಲಿಯೇ ಇರುತ್ತಾನೆಂಬುದೇ ಪುರುಷಾರ್ಥಪ್ರದವಾಗುತ್ತದೆ.

**ಭಾವವಿಲಾಸಿನೀ–** ಸಃ ಬ್ರಹ್ಮಾ ॥ ೨೨೧ ॥

**ಪರಾಂತಕಾಲೇ ಸರ್ವೇಽಪಿ ಮುಚ್ಯಂತೇ ಯೋಗಿನಃ ಕಿಲ ।**
**ಬ್ರಹ್ಮೈವಂ ಸತಿ ಯೋಗೀಂದ್ರೋ ಮುಕ್ತಾಗ್ರೇಸರತಾಮಿಯಾತ್ ॥ ೨೨೨ ॥**

**ಅರ್ಥ–** ಪರಾಂತಕಾಲೇ=ಬ್ರಹ್ಮನಪರಾಂತಕಾಲದಲ್ಲಿ ಸರ್ವೇಯೋಗಿನಃ=ಎಲ್ಲ ಜ್ಞಾನಿಗಳೂ, ಮುಚ್ಯಂತೇ ಕಿಲ= ಮುಕ್ತರಾಗುತ್ತಾರಷ್ಟೇ. ಏವಂ ಸತಿ= ಹೀಗಿರುತ್ತಿರಲು ಯೋಗೀಂದ್ರಃ= ಜ್ಞಾನಿ ಶ್ರೇಷ್ಠರಾದ, ಬ್ರಹ್ಮಾ=ಬ್ರಹ್ಮದೇವನು, ಮುಕ್ತಾಗ್ರೇಸರತಾಂ=ಎಲ್ಲ ಮುಕ್ತರ ನಾಯಕತ್ವವನ್ನು ಇಯಾತ್= ಹೊಂದುತ್ತಾನೆ.

**ಅನುವಾದ–** ಪರಾಂತಕಾಲೇ ಪರಿಮುಚ್ಯಂತಿ ಸರ್ವೇ ಎಂಬ ಶ್ರುತಿಯು ಸಮಸ್ತ ಜ್ಞಾನಿಗಳು ಪರಾಂತಕಾಲದಲ್ಲಿ ಮುಕ್ತರಾಗುತ್ತಾರೆಂದು ಹೇಳುತ್ತಿದೆ. ಜ್ಞಾನಿ ಶ್ರೇಷ್ಠನಾದ ಬ್ರಹ್ಮದೇವನೇ ಸಕಲಮುಕ್ತರ ನಾಯಕನೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಬ್ರಹ್ಮಣಃ ಕೈಮುತ್ಯೇನ ಮುಕ್ತತ್ವೇ ಶ್ರೌತಯುಕ್ತ್ಯಂತರಂ ಚಾಹ–ಪರಾಂತೇತಿ ॥ ಏವಂ ಸತಿ ಬ್ರಹ್ಮಣೋಽಪ್ಯಧಮಾಪರೋಕ್ಷಜ್ಞಾನಿನಾಂ ಸರ್ವೇಷಾಂ ಮುಕ್ತತ್ವೇ ಸತಿ ॥೨೨೨॥

**ವಿವರಣೆ–** ಬ್ರಹ್ಮನು ಪ್ರಳಯದ ನಂತರ ಮುಕ್ತನಾಗುತ್ತಾನೆ ಎಂಬುದನ್ನು ಶ್ರುತಿಯು ಹೇಳಿರುವ ಕೈಮುತ್ಯನ್ಯಾಯಸಾಧಕವಾದ ಬೇರೆ ಯುಕ್ತಿಯಿಂದ ಸಮರ್ಥಿಸುತ್ತಾರೆ ಎಲ್ಲ ಜ್ಞಾನಿಗಳೂ ಲಯಕಾಲದ ನಂತರ ಮುಕ್ತರಾಗುತ್ತಾರೆಂದಮೇಲೆ ಎಲ್ಲಾ ಜ್ಞಾನಿಗಳ

ನಾಯಕನಾದ ಬ್ರಹ್ಮನು ಮುಕ್ತನಾಗುವುದಿಲ್ಲವೇ? ಇದು ಕೈಮುತ್ಯನ್ಯಾಯದಿಂದ ಸಿದ್ಧವಾಗುತ್ತದೆ.

**ಅಸುರಾನ್ ದಮಯನ್ನುಗ್ರಾನ್ ಸುರಾನ್ ಶಾಂತಾನ್ ತಥೋನ್ನಯನ್ ।**
**ಪರಾವೃಣಕ್ತಿ ಪೂರ್ವೇಷಾಂ ಸಖ್ಯಾನಿ ತ್ವರಯಾ ಪರೈಃ ॥ ೨೨೩ ॥**

**ಏತೀತಿ ವೇದೇ ತಮಸಿ ದೈತ್ಯಾನಾಂ ಶ್ರೂಯತೇ ವ್ಯಥಾ ।**
**ಯದೃಚ್ಛಾಕೃತತನ್ಮೋಕ್ಷಪ್ರಯತ್ನಚ್ಛೇದ ಏವ ಚ ॥ ೨೨೪ ॥**

**ದೇವಾನಾಮೂರ್ಧ್ವಲೋಕಶ್ಚ ವೀಪ್ಸಯಾ ನಿಯಮೋಽಪಿ ಚ ।**
**ಅತಃ ಸರ್ವವಿಮೋಕ್ಷಶ್ಚ ಸರ್ವೈಕ್ಯಂ ಚ ಕಥಂ ವದ ॥ ೨೨೫ ॥**

**ಅರ್ಥ–** ಉಗ್ರಾನ್=ಕ್ರೂರಸ್ವಭಾವದವರಾದ, ಅಸುರಾನ್=ದೈತ್ಯರನ್ನು ದಮಯನ್= ಶಿಕ್ಷಿಸುತ್ತಾ, ಶಾಂತಾನ್=ಶಾಂತಸ್ವಭಾವದವರಾದ, ಸುರಾನ್=ದೇವತೆಗಳನ್ನು, ತಥಾ= ಹಾಗೆಯೇ, ಉನ್ನಯನ್=ಮೇಲೆತ್ತುವವನಾಗಿ, ಪೂರ್ವೇಷಾಂ=ಪೂರ್ವೋಕ್ತ ಅಸುರರಿಗೆ, ಸಖ್ಯಾನಿ= ಪ್ರೀತಿಸಾಧನಗಳಾದ ಯಜನಾಧ್ಯಯನಾದಿಗಳನ್ನು ಪರಾವೃಣಕ್ತಿ=ಇಲ್ಲದಂತೆ ಮಾಡುತ್ತಾನೆ. (ಕತ್ತರಿಸುತ್ತಾನೆ) ಅದಕ್ಕಾಗಿ, ತ್ವರಯಾ=ಶೀಘ್ರವಾಗಿ, ಪರೈಃ=ಅನ್ಯರಿಂದ ಪರಾವೃಣಕ್ತಿ= ದ್ರೋಹವನ್ನು ಮಾಡಿಸಿ ಕತ್ತರಿಸುತ್ತಾನೆ. ಏತಿ ಇತಿ ವೇದೇ= (ಅಪರೇಭಿರೇತಿ) ಎಂಬಲ್ಲಿರುವ ಏತಿ ಎಂಬ ಶ್ರುತಿಭಾಗದಲ್ಲಿ, ದೈತ್ಯಾನಾಂ=ಅಸುರರಿಗೆ, ತಮಸಿ= ತಮಸ್ಸಿನಲ್ಲಿ ವ್ಯಥಾ= ದುಃಖವು ಶ್ರೂಯತೇ= ಕೇಳಲ್ಪಡುತ್ತದೆ. ಚ= ಮತ್ತು ಯದೃಚ್ಛಾಕೃತ ತನ್ಮೋಕ್ಷಪ್ರಯತ್ನಚ್ಛೇದ, ಏವ= ಆಕಸ್ಮಾತ್ತಾಗಿ ಮಾಡಿದ ಅವರ ಮೋಕ್ಷಪ್ರಯತ್ನವು ಪ್ರರಮಾತ್ಮನ ಇಚ್ಛೆಯಂತೆ ವ್ಯರ್ಥವೇ ಆಗುತ್ತದೆ ಎಂದೂ ಶ್ರುತವಾಗಿದೆ. ವೀಪ್ಸಯಾ= ಉಗ್ರಂ ಉಗ್ರಂ ಎಂಬ ದ್ವಿರುಕ್ತಿಯಿಂದ ನಿಯಮೋಪಿ, ಚ= ಎಲ್ಲ ಅಸುರರಿಗೆ ತಪ್ಪದೇ ಅನ್ವಯಿಸುತ್ತದೆಂದೂ, ದೇವಾನಾಂ= ದೇವತೆಗಳಿಗೆ ಊರ್ಧ್ವಲೋಕಶ್ಚ= ಉತ್ತಮ ಲೋಕಪ್ರಾಪ್ತಿಯೂ (ಅನ್ಯಂ ಅನ್ಯಂ ಎಂಬ ವೀಪ್ಸಾದಿಂದ ಶ್ರೂಯತೇ ತಿಳಿದುಬರುತ್ತದೆ) ಅತಃ=ಆದ್ದರಿಂದ ಸರ್ವವಿಮೋಕ್ಷಶ್ಚ= ಎಲ್ಲರಿಗೂ ಮೋಕ್ಷವು, ಸರ್ವೈಕ್ಯಂಚ=ಎಲ್ಲ ಜೀವರಿಗೂ ಬ್ರಹ್ಮೈಕ್ಯವು, ಕಥಂ=ಹೇಗೆ? ವದ=ಹೇಳು.

**ಅನುವಾದ– ಶೃಣ್ವೇ ವೀರಮುಗ್ರಂ ಎಂಬ ಶ್ರುತಿವಾಕ್ಯವೂ ಪರಾಪೂರ್ವೇಷಾಂ ಎಂಬ ಶ್ರುತಿವಾಕ್ಯವೂ ಉಗ್ರಸ್ವಭಾವದ ಅಸುರರನ್ನು ತಮಸ್ಸಿನಲ್ಲಿ ಹಾಕಿ ದುಃಖ ಪಡಿಸುವವನೆಂದು, ಶಾಂತಸ್ವಭಾವದವರಾದ ದೇವತೆಗಳನ್ನು (ಸಾತ್ವಿಕರನ್ನು) ಸಂಸಾರಬಂಧನದಿಂದ ಬಿಡಿಸಿ ವೈಕುಂಠಾದಿ ಊರ್ಧ್ವಲೋಕಗಳಲ್ಲಿಟ್ಟು ಸುಖಪಡಿಸುತ್ತಾನೆಂದು ಈ ರೀತಿಯಾಗಿ ಸ್ವಯೋಗ್ಯಗತಿಗಳನ್ನು ಕೊಡುವುದರಲ್ಲಿ**

ನಿಯಮಬದ್ಧಕೃತಿಉಳ್ಳವನೆಂದು ಅಸುರರಿಗೆ ಸ್ವಪ್ರೀತಿಸಾಧನಗಳಾದ ಯಜನ, ಅಧ್ಯಯನಾದಿಗಳನ್ನು ವಿಷ್ಣುವೈಷ್ಣವದ್ರೋಹಾದಿಗಳಿಂದ ಸಂಭವಿಸದಂತೆ ಮಾಡುತ್ತಾನೆಂದು ಹೇಳುತ್ತದೆ. ದೇವತೆಗಳಿಗೆ ಹಾಗೆಯೇ ಸ್ವಯೋಗ್ಯಗತಿಗಳು ದೂರೆಯುತ್ತವೇದು ವೀಪ್ಸಾ (ದ್ವಿರುಕ್ತಿ) ದಿಂದ ಶ್ರುತಿಯು ಹೇಳುತ್ತದೆ. ಆದ್ದರಿಂದ ಎಲ್ಲಾ ಜೀವರಿಗೂ ಮೋಕ್ಷ, ಹಾಗೂ ಎಲ್ಲ ಜೀವರಿಗೂ ಬ್ರಹ್ಮೈಕ್ಯವು ಯಾವ ರೀತಿಯಿಂದಲೂ ಯುಕ್ತವಾಗುವುದಿಲ್ಲ. ಶ್ರುತಿಯು ವಿರುದ್ಧ ಸ್ವಭಾವದವರಿಗೆ ವಿರುದ್ಧಗತಿಗಳನ್ನೇ ಸಮರ್ಥಿಸುತ್ತದೆ.

**ಭಾವವಿಲಾಸಿನೀ–** ಶ್ರುತ್ಯಂತರೇಣಾಪಿ ಸರ್ವಮೋಕ್ಷಾಭಾವಮೈಕ್ಯಾಭಾವಂ ಚ ಸಾಧಯತಿ – **ಅಸುರಾನಿತಿ ॥** ಅನೇನ "ಶೃಣ್ವೇ ವೀರ ಉಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ । ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥ ಪರಾ ಪೂರ್ವೇಷಾಂ ಸಖ್ಯಾವೃಣಕ್ತಿವಿತರ್ತುರಾಣೋ ಅಪರೇಭಿರೇತಿ । ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತೀ''ತಿ ಶ್ರುತಿವಾಕ್ಯದ್ವಯಂ ಸಂಗೃಹ್ಣಾತಿ ॥ ಅಸ್ಯಾರ್ಥಃ। ವೀರಃ ಅಧ್ಯವಸಿತಾಂತಗಾಮೀ । ಇಂದ್ರಃ ಪರಮೈಶ್ವರ್ಯಸಂಪನ್ನಶ್ರೀನಾರಾಯಣಃ । ಅಗ್ರಮುಗ್ರಂ ವಿಶ್ವದ್ರೋಹಿತಯಾಕ್ರೂರಂ ಕ್ರೂರಂ ದೈತ್ಯಜನಂ ದಮಾಯನ್‌ದಮಯನ್ ಅಂಧತಮಸಿ ನಿಕ್ಷಿಪ್ಯ ಪೀಡಯನ್ । ಪುನರಾವೃತ್ತಿಶೂನ್ಯತಯಾ ದಮನಸ್ಯ ದೀರ್ಘಕಾಲೀನತ್ವಸೂಚನಾಯ ದೀರ್ಘೋಚ್ಚಾರಣಮ್ । ತೇನಾಂಧತಮಸ್ಯೇವ ದಮನಂ ಲಭ್ಯತೇ । ಉಗ್ರಪದೋಪಸ್ಥಿತಾದುಗ್ರಾದನ್ಯಮನ್ಯಂ ಶಾಂತಂ ಸಜ್ಜನಸಮೂಹಂ ಅತಿನೇನೀಯಮಾನಃ ಅತಿಪ್ರಾಕೃತಸರ್ವಲೋಕಾನತಿಕ್ರಮ್ಯ ತದುಪರಿತ್ಯರ್ಥಃ । ಅವೇತ್ಯಯೋಗ್ಯಾನಾಂ ಅಧೋಗತಿ ಕಥನಾತ್ ಅತ್ರಾಯಮರ್ಥೋಽವಶ್ಯಗ್ರಾಹ್ಯಃ ಅತಿ ಸಾಂಸಾರಿಕಕ್ಲೇಶಾನತಿಕ್ರಮ್ಯ ಸ್ವೀಯವೈಕುಂಠಾದಿಲೋಕಮತಿಶಯೇನ ನಯನ್ ಅಮುಕ್ತಾಗಮ್ಯ ವೈಕುಂಠಭಾಗಸ್ಥಿತ ಪ್ರತೀಕಾಲಂಬೇನ ಯೋಗಿನಾಮ್ । ಜೀವನ್ಮುಕ್ತಿದಶಾತೋಽತಿಶಯಸೂಚನಾಯ ನೇನೀಯಮಾನ ಇತ್ಯುಕ್ತಮ್ । ಜೀವಾನಾಂ ಪರಸ್ಪರ ಭೇದಂ ಮುಕ್ತಾನಾಂ ಚ ಸ್ವಸ್ಮಾದ್ಭೇದಂ ಚ ಸೂಚಯಿತುಮನ್ಯಮನ್ಯಮಿತ್ಯುಕ್ತಮ್ । ಅನ್ಯಥಾ ಶಾಂತಂ ಶಾಂತಮಿತ್ಯವಕ್ಷ್ಯತ್ । ಏಧಮಾನದ್ವಿಟ್ ಸ್ವಸ್ವಯೋಗ್ಯತಾಮತಿಕ್ರಮ್ಯ ಪುಣ್ಯಕರಣಾದಿನಾ ವರ್ಧಮಾನಂ ದ್ವೇಷ್ಟಿ ಅಧಿಕಪುಣ್ಯಂ ಯೇನಕೇನಾಪ್ಯುಪಾಯೇನ ನಾಶಯತೀತಿ ಸ ತಥೋಕ್ತಃ । ಅನೇನ ಜೀವಾಯೋಗ್ಯಸ್ವಸಮಾನಾಧಿಕಮಹಾತ್ಮ್ಯಶಿಕ್ಷಣೇನ ಸ್ವತೋಽತಿನೀಚತತ್ತದ್ಯೋಗ್ಯಮಹಿಮ್ನಃ ಸದಾರಕ್ಷಣೇನ ಚ ಕದಾಪ್ಯೈಕ್ಯಾಯೋಗಂ ಸೂಚಯತಿ । ಉಭಯಸ್ಯ ತಮಸಿ ಮುಕ್ತೌ ಚ ಸ್ವೇನ ಪ್ರಾಪಿತದ್ವಿವಿಧಜೀವಸಮುದಾಯಸ್ಯ ರಾಜಾ ಸ್ವಾಮೀ ನತು ಕದಾಪಿ ತದೈಕ್ಯವಾನಿತ್ಯರ್ಥಃ । ಶ್ರುಣ್ವೇ ಶ್ರುತಿಪುರಾಣಾದಿಷು ಶ್ರೂಯತೇ । ಶ್ರುತಿಃ ಸ್ವೋಕ್ತಾರ್ಥೇ ಶ್ರುತಿವಾಕ್ಯಾಂತರಾಣಿ ಸ್ಮೃತಿವಾಕ್ಯಾನಿ ಚ ಪ್ರಮಾಣಯಿತುಮೇವಮಾಹ । ಅನ್ಯಥಾ ತೇ ರಜ ಇತ್ಯವಕ್ಷ್ಯತ್ । ಸ್ವವಿರೋಧ್ಯೈಕ್ಯವಚನೇಷು ವಿಭಕ್ತಿವ್ಯತ್ಯಾಸಾದಿಗತಿಸೂಚನಾಯ ಪ್ರಯೋಗವ್ಯತ್ಯಾಸಃ ।

ಮನುಷ್ಯಾನ್ವಿಶೋ ಮಧ್ಯಮಮಾನುಷಪ್ರಜಾಃ । ಕದಾಚಿನ್ನೀಚಮಾರ್ಗೇ ಕದಾಚಿತ್ ಉಚ್ಚಮಾರ್ಗೇ ಚ ಪ್ರವೇಶಂ ಸೂಚಯಿತುಂ ವಿಶ ಇತಿ ವಿಶೇಷಣಮ್ । ತಾನಾಪಿ ಸ್ವದತ್ತಫಲ-ಭೋಗದಶಾಯಾಮಪಿ ಸ್ವರ್ಗನರಕಭೂಮ್ಯಾಖ್ಯಲೋಕತ್ರಯ ಏವ ಚೋಷ್ಕೂಯತೇ ಪ್ರವರ್ತಯತಿ । ಚುಕೂ(ಸ್ಕಜ್ ಆಪ್ರವಣನೇ)ಪ್ರವರ್ತನ ಇತಿ ಧಾತೋಃ । ಲಿಂಗದೇಹಭಂಗಾತ್ ಪೂರ್ವಂ ಸ್ವರ್ಗನರಕಾದೌ ಪ್ರವರ್ತನಸ್ಯ ಶುಭಾಶುಭಕರ್ಮಭ್ಯಾಂ ಶುಭಜೀವೇಷ್ವಪಿ ಸಂಭವಾ-ದೇಷಾಂ ಫಲತಯಾ ವಿಶಿಷ್ಯೋಕ್ತಿರ್ನ ಘಟತೇ । ಅತೋ ಲಿಂಗಭಂಗೋತ್ತರಕಾಲೀನಮೇವೇದಂ ಪ್ರವರ್ತನಮ್ । ಭಗವದ್ಭಕ್ತಿ ದ್ವೇಷನಿಮಿತ್ತಕಫಲಕಥನೇ ಏತೇಷಾಮಪಿ ಮಿಶ್ರದ್ವೇಷಭಕ್ತಿಪರಿಪಾಕ ನಿಮಿತ್ತಫಲಸ್ಯೈವ ಕಥನೀಯತ್ವಾಚ್ಚ । ಸ್ವಯೋಗ್ಯಸಾಧನಸಂಪತ್ತಾವಪಿ ಸುಖದುಃಖಾನು-ಭವಾತ್ಮಕಸಂಸಾರಸ್ಯೈವ ಫಲತಯಾ ಸ್ಥಿರೀಕರಣೇನ ಪೂರ್ವೋಕ್ತಫಲದ್ವಯಾದ್ವೈಜಾತ್ಯ-ಸೂಚನಾಯ ಕ್ರಿಯಾಂತರಮ್ । ಅನ್ಯಥಾ ದಮಯತ್ವಿತ್ಯಾದಿವತ್ ಪ್ರವರ್ತಯ ಶೃಣ್ವೇ ಇತ್ಯೇವಾವಕ್ಷತ್ ಸಂಸಾರರೂಪಫಲವಿವಾದಾಭಾವಾನ್ನಾತ್ರ ಶ್ರುತ್ಯಾದೇಃ ಸೂಚನಂ ಚ । ಅತ್ರಾಪ್ಯುಭಯಸ್ಯೋಭಯಸ್ವಭಾವಭರಿತಸ್ಯ ಜೀವಜಾತಸ್ಯ ರಾಜೇತಿ ಗ್ರಾಹ್ಯಮ್ । ಅತ್ರ ಪೂರ್ವವನ್ನಿಯಮಸೂಚಕವೀಪ್ಸಾಭಾವಾದೇತೇಷಾಮಪಿ ಫಲನಿಯಮಸೂಚನಾಯ ಬಹುವಚನಮ್ । ಪೂರ್ವೇಷಾಂ ಪೂರ್ವೋಕ್ತಸುರಾಣಾಂ ಸಖ್ಯಾ ಸ್ವಪ್ರೀತಿಸಾಧನ-ಯಜನಾಧ್ಯಯನಾದಿ ಶುಭಕರ್ಮಾಣಿ ಪರಾವೃಣಕ್ತಿ ವಿಷ್ಣುವೈಷ್ಣವದ್ರೋಹಾದಿಕಂ ಕಾರಯಿತ್ವಾಚ್ಛಿನತ್ತಿ । ವೃವಚೂಛೇದನ ಇತಿ ಧಾತೋಃ । ಅನೇನ ಮಹತಾಪಿ ಪ್ರಯತ್ನೇನಾಧಮಾನಾಂ ನೋರ್ಧ್ವಗತಿರಿತಿ ಸೂಚಯತಿ । ವಿವರ್ತುರಾಣೋ ವಿಶೇಷೇಣ ತ್ವರಮಾಣಃ । ದಯಯೈವ ತ್ವರಾ । ನ ಪುನರಾಶಯಾ ನಾಪಿ ಕ್ಲೇಶಾವಹೇತಿ ಸೂಚನಾಯ ಛಾಂದಸಪ್ರಯೋಗಃ । ಅಪರೇಭಿರ್ದೇವೈಃ ಸಖ್ಯಾನ್ಯೇತಿ । ಅನೇನ ಯೋಗ್ಯಾನಾಂ ಕಲ್ಯಾದಿಕೃತವಿಘ್ನೈರ್ನ ಕದಾಪಿ ಸ್ವರ್ಗಫಲಪ್ರಾಪ್ತೌ ಪ್ರತಿಬಂಧ ಇತಿ ಸೂಚಯತಿ । ಅಸುರಾಣಾಂ ದಮನಯೋಗ್ಯಸ್ಥಾನಸ್ಯ ಪ್ರಾಗನುಕ್ತತ್ವಾತ್ ತತ್ ಸೂಚನಾಯಾನಾನುಭೂತೀರವಧೂನ್ವಾನ ಇತ್ಯುಕ್ತಮ್ । ನ ವಿದ್ಯತೇಽನುಭೂತಿರ್ಭಗವದನುಭವೋ ಯಾಸಾಂ ತಾ ಅನಾನುಭೂತಯಃ ತಾಃ ರಾಕ್ಷಸತತೀರವಾಽಧಸ್ತಾದ್ದೂನ್ವಾನಃ ಪಾತಯನ್ನಿತ್ಯರ್ಥಃ । ಭೀಷಣತಾಡನಾದಿನಾ ಮಧ್ಯೇ ಮಾರ್ಗಮಪಿ ಭಯೇನಾಂಗ ಪರಿಕಂಪನಸೂಚನಾಯಾಂತರ ಭಕ್ತಮಪಿ ಬರ್ಹಿರ್ಭಿಃತ್ಯಾ ಸ್ವಚರಣಂ ಸ್ವಭಟಚರಣಂ ಜಿಘೃಕ್ಷಂತಮಪಿ ತಂ ಬಲಾನ್ಮೋಚನಯತೀತಿ ಸೂಚನಾಯ ಧೂನ್ವಾನ ಇತ್ಯುಕ್ತಮ್ ।

ಅಧೋಗತಿಯೋಗ್ಯದುರ್ವಿಷಯಾನುಭವಸ್ಯ ದೇವತಾಂತರಾನುಭವಸ್ಯ ಚ ಹರಾವಪಿ ವಿಪರೀತಾನುಭವಸ್ಯ ಚ ತೇಷ್ವೇವ ಪೂರ್ಣತಯಾ ನಿಷೇಧಾಯೋಗೇನ ನಿಷಿಧ್ಯಮಾನೋಽ-ನುಭವಃ ಪರಿಶೇಷಾದ್ಭಗವದನುಭವ ಏವ । ಯೋಗ್ಯಜೀವೇಷ್ವಪಿ ಪ್ರಮಾದಾದಿನಾ ಕಾದಾಚಿತ್ಕಾನನುಸಂಭವಾದಯೋಗ್ಯೇಷ್ವೇವ ಸಾರ್ವಕಾಲೀನಾನನುಭವಸೂಚನಾಯ ಸಂಹಿತಾಯಾಂ ಸ್ವರದೈರ್ಘ್ಯಮ್ । ಇಂದ್ರಃ ಪರಮಾತ್ಮಾ । ಪೂರ್ವೀರನಾದಿಕಾಲಮಾರಭ್ಯ

ವರ್ತಮಾನಾಃ ಶರದಃ ಸಂವತ್ಸರಾಂಸ್ತರ್ತರೀತಿ । ಏವಮೇವಾತಿಶಯೇನ ತರತಿ । ಪೂರ್ವೀರಿತ್ಯುಕ್ತ್ಯಾ ತರ್ತರೀತೀತಿ ಲಟಾ ಚ ತರಣೇನ ಸರ್ವದಾಪ್ಯಪ್ರತಿಹತತ್ವರೂಪಾತಿಶಯಾರ್ಥಕಯಙ್‌ಲುಜಂತಪ್ರಯೋಗೇಣ ಚ ಕಾಲತ್ರಯೇಪ್ಯಸ್ಯ ನಿಯಮಸ್ಯ ನ ಭಂಗ ಇತಿ ಸೂಚಯತಿ । ಇಮಮೇವಾರ್ಥಂ ಸಂಕ್ಷೇಪತೋ ದರ್ಶಯನ್ ಶ್ರುತಿತಾತ್ಪರ್ಯಮಾಹ — ಯೋ ವಾಗೂರ್ಧ್ವಂದುರಾ- ಶಯಾನಿತ್ಯಂತೇನ ಗ್ರಂಥೇನ ॥ ಅಪರೈರ್ದೇವೈಃ ॥ ೨೨೩-೨೨೫ ॥

**ವಿವರಣೆ–**

ಶೃಣ್ವೇ ವೀರಮುಗ್ರಮುಗ್ರಂ ದಮಾಯನ್ನನ್ಯಮನ್ಯಮತಿನೇನೀಯಮಾನಃ ।
ಏಧಮಾನದ್ವಿಳುಭಯಸ್ಯ ರಾಜಾ ಚೋಷ್ಕೂಯತೇ ವಿಶ ಇಂದ್ರೋ ಮನುಷ್ಯಾನ್ ॥

ಪರಾಪೂರ್ವೇಷಾಂ ಸಖ್ಯಾ ವೃಣಕ್ತಿ ವಿತರ್ತುರಾಣೋ ಅಪರೇಭಿರೇತಿ ।
ಅನಾನುಭೂತೀರವಧೂನ್ವಾನಃ ಪೂರ್ವೀರಿಂದ್ರಃ ಶರದಸ್ತರ್ತರೀತಿ ॥

ಈ ಎರಡು ಶ್ರುತಿವಾಕ್ಯಗಳ ಅರ್ಥವನ್ನು ಸಂಗ್ರಹಿಸಿ ಇಲ್ಲಿ ನಿರೂಪಿಸಿದ್ದಾರೆ. ಈ ಎರಡು ಶ್ರುತಿವಾಕ್ಯಗಳ ಅರ್ಥವನ್ನು ಸುರೋತ್ತಮತೀರ್ಥರು ನಿರೂಪಿಸಿದ್ದಾರೆ.

ಇಂದ್ರಃ ಪರಮೈಶ್ವರ್ಯಸಂಪನ್ನನಾದ, ವೀರಃ= ಪರಾಕ್ರಮಿಯಾದ ನಾರಾಯಣನು, ಉಗ್ರಂ ಉಗ್ರಂ= ಜಗತ್ತಿಗೆ ದ್ರೋಹಮಾಡುವ ಪ್ರತಿಯೊಬ್ಬ ದೈತ್ಯನನ್ನೂ, ದಮಾಯನ್= ಅಂಧಂತಮಸ್ಸಿನಲ್ಲಿ ಹಾಕಿ ದಮನಮಾಡಿ (ಅಂಧಂತಮಸ್ಸಿನಿಂದ ಪುನರಾವೃತ್ತಿ ಇಲ್ಲದ್ದರಿಂದ ದಮನವು ದೀರ್ಘಕಾಲೀನವಾಗಿದೆ ಎಂಬುದನ್ನು ಸೂಚಿಸಲು ದಮಯನ್ ಎಂದು ಹೇಳದೆ ದಮಾಯನ್ ಎಂದು ಶ್ರುತಿಯು ಹೇಳಿದೆ), ಅನ್ಯಂ ಅನ್ಯಂ= ಪ್ರತಿಯೊಬ್ಬ ಮುಕ್ತಿಯೋಗ್ಯಜೀವನನ್ನು ಅತಿನೇನೀಯಮಾನಃ=ಸಂಸಾರದಿಂದ ದಾಟಿಸುತ್ತಾ (ಅನ್ಯಂ ಅನ್ಯಂ ಎಂಬುದರ ಬದಲಾಗಿ ಶಾಂತಂ ಶಾಂತಂ ಎಂದೇ ಹೇಳಬಹುದಿತ್ತು, ಆದರೆ ಜೀವರಿಗೆ ಪರಸ್ಪರವಾಗಿ ತನಗೂ ಹಾಗೂ ಮುಕ್ತರಿಗೂ ಮುಕ್ತರಿಗೂ ಪರಸ್ಪರಭೇದವಿದೆ ಎಂದು ತಿಳಿಸಲು ಅನ್ಯಂ ಅನ್ಯಂ ಎಂದಿದ್ದಾರೆ) ಏಧಮಾನದ್ವಿಟ್=ಸ್ವಯೋಗ್ಯತೆಯನ್ನು ಅತಿಕ್ರಮಿಸಿ ಪುಣ್ಯವನ್ನು ಮಾಡಿವರ್ಧಿಸುವವನನ್ನು ಸಹಿಸದವನಾಗಿ, ಉಭಯಸ್ಯರಾಜಾ= ತಮಸ್ಸಿನಲ್ಲಿಯೂ, ಮುಕ್ತಿಯಲ್ಲಿಯೂ ಸೇರುವ ಜೀವಸಮೂಹಗಳೆರಡರ ಸ್ವಾಮಿಯು (ಯಾವಾಗಲೂ ಯಾರಿಂದಲೂ ಐಕ್ಯವುಳ್ಳವನಲ್ಲ) ಎಂದು ಶೃಣ್ವೇ= ಪುರಾಣಾದಿಗಳಲ್ಲಿ ಕೇಳಿ ತಿಳಿದುಬರುತ್ತದೆ ಮನುಷ್ಯಾನ್ ವಿಶಃ=ಮಧ್ಯದು ಮನುಷ್ಯರನ್ನು ಚೋಷ್ಕೂಯತೇ= ಕರ್ಮಫಲಾನುಸಾರವಾಗಿ ಸ್ವರ್ಗನರಕಭೂಮಿಗಳಲ್ಲಿ ಸುತ್ತಿಸುತ್ತಾನೆ. ಪರಾಪೂರ್ವೇಷಾಂ ಎಂಬ ಶ್ರುತಿವಾಕ್ಯದ ಅರ್ಥ. ಪೂರ್ವೇಷಾಂ=ಪೂರ್ವೋಕ್ತ ಅಸುರರಿಗೆ ಸಖ್ಯಾ= ಸ್ವಪ್ರೀತಿಸಾಧನವಾದ ಧರ್ಮಗಳನ್ನು ಪರಾವೃಣಕ್ತಿ= ವೈಷ್ಣವದ್ವೇಷ ಮಾಡಿಸಿ ಕತ್ತರಿಸುತ್ತಾನೆ. ವಿತರ್ತುರಾಣೋ= ವಿಶೇಷತ್ವರೆ ಮಾಡುವವನಾಗಿ ಅಪರೇಭಿಃ=ದೇವತೆಗಳಿಂದ, ಏತಿ=ಸಖ್ಯವನ್ನು ಹೊಂದುತ್ತಾನೆ. ಅನಾನುಭೂತೀಃ=ಭಗವದ್ಭಕ್ತಿಯ ಲೇಶವನ್ನು ಎಂದೂ

ಅರಿಯದ ಅಸುರರನ್ನು ಅವಧೂನ್ವಾನಃ=ಕೆಳಗೆ ದೂಡುವವನಾಗಿ, ಇಂದ್ರಃ=ಪರಮಾತ್ಮನು ಪೂರ್ವೀಃ= ಅನಾದಿಕಾಲದಿಂದ ಇರುವ, ಶರದಃ=ಸಂವತ್ಸರಗಳನ್ನು ತರ್ತರೀತಿ= ಅತಿಶಯವಾಗಿದಾಟಿಸುತ್ತಾನೆ (ಉಭಯರಿಗೂ ಸ್ವಸ್ವ ಅನುಭವವು ಶಾಶ್ವತವಾಗಿ ನಡೆಯುವಂತೆ ವ್ಯವಸ್ಥೆಗೊಳಿಸಿರುವನು).

**ಲೋಕಪ್ರಾಪ್ತಿಶ್ಚ ಯೇಷಾಂ ನ ತೇಷಾಮೈಕ್ಯೇ ತು ಕಾ ಕಥಾ ।**
**ರಾಜೋಭಯಸ್ಯ ಸ ಕಿಲ ನೋನ್ನೀತೈರಪ್ಯಭೇದವಾನ್ ॥ ೨೨೬ ॥**

**ಅರ್ಥ–** ಯೇಷಾಂ= ಯಾರಿಗೆ ಲೋಕಪ್ರಾಪ್ತಿಶ್ಚ=ವಿಷ್ಣುಲೋಕಪ್ರಾಪ್ತಿಯೇ, ನ= ಇಲ್ಲವೋ, ತೇಷಾಂ=ಅವರಿಗೆ, ಐಕ್ಯೇತು=ಐಕ್ಯವಾದರೂ, ಕಾ ಕಥಾ= ಏನು ಹೇಳಬೇಕು? ಸಃ= ಆ ಪರಮಾತ್ಮನು, ಉಭಯಸ್ಯ= ಎಲ್ಲ ಜೀವರ, ರಾಜಾ ಕಿಲ= ಸ್ವಾಮಿಯಷ್ಟೇ. ಉನ್ನೀತೈರಪಿ= ಮೇಲಕ್ಕೆ ಕರೆದೊಯ್ಯಲ್ಪಟ್ಟವರಿಂದಲೂ, ಅಭೇದವಾನ್=ಐಕ್ಯವುಳ್ಳವನು, ನ= ಅಲ್ಲವೆಂದು ಸಿದ್ಧ.

**ಅನುವಾದ–** ಯಾರಿಗೆ ವಿಷ್ಣಲೋಕಪ್ರಾಪ್ತಿಯೇ ಇಲ್ಲವೋ ಅವರಿಗೆ ಬ್ರಹ್ಮನಿಂದ ಐಕ್ಯವಿಲ್ಲ ಎಂದು ಏನು ಹೇಳಬೇಕು? ಎಲ್ಲ ಜೀವರ ಸ್ವಾಮಿ ಶ್ರೀಹರಿ ಎಂದು ಶ್ರುತಿಯು ಸಾರುತ್ತಿದೆ. ತಾನೇ ಮೇಲಕ್ಕೆ ಕರದೊಯ್ದು ಉನ್ನತಸ್ಥಾನವನ್ನು ಕೊಟ್ಟ ಜೀವರಿಂದ ಐಕ್ಯಬರಲು ಸಾಧ್ಯವೇ? ಸರ್ವಥಾ ಇಲ್ಲ.

**ಭಾವವಿಲಾಸಿನೀ–** ಯೇಷಾಮುಧಮಾನಾಂ ಮಧ್ಯಮಾನಾಂ ಚ । ಸಃ ಪರಮಾತ್ಮಾ । ಉನ್ನೀತೈರ್ವೈಕುಂಠಗಮನಾಯೋರ್ಧ್ವಂ ನೀತೈರಪ್ಯಭೇದವಾನ್ನ ॥ ೨೨೬ ॥

**ಏಧಮಾನದ್ವಿಡಿತ್ಯುಕ್ತ್ಯಾ ಸ್ವಾತ್ಮಸಾಮ್ಯಂ ಸಹೇತ ನ ।**
**ತಸ್ಮಾತ್ ಬ್ರಹ್ಮತ್ವಮೇತೇಷಾಂ ದುರಾಪಮಿತಿ ಮೇ ಮತಿಃ**
**ಈಷದ್‌ವೃದ್ಧಿಂ ಚ ಯೋ ದ್ವೇಷ್ಟಿ ಸ ಕಿಂ ದದ್ಯಾತ್ ಮಹೋನ್ನತಿಮ್॥ ೨೨೭ ॥**

**ಅತಃ ಶ್ರುತಿಸತೀಭಾವಸಿದ್ಧಶ್ರೀಶಾನುಭಾವವಿತ್ ।**
**ತದ್ಭಾವಂ ಭಾವಯೇನ್ನೈವ ಯೋಽವಾಗ್ ಧೂನ್ವನ್ ದುರಾಶಯಾನ್**
**॥ ೨೨೮ ॥**

**ಅರ್ಥ–** ಏಧಮಾನದ್ವಿಟ್=ತನ್ನ ಯೋಗ್ಯತೆಮೀರಿ ಅಧಿಕ ವೃದ್ಧಿ ಹೊಂದಿದವರನ್ನು ಸಹಿಸದವನು, ಇತ್ಯುಕ್ತ್ಯಾ= ಎಂಬ ವಚನದಿಂದ ಸ್ವಾತ್ಮಸಾಮ್ಯಂ=ತನ್ನಸಾಮ್ಯವನ್ನು ನ ಸಹೇತ= ಸಹಿಸುವದಿಲ್ಲ, ತಸ್ಮಾತ್= ಆದ್ದರಿಂದ, ಏತೇಷಾಂ=ಈ ಜೀವರಿಗೆ, ಬ್ರಹ್ಮತ್ವಂ= ಬ್ರಹ್ಮಸ್ವರೂಪತ್ವವು, ದುರಾಪಂ= ಹೊಂದಲು ಅಶಕ್ಯವು, ಇತಿ ಮೇ ಮತಿಃ= ಎಂದು ನನ್ನ

ನಿಶ್ಚಯವು. ಈಷದಪಿವೃದ್ಧಿಂ =ಅಲ್ಪ ವೃದ್ಧಿಯನ್ನು ಸಹ, ಯಃ=ಯಾವನು, ದ್ವೇಷ್ಟಿ= ಸಹಿಸುವುದಿಲ್ಲವೋ, ಸಃ= ಅವನು,ಮಹೋನ್ನತಿಂ=ಮಹೋನ್ನತಿಯನ್ನು,ದದ್ಯಾತ್ ಕಿಮ್?= ಕೊಡುವನೇನು? ಅತಃ= ಆದ್ದರಿಂದ ಶ್ರುತಿಸತೀಭಾವಸಿದ್ಧಶ್ರೀಶಾನುಭಾವವಿತ್= ಶ್ರುತಿಸತೀಮಣಿಯ ತಾತ್ಪರ್ಯ ವಿಷಯವಾದ ಲಕ್ಷ್ಮೀಪತಿಯ ಮಹಿಮೆಯನ್ನು ತಿಳಿದವನು, ಯಃ= ಯಾವ ಪರಮಾತ್ಮನು, ದುರಾಶಯಾನ್= ದುರಭಿಪ್ರಾಯ ಉಳ್ಳವರನ್ನು, ಅವಾಗ್‌ಧೂನ್ವನ್= ಕೆಳಗೆ ತಳ್ಳುತ್ತಾನೆಯೋ, ತದ್ಭಾವಂ= ಅಂತಹ ಪರಮಾತ್ಮನ ಅಭೇದವನ್ನು, ನೈವ ಭಾವಯೇತ್= ಎಂದೂ ಚಿಂತಿಸಬಾರದು.

**ಅನುವಾದ–** ಶ್ರುತಿಯು ಪರಮಾತ್ಮನನ್ನು ಏಧಮಾನದ್ವಿಟ್ ಎಂದು ಸಾರುತ್ತಿದೆ ಎಂದರೆ ಸ್ವಯೋಗ್ಯತೆಯನ್ನು ಮೀರಿ ವೃದ್ಧಿ ಹೊಂದಿದವರನ್ನು ಪರಮಾತ್ಮನು ಸಹಿಸುವುದಿಲ್ಲ ಎಂದರ್ಥ. ಹೀಗಿರುವಾಗ ತನ್ನ ಸಾಮ್ಯಸಾಧಕವಾದ ಮಹೋನ್ನತಿಯನ್ನು ಸಹಿಸುವನೇ? ಅಲ್ಪವೃದ್ಧಿಯನ್ನೇ ಸಹಿಸದವನು ಈ ಮಹೋನ್ನತಿಯನ್ನು ಎಂದಿಗೂ ಅನುಗ್ರಹಿಸುವುದಿಲ್ಲ. ಇಂತಹ ಶ್ರುತಿಯ ಅಭಿಪ್ರಾಯವನ್ನು ತಿಳಿದವನು ಯಾವ ಪರಮಾತ್ಮನು ದುರಭಿಪ್ರಾಯವುಳ್ಳವರನ್ನು ಕೆಳಗೆ ತಳ್ಳುತ್ತಾನೆಯೋ ಅಂತಹ ಪರಮಾತ್ಮನ ಅಭೇದವನ್ನು ಎಂದೂ ಚಿಂತಿಸುವುದಿಲ್ಲ.

**ಭಾವವಿಲಾಸಿನೀ–** ಮಹೋನ್ನತಿಮೈಕ್ಯಘಟನಾಯ ಸ್ವಸಮೋನ್ನತಿಮ್ ॥ ೨೨೭-೨೨೮ ॥

**ಆರುರುಕ್ಷಂತಿ ಮಾಯಾಭಿಃ ಉತ್ಸಿಸೃಪ್ಸಂತಿ ಯೇ ದಿವಮ್ ।**
**ತಾನ್ ದಸ್ಯೂನ್ ವಿಧುನೋಮ್ಯಜ್ಞ ಪೂರ್ವಸ್ಮಾಚ್ಚ ಪದಾದಧಃ ॥**
**ಇತಿ ಭಾಗವತೋಕ್ತ್ಯಾ ಚ ಶ್ರುತ್ಯಾ ಚೈತತ್ ಸಮರ್ಥಯ ॥ ೨೨೯ ॥**

**ಅರ್ಥ–** ಮಾಯಾಭಿಃ= ಅವಿದ್ಯೆಯನ್ನು ಸ್ಫುಟಗೊಳಿಸಿ ಪ್ರವೃತ್ತವಾದ ಶಾಸ್ತ್ರಗಳಿಂದ, ದಿವಮ್= ಸ್ವರ್ಗವನ್ನು, ಯೇ= ಯಾರು, ಉತ್ಸಿಸೃಪ್ಸಂತಿ= ಮೇಲಕ್ಕೇರಲು ಇಚ್ಛಿಸುತ್ತಾರೋ ಹಾಗೆಯೇ, ಆರುರುಕ್ಷಂತಿ=ಉತ್ತಮ ಪದವಿಯನ್ನು ಏರಲು ಇಚ್ಛೆಸುತ್ತಾರೋ ತಾನ್ ದಸ್ಯೂನ್= ಆ ಚೋರರನ್ನು ಹೇ ಅಜ್ಞ=ಎಲೈಮೂರ್ಖನೇ ಪೂರ್ವಸ್ಮಾತ್ ಪದಾತ್= ಮೊದಲಿನ ಸ್ಥಾನಕ್ಕಿಂತಲೂ, ಅಧಃ= ಕೆಳಗೆ, ವಿಧುನೋಮಿ= ತಳ್ಳುತ್ತೇನೆ. ಇತಿ ಭಾಗವತೋಕ್ತ್ಯಾ= ಈ ರೀತಿ ಭಾಗವತವಾಕ್ಯದಿಂದ, ಚ=ಮತ್ತು, ಶ್ರುತ್ಯಾ=ಶ್ರುತಿಯಿಂದಲೂ, ಏತತ್= ಈ ಪ್ರಮೇಯವನ್ನು, ಸಮರ್ಥಯ=ದೃಢಪಡಿಸಿಕೋ.

**ಅನುವಾದ– ಮಾಯೆಯನ್ನೇ ದೊಡ್ಡದನ್ನಾಗಿ ಮಾಡಿ ಪ್ರವೃತ್ತವಾದ ಶಾಸ್ತ್ರಗಳಿಂದ ಉತ್ತಮಪದವಿಗಾಗಿ ಮತ್ತು ಸ್ವರ್ಗವನ್ನು ಪಡೆಯಲು ಕಳ್ಳರಂತೆ ಯಾರು ಇಚ್ಛಿಸುತ್ತಾರೋ ಅವರನ್ನು ಹಿಂದಿನ ಸ್ಥಾನಕ್ಕಿಂತಲೂ ಕೆಳಗೆ ತಳ್ಳುತ್ತೇನೆ. ಈ**

ರೀತಿಯಾದ ಭಾಗವತವಾಕ್ಯದಿಂದಲೂ ಹಾಗೂ ಶ್ರುತಿವಾಕ್ಯದಿಂದಲೂ ಇದನ್ನು ದೃಢಪಡಿಸಿಕೋ.

**ಭಾವವಿಲಾಸಿನೀ–** ಪುನರಪಿ ಸ್ಮೃತ್ಯಾ ಶ್ರುತ್ಯಾ ಚ ಸರ್ವಮೋಕ್ಷಾಭಾವಂ ಸಾಧಯತಿ - **ಆರುರಕ್ಷಂತೀತಿ** ॥ ಆರುರುಕ್ಷಂತಿ ಊರ್ಧ್ವಪದವೀಮಾರೋಢುಮಿಚ್ಛಂತಿ । ಮಾಯಾಭಿರ್ಮಾ-ಯಾಮೇವ ಸ್ಥೂಲೀಕೃತ್ಯಪ್ರವೃತ್ತಶಾಸ್ತ್ರೈರಿತ್ಯರ್ಥಃ । ಉತ್ಸಿಸೃಪ್ಸಂತಿ ಊರ್ಧ್ವಂ ಗಂತುಮಿಚ್ಛಂತಿ । ದಿವಂ ಸ್ವರ್ಗಂ ಮೋಕ್ಷಂ ಚ । ಪೂರ್ವಸ್ಮಾತ್ಪದಾತ್ ಪೂರ್ವಂ ವಿದ್ಯಮಾನಪಾತಾಲಾದಿ-ಸ್ಥಾನಾತ್ । ಇದಂ ಚ ಬಲಿಂ ಪ್ರತೀಂದ್ರವಾಕ್ಯಮ್ । ಶ್ರುತ್ಯಾ ಮಾಯಾಭಿರುತ್ಸಿಸೃಪ್ಸತ ಇಂದ್ರದ್ಯಾಮಾರುರುಕ್ಷತಃ । ಅವದಸ್ಯೂರಧೂನುಥಾ ಇತೀಂದ್ರಂ ಪ್ರತಿ ವೇದದ್ರಷ್ಟೃ-ಋಷಿಣೋಕ್ತಶ್ರುತ್ಯಾ । ಸಾನುಸ್ವಾರದ್ವಿತೀಯಾ ಬಹುವಚನಾಂತೋಪರಿಸ್ಥಿತರೇಫಸ್ಯ ಪದಕಾಲೇ ನಕಾರತ್ವಮಿತಿ ವೇದೇ ನಿಯಮಾದ್ದಸ್ಯೂನಧೂನುಥಾ ಇತಿ ಪದಚ್ಛೇದಃ। ''ಧೂಞ್ ಪರಿಕಂಪನೇ'' ಇತಿ ಧಾತೋಃರ್ಲಿಟ್ಯಾತ್ಮನೇಪದಮಧ್ಯಮಪುರುಷೈಕವಚನಮಿದಮ್ ॥ ೨೨೯ ॥

**ವಿವರಣೆ–** ಇಂದ್ರನು ಬಲಿಚಕ್ರವರ್ತಿಗೆ ಹೇಳುವ ಮಾತು. ಎಲೈ ಬಲಿಚಕ್ರವರ್ತಿಯೇ ಮಾಯೆಗಳಿಂದ ಕಳ್ಳರಂತೆ ಉತ್ತಮಪದವಿಯನ್ನೇರಲು ಇಚ್ಛಿಸಿದರೆ ಮೊದಲಿರುವ ಸ್ಥಾನಕ್ಕಿಂತಲೂ ಅಧೋಗತಿಯಾದೀತು.

ಆರುರುಕ್ಷಂತಿ ಮಾಯಾಭಿಃ ಉತ್ಸಿಸೃಪ್ಸಂತಿ ಯೇ ದಿವಮ್ ।
ತಾನ್ ದಸ್ಯೂನ್ ವಿಧುನೋಮ್ಯಜ್ಞ ಪೂರ್ವಸ್ಮಾಚ್ಚಪದಾದಧಃ ॥ (೮.೧೦.೫)

ಹಾಗೆಯೇ ಋಗ್ವೇದದಲ್ಲಿ ಬರುವ ಮಂತ್ರವು ಇದೇ ಅರ್ಥವನ್ನು ಹೇಳುತ್ತದೆ. ಮಾಯಾಭಿರುತ್ಸಿಸೃಪ್ಸಂತ ಇಂದ್ರದ್ಯಾಮಾರುರುಕ್ಷತಃ । ಅವದಸ್ಯೂರಧೂನುಥಾ ಎಂದು. ಈ ವಾಕ್ಯವು ಇಂದ್ರನನ್ನು ಕುರಿತು ವೇದದ್ರಷ್ಟೃವಾದ ಋಷಿಯು ಹೇಳಿದ್ದು.

**ಅಸುರಾಣಾಮೂರ್ಧ್ವಲೋಕಾಪ್ರಾಪ್ತಿಸ್ತಮಸಿ ಚ ಸ್ಥಿತಿಃ ।**
**ನಿಯತಾ ಶ್ರೂಯತೇ ಸರ್ವಮೋಕ್ಷೋ ದುರ್ವಚ ಏವ ತತ್ ॥ ೨೩೦ ॥**

**ಅರ್ಥ–** ಅಸುರಾಣಾಂ=ದೈತ್ಯರಿಗೆ ಊರ್ಧ್ವಲೋಕಾಪ್ರಾಪ್ತಿಃ=ವೈಕುಂಠಲೋಕದ ಪ್ರಾಪ್ತಿ ಇಲ್ಲವೆಂದು, ಚ=ಮತ್ತು, ತಮಸಿ=ತಮಸ್ಸಿನಲ್ಲಿ ಸ್ಥಿತಿಃ=ನಿತ್ಯವಾಸವು, ನಿಯತಾ=ತಪ್ಪದೇ ಇರುತ್ತದೆ. ಎಂದು ಶ್ರೂಯತೇ=ಶ್ರುತಿಸ್ಮೃತಿಗಳಿಂದ ಕೇಳಿಬರುತ್ತದೆ. ತತ್= ಆದ್ದರಿಂದ, ಸರ್ವಮೋಕ್ಷಃ=ಎಲ್ಲರಿಗೂ ಮೋಕ್ಷವೆಂಬುದು ದುರ್ವಚ, ಏವ=ಹೇಳಲಾಗದ ಮಾತೇ ಸರಿ.

**ಅನುವಾದ–** ಶ್ರುತಿಸ್ಮೃತಿಗಳು ಅಸುರರಿಗೆ ಊರ್ಧ್ವಲೋಕಪ್ರಾಪ್ತಿ ಇಲ್ಲ ಹಾಗೂ ತಮಸ್ಸಿಲ್ಲಿಯೇ ಅವಸ್ಥಿತಿ ಎಂದು ಸಾರುತ್ತಿವೆ. ಆದ್ದರಿಂದ ಎಲ್ಲರಿಗೂ ಮೋಕ್ಷವೆಂಬುದು ಅತ್ಯಂತ ಅಸಂಭಾವಿತವೇ ಸರಿ.

**ಭಾವವಿಲಾಸಿನೀ–** ತತ್ ತಸ್ಮಾತ್ । ಏವಂ ಚ ಶ್ರುತ್ಯೈವ ಸ್ಪಷ್ಟಂ ದೈತ್ಯಾನಾಮಧೋಗತಿನಿರೂಪಣಾತ್ ತೇಷಾಮೂರ್ಧ್ವಗತಿಪ್ರತಿಪಾದಕಸ್ಮೃತಿವಾಕ್ಯಾನಾಂ "ವಿರೋಧೇತ್ವನಪೇಕ್ಷಮಿ"ತಿ ನ್ಯಾಯೇನಾನ್ಯಾರ್ಥ ಏವ ವಕ್ತವ್ಯ ಇತ್ಯಪ್ಯನುಸಂಧೇಯಮ್ ॥ ೨೩೦ ॥

**ಮಾಮಾತ್ಮಪರದೇಹೇಷು ಪ್ರದ್ವಿಷಂತೋಽಭ್ಯಸೂಯಕಾಃ ।**
**ತಾನಹಂ ದ್ವಿಷತಃ ಕ್ರೂರಾನ್ ಸಂಸಾರೇಷು ನರಾಧಮಾನ್ ।**
**ಕ್ಷಿಪಾಮ್ಯಜಸ್ರಮಶುಭಾನ್ ಆಸುರೀಷ್ವೇವ ಯೋನಿಷು ॥ ೨೩೧ ॥**

**ಅರ್ಥ–** ಆತ್ಮಪರದೇಹೇಷು= ತನ್ನ ಹಾಗು ಪರದೇಹಗಳಲ್ಲಿ, ಮಾಂ=ನನ್ನನ್ನು ಪ್ರದ್ವಿಷಂತಃ= ದ್ವೇಷಿಸುವ ಅಭ್ಯಸೂಯಂತಃ=ಸರ್ವೋತ್ತಮತ್ವವನ್ನು ಸಹಿಸದ, ದ್ವಿಷತಃ= ದ್ವೇಷಿಸುವ, ಕ್ರೂರಾನ್= ಉಗ್ರರಾದ ಅಶುಭಾನ್= ಅಮಂಗಲರಾದ, ತಾನ್ ನರಾಧಮಾನ್= ಆ ಮನುಷ್ಯಾಧಮರನ್ನು, ಅಜಸ್ರಂ= ಸತತವಾಗಿ, ಸಂಸಾರೇಷು= ಹುಟ್ಟುಸಾವುಗಳಸರಣಿಯಲ್ಲಿ ಆಸುರೀಷು ಯೋನಿಷು= ಆಸುರಯೋನಿಗಳಲ್ಲಿ, ಕ್ಷಿಪಾಮಿ= ಎಸೆಯುತ್ತೇನೆ.

**ಅನುವಾದ–** ಗೀತಾವಾಕ್ಯದಿಂದ ಅಧಮರಾದ ದೈತ್ಯರಿಗೆ ಅಧೋಗತಿಯನ್ನು ಹೇಳುತ್ತಿದ್ದಾರೆ. ಸ್ವದೇಹದಲ್ಲಿ ಹಾಗೂ ಪರದೇಹದಲ್ಲಿಯೂ ನನ್ನನ್ನು ದ್ವೇಷಿಸುವ ಹಾಗೂ ನಿರ್ದೋಷನಾದ ನನ್ನಲ್ಲಿ ದೋಷವನ್ನು ಆರೋಪಿಸುವ ಅಮಂಗಲರಾದ ಕ್ರೂರರಾದ ಆ ದ್ವೇಷಿಗಳನ್ನು ನಿರಂತರವಾಗಿ ಸಂಸಾರದಲ್ಲಿ ಅಸುರಸಂಬಂಧಿಯಾದ ಯೋನಿಗಳಲ್ಲಿ ಕೆಡವುತ್ತೇನೆ.

**ಭಾವವಿಲಾಸಿನೀ–** ಗೀತಾವಾಕ್ಯೇನಾಪಿ ದೈತ್ಯಾನಾಮಧೋಗತಿನಿಯಮಂ ಸಮರ್ಥಯತೇ ॥ **ಮಾಮಾತ್ಮೇತಿ** ॥ ಆತ್ಮಪರದೇಹೇಷು ಭಗವತೋ ದ್ವೇಷೋ ನಾಮ ಉಚ್ಚಸ್ಯ ತಸ್ಯ ನೀಚಸ್ವಪರೈಕ್ಯಭಾವನೈವ । ತರ್ಜನತಾಡನಾದೇಸ್ತತ್ತಜ್ಜೀವದ್ವೇಷತ್ವಸಂಭವೇಽಪಿ ಭಗವದ್ದ್ವೇಷತ್ವಾಯೋಗಾತ್ ॥ ೨೩೧ ॥

**ಆಸುರೀಂ ಯೋನಿಮಾಪನ್ನಾ ಮೂಢಾ ಜನ್ಮನಿ ಜನ್ಮನಿ ।**
**ಮಾಮಪ್ರಾಪ್ಯೈವ ಕೌಂತೇಯ ತತೋ ಯಾಂತ್ಯಧಮಾಂ ಗತಿಮ್॥ ೨೩೨ ॥**

**ಅರ್ಥ–** ಕೌಂತೇಯ= ಅರ್ಜುನನೇ, ಮೂಢಾಃ=ಮೂರ್ಖರು, ಜನ್ಮನಿ ಜನ್ಮನಿ=ಪ್ರತಿಜನ್ಮದಲ್ಲಿ ಆಸುರೀಂ ಯೋನಿಂ=ಆಸುರಸಂಬಂಧಿಯಾದ ಯೋನಿಯನ್ನು ಆಪನ್ನಾಃ=ಹೊಂದಿದವರಾಗಿ, ಮಾಂ=ನನ್ನನ್ನು ಅಪ್ರಾಪ್ಯ ಏವ=ಎಂದಿಗೂ ಹೊಂದದೇ, ತತಃ=ಅನಂತರ, ಅಧಮಾಂಗತಿಮ್=ಅಧೋಗತಿಯನ್ನು ಯಾಂತಿ= ಹೊಂದುತ್ತಾರೆ.

**ಅನುವಾದ–** ಎಲೈ ಅರ್ಜುನನೇ, ಆಸುರೀಯೋನಿಗಳಲ್ಲಿ ಹುಟ್ಟಿದ ಆ ಮೂಢರು ಪ್ರತಿಜನ್ಮದಲ್ಲಿಯೂ ನನ್ನನ್ನು ಹೊಂದದೆಯೇ ಅಧೋಗತಿಯನ್ನು ಹೊಂದುತ್ತಾರೆ.

**ಭಾವವಿಲಾಸಿನೀ–** ವೀಪ್ಸಯೈವಕಾರದ್ವಯೇನ ನಿಯಮೋऽಪಿ ದ್ರಷ್ಟವ್ಯಃ ॥ ೨೩೨ ॥

**ವಿವರಣೆ–** ಈ ಭಾಗವು ಭಗವದ್ಗೀತೆಯ 16ನೆಯ ಅಧ್ಯಾಯದ 18,19,20,ನೆಯ ಶ್ಲೋಕಗಳ ಸಂಗ್ರಹರೂಪಿವಾಗಿದೆ. ಆತ್ಮದೇಹ ಹಾಗು ಪರದೇಹಗಳಲ್ಲಿ ಭಗವಂತನ ದ್ವೇಷವೆಂದರೇನು? ಮಧ್ವಾಚಾರ್ಯರು,ಸಾಮವೇದದ ಯಾಸ್ಕಶ್ರುತಿಯನ್ನು ಉದಾಹರಿಸಿ ಹೇಳುತ್ತಾರೆ.

ನ ಕಶ್ಚಿತ್ ವಿಷ್ಣುಃ ಕಾರಯಿತಾ, ಯದಿ ಸ್ಯಾತ್
ಮಾಮಪಿ ಇದಾನೀಂ ಕಾರಯತು ಇತ್ಯಾದಿ ।

ಈಶ್ವರೋ ಯದಿ ಸರ್ವಸ್ಯ ಕಾರಕಃ ಕಾರಯೀತ ಮಾಮ್ ।
ಅದ್ಯೇತಿ ವಾದಿನಂ ಬ್ರೂಯಾತ್ ಸದಾऽಧೋಯಾಸ್ಯಸೀತಿ ತು ॥

ಎಂದರೆ ಯಾರಿಂದಲೂ ಕಾರ್ಯವನ್ನು ಮಾಡಿಸುವವನು ವಿಷ್ಣುವಲ್ಲ. ಅವನು ಮಾಡಿಸುವವನಾದರೆ ಸುಮ್ಮನಿರುವ ನನ್ನಿಂದ ಈ ಕಾರ್ಯವನ್ನು ಮಾಡಿಸಲಿ ಎಂದು ಹೇಳುವವರು ಎಂದರ್ಥ. ಈಶ್ವರನೇ ಎಲ್ಲಕ್ಕೂ ಕಾರಣನಾದರೆ ಈಗ ನನ್ನಿಂದ ಕ್ರಿಯೆಯನ್ನು ನಡೆಸಲಿ ಎನ್ನುವವನಿಗೆ ನಿತ್ಯನರಕವನ್ನು ಹೊಂದುವಿ ಎಂದು ಉತ್ತರಿಸಬೇಕು. ಸುರೋತ್ತಮತೀರ್ಥರು ಕೂಡ ತಮ್ಮ ವ್ಯಾಖ್ಯಾನದಲ್ಲಿ ಇದೇ ರೀತಿ ಹೇಳಿದ್ದಾರೆ ಆತ್ಮದೇಹ ಹಾಗು ಪರದೇಹಗಳಲ್ಲಿ ಭಗವಂತನ ದ್ವೇಷವೆಂದರೆ ಸರ್ವಶ್ರೇಷ್ಠವಾದ ಪರಮಾತ್ಮನಿಗೂ ತಮಗೂ ಐಕ್ಯಚಿಂತನೆಯೇ ಆಗಿದೆ. ಏಕೆಂದರೆ ಕೇವಲ ತರ್ಜನ, ಕಾಡನಾದಿನಳಿಂದ ಆಯಾ ಜೀವರ ದ್ವೇಷವು ಸಂಭವಿಸಬಹುದು ಭಗವದ್‌ದ್ವೇಷವು ಸಂಭವಿಸುವುದಿಲ್ಲ.

ಇತಿ ಕೃಷ್ಣೋऽಪಿ ಗೀತಾಯಾಂ ಅಸುರಾಣಾಮಧೋಗತಿಮ್ ।
ಸ್ವಾಪ್ರಾಪ್ತೌ ನಿಯಮಂ ಚಾಹ ದ್ವೇಷಿಣಾಂ ಯತ್ ಪದೇಪದೇ ।
ಅತಃ ಪೂರ್ವೋಕ್ತವಾಕ್ಯಾರ್ಥೇ ಸಮಾಖ್ಯೇಯಂ ಬಲೀಯಸೀ ॥ ೨೩೩ ॥

**ಅರ್ಥ–** ಇತಿ=ಹೀಗೆ, ಕೃಷ್ಣೋಪಿ= ಶ್ರೀಕೃಷ್ಣನೂ, ಗೀತಾಯಾಂ=ಗೀತೆಯಲ್ಲಿ ಅಸುರಾಣಾಂ=ದೈತ್ಯರಿಗೆ, ಅಧೋಗತಿಂ=ಅಧೋಗತಿಯನ್ನು ಸ್ವಾಪ್ರಾಪ್ತೌ=ತನ್ನ ಪ್ರಾಪ್ತಿ ಇಲ್ಲ ಎಂಬ ವಿಷಯದಲ್ಲಿ ನಿಯಮಂ ಚ=ನಿಯಮವನ್ನು ಸಹ, ಯತ್= ಆದಕಾರಣದಿಂದ, ಪದೇ ಪದೇ=ಮತ್ತೆ ಮತ್ತೆ ದ್ವೇಷಿಣಾಂ=ಐಕ್ಯಚಿಂತಕರಿಗೆ, ಆಹ= ಹೇಳಿರುವನೋ, ತತ್= ಆದ್ದರಿಂದ, ಪೂರ್ವೋಕ್ತವಾಕ್ಯಾರ್ಥೇ=ಹಿಂದೆ ಹೇಳಲಾದ ಶ್ರುತ್ಯರ್ಥದಲ್ಲಿ (ಉಗ್ರಂ

ಉಗ್ರಂದಮಾಯನ್) ಇಯಂ= ಈ ಗೀತಾ ವಾಕ್ಯವು, ಬಲೀಯಸೀ=ಪ್ರಬಲವಾದ, ಸಮಾಖ್ಯಾ=ಅದೇ ಅರ್ಥವನ್ನು ಪ್ರತಿಪಾದಿಸುವ ಪ್ರಮಾಣಾಂತರವಾಗಿದೆ.

**ಅನುವಾದ–** ಶ್ರೀಕೃಷ್ಣನು ಗೀತೆಯಲ್ಲಿ ದೈತ್ಯರಿಗೆ ಅಧೋಗತಿಯನ್ನೂ ಅವರಿಗೆ ಎಂದಿಗೂ ತನ್ನ ಪ್ರಾಪ್ತಿ ಇಲ್ಲ ಎಂಬ ನಿಯಮವನ್ನೂ ಹೇಳಿದ್ದಾನೆ. ಆದ್ದರಿಂದ ಹಿಂದೆ ಹೇಳಿದ ಶ್ರುತ್ಯರ್ಥ ವಿಚಾರದಲ್ಲಿ ಈ ಗೀತಾವಾಕ್ಯವು ಬಲಿಷ್ಠವಾದ ಸಮಾಖ್ಯೆಯಾಗಿದೆ.

**ಭಾವವಿಲಾಸಿನೀ–** ಯದ್ಯಸ್ಮಾದಿಯಂ ಗೀತೋಕ್ತಾ ಬಲೀಯಸೀ ಸ್ಪಷ್ಟತ್ವಾನ್ನಿರವಕಾಶತ್ವಾಚ್ಚ ಪ್ರಬಲಾ ॥ ೨೩೩ ॥

**ವಿವರಣೆ–** ಸಮಾಖ್ಯಾ ಎಂದರೆ ಒಂದೇ ಅರ್ಥವನ್ನು ಪ್ರತಿವಾದಿಸುವ ಇನ್ನೊಂದು ಪ್ರಮಾಣ ಎಂದರ್ಥ. ಉಗ್ರಮುಗ್ರಂ ಎಂಬ ಶ್ರುತಿಯಲ್ಲಿ ಹೇಳುವ ಅರ್ಥವನ್ನೇ ಗೀತೆಯಲ್ಲಿ ಆಸುರೀಂಯೋನಿಮಾಪನ್ನಾಃ ಎಂದು ಹೇಳಿದ್ದರಿಂದ ಗೀತೆಯ ವಾಕ್ಯವು ಸಮಾಖ್ಯಾ ಎಂದೆನಿಸುವುದು.

ಕ್ವಾಚಿತ್ಕದ್ವೇಷಿಮೋಕ್ಷೋಕ್ತಿರಪಿ ಭಕ್ತಾನ್ ಜಯಾದಿಕಾನ್ ।
ಶಾಪಾದಿನಾ ತಥಾಭೂತಾನ್ ಉದ್ದಿಶ್ಯೈವೇತಿ ಶಂಸತಿ ॥ ೨೩೪ ॥

**ಅರ್ಥ–** ಕ್ವಾಚಿತ್ಕದ್ವೇಷಿಮೋಕ್ಷೋಕ್ತಿಃ ಅಪಿ= ಭಗವಂತನನ್ನು ದ್ವೇಷಿಸುವವರಿಗೆ ಮೋಕ್ಷ ಎಂದು ಹೇಳುವ ಕೆಲವು ವಾಕ್ಯವಾದರೂ, ಶಾಪಾದಿನಾ= ಶಾಪ ಮೊದಲಾದ ಕಾರಣಗಳಿಂದ, ತಥಾಭೂತಾನ್= ಹಾಗೆ ಆಸುರೀಯೋಗಿಯಲ್ಲಿ ಜನಿಸಿದ, ಭಕ್ತಾನ್=ಭಕ್ತರಾದ ಜಯಾದಿಗಳನ್ನು, ಉದ್ದಿಶ್ಯೈವ=ಉದ್ದೇಶಿಸಿಯೇ, ಇತಿ=ಎಂದು, ಶಂಸತಿ= ಹೇಳುತ್ತದೆ.

**ಅನುವಾದ–** ಭಗವಂತನ ದ್ವೇಷ ಮಾಡಿ ಮುಕ್ತಿ ಹೊಂದಿದ್ದಾರೆಂದು ಕೆಲವು ವಾಕ್ಯಗಳು ಇವೆ. ಜಯವಿಜಯ ಮೊದಲಾದವರು ಶಾಪಾದಿಗಳಿಂದ ಆಸುರೀಯೋನಿಯಲ್ಲಿ ಹುಟ್ಟಿ ಭಗವಂತನನ್ನು ದ್ವೇಷಿಸಿದ್ದಾರೆಂದು ಆ ವಾಕ್ಯಗಳು ತಿಳಿಸುತ್ತವೆಂದು ಅರ್ಥೈಸಬೇಕು.

**ಭಾವವಿಲಾಸಿನೀ–** ಜಯಾದಿಕಾನ್ ಆದಿಪದೇನ ವಿಜಯಿಚಿತ್ರಕೇತುಭೃಗೂರ್ವಶ್ಯಾದೀನಾಂ ಸಂಗ್ರಹಃ । ತಥಾಭೂತಾನಾಸುರಯೋನಿಷು ಭೂತಾನ್ ॥ ೨೩೪ ॥

**ವಿವರಣೆ–** ಹಿರಣ್ಯಾಕ್ಷ ಹಿರಣ್ಯಕಶಿಪು ಶಿಶುಪಾಲ, ದಂತವಕ್ರ, ರಾವಣ, ಕುಂಭಕರ್ಣ, ಕಂಸ, ಪೂತನಾ, ಇತ್ಯಾದಿಗಳಲ್ಲಿ ಜೀವದ್ವಯಾವೇಶವಿದೆ ಎಂದು ಆಚಾರ್ಯಮಧ್ವರು ಮಾತ್ರ ತಿಳಿಸಿದ್ದಾರೆ. ಸುರೋತ್ತಮತೀರ್ಥರು. ಜಯಾದಿಕಾನ್ ಎಂಬಲ್ಲಿ ಆದಿಪದದಿಂದ ವಿಜಯ ಚಿತ್ರಕೇತು, ಭೃಗು, ಊರ್ವಶಿ ಮೊದಲಾದವರನ್ನು ಇಟ್ಟುಕೊಳ್ಳಬೇಕು ಎಂದು ತಿಳಿಸಿದ್ದಾರೆ.

**ಯದ್ವಾಙ್ ನಿರವಕಾಶೇಯಂ ತಸ್ಯಾಶ್ಶೋಕ್ತೈವ ತದ್ಗತಿಃ ॥ ೨೩೫ ॥**

**ಅರ್ಥ–** ಯತ್=ಯಾವ ಕಾರಣದಿಂದ, ಇಯಂವಾಕ್= ಶೃಣ್ವೇ ವೀರಂ ಎಂಬ ಈ ಶ್ರುತಿಯು, ನಿರವಕಾಶಾ=ಅನ್ಯಾರ್ಥಕ್ಕೆ ಅವಕಾಶವಿಲ್ಲವಾದ್ದರಿಂದ ಪ್ರಬಲವೋ, ತತ್= ಆ ಕಾರಣದಿಂದ, ತಸ್ಯಾಃ= ಆ ಶ್ರುತಿವಾಕ್ಯದ, ಗತಿಃ=ಅರ್ಥವು, ಉಕ್ತೈವ= ಹೇಳಲ್ಪಟ್ಟಿದ್ದೇ ಆಗಿದೆ.

**ಅನುವಾದ–** ಶೃಣ್ವೇ ವೀರಮುಗ್ರಂ ಎಂಬ ಶ್ರುತಿಯು ನಿರವಕಾಶವಾದ್ದರಿಂದ ಪ್ರಬಲವಾಗಿದೆ. ಆದ್ದರಿಂದಲೇ ಆ ಶ್ರುತಿಗೆ ಬೇರೆ ಅರ್ಥಮಾಡುವುದು ಯುಕ್ತವಲ್ಲ.

**ಭಾವವಿಲಾಸಿನೀ –** ಯದ್ಯಸ್ಮಾತ್ ತತ್ತಸ್ಮಾತ್ ಸಾವಕಾಶಾದಪಿ ನಿರವಕಾಶಸ್ಯ ಪ್ರಬಲತ್ವಾತ್ ॥ ೨೩೫ ॥

**ಯಜ್ಞೇನ ಯಜ್ಞಮಯಜಂತೇತಿ ವೇದವಚಸ್ಯಪಿ ।**
**ಉಕ್ತೋಽಯಮರ್ಥೋ ವಿಸ್ಪಷ್ಟಂ ತತೋ ಮುಕ್ತಾಃ ಸಹಸ್ರಶಃ ॥**
**ಸಂತಿ ನೈಕತ್ವಮೇತೇಷಾಂ ಯತೋತ್ರಾನೇಕತೋಚ್ಯತೇ ॥ ೨೩೬ ॥**

**ಅರ್ಥ–** ಯಜ್ಞೇನ=ಯಜ್ಞಾದಿಕರ್ಮದಿಂದ, ಯಜ್ಞಂ=ಯಜ್ಞನಾಮಕಭಗವಂತನನ್ನು ಅಯಜಂತ=ಪೂಜಿಸಿದರು. ಇತಿ=ಎಂಬ, ವೇದವಚಸ್ಯಪಿ=ವೇದವಾಕ್ಯದಲ್ಲಿಯೂ, ಅಯಂ ಅರ್ಥಃ=ಈ ಅರ್ಥವು, ವಿಸ್ಪಷ್ಟಂ=ಬಹಳಸ್ಪಷ್ಟವಾಗಿ, ಉಕ್ತಃ=ಹೇಳಲ್ಪಟ್ಟಿದೆ. ತತಃ=ಆದ್ದರಿಂದ ಮುಕ್ತಾಃ= ಮುಕ್ತರು, ಸಹಸ್ರಶಃ=ಸಾವಿರಾರುಸಂಖ್ಯೆಯಲ್ಲಿ ಸಂತಿ=ಇರುತ್ತಾರೆ. ಯತಃ= ಯಾವ ಕಾರಣದಿಂದ, ಅತ್ರ=ಈ ಶ್ರುತಿಯಲ್ಲಿ ಅನೇಕತಾ=ಅನೇಕತ್ವವು, ಉಚ್ಯತೇ= ಹೇಳಲ್ಪಡುತ್ತದೋ ಆದ್ದರಿಂದ ಏತೇಷಾಂ=ಈ ಮುಕ್ತರಿಗೆ, ಏಕತ್ವಂ ನ=ಏಕತ್ವವಿಲ್ಲ.

**ಅನುವಾದ–** ಯಜ್ಞೇನ ಯಜ್ಞಮಯಜಂತ ಎಂಬ ಶ್ರುತಿಯಲ್ಲಿ ದೇವತೆಗಳು ಯಜ್ಞಾದಿಕರ್ಮಗಳಿಂದ ಯಜ್ಞನಾಮಕನಾದ ಭಗವಂತನನ್ನು ಪೂಜಿಸುತ್ತಾರೆಂದು ಹೇಳಿದ್ದರಿಂದ ಮುಕ್ತರು ಅನೇಕಸಂಖ್ಯೆಯಲ್ಲಿದ್ದಾರೆಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಅವರಿಗೂ ಏಕತ್ವವಿಲ್ಲ.

**ಭಾವವಿಲಾಸಿನೀ–** ಇದನೀಂ ಮುಕ್ತನಾಂ ಬಹುತ್ವೇ ಸಾಕಾರತ್ವೇ ತಾರತಮ್ಯೇ ಚ ಶ್ರುತೀರಾಹ – **ಯಜ್ಞೇನೇತ್ಯಾದಿನಾ** ॥ ಯತ್ರ ನಾಕಪದೋದಿತಮೋಕ್ಷೇ ಪೂರ್ವೇ ಸಾಧ್ಯಾದೇವಾಃ ಸಂತಿ । ತತ್ರ ತೇ ಯಜ್ಞನಾಮಕ ಭಗವತ್‌ಪೂಜಕಾ ದೇವಾಶ್ಚ ಸಚಂತೇತ್ಯುಕ್ತ್ಯಾ ಮುಕ್ತೌ ಪೂರ್ವಾಪರತ್ವಾಕ್ರಾಂತಬಹುದೇವತಾಸಿದ್ಧಿರಿತಿ ಭಾವಃ ॥ ೨೩೬ ॥

**ವಿವರಣೆ–** ಯಜ್ಞೇನ ಯಜ್ಞಮಯಜಂತ ದೇವಾಃ, ಯತ್ರ ಪೂರ್ವೇ ಸಾಧ್ಯಾಃ ಸಂತಿದೇವಾಃ ಎಂಬ ಶ್ರುತಿಯಲ್ಲಿ ನಾಕಪದದಿಂದ ಉಕ್ತವಾದ ಮೋಕ್ಷದಲ್ಲಿ ಯತ್ರ

ಪೂರ್ವೇ ಸಾಧ್ಯಾ ಸಂತಿ ದೇವಾಃ ಎಂಬುದಾಗಿ ಪೂರ್ವಾಪರತ್ವ ಉಳ್ಳದೇವತೆಗಳು ಬಹಳ ಇದ್ದಾರೆಂದು ಸಿದ್ಧವಾಗುತ್ತದೆ. ಆದ್ದರಿಂದ ಮುಕ್ತದೇವತೆಗಳಿಗೂ ಪರಸ್ಪರವಾಗಿ ಐಕ್ಯವಿಲ್ಲ.

**ತೇಷು ಪೂರ್ವೇ ಪೂರ್ವಮುಕ್ತಾಃ ಪಶ್ಚಾನ್ಮುಕ್ತಾಸ್ತಥಾಪರೇ ।**
**ಜ್ಞಾತಯೋಽಜ್ಞಾತಯಶ್ಚೇತಿ ತೇ ಮುಕ್ತಾಃ ಕ್ವಚಿದೀರಿತಾಃ ॥ ೨೩೭ ॥**

**ಅರ್ಥ–** ತೇಷು ಪೂರ್ವೇ ಪೂರ್ವಮುಕ್ತಾಃ= ಅವರಲ್ಲಿ ಹಿಂದೆ ಮುಕ್ತರಾದವರು, ಪೂರ್ವೇ= ಮೊದಲಿಗರು, ತಥಾ=ಹಾಗೆಯೇ, ಪಶ್ಚಾತ್ ಮುಕ್ತಾಃ= ಅನಂತರ ಮುಕ್ತರಾದವರು, ಅಪರೇ= ಬೇರೆಯವರು, ತೇ ಮುಕ್ತಾಃ=ಆರೀತಿಯಾದ ಮುಕ್ತರು, ಜ್ಞಾತಯಃ= ಜ್ಞಾತಿಗಳು (ಒಟ್ಟಿಗೇಮುಕ್ತರಾದವರು) ಅಜ್ಞಾತಯಃ=ಅಜ್ಞಾತಿಗಳು (ಬೇರೆಯಾಗಿಮುಕ್ತರಾದವರು ಬೇರೆಕಲ್ಪದಲ್ಲಿ ಮುಕ್ತರಾದವರು), ಇತಿ ಚ= ಹೀಗೆಯೂ, ಕ್ವಚಿತ್= ಕೆಲವು ಶ್ರುತಿಗಳಲ್ಲಿ, ಈರಿತಾಃ= ಹೇಳಲ್ಪಟ್ಟಿದ್ದಾರೆ.

**ಅನುವಾದ– ಅವರಲ್ಲಿ ಮೊದಲು ಮುಕ್ತರಾದವರು ಪೂರ್ವರೆಂದೂ ಅನಂತರ ಮುಕ್ತರಾದವರು ಅಪರರೆಂದೂ ಹೇಳಲ್ಪಡುತ್ತಾರೆ. ಮುಕ್ತರಲ್ಲಿ ಜ್ಞಾತಿಗಳು ಹಾಗೂ ಅಜ್ಞಾತಿಗಳೆಂದು ಪ್ರಭೇದವಿದೆ ಎಂದು ಕೆಲವು ಶ್ರುತಿಗಳು ಹೇಳುತ್ತದೆ. ಒಂದೇ ಬ್ರಹ್ಮಕಲ್ಪರಲ್ಲಿ ಮುಕ್ತರಾದವರು ಜ್ಞಾತಿಗಳೆಂದೂ, ಬೇರೆ ಕಲ್ಪದಲ್ಲಿ ಮುಕ್ತರಾದವರು ಅಜ್ಞಾತಿಗಳೆಂದೂ ತಿಳಿಯುತ್ತದೆ.**

**ಭಾವವಿಲಾಸಿನೀ– ಕ್ವಚಿತ್ಪರಂಜ್ಯೋತಿರೂಪಸಂಪದ್ಯೇತಿ ಶ್ರುತೌ। ಸಹಮುಕ್ತಾ ಜ್ಞಾತಯಃ। ಅನ್ಯೇ ಮುಕ್ತಾ ಅಜ್ಞಾತಯಃ ॥ ೨೩೭ ॥**

**ಸಖಾಯಃ ಕಿಲ ತೇ ಸರ್ವೇ ಮುಕ್ತಾವಪಿ ಮನೋಜವೇ ।**
**ಅಸಮಾಃ ಸ್ವಚ್ಛರೂಪತ್ವಾತ್ ಹ್ರದಾ ಇವ ಮನೋಹರಾಃ ॥ ೨೩೮ ॥**

**ಅರ್ಥ–** ತೇ ಮುಕ್ತಾಃ= ಆ ಮುಕ್ತರು, ಸರ್ವೇ=ಎಲ್ಲರೂ, ಸಖಾಯಃ= ಮಿತ್ರರಾಗಿರುವವರು, ಕಿಲ=ಹೀಗೆ ವೇದದಿಂದ ಸಿದ್ಧವಾಗಿದೆಯಷ್ಟೆ ಮುಕ್ತಾ ಅಪಿ= ಮುಕ್ತಿಯಲ್ಲಿಯೂ ಕೂಡ, ಮನೋಜವೇ=ಬುದ್ಧಿಶಕ್ತಿಯ ವೇಗದಲ್ಲಿ, ಅಸಮಾಃ= ತಾರತಮ್ಯ ಉಳ್ಳವರು, ಸ್ವಚ್ಛರೂಪತ್ವಾತ್= ಶುದ್ಧಸ್ವರೂಪವುಳ್ಳವರಾದ್ದರಿಂದ, ಹ್ರದಾ ಇವ= ಆಳವಾದ ಶುದ್ಧ ಜಲಾಶಯದಂತೆ, ಮನೋಹರಾಃ=ಮನಸ್ಸಿಗೆ ಆಕರ್ಷಕರಾಗಿರುವವರು.

**ಅನುವಾದ– ಅಕ್ಷಣ್ವಂತಃ ಎಂಬ ಶ್ರುತಿಯ ಅಭಿಪ್ರಾಯವನ್ನು ಇಲ್ಲಿ ಹೇಳುತ್ತಿದ್ದಾರೆ. ಮುಕ್ತರೆಲ್ಲರೂ ಪರಸ್ಪರ ಮಿತ್ತರಾಗಿ, ಬುದ್ಧಿಶಕ್ತಿಯಲ್ಲಿ ತಾರತಮ್ಯ ಉಳ್ಳವರಾಗಿ ಶುದ್ಧಸ್ವರೂಪರಾಗಿ ಎಲ್ಲ ಮುಕ್ತರೂ ತಮ್ಮ ಸ್ವರೂಪದಿಂದ ಅಭಿನ್ನರಾಗಿ ತಿಳಿನೀರಿನ ಮಡುವಿನಂತೆ ಎಲ್ಲರಿಗೂ ಆಕರ್ಷಕರಾಗಿರುತ್ತಾರೆ.**

**ಭಾವವಿಲಾಸಿನೀ–** ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ । ಆದಘ್ನಾಸ ಉಪಕಕ್ಷಾಸ ಉತ್ವೇ ಹ್ರದಾ ಇವ ಸ್ನಾತ್ವಾ ಉತ್ವೇ ದದೃಶ್ರ ಇತಿ ಶ್ರುತೇರಭಿಪ್ರಾಯಮಾಹ – **ಸಖಾಯ ಇತ್ಯಾದಿನಾ** ॥ ತೇ ಮುಕ್ತಾಃ ತ್ವೇ ಕೇಚಿನ್ಮುಕ್ತಾಃ ಸ್ನಾತ್ವಾ ಸ್ನಾನಯೋಗ್ಯಾ ಹೃದಾ ಇವ ಮನೋಹರಾಃ ಉ ಏವ ದದೃಶ್ರೇ ದದೃಶಿರ ಇತಿ ಶ್ರುತಿ ಖಂಡಾರ್ಥಸೂಚನಮ್ । ಹೃದಾ ಇವ ಮನೋಹರಾ ಇತಿ ದರ್ಶನಸ್ಯ ಸ್ವಾಭಿನ್ನತಾಂ ಸೂಚಯಿತುಂ ಶ್ರುತೌ ಸಂಶ್ಲಿಷ್ಟೋಚ್ಚಾರಣಮ್ । ಉಪಲಕ್ಷಣಂ ಚೈತತ್ । ಕೇಚಿತ್ ಮುಕ್ತಾಃ ಉಪಸಮೀಪೇ ಕಕ್ಷಂ ವನಂ ಯೇಷಾಂ ತೇ ಉಪಕಕ್ಷಾಸ್ತ ಏವೋಪಕ್ಷಾಸಃ ಶ್ವೇತದ್ವೀಪಸ್ಥೋಪವನಾದೌ ವಿಹರಂತಃ ಉ ಏವ ದದೃಶಿರೇ । ತ್ವೇ ಕೇಚಿನ್ಮುಕ್ತಾಃ ಆದಘ್ನಾಸಃ ಆ ಕಂಠಪರ್ಯಂತಂ ಕಟಿಪರ್ಯಂತಂ ವಾ ದಘ್ನಂ ಪ್ರಮಾಣ್ಯಂ ಯಸ್ಯ । ಶ್ವೇತದ್ವೀಪಂ ಪರಿತೋ ವಿದ್ಯಮಾನಸ್ಯ ಕ್ಷೀರಸಮುದ್ರಸ್ಯ । ಅರ್ಶವಾನರ್ಶ ಇತಿ ವತ್ತದ್ವಂತ ಆದಘ್ನಾಸಃ । ಕ್ಷೀರಸಮುದ್ರಜಲೇ ಯಥಾ ಸುಖಂ ವಿಹರಂತ ಉ ಏವ ದದೃಶಿರ ಇತಿ ಪದದ್ವಯಸ್ಯಾಪ್ಯರ್ಥೋ ದ್ರಷ್ಟವ್ಯಃ ।

ಏವಂ ಚಾದಘ್ನಾಸ ಇತಿ ವಿಶೇಷಣೇನ ಲೋಕಸಮೀಪಸ್ಥಾನಾಂ ಸಮೀಪ್ಯ ಮುಕ್ತಾನಾಮುದಾಹರಣಮ್ । ಉಪಕಕ್ಷಾಸ ಇತ್ಯತೇನ ಲೋಕಾಂತಸ್ಥಿತ- ಸಾಲೋಕ್ಯಮುಕ್ತಾನಾಮುದಾಹರಣಮ್ । ಹ್ರದಾ ಇವೇತಿ ತೃತೀಯ ವಿಶೇಷಣೇನಾತಿಗಭೀರಾಣಾಮತಿ ಪವಿತ್ರಾಣಾಮತ್ಯಂತಮನೋಹರಾಣಾಂ ಚ ಭಗವತಃ ಕರಚರಣಾದ್ಯಂಗಾಶ್ರಿತದೇವಾದೀನಾಂ ಸಾಯುಜ್ಯಮುಕ್ತಾನಾಮುದಾಹರಣಮಿತಿ ವಿಭಾಗಃ । ಅನೇನೈವ ಪ್ರಕಾರೇಣ ವೈಕುಂಠಲೋಕಸಮೀಪಸ್ಥಸಾಂತಾನಿಕಾದಿಲೋಕೇಷು ಅನಂತಾಸನಲೋಕಸಮೀಪಸ್ಥಘನೋದಕೇ ಚ ರಮಮಾಣಾಃ ಸಾಮೀಪ್ಯಮುಕ್ತಾ ಲೋಕೇ ಲೋಕಸ್ಥಭಗವದಂಗೇಷು ಚ ರಮಮಾಣಾಃ ಸಾಲೋಕ್ಯಮುಕ್ತಾಃ ಸಾಯುಜ್ಯಮುಕ್ತಾಶ್ಚ ದ್ರಷ್ಟವ್ಯಾಃ । ಸಾರೂಪ್ಯಂ ತು ಯದ್ಯಪಿ ಸರ್ವೇಷಾಂ ಚ ಮುಕ್ತಾನಾಮಸ್ತಿ । ನಿರ್ದುಃಖತ್ವನಿತ್ಯಜ್ಞಾನತ್ವಮುಕ್ತತ್ವಾದಿ- ಭಗವದ್ಧರ್ಮಸಮಾನಧರ್ಮವವತ್ತ್ವರೂಪ ಸಾರೂಪ್ಯಸ್ಯಾಭಾವೇ ಸಮೀಪಸ್ಥತ್ವಾದಿಮಾತ್ರಸ್ಯ ಸುಖಪ್ರಾಪ್ತಿದುಃಖನಿವೃತ್ತ್ಯೋರನ್ಯತರತ್ವಸ್ಯಾಪ್ಯಭಾವೇನ ಸಾಮೀಪ್ಯಾದಿಭಾಜಾಂ ತ್ರಯಾಣಾಮಪಿ ಮುಕ್ತತ್ವಾಯೋಗಾತ್ । ತಥಾಪಿ ಸ್ವರ್ಗಾದಿಸಮೀಪಸ್ಥ ಪ್ರದೇಶೇಷು ರಮಮಾಣಾ ಮುಕ್ತಾಸ್ತಸ್ಯಾಸಂಕೀರ್ಣೋದಾಹರಣಮ್ । ತಚ್ಚಾನ್ಯತ್ರೋಕ್ತರೀತ್ಯಾ ದ್ರಷ್ಟವ್ಯಮ್ ॥ ೨೩೮ ॥

**ವಿವರಣೆ–** ಅಕ್ಷಣ್ವಂತಃ ಎಂಬ ಶ್ರುತಿಯ ಅರ್ಥವನ್ನು ಸುರೋತ್ತಮತೀರ್ಥರು ಈ ರೀತಿಯಾಗಿ ಹೇಳಿದ್ದಾರೆ.

ಅಕ್ಷಣ್ವಂತಃ ಕರ್ಣವಂತಃ ಸಖಾಯೋ ಮನೋಜವೇಷ್ವಸಮಾ ಬಭೂವುಃ ।
ಆದಧ್ನಾಸ ಉಪಕಕ್ಷಾಸ ಉತ್ವೇ ಹ್ರದಾ ಇವ ಸ್ನಾತ್ವಾ ಉತ್ವೇ ದದೃಶ್ರೇ ॥

ಅರ್ಥ- ತ್ವೇ= ಕೆಲವು ಮುಕ್ತರು ಆದಧ್ನಾಸಃ= ಶ್ವೇತದ್ವೀಪದ ಸುತ್ತಲಿರುವಕ್ಷೀರಸಮುದ್ರದಲ್ಲಿ ಕಂಠಪರ್ಯಂತ ಯಥೇಚ್ಛವಾಗಿ ಮುಳುಗಿ ಸ್ನಾನಮಾಡುವವರು, ತ್ವೇ=

ಕೆಲವರು, ಉಪಃ=ಸಮಿಪದಲ್ಲಿ, ಕಕ್ಷಾಸಃ=ಅಶ್ವತ್ಥವನ ಉಳ್ಳವರು, (ಅಲ್ಲಿವಿಹರಿಸುವವರು) ತ್ವೇಃ= ಮತ್ತೆ ಕೆಲವರು ಹ್ರದಾಃಇವ=ಸ್ವಚ್ಛವಾದ ಮಡುವಿನಂತೆ (ಸ್ವಸ್ವರೂಪದಿಂದ ಅಭಿನ್ನರಾಗಿ ಸ್ಪಷ್ಟವಾಗಿ ಪ್ರಕಾಶಗೊಳಿಸುತ್ತಾ) ದದೃಶ್ರೇ (ದದೃಶಿರೇ)= ಕಾಣುತ್ತಿದ್ದರು. ಅಕ್ಷಣ್ವಂತಃ=ಕಣ್ಣುಳ್ಳವರು, ಕರ್ಣವಂತಃ= ಕಿವಿ ಉಳ್ಳವರು, (ಮನೋಹರವಾದ ಸುಂದರವಾದ ಕಿವಿ,ಕಣ್ಣು ಮೊದಲಾದ ಎಲ್ಲ ಅವಯಗಳುಳ್ಳವರು) ಸಖಾಯಃ=ಪರಸ್ಪರ ಮೈತ್ರಿಉಳ್ಳವರು, ಮನೋಜವೇಷು=ಬುದ್ಧಿವ್ಯಾಪಾರಗಳಲ್ಲಿ ಅಸಮಾ ಬಭೂವುಃ ತಾರತಮ್ಯ ಉಳ್ಳವರು ಆಗಿದ್ದಾರೆ.

ಮನೋಜ್ಞಕರ್ಣವಂತಶ್ಚ ಮನೋಜ್ಞಾಕ್ಷ್ಯಾದಿಸುಂದರಾಃ ।
ಪ್ರತ್ಯಯೋ ಯತ್ ಪ್ರಕೃತ್ಯರ್ಥಪ್ರಾಶಸ್ತ್ಯಂ ಚ ವದೇತ್ ಕಿಲ ॥ ೨೩೯ ॥

**ಅರ್ಥ–** ಮನೋಜ್ಞಕರ್ಣವಂತಃ= ಮನೋಹರವಾದ ಕಿವಿಗಳುಳ್ಳವರಾಗಿ ಮನೋಜ್ಞಾಕ್ಷ್ಯಾದಿಸುಂದರಾಃ=ಮನೋಹರವಾದ ಕಣ್ಣುಮೊದಲಾದವುಗಳಿಂದ ಸುಂದರರು ಆಗಿರುವರು. ಯತ್=ಏಕೆಂದರೆ, ಪ್ರತ್ಯಯಃ= ಮತುಪ್ ಪ್ರತ್ಯಯವು ಪ್ರಕೃತ್ಯರ್ಥ ಪ್ರಾಶಸ್ತ್ಯಂ, ಅಕ್ಷಿ, ಕರ್ಣ ಮೊದಲಾದ ಪ್ರಕೃತ್ಯರ್ಥದ ಪ್ರಾಶಸ್ತ್ಯವನ್ನು, ವದೇತ್ ಕಿಲ= ಹೇಳುತ್ತದೆಯಷ್ಟೇ?

**ಅನುವಾದ–** ಅಕ್ಷಣ್ವಂತಃ ಕರ್ಣವಂತಃ ಎಂಬ ಶ್ರುತಿಯಲ್ಲಿರುವ ಮತುಪ್ ಪ್ರತ್ಯಯವು, ಮನೋಹರವಾದ ಕಿವಿಉಳ್ಳವರು, ಮನೋಹರವಾದ ಕಣ್ಣುಮೊದಲಾದ ಅವಯದಗಳುಳ್ಳವರು ಎಂದು ಪ್ರಕೃತಿಯ ಅರ್ಥದಲ್ಲಿ ಪ್ರಾಶಸ್ತ್ಯವನ್ನು ಹೇಳುತ್ತದೆ.

ಪ್ರಶಸ್ತತಾ ಚ ಕರ್ಣಾದೇಃ ಜ್ಞಾನಾನಂದಾತ್ಮತೈವ ಹಿ ।
ಅತೋ ನಿರಾಕಾರತೈಷಾಂ ನೈವ ವಾಚ್ಯಾ ಕದಾಚನ ।
ಶ್ರೋತ್ರನೇತ್ರಫಲಸ್ಯಾಪ್ತೇಃ ಅಪಿ ತೇ ತತ್ವದೋದಿತಾಃ ॥ ೨೪೦ ॥

**ಅರ್ಥ–** ಕರ್ಣಾದೇಃ=ಕಿವಿ ಮೊದಲಾದ ಅಂಗಗಳಿಗೆ, ಪ್ರಶಸ್ತತಾ=ಪ್ರಶಸ್ತತೆಯು, ಹಿ= ಯಾವ ಕಾರಣದಿಂದ ಜ್ಞಾನಾನಂದಾತ್ಮತಾ, ಏವ=ಜ್ಞಾನಾನಂದರೂಪತ್ವವೇ ಆಗಿದೆಯೋ, ಅತಃ= ಆದ್ದರಿಂದ, ಏಷಾಂ=ಮುಕ್ತರಿಗೆ, ನಿರಾಕಾರತಾ=ನಿಕಾಕಾರತ್ವವು, ಕದಾಚನ= ಎಂದಿಗೂ, ನೈವ ವಾಚ್ಯಾ=ಹೇಳತಕ್ಕದ್ದಲ್ಲ. ಶ್ರೋತ್ರನೇತ್ರಫಲಸ್ಯ= ಕಿವಿ, ಕಣ್ಣುಗಳ ಮುಖ್ಯಫಲದ ಆಪ್ತೇಃ, ಅಪಿ=ಪ್ರಾಪ್ತಿ, ಇರುವುದರಿಂದಲೂ ತೇ=ಅವರು ತತ್ವದೋದಿತಾಃ= ಅಕ್ಷಣ್ವಂತ, ಕರ್ಣವಂತ, ಪದಗಳಿಂದ ವಾಚ್ಯರಾಗಿದ್ದಾರೆ.

**ಅನುವಾದ–** ದೇಹದ ಅವಯವಗಳಾದ ಕಣ್ಣು, ಕಿವಿ ಮೊದಲಾದವುಗಳಿಗೆ ಪ್ರಶಸ್ತತೆ ಎಂದರೆ ಅವೆಲ್ಲವು ಜ್ಞಾನಾನಂದಸ್ವರೂಪವೇ ಆಗಿರುವುದು. ಆದ್ದರಿಂದ ಮುಕ್ತರಿಗೆ ನಿರಾಕಾರತ್ವವನ್ನು ಎಂದಿಗೂ ಹೇಳಬಾರದು. ಕಿವಿ, ಕಣ್ಣುಗಳ ಮುಖ್ಯಫಲವನ್ನು

ಹೊಂದಿದವರಾದ್ದರಿಂದ ಅವರೇ ಅಕ್ಷಣ್ವಂತ, ಕರ್ಣವಂತ ಪದಗಳಿಂದ ವಾಚ್ಯರಾಗಿದ್ದಾರೆ.

**ಸ್ಪಷ್ಟೈತದ್ವಾಕ್ಯಬಲತೋ ಯತ್ರ ತ್ವಸ್ಯೇತಿ ವಾಗಪಿ ।**
**ಉಕ್ತರೀತ್ಯಾ ತರ್ಕಮುದ್ರಾಂ ಆಶ್ರಿತ್ಯೈವೇತಿ ಗಮ್ಯತೇ ॥ ೨೪೧ ॥**

**ಅರ್ಥ–** ಸ್ಪಷ್ಟೈತದ್ವಾಕ್ಯಬಲತಃ= ಸ್ಪಷ್ಟವಾದ ಈ ವಾಕ್ಯದ ಬಲದಿಂದ, ಯತ್ರತ್ವಸ್ಯೇತಿ ವಾಗಪಿ= ಯತ್ರ ತ್ವಸ್ಯ ಸರ್ವಮಾತ್ಮೈವಾ ಭೂತ್ ಎಂಬ ಬೃಹದಾರಣ್ಯಕ ವಾಕ್ಯವೂ, ಉಕ್ತರೀತ್ಯಾ= ನಾವು ಹಿಂದೆ ಹೇಳಿದಂತೆ, ತರ್ಕಮುದ್ರಾಮಾಶ್ರಿತ್ಯೈವ= ತರ್ಕರೂಪ ವಾಗಿಯೇ ಪ್ರವೃತ್ತವಾಗಿದೆಯೆಂದು, ಗಮ್ಯತೇ= ತಿಳಿಯುತ್ತದೆ.

**ಅನುವಾದ–** ಯತ್ರತ್ವಸ್ಯ ಎಂಬ ಶ್ರುತಿಯೂ ಈ ಸ್ಪಷ್ಟವಾದ ಶ್ರುತಿಯ ಬಲದಿಂದ ತರ್ಕರೀತಿಯನ್ನು ಅನುಸರಿಸಿಯೇ ಪ್ರವೃತ್ತವಾಗಿದೆ ಎಂದು ತಿಳಿಯುತ್ತದೆ. ಶ್ರುತಿಯು ಹೇಳುವ ತರ್ಕದ ರೀತಿ ಹೀಗಿದೆ.

ಮುಕ್ತಿಯಲ್ಲಿ ಪರಮಾತ್ಮನೂಬ್ಬನೇ ಇದ್ದು ಆತ್ಮಭಿನ್ನವಾದ ಯಾವ ವಸ್ತುವೂ ಇಲ್ಲವೆಂದಾದರೆ ಮುಕ್ತನು ಯಾರನ್ನು ಯಾವ ಸಾಧನದಿಂದ ನೋಡಬೇಕು? ಯಾವುದರಿಂದ ಯಾವುದನ್ನು ಮಾಡಬೇಕು? ಇಂದ್ರಿಯಗಳೇ ಇಲ್ಲದೆ ಮುಕ್ತನು ಪುರುಷಾರ್ಥವನ್ನು ಪಡೆಯುವನೆಂಬುದು ಅರ್ಥಹೀನಮಾತಾಗುತ್ತದೆ. ಆದ್ದರಿಂದ ಸಂಸಾರದಲ್ಲಿದ್ದಂತೆ ಭಿನ್ನವಸ್ತುಗಳು ಮುಕ್ತಿಯಲ್ಲಿಯೂ ಇರಲೇಬೇಕು ಎಂಬ ನಿರ್ಣಯವನ್ನು ಈ ಶ್ರುತಿಯು ತರ್ಕವನ್ನಾಶ್ರಯಿಸಿ ದ್ವೈತವನ್ನೇ ದೃಢೀಕರಿಸುತ್ತದೆ.

**ಭಾವವಿಲಾಸಿನೀ–** ಅಕ್ಷಣ್ವಂತಃ ಕರ್ಣವಂತ ಇತ್ಯೇತತ್ ಪದದ್ವಯಮಂಗಾಂತರಸ್ಯಾ-ಪ್ಯುಪಲಕ್ಷಣಮಿತಿ ಭಾವೇನ ತದರ್ಥಮಾಹ – **ಮನೋಜ್ಞೇತಿ** ॥ ಆದಿಪದೇನ ಕರಚರಣಾದಿ-ಸರ್ವಾವಯವಾ ಗೃಹ್ಯಂತೇ । ಕರ್ಣನೇತ್ರಸೌಂದರ್ಯಸ್ಯ ಸರ್ವಾವಯವಸಾಚಿವ್ಯೇ ಸತ್ಯೇವ ಸಂಭವಾದಿತಿಭಾವಃ । ಪ್ರತ್ಯಯೋ ಮತುಪ್ಪ್ರತ್ಯಯಃ । ಏಷಾಂ ಮುಕ್ತಾನಾಮ್ ॥೨೩೯-೨೪೧॥

**ಮುಕ್ತಿಕಾಲೇ ಯತಸ್ತೇಷಾಂ ಮಹಿಮಾನ ಇತಿ ಶ್ರುತೌ ।**
**ಮಹಿಮೋಕ್ತಃ ಶೂನ್ಯಭಾವೋ ಮುಕ್ತಾನಾಮುಚಿತೋ ನ ತತ್ ॥ ೨೪೨ ॥**

**ಅರ್ಥ–** ಯತಃ=ಯಾವ ಕಾರಣದಿಂದ, ಮಹಿಮಾನ ಇತಿ ಶ್ರುತೌ= ತೇಹ ನಾಕಂ ಮಹಿಮಾನಃ ಎಂಬ ಶ್ರುತಿಯಲ್ಲಿ, ತೇಷಾಂ=ಆ ಮುಕ್ತರಿಗೆ, ಮುಕ್ತಿಕಾಲೇ= ಮುಕ್ತಿಕಾಲದಲ್ಲಿ ಮಹಿಮಾ= ಮಹಿಮೆಯು (ಗುಣವು) ಹೇಳಲ್ಪಟ್ಟಿದೆಯೋ, ತತ್=ಆದ್ದರಿಂದ, ಮುಕ್ತಾನಾಂ= ಮುಕ್ತರಿಗೆ, ಶೂನ್ಯಭಾವಃ=ಗುಣಾಭಾವವನ್ನು ಉಚಿತಂ ನ=ಹೇಳುವುದು ಉಚಿತವಲ್ಲ.

**ಅನುವಾದ–** ತೇಹ ನಾಕಂ ಮಹಿಮಾನಃ ಎಂಬ ಶ್ರುತಿಯಲ್ಲಿ ಮುಕ್ತಿಕಾಲದಲ್ಲಿ ಮುಕ್ತಜೀವರಿಗೆ ಮಹಿಮೆಯನ್ನು ಹೇಳಿರುವುದರಿಂದ ಮುಕ್ತರಿಗೆ ಗುಣವಿಲ್ಲ ಎಂದು ಹೇಳುವುದು ಉಚಿತವಲ್ಲ.

**ಭಾವವಿಲಾಸಿನೀ–** ಮಹಿಮಾನ ಇತಿ ಶ್ರುತೌ "ತೇಹ ನಾಕಂ ಮಹಿಮಾನ" ಇತಿ ಶ್ರುತೌ । ತತ್ತಸ್ಮಾತ್ ॥ ೨೪೨ ॥

**ನಂದಂತಿ ಕಿಲ ತೇ ಸರ್ವೇ ಕ್ಲೇಶಲೇಶಶ್ಚ ತೇಷು ನ ।**
**ಅತೋ ಮುಕ್ತಕಥೈವೇಯಂ ತತ್ಪೂರ್ವಾವಾಕ್ ಚ ಮೌಕ್ತವಾಕ್॥ ೨೪೩ ॥**

**ಅರ್ಥ–** ತೇ ಸರ್ವೇ= ಆ ಎಲ್ಲಾ ಮುಕ್ತರು, ನಂದಂತಿ ಕಿಲ=ಸಂತೋಷಪಡುತ್ತಾರಷ್ಟೇ, ಕ್ಲೇಶಲೇಶಶ್ಚ=ಸ್ವಸ್ಪದುಃಖವಾದರೂ, ನ=ಇರುವುದಿಲ್ಲ, ಅತಃ= ಆದ್ದರಿಂದ,ಇಯಂ=ಇದು ಮುಕ್ತಕಥಾ ಏವ=ಮುಕ್ತರ ವಿಷಯವೇ ಆಗಿದೆ, ತತ್=ಆದ್ದರಿಂದ, ಪೂರ್ವಾವಾಕ್= ಅಕ್ಷಣ್ವಂತಃ ಎಂಬ ಹಿಂದಿನವಾಕ್ಯವೂ, ಮೌಕ್ತವಾಕ್=ಮುಕ್ತವಿಷಯಕವಾದ ಮಾತೇ ಆಗಿದೆ.

**ಅನುವಾದ–** ಮುಂದಿನ ವಾಕ್ಯಗಳ ಬಲದಿಂದ ಈ ಶ್ರುತಿಯ ಪ್ರಕರಣವು ಮುಕ್ತಪ್ರಕರಣವೆಂದು ಸ್ಪಷ್ಟವಾಗುತ್ತದೆ ಎಂದು ಇಲ್ಲಿ ಹೇಳುತ್ತಿದ್ದಾರೆ. ಮುಕ್ತರೆಲ್ಲರೂ ಸಂತುಷ್ಟರಾಗಿರುತ್ತಾರೆಂದೂ, ಅವರಲ್ಲಿ ದುಃಖಲೇಶವೂ ಇಲ್ಲವೆಂದೂ ಹೇಳಿರುವುದರಿಂದ ಇದು ಮುಕ್ತಪ್ರಕರಣವೇ ಆಗಿದೆ. ಅಕ್ಷಣ್ವಂತಃ ಎಂಬ ಹಿಂದಿನ ವಾಕ್ಯವೂ ಮುಕ್ತಪ್ರಕರಣವೆಂದೇ ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ನನ್ವಸ್ಯ ಪ್ರಕರಣಸ್ಯ ಮುಕ್ತಪರತ್ವಂ ಕೃತ ಇತಿ ಚೇತ್ ಸರ್ವೇ ನಂದತೀತ್ಯುತ್ತರ-ವಾಕ್ಯಬಲಾದಿತ್ಯಾಹ – **ನಂದಂತೀತಿ** ॥ ನ ಹಿ ಮುಕ್ತೇರನ್ಯತ್ರ ಸರ್ವೇ ನಂದಂತೀತಿ ಘಟತೇ । ಉಪಲಕ್ಷಣಂ ಚೈತತ್ । ಸಖಾಯ ಇತಿ ಪದೇನೋಕ್ತಸರ್ವಸಖ್ಯಸ್ಯ "ಋಚಾಂ ತ್ವ" ಇತಿ ಶ್ರುತ್ಯುಕ್ತಬ್ರಹ್ಮಬಾಹುಲ್ಯಸ್ಯ ಚ ಮುಕ್ತೇರನ್ಯತ್ರಾಯೋಗಾತ್ತದಪಿ ಗ್ರಾಹ್ಯಮ್ । ಅತೋ ಮುಕ್ತಕಥೈವೇಯಮಿತಿ ಭಾವಃ। ತತ್ತಸ್ಮಾತ್ । ಪೂರ್ವಾ ವಾಕ್ ಅಕ್ಷಣ್ವಂತ ಇತಿ ವಾಕ್ ॥೨೪೩॥

**ಪರಂಜ್ಯೋತಿರುಪಪ್ರಾಪ್ಯ ನಿಷ್ಪನ್ನನಿಜರೂಪವಾನ್ ।**
**ಪರ್ಯೇತಿ ಮುಕ್ತಿಸ್ಥಾನೇಷು ಸ್ತ್ರೀಭಿರ್ಯಾನೈಶ್ಚ ಸಂಯುತಃ ॥ ೨೪೪ ॥**

**ಅರ್ಥ–** ಪರಂಜ್ಯೋತಿಃ= ಪರಂಜ್ಯೋತಿಯಾದ ಶ್ರೀಹರಿಯನ್ನು, ಉಪಪ್ರಾಪ್ಯ= ಹೊಂದಿ, ನಿಷ್ಪನ್ನನಿಜರೂಪವಾನ್=ಪ್ರಕಟವಾದ ಸ್ವಸ್ವರೂಪಉಳ್ಳವನಾಗಿ, ಮುಕ್ತಿಸ್ಥಾನೇಷು= ಮುಕ್ತಿಯ ವಿಹಾರಸ್ಥಾನಗಳಲ್ಲಿ, ಸ್ತ್ರೀಭಿಃ=ಸ್ತ್ರೀಯರಿಂದಲೂ, ಯಾನೈಶ್ಚ=ವಾಹನಗಳಿಂದಲೂ, ಸಂಯುತಃ= ಕೂಡಿದವನಾಗಿ, ಪರ್ಯೇತಿ=ಸುತ್ತುತ್ತಾನೆ.

**ಅನುವಾದ–** ಮುಕ್ತಜೀವನು ಪರಂಜ್ಯೋತಿಯಾದ ಶ್ರೀಹರಿಯನ್ನು ಹೊಂದಿ ಸ್ವಸ್ವರೂಪಾವಿರ್ಭಾವಉಳ್ಳವನಾಗಿ ಮುಕ್ತಿಯ ವಿಹಾರಸ್ಥಾನಗಳಲ್ಲಿ ಸ್ತ್ರೀಯರಿಂದ ಮತ್ತು ವಾಹನಗಳಿಂದ ಸಹಿತನಾಗಿ ಸುತ್ತುತ್ತಾನೆ.

ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾರ್ಯಾನೈರ್ವಾ ಎಂಬ ಶ್ರುತಿಯ ಅರ್ಥವನ್ನು ಇಲ್ಲಿ ಸಂಗ್ರಹಿಸಿದ್ದಾರೆ. (ಇಲ್ಲಿಂದ ಮೂರು ಶ್ಲೋಕಗಳಿಂದ)-

**ರಮಮಾಣೋ ಹಸನ್ ಕ್ರೀಡನ್ ಜ್ಞಾತ್ಯಜ್ಞಾತಿಜನೈಃ ಸಹ ।**
**ಇತಿ ಮುಕ್ತಸ್ಯ ಸೌಭಾಗ್ಯಂ ಶ್ರುತಿರಾಹ ಪದೇ ಪದೇ ॥ ೨೪೫ ॥**

**ಅರ್ಥ–** ಜ್ಞಾತ್ಯಜ್ಞಾತಿಜನೈಸ್ಸಹ= ಜ್ಞಾತಿ, ಅಜ್ಞಾತಿ ಮುಕ್ತರಿಂದ ಸಹಿತನಾಗಿ, ಹಸನ್= ನಗುತ್ತಾ, ಕ್ರೀಡನ್=ಕ್ರೀಡಿಸುತ್ತಾ, ರಮಮಾಣಃ=ಆನಂದಿಸುವವನಾಗಿರುವನು, ಇತಿ= ಎಂದು, ಶ್ರುತಿಃ= ವೇದವು ಮುಕ್ತಸ್ಯ=ಮುಕ್ತನ, ಸೌಭಾಗ್ಯಂ=ಸುಖವಿಶೇಷವನ್ನು, ಪದೇ ಪದೇ= ಪುನಃಪುನಃ ಆಹ= ಹೇಳುತ್ತದೆ.

**ಅನುವಾದ–** ಮುಕ್ತರು ಜ್ಞಾತಿ, ಅಜ್ಞಾತಿ ಎಂಬ ಮುಕ್ತರಿಂದ ಕೂಡಿಕೂಂಡು ನಗುತ್ತಾ, ಆಟವಾಡುತ್ತಾ ಅನಂದ ಪಡುತ್ತಾರೆಂದು ಮುಕ್ತರ ಸೌಭಾಗ್ಯವನ್ನು ಶ್ರುತಿಯು ಮತ್ತೆ ಮತ್ತೆ ಹೇಳುತ್ತದೆ.

**ಅತೋ ದ್ವಿತೀಯಶೂನ್ಯತ್ವಂ ಅದ್ರಷ್ಟೃತ್ವಮವಕ್ತೃತಾಮ್ ।**
**ಅಶ್ರೋತ್ರತ್ವಂ ಶ್ರುತಿಪ್ರೋಕ್ತಚಿತ್ರಭೋಗೇಷ್ವಭೋಕ್ತೃತಾಮ್ ॥ ೨೪೬ ॥**

**ಅರ್ಥ–** ಅತಃ= ಮುಕ್ತರವಿಹಾರವು ವರ್ಣಿತವಾಗಿರುವುದರಿಂದ, ದ್ವಿತೀಯ ಶೂನ್ಯತ್ವಂ= ಅದ್ವಿತೀಯತ್ವವನ್ನು (ಅಸಂಖ್ಯರಿದ್ದರೂ ಏಕತ್ವವನ್ನು) ಅದ್ರಷ್ಟೃತ್ವಂ= ಕಣ್ಣಿಲ್ಲದಿರುವಿಕೆಯನ್ನು ಅವಕ್ತೃತಾಂ= ಮೂಕತ್ವವನ್ನು ಅಶ್ರೋತೃತ್ವಂ=ಕಿವಿ ಇಲ್ಲದಿರುವಿಕೆಯನ್ನು ಶ್ರುತಿಪ್ರೋಕ್ತಚಿತ್ರ ಭೋಗೇಷು ಸತ್ಸು ಅಪಿ=ಶ್ರುತಿ ಹೇಳುವ ವಿಚಿತ್ರವಾದ ಭೋಗಗಳು ಇರುತ್ತಿರಲು ಅಭೋಕ್ತೃತ್ವಂ=ಭೋಗಶೂನ್ಯತ್ವವನ್ನು (ಕೋ ನಾಮ ವೈದಿಕೋ ಬ್ರೂಯಾತ್= ಯಾವ ವೈದಿಕನು ಹೇಳಿಯಾನು ಎಂಬ ಮುಂದಿನ ಶ್ಲೋಕದಿಂದ ಅನ್ವಯವನ್ನು ಇಟ್ಟುಕೊಳ್ಳಬೇಕು).

**ಅನುವಾದ–** ಮುಕ್ತರ ವಿಹಾರವು ಇಲ್ಲಿ ವರ್ಣಿತವಾಗಿರುವುದರಿಂದ ಮುಕ್ತರು ಅನೇಕರಿರುವಾಗ ಏಕತ್ವವನ್ನು, ಕಣ್ಣು, ಕಿವಿ, ಬಾಯಿ, ಇರುವಾಗ ಕಣ್ಣಿಲ್ಲ, ಕಿವಿ ಇಲ್ಲ, ಮೂಕ ಎಂಬುದನ್ನೂ ಮತ್ತು ಶ್ರುತಿಯಲ್ಲಿಯೇ ವಿಚಿತ್ರವಾದ ಭೋಗವನ್ನು ಮುಕ್ತರಿಗೆ ಹೇಳಿರುವಾಗ ಭೋಗವೇ ಇಲ್ಲ ಎಂಬುದನ್ನೂ ಯಾವ ವೈದಿಕನು ಹೇಳಿಯಾನು?

**ಭಾವವಿಲಾಸಿನೀ–** ಪರಂಜ್ಯೋತಿರಿತಿ ಶ್ರುತ್ಯಾಪಿ ಮುಕ್ತಸೌಭಾಗ್ಯಂ ಪ್ರದರ್ಶಯನ್ ಸ್ಪಷ್ಟೇ ದೃಶಬಹುತರನಿರವಕಾಶ್ರುತಿ ವಿರೋಧಾತ್ ಯತ್ರತ್ವಸ್ಯೇತಿ ಸಾವಕಾಶಮೇಕಂ ವಾಕ್ಯಂ ನ ಪರಾಭಿಪ್ರೇತಂ ಬಾಧಿತಮರ್ಥಂ ಬ್ರೂತ ಇತ್ಯಾಹ – ಪರಂಜ್ಯೋತಿರಿತ್ಯಾದಿನಾ ॥ ೨೪೪-೨೪೬ ॥

**ಶೂನ್ಯವಾದ್ಯುಕ್ತ ಮೋಕ್ಷಾಭಾಂ ಮುಕ್ತಿಂ ಕೋ ನಾಮ ವೈದಿಕಃ ।**
**ಬ್ರೂಯಾತ್ ಶ್ರುತಿಂ ಬಾಧಿತಾರ್ಥಾಂ ಸ್ಪಷ್ಟಶ್ರುತಿಸಮಾಖ್ಯಯಾ ।**
**ಯೋಗ್ಯಾರ್ಥೇ ಪ್ರಣಯೇನ್ನೋ ಚೇತ್ ಮೀಮಾಂಸಾ ಕಿನ್ನಿಬಂಧನಾ ॥ ೨೪೭ ॥**

**ಅರ್ಥ–** ಮುಕ್ತಿಂ= ಮುಕ್ತಿಯನ್ನು ಶೂನ್ಯವಾದ್ಯುಕ್ತ ಮೋಕ್ಷಾಭಾಂ= ಶೂನ್ಯವಾದಿಯು ಹೇಳಿದ ಮುಕ್ತಿಸದೃಶವಾದುದೆಂದು ಕೋನಾಮ=ಯಾವನೊಬ್ಬ, ವೈದಿಕಃ=ವೈದಿಕನು ಬ್ರೂಯಾತ್=ಹೇಳಿಯಾನು? ಸ್ಪಷ್ಟಶ್ರುತಿಸಮಾಖ್ಯಯಾ=ನಿರವಾಕಾಶಾರ್ಥ ಬೋಧಕವಾದ ಶ್ರುತಿಸಮಾಖ್ಯೆಯಿಂದ ಬಾಧಿತಾರ್ಥಾಂ=ಬಾಧಿತವಾದ ಅರ್ಥಉಳ್ಳ, ಶ್ರುತಿಂ=ಶ್ರುತಿಯನ್ನು ಯೋಗ್ಯಾರ್ಥೇ=ಯೋಗ್ಯವಾದ ಅರ್ಥದಲ್ಲಿ ಪ್ರಣಯೇತ್= ಯೋಜಿಸಬೇಕು. ನೋ ಚೇತ್=ಇಲ್ಲವಾದರೆ, ಮೀಮಾಂಸಾ=ವೇದಾರ್ಥ ಮೀಮಾಂಸೆಯೇ, ಕಿನ್ನಿಬಂಧನಾ= ಯಾವ ಕಾರಣಕ್ಕಾಗಿ?

**ಅನುವಾದ–** ಶೂನ್ಯವಾದಿಯು ಹೇಳುವ ಮೋಕ್ಷವನ್ನು ಯಾವನೊಬ್ಬ ವೈದಿಕನೂ (ವೇದಾರ್ಥಜ್ಞಾನಿಯು) ಹೇಳುವುದಿಲ್ಲ. ಬಾಧಿತಾರ್ಥ ಎಂದು ತೋರುವ ಶ್ರುತಿಗೆ ನಿರವಕಾಶ ಶ್ರುತಿಸಮಾಖ್ಯೆಯಿಂದ ಯೋಗ್ಯಾರ್ಥವನ್ನು ಹೇಳಬೇಕು. ಹಾಗಲ್ಲದೇ ಆಪಾತತಃ ತೋರುವ ಅರ್ಥವನ್ನೇ ಹೇಳಿದರೆ ವೇದಜಿಜ್ಞಾಸೆಯೇ ಅನುಪಯುಕ್ತವಾಗುತ್ತದೆ.

**ಅತಶ್ಛಂದಸಿ ಮರ್ಯಾದಾಮೇವಮೇವೇತಿ ಶಾಬ್ದಿಕಃ ।**
**ನೈವಾಹ ಶಬ್ದವ್ಯತ್ಯಾಸಂ ವಿಭಕ್ತಿವ್ಯತ್ಯಯಾದಿ ಚ ।**
**ಅಬಾಧಿತಾರ್ಥಲಾಭಾರ್ಥಂ ಏವಮಾಹ ಪದೇ ಪದೇ ॥ ೨೪೮ ॥**

**ಅರ್ಥ–** ಅತಃ= ಆದ್ದರಿಂದ, ಶಾಬ್ದಿಕಃ=ವೈಯಾಕರಣನು, ಛಂದಸಿ=ವೇದದಲ್ಲಿ ಮರ್ಯಾದಾಂ= ಅರ್ಥಮರ್ಯಾದೆಯನ್ನು ಏವಮೇವ=ಹೀಗೆಯೇ ಎಂದು ನೈವಾಹ= ಹೇಳಲಿಲ್ಲ, ಶಬ್ದವ್ಯತ್ಯಾಸಂ= ಶಬ್ದವ್ಯತ್ಯಾಸವನ್ನೂ ವಿಭಕ್ತಿವ್ಯತ್ಯಯಾದಿ ಚ= ವಿಭಕ್ತಿ ವ್ಯತ್ಯಯಾದಿಯನ್ನೂ ಅಬಾಧಿತಾರ್ಥಲಾಭಾರ್ಥಂ=ಅಬಾಧಿತವಾದ ಅರ್ಥಲಾಭಕ್ಕಾಗಿಯೇ, ಪ್ರಾಹ= ಹೇಳಿದ್ದಾನೆ.

**ಅನುವಾದ–** ಈ ಕಾರಣದಿಂದಲೇ ವೈಯಾಕರಣರು ಶ್ರುತ್ಯರ್ಥವನ್ನು ನಿರ್ಣಯಿಸಲು ನಿಬಂಧನೆಗಳನ್ನು ಹೇಳದೇ ಶಬ್ದಾರ್ಥಗಳ ಮರ್ಯಾದೆಯನ್ನು ಹೀಗೆಯೇ ಎಂದು

ವಿಧಿಸಿರುವುದಿಲ್ಲ. ಯೋಗ್ಯಾರ್ಥವನ್ನು ತಿಳಿಯಲು ವ್ಯತ್ಯಾಸಗಳನ್ನು ಮಾಡಲು ಅವಕಾಶ ಕೊಟ್ಟಿದ್ದಾರೆ. ಅಬಾಧಿತವಾದ ಅರ್ಥಲಾಭಕ್ಕಾಗಿಯೇ ಹೀಗೆ ಹೇಳಿದ್ದಾರೆ.

**ಭಾವವಿಲಾಸಿನೀ–** ಶ್ರುತಿಂ ಯತ್ರತ್ವಸ್ಯೇತಿ ಶ್ರುತಿಂ ॥ ೨೪೭-೨೪೮ ॥

**ತಸ್ಮಾತ್ ಕ್ವಾಚಿತ್ಕೈಕ್ಯವಾಕ್ಯಮುಪಾದಾಯ ಬಹುಶ್ರುತೀಃ ।**
**ನೋಪೇಕ್ಷಯೇತ್ ತಾದೃಗರ್ಥಂ ತಸ್ಯೈಕಸ್ಯ ಪರಂ ವದೇತ್ ॥ ೨೪೯ ॥**

**ಅರ್ಥ–** ತಸ್ಮಾತ್= ಆದ್ದರಿಂದ, ಕ್ವಾಚಿತ್ಕೈಕ್ಯವಾಕ್ಯಂ=ಕೆಲವು ಕಡೆ ಇರುವ ಐಕ್ಯವಾಕ್ಯವನ್ನು ಉಪಾದಾಯ=ಸ್ವೀಕರಿಸಿ, ಬಹುಶ್ರುತೀಃ=ಭೇದವನ್ನು ಹೇಳುವ ಬಹುಶ್ರುತಿಗಳನ್ನು, ನ ಉಪೇಕ್ಷಯೇತ್= ಉದಾಸೀನ ಮಾಡುವುದು ಸರಿಯಲ್ಲ. ಪರಂ=ಆದರೆ, ತಸ್ಯ=ಆ, ಐಕ್ಯಸ್ಯ= ಐಕ್ಯವಾಕ್ಯಕ್ಕೆ, ತಾದೃಗರ್ಥಂ=ಬಹುಶ್ರುತಿಗಳಿಗೆ ಅನುಕೂಲವಾಗುವ ಅರ್ಥವನ್ನೇ, ವದೇತ್= ಹೇಳಬೇಕು.

**ಅನುವಾದ–** ಕಲವು ಕಡೆ ಇರುವ ಐಕ್ಯಪರವಾಗಿ ತೋರುವ ಶ್ರುತಿಗಳನ್ನು ಹಿಡಿದು ಭೇದಪರವಾದ ಬಹುಶ್ರುತಿಗಳನ್ನು ಉಪೇಕ್ಷಿಸುವುದು ಸರಿಯಲ್ಲ. ಐಕ್ಯವಾಕ್ಯಕ್ಕೆ ಬಹುಶ್ರುತಿಗಳಿಗೆ ಅನುಕೂಲವಾದ ಭೇದಪರವಾದ ಅರ್ಥವನ್ನೇ ಹೇಳಬೇಕು.

**ಭಾವವಿಲಾಸಿನೀ–** ತಾದೃಗರ್ಥಂ ಬಹುಶ್ರುತ್ಯನುಕೂಲಾರ್ಥಮ್ ॥ ೨೪೯ ॥

**ವ್ಯತ್ಯಾಸೇನ ವ್ಯತ್ಯಯೇನ ವೃತ್ತ್ಯಾವಾ ಲೋಕಸಿದ್ಧಯಾ ।**
**ಕಥಂ ಮೀಮಾಂಸಕಸ್ಯಾರ್ಥಃ ಸರ್ವಾನುಭವಬಾಧಿತಃ ॥ ೨೫೦ ॥**

**ಅರ್ಥ–** ವ್ಯತ್ಯಾಸೇನ= ಲಿಂಗ, ಭಕ್ತ್ಯಾದಿಗಳ ವ್ಯತ್ಯಾಸದಿಂದಲೀ, ವ್ಯತ್ಯಯೇನ= ಅವುಗಳನ್ನು ಬಿಡುವುದರಿಂದಾಗಲೀ, ಲೋಕಸಿದ್ಧಯಾ ವೃತ್ತ್ಯಾ= ಲೋಕ ಸಿದ್ಧವಾದ ಲಕ್ಷಣಾದಿ ವೃತ್ತಿಗಳಿಂದಾಗಲೀ, ಸರ್ವಾನುಭವಬಾಧಿತಃ= ಎಲ್ಲರ ಅನುಭವದಿಂದ ಬಾಧಿತವಾದ, ಅರ್ಥಃ= ಮೋಕ್ಷದಲ್ಲಿ ಶ್ರೋತ್ರಾದ್ಯಭಾವವು, ಕಥಂ ಮೀಮಾಂಸಕಸ್ಯ= ವೇದಶಾಸ್ತ್ರವನ್ನು ವಿಚಾರ ಮಾಡುವವನಿಗೆ ಹೇಗೆ ಸಿದ್ಧವಾಗುತ್ತದೆ?

**ಅನುವಾದ–** ಲಿಂಗ ವಿಭಕ್ತ್ಯಾದಿಗಳ ವ್ಯತ್ಯಾಸದಿಂದಲಾಗಲೀ, ಅವುಗಳನ್ನು ಪರಿಗಣಿಸದೆ ಇರುವುದರಿಂದಾಗಲೀ ಅಥವಾ ಲೋಕಸಿದ್ಧವಾದ ಲಕ್ಷಣಾದಿ ವೃತ್ತಿಯಿಂದಲಾಗಲೀ ಬೇರೆ ಅರ್ಥವನ್ನು ಹೇಳಬೇಕು.

**ಭಾವವಿಲಾಸಿನೀ–** ಅರ್ಥೋ್ ಮುಕ್ತೌ ತಸ್ಕರಸ್ಯೇವ ಶ್ರೋತ್ರನಯನ ಘ್ರಾಣಹಸ್ತಪದಾದಿ-ರಾಹಿತ್ಯರೂಪಃ ॥ ೨೫೦ ॥

**ಯತಃ ಸಾಧನವೈಚಿತ್ರ್ಯಂ ದೇವರ್ಷ್ಯಾದಿಷು ದೃಶ್ಯತೇ ।**
**ಅತಃ ಫಲೇಽಪಿ ವೈಚಿತ್ರ್ಯಂ ತತೋ ಮುಕ್ತಾಃ ಪರಾವರಾಃ ॥ ೨೫೧ ॥**

**ಅರ್ಥ** – ಯತಃ= ಯಾವ ಕಾರಣದಿಂದ, ದೇವರ್ಷ್ಯಾದಿಷು= ದೇವತೆಗಳು, ಋಷಿಗಳು ಮೊದಲಾದವರಲ್ಲಿ, ಸಾಧನವೈಚಿತ್ರ್ಯಂ= ಸಾಧನ ತಾರತಮ್ಯವು, ದೃಶ್ಯತೇ= ಕಂಡು ಬರುತ್ತದೆಯೋ, ಅತಃ= ಆದ್ದರಿಂದ, ಫಲೇಽಪಿ= ಫಲದಲ್ಲಿಯೂ ಕೂಡ, ವೈಚಿತ್ರ್ಯಂ= ತಾರತಮ್ಯವಿದೆ, ತತಃ= ಆದ್ದರಿಂದ, ಮುಕ್ತಾಃ= ಮುಕ್ತರು, ಪರಾವರಾಃ= ಉಚ್ಚನೀಚ ಭಾವವುಳ್ಳವರು.

**ಅನುವಾದ** – ಯಾವ ಕಾರಣದಿಂದ ದೇವತೆಗಳು, ಋಷಿಗಳು ಮೊದಲಾದವರಲ್ಲಿ ಸಾಧನತಾರತಮ್ಯವು ಕಂಡುಬರುತ್ತದೆಯೋ, ಆ ಕಾರಣದಿಂದ ಫಲದಲ್ಲಿಯೂ ತಾರತಮ್ಯವಿದೆ. ಆದ್ದರಿಂದ ಮುಕ್ತರು ಉಚ್ಚನೀಚಭಾವವುಳ್ಳವರಾಗಿದ್ದಾರೆ.

**ಭಾವವಿಲಾಸಿನೀ**– ಮುಕ್ತಾನಾಂ ತಾರತಮ್ಯೇ ಯುಕ್ತಿಮಪ್ಯಾಹ – **ಯತ ಇತಿ** ॥ ತತಃ ಸಾಧನ-ವೈಚಿತ್ರ್ಯೇ ಸತಿ ಸಾಧ್ಯವೈಚಿತ್ರ್ಯಸ್ಯಾಪ್ಯಾವಶ್ಯಕತ್ವಾಚ್ಚ ॥ ೨೫೧ ॥

**ವಿವರಣೆ** – ಜ್ಞಾನಿಗಳಿಗೆ ಮೋಕ್ಷವು ಪ್ರಾಪ್ತಿಯಾಗುತ್ತದೆ. ಆ ಮೋಕ್ಷದಲ್ಲಿ 'ಸೈಷಾನಂದಸ್ಯ ಮೀಮಾಂಸಾ ಭವತಿ' ಎಂಬ ಶ್ರುತಿಯಲ್ಲಿ ಹೇಳಿದ ಹಾಗೆ ಮುಕ್ತರಿಗೆ ಉಂಟಾಗುವ ಆನಂದದಲ್ಲಿ ತಾರತಮ್ಯವಿದೆ ಎಂಬ ವಿಚಾರವನ್ನು ಯುಕ್ತಿಯುಕ್ತವಾಗಿ ಸಾಧಿಸುತ್ತಾರೆ.

ಇನ್ನು ಈ ಪ್ರಕರಣದಲ್ಲಿ ಮುಕ್ತರ ಆನಂದತಾರತಮ್ಯವನ್ನು ಸಮರ್ಥನೆ ಮಾಡುತ್ತಾರೆ. ಯದ್ಯಪಿ ಸೈಷಾನಂದಸ್ಯ ಮೀಮಾಂಸಾ ಎಂದು ಪ್ರಾರಂಭವಾಗುವ ತೈತ್ತಿರೀಯ ಉಪನಿಷತ್ತಿನ ಪ್ರಕರಣದಲ್ಲಿ ಮುಕ್ತಾನಂದತಾರತಮ್ಯವು ಸ್ಪಷ್ಟವಾಗಿ ನಿರೂಪಿತವಾಗಿದೆ. ಆದ್ದರಿಂದ ಇಲ್ಲಿ ತಾರತಮ್ಯಸಾಧಕವಾದ ಯುಕ್ತಿಯನ್ನೇ ಹೇಳುತ್ತಾರೆ.

**ನ ಚೇನ್ಮುಕ್ತೌ ತಾರತಮ್ಯಂ ಕೃತಹಾನ್ಯಕೃತಾಗಮೌ ।**
**ಭವೇತಾಂ ಹಿ ಮಹಾದೋಷೌ ಭ್ರಾಂತಾಶ್ಚ ಸ್ಯುರ್ಮಹೋದ್ಯಮಾಃ**
**॥ ೨೫೨ ॥**

**ಅರ್ಥ** – ಮುಕ್ತೌ= ಮೋಕ್ಷದಲ್ಲಿ, ತಾರತಮ್ಯಂ= ಆನಂದ ತಾರತಮ್ಯವು, ನ ಚೇತ್= ಇಲ್ಲದಿದ್ದರೆ, ಕೃತಹಾನಿ= ಕೃತಹಾನಿ, ಅಕೃತಾಗಮಃ= ಅಕೃತಾಗಮವೆಂಬ, ಮಹಾದೋಷೌ= ಎರಡು ಮಹಾದೋಷಗಳು, ಭವೇತಾಂ= ಉಂಟಾಗುತ್ತವೆ, ಚ= ಮತ್ತು, ಮಹೋದ್ಯಮಾಃ= ಮಹಾಪ್ರಯತ್ನವನ್ನು ಮಾಡುವ ಜ್ಞಾನಿಗಳು, ಭ್ರಾಂತಾಃ ಸ್ಯುಃ= ಭ್ರಾಂತರಾಗಬೇಕಾದ ಪ್ರಸಂಗವು ಬರುತ್ತದೆ.

**ಅನುವಾದ –** ಮೋಕ್ಷದಲ್ಲಿ ಆನಂದತಾರತಮ್ಯವು ಇಲ್ಲದಿದ್ದರೆ ಕೃತಹಾನಿ ಮತ್ತು ಅಕೃತಾಭ್ಯಾಗಮ ಎಂಬ ಎರಡು ಮಹಾದೋಷಗಳು ಉಂಟಾಗುತ್ತವೆ. ಮತ್ತು ಮಹಾಪ್ರಯತ್ನವನ್ನು ಮಾಡುವ ಜ್ಞಾನಿಗಳು ಭ್ರಾಂತರೆಂದು ಅಂಗೀಕರಿಸಬೇಕಾದ ಪ್ರಸಂಗವು ಬರುತ್ತದೆ.

**ಭಾವವಿಲಾಸಿನೀ–** ವಿಪಕ್ಷೇ ಬಾಧಕಮಾಹ – **ನ ಚೇದಿತಿ** ॥ ೨೫೨ ॥

**ವಿವರಣೆ –** ಕೃತಹಾನಿ ಎಂದರೆ ಮಾಡಿದ ಕರ್ಮದ ಫಲದ ನಾಶ. ಅಕೃತಾಗಮ ಎಂದರೆ ಮಾಡದಿದ್ದ ಕರ್ಮದ ಫಲಪ್ರಾಪ್ತಿ. ಜ್ಞಾನಿಗಳೂ ಮಹಾಪ್ರಯತ್ನವನ್ನು ಮಾಡಿ ಮೋಕ್ಷವನ್ನು ಪಡೆಯುತ್ತಾರೆ. ಅಲ್ಪಾಧಿಕಾರಿಗಳೂ ಸಹ ಸ್ವಯೋಗ್ಯವಾದ ಅಲ್ಪಪ್ರಯತ್ನದಿಂದ ಮೋಕ್ಷವನ್ನು ಪಡೆಯುತ್ತಾರೆ. ಜ್ಞಾನಿಗಳಿಗೆ ಸಮಾನವಾದ ಮೋಕ್ಷಸುಖವು ಅಲ್ಪಾಧಿಕಾರಿಗಳಿಗೂ ಇದೆ ಎಂದು ಒಪ್ಪಿದರೆ ತಾವು ಮಾಡದಿದ್ದ ಸಾಧನೆಯ ಫಲವಾದ ಆನಂದವನ್ನು ಅವರು ಅನುಭವಿಸುವರೆಂದು ಒಪ್ಪಬೇಕು. ಇದಕ್ಕೆ ಅಕೃತಾಗಮ ಎಂದು ಹೆಸರು. ಜ್ಞಾನಾನಂತರದಲ್ಲಿಯೂ ಮಹಾಪ್ರಯತ್ನವನ್ನು ಮಾಡಿ ಸಾಧನೆಯನ್ನು ಮಾಡುವ ಉತ್ತಮಾಧಿಕಾರಿಗಳಿಗೂ ಅಲ್ಪಾಧಿಕಾರಿಗಳಷ್ಟೇ ಮೋಕ್ಷಸುಖವೆಂದು ಅಂಗೀಕರಿಸಿದರೆ ಅವರು ಮಾಡಿದ ವಿಶೇಷಪ್ರಯತ್ನಪೂರ್ವಕವಾದ ಸಾಧನೆಯು ನಿಷ್ಫಲವೆಂದು ಅಂಗೀಕರಿಸಬೇಕಾಗುತ್ತದೆ. ಇದಕ್ಕೆ ಕೃತಹಾನಿ ಎಂದು ಹೆಸರು. ಆದ್ದರಿಂದ ಸಾಧನತಾರತಮ್ಯಕ್ಕೆ ಅನುಗುಣವಾಗಿ ಫಲವಾದ ಮೋಕ್ಷಸುಖದಲ್ಲಿಯೂ ತಾರತಮ್ಯವನ್ನು ಒಪ್ಪಬೇಕು ಎಂದು ಅಭಿಪ್ರಾಯ.

**ಸ್ವರೂಪಾನಂದವೈಚಿತ್ರ್ಯಮೀಮಾಂಸಾಂ ಕುರ್ವತೀ ಶ್ರುತಿಃ ।**
**ಮುಕ್ತಾನಾಂ ತಾರತಮ್ಯಸ್ಯಾನಂಗೀಕಾರೇ ಪ್ರಕುಪ್ಯತಿ ॥ ೨೫೩ ॥**

**ಅರ್ಥ –** ಸ್ವರೂಪಾನಂದವೈಚಿತ್ರ್ಯಮೀಮಾಂಸಾಂ= ಸ್ವರೂಪಾನಂದದ ತಾರತಮ್ಯದ ಮೀಮಾಂಸೆಯನ್ನು, ಕುರ್ವತೀ= ಮಾಡುವಂತಹ, ಶ್ರುತಿಃ= ಶ್ರುತಿಯು, ಮುಕ್ತಾನಾಂ= ಮುಕ್ತರಿಗೆ, ತಾರತಮ್ಯ ಅನಂಗೀಕಾರೇ= ಸುಖತಾರತಮ್ಯವನ್ನು ಒಪ್ಪದಿದ್ದರೆ, ಪ್ರಕುಪ್ಯತಿ= ಸಿಟ್ಟಾಗುತ್ತದೆ.

**ಅನುವಾದ –** ಮುಕ್ತರಿಗೆ ಸುಖದಲ್ಲಿ ತಾರತಮ್ಯವನ್ನು ಒಪ್ಪದಿದ್ದರೆ ಸ್ವರೂಪಾನಂದ ತಾರತಮ್ಯವನ್ನು ಪ್ರತಿಪಾದನೆ ಮಾಡುವ ಶ್ರುತಿಗಳ ವಿರೋಧವು ಬರುತ್ತದೆ.

**ಭಾವವಿಲಾಸಿನೀ–** ಅಧುನಾ ''ಸೈಷಾನಂದಸ್ಯ ಮೀಮಾಂಸಾ ಭವತೀ''ತಿ ಶ್ರುತೌ ಮಾನುಷಾ-ನಾರಭ್ಯ ವಿರಿಂಚಪರ್ಯಂತಂ ಮುಕ್ತಾವಪಿ ಸ್ವರೂಪಾನಂದಸ್ಯೈವ ತಾರತಮ್ಯಕಥನಾತ್ ಮುಕ್ತಾನಾಂ ತಾರತಮ್ಯಂ ಮಿಥೋ ಭೇದಃ ಅನವಚ್ಛಿನ್ನಾನಂದತಯಾಽಂತೇ ಕಥಿತಾತ್ ಪರಮಾತ್ಮನಶ್ಚ ಭೇದೋಽಪಿ ಸಿದ್ಧ ಇತ್ಯಾಹ – **ಸ್ವರೂಪೇತಿ** ॥ ೨೫೩ ॥

**ವಿವರಣೆ** – ಬೃಹದಾರಣ್ಯಕ ಮತ್ತು ತೈತ್ತಿರೀಯ ಉಪನಿಷತ್ತುಗಳಲ್ಲಿ ಸ್ಪಷ್ಟವಾಗಿ ಮುಕ್ತಾನಂದತಾರತಮ್ಯದ ಮೀಮಾಂಸೆ ಇದೆ. ಆನಂದತಾರತಮ್ಯವನ್ನು ಒಪ್ಪದಿದ್ದರೆ ಆ ಶ್ರುತಿಗಳ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ।
ಆನಂದಂ ಬ್ರಹ್ಮಣೋ ವಿದ್ವಾನ್ ನ ಬಿಭೇತಿ ಕುತಶ್ಚನ ॥ ೨೫೪ ॥

ಇತ್ಯಂತೋಕ್ತಪರಬ್ರಹ್ಮಸ್ವರೂಪಾನಂದಪಂಕ್ತಿಗಾ ।
ಸರ್ವಾಪ್ಯಾನಂದಮೀಮಾಂಸಾ ಸ್ವರೂಪಾನಂದಗೋಚರಾ ॥ ೨೫೫ ॥

ಭವೇದ್ಧಿ ಸರ್ವಥಾ ನೋ ಚೇತ್ ಪ್ರಾಯಪಾಠಸ್ಯ ಕಾ ಗತಿಃ ।
ಪ್ರಾಯಪಾಠವಿರೋಧೋ ಹಿ ಮಹಾನ್ ದೋಷೋ ವಿದಾಂ ಮತೇ ॥
॥ ೨೫೬ ॥

**ಅರ್ಥ** – ಯತಃ= ಯಾವ ಕಾರಣದಿಂದ (ಬ್ರಹ್ಮನ ಆನಂದದ ವಿಷಯದಲ್ಲಿ), ಮನಸಾ ಸಹ= ಮನಸ್ಸಿನ ಜೊತೆಯಲ್ಲಿ, ಅಪ್ರಾಪ್ಯ= ಆ ಆನಂದವನ್ನು ತಲುಪದೆ, ವಾಚಃ= ವಾಕ್ಯಗಳು, ನಿವರ್ತಂತೇ= ಹಿಂದಿರುಗುತ್ತವೆ ಅಂತಹ, ಬ್ರಹ್ಮಣ ಆನಂದಂ= ಬ್ರಹ್ಮನ ಆನಂದವನ್ನು, ವಿದ್ವಾನ್= ತಿಳಿದವನು, ಕುತಶ್ಚನ= ಯಾವ ಕಾರಣದಿಂದಲೂ, ನ ಭಿಭೇತಿ= ಹೆದರುವುದಿಲ್ಲ, ಇತ್ಯಂತೋಕ್ತಪರಬ್ರಹ್ಮಸ್ವರೂಪಾನಂದಪಙ್ಕ್ತಿಗಾ= ಹೀಗೆ ಕೊನೆಯಲ್ಲಿ ಹೇಳಿದ ಪರಬ್ರಹ್ಮನ ಸ್ವರೂಪಭೂತವಾದ ಆನಂದದ ಸಾಲಿನಲ್ಲಿಯೇ ಹೇಳಲ್ಪಟ್ಟ, ಆನಂದ ಮೀಮಾಂಸಾ ಸರ್ವಾಪಿ= ಸಮಗ್ರವಾದ ಆನಂದಮೀಮಾಂಸೆಯೂ ಕೂಡ, ಸರ್ವಥಾ= ಎಲ್ಲ ರೀತಿಯಿಂದಲೂ, ಸ್ವರೂಪಾನಂದಗೋಚರಾ= ಸ್ವರೂಪಾನಂದ ವಿಷಯಕವೇ, ಭವೇದ್ಧಿ= ಆಗುವುದಷ್ಟೆ, ನೋ ಚೇತ್= ಹಾಗೆ ಅಂಗೀಕರಿಸದಿದ್ದರೆ, ಪ್ರಾಯಪಾಠಸ್ಯ= ಪ್ರಾಯಪಾಠಕ್ಕೆ, ಕಾ ಗತಿಃ= ಏನು ಗತಿ? ವಿದಾಂಮತೇ= ಜ್ಞಾನಿಗಳ ಅಭಿಪ್ರಾಯದಲ್ಲಿ, ಪ್ರಾಯಪಾಠವಿರೋಧಃ= ಪ್ರಾಯಪಾಠವಿರೋಧವು, ಮಹಾನ್ ದೋಷೋ ಹಿ= ದೊಡ್ಡ ದೋಷವಷ್ಟೆ.

**ಅನುವಾದ** – ಯಾವ ಕಾರಣದಿಂದ ವಾಕ್ಯವು ಮನಸ್ಸಿನ ಜೊತೆಯಲ್ಲಿ ಬ್ರಹ್ಮನ ಆನಂದವನ್ನು ತಲುಪದೆ ಹಿಂದಿರುಗುತ್ತದೆಯೋ ಅಂತಹ ಬ್ರಹ್ಮನ ಆನಂದವನ್ನು ತಿಳಿದವನು ಯಾವ ಕಾರಣದಿಂದಲೂ ಹೆದರುವುದಿಲ್ಲ ಎಂದು ಕೊನೆಯಲ್ಲಿ ಬ್ರಹ್ಮಸ್ವರೂಪಾನಂದವನ್ನು ನಿರೂಪಣೆ ಮಾಡುವ ವಾಕ್ಯದ ಜೊತೆಯಲ್ಲಿ ಏಕವಾಕ್ಯತ್ವವನ್ನು ಹೊಂದಿದ ಸಮಗ್ರವಾದ ಆನಂದಮೀಮಾಂಸೆಯೂ ಸಹ ಸರ್ವಥಾ ಸ್ವರೂಪಾನಂದವಿಷಯಕವೆಂದೇ ಅಂಗೀಕರಿಸಬೇಕು. ಇಲ್ಲದಿದ್ದರೆ

ಪ್ರಾಯಪಾಠ ವಿರೋಧವು ಬರುತ್ತದೆ. ಜ್ಞಾನಿಗಳ ಅಭಿಪ್ರಾಯದಲ್ಲಿ ಪ್ರಾಯಪಾಠ ವಿರೋಧವೆಂಬುದು ದೊಡ್ಡ ದೋಷವಷ್ಟೆ?

**ಭಾವವಿಲಾಸಿನೀ**— ಅವ್ಯವಹಿತೋತ್ತರೋಪಸಂಹಾರವಾಕ್ಯೇ ಪ್ರತಿಪಾದಿತ ಬ್ರಹ್ಮಸ್ವರೂಪಾನಂದ-ಪ್ರಾಯಪಠಿತತ್ವಾತ್ ಸರ್ವಾಪ್ಯಾನಂದಮೀಮಾಂಸಾ ಸ್ವರೂಪಾನಂದ ಮೀಮಾಂಸೈವೇತ್ಯಾಹ — ಯತ ಇತಿ ॥ ೨೫೪-೨೫೬ ॥

ಸತ್ಯಜ್ಞಾನಾನಂದಪದೈರಾನಂದಮಯಚರ್ಚಯಾ ।
ಉಪಕ್ರಮೇಽಪಿ ಯದ್ ಬ್ರಹ್ಮಸ್ವರೂಪಾನಂದ ಈರಿತಃ ॥ ೨೫೭ ॥

ಅತೋ ಮಧ್ಯೇ ಕೃತಾ ಚಿಂತಾ ಸ್ವರೂಪಾನಂದಗೋಚರಾ ।
ಭವೇದವಶ್ಯಂ ಸಂಸಾರಮಾತ್ರಗೋಷ್ಠೀ ಕಥಂ ಶ್ರುತೇಃ ॥ ೨೫೮ ॥

ತದ್ದೃಷ್ಟಾಂತತಯಾ ಸಂಸಾರ್ಯಾನಂದೋಽಪಿ ವಿಚಾರ್ಯತೇ॥ ೨೫೯ ॥

**ಅರ್ಥ** – ಉಪಕ್ರಮೇಪಿ= ಉಪಕ್ರಮದಲ್ಲಿಯೂ ಸಹ, ಸತ್ಯಜ್ಞಾನಾನಂದಪದೈಃ= ಸತ್ಯಜ್ಞಾನಾನಂದ ಪದಗಳಿಂದ, ಆನಂದಮಯಚರ್ಚಯಾ ಚ= ಮತ್ತು ಆನಂದಮಯನ ವಿಮರ್ಶೆಯಿಂದಲೂ ಸಹ, ಯತ್= ಯಾವ ಕಾರಣದಿಂದ, ಬ್ರಹ್ಮಸ್ವರೂಪಾನಂದಃ= ಬ್ರಹ್ಮಸ್ವರೂಪಭೂತವಾದ ಆನಂದವೇ, ಈರಿತಃ= ಹೇಳಲ್ಪಟ್ಟಿದೆಯೋ, ಅತಃ= ಆ ಕಾರಣದಿಂದ, ಮಧ್ಯೇ ಕೃತಾ= ಮಧ್ಯದಲ್ಲಿ ಮಾಡಲ್ಪಟ್ಟ, ಚಿಂತಾ= ವಿಮರ್ಶೆಯೂ ಸಹ, ಅವಶ್ಯಂ= ಅವಶ್ಯವಾಗಿ, ಸ್ವರೂಪಾನಂದಗೋಚರಾ= ಸ್ವರೂಪಾನಂದ ವಿಷಯಕವೇ, ಭವೇತ್= ಆಗಬೇಕು, ಶ್ರುತೇಃ= ಶ್ರುತಿಗೆ, ಸಂಸಾರಮಾತ್ರಗೋಷ್ಠೀ= ಸಂಸಾರಗತವಾದ ಆನಂದದ ವಿಮರ್ಶೆಯು, ಕಥಂ= ಹೇಗೆ ಉಪಪನ್ನವಾಗುತ್ತದೆ, ತದ್ದೃಷ್ಟಾಂತತಯಾ= ಸ್ವರೂಪಭೂತವಾದ ಆನಂದವನ್ನು ದೃಷ್ಟಾಂತವಾಗಿ ಇಟ್ಟುಕೊಂಡು, ಸಂಸಾರ್ಯಾನಂದೋಪಿ= ಸಂಸಾರದಲ್ಲಿರುವ ಆನಂದವೂ ಸಹ, ವಿಚಾರ್ಯತೇ= ವಿಚಾರ ಮಾಡಲ್ಪಡುತ್ತದೆ.

**ಅನುವಾದ** – ಉಪಕ್ರಮದಲ್ಲಿಯೂ ಸಹ ಸತ್ಯಜ್ಞಾನಾನಂದಪದಗಳಿಂದಲೂ ಆನಂದಮಯಸ್ವರೂಪವಿಚಾರದಿಂದಲೂ ಯಾವ ಕಾರಣದಿಂದ ಬ್ರಹ್ಮಸ್ವರೂಪಾನಂದವೇ ಪ್ರತಿಪಾದಿಸಲ್ಪಟ್ಟಿದೆಯೋ ಆ ಕಾರಣದಿಂದ ಮಧ್ಯದಲ್ಲಿ ಮಾಡಲ್ಪಟ್ಟ ವಿಚಾರವೂ ಸಹ ಅವಶ್ಯವಾಗಿ ಸ್ವರೂಪಾನಂದವಿಷಯಕವೇ ಆಗಬೇಕು. ಶ್ರುತಿಯು ಕೇವಲ ಸಂಸಾರದ ಆನಂದವನ್ನು ಏಕೆ ವಿಮರ್ಶೆ ಮಾಡುತ್ತದೆ? ಆದರೆ ಸ್ವರೂಪಾನಂದವನ್ನು ದೃಷ್ಟಾಂತವನ್ನಾಗಿ ಇಟ್ಟುಕೊಂಡು ಸಂಸಾರಾನಂದವೂ ಸಹ ವಿಚಾರ ಮಾಡಲ್ಪಡುತ್ತದೆ.

**ಭಾವವಿಲಾಸಿನೀ–** ಉಪಕ್ರಮೋಽಪಿ ಸ್ವರೂಪಾನಂದಸ್ಯೈವೋಪಕ್ರಾಂತತ್ವಾತ್ ಮಧ್ಯೇಽಪಿ-ಸ್ವರೂಪಾನಂದಮೀಮಾಂಸೈವ ಭವೇತ್ । ಉಪಕ್ರಮೋಪಸಂಹಾರಾನುಗುಣ್ಯೇನೈವ ಮಧ್ಯಪಕ್ರರಣಸ್ಯಾಪಿ ಯೋಜನೀಯತ್ವಾದಿತ್ಯಾಹ – **ಸತ್ಯೇತಿ** ॥ ಸತ್ಯಂ ಜ್ಞಾನ(ಮಾನಂದ)-ಮನಂತಂ ಬ್ರಹ್ಮೇತ್ಯಪ್ಯುಪಕ್ರಮವಾಕ್ಯಸ್ಯ ಶಾಖಾಂತರೇ ಸತ್ತ್ವಾದಿತಿ ಭಾವಃ ॥ ೨೫೭ ॥

ಯುಕ್ತ್ಯಂತರಂ ಚಾಹ – **ಸಂಸಾರೇತಿ** ॥ ಸಾಂಸಾರಿಕಸುಖೇ ವೈರಾಗ್ಯಮುತ್ಪಾದ್ಯ ಮೋಕ್ಷಸುಖ ಏವ ರತಿಂ ಜನಯಿತ್ವಾ ಜನಾನ್ ಮೋಕ್ಷಮಾರ್ಗ ಏವ ಪ್ರವರ್ತಯಂತೀ ಶ್ರುತಿಃ ಕಥಂ ಸಂಸಾರಿಕ ಸುಖಮೇವ ವರ್ಣಯೇದಿತಿ ಭಾವಃ ।

ನನು ಭವನ್ಮತೇಽಪಿ ''ಶ್ರೋತ್ರಿಯಸ್ಯ ಚಾಕಾಮಹತಸ್ಯೇ''ತಿ ಮೌಕ್ತಸುಖಸ್ಯ ಸರ್ವತ್ರ ಪೃಥಗುಚ್ಯಮಾನತ್ವಾತ್ ಸ ಏಕೋ ಮನುಷ್ಯ ಗಂಧರ್ವಾಣಾಮಾನಂದ ಇತ್ಯಾದಿನೋಕ್ತ ತತ್ತದಾನಂದೋಽಪಿ ಕಥಂ ಮೌಕ್ತಾನಂದ ಇತಿ ಚೇತ್ ಸತ್ಯಮ್ । ಸಂಸಾರೇಽಪಿ ತತ್ತತ್ ಸ್ವರೂಪಾನಂದಸ್ಯ ತಾದೃಶತ್ವಾಭಾವೇ ನಿಯಮೇನ ಕ್ರಮಾಚ್ಛತೋತ್ತರೋ ಬಾಹ್ಯಾನಂದೋಽಪಿ ನ ಸ್ಯಾತ್ । ತಸ್ಮಾತ್ ತತ್ತೋತ್ತರ ಬಾಹ್ಯಾನಂದಕ್ರಮನಿದರ್ಶನೇನ ಸ್ವರೂಪಾನಂದಮೇವ ಸರ್ವಾನುಭವಾರೂಢಂ ಕರ್ತುಂ ಬಾಹ್ಯಾನಂದಸ್ಯಾಪಿ ಕಥನಮಿತ್ಯಾಹ–**ತದ್ದೃಷ್ಟಾಂತತಯೇತಿ** । ತೇಷಾಂ ಸ್ವರೂಪಾನಂದಾನಾಂ ದೃಷ್ಟಾಂತತಯಾ । ಯಥಾಗೃಹಾದ್ ಬಹಿರ್ನಿಃಸರ-ದ್ಧೂಪಧೂಮಬಾಹುಲ್ಯತಾರತಮ್ಯನಿದರ್ಶನೇನ ಗೃಹಾಂತರೇಽಪಿ ತತ್ತಾರತಮ್ಯನು-ಭಾವಯಂತಿ ತಥೇತಿ ಭಾವಃ ॥ ೨೫೮-೨೫೯ ॥

**ವಿವರಣೆ** – ಉಪಕ್ರಮ ಮತ್ತು ಉಪಸಂಹಾರಗಳಿಗೆ ಅನುಗುಣವಾಗಿ ಮಧ್ಯಪ್ರಕರಣದ ಅರ್ಥವನ್ನು ಯೋಜನೆಯನ್ನು ಮಾಡಬೇಕೆಂಬುದು ಶಾಸ್ತ್ರ ಸಿದ್ಧವಾದ ವಿಷಯ. ಆದರಂತೆ ಇಲ್ಲಿ ಉಪಕ್ರಮದಲ್ಲಿ ಸತ್ಯಜ್ಞಾನಂ ಆನಂದಂ ಬ್ರಹ್ಮ ಎಂಬ ವಾಕ್ಯವಿದೆ. ತೈತ್ತಿರೀಯ ಶ್ರುತಿಯಲ್ಲಿ ಸತ್ಯಜ್ಞಾನಂ ಅನಂತಂ ಎಂಬ ಪಾಠವಿದೆ. ಶಾಖಾಂತರದಲ್ಲಿ ಸತ್ಯಂ ಜ್ಞಾನಂ ಆನಂದಂ ಬ್ರಹ್ಮ ಎಂಬ ಪಾಠವಿದೆ. ಉಪಕ್ರಮದಲ್ಲಿ ಯತೋವಾಚೋ ನಿವರ್ತಂತೇ ಎಂದು ಬ್ರಹ್ಮನ ಸ್ವರೂಪವೇ ಹೇಳಲ್ಪಟ್ಟಿದೆ. ಆದ್ದರಿಂದ ಮಧ್ಯದಲ್ಲಿರುವ ವಿಚಾರವೂ ಸಹ ಸ್ವರೂಪಾನಂದ ವಿಷಯಕವೇ ಆಗಬೇಕು. ಏಕೆಂದರೆ ಅದು ತಾರತಮ್ಯೋಪೇತವಾಗಿದೆ. ಈ ಮಧ್ಯದ ವಿಚಾರವು ಸಂಸಾರದ ಆನಂದದ ವಿಚಾರವಲ್ಲ. ಏಕೆಂದರೆ ಸಂಸಾರದ ಸುಖವನ್ನು ನಿಷೇಧಿಸಿ ಮುಕ್ತಿಯನ್ನು ಕುರಿತು ಆಭಿಮುಖ್ಯವನ್ನು ಉಂಟುಮಾಡಲು ಹೊರಟ ಶ್ರುತಿಯು ಸಂಸಾರ ಸುಖವನ್ನೇ ವರ್ಣಿಸಿದರೆ ಅದು ಶ್ರುತಿಯ ಉದ್ದೇಶಕ್ಕೆ ವಿರುದ್ಧವಾಗುತ್ತದೆ. ಆದರೆ ಸ್ವರೂಪಾನಂದವನ್ನು ದೃಷ್ಟಾಂತವನ್ನಾಗಿ ಇಟ್ಟುಕೊಂಡು ಶ್ರುತಿಯು ಸಂಸಾರದಲ್ಲಿರುವ ಆನಂದವನ್ನೂ ವಿಚಾರ ಮಾಡುತ್ತದೆ. ಆದ್ದರಿಂದ ನಾವು ಸಂಸಾರಾನಂದವಿಷಯಕತ್ವವನ್ನು ಒಪ್ಪುತ್ತೇವೆ. ಆದರೆ ಅದನ್ನೇ ಪ್ರತಿಪಾದನೆ ಮಾಡುವ ಉದ್ದೇಶದಿಂದಲ್ಲ. ಸ್ವರೂಪದಲ್ಲಿ

ಆನಂದ ತಾರತಮ್ಯವು ಇಲ್ಲದಿದ್ದರೆ ಸಂಸಾರದಲ್ಲಿ ಅನುಭವ ಸಿದ್ಧವಾದ ಆನಂದತಾರತಮ್ಯವು ಇಲ್ಲದೇ ಹೋಗಬೇಕಾದೀತು ಎಂಬ ತರ್ಕದ ಮುಖದಿಂದ ಸ್ವರೂಪಾನಂದ ತಾರತಮ್ಯವನ್ನು ಸಾಧಿಸುವುದು ಉದ್ದೇಶವಾದುದರಿಂದ ಶ್ರುತಿಯಲ್ಲಿ ಸಂಸಾರಾನಂದ ತಾರತಮ್ಯದ ವಿಮರ್ಶೆಯು ಅಸಂಗತವಾಗುವುದಿಲ್ಲ ಎಂದು ಅಭಿಪ್ರಾಯ. ಹೇಗೆ ಮನೆಯಿಂದ ಹೊರಗೆ ಬರುವ ಧೂಮದ ಸಾಂದ್ರತೆಯನ್ನು ನೋಡಿ ಮನೆಯ ಒಳಗಿರುವ ಧೂಮದ ಸಾಂದ್ರತೆಯನ್ನು ಅನುಮಾನ ಮಾಡಿ ತಿಳಿಯುತ್ತೇವೆಯೋ, ಅದರಂತೆ ಸಂಸಾರದಲ್ಲಿ ಬಾಹ್ಯವಾದ ಎಂದರೆ ಮನೋವೃತ್ತಿ-ರೂಪವಾದ ಆನಂದದ ತಾರತಮ್ಯವನ್ನು ನೋಡಿ ಜೀವನ ಸ್ವರೂಪದಲ್ಲಿರುವ ಆನಂದತಾರತಮ್ಯವನ್ನು ತಿಳಿಯಲು ಅನುಕೂಲವಾಗುವುದರಿಂದ ಸಂಸಾರಾನಂದ-ತಾರತಮ್ಯದ ವಿಮರ್ಶೆ ಇದೆ ಎಂದೂ ಅಭಿಪ್ರಾಯ.

**ತತ್ತದ್ರೂಪಸ್ಯ ತಾದೃಕ್ತ್ವಾಭಾವೇ ಬಹಿರಯಂ ಕ್ರಮಃ ।**
**ಕಥಂ ಸ್ಯಾನ್ನಿಯಮೇನೈವ ಯೋ ವೇದೇನ ಪ್ರಮೀಯತೇ ॥ ೨೬೦ ॥**

**ಅರ್ಥ –** ತತ್ತದ್ರೂಪಸ್ಯ= ಆಯಾ ಸ್ವರೂಪದಲ್ಲಿ, ತಾದೃಕ್ತ್ವಾಭಾವೇ= ಅಂತಹ ತಾರತಮ್ಯ ಕ್ರಮವು ಇಲ್ಲದಿದ್ದರೆ, ಬಹಿಃ= ಬಾಹ್ಯವಾದ ಮನೋವೃತ್ತಿರೂಪವಾದ ಆನಂದದಲ್ಲಿ, ಅಯಂ ಕ್ರಮಃ= ಈ ತಾರತಮ್ಯಕ್ರಮವು, ನಿಯಮೇನ ಕಥಂ ಸ್ಯಾತ್= ನಿಯತವಾಗಿ ಹೇಗೆ ಉಂಟಾಗುತ್ತದೆ? ಯಃ= ಯಾವ ತಾರತಮ್ಯಕ್ರಮವು, ವೇದೇನ= ವೇದದಿಂದ, ಪ್ರಮೀಯತೇ= ಯಥಾರ್ಥವಾಗಿ ತಿಳಿಸಲ್ಪಡುತ್ತದೆಯೋ ಅಂತಹ ಸ್ವರೂಪ ತಾರತಮ್ಯವಿಲ್ಲದಿದ್ದರೆ (ಎಂದು ಅನ್ವಯ).

**ಅನುವಾದ –** ವೇದವು ಯಾವ ಸ್ವರೂಪಾನಂದತಾರತಮ್ಯವನ್ನು ಯಥಾರ್ಥವಾಗಿ ತಿಳಿಸುತ್ತದೆಯೋ ಅಂತಹ ತಾರತಮ್ಯವಿಲ್ಲದಿದ್ದರೆ ಬಾಹ್ಯದಲ್ಲಾದರೂ ಅಂತಹ ಕ್ರಮವು ಹೇಗೆ ನಿಯಮೇನ ಉಪಪನ್ನವಾಗುತ್ತದೆ?

**ಭಾವವಿಲಾಸಿನೀ–** ತದೇವ ದರ್ಶಯತಿ ॥ **ತತ್ತದಿತಿ** ॥ ಯಃ ಕ್ರಮಃ ಸ್ವರೂಪಾನಂದರಹಿತ ಕಲ್ಯಾದಿದೈತ್ಯೇಷು ಬಾಹ್ಯಾನಂದಕ್ರಮಸ್ಯಾಪ್ಯಶ್ರವಣಾದದರ್ಶನಾಚ್ಚ ಸ್ವರೂಪ ವೈಚಿತ್ರ್ಯನಿಮಿತ್ತಮೇವೇದಂ ಬಾಹ್ಯವೈಚಿತ್ರ್ಯಮಿತಿ ಭಾವಃ ॥ ೨೬೦ ॥

**ಉಕ್ತೋ ಹಿ ಮಾನುಷಾನಂದೋ ನ ಸದಾ ವಿದ್ಯತೇ ನೃಣಾಂ ।**
**ಸಂಸಾರಿಣಾಂ ಕ್ವಚಿದ್ದುಃಖಮಪಿ ಸಂಭಾವಿತಂ ಯತಃ ॥ ೨೬೧ ॥**

**ಅರ್ಥ –** ಯತಃ= ಯಾವ ಕಾರಣದಿಂದ, ಸಂಸಾರಿಣಾಂ= ಸಂಸಾರಿಗಳಿಗೆ, ಕ್ವಚಿತ್= ಕೆಲವೊಮ್ಮೆ, ದುಃಖಮಪಿ= ದುಃಖವೂ ಕೂಡ, ಸಂಭಾವಿತಂ= ಸಂಭಾವಿತವಾಗಿದೆಯೋ ಆ

ಕಾರಣದಿಂದ, ಉಕ್ತಃ= ಶ್ರುತಿಯಲ್ಲಿ ಹೇಳಲ್ಪಟ್ಟ, ಮಾನುಷಾನಂದಃ= ಮನುಷ್ಯಾನಂದವು, ನೃಣಾಂ= ಮನುಷ್ಯರಿಗೆ, ಸದಾ= ಯಾವಾಗಲೂ, ನ ವಿದ್ಯತೇ ಹಿ= ಇರುವುದಿಲ್ಲವಷ್ಟೆ.

**ಅನುವಾದ –** ಸಂಸಾರಿಗಳಿಗೆ ಸಂಸಾರದಲ್ಲಿ ಕೆಲವೊಮ್ಮೆ, ದುಃಖವೂ ಇರುವುದರಿಂದ, ಶ್ರುತಿಯಲ್ಲಿ ಮನುಷ್ಯರಿಗೆ ಹೇಳಲ್ಪಟ್ಟ ಆನಂದವು ಮನುಷ್ಯರಿಗೆ ಸಂಸಾರದಲ್ಲಿ ಎಲ್ಲಾ ಕಾಲದಲ್ಲಿಯೂ ಇರುವುದಿಲ್ಲವಷ್ಟೆ?

**ಭಾವವಿಲಾಸಿನೀ–** ಶ್ರುತ್ಯುಕ್ತಮಾನುಷಾನಂದಸ್ಯ ನಿಯಮೇನ ಮನುಷ್ಯೇಷ್ವದರ್ಶನಾಚ್ಚ ಸ್ವರೂಪಭೂತತದಾನಂದ ಏವ ಶ್ರುತೇಸ್ತಾತ್ಪರ್ಯಮಿತ್ಯಾಹ – **ಉಕ್ತ ಇತಿ** ॥ ೨೬೧ ॥

**ವಿವರಣೆ –** ಶ್ರುತಿಯಲ್ಲಿ ಹೇಳಲ್ಪಟ್ಟ ಮಾನುಷಾನಂದವು ಮನುಷ್ಯರಲ್ಲಿ ನಿಯಮೇನ ಇರುವುದು ಕಂಡುಬರುವುದಿಲ್ಲವಾದ್ದರಿಂದ ಶ್ರುತಿಯು ಸ್ವರೂಪಾನಂದದಲ್ಲಿಯೇ ಇಲ್ಲಿ ತಾತ್ಪರ್ಯವುಳ್ಳದ್ದಾಗಿದೆ ಎಂದು ತಿಳಿಯಬೇಕೆಂದು ಅಭಿಪ್ರಾಯ.

**ಅತಸ್ತಾದೃಙ್ಮೌಕ್ತಸುಖಂ ನಿಯತಂ ಹಿ ಶ್ರುತೇರ್ಮತಮ್ ।**
**ನ ಚೇದ್ ಬ್ರಹ್ಮಾದಿಜೀವಾನಾಂ ರೂಪಸ್ಯಾನಂದರೂಪತಾ ।**
**ಕೇನ ಸಿದ್ಧ್ಯೇದ್ ಯದಿ ಸ್ಪಷ್ಟಾ ಶ್ರುತಿರೇಷಾ ಬಹಿರ್ಗತಾ ॥ ೨೬೨ ॥**

**ಅರ್ಥ –** ಅತಃ= ಆದ್ದರಿಂದ, ನಿಯತಂ= ನಿಯಮೇನ ವಿದ್ಯಮಾನವಾದ, ತಾದೃಙ್ಮೌಕ್ತಸುಖಂ= ಅಂತಹ ಮೋಕ್ಷಸುಖವು, ಶ್ರುತೇಃ= ಶ್ರುತಿಗೆ, ಮತಂ= ಅಭಿಪ್ರೇತವಾದುದು, ನ ಚೇತ್= ಇಲ್ಲದಿದ್ದರೆ, ಯದಿ= ಒಂದು ಪಕ್ಷ, ಸ್ಪಷ್ಟಾ= ಸ್ಪಷ್ಟವಾದ, ಏಷಾ ಶ್ರುತಿಃ= ಈ ಶ್ರುತಿಯು, ಬಹಿರ್ಗತಾ= ಸ್ವರೂಪಾನಂದವನ್ನು ಬೋಧಿಸದಿದ್ದರೆ, ಬ್ರಹ್ಮಾದಿಜೀವಾನಾಂ= ಬ್ರಹ್ಮಾದಿಜೀವರ, ರೂಪಸ್ಯ= ಸ್ವರೂಪಕ್ಕೆ, ಆನಂದರೂಪತಾ= ಆನಂದರೂಪತ್ವವು, ಕೇನ= ಯಾವ ಪ್ರಮಾಣದಿಂದ, ಸಿದ್ಧ್ಯೇತ್= ಸಿದ್ಧಿಸುತ್ತದೆ.

**ಅನುವಾದ –** ಆದ್ದರಿಂದ ನಿಯಮೇನ ವಿದ್ಯಮಾನವಾದ ಅಂತಹ ಮುಕ್ತಿಸುಖವೇ ಶ್ರುತಿಗೆ ಅಭಿಪ್ರೇತವಾದುದು. ಹಾಗಿಲ್ಲದೆ ಸ್ಪಷ್ಟವಾದ ಈ ಶ್ರುತಿಯು ಮುಕ್ತಾನಂದವನ್ನು ಪ್ರತಿಪಾದನೆ ಮಾಡದೆ ಬಾಹ್ಯಾನಂದವನ್ನು ಪ್ರತಿಪಾದನೆ ಮಾಡುವುದಾದರೆ ಬ್ರಹ್ಮಾದಿಜೀವರಿಗೆ ಸುಖಸ್ವರೂಪತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ?

**ಭಾವವಿಲಾಸಿನೀ–** ನಿಯತಂ ನಿಯಮೇನ ವಿದ್ಯಮಾನಂ ತಾದೃಕ್ಮೌಕ್ತಸುಖಂ ವಿತ್ತಪೂರ್ಣಸಕಲಪೃಥಿವೀಪರಿಪಾಲನದಶಾಯಾಂ ಚಕ್ರವರ್ತಿನೋ ಯತ್ಸುಖಂ ತಾದೃಶಂ ಯನ್ಮೌಕ್ತಸುಖಂ ಮುಕ್ತಿದಶಾಯಾಮನುಭೂಯಮಾನಸುಖಂ ಶ್ರುತೇರ್ಮತಮಭಿಮತಮಿತಿ ಸಂಬಂಧಃ । ಏವಂ ಚ ಬಾಹ್ಯಾನಂದಸ್ಯ ಪೂರ್ವಸ್ಮಾಚ್ಛತಗುಣತ್ವೇನೋತ್ತರಪದಸ್ಥಸ್ವರೂಪಾನಂದಸ್ಯಾಪಿ ಶತಗುಣತ್ವೇ

ಸಿದ್ಧೇ ಸ್ವರೂಪಸ್ಯಾನಪಾಯಾಚ್ಛ್ರೋತ್ರಿಯಸ್ಯ ಶ್ರಣಫಲಂ ಪ್ರಾಪ್ತಸ್ಯಾಕಾಮಹತಸ್ಯಾವಾಪ್ತ-ಸ್ವಯೋಗ್ಯಸಕಲಕಾಮಸ್ಯ ಮುಕ್ತಸ್ಯಾಪ್ಯಾನಂದ ಏವ ತಾದೃಶ ಇತಿ ಸರ್ವತ್ರಾಪಿ ವಾಕ್ಯಶೇಷಸ್ಯ ಯೋಜನಾ ದ್ರಷ್ಟವ್ಯಾ । ನ ಚೇದೇಷಾ ಶ್ರುತಿಃ ಸ್ವರೂಪಾನಂದಪರಾ ನ ಚೇತ್ । ರೂಪಸ್ಯ ಸ್ವರೂಪಸ್ಯ ಕೇನ ಪ್ರಮಾಣೇನ ॥ ೨೬೨ ॥

**ವಿವರಣೆ –** ಅಂತಹ ಮೋಕ್ಷಸುಖ ಎಂದರೆ ವಿತ್ತಪರಿಪೂರ್ಣವಾದ ಸಕಲಪೃಥಿವೀ ಪ್ರತಿಪಾಲನೆಯ ದೆಶೆಯಲ್ಲಿ ಚಕ್ರವರ್ತಿಗೆ ಇರುವ ಸುಖ. ಅದು ಮುಕ್ತಿದೆಶೆಯಲ್ಲಿಯೇ ಇದೆ ಎಂದು ಶ್ರುತಿಯ ಅಭಿಪ್ರಾಯ. ಆದ್ದರಿಂದ ಬಾಹ್ಯಾನಂದವು ಹಿಂದಿನ ಆನಂದಕ್ಕಿಂತ ನೂರು ಪಟ್ಟು ಅಧಿಕವಾಗಿರುವಾಗ ಉತ್ತರ ಪದದಲ್ಲಿ ಹೇಳಲ್ಪಟ್ಟ ಸ್ವರೂಪಾನಂದವು ನೂರು ಪಟ್ಟು ಅಧಿಕವಾಗುತ್ತದೆ ಎಂದು ಸಿದ್ಧವಾಗುತ್ತದೆ. ಸ್ವರೂಪವು ಎಂದೂ ನಾಶ ಹೊಂದುವುದಿಲ್ಲವಾದ ಕಾರಣ ಉತ್ತರಪದ ಎಂದರೆ ಶ್ರೋತಿಯಸ್ಯ ಅಕಾಮಹತಸ್ಯ ಎಂಬ ಪದಗಳಿಂದ ಹೇಳಲ್ಪಟ್ಟ ಶ್ರವಣಫಲವನ್ನು ಪಡೆದ ಅವಾಪ್ತಸ್ವಯೋಗ್ಯಸಮಸ್ತ ಕಾಮನಾದ್ದರಿಂದ ಕಾಮಹತನಲ್ಲದ ಮುಕ್ತನ ಆನಂದವೇ ಅಂತಹ ಗುಣವನ್ನು ಉಳ್ಳದ್ದು ಎಂದು 'ಶ್ರೋತಿಯಸ್ಯ ಚಾಕಾಮಹತಸ್ಯ' ಎಂಬ ವಾಕ್ಯಕ್ಕೆ ಎಲ್ಲ ಕಡೆಯಲ್ಲಿಯೂ ಯೋಜನೆಯನ್ನು ಮಾಡಬೇಕು. ಹಾಗಿಲ್ಲದಿದ್ದರೆ ಬ್ರಹ್ಮಾದಿಯೋಗ್ಯಜೀವರಿಗೆ ಸ್ವರೂಪಾನಂದವೇ ಯಾವ ಪ್ರಮಾಣದಿಂದಲೂ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಕಥಂ ಬ್ರಹ್ಮಸುಖಂ ತೇಷಾಮವಾಙ್ಮನಸಗೋಚರಮ್ ।**
**ನ ಹಿ ತಕ್ಷಕಚೂಡಾಸ್ಥಂ ರತ್ನಮನ್ಯೇನ ಲಭ್ಯತೇ ।**
**ಅತಸ್ತಾರ್ಕಿಕಜೀವಾಃ ಸ್ಯುಃ ಸರ್ವೇ ಜೀವಾಸ್ತವಾಪಿ ಹಿ ॥ ೨೬೩ ॥**

**ಅರ್ಥ –** ತೇಷಾಂ= ಆ ಜೀವರಿಗೆ, ಅವಾಙ್ಮನಸಗೋಚರಂ= ಮನೋವಚನಗಳಿಗೆ ಅಗೋಚರವಾದ, ಬ್ರಹ್ಮಸುಖಂ= ಬ್ರಹ್ಮಸುಖವು, ಕಥಂ= ಹೇಗೆ ಉಂಟಾಗುತ್ತದೆ? ತಕ್ಷಕಚೂಡಾಸ್ಥಂ= ತಕ್ಷಕನ ಹೆಡೆಯಮೇಲಿರುವ, ರತ್ನಂ= ರತ್ನವು, ಅನ್ಯೇನ= ಇನ್ನೊಬ್ಬನಿಂದ, ನ ಲಭ್ಯತೇ ಹಿ= ಪಡೆಯಲ್ಪಡುವುದಿಲ್ಲವಷ್ಟೆ, ಅತಃ= ಆದ್ದರಿಂದ, ತವಾಪಿ= ನಿನಗೂ ಕೂಡ, ಸರ್ವೇ ಜೀವಾಃ= ಎಲ್ಲ ಜೀವರೂ, ತಾರ್ಕಿಕಜೀವಾಃ ಸ್ಯುಃ= ತಾರ್ಕಿಕ ಜೀವರಂತೆಯೇ ಆಗುತ್ತಾರೆ.

**ಅನುವಾದ –** ಆ ಜೀವರಿಗೆ ಮನೋವಚನಗಳಿಗೆ ಅಗೋಚರವಾದ ಬ್ರಹ್ಮಸುಖವು ಹೇಗೆ ಉಂಟಾಗುತ್ತದೆ? ತಕ್ಷಕನ ಹೆಡೆಯ ಮೇಲಿರುವ ರತ್ನವು ಇನ್ನೊಬ್ಬನಿಗೆ ದೊರೆಯಲಾರದಷ್ಟೆ? ಆದ್ದರಿಂದ ನಿನ್ನ ಜೀವರೂ ಸಹ ತಾರ್ಕಿಕ ಜೀವರಂತೆಯೇ ಆನಂದಾದಿರಹಿತರಾಗುತ್ತಾರೆ.

**ಭಾವವಿಲಾಸಿನೀ–** ನನು "ಯತೋ ವಾಚ" ಇತಿ ಶ್ರುತ್ಯುಕ್ತಬ್ರಹ್ಮಸ್ವರೂಪಭೂತಾನಂದೇನೈವ ಜೀವಾನಾಮಾನಂದರೂಪತಾ ಸಿದ್ಧ್ಯತೀತ್ಯತ ಆಹ – **ಕಥಮಿತಿ** ॥ ಬ್ರಹ್ಮಾದಿಜೀವೈರ್ಮನಸಾ

ಕಾರಣದಿಂದ, ಉಕ್ತಃ= ಶ್ರುತಿಯಲ್ಲಿ ಹೇಳಲ್ಪಟ್ಟ, ಮಾನುಷಾನಂದಃ= ಮನುಷ್ಯಾನಂದವು, ನೃಣಾಂ= ಮನುಷ್ಯರಿಗೆ, ಸದಾ= ಯಾವಾಗಲೂ, ನ ವಿದ್ಯತೇ ಹಿ= ಇರುವುದಿಲ್ಲವಷ್ಟೆ.

**ಅನುವಾದ –** ಸಂಸಾರಿಗಳಿಗೆ ಸಂಸಾರದಲ್ಲಿ ಕೆಲವೊಮ್ಮೆ, ದುಃಖವೂ ಇರುವುದರಿಂದ, ಶ್ರುತಿಯಲ್ಲಿ ಮನುಷ್ಯರಿಗೆ ಹೇಳಲ್ಪಟ್ಟ ಆನಂದವು ಮನುಷ್ಯರಿಗೆ ಸಂಸಾರದಲ್ಲಿ ಎಲ್ಲಾ ಕಾಲದಲ್ಲಿಯೂ ಇರುವುದಿಲ್ಲವಷ್ಟೆ?

**ಭಾವವಿಲಾಸಿನೀ–** ಶ್ರುತ್ಯುಕ್ತಮಾನುಷಾನಂದಸ್ಯ ನಿಯಮೇನ ಮನುಷ್ಯೇಷ್ವದರ್ಶನಾಚ್ಚ ಸ್ವರೂಪ-ಭೂತತದಾನಂದ ಏವ ಶ್ರುತೇಸ್ತಾತ್ಪರ್ಯಮಿತ್ಯಾಹ – **ಉಕ್ತ ಇತಿ** ॥ ೨೬೧ ॥

**ವಿವರಣೆ –** ಶ್ರುತಿಯಲ್ಲಿ ಹೇಳಲ್ಪಟ್ಟ ಮಾನುಷಾನಂದವು ಮನುಷ್ಯರಲ್ಲಿ ನಿಯಮೇನ ಇರುವುದು ಕಂಡುಬರುವುದಿಲ್ಲವಾದ್ದರಿಂದ ಶ್ರುತಿಯು ಸ್ವರೂಪಾನಂದದಲ್ಲಿಯೇ ಇಲ್ಲಿ ತಾತ್ಪರ್ಯವುಳ್ಳದ್ದಾಗಿದೆ ಎಂದು ತಿಳಿಯಬೇಕೆಂದು ಅಭಿಪ್ರಾಯ.

ಅತಸ್ತಾದೃಙ್ಮೌಕ್ತಸುಖಂ ನಿಯತಂ ಹಿ ಶ್ರುತೇರ್ಮತಮ್ ।
ನ ಚೇದ್ ಬ್ರಹ್ಮಾದಿಜೀವಾನಾಂ ರೂಪಸ್ಯಾನಂದರೂಪತಾ ।
ಕೇನ ಸಿದ್ಧ್ಯೇದ್ ಯದಿ ಸ್ಪಷ್ಟಾ ಶ್ರುತಿರೇಷಾ ಬಹಿರ್ಗತಾ ॥ ೨೬೨ ॥

**ಅರ್ಥ –** ಅತಃ= ಆದ್ದರಿಂದ, ನಿಯತಂ= ನಿಯಮೇನ ವಿದ್ಯಮಾನವಾದ, ತಾದೃಙ್ಮೌಕ್ತಸುಖಂ= ಅಂತಹ ಮೋಕ್ಷಸುಖವು, ಶ್ರುತೇಃ= ಶ್ರುತಿಗೆ, ಮತಂ= ಅಭಿಪ್ರೇತವಾದುದು, ನ ಚೇತ್= ಇಲ್ಲದಿದ್ದರೆ, ಯದಿ= ಒಂದು ಪಕ್ಷ, ಸ್ಪಷ್ಟಾ= ಸ್ಪಷ್ಟವಾದ, ಏಷಾ ಶ್ರುತಿಃ= ಈ ಶ್ರುತಿಯು, ಬಹಿರ್ಗತಾ= ಸ್ವರೂಪಾನಂದವನ್ನು ಬೋಧಿಸದಿದ್ದರೆ, ಬ್ರಹ್ಮಾದಿಜೀವಾನಾಂ= ಬ್ರಹ್ಮಾದಿಜೀವರ, ರೂಪಸ್ಯ= ಸ್ವರೂಪಕ್ಕೆ, ಆನಂದರೂಪತಾ= ಆನಂದರೂಪತ್ವವು, ಕೇನ= ಯಾವ ಪ್ರಮಾಣದಿಂದ, ಸಿದ್ಧ್ಯೇತ್= ಸಿದ್ಧಿಸುತ್ತದೆ.

**ಅನುವಾದ –** ಆದ್ದರಿಂದ ನಿಯಮೇನ ವಿದ್ಯಮಾನವಾದ ಅಂತಹ ಮುಕ್ತಿಸುಖವೇ ಶ್ರುತಿಗೆ ಅಭಿಪ್ರೇತವಾದುದು. ಹಾಗಿಲ್ಲದೆ ಸ್ಪಷ್ಟವಾದ ಈ ಶ್ರುತಿಯು ಮುಕ್ತಾನಂದವನ್ನು ಪ್ರತಿಪಾದನೆ ಮಾಡದೆ ಬಾಹ್ಯಾನಂದವನ್ನು ಪ್ರತಿಪಾದನೆ ಮಾಡುವುದಾದರೆ ಬ್ರಹ್ಮಾದಿಜೀವರಿಗೆ ಸುಖಸ್ವರೂಪತ್ವವು ಯಾವ ಪ್ರಮಾಣದಿಂದ ಸಿದ್ಧವಾಗುತ್ತದೆ?

**ಭಾವವಿಲಾಸಿನೀ–** ನಿಯತಂ ನಿಯಮೇನ ವಿದ್ಯಮಾನಂ ತಾದೃಕ್ಮೌಕ್ತಸುಖಂ ವಿತ್ತಪೂರ್ಣಸಕಲ ಪೃಥಿವೀಪರಿಪಾಲನದಶಾಯಾಂ ಚಕ್ರವರ್ತಿನೋ ಯತ್ಸುಖಂ ತಾದೃಶಂ ಯನ್ಮೌಕ್ತಸುಖಂ ಮುಕ್ತಿದಶಾಯಾಮನುಭೂಯಮಾನಸುಖಂ ಶ್ರುತೇರ್ಮತಮಭಿಮತಮಿತಿ ಸಂಬಂಧಃ । ಏವಂ ಚ ಬಾಹ್ಯಾನಂದಸ್ಯ ಪೂರ್ವಸ್ಮಾಚ್ಛತಗುಣತ್ವೇನೋತ್ತರಪದಸ್ಥಸ್ವರೂಪಾನಂದಸ್ಯಾಪಿ ಶತಗುಣತ್ವೇ

ಸಿದ್ಧೇ ಸ್ವರೂಪಸ್ಯಾನಪಾಯಾಚ್ಛ್ರೋತ್ರಿಯಸ್ಯ ಶ್ರಣಫಲಂ ಪ್ರಾಪ್ತಸ್ಯಾಕಾಮಹತಸ್ಯಾವಾಪ್ತ-ಸ್ವಯೋಗ್ಯಸಕಲಕಾಮಸ್ಯ ಮುಕ್ತಸ್ಯಾಪ್ಯಾನಂದ ಏವ ತಾದೃಶ ಇತಿ ಸರ್ವತ್ರಾಪಿ ವಾಕ್ಯಶೇಷಸ್ಯ ಯೋಜನಾ ದ್ರಷ್ಟವ್ಯಾ । ನ ಚೇದೇಷಾ ಶ್ರುತಿಃ ಸ್ವರೂಪಾನಂದಪರಾ ನ ಚೇತ್ । ರೂಪಸ್ಯ ಸ್ವರೂಪಸ್ಯ ಕೇನ ಪ್ರಮಾಣೇನ ॥ ೨೬೨ ॥

**ವಿವರಣೆ –** ಅಂತಹ ಮೋಕ್ಷಸುಖ ಎಂದರೆ ವಿತ್ತಪರಿಪೂರ್ಣವಾದ ಸಕಲಪೃಥಿವೀ ಪ್ರತಿಪಾಲನೆಯ ದೆಶೆಯಲ್ಲಿ ಚಕ್ರವರ್ತಿಗೆ ಇರುವ ಸುಖ. ಅದು ಮುಕ್ತಿದೆಶೆಯಲ್ಲಿಯೇ ಇದೆ ಎಂದು ಶ್ರುತಿಯ ಅಭಿಪ್ರಾಯ. ಆದ್ದರಿಂದ ಬಾಹ್ಯಾನಂದವು ಹಿಂದಿನ ಆನಂದಕ್ಕಿಂತ ನೂರು ಪಟ್ಟು ಅಧಿಕವಾಗಿರುವಾಗ ಉತ್ತರ ಪದದಲ್ಲಿ ಹೇಳಲ್ಪಟ್ಟ ಸ್ವರೂಪಾನಂದವು ನೂರು ಪಟ್ಟು ಅಧಿಕವಾಗುತ್ತದೆ ಎಂದು ಸಿದ್ಧವಾಗುತ್ತದೆ. ಸ್ವರೂಪವು ಎಂದೂ ನಾಶ ಹೊಂದುವುದಿಲ್ಲವಾದ ಕಾರಣ ಉತ್ತರಪದ ಎಂದರೆ ಶ್ರೋತಿಯಸ್ಯ ಅಕಾಮಹತಸ್ಯ ಎಂಬ ಪದಗಳಿಂದ ಹೇಳಲ್ಪಟ್ಟ ಶ್ರವಣಫಲವನ್ನು ಪಡೆದ ಅವಾಪ್ತಸ್ವಯೋಗ್ಯಸಮಸ್ತ ಕಾಮನಾದ್ದರಿಂದ ಕಾಮಹತನಲ್ಲದ ಮುಕ್ತನ ಆನಂದವೇ ಅಂತಹ ಗುಣವನ್ನು ಉಳ್ಳದ್ದು ಎಂದು 'ಶ್ರೋತಿಯಸ್ಯ ಚಾಕಾಮಹತಸ್ಯ' ಎಂಬ ವಾಕ್ಯಕ್ಕೆ ಎಲ್ಲ ಕಡೆಯಲ್ಲಿಯೂ ಯೋಜನೆಯನ್ನು ಮಾಡಬೇಕು. ಹಾಗಿಲ್ಲದಿದ್ದರೆ ಬ್ರಹ್ಮಾದಿಯೋಗ್ಯಜೀವರಿಗೆ ಸ್ವರೂಪಾನಂದವೇ ಯಾವ ಪ್ರಮಾಣದಿಂದಲೂ ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಕಥಂ ಬ್ರಹ್ಮಸುಖಂ ತೇಷಾಮವಾಙ್ಮನಸಗೋಚರಮ್ ।**
**ನ ಹಿ ತಕ್ಷಕಚೂಡಾಸ್ಥಂ ರತ್ನಮನ್ಯೇನ ಲಭ್ಯತೇ ।**
**ಅತಸ್ತಾರ್ಕಿಕಜೀವಾಃ ಸ್ಯುಃ ಸರ್ವೇ ಜೀವಾಸ್ತವಾಪಿ ಹಿ ॥ ೨೬೩ ॥**

**ಅರ್ಥ –** ತೇಷಾಂ= ಆ ಜೀವರಿಗೆ, ಅವಾಙ್ಮನಸಗೋಚರಂ= ಮನೋವಚನಗಳಿಗೆ ಅಗೋಚರವಾದ, ಬ್ರಹ್ಮಸುಖಂ= ಬ್ರಹ್ಮಸುಖವು, ಕಥಂ= ಹೇಗೆ ಉಂಟಾಗುತ್ತದೆ? ತಕ್ಷಕಚೂಡಾಸ್ಥಂ= ತಕ್ಷಕನ ಹೆಡೆಯಮೇಲಿರುವ, ರತ್ನಂ= ರತ್ನವು, ಅನ್ಯೇನ= ಇನ್ನೊಬ್ಬನಿಂದ, ನ ಲಭ್ಯತೇ ಹಿ= ಪಡೆಯಲ್ಪಡುವುದಿಲ್ಲವಷ್ಟೆ, ಅತಃ= ಆದ್ದರಿಂದ, ತವಾಪಿ= ನಿನಗೂ ಕೂಡ, ಸರ್ವೇ ಜೀವಾಃ= ಎಲ್ಲ ಜೀವರೂ, ತಾರ್ಕಿಕಜೀವಾಃ ಸ್ಯುಃ= ತಾರ್ಕಿಕ ಜೀವರಂತೆಯೇ ಆಗುತ್ತಾರೆ.

**ಅನುವಾದ –** ಆ ಜೀವರಿಗೆ ಮನೋವಚನಗಳಿಗೆ ಅಗೋಚರವಾದ ಬ್ರಹ್ಮಸುಖವು ಹೇಗೆ ಉಂಟಾಗುತ್ತದೆ? ತಕ್ಷಕನ ಹೆಡೆಯ ಮೇಲಿರುವ ರತ್ನವು ಇನ್ನೊಬ್ಬನಿಗೆ ದೊರೆಯಲಾರದಷ್ಟೆ? ಆದ್ದರಿಂದ ನಿನ್ನ ಜೀವರೂ ಸಹ ತಾರ್ಕಿಕ ಜೀವರಂತೆಯೇ ಆನಂದಾದಿರಹಿತರಾಗುತ್ತಾರೆ.

**ಭಾವವಿಲಾಸಿನೀ–** ನನು ''ಯತೋ ವಾಚ'' ಇತಿ ಶ್ರುತ್ಯುಕ್ತಬ್ರಹ್ಮಸ್ವರೂಪಭೂತಾನಂದೇನೈವ ಜೀವಾನಾಮಾನಂದರೂಪತಾ ಸಿದ್ಧ್ಯತೀತ್ಯತ ಆಹ – **ಕಥಮಿತಿ** ॥ ಬ್ರಹ್ಮಾದಿಜೀವೈರ್ಮನಸಾ

ಸ್ಮರ್ತುಂ ವಾಚಾ ವಕ್ತುಂ ಚಾಶಕ್ಯಮಿತಿ ಶ್ರುತ್ಯೈವ ಪ್ರತಿಪಾದಿತಂ ಬ್ರಹ್ಮಸುಖಂ ಕಥಂ ಜೀವಾನಾಂ ಸ್ಯಾದಿತಿ ಭಾವಃ। ತಾರ್ಕಿಕಜೀವಾಃ ಆನಂದರೂಪತ್ವರಹಿತತಯಾ ತಾರ್ಕಿಕೋಕ್ತಜೀವಾಃ ॥೨೬೩॥

**ವಿವರಣೆ** – ಯತೋವಾಚೋ ನಿವರ್ತಂತೇ ಎಂಬ ಶ್ರುತಿಯು ಹೇಳಿದ ಬ್ರಹ್ಮಾನಂದದಿಂದಲೇ ಜೀವರಿಗೆ ಆನಂದರೂಪತ್ವವು ಸಿದ್ಧವಾಗುತ್ತದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ಹೇಳುತ್ತಾರೆ. ಬ್ರಹ್ಮನ ಆನಂದವು ಬ್ರಹ್ಮಾದಿಜೀವರ ವಾಕ್ಯಕ್ಕೂ ಮನಸ್ಸಿಗೂ ಅಗೋಚರವಾದುದು ಎಂದು ಹೇಳಿದ ಮೇಲೆ ಅದನ್ನು ಬ್ರಹ್ಮಾದಿ ಜೀವರು ಪಡೆಯುವುದು ಹೇಗೆ? ಅದು ಅಸಾಧ್ಯ. ಮತ್ತು ತಾರ್ಕಿಕರ ಜೀವರು ಹೇಗೆ ಜ್ಞಾನಾನಂದ ಸ್ವರೂಪರಾಗುವುದಿಲ್ಲವೋ, ಹಾಗೆಯೇ ಜೀವರ ಸ್ವರೂಪದಲ್ಲಿ ಆನಂದವನ್ನು ಸಾಧಿಸುವ ಬೇರೆ ಪ್ರಮಾಣವು ಇಲ್ಲವಾದ್ದರಿಂದ ನೀನು ಅಂಗೀಕರಿಸುವ ಜೀವರು ತಾರ್ಕಿಕರ ಜೀವರಂತೆಯೇ ಆಗುತ್ತಾರೆ ಎಂದು ಅಭಿಪ್ರಾಯ.

ಜೀವಸ್ವರೂಪಾನಂದಸ್ಯ ತಾದೃಕ್ತ್ವೇ ಕಿಂ ಗತಂ ತವ ।
ಐಕ್ಯಾಯೋಗಾದ್ ಯದಿ ಭಯಂ ಭೇದೋಽಸ್ತು ಸತತಂ ಸತಾಮ್ ।
ಅಪೌರುಷೇಯೇ ನಿರ್ಬಂಧೋ ನ ಸ್ವಸ್ವಮತಸಿದ್ಧಯೇ ॥ ೨೬೪ ॥

**ಅರ್ಥ** – ಜೀವಸ್ವರೂಪಾನಂದಸ್ಯ= ಜೀವಸ್ವರೂಪಾನಂದವು, ತಾದೃಕ್ತ್ವೇ= ಹಾಗೆ ತರತಮಭಾವೋಪೇತವಾಗಿದ್ದರೆ, ತವ= ನಿನಗೆ, ಕಿಂ ಗತಂ= ಏನು ಹಾನಿಯಾಗುತ್ತದೆ? ಯದಿ= ಒಂದು ಪಕ್ಷ, ಐಕ್ಯಾಯೋಗಾತ್= ಜೀವಬ್ರಹ್ಮೈಕ್ಯವು ಅನುಪಪನ್ನವಾಗುವ ಕಾರಣದಿಂದ, ಭಯಂ= ಭಯವಿದ್ದರೆ, ಸತತಂ= ಸತತವಾಗಿ, ಸತಾಂ= ಮೋಕ್ಷಕ್ಕೆ ಹೋಗುವ ಆ ಜೀವರಿಗೆ, ಭೇದೋಸ್ತು= ಭೇದವೇ ಇರಲಿ, ಅಪೌರುಷೇಯೇ= ಅಪೌರುಷೇಯವಾದ ವೇದದಲ್ಲಿ, ಸ್ವಸ್ವಮತಸಿದ್ಧಯೇ= ತಮ್ಮ ತಮ್ಮ ಮತದ ಪ್ರಮೇಯದ ಸಿದ್ಧಿಗಾಗಿ, ನಿರ್ಬಂಧಃ= ಅರ್ಥದ ಆಗ್ರಹವನ್ನು ಮಾಡುವುದು, ನ= ಸರಿಯಲ್ಲ.

**ಅನುವಾದ** – ಜೀವಸ್ವರೂಪಾನಂದವು ತರತಮಭಾವೋಪೇತವಾಗಿದ್ದರೆ ನಿನಗೆ ಏನು ಹಾನಿ? ಐಕ್ಯವು ಕೂಡುವುದಿಲ್ಲ ಎಂಬ ಭಯದಿಂದ ಹಾಗೆ ಹೇಳುತ್ತೇನೆ ಎಂದರೆ ಸರ್ವಪ್ರಮಾಣಸಮ್ಮತವಾದ ಭೇದವನ್ನೇ ಜೀವಬ್ರಹ್ಮರಿಗೆ ಅಂಗೀಕರಿಸು. ಅಪೌರುಷೇಯವಾದ ವೇದದಲ್ಲಿ ಅವರವರ ಮತದ ಪ್ರಮೇಯದ ಸಿದ್ಧಿಗಾಗಿ ಒತ್ತಾಯದಿಂದ ಅರ್ಥವನ್ನು ಹೇರುವುದು ಸರಿಯಲ್ಲ.

**ಭಾವವಿಲಾಸಿನೀ**– ಐಕ್ಯಾಯೋಗಾತ್ ಜೀವನಾಂ ಪರಸ್ಪರವೈಕ್ಯಾಯೋಗಾತ್ । ಅಪೌರುಷೇಯೇ ವೇದೇ ॥ ೨೬೪ ॥

ಅಕಾಮಹತತಾ ಕಸ್ಮಾನ್ಮುಕ್ತಲಿಂಗಮಪೋದ್ಯತೇ ।
ಕಥಮವೃಜಿನತ್ವಂ ಚ ಮುಕ್ತಾದನ್ಯಸ್ಯ ಶೋಭತೇ ॥ ೨೬೫ ॥

**ಅರ್ಥ** – ಮುಕ್ತಲಿಂಗಂ= ಮುಕ್ತರ ಲಿಂಗವಾದ, ಅಕಾಮಹತತಾ= ಕಾಮಹತಿಯ ಅಭಾವವು, ಕಸ್ಮಾತ್= ಯಾವ ಕಾರಣದಿಂದ, ಅಪೋದ್ಯತೇ= ಪರಿತ್ಯಜಿಸಲ್ಪಡುತ್ತದೆ, ಮುಕ್ತಾದನ್ಯಸ್ಯ= ಮುಕ್ತನಲ್ಲದವನಿಗೆ, ಅವೃಜಿನತ್ವಂ= ಪಾಪರಹಿತತ್ವ ಅಥವಾ ದುಃಖರಹಿತತ್ವವು, ಕಥಂ ಶೋಭತೇ= ಹೇಗೆ ಶೋಭಿಸುತ್ತದೆ?

**ಅನುವಾದ – ಮುಕ್ತಲಿಂಗವಾದ ಅಕಾಮಹತತ್ವವು ಏಕೆ ಪರಿತ್ಯಜಿಸಲ್ಪಡುತ್ತದೆ? ಮುಕ್ತನಲ್ಲದವನಿಗೆ ಅವೃಜಿನಶಬ್ದದಿಂದ ಹೇಳಲ್ಪಟ್ಟ ಅದುಃಖಿತ್ವವಾದರೂ ಹೇಗೆ ಶೋಭಿಸುತ್ತದೆ?**

**ಭಾವವಿಲಾಸಿನೀ–** ''ಶ್ರೋತ್ರಿಯಸ್ಯ ಚಾಕಾಮಹತಸ್ಯೇ''ತ್ಯತ್ರೋಕ್ತಾಽಕಾಮಹತತಾ । ಬೃಹದಾರಣ್ಯಕಸ್ಥಾನಂದಮೀಮಾಂಸಾಯಾಮವೃಜಿನೋಽಕಾಮಹತಶ್ಚೇತ್ಯತ್ರೋಕ್ತ- ಮವೃಜಿನತ್ವ-ಮಪಾಪತ್ವಂ ಚ ॥ ೨೬೫ ॥

**ವಿವರಣೆ** – ಶ್ರೋತಿಯಸ್ಯ ಚ ಅಕಾಮಹತಸ್ಯ ಎಂಬ ವಾಕ್ಯವು ತೈತ್ತಿರೀಯ ಉಪನಿಷತ್ತಿನಲ್ಲಿ ಇವೆ. ಯಶ್ಚ ಅವೃಜಿನಃ ಅಕಾಮಹತಃ ಎಂಬ ವಾಕ್ಯವು ಬೃಹದಾರಣ್ಯಕ ಉಪನಿಷತ್ತಿನಲ್ಲಿ ಇದೆ. ಎರಡೂ ಒಂದೇ ಅರ್ಥವನ್ನು ಹೇಳುವ ವಾಕ್ಯಗಳು. ಈ ನಾಲ್ಕು ವಿಶೇಷಣಗಳೂ ಮುಕ್ತನಲ್ಲಿಯೇ ಅನ್ವಯವಾಗುತ್ತವೆ. ಸಂಸಾರಿಯಲ್ಲಿ ಅನ್ವಯವಾಗುವುದಿಲ್ಲ. ಆದ್ದರಿಂದ ಈ ಪ್ರಕರಣವು ಮುಕ್ತಾನಂದಮೀಮಾಂಸಾ ಪ್ರಕರಣವೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ಬ್ರಾಹ್ಮಣಸ್ಯ ಹಿ ದೇಹೋಽಯಂ ನೋಪಭೋಗಾಯ ಕಲ್ಪತೇ ।**
**ಇಹ ಕ್ಲೇಶಾಯ ಮಹತೇ ಪ್ರೇತ್ಯಾನಂತಸುಖಾಯ ಚ ॥ ೨೬೬ ॥**

**ಇತ್ಯುಕ್ತ್ಯಾ ನೇಹ ಸುಖಿನೋ ವಿರಾಗಾ ಅಪಿ ಯೋಗಿನಃ ।**
**ಅತಃ ಪದಸ್ಥಸುಖವತ್ ಪದಾಕಾಮೇ ಸುಖಂ ಕುತಃ ॥ ೨೬೭ ॥**

**ಅರ್ಥ** – ಬ್ರಾಹ್ಮಣಸ್ಯ= ಬ್ರಾಹ್ಮಣನ, ಅಯಂ ದೇಹಃ= ಈ ಭೂಮಿಯಲ್ಲಿರುವ ದೇಹವು, ಉಪಭೋಗಾಯ= ಕ್ಷುದ್ರಕಾಮಗಳಿಗಾಗಿ, ನ ಕಲ್ಪತೇ ಹಿ= ಸಮರ್ಥವಾಗುವುದಿಲ್ಲವಷ್ಟೆ, ಇಹ= ಈ ಜಗತ್ತಿನಲ್ಲಿ, ಮಹತೇ ಕ್ಲೇಶಾಯ= ದೊಡ್ಡ ಕ್ಲೇಶವನ್ನು ಅನುಭವಿಸುವುದಕ್ಕೂ, ಪ್ರೇತ್ಯ= ಮರಣವನ್ನು ಹೊಂದಿ, ಅನಂತಸುಖಾಯ ಚ= ಅನಂತಸುಖವನ್ನು ಸಂಪಾದಿಸುವುದಕ್ಕೂ (ಕಾರಣವಾಗುವುದಷ್ಟೆ), ಇತ್ಯುಕ್ತ್ಯಾ= ಹೀಗೆ ಭಾಗವತದಲ್ಲಿ ವೃಷಭನಾಮಕ ಪರಮಾತ್ಮನ ಉಪದೇಶವಿರುವುದರಿಂದ, ಇಹ= ಸಂಸಾರದಲ್ಲಿ, ವಿರಾಗಾ ಅಪಿ ಯೋಗಿನಃ= ವಿರಕ್ತರಾದ ಯೋಗಿಗಳೂ ಕೂಡ, ನ ಸುಖಿನಃ= ಸುಖವುಳ್ಳವರಲ್ಲ, ಅತಃ= ಆದ್ದರಿಂದ, ಪದಸ್ಥ ಸುಖವತ್= ಆ ಚಕ್ರವರ್ತ್ಯಾದಿ ಪದವಿಯಲ್ಲಿರುವ ಸುಖದಂತಹ,

ಸುಖಂ= ಸುಖವು, ಪದಾಕಾಮೇ= ಆ ಪದವಿಯನ್ನು ಬಯಸದಿದ್ದವನಿಗೆ, ಕುತಃ= ಎಲ್ಲಿಂದ ಉಂಟಾಗುತ್ತದೆ?

**ಅನುವಾದ** – ಬ್ರಾಹ್ಮಣನ ಈ ದೇಹವು ಇಲ್ಲಿ ಕ್ಷುದ್ರ ಸುಖವನ್ನು ಅನುಭವಿಸುವುದಕ್ಕಾಗಿ ಕ್ಲೃಪ್ತವಾಗಿಲ್ಲ. ಇಲ್ಲಿ ಬಹಳ ಕಷ್ಟವನ್ನು ಅನುಭವಿಸಿ ತಪಸ್ಸನ್ನು ಮಾಡಿ ಮರಣವನ್ನು ಹೊಂದಿದ ಮೇಲೆ ಅನಂತ ಸುಖವನ್ನು ಪಡೆಯಲು ಅದು ಉದ್ದಿಷ್ಟವಾಗಿದೆ ಎಂಬ ಮಹಾಭಾರತವಾಕ್ಯದಿಂದ ವಿರಕ್ತರಾದ ಯೋಗಿಗಳೂ ಸಹ ಸಂಸಾರದಲ್ಲಿ ಸುಖಿಗಳಲ್ಲ ಎಂದು ಸಿದ್ಧವಾಗುತ್ತದೆ. ಆದ್ದರಿಂದ ಚಕ್ರವರ್ತ್ಯಾದಿಪದವಿಯಲ್ಲಿ ಇರುವವನ ಸುಖದಂತಹ ಸುಖವು ಆ ಪದವನ್ನು ಬಯಸದಿದ್ದವನಿಗೆ ಎಲ್ಲಿಂದ ಉಂಟಾಗುತ್ತದೆ?

**ಭಾವವಿಲಾಸಿನೀ**– ಯಥಾ ಮನುಷ್ಯಗಂಧರ್ವಾದಿಪದಸ್ಥಾನಾಮುತ್ತರೋತ್ತರಂ ಶತಶತಾಧಿಕಾನಂದಾಃ ತಥಾ ತೇಷು ತೇಷು ಪದೇಷು ಕಾಮರಹಿತ ತಯಾಽಕಾಮಹತಾನಾಂ ಶ್ರೋತ್ರಿಯಾಣಾಂ ಬ್ರಾಹ್ಮಣಾದೀನಾಂ ಚ ತತ್ತತ್ಪದಸ್ಥದೇವಾನಂದಸದೃಶಾನಂದ ಇತಿ ಪರಕೀಯವ್ಯಾಖ್ಯಾನಂ ತತ್ ದೂಷಯತಿ– ಬ್ರಾಹ್ಮಣಸ್ಯೇತಿ ॥೨೬೬॥

ಇತ್ಯುಕ್ತ್ಯೇತಿ । ಭಾರತೋಕ್ತ್ಯಾ ॥ ೨೬೭ ॥

**ಸ ಭುಂಕ್ತೇ ವಿಷಯಾನ್ ಸರ್ವಾನ್ ಪ್ರಶಾಸ್ತಿ ಚ ಜಗತ್ತ್ರಯಮ್ ।**
**ಅಯಂ ಪಂಚಾಗ್ನಿಮಧ್ಯಸ್ಥಸ್ತಪಸ್ತಪತಿ ಸರ್ವದಾ ।**
**ಸುಖಲೇಶೋಽಪಿ ನಾಸ್ಯಾಸ್ತಿ ಸುಖಂ ತಾದೃಕ್ ಕಥಂ ವದ ॥ ೨೬೮ ॥**

**ಅರ್ಥ** – ಸಃ= ಅಂತಹ ಚಕ್ರವರ್ತ್ಯಾದಿ ಪದವಿಯಲ್ಲಿರುವವನು, ಸರ್ವಾನ್ ವಿಷಯಾನ್= ಎಲ್ಲ ಭೋಗಗಳನ್ನೂ, ಭುಂಕ್ತೇ= ಭೋಗಿಸುತ್ತಾನೆ, ಜಗತ್ತ್ರಯಂ= ಮೂರು ಜಗತ್ತನ್ನು, ಪ್ರಶಾಸ್ತಿ= ಶಾಸನ ಮಾಡುತ್ತಾನೆ, ಅಯಂ= ಈ ಬ್ರಾಹ್ಮಣಾದಿ ಯೋಗಿಯು, ಪಂಚಾಗ್ನಿಮಧ್ಯಸ್ಥಃ= ಪಂಚಾಗ್ನಿಮಧ್ಯಗತನಾಗಿ, ಸರ್ವದಾ= ಯಾವಾಗಲೂ, ತಪಃ= ತಪಸ್ಸನ್ನು, ತಪತಿ= ಮಾಡುತ್ತಾನೆ, ಅಸ್ಯ= ಈ ಬ್ರಾಹ್ಮಣಾದಿ ಯೋಗಿಗೆ, ಸುಖಲೇಶೋಪಿ= ಸುಖದ ಲೇಶವೂ ಕೂಡ, ನ= ಇಲ್ಲ, ತಾದೃಕ್ ಸುಖಂ= ಆ ಚಕ್ರವರ್ತಿಯ ಸುಖಕ್ಕೆ ಸಮಾನವಾದ ಸುಖವು, ಕಥಂ= ಹೇಗೆ ಉಂಟಾಗುತ್ತದೆ ಎಂದು, ವದ= ಹೇಳು.

**ಅನುವಾದ** – ಚಕ್ರವರ್ತ್ಯಾದಿ ಪದವಿಯುಳ್ಳವನು ಎಲ್ಲ ಭೋಗಗಳನ್ನೂ ಭೋಗಿಸುತ್ತಾನೆ ಮತ್ತು ಮೂರು ಲೋಕಗಳನ್ನೂ ಆಳುತ್ತಾನೆ. ಈ ಬ್ರಾಹ್ಮಣಾದಿ ಯೋಗಿಯಾದರೂ ಪಂಚಾಗ್ನಿ ಮಧ್ಯದಲ್ಲಿ ಇದ್ದು, ಸರ್ವದಾ ತಪಸ್ಸನ್ನು ಆಚರಿಸುತ್ತಾನೆ. ಆದ್ದರಿಂದ ಈ ಬ್ರಾಹ್ಮಣಾದಿ ಯೋಗಿಗೆ ಸುಖಲೇಶವೂ ಇಲ್ಲ. ಇನ್ನು ಆ ಚಕ್ರವರ್ತಿಯ ಸುಖದಂತಹ ಸುಖವು ಎಲ್ಲಿಂದ ಬರಬೇಕು?

**ಭಾವವಿಲಾಸಿನೀ–** ಸ ಪದಸ್ಥಃ ಅಯಂ ಬ್ರಾಹ್ಮಣಾದಿಃ ॥ ೨೬೮ ॥

ತದಿಹ ಕ್ಲೇಶಭಾಗ್ ಯೋಗೀ ಸುಖಂ ತಸ್ಯಾಸ್ತಿ ಮುಕ್ತಿಗಮ್ ।
ತಸ್ಮಾನ್ಮುಕ್ತಸುಖೇಷ್ವೇವ ತಾರತಮ್ಯಂ ತವಾಪ್ಯಭೂತ್ ॥ ೨೬೯ ॥

**ಅರ್ಥ –** ತತ್= ಆದ್ದರಿಂದ, ಯೋಗೀ= ಯೋಗಿಯಾದವನು, ಇಹ= ಸಂಸಾರದಲ್ಲಿ, ಕ್ಲೇಶಭಾಕ್= ದುಃಖವನ್ನು ಅನುಭವಿಸುತ್ತಾನೆ, ತಸ್ಯ= ಆ ಯೋಗಿಗೆ, ಮುಕ್ತಿಗಂ= ಮುಕ್ತಿಕಾಲದಲ್ಲಿ, ಸುಖಂ ಅಸ್ತಿ= ಸುಖವಿದೆ, ತಸ್ಮಾತ್= ಆದ್ದರಿಂದ, ತವಾಪಿ= ನಿನಗೂ ಕೂಡ, ಮುಕ್ತಸುಖೇಷ್ವೇವ= ಮುಕ್ತರ ಸುಖದಲ್ಲಿಯೇ, ತಾರತಮ್ಯಂ ಅಭೂತ್= ತಾರತಮ್ಯವು ಸಿದ್ಧವಾಯಿತು.

**ಅನುವಾದ –** ಆದ್ದರಿಂದ ಯೋಗಿಯು ಇಲ್ಲಿ ಕ್ಲೇಶವನ್ನು ಅನುಭವಿಸುತ್ತಾನೆ. ಮೋಕ್ಷದಲ್ಲಿ ಅವನಿಗೆ ಸುಖವಿದೆ. ಆದ್ದರಿಂದ ನಿನಗೂ ಸಹ ಮುಕ್ತ ಸುಖಗಳಲ್ಲಿಯೇ ತಾರತಮ್ಯವು ಸಿದ್ಧವಾಯಿತು.

**ಭಾವವಿಲಾಸಿನೀ–** ತಸ್ಮಾದುಕ್ತರೀತ್ಯಾ ಯೋಗಿನಾಮಪಿ ಮುಕ್ತಿಕಾಲೀನ ಸುಖೈಕಭೋಕ್ತೃತ್ವಾತ್ ॥ ೨೬೯ ॥

ಅತಃ ಕಾಮಾರ್ಥಸಂಪತ್ತ್ಯಾ ಹ್ಯಕಾಮಹತತಾಸ್ತ್ವಿಯಮ್ ।
ಅಕಾಮಸ್ಯ ವೃಥಾ ಕಾಮಹತತಾವಾಕ್ ನಚೇತ್ ತವ ॥ ೨೭೦ ॥

**ಅರ್ಥ –** ಅತಃ= ಆದ್ದರಿಂದ, ಇಯಂ= ಈ, ಅಕಾಮಹತತಾ= ಕಾಮಹತತ್ವಾಭಾವವು, ಕಾಮಾರ್ಥಸಂಪತ್ತ್ಯಾ= ಕಾಮ್ಯವಾದ ಅರ್ಥದ ಸಂಪ್ರಾಪ್ತಿಯಿಂದ, ಅಸ್ತು= ಇರಲಿ, ನ ಚೇತ್= ಹಾಗಿಲ್ಲದಿದ್ದರೆ, ತವ= ನಿನ್ನಂತೆ , ಅಕಾಮಸ್ಯ= ಕಾಮವೇ ಇಲ್ಲದಿದ್ದವನಿಗೆ, ಅಕಾಮಹತತಾ-ವಾಕ್= ಅಕಾಮಹತತ್ವವನ್ನು ಹೇಳುವ ವಾಕ್ಯವು, ವೃಥಾ= ವ್ಯರ್ಥವಾಗುತ್ತದೆ.

**ಅನುವಾದ –** ಆದ್ದರಿಂದ ಈ ವಾಕ್ಯವು ಕಾಮ್ಯವಾದ ಅರ್ಥದ ಸಂಪ್ರಾಪ್ತಿಯಿಂದಲೇ ಅಕಾಮಹತತ್ವವನ್ನು ಹೇಳುತ್ತದೆ. ಹಾಗಿಲ್ಲದಿದ್ದರೆ ನಿನ್ನಂತೆ ಕಾಮವೇ ಇಲ್ಲದಿದ್ದವನಿಗೆ ಅಕಾಮಹತತ್ವವನ್ನು ಹೇಳುವುದು ವ್ಯರ್ಥವಾಗುತ್ತದೆ.

**ಭಾವವಿಲಾಸಿನೀ–** ಕಿಂಚ ಕಾಮಿತಾರ್ಥಾಲಾಭೇ ಹಿ ಕಾಮೇನ ಹತತಾ । ತಲ್ಲಾಭೇ ಚಾಕಾಮಹತತಾ । ತಚ್ಚ ಸಂಕಲ್ಪಾದೇವ ಚ ಶ್ರುತೇರಿತಿ ಸೂತ್ರಾನ್ಮುಕ್ತಾನಾಮೇವ ಘಟತೇ । ಅಮುಕ್ತಾಸ್ತು ವಿರಕ್ತಾ ಅಕಾಮಾ ಏವ। ಕಾಮ್ಯಾರ್ಥಪ್ರಾಪ್ತ್ಯಾ ಯಾಽಕಾಮಹತತಾ ಸಾ ಕಥಮ-ಮುಕ್ತೇಷು ಸ್ಯಾದತೋಽಪೀಯಂ ಮುಕ್ತವಾರ್ತೈವೇತ್ಯಾಹ – ಅತ ಇತಿ ॥ಅತೋ ಮುಕ್ತಾವೇವ ಸಕಲಕಾಮ್ಯಾವಾಪ್ತಿ ಸಂಭವಾತ್ । ಅಸ್ತು ಮುಕ್ತಾವೇವಾಸ್ತು । ಇಯಂ ಶ್ರುತ್ಯುಕ್ತಾ । ಅಕಾಮಸ್ಯ

**ಸಂಸಾರೇ ವೈರಾಗ್ಯವಶಾದ್ವಿಷಯಕಾಮನಾಮೇವಾ ಕುರ್ವತಃ । ವೃಥಾ ಸಾಂಸಾರೀಕವಿರಕ್ತ-ಸ್ವರೂಪನಿರೂಪಣಸ್ಯಾಕಾಮ ಇತ್ಯೇತಾವತಾ ಪೂರ್ತೇರ್ಹತಪದಂ ವ್ಯರ್ಥಮಿತ್ಯರ್ಥಃ। ನ ಚೇತ್ ಮುಕ್ತಪರಂ ನ ಚೇತ್ ॥ ೨೭೦ ॥**

**ವಿವರಣೆ** – ಕಾಮ್ಯಮಾನವಾದ ಅರ್ಥವು ದೊರೆಯದಿದ್ದರೆ ಕಾಮಹತತ್ವವು ಉಂಟಾಗುತ್ತದೆ. ತಕ್ಷಣವೇ ದೊರೆತರೆ ಅಕಾಮಹತತ್ವವು ಉಂಟಾಗುತ್ತದೆ. ಅಂತಹ ತಕ್ಷಣ ಪ್ರಾಪ್ತಿಯು ಸಹ ಸಂಕಲ್ಪಾದೇವತಚ್ಛ್ರುತೇಃ ಎಂಬ ಸೂತ್ರದಲ್ಲಿ ಮೋಕ್ಷದಲ್ಲಿಯೇ ಹೇಳಲ್ಪಟ್ಟಿದೆ. ಅಮುಕ್ತರಾದ ವಿರಕ್ತರು ಕಾಮವೇ ಇಲ್ಲದವರು. ಅವರಿಗೆ ಕಾಮ್ಯಾರ್ಥ ಪ್ರಾಪ್ತಿಯಿಂದ ಅಕಾಮಹತತ್ವವನ್ನು ಹೇಳುವುದು ಹೇಗೆ ಉಪಪನ್ನವಾಗುತ್ತದೆ? ಆದ್ದರಿಂದಲೂ ಈ ವಾಕ್ಯವು ಮುಕ್ತರನ್ನೇ ಹೇಳುತ್ತದೆ ಎಂದು ಅಂಗೀಕರಿಸಬೇಕು. ಸಂಸಾರದಲ್ಲಿ ವೈರಾಗ್ಯ ದೆಶೆಯಲ್ಲಿರುವ ಪುರುಷನನ್ನು ಹೇಳುವುದಾದರೆ ಅಕಾಮಸ್ಯ ಎಂಬ ಇಷ್ಟೇ ಪದವು ಸಾಕಾಗುತ್ತಿದ್ದಿತು. ಅಕಾಮಹತಸ್ಯ ಎಂದು ಹೇಳಿರುವುದರಿಂದ ಕಾಮ್ಯಮಾನವಾದ ವಸ್ತುಗಳ ಪ್ರಾಪ್ತಿಯಿಂದಲೇ ಅದನ್ನು ಕೂಡಿಸಬೇಕು. ಅದು ಮೋಕ್ಷದಲ್ಲಿಯೇ ಸಾಧ್ಯ ಎಂದು ಅಭಿಪ್ರಾಯ.

ವಿರಕ್ತಾಃ ಸರ್ವಸಂಪತ್ತೌ ವಿರಕ್ತಾಃ ಸ್ಯುರ್ನ ಕುತ್ರಚಿತ್ ।
ತತ್ತತ್ಪದೇಷ್ವಕಾಮಾಸ್ತೇ ವಿರಕ್ತಾಃ ಕ್ವ ವ್ಯವಸ್ಥಯಾ ॥ ೨೭೧ ॥

**ಅರ್ಥ** – ಸರ್ವಸಂಪತ್ತೌ= ಎಲ್ಲ ಸಂಪತ್ತಿನಲ್ಲಿಯೂ ವಿರಕ್ತರಾದವರು, ಕುತ್ರಚಿತ್= ಯಾವುದೋ ಒಂದು ವಿಷಯದಲ್ಲಿ, ವಿರಕ್ತಾಃ= ವಿರಕ್ತರೆಂದು, ನಸ್ಯುಃ= ಹೇಳಲ್ಪಡುವುದಿಲ್ಲ, ತತ್ತತ್ಪದೇಷು= ಆಯಾ ಇಂದ್ರಾದಿ ಪದಗಳಲ್ಲಿ, ಅಕಾಮಾಃ= ಕಾಮರಹಿತರಾದ, ತೇ= ಆ ವಿರಕ್ತರು, ವ್ಯವಸ್ಥಯಾ= ವ್ಯವಸ್ಥೆಯಿಂದ, ಕ್ವ ವಿರಕ್ತಾಃ= ಎಲ್ಲಿ ವಿರಕ್ತರಾಗಿದ್ದಾರೆ?

**ಅನುವಾದ** – ಸರ್ವ ಸಂಪತ್ತಿನಲ್ಲಿಯೂ ವಿರಕ್ತರಾದವರು ಒಂದೊಂದು ವಿಷಯದಲ್ಲಿ ವಿರಕ್ತರಾದವರೆಂದು ಹೇಳಲ್ಪಡುವುದಿಲ್ಲ. ಆಯಾ ಪದಗಳಲ್ಲಿ ಕಾಮನಾರಹಿತರಾದ ವಿರಕ್ತರು ಎಲ್ಲಿ ವ್ಯವಸ್ಥೆಯಿಂದ ವಿಭಾಗಿಸಲ್ಪಟ್ಟಿದ್ದಾರೆ?

**ವಿವರಣೆ** – ಮನುಷ್ಯಗಂಧರ್ವಪದಕಾಮನಾರಹಿತನಾದವನಿಗಿಂತಲೂ ದೇವ-ಗಂಧರ್ವ ಪದಕಾಮನಾರಹಿತನಾದವನು ನೂರು ಪಟ್ಟು ಹೆಚ್ಚು ಆನಂದವುಳ್ಳವನು ಇತ್ಯಾದಿಯಾಗಿ ಅದ್ವೈತಿಗಳ ಯೋಜನೆ ಇದೆ. ಕಾಮವಿದ್ದವನಿಗೆ ಒಂದು ಪದದಲ್ಲಿ ಕಾಮವಿದ್ದು ಇನ್ನೊಂದು ಪದದಲ್ಲಿ ಕಾಮವಿಲ್ಲದಿದ್ದರೆ ಕಾಮಿಸುವ ಪದದ ಪ್ರಾಪ್ತಿಯಾದಾಗ ಅವನಿಗೆ ಇನ್ನೊಂದು ಪದಕ್ಕಿಂತಲೂ ಹೆಚ್ಚಿನ ಸುಖವಿದೆ ಎಂಬ ಮಾತು ಹೇಗಾದರೂ ಕೂಡುತ್ತದೆ. ಆದರೆ ಮನುಷ್ಯಗಂಧರ್ವಪದದ ಕಾಮನೆಯೂ ಇಲ್ಲದೆ, ದೇವಗಂಧರ್ವಪದದ ಕಾಮನೆಯೂ ಇಲ್ಲದೆ ಇರುವ ವಿರಕ್ತನಾದವನಿಗೆ

ಮನುಷ್ಯಗಂಧರ್ವಪದದ ಸುಖಕ್ಕಿಂತಲೂ ದೇವಗಂಧರ್ವಪದದ ಸುಖವು ನೂರು ಪಟ್ಟು ಮಿಗಿಲಾದುದು ಎಂದು ಹೇಳುವುದು ಅಸಂಗತವಾಗುತ್ತದೆ. ಮನುಷ್ಯಗಂಧರ್ವ-ಪದಕಾಮನೆಯಿಲ್ಲದೆ, ದೇವಗಂಧರ್ವಪದ ಕಾಮನೆ ಇದ್ದರೆ ಮಾತ್ರ ಆ ಮಾತು ಉಪಪನ್ನವಾಗುತ್ತದೆ. ನೀನಾದರೂ ಹಾಗೆ ಅಂಗೀಕರಿಸುವುದಿಲ್ಲ ಎಂದು ಅಭಿಪ್ರಾಯ.

**ತವ ನೀಚಪದಾಕಾಮಾತ್ ಸುಖಂ ಶತಗುಣೋತ್ತರಮ್ ।**
**ಭವೇದುಚ್ಚಪದಾಕಾಮೇ ಕಥಂ ಸ್ಯುಸ್ತಾದೃಶರ್ಷಯಃ ॥ ೨೭೨ ॥**

**ಅರ್ಥ –** ತವ= ನಿನಗಾದರೂ, ನೀಚಪದಾಕಾಮಾತ್= ನೀಚಪದ ಕಾಮನಾರಹಿತ-ನಾದವನಿಗಿಂತಲೂ, ಶತಗುಣೋತ್ತರಂ ಸುಖಂ= ನೂರು ಪಟ್ಟು ಮಿಗಿಲಾದ ಸುಖವು, ಉಚ್ಚಪದಾಕಾಮೇ = ಉಚ್ಚಪದವಿಯ ಕಾಮನಾರಹಿತನಾದವನಿಗೆ, ಭವೇತ್= ಉಂಟಾಗುತ್ತದೆ, ತಾದೃಶ ಋಷಯಃ= ಅಂತಹ ಋಷಿಗಳು, ಕಥಂ ಸ್ಯುಃ= ಹೇಗೆ ಇರುತ್ತಾರೆ?

**ಅನುವಾದ – ನಿನಗಾದರೂ ನೀಚಪದಕಾಮನಾರಹಿತನಾದವನಿಗಿಂತಲೂ ಉಚ್ಚ ಪದಕಾಮನಾರಹಿತನಾದವನಿಗೆ ನೂರು ಪಟ್ಟು ಮಿಗಿಲಾದ ಸುಖವೆಂದು ಅರ್ಥ. ಸರ್ವತ್ರ ಕಾಮನಾರಹಿತರಾದ ಋಷಿಗಳು ನೀನು ಹೇಳಿದ ರೀತಿಯಲ್ಲಿ ಹೇಗೆ ಇರುತ್ತಾರೆ?**

**ವಿವರಣೆ –** ಋಷಿಗಳಿಗೆ ನೀಚಪದಕಾಮನೆಯೂ ಇಲ್ಲ, ಉಚ್ಚಪದಕಾಮನೆಯೂ ಇಲ್ಲ. ಆದ್ದರಿಂದ ಅವರಲ್ಲಿ ಹೀಗೆ ತಾರತಮ್ಯವನ್ನು ಹೇಳುವುದು ಯುಕ್ತವಲ್ಲ. ಹಾಗೆಯೇ, ಇವರು ಇಂದ್ರಪದಅಕಾಮರ ಒಂದು ಗುಂಪು. ಇವರು ಪ್ರಜಾಪತಿಪದಅಕಾಮರ ಇನ್ನೊಂದು ಗುಂಪು. ಇವರು ಮನುಷ್ಯಪದ ಅಕಾಮರಾದ ಇನ್ನೊಂದು ಗುಂಪು ಎಂದು ಸರ್ವಥಾ ವಿರಕ್ತರಾದ ಇವರುಗಳಲ್ಲಿ ಗುಂಪುಗಳನ್ನು ಮಾಡಲು ಸಾಧ್ಯವಿಲ್ಲ ಎಂದು ಅಭಿಪ್ರಾಯ.

**ಯದಿ ಸರ್ವಪದಾಕಾಮಾಃ ಸರ್ವೇ ತರ್ಹಿ ಸುಖೇ ಸಮಾಃ ।**
**ಭವೇಯುಸ್ತಾರತಮ್ಯೇನ ಸುಖಿತಾ ತೇಷು ಕಿಂಕೃತಾ ॥ ೨೭೩ ॥**

**ಅರ್ಥ –** ಯದಿ= ಒಂದು ಪಕ್ಷ, ಸರ್ವೇ= ಎಲ್ಲರೂ, ಸರ್ವಪದಾಕಾಮಾಃ= ಯಾವ ಪದದ ಕಾಮನೆಯೂ ಇಲ್ಲದವರಾದರೆ, ಸರ್ವೇ= ಎಲ್ಲರೂ, ಸುಖೇ= ಸುಖದಲ್ಲಿ, ಸಮಾಭವೇಯುಃ= ಸಮರೇ ಆಗಬೇಕು. ತರ್ಹಿ= ಆಗ, ತೇಷು= ಅವರಲ್ಲಿ, ತಾರತಮ್ಯೇನ= ತಾರತಮ್ಯಭಾವದಿಂದ ಕೂಡಿದ, ಸುಖಿತಾ= ಸುಖವು, ಕಿಂ ಕೃತಾ= ಯಾವ ಕಾರಣದಿಂದ ಉಂಟಾಗುತ್ತದೆ?

**ಅನುವಾದ –** ಒಂದು ಪಕ್ಷ ಸರ್ವಪದ ಕಾಮನಾರಹಿತರಾದವರೆಲ್ಲರೂ ಸುಖದಲ್ಲಿ ಸಮಾನರು ಎಂದು ಅಂಗೀಕರಿಸುವುದಾದರೆ ಶ್ರುತಿಯಲ್ಲಿ ಹೇಳಿದ ಆನಂದ ತಾರತಮ್ಯವು.ಯಾವ ಕಾರಣದಿಂದ ಉಪಪನ್ನವಾಗುತ್ತದೆ?

**ಭಾವವಿಲಾಸಿನೀ–** ಕಿಂಚ ಮನುಷ್ಯಗಂಧರ್ವಪದಾಕಾಮಾತ್ ದೇವಗಂಧರ್ವಪದಾಕಾಮಸ್ಯ ಶತಗುಣಾನಂದಃ ಏವಮುತ್ತರತ್ರಾಪೀತಿ ವದತಾ ತತ್ತತ್ಪದಮಾತ್ರಾಕಾಮಾಸ್ತದನ್ಯಪದೇಷು ಸಕಾಮಾಶ್ಚ ತತ್ರ ತತ್ರೋಕ್ತ ಆಕಾಮಹತಾಸ್ತ್ವಯಾ ವಕ್ತವ್ಯಾಃ। ಪದಾಂತರೇಷ್ವಪ್ಯಕಾಮತ್ವೇ ಆನಂದ ತಾರತಮ್ಯಾಯೋಗಾತ್। ಏತಾದೃಶಾಕಾಮಾಶ್ಚ ನ ಕ್ವಾಪಿ ಸಂತೀತ್ಯಾಹ – **ವಿರಕ್ತಾ ಇತಿ** ॥ ಕುತ್ರಚಿತ್ ಕುತ್ರಚಿದೇವ । ವ್ಯವಸ್ಥಾ ವಿರಕ್ತ ಇತಿ ಸಂಬಂಧಃ ॥ ೨೭೧–೨೭೩ ॥

**ಅತಸ್ತತ್ತತ್ಪದಾಕಾಮಃ ಸಕಾಮೋಽನ್ಯಪದೇಷು ಚ ।**
**ಭವೇದಸೌ ಮಹಾಯೋಗೀ ಕಾ ಗೀಸ್ತಂ ಬಾಧಿತಂ ವದೇತ್ ॥ ೨೭೪ ॥**

**ಅರ್ಥ –** ಅತಃ= ಆದ್ದರಿಂದ, ಅಸೌ ಮಹಾಯೋಗೀ= ಈ ಮಹಾಯೋಗಿಯು, ತತ್ತತ್ಪದಾಕಾಮಃ= ಮೊದಲಿನ ಸಣ್ಣ ಸಣ್ಣ ಪದಗಳಲ್ಲಿ ಕಾಮನಾರಹಿತನಾಗಿ, ಅನ್ಯಪದೇಷು ಚ= ಮತ್ತು ಉಚ್ಚ ಪದದಲ್ಲಿ ಸಕಾಮಃ= ಕಾಮನವುಳ್ಳವನಾಗಿ, ಭವೇತ್= ಆಗಬೇಕು, ಕಾ ಗೀಃ= ಯಾವ ವಾಕ್ಯವು, ಬಾಧಿತಂ= ಬಾಧಿತವಾದ, ತಂ= ನೀನು ಹೇಳಿದ ಅರ್ಥವನ್ನು, ವದೇತ್= ಹೇಳುತ್ತದೆ?

**ಅನುವಾದ –** ಆದ್ದರಿಂದ ಈ ಮಹಾಯೋಗಿಯು (ಇದು ಪರಿಹಾಸ) ತತ್ತತ್ಪದಗಳಲ್ಲಿ ಕಾಮನೆ ಉಳ್ಳವನಾಗದೆ ಅನ್ಯವಾದ ಉಚ್ಚಪದದಲ್ಲಿ ಕಾಮನೆ ಉಳ್ಳವನಾಗಿರಬೇಕು. ಹೊರತಾಗಿ ನೀನು ಹೇಳಿದಂತೆ ಯಾವ ಪದದಲ್ಲಿಯೂ ಕಾಮನೆ ಇಲ್ಲದವನು ಎಂಬ ಬಾಧಿತವಾದ ಅರ್ಥವನ್ನು ಯಾವ ವಾಕ್ಯವು ಹೇಳಲು ಸಾಧ್ಯ?

**ಭಾವವಿಲಾಸಿನೀ–** ಮಹಾಯೋಗೀತಿ ಪರಿಹಾಸಃ ॥ ೨೭೪ ॥

**ಭೋಗ್ಯಾರ್ಥತಾರತಮ್ಯೇ ಸ್ಯಾತ್ ತಾರತಮ್ಯಂ ಸುಖಸ್ಯ ಚ ।**
**ತತ್ತ್ಯಾಗೇಪಿ ಸುಖಸ್ಯೋಚ್ಚ ನೀಚತೇತ್ಯದ್ಭುತಂ ವಚಃ ॥ ೨೭೫ ॥**

**ಅರ್ಥ –** ಭೋಗ್ಯಾರ್ಥತಾರತಮ್ಯೇ= ಭೋಗ್ಯವಾದ ವಸ್ತುವಿನ ತಾರತಮ್ಯವಿದ್ದರೆ, ಸುಖಸ್ಯ ತಾರತಮ್ಯಂ ಚ= ಅವುಗಳಿಂದ ಉಂಟಾಗುವ ಭೋಗದ ತಾರತಮ್ಯವೂ ಸಹ, ಸ್ಯಾತ್= ಉಂಟಾಗುತ್ತದೆ, ತತ್ತ್ಯಾಗೇಪಿ= ಭೋಗ್ಯವಾದ ವಸ್ತುಗಳು ಸರ್ವಥಾ ಇಲ್ಲದಿದ್ದರೆ, ಸುಖಸ್ಯ= ಸುಖಕ್ಕೆ, ಉಚ್ಚ ನೀಚತಾ= ತರತಮಭಾವವೆಂಬುವುದು, ಅದ್ಭುತಂ ವಚಃ= ಅದ್ಭುತವಾದ ಮಾತು.

**ಅನುವಾದ–** ಭೋಗ್ಯವಸ್ತುಗಳ ತಾರತಮ್ಯದಿಂದ ಅವುಗಳಿಂದ ಉಂಟಾಗುವ ಭೋಗಗಳಿಗೂ ತಾರತಮ್ಯ ಉಂಟಾಗುತ್ತದೆ. ಭೋಗ್ಯವಸ್ತುಗಳು ಸರ್ವಥಾ ಇಲ್ಲದಿದ್ದರೂ ಭೋಗಗಳಲ್ಲಿ ತಾರತಮ್ಯವಿದೆ ಎಂಬುದು ಅದ್ಭುತವಾದ ಮಾತು.

**ಭಾವವಿಲಾಸಿನೀ–** ಭೋಗ್ಯಾರ್ಥತಾರತಮ್ಯೇ ಭೋಗ್ಯಾರ್ಥಃ ಶರ್ಕರಾಖಂಡಾದಿಃ । ಸುಖಸ್ಯ ತದನುಭವಜನಿತಸುಖಸ್ಯ ॥ ೨೭೫ ॥

**ವಿವರಣೆ** – ಅದ್ವೈತ ಮತ ರೀತ್ಯಾ ಮೋಕ್ಷದಲ್ಲಿ ಆತ್ಮನೊಬ್ಬನೇ ಇದ್ದಾನೆ. ಭೋಗ್ಯವಾದ ವಸ್ತುಗಳು ಯಾವುದೂ ಇಲ್ಲ. ಹೀಗಿರುವಾಗ ಆ ಆತ್ಮಭೋಗದಲ್ಲಿ ತಾರತಮ್ಯವನ್ನು ಅಂಗೀಕರಿಸುವುದು ಆಶ್ಚರ್ಯಕರವಾದುದು ಎಂದು ಅಭಿಪ್ರಾಯ. ಈ ಶ್ಲೋಕದಲ್ಲಿ ಹೇಳಿದ ಅರ್ಥವನ್ನೇ ಮುಂದಿನ ಎರಡು ಶ್ಲೋಕಗಳಲ್ಲಿ ದೃಷ್ಟಾಂತದಿಂದ ಉಪಪಾದನೆ ಮಾಡುತ್ತಾರೆ.

ಕಿಂ ಕೂಪಸ್ಥಜಲಾಕಾಮಾತ್ ಸುಖಂ ಶತಗುಣೋತ್ತರಮ್ ।
ತಟಾಕಸ್ಥಜಲಾಕಾಮೇ ಪಿಪಾಸಾರಹಿತೇ ವದ ॥ ೨೭೬ ॥

ಸೂಕ್ಷ್ಮಭಾಂಡೋದನಾಕಾಮಾತ್ ಸುಖಂ ಶತಗುಣೋತ್ತರಮ್ ।
ಸ್ಥೂಲಾಭಾಂಡೋದನಾಕಾಮೇ ಬುಭುಕ್ಷಾರಹಿತೇऽಸ್ತಿ ಕಿಮ್॥ ೨೭೭ ॥

**ಅರ್ಥ –** ಕೂಪಸ್ಥಜಲಾಕಾಮಾತ್= ಬಾವಿಯ ನೀರಿನ ಕಾಮನೆ ಇಲ್ಲದಿರುವವನಿಗಿಂತ, ತಟಾಕಸ್ಥಜಲಾಕಾಮೇ= ಕೆರೆಯ ನೀರಿನ ಕಾಮನೆ ಇಲ್ಲದಂತಹ, ಪಿಪಾಸಾರಹಿತೇ= ಬಾಯಾರಿಕೆಯೇ ಇಲ್ಲದ ವ್ಯಕ್ತಿಗೆ, ಶತಗುಣೋತ್ತರಂ= ಮೊದಲನೆಯವನಿಗಿಂತ ನೂರು ಪಟ್ಟು ಹೆಚ್ಚಾದ, ಸುಖಂ= ಸುಖವು, ಕಿಂ= ಉಂಟಾಗುತ್ತದೆಯೇ? ವದ= ಹೇಳು? ಸೂಕ್ಷ್ಮಭಾಂಡೋದನಾಕಾಮಾತ್= ಸಣ್ಣ ಪಾತ್ರೆಯ ಅನ್ನದಲ್ಲಿ ಕಾಮನೆಯಿಲ್ಲದಂತಹ, ಬುಭುಕ್ಷಾರಹಿತೇ= ಹಸಿವೆಯೇ ಇಲ್ಲದಂತಹ, ಸ್ಥೂಲಭಾಂಡೋದನಾಕಾಮೇ= ದೊಡ್ಡ ಪಾತ್ರೆಯ ಅನ್ನದಲ್ಲಿ ಕಾಮನೆಯಿಲ್ಲದ ವ್ಯಕ್ತಿಗೆ, ಶತಗುಣೋತ್ತರಂ= ಮೊದಲನೆಯವನಿಗಿಂತ ನೂರು ಪಟ್ಟು ಅಧಿಕವಾದ, ಸುಖಂ= ಸುಖವು, ಅಸ್ತಿ ಕಿಂ= ಇದೆಯೇ?

**ಅನುವಾದ –** ಬಾವಿಯ ನೀರಿನ ಕಾಮನೆ ಇಲ್ಲದಿರುವ ಪಿಪಾಸಾರಹಿತನಾದ ಪುರುಷನಿಗೆ ತಟಾಕಜಲ ಕಾಮನೆ ಇಲ್ಲದಿರುವುದರಿಂದ ಬಾವಿಯ ನೀರಿನ ಕಾಮನಾರಹಿತಗಿಂತಲೂ ನೂರು ಪಟ್ಟು ಹೆಚ್ಚು ಸುಖವು ಉಂಟಾಗುತ್ತದೆಯೇ? ಸಣ್ಣ ಪಾತ್ರದ ಅನ್ನದ ಕಾಮವಿಲ್ಲದಿರುವ ಹಸಿವೆಯೇ ಇಲ್ಲದಿರುವುದರಿಂದ ದೊಡ್ಡಪಾತ್ರದ ಅನ್ನದ ಕಾಮವೂ ಇಲ್ಲದಿರುವ ವ್ಯಕ್ತಿಗೆ ಮೊದಲನೆಯ ವ್ಯಕ್ತಿಗಿಂತಲೂ ನೂರು ಪಟ್ಟು ಹೆಚ್ಚು ಸುಖವು ಉಂಟಾಗುತ್ತದೆಯೇ?

**ಭಾವವಿಲಾಸಿನೀ–** ಏತದೇವ ನಿದರ್ಶನಮುಖೇನ ದರ್ಶಯತಿ ॥ **ಕಿಂ ಕೂಪಸ್ಥೇತಿ । ಸೂಕ್ಷ್ಮ-ಭಾಂಡೇತಿ ಚ** ॥ ೨೭೬–೨೭೭ ॥

**ವಿವರಣೆ –** ನೀರಡಿಕೆಯೇ ಅಥವಾ ಹಸಿವೆಯೇ ಇಲ್ಲದವನಿಗೆ ಹೇಗೆ ಸುಖದಲ್ಲಿ ತಾರತಮ್ಯವನ್ನು ಹೇಳುವುದು ಅನುಭವ ವಿರುದ್ಧವೋ, ಹಾಗೆಯೇ ಸರ್ವಥಾ ಅಕಾಮರಾದ ಮುಕ್ತರಿಗೆ ಸುಖದಲ್ಲಿ ತಾರತಮ್ಯವನ್ನು ಹೇಳುವುದು ಅಯುಕ್ತವಾದುದು ಎಂದು ಅಭಿಪ್ರಾಯ.

**ಕಥಂಚಿತ್ಕಾಮಶೂನ್ಯೋ ಯಃ ಸೋಕಾಮಹತ ಉಚ್ಯತಾಮ್ ।**
**ಪದಂ ನ ಪದಲಭ್ಯಂ ತೇ ತತೋಪ್ಯೇತದಲೌಕಿಕಮ್ ।**
**ಶ್ರುತ್ಯುಕ್ತಾವೃಜಿನತ್ವಂ ತು ಘಟತೇ ನ ಕಥಂಚನ ॥ ೨೭೮ ॥**

**ಅರ್ಥ –** ಯಃ= ಯಾವನು, ಕಾಮಶೂನ್ಯಃ= ಕಾಮರಹಿತನಾದವನೋ, ಸಃ= ಅವನು, ಕಥಂ ಚಿತ್= ಯಾವುದೋ ರೀತಿಯಲ್ಲಿ, ಅಕಾಮಹತಃ= ಅಕಾಮಹತನೆಂದು, ಉಚ್ಯತಾಂ= ಹೇಳಲ್ಪಡಲಿ, ಪದಂ= ಅಕಾಮಹತಸ್ಯ ಎಂಬಲ್ಲಿ ತತ್ತತ್ಪದಾಕಾಮ ಎಂದು ಅರ್ಥಮಾಡುವಾಗ ಸೇರಿಸುವ ಪದಶಬ್ದವಂತೂ, ತೇ= ನಿನಗೆ, ಪದಲಭ್ಯಂ ನ= ಪದದ ಶಕ್ತಿಯಿಂದ ಸಿದ್ಧವಾಗುವುದಿಲ್ಲ, ತತೋಪಿ= ಆ ಕಾರಣದಿಂದಲೂ ಕೂಡ, ಏತತ್= ನಿನ್ನ ಅರ್ಥವು, ಅಲೌಕಿಕಂ= ಲೋಕಾನುಭವ ವಿರುದ್ಧವಾದುದು, ಶ್ರುತ್ಯುಕ್ತಾವೃಜಿನತ್ವಂ ತು= ಶ್ರುತಿಯಲ್ಲಿ ಹೇಳಿದ ದುಃಖಿತ್ವವಾದರೂ, ಕಥಂಚನ= ಯಾವ ರೀತಿಯಿಂದಲೂ, ನ ಘಟತೇ= ಕೂಡುವುದಿಲ್ಲ.

**ಅನುವಾದ – ಕಾಮಶೂನ್ಯನಾದವನನ್ನು ಅಕಾಮಹತ ಎಂದು ಯಾವ ರೀತಿಯಲ್ಲಿ ಬೇಕಾದರೂ ಹೇಳಿಕೊಳ್ಳಿ. ಆದರೂ ತತ್ತತ್ಪದಾಕಾಮ ಎಂಬ ಅರ್ಥವು ಅಕಾಮಹತ ಎಂಬ ಪದದ ಶಕ್ತಿಯಿಂದ ಲಭ್ಯವಾಗುವುದಿಲ್ಲ. ಆದ್ದರಿಂದಲೂ ನೀವು ಹೇಳುವ ಅರ್ಥವು ಲೋಕವಿರುದ್ಧವಾದುದು. ಶ್ರುತಿಯು ಹೇಳಿದ ಅದುಃಖಿತ್ವವಾದರೂ ಅಥವಾ ಪಾಪರಾಹಿತ್ಯವಾದರೂ ಸಂಸಾರಿಯಲ್ಲಿ ಎಂದೂ ಕೂಡುವುದೇ ಇಲ್ಲ.**

**ಭಾವವಿಲಾಸಿನೀ–** ಕಿಂ ಚಾಸ್ತು ವಾऽಕಾಮೋऽಪಿ ಯಥಾ ಕಥಂಚಿದಕಾಮಹತಪದಮ್ । ತ್ವಯಾ ತ್ವಕಾಮಹತಪದೇನ ತತ್ಪದಾಕಾಮಹೇತೋऽತ್ರ ವಕ್ತವ್ಯಃ । ತಚ್ಚ ನ ಶ್ರೌತಮಿತ್ಯಾಹ– **ಕಥಂಚಿದಿತಿ** ॥ ಕಾಮಶೂನ್ಯೊ ಯಸ್ಯ ಕಥಂಚಿತದಕಾಮಹತ ಉಚ್ಯತಾಮಿತಿ ಸಂಬಂಧಃ । ಪೂರ್ವೋಕ್ತಹತಪದವೈಯ್ಯರ್ಥ ಸೂಚನಾಯ ಕಥಂಚಿದಿತ್ಯುಕ್ತಮ್ । ಪದಂ ತತ್ಪದಮಿತಿ ಪದಮ್ । ಏತತ್ತವಾರ್ಥಕಥನಮ್ । ಇದಂತು ಸುತರಾಂ ನ ಘಟತ ಇತ್ಯಾಹ – **ಶ್ರುತ್ಯುಕ್ತೇತಿ** ॥ ಪಾಪರಹಿತತ್ವಸ್ಯ ಮುಕ್ತೇಷ್ವೇವ ಸಂಭವಾದಿತಿ ಭಾವಃ ॥ ೨೭೮ ॥

**ತತ್ ತ್ವಚ್ಛ್ರುತ್ಯರ್ಥಕಥನಂ ನ ಶ್ರುತ್ಯೈ ರೋಚತೇ ಸತಾಮ್ ।**
**ಭಾರತೀಹೃದಯಂ ತ್ವೇಕೋ ಭಾರತೋ ವೇತ್ತಿ ನಾಪರಃ ॥ ೨೭೯ ॥**

**ಅರ್ಥ –** ತತ್= ಆದ್ದರಿಂದ, ತ್ವಚ್ಛ್ರುತ್ಯರ್ಥಕಥನಂ= ನೀನು ಹೇಳುವ ಶ್ರುತ್ಯರ್ಥವು, ಶ್ರುತ್ಯೈ= ಶ್ರುತಿಗೂ, ಸತಾಂ= ಸಜ್ಜನರಿಗೂ, ನ ರೋಚತೇ= ಇಷ್ಟವಾಗುವುದಿಲ್ಲ, ಭಾರತೀ ಹೃದಯಂ= ವೇದಾಭಿಮಾನಿಯಾದ ಭಾರತಿಯಿಂದ ಅಭಿಮನ್ಯಮಾನವಾದ ವೇದವಾಕ್ಯದ ತಾತ್ಪರ್ಯವನ್ನು, ಏಕಃ ಭಾರತಃ= ವಾಯುದೇವರೊಬ್ಬರೇ, ವೇತ್ತಿ= ತಿಳಿಯುತ್ತಾರೆ, ಅಪರಃ ನ= ಇನ್ನೊಬ್ಬನು ತಿಳಿಯುವುದಿಲ್ಲ.

**ಅನುವಾದ –** ಆದ್ದರಿಂದ ನೀನು ಹೇಳುವ ಶ್ರುತ್ಯರ್ಥವು ಶ್ರುತಿಗಾಗಲೀ ಅಥವಾ ಸಜ್ಜನರಿಗಾಗಲೀ ಇಷ್ಟವಾಗುವುದಿಲ್ಲ. ವೇದಾಭಿಮಾನಿನಿಯಾದ ಭಾರತಿಯ ಹೃದಯವನ್ನು (ಭಾರತಿಯಿಂದ ಅಭಿಮನ್ಯಮಾನವಾದ ವೇದವಾಕ್ಯದ ತಾತ್ಪರ್ಯವನ್ನು) ವಾಯುದೇವರು ಒಬ್ಬರೇ ತಿಳಿಯುತ್ತಾರೆ. ಇನ್ನೊಬ್ಬರು ತಿಳಿಯುವುದಿಲ್ಲ.

**ಅನುಸಂಧೀಯತಾಂ ಚರ್ಚಾ ಮಹತೀ ಮೂಲಶಾಸ್ತ್ರಗಾ ।**
**ಬುದ್ಧಾವಾರೋಹಸಿದ್ಧ್ಯರ್ಥಂ ತತಃ ಕಿಂಚಿದಿಹೋದ್ಧೃತಮ್ ॥ ೨೮೦ ॥**

**ಅರ್ಥ –** ಮೂಲಶಾಸ್ತ್ರಗಾ= ಈ ವಿಷಯದಲ್ಲಿ ಮೂಲಶಾಸ್ತ್ರದಲ್ಲಿರುವ, ಮಹತೀ ಚರ್ಚಾ= ದೊಡ್ಡ ಚರ್ಚೆಯು, ಅನುಸಂಧೀಯತಾಂ= ಅನುಸಂಧಾನ ಮಾಡಲ್ಪಡಲಿ, ಬುದ್ಧೌ= ಬುದ್ಧಿಯಲ್ಲಿ, ಆರೋಹಸಿದ್ಧ್ಯರ್ಥಂ= ಸ್ವಲ್ಪ ಮೂಡಲು, ತತಃ= ಆ ಮೂಲಶಾಸ್ತ್ರದಿಂದ, ಕಿಂಚಿತ್= ಅಲ್ಪಭಾಗವು, ಇಹ= ಈ ಗ್ರಂಥದಲ್ಲಿ, ಉದ್ಧೃತಂ= ಉದ್ಧರಿಸಲ್ಪಟ್ಟಿದೆ.

**ಅನುವಾದ –** ಈ ವಿಷಯದಲ್ಲಿ ಮೂಲಶಾಸ್ತ್ರದಲ್ಲಿ ಇರುವ ದೊಡ್ಡ ಚರ್ಚೆಯು ಅಲ್ಲಿಯೇ ಅನುಸಂಧಾನ ಮಾಡಲ್ಪಡಬೇಕು. ಕೇವಲ ಬುದ್ಧ್ಯಾರೋಹ ಸಿದ್ಧಿಗಾಗಿ ಆ ಮೂಲಶಾಸ್ತ್ರದಿಂದ ಅಲ್ಪಭಾಗವನ್ನು ತೆಗೆದು ಈ ಗ್ರಂಥದಲ್ಲಿ ಸೇರಿಸಲಾಗಿದೆ.

**ಭಾವವಿಲಾಸಿನೀ– ಭಾರತೋ** ವಾಯುಃ ॥ ೨೭೯–೨೮೦ ॥

**ಅತೋ ಮಿಥೋ ಜೀವಭೇದೋ ಜೀವಬ್ರಹ್ಮವಿಭಿನ್ನತಾ ।**
**ತತ್ತದಾನಂದವೈಚಿತ್ರ್ಯಾತ್ ಸಿದ್ಧಾ ಸಿದ್ಧಾಂತವೇದಿನಾಮ್ ॥ ೨೮೧ ॥**

**ಅರ್ಥ –** ಅತಃ= ಆದ್ದರಿಂದ, ಸಿದ್ಧಾಂತವೇದಿನಾಂ= ಸಿದ್ಧಾಂತವನ್ನು ತಿಳಿದಿರುವವರಿಗೆ, ತತ್ತದಾನಂದವೈಚಿತ್ರ್ಯಾತ್= ಆಯಾ ಆನಂದಗಳ ವೈಚಿತ್ರ್ಯದಿಂದ, ಮಿಥೋ ಜೀವಭೇದಃ= ಪರಸ್ಪರ ಜೀವಭೇದವು, ಜೀವಬ್ರಹ್ಮವಿಭಿನ್ನತಾ= ಜೀವಬ್ರಹ್ಮ ಭೇದವು, ಸಿದ್ಧಾ= ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ಏತದೇವ ನಿದರ್ಶನಮುಖೇನ ದರ್ಶಯತಿ ॥ **ಕಿಂ ಕೂಪಸ್ಥೇತಿ । ಸೂಕ್ಷ್ಮ-ಭಾಂಡೇತಿ ಚ** ॥ ೨೭೬–೨೭೭ ॥

**ವಿವರಣೆ** – ನೀರಡಿಕೆಯೇ ಅಥವಾ ಹಸಿವೆಯೇ ಇಲ್ಲದವನಿಗೆ ಹೇಗೆ ಸುಖದಲ್ಲಿ ತಾರತಮ್ಯವನ್ನು ಹೇಳುವುದು ಅನುಭವ ವಿರುದ್ಧವೋ, ಹಾಗೆಯೇ ಸರ್ವಥಾ ಅಕಾಮರಾದ ಮುಕ್ತರಿಗೆ ಸುಖದಲ್ಲಿ ತಾರತಮ್ಯವನ್ನು ಹೇಳುವುದು ಅಯುಕ್ತವಾದುದು ಎಂದು ಅಭಿಪ್ರಾಯ.

**ಕಥಂಚಿತ್ಕಾಮಶೂನ್ಯೋ ಯಃ ಸೋಕಾಮಹತ ಉಚ್ಯತಾಮ್ ।**
**ಪದಂ ನ ಪದಲಭ್ಯಂ ತೇ ತತೋಪ್ಯೇತದಲೌಕಿಕಮ್ ।**
**ಶ್ರುತ್ಯುಕ್ತಾವೃಜಿನತ್ವಂ ತು ಘಟತೇ ನ ಕಥಂಚನ ॥ ೨೭೮ ॥**

**ಅರ್ಥ** – ಯಃ= ಯಾವನು, ಕಾಮಶೂನ್ಯಃ= ಕಾಮರಹಿತನಾದವನೋ, ಸಃ= ಅವನು, ಕಥಂ ಚಿತ್= ಯಾವುದೋ ರೀತಿಯಲ್ಲಿ, ಅಕಾಮಹತಃ= ಅಕಾಮಹತನೆಂದು, ಉಚ್ಯತಾಂ= ಹೇಳಲ್ಪಡಲಿ, ಪದಂ= ಅಕಾಮಹತಸ್ಯ ಎಂಬಲ್ಲಿ ತತ್ತತ್ಪದಾಕಾಮ ಎಂದು ಅರ್ಥಮಾಡುವಾಗ ಸೇರಿಸುವ ಪದಶಬ್ದವಂತೂ, ತೇ= ನಿನಗೆ, ಪದಲಭ್ಯಂ ನ= ಪದದ ಶಕ್ತಿಯಿಂದ ಸಿದ್ಧವಾಗುವುದಿಲ್ಲ, ತತೋಪಿ= ಆ ಕಾರಣದಿಂದಲೂ ಕೂಡ, ಏತತ್= ನಿನ್ನ ಅರ್ಥವು, ಅಲೌಕಿಕಂ= ಲೋಕಾನುಭವ ವಿರುದ್ಧವಾದುದು, ಶ್ರುತ್ಯುಕ್ತಾವೃಜಿನತ್ವಂ ತು= ಶ್ರುತಿಯಲ್ಲಿ ಹೇಳಿದ ದುಃಖಿತ್ವವಾದರೂ, ಕಥಂಚನ= ಯಾವ ರೀತಿಯಿಂದಲೂ, ನ ಘಟತೇ= ಕೂಡುವುದಿಲ್ಲ.

**ಅನುವಾದ** – ಕಾಮಶೂನ್ಯನಾದವನನ್ನು ಅಕಾಮಹತ ಎಂದು ಯಾವ ರೀತಿಯಲ್ಲಿ ಬೇಕಾದರೂ ಹೇಳಿಕೊಳ್ಳಿ. ಆದರೂ ತತ್ತತ್ಪದಾಕಾಮ ಎಂಬ ಅರ್ಥವು ಅಕಾಮಹತ ಎಂಬ ಪದದ ಶಕ್ತಿಯಿಂದ ಲಭ್ಯವಾಗುವುದಿಲ್ಲ. ಆದ್ದರಿಂದಲೂ ನೀವು ಹೇಳುವ ಅರ್ಥವು ಲೋಕವಿರುದ್ಧವಾದುದು. ಶ್ರುತಿಯು ಹೇಳಿದ ಅದುಃಖಿತ್ವವಾದರೂ ಅಥವಾ ಪಾಪರಾಹಿತ್ಯವಾದರೂ ಸಂಸಾರಿಯಲ್ಲಿ ಎಂದೂ ಕೂಡುವುದೇ ಇಲ್ಲ.

**ಭಾವವಿಲಾಸಿನೀ**– ಕಿಂ ಚಾಸ್ತು ವಾಽಕಾಮೋಽಪಿ ಯಥಾ ಕಥಂಚಿದಕಾಮಹತಪದಮ್ । ತ್ವಯಾ ತ್ವಕಾಮಹತಪದೇನ ತತ್ಪದಾಕಾಮಹೇತ್ತೋಽತ್ರ ವಕ್ತವ್ಯಃ । ತಚ್ಚ ನ ಶ್ರೌತಮಿತ್ಯಾಹ– **ಕಥಂಚಿದಿತಿ** ॥ ಕಾಮಶೂನ್ಯೋ ಯಸ್ಯ ಕಥಂಚಿತದಕಾಮಹತ ಉಚ್ಯತಾಮಿತಿ ಸಂಬಂಧಃ । ಪೂರ್ವೋಕ್ತಹತಪದವೈಯ್ಯರ್ಥ ಸೂಚನಾಯ ಕಥಂಚಿದಿತ್ಯುಕ್ತಮ್ । ಪದಂ ತತ್ಪದಮಿತಿ **ಪದಮ್** । ಏತತ್ತವಾರ್ಥಕಥನಮ್ । ಇದಂತು ಸುತರಾಂ ನ ಘಟತ ಇತ್ಯಾಹ – **ಶ್ರುತ್ಯುಕ್ತೇತಿ** ॥ ಪಾಪರಹಿತತ್ವಸ್ಯ ಮುಕ್ತೇಷ್ವೇವ ಸಂಭವಾದಿತಿ ಭಾವಃ ॥ ೨೭೮ ॥

**ತತ್ ತ್ವಚ್ಛ್ರುತ್ಯರ್ಥಕಥನಂ ನ ಶ್ರುತ್ಯೈ ರೋಚತೇ ಸತಾಮ್ ।**
**ಭಾರತೀಹೃದಯಂ ತ್ವೇಕೋ ಭಾರತೋ ವೇತ್ತಿ ನಾಪರಃ ॥ ೨೭೯ ॥**

**ಅರ್ಥ –** ತತ್= ಆದ್ದರಿಂದ, ತ್ವಚ್ಛ್ರುತ್ಯರ್ಥಕಥನಂ= ನೀನು ಹೇಳುವ ಶ್ರುತ್ಯರ್ಥವು, ಶ್ರುತ್ಯೈ= ಶ್ರುತಿಗೂ, ಸತಾಂ= ಸಜ್ಜನರಿಗೂ, ನ ರೋಚತೇ= ಇಷ್ಟವಾಗುವುದಿಲ್ಲ, ಭಾರತೀ ಹೃದಯಂ= ವೇದಾಭಿಮಾನಿಯಾದ ಭಾರತಿಯಿಂದ ಅಭಿಮನ್ಯಮಾನವಾದ ವೇದವಾಕ್ಯದ ತಾತ್ಪರ್ಯವನ್ನು, ಏಕಃ ಭಾರತಃ= ವಾಯುದೇವರೊಬ್ಬರೇ, ವೇತ್ತಿ= ತಿಳಿಯುತ್ತಾರೆ, ಅಪರಃ ನ= ಇನ್ನೊಬ್ಬನು ತಿಳಿಯುವುದಿಲ್ಲ.

**ಅನುವಾದ –** ಆದ್ದರಿಂದ ನೀನು ಹೇಳುವ ಶ್ರುತ್ಯರ್ಥವು ಶ್ರುತಿಗಾಗಲೀ ಅಥವಾ ಸಜ್ಜನರಿಗಾಗಲೀ ಇಷ್ಟವಾಗುವುದಿಲ್ಲ. ವೇದಾಭಿಮಾನಿನಿಯಾದ ಭಾರತಿಯ ಹೃದಯವನ್ನು (ಭಾರತಿಯಿಂದ ಅಭಿಮನ್ಯಮಾನವಾದ ವೇದವಾಕ್ಯದ ತಾತ್ಪರ್ಯವನ್ನು) ವಾಯುದೇವರು ಒಬ್ಬರೇ ತಿಳಿಯುತ್ತಾರೆ. ಇನ್ನೊಬ್ಬರು ತಿಳಿಯುವುದಿಲ್ಲ.

**ಅನುಸಂಧೀಯತಾಂ ಚರ್ಚಾ ಮಹತೀ ಮೂಲಶಾಸ್ತ್ರಗಾ ।**
**ಬುದ್ಧಾವಾರೋಹಸಿದ್ಧ್ಯರ್ಥಂ ತತಃ ಕಿಂಚಿದಿಹೋದ್ಧೃತಮ್ ॥ ೨೮೦ ॥**

**ಅರ್ಥ –** ಮೂಲಶಾಸ್ತ್ರಗಾ= ಈ ವಿಷಯದಲ್ಲಿ ಮೂಲಶಾಸ್ತ್ರದಲ್ಲಿರುವ, ಮಹತೀ ಚರ್ಚಾ= ದೊಡ್ಡ ಚರ್ಚೆಯು, ಅನುಸಂಧೀಯತಾಂ= ಅನುಸಂಧಾನ ಮಾಡಲ್ಪಡಲಿ, ಬುದ್ಧೌ= ಬುದ್ಧಿಯಲ್ಲಿ, ಆರೋಹಸಿದ್ಧ್ಯರ್ಥಂ= ಸ್ವಲ್ಪ ಮೂಡಲು, ತತಃ= ಆ ಮೂಲಶಾಸ್ತ್ರದಿಂದ, ಕಿಂಚಿತ್= ಅಲ್ಪಭಾಗವು, ಇಹ= ಈ ಗ್ರಂಥದಲ್ಲಿ, ಉದ್ಧೃತಂ= ಉದ್ಧರಿಸಲ್ಪಟ್ಟಿದೆ.

**ಅನುವಾದ –** ಈ ವಿಷಯದಲ್ಲಿ ಮೂಲಶಾಸ್ತ್ರದಲ್ಲಿ ಇರುವ ದೊಡ್ಡ ಚರ್ಚೆಯು ಅಲ್ಲಿಯೇ ಅನುಸಂಧಾನ ಮಾಡಲ್ಪಡಬೇಕು. ಕೇವಲ ಬುದ್ಧ್ಯಾರೋಹ ಸಿದ್ಧಿಗಾಗಿ ಆ ಮೂಲಶಾಸ್ತ್ರದಿಂದ ಅಲ್ಪಭಾಗವನ್ನು ತೆಗೆದು ಈ ಗ್ರಂಥದಲ್ಲಿ ಸೇರಿಸಲಾಗಿದೆ.

**ಭಾವವಿಲಾಸಿನೀ– ಭಾರತೋ** ವಾಯುಃ ॥ ೨೭೯–೨೮೦ ॥

**ಅತೋ ಮಿಥೋ ಜೀವಭೇದೋ ಜೀವಬ್ರಹ್ಮವಿಭಿನ್ನತಾ ।**
**ತತ್ತದಾನಂದವೈಚಿತ್ರ್ಯಾತ್ ಸಿದ್ಧಾ ಸಿದ್ಧಾಂತವೇದಿನಾಮ್ ॥ ೨೮೧ ॥**

**ಅರ್ಥ –** ಅತಃ= ಆದ್ದರಿಂದ, ಸಿದ್ಧಾಂತವೇದಿನಾಂ= ಸಿದ್ಧಾಂತವನ್ನು ತಿಳಿದಿರುವವರಿಗೆ, ತತ್ತದಾನಂದವೈಚಿತ್ರ್ಯಾತ್= ಆಯಾ ಆನಂದಗಳ ವೈಚಿತ್ರ್ಯದಿಂದ, ಮಿಥೋ ಜೀವಭೇದಃ= ಪರಸ್ಪರ ಜೀವಭೇದವು, ಜೀವಬ್ರಹ್ಮವಿಭಿನ್ನತಾ= ಜೀವಬ್ರಹ್ಮ ಭೇದವು, ಸಿದ್ಧಾ= ಸಿದ್ಧವಾಗುತ್ತದೆ.

**ಅನುವಾದ** – ಆದ್ದರಿಂದ ಸಿದ್ಧಾಂತವನ್ನು ತಿಳಿದವರಿಗೆ ಆನಂದ ತಾರತಮ್ಯದಿಂದ ಜೀವರಿಗೆ ಪರಸ್ಪರ ಭೇದವು ಮತ್ತು ಜೀವಬ್ರಹ್ಮಭೇದವು ಸಿದ್ಧವಾಗುತ್ತದೆ.

**ವಿವರಣೆ** – 'ಜೀವರ ಆನಂದಗಳಲ್ಲಿ ಪರಸ್ಪರ ತಾರತಮ್ಯವಿರುವುದರಿಂದ ಜೀವಭೇದವೂ ಪರಿಮಿತರಾದ ಜೀವಾನಂದಕ್ಕೂ ಅಪರಿಮಿತವಾದ ಬ್ರಹ್ಮಾನಂದಕ್ಕೂ ವೈಷಮ್ಯ ಇರುವುದರಿಂದ ಜೀವಬ್ರಹ್ಮಭೇದವೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ.

**ತಸ್ಮಾಚ್ಛ್ರೌತಂ ಚ ಯುಕ್ತಂ ಚ ಮಧ್ವಸ್ಯ ಮತಮಾಫಲಾತ್ ।**
**ಹೃದ್ಯಂ ಚ ನಿರವದ್ಯಂ ಚ ತತ್ಸರ್ವಮತಿಮಂಗಲಮ್ ॥ ೨೮೨ ॥**

**ಅರ್ಥ** – ತಸ್ಮಾತ್= ಆದ್ದರಿಂದ, ಮಧ್ವಸ್ಯ ಮತಂ= ಮಧ್ವಾಚಾರ್ಯರ ಮತವು, ಆಫಲಾತ್= ಮೋಕ್ಷರೂಪವಾದ ಫಲವನ್ನೂ ಸೇರಿಸಿ, ಶ್ರೌತಂ= ಶ್ರುತಿಸಮ್ಮತವಾದುದು, ಯುಕ್ತಂ ಚ= ಮತ್ತು ಯುಕ್ತಿಸಮ್ಮತವಾದುದು, ತತ್ಸರ್ವಂ= ಆ ಪ್ರಮೇಯವೆಲ್ಲವೂ, ಹೃದ್ಯಂ= ಮನೋಹರವಾದುದು, ಚ= ಮತ್ತು, ನಿರವದ್ಯಂ= ನಿರ್ದುಷ್ಟವಾದುದು ಎಂದು, ಅತಿಮಂಗಲಂ= ಪರಮ ಮಂಗಲವಾದುದು.

**ಅನುವಾದ** – ಆದ್ದರಿಂದ ಮಧ್ವಾಚಾರ್ಯರ ಮತವು ಮೋಕ್ಷದವರೆಗೆ ಮತ್ತು ಮೋಕ್ಷದಲ್ಲಿಯೂ ಶ್ರುತಿಸಮ್ಮತವಾದುದು ಮತ್ತು ಯುಕ್ತಿಯುಕ್ತವಾದುದು. ಅವರ ಸಿದ್ಧಾಂತದ ಪ್ರಮೇಯವೆಲ್ಲವೂ ಮನೋಹರವಾದವು ಮತ್ತು ನಿರ್ದುಷ್ಟವಾದವು ಎಂದು ಪರಮಮಂಗಲ.

**ಭಾವವಿಲಾಸಿನೀ**– ಅತ ಇತ್ಯೇತದೇವ ವಿಶಯದಯತಿ ॥ **ತತ್ತದಿತಿ** ॥ ೨೮೧–೨೮೨ ॥

**ತೇ ಪ್ರಸಾದೋ ಹರೇ ಸೇವಾನುರೂಪ ಇತಿ ಸಪ್ತಮೇ ।**
**ಪ್ರಹ್ಲಾದೋ ಯತ್ಸ್ಫುಟಂ ಮುಕ್ತೌ ಫಲಂ ಸೇವಾನುಗಂ ಜಗೌ ॥ ೨೮೩ ॥**

**ಅರ್ಥ** – ಸಪ್ತಮೇ= ಸಪ್ತಮ ಸ್ಕಂದದಲ್ಲಿ, ಪ್ರಹ್ಲಾದಃ= ಪ್ರಹ್ಲಾದನು, ಯತ್= ಯಾವ ಕಾರಣದಿಂದ, ಸ್ಫುಟಂ= ಸ್ಪಷ್ಟವಾಗಿ, ಹರೇ= ಎಲೈ ಹರಿಯೇ, ತೇ ಪ್ರಸಾದಃ= ನಿನ್ನ ಅನುಗ್ರಹವು, ಸೇವಾನುರೂಪಃ= ಅವರವರ ಸಾಧನೆಗೆ ಅನುಗುಣವಾದುದು, ಇತಿ= ಎಂದು, ಮುಕ್ತೌ= ಮೋಕ್ಷದಲ್ಲಿ, ಫಲಂ= ಉಂಟಾಗುವ ಸುಖಾದಿ ಫಲವನ್ನು, ಸೇವಾನುಗಂ= ಸೇವಾನುಗುಣವಾದುದು ಎಂದು, ಜಗೌ= ಹೇಳಿದ್ದಾನೆ.

**ಅನುವಾದ** – ಸಪ್ತಮಸ್ಕಂದದಲ್ಲಿ ಪ್ರಹ್ಲಾದನು ಹರಿಯೇ ನಿನ್ನ ಅನುಗ್ರಹವು ಜೀವರು ಮಾಡುವ ಸಾಧನೆಗೆ ಅನುಗುಣವಾದುದು ಎಂದು ಮೋಕ್ಷದಲ್ಲಿ ದೊರಕುವ ಸುಖವು ಅವರ ಸಾಧನೆಗೆ ಅನುಗುಣವಾದುದೆಂದು ಸ್ಪಷ್ಟವಾಗಿ ತಿಳಿಸಿದ್ದಾನೆ.

**ಭಾವವಿಲಾಸಿನೀ**– "ಸಂಸೇವಯಾ ಸುರತರೋರಿವ ತೇ ಪ್ರಸಾದಃ ಸೇವಾನುರೂಪ ಉದಯೋನ ಪರಾವರತ್ವಾದಿ''ತಿ ಭಾಗವತಸ್ಥಪ್ರಹ್ಲಾದವಾಕ್ಯೇನಾಪಿ ಮುಕ್ತೌ ತಾರತಮ್ಯಂ ಸಿದ್ಧ್ಯತೀತ್ಯಾಹ – **ತೇ ಪ್ರಸಾದ ಇತಿ** ॥ ಪರಾವರತ್ವಾತ್ಸೇವಾಂ ವಿನಾ ಸಂಪದಾದಿಭಿರುಚ್ಚತ್ವನೀಚತ್ವಾತ್ । ನ ಪ್ರಸಾದೋ ನೇತಿ ಭಾಗವತವಾಕ್ಯಶೇಷಸ್ಯಾರ್ಥಃ ॥ ೨೮೩ ॥

**ವಿವರಣೆ** – 'ಸಂಸೇವಯಾ ಸುರತರೋರಿವ ತೇ ಪ್ರಸಾದಃ ಸೇವಾನುರೂಪ ಉದಯೋ ನ ಪರಾವರತ್ವಂ' ಎಂಬ ಸಪ್ತಮಸ್ಕಂಧದ ಪ್ರಹ್ಲಾದರಾಜರ ವಚನವನ್ನು ಇಲ್ಲಿ ಮನಸ್ಸಿನಲ್ಲಿ ಇಟ್ಟುಕೊಂಡು ಈ ಶ್ಲೋಕದಲ್ಲಿ ನಿರೂಪಿಸುತ್ತಿದ್ದಾರೆ.

**ತತ್ರೈವ ಮುಕ್ತೌ ಫಲಸಂಪದ ಉಚ್ಚಾವಚಾ ಇತಿ ।**
**ದಾತೈವ ಯತ್ಫಲಾಸಾಮ್ಯಂ ಪ್ರಾಹ ಭಾಗವತೇ ಸ್ಫುಟಮ್ ।**
**ಯುಕ್ತಿಶ್ರುತಿಸ್ಮೃತಿಭ್ಯಸ್ತತ್ಸಿದ್ಧಾ ಮುಕ್ತೋಚ್ಚನೀಚತಾ ॥ ೨೮೪ ॥**

**ಅರ್ಥ** – ತತ್ರೈವ= ಅಲ್ಲಿಯೇ, ಭಾಗವತೇ= ಭಾಗವತದಲ್ಲಿ ದಶಮಸ್ಕಂದದಲ್ಲಿ, ಸ್ಫುಟಂ= ಸ್ಪಷ್ಟವಾಗಿ, ಮುಕ್ತೌ= ಮೋಕ್ಷದಲ್ಲಿ, ಫಲಸಂಪದಃ= ಫಲಪ್ರಾಪ್ತಿಯು, ಉಚ್ಚಾವಚಾಃ= ತರತಮಭಾವದಿಂದ ಕೂಡಿರುತ್ತದೆ, ಇತಿ= ಎಂದು, ದಾತೈವ= ಫಲದಾತೃವಾದ ಕೃಷ್ಣನೇ, ಫಲಾಸಾಮ್ಯಂ= ಫಲವೈಷಮ್ಯವನ್ನು, ಪ್ರಾಹ= ಹೇಳಿದ್ದಾನೆ, ತತ್= ಆದ್ದರಿಂದ, ಮುಕ್ತೋಚ್ಚನೀಚತಾ= ಮುಕ್ತರಲ್ಲಿ ಉಚ್ಚನೀಚಭಾವವು, ಯುಕ್ತಿಶ್ರುತಿಸ್ಮೃತಿಭ್ಯಃ= ಯುಕ್ತಿ ಶ್ರುತಿ ಮತ್ತು ಸ್ಮೃತಿಗಳಿಂದ, ಸಿದ್ಧಾ= ಸಿದ್ಧವಾಗಿದೆ.

**ಅನುವಾದ** – ಅಲ್ಲಿಯೇ ಭಾಗವತದಲ್ಲಿ ದಶಮಸ್ಕಂದದಲ್ಲಿ ಮೋಕ್ಷದಲ್ಲಿ ಫಲಪ್ರಾಪ್ತಿಯು ತರತಮಭಾವದಿಂದ ಕೂಡಿರುತ್ತದೆ ಎಂದು ಫಲದಾತೃವಾದ ಕೃಷ್ಣನೇ ಫಲ-ವೈಷಮ್ಯವನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಆದ್ದರಿಂದ ಮೋಕ್ಷದಲ್ಲಿ ಉಚ್ಚನೀಚಭಾವವು ಶ್ರುತಿಸ್ಮೃತಿಯುಕ್ತಿಗಳಿಂದ ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– "ನಾಹಂ ತು ಸಖ್ಯೋ ಭಜತೋಽಪಿ ಜಂತೂನ್ ಭಜಾಮ್ಯಮೀಷಾ-ಮನುವೃತ್ತಯೋ ಯಥಾ । ತಥೈವ ಮತ್ತಃ ಫಲಸಂಪದಃ ಸ್ಯುರುಚ್ಚಾವಾಚಾಃ ಕಲ್ಪತರೋರಿ-ವಾರ್ಥಿನಾಮಿ''ತಿ ದಶಮಸ್ಕಂಧೇ ಕೃಷ್ಣವಾಕ್ಯೇನಾಪಿ ಮುಕ್ತೌ ತಾರತಮ್ಯಮಸ್ತೀತ್ಯಾಹ – **ತತ್ರೈ-ವೇತಿ** ॥ "ಹರಿಸ್ತು ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇಃ ಪರಃ । ಸ ಸರ್ವದೃಗುಪದ್ರಷ್ಟಾ ತಂ ಭಜನ್ನಿರ್ಗುಣೋ ಭವೇದಿ''ತಿ ಸ್ಮೃತೇರ್ಹರಿಭಜನಸ್ಯ ಗುಣತ್ರಯಾತ್ಮಕಸಂಪತ್ ಸಂಪಾದಕ- ತ್ವಾ-ಯೋಗಾತ್ ಫಲಸಂಪದಃ ಫಲರೂಪಾಃ ಮುಕ್ತಿಕಾಲೀನಾಃ ಸಂಪದಃ ಸ್ಯುರಿತಿ ಭಾಗವತ- ವಾಕ್ಯ-ಸ್ಯಾರ್ಥಃ । ಅತೋ ವಾಕ್ಯದ್ವಯಮಪಿ ಮುಕ್ತಾವೇವ ತಾರತಮ್ಯಂ ಸಾಧಯತೀತಿ ಭಾವಃ । ಭಾಗವಾನ್ ಏವೇತಿ ಸಂಬಂಧಃ । ತತ್ತಸ್ಮಾತ್ । ಸಾಧನತಾರತಮ್ಯೇ ಸಾಧ್ಯತಾರತಮ್ಯಂ ಸ್ಯಾದಿತಿ ಯುಕ್ತಿಃ । ಶ್ರುತಿರಾನಂದಮೀಮಾಂಸಾರೂಪಾ । ಸ್ಮೃತಿರುಕ್ತಭಾಗವತವಾಕ್ಯದ್ವಯರೂಪಾ ॥ ೨೮೪ ॥

**ವಿವರಣೆ** – 'ನಾಹಂತು ಸಖ್ಯಃ ಭಜತೋಪಿ ಜಂತೂನ್ ಭಜಾಮ್ಯಮೀಷಾಂ ಅನುವೃತ್ತಯೋ ಯಥಾ । ತಥೈವ ಮತ್ತಃ ಫಲಸಂಪದಃ ಸ್ಯುಃ ಉಚ್ಚಾವಚಾಃ ಕಲ್ಪತರೋರಿ ವಾರ್ಥಿನಾಂ ।' ಎಂಬ ಗೋಪಿಯರನ್ನು ಕುರಿತ ಕೃಷ್ಣನ ವಾಕ್ಯದಿಂದಲೂ ಮೋಕ್ಷದಲ್ಲಿ ತಾರತಮ್ಯವು ಸಿದ್ಧವಾಗುವುದೆಂದು ಪ್ರತಿಪಾದಿಸುತ್ತಾರೆ. ಅಲ್ಲಿಯೇ 'ಹರಿಸ್ತು ನಿರ್ಗುಣಃ ಸಾಕ್ಷಾತ್ ಪುರುಷಃ ಪ್ರಕೃತೇ ಪರಃ । ಸಸರ್ವದೃಗುಪದ್ರಷ್ಟಾ ತಂ ಭಜನ್ ನಿರ್ಗುಣೋ ಭವೇತ್' ಎಂಬ ದಶಮಸ್ಕಂದದ ಶ್ಲೋಕದಲ್ಲಿ ಹರಿಭಜನೆಯು ಗುಣತ್ರಯಾತ್ಮಕವಾದ ಸಂಪತ್ತಿಗೆ ಕಾರಣವಲ್ಲವೆಂದು ಹೇಳಿರುವುದರಿಂದ ಉಚ್ಚಾವಚಾಃ ಫಲಸಂಪದಃ ಎಂದು ಹೇಳಿರುವ ಫಲವು ಮುಕ್ತಿಕಾಲೀನ ಸಂಪತ್ತೇ ಆಗಬೇಕು. ಅದು ಉಚ್ಚನೀಚಭಾವದಿಂದ ಕೂಡಿರುತ್ತದೆ ಎಂದು ಅಭಿಪ್ರಾಯ.

**ಮನೋಜವೇಷ್ವಸಮತಾ ಯತ್ಸಖ್ಯಂ ಚೋದಿತಂ ಶ್ರುತೌ ।**
**ತನ್ಮತ್ಸರಾದ್ಯಭಾವಶ್ಚ ತತ್ರ ತೇಷಾಂ ಪ್ರಸಿದ್ಧ್ಯತಿ ॥ ೨೮೫ ॥**

**ಅರ್ಥ** – ಯತ್= ಯಾವ ಕಾರಣದಿಂದ, ಮನೋಜವೇಷು= ಮನೋವೇಗಗಳಲ್ಲಿ, ಅಸಮತಾ= ವೈಷಮ್ಯವು, ಸಖ್ಯಂ ಚ= ಮತ್ತು ಮಿತ್ರಭಾವವು, ಶ್ರುತೌ= ಶ್ರುತಿಯಲ್ಲಿ, ಉದಿತಂ= ಹೇಳಲ್ಪಟ್ಟಿದೆಯೋ, ತತ್= ಆ ಕಾರಣದಿಂದ, ತತ್ರ= ಆ ಮೋಕ್ಷದಲ್ಲಿ, ತೇಷಾಂ= ಮುಕ್ತಜೀವರಿಗೆ, ಮತ್ಸರಾದ್ಯಭಾವಶ್ಚ= ಮತ್ಸರಾದಿಗಳ ಅಭಾವವು, ಪ್ರಸಿದ್ಧ್ಯತಿ= ಸ್ಪಷ್ಟವಾಗಿ ಸಿದ್ಧವಾಗುತ್ತದೆ.

**ಅನುವಾದ** – ಶ್ರುತಿಯಲ್ಲಿ ಮುಕ್ತರ ಮನೋವೇಗದಲ್ಲಿ ವೈಷಮ್ಯವು ಮತ್ತು ಮುಕ್ತರಿಗೆ ಪರಸ್ಪರ ಸಖ್ಯವು ಹೇಳಲ್ಪಟ್ಟಿರುವುದರಿಂದ ಮೋಕ್ಷದಲ್ಲಿ ಜೀವರಿಗೆ ಪರಸ್ಪರ ಮತ್ಸರಾದ್ಯಭಾವವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**– ನನು ಮುಕ್ತೌ ತಾರತಮ್ಯೇ ನೀಚಸ್ಯೋಚ್ಚೇ ಮಾತ್ಸರ್ಯಮುಚ್ಚಸ್ಯಾ ನೀಚೇಽವಜ್ಞಾಸ್ಯಾದಿತಿ ಶಂಕಾಂ ಶ್ರೌತಯುಕ್ತ್ಯೈವ ಪರಿಹರತಿ ॥ **ಮನೋಜವೇಷ್ವಿತಿ** ॥ ಯದ್ಯಸ್ಮಾತ್ । ತತ್ತಸ್ಮಾತ್ ಅಸಮತ್ವೇಽಪಿ ಸಖ್ಯಕಥನಾತ್ । ತತ್ರ ಮುಕ್ತೌ । ತೇಷಾಂ ಮುಕ್ತಾನಾಮ್ ॥೨೮೫॥

**ವಿವರಣೆ** – ಮೋಕ್ಷದಲ್ಲಿ ತಾರತಮ್ಯವನ್ನು ಒಪ್ಪಿ ಉಚ್ಚನೀಚಭಾವವನ್ನು ಒಪ್ಪಿದರೆ ಮಾತ್ಸರ್ಯಾದಿಗಳು ಮತ್ತು ಉಚ್ಚರಿಂದ ನೀಚರಿಗೆ ಅವಮಾನಾದಿಗಳು ಉಂಟಾಗುವ ಪ್ರಸಂಗವಿದೆ ಎಂಬ ಶಂಕೆಗೆ ಇಲ್ಲಿ ಉತ್ತರವನ್ನು ನೀಡುತ್ತಾರೆ. ಅದೇ ವಾಕ್ಯದಲ್ಲಿ ಸಖಾಯಃ ಎಂದು ಮುಕ್ತರಿಗೆ ಪರಸ್ಪರ ಸಖ್ಯವನ್ನು ಹೇಳಿರುವುದರಿಂದ ಸಖ್ಯವಿದ್ದಲ್ಲಿ ಮತ್ಸರಾದಿಗಳಿಗೆ ಅವಮಾನಾದಿಗಳಿಗೆ ಅವಕಾಶವಿಲ್ಲ. ಆದ್ದರಿಂದ ಮೋಕ್ಷದಲ್ಲಿ ಉಚ್ಚನೀಚಭಾವವನ್ನು ಒಪ್ಪಿದರೂ ಯಾವ ದೋಷವೂ ಇಲ್ಲ ಎಂದು ಅಭಿಪ್ರಾಯ.

**ಹರಿಸಾಮ್ಯೋಕ್ತಿವತ್ ಕ್ವಾಪಿ ಸಾಮ್ಯೋಕ್ತಿರ್ದುಃಖವರ್ಜನಾತ್ ।**
**ಉಕ್ತಾ ನಿರವಕಾಶಾಸ್ತಾ ಯಚ್ಛ್ರುತಿಸ್ಮೃತಿಯುಕ್ತಯಃ ।**
**ತತ್ಸಿದ್ಧತಾರತಮ್ಯಂ ತನ್ಮುಕುಂದೋಪಿ ನ ಮೋಚಯೇತ್ ॥ ೨೮೬ ॥**

**ಅರ್ಥ** – ಕ್ವಾಪಿ= ಕೆಲವೊಮ್ಮೆ, ಸಾಮ್ಯೋಕ್ತಿಃ= ಮುಕ್ತಜೀವರಿಗೆ ಸಾಮ್ಯವಚನವು, ಹರಿಸಾಮ್ಯೋಕ್ತಿವತ್= ಹರಿಯ ಸಾಮ್ಯವಚನದಂತೆ, ದುಃಖವರ್ಜನಾತ್= ದುಃಖವು ಇಲ್ಲದಿರುವ ಕಾರಣದಿಂದ, ಉಕ್ತಾ= ಹೇಳಲ್ಪಡುತ್ತದೆ, ಕಾ ಶ್ರುತಿಸ್ಮೃತಿಯುಕ್ತಯಃ= ಆ ಶ್ರುತಿ ಸ್ಮೃತಿ ಯುಕ್ತಿಗಳು, ನಿರವಕಾಶಾಃ= ನಿರವಕಾಶವಾದವು, ತತ್= ಅಂತಹ, ತತ್ಸಿದ್ಧತಾರತಮ್ಯಂ= ಶ್ರುತಿಸ್ಮೃತಿಯುಕ್ತಿಗಳಿಂದ ಸಿದ್ಧವಾದ ತಾರತಮ್ಯವನ್ನು, ಮುಕುಂದೋಪಿ= ಮುಕುಂದನೂ ಕೂಡ, ನ ಮೋಚಯೇತ್= ಬಿಡಿಸುವುದಿಲ್ಲ.

**ಅನುವಾದ** – ಕೆಲವೊಮ್ಮೆ ಮುಕ್ತಜೀವರಿಗೆ ಪರಸ್ಪರ ಸಾಮ್ಯವಚನವು ಹರಿಗೂ ಜೀವರಿಗೂ ಸಾಮ್ಯವನ್ನು ಹೇಳುವ ಮಮ ಸಾಧರ್ಮ್ಯಮಾಗತಾಃ ಎಂಬ ವಚನದಂತೆ ದುಃಖಾಭಾವನಿಮಿತ್ತದಿಂದ ಪ್ರವೃತ್ತವಾಗುತ್ತದೆ. ಏಕೆಂದರೆ ನಿರವಕಾಶವಾದ ಶ್ರುತಿಸ್ಮೃತಿಯುಕ್ತಿಗಳು ವೈಷಮ್ಯವನ್ನೇ ಸಾಧಿಸಿಕೊಡುತ್ತದೆ. ಅಂತಹ ಶ್ರುತಿ-ಸ್ಮೃತಿ-ಯುಕ್ತಿಗಳಿಂದ ಸಿದ್ಧವಾದ ತಾರತಮ್ಯವನ್ನೂ ಮೋಕ್ಷದಾತೃವಾದ ಮುಕುಂದನೂ ಬಿಡಿಸಲಾರ.

**ಭಾವವಿಲಾಸಿನೀ**– ಕ್ವಾಪಿ ಕುತ್ರಚಿದ್ವಚನೇ । ಸಾಮ್ಯೋಕ್ತಿಮಾತ್ರೇಣ ಮುಕ್ತಾನಾಂ ಪರಸ್ಪರಂ ಸಾಮ್ಯಾಂಗೀಕಾರೇ ಮಮ ಸಾಧರ್ಮ್ಯಮಾಗತಾ ಇತಿ ವಚನೇನ ಮುಕ್ತಾನಾಂ, ಭಗವತಾ ಚ ಸರ್ವಸಾಮ್ಯಂ ಸ್ಯಾದಿತಿ ಬಾಧಕಸೂಚನಾಯ ಹರಿಸಾಮ್ಯೋಕ್ತಿವದಿತ್ಯುಕ್ತಮ್ । ಯದ್ಯಸ್ಮಾತ್ । ತತ್ಸಿದ್ಧತಾರತಮ್ಯಂ ತಾಭಿಃ ಶ್ರುತಿಸ್ಮೃತಿ ಯುಕ್ತಿಭಿಃಸಿದ್ಧಂ ಮುಕ್ತಾನಾಂ ತಾರತಮ್ಯಮ್ । ತತ್ತಸ್ಮಾದುಕ್ತಪ್ರಮಾಣಾನಾಂ ನಿರವಕಾಶತ್ವಾತ್ ॥ ೨೮೬ ॥

**ಗುರೋಃ ಶಿಷ್ಯಸ್ಯ ಪಾಂಥಸ್ಯ ಕಾಕಸ್ಯ ಚ ಪಶೋರಪಿ ।**
**ದ್ವಿತೀಯಾಶೈವ ಯದ್ದೃಷ್ಟಾ ಸುಖಂ ಕಸ್ಯಾದ್ವಿತೀಯತಾ ॥ ೨೮೭ ॥**

**ಅರ್ಥ** – ಗುರೋಃ= ಗುರುವಿಗೆ, ಶಿಷ್ಯಸ್ಯ= ಶಿಷ್ಯನಿಗೆ, ಪಾಂಥಸ್ಯ= ದಾರಿಹೋಕನಿಗೆ, ಕಾಕಸ್ಯ ಚ= ಮತ್ತು ಕಾಗೆಗೆ, ಪಶೋರಪಿ= ಮತ್ತು ಪಶುವಿಗೂ, ಯತ್= ಯಾವ ಕಾರಣದಿಂದ, ದ್ವಿತೀಯಾಶೈವ= ಇನ್ನೊಂದು ವ್ಯಕ್ತಿಯ (ವಸ್ತುವಿನ) ಆಸೆಯೇ, ದೃಷ್ಟಾ= ದೃಷ್ಟವಾಗಿದೆಯೋ ಆ ಕಾರಣದಿಂದ, ಅದ್ವಿತೀಯತಾ= ದ್ವಿತೀಯರಾಹಿತ್ಯವು, ಕಸ್ಯ= ಯಾರಿಗೆ, ಸುಖಂ= ಸುಖರೂಪವಾಗುತ್ತದೆ.

**ಅನುವಾದ** – ಗುರುವಿಗೂ, ಶಿಷ್ಯನಿಗೂ, ದಾರಿಹೋಕನಿಗೂ, ಕಾಗೆಗೂ ಮತ್ತು ಪಶುವಿಗೂ ದ್ವಿತೀಯವಸ್ತುವಿನ ಆಸೆಯೇ ದೃಷ್ಟವಾಗಿರುವುದರಿಂದ ದ್ವಿತೀಯ ರಾಹಿತ್ಯರೂಪವಾದ ಮೋಕ್ಷವು ಯಾರಿಗೆ ಸುಖವನ್ನು ಕೊಡುತ್ತದೆ?

**ಭಾವವಿಲಾಸಿನೀ**– ಮಾಯಾವಾದಿನಾ ಪರಮಮೋಕ್ಷತಯಾಽಂಗೀಕೃತಸ್ಯ ದ್ವಿತೀಯರಾಹಿತ್ಯಾಖ್ಯಾದ್ವಿತೀಯತ್ವಸ್ಯ ಸುಖವಿರೋಧಿತ್ವಾನ್ನ ಮೋಕ್ಷತ್ವಮಿತ್ಯೇತಲ್ಲೌಕಿಕಾಲೌಕಿಕ ದೃಷ್ಟಾಂತಮುಖೇನ ದರ್ಶಯತಿ ॥ **ಗುರೋರಿತಿ** ॥ ಗುರೋಃ ಶಿಷ್ಯಾಭಾವೇ ದುಃಖದರ್ಶನಾತ್ ಶಿಷ್ಯಾಣಾಂ ಗುರೋರಭಾವೇ ಚ ದುಃಖದರ್ಶನಾತ್ । ಯದ್ಯಸ್ಮಾತ್ । ಅನ್ಯತ್‌ಸ್ಪಷ್ಟಮ್ ॥ ೨೮೭ ॥

**ವಿವರಣೆ** – ಶಿಷ್ಯನಿಲ್ಲದಿದ್ದರೆ ಗುರುವಿಗೆ ದುಃಖವಾಗುತ್ತದೆ. ಗುರುವಿಲ್ಲದಿದ್ದರೆ ಶಿಷ್ಯನಿಗೆ ದುಃಖವಾಗುತ್ತದೆ. ಅದರಂತೆ ದಾರಿಹೋಕನಿಗೆ ಪತ್ನಿ ಇಲ್ಲದೆ ದುಃಖವಾಗುತ್ತದೆ. ಕಾಗೆ ಮತ್ತು ಪಶುಗಳಿಗೆ ತಿನ್ನುವ ವಸ್ತುವಿಲ್ಲದಿದ್ದರೆ ಮತ್ತು ಇನ್ನೊಂದು ಸಹಚಾರಿಪ್ರಾಣಿ ಇಲ್ಲದಿದ್ದರೆ ದುಃಖವಾಗುತ್ತದೆ. ಹೀಗೆ ಎಲ್ಲ ಕಡೆಯಲ್ಲಿಯೂ ದ್ವಿತೀಯವಸ್ತುವಿನಿಂದಲೇ ಸುಖಪ್ರಾಪ್ತಿಯು ಕಂಡಿರುವಾಗ ದ್ವಿತೀಯರಾಹಿತ್ಯರೂಪವಾದ ಮೋಕ್ಷವು ಯಾರಿಗೂ ಸುಖಪ್ರದವಾಗುವುದಿಲ್ಲ ಎಂದು ಅಭಿಪ್ರಾಯ.

ನಶ್ವರಂ ಯದಿಹೈಶ್ವರ್ಯಮತೋಽನಶ್ವರಸಂಪದೇ ।
ಸ್ವರ್ಗಾರ್ಥೀ ಕುರುತೇ ಯಜ್ಞಂ ಸುಖಂ ಕಸ್ಯಾದ್ವಿತೀಯತಾ ॥ ೨೮೮ ॥

**ಅರ್ಥ** – ಯತ್= ಯಾವ ಕಾರಣದಿಂದ, ಇಹ= ಇಲ್ಲಿ, ಐಶ್ವರ್ಯಂ= ಐಶ್ವರ್ಯವು, ನಶ್ವರಂ= ನಶ್ವರವಾದುದೋ, ಅತಃ= ಆ ಕಾರಣದಿಂದ, ಸ್ವರ್ಗಾರ್ಥೀ= ಸ್ವರ್ಗವನ್ನು ಅಪೇಕ್ಷಿಸುವ ಮೀಮಾಂಸಕನು, ಅನಶ್ವರಸಂಪದೇ= ಶಾಶ್ವತವಾದ ಸಂಪತ್ತಿಗಾಗಿ, ಯಜ್ಞಂ= ಯಜ್ಞವನ್ನು, ಕುರುತೇ= ಮಾಡುತ್ತಾನೆ, ಅದ್ವಿತೀಯತಾ= ದ್ವಿತೀಯರಾಹಿತ್ಯವು, ಕಸ್ಯ ಸುಖಂ= ಯಾರಿಗೆ ಸುಖವಾಗುತ್ತದೆ.

**ಅನುವಾದ** – ಭೂಲೋಕದ ಐಶ್ವರ್ಯವು ನಶ್ವರವಾದುದರಿಂದ ಶಾಶ್ವತ ಸುಖಾಪೇಕ್ಷಿಯಾದ ಮೀಮಾಂಸಕನು ಯಜ್ಞವನ್ನು ಆಚರಿಸುತ್ತಾನೆ. ಆದ್ದರಿಂದ ದ್ವಿತೀಯರಾಹಿತ್ಯದಿಂದ ಯಾರಿಗೆ ಸುಖವಾಗುತ್ತದೆ?

**ಭಾವವಿಲಾಸಿನೀ**– ಯದ್ಯಸ್ಮಾದನಶ್ವರಸಂಪದಂ ಸ್ವರ್ಗಸ್ಥಿತಬಹುಕಾಲಸ್ಥಾಯಿ ಸಂಪ್ರತ್ ಪ್ರಾಪ್ತ್ಯರ್ಥಮ್ । ಸ್ವರ್ಗಾಶಯಾಯಜ್ಞಕರಣಮಪಿ ಸಂಪದಾದಿ ದ್ವಿತೀಯಪ್ರಾಪ್ತ್ಯರ್ಥಮೇವೇತಿ ಭಾವಃ ॥ ೨೮೮ ॥

**ವಿವರಣೆ** – ಭೂಲೋಕದಲ್ಲಿ ಸಿಗುವ ಭೋಗಸಾಮಗ್ರಿಗಿಂತಲೂ ಸ್ವರ್ಗದಲ್ಲಿ ಸಿಗುವ ಭೋಗಸಾಮಗ್ರಿಗಳು ಶಾಶ್ವತವೆಂದು (ದೀರ್ಘಕಾಲೀನವೆಂದು) ಭಾವಿಸಿ ಯಜ್ಞವನ್ನು

ಮಾಡುತ್ತಾರೆ. ಸ್ವರ್ಗದಲ್ಲಿ ದ್ವಿತೀಯ ವಸ್ತುವೇ ಇಲ್ಲದಿದ್ದರೆ ಹೇಗೆ ಸ್ವರ್ಗಪ್ರಾಪ್ತಿಯು ಸುಖಪ್ರದವಾಗುವುದಿಲ್ಲವೋ, ಅದರಂತೆ ದ್ವಿತೀಯ ವಸ್ತುವು ಇಲ್ಲದಿದ್ದರೆ ಮೋಕ್ಷದಲ್ಲಿಯೂ ಸುಖವುಂಟಾಗುವುದಿಲ್ಲ ಎಂದು ಅಭಿಪ್ರಾಯ.

ಏಕಾರ್ಥನಾಶೇಪ್ಯನ್ಯಾರ್ಥೇ ಸ್ತ್ರೀನಾಶೇ ಸ್ತ್ರ್ಯಂತರೇ ಸ್ಪೃಹಾ ।
ದಗ್ಧೇ ಗೇಹೇ ನೂತ್ನಗೇಹೇ ಸುಖಂ ಕಸ್ಯಾದ್ವಿತೀಯತಾ ॥ ೨೮೯ ॥

**ಅರ್ಥ** – ಏಕಾರ್ಥನಾಶೇ= ಒಂದು ವಸ್ತುವು ನಾಶವಾದರೆ, ಅನ್ಯಾರ್ಥೇ= ಇನ್ನೊಂದು ವಸ್ತುವಿನಲ್ಲಿ, ಸ್ತ್ರೀನಾಶೇ= ಒಬ್ಬ ಪತ್ನಿಯು ಮೃತಳಾದರೆ, ಸ್ತ್ರ್ಯಂತರೇ= ಇನ್ನೊಬ್ಬ ಪತ್ನಿಯಲ್ಲಿ, ಗೇಹೇ ದಗ್ಧೇ= ಮನೆಯು ಸುಟ್ಟುಹೋದರೆ, ನೂತ್ನಗೇಹೇ= ಹೊಸ ಮನೆಯಲ್ಲಿ, ಸ್ಪೃಹಾ= ಆಸೆಯು ಕಂಡಿದೆ, ಅದ್ವಿತೀಯತಾ= ದ್ವಿತೀಯರಾಹಿತ್ಯವು, ಕಸ್ಯ= ಯಾರಿಗೆ, ಸುಖಂ= ಸುಖವನ್ನು ಕೊಡುತ್ತದೆ?

**ಅನುವಾದ** – ಒಂದು ವಸ್ತುವು ನಾಶವಾದರೆ ಇನ್ನೊಂದು ವಸ್ತುವಿನಲ್ಲಿಯೂ, ಒಬ್ಬ ಪತ್ನಿಯು ನಾಶವಾದರೆ ಇನ್ನೊಬ್ಬ ಪತ್ನಿಯಲ್ಲಿಯೂ, ಒಂದು ಮನೆಯು ಭಸ್ಮವಾದರೆ ಇನ್ನೊಂದು ಮನೆಯಲ್ಲಿಯೂ ಆಸೆಯು ಲೋಕದಲ್ಲಿ ಕಂಡಿದೆ. ಅದ್ವಿತೀಯತ್ವವು ಯಾರಿಗೆ ಸುಖವನ್ನು ಕೊಡುತ್ತದೆ?

**ಭಾವವಿಲಾಸಿನೀ**– ಸ್ಪೃಹೇತಿ ಸರ್ವತ್ರ ಸಂಬಂಧಃ ॥ ೨೮೯ ॥

ಧತ್ತೇ ಪ್ರಿಯಾಂ ಮುಕುಂದೋಽಂಕೇ ಗಾತ್ರಾರ್ಧೇ ತು ಶಿವಾಂ ಶಿವಃ ।
ಸಖ್ಯಾ ಸಖಾಯೋ ನಂದಂತಿ ಸುಖಂ ಕಸ್ಯಾದ್ವಿತೀಯತಾ ॥ ೨೯೦ ॥

**ಅರ್ಥ** – ಮುಕುಂದಃ= ಹರಿಯು, ಅಂಕೇ= ತೊಡೆಯಲ್ಲಿ, ಪ್ರಿಯಾಂ= ತನ್ನ ಪತ್ನಿಯಾದ ಲಕ್ಷ್ಮಿಯನ್ನು, ಧತ್ತೇ= ಧರಿಸಿದ್ದಾನೆ, ಶಿವಃ ತು= ಶಿವನಾದರೂ, ಶಿವಾಂ= ಪಾರ್ವತಿಯನ್ನು, ಗಾತ್ರಾರ್ಧೇ= ತನ್ನ ಅರ್ಧಶರೀರದಲ್ಲಿ, ಧತ್ತೇ= ಧರಿಸಿದ್ದಾನೆ, ಸಖ್ಯಾ= ಮಿತ್ರನ ಜೊತೆಯಲ್ಲಿ, ಸಖಾಯಃ= ಮಿತ್ರರು, ನಂದಂತಿ= ಹರ್ಷಪಡುತ್ತಾರೆ, ಅದ್ವಿತೀಯತಾ= ದ್ವಿತೀಯರಾಹಿತ್ಯವು, ಕಸ್ಯ ಸುಖಂ= ಯಾರಿಗೆ ಸುಖವಾಗುತ್ತದೆ.

**ಅನುವಾದ** – ಮುಕುಂದನು ಲಕ್ಷ್ಮಿಯನ್ನು ತನ್ನ ಅಂಕದಲ್ಲಿ ಧರಿಸಿದ್ದಾನೆ. ಶಿವನಾದರೋ ಪಾರ್ವತಿಯನ್ನು ತನ್ನ ಅರ್ಧಶರೀರದಲ್ಲಿಯೇ ಧರಿಸಿದ್ದಾನೆ. ಸ್ನೇಹಿತನಿಂದ ಸ್ನೇಹಿತರು ಸಂತೋಷಪಡುತ್ತಾರೆ. ಅದ್ವಿತೀಯತ್ವವು ಯಾರಿಗೆ ಸುಖವನ್ನುಂಟುಮಾಡುತ್ತದೆ?

**ಭಾವವಿಲಾಸಿನೀ**– ಸಖ್ಯಾ ಮಿತ್ರೇಣ । ಯಶಸಾ ಯಶೋವತಾ ಸ್ವಸಮೀಪಂ ಪ್ರತ್ಯಾಗತೇನ ಹರಿಣಾ ಸಖಾಯೋ ''ಮುಕ್ತಾನಂದಂತೀ''ತಿ ಶ್ರುತಿಸಂಗ್ರಹಾಯ ಸಖ್ಯಾ ಸಖಾಯೋ

ನಂದಂತೀತ್ಯುಕ್ತಮ್ । ಭೂಲೋಕೇ ಸ್ವರ್ಗಲೋಕೇ ಮುಕ್ತಿದಶಾಯಾಂ ಚ ದ್ವಿತೀಯಾಶಾಯಾ ಏವ ದೃಷ್ಟತ್ವೇನಾದ್ವಿತೀಯತ್ವಂ ನ ಪುರುಷಾರ್ಥ ಇತಿ ಭಾವಃ ॥ ೨೯೦ ॥

**ಯದಿ ಸಂಸಾರಿಕದ್ವೈತಮಿವ ಮುಕ್ತೌ ದ್ವಿತಾ ಭವೇತ್ ।**
**ತದಾಽನ್ಯೋನ್ಯಂ ದರ್ಶನಂ ಸ್ಯಾತ್ ಸಖ್ಯಂ ವಿಷಯಭೋಕ್ತೃತಾ ॥ ೨೯೧ ॥**

**ಅರ್ಥ–** ಯದಿ= ಒಂದು ಪಕ್ಷ, ಸಾಂಸಾರಿಕದ್ವೈತಮಿವ= ಸಂಸಾರದಲ್ಲಿ ದ್ವೈತವಿದ್ದಂತೆ, ಮುಕ್ತೌ= ಮೋಕ್ಷದಲ್ಲಿ, ದ್ವಿತಾ ಭವೇತ್= ದ್ವೈತವಿರುವುದಾದರೆ, ತದಾ= ಆಗ, ಅನ್ಯೋನ್ಯ ದರ್ಶನಂ= ಪರಸ್ಪರ ದರ್ಶನವು, ಸಖ್ಯಂ= ಸಖ್ಯವು, ವಿಷಯಭೋಕ್ತೃತಾ= ವಿಷಯಭೋಗವು, ಸ್ಯಾತ್= ಉಂಟಾಗುತ್ತದೆ.

**ಅನುವಾದ–** ಸಂಸಾರದಲ್ಲಿ ದ್ವೈತವಿದ್ದಂತೆ ಮೋಕ್ಷದಲ್ಲೂ ದ್ವೈತವಿದ್ದರೆ ಆಗ ಪರಸ್ಪರ ದರ್ಶನ, ಸಖ್ಯ ಮತ್ತು ವಿಷಯಭೋಗಗಳು ಉಂಟಾಗುತ್ತವೆ.

**ಭಾವವಿಲಾಸಿನೀ–** ಯತ್ರ ಹಿ ದ್ವೈತಮಿವ ಭವತಿ । ತದಿತರ ಇತರಂ ಪಶ್ಯತಿ । ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ । ತತ್ಕೇನ ಕಂ ಪಶ್ಯೇತ್ತತ್ಕೇನ ಕಂ ಜಿಘ್ರೇದ್ವಿಜ್ಞಾತಾರಮರೇ ಕೇನ ವಿಜಾನೀಯಾದ್ಯೇನೇದಮಖಿಲಂ ವೇದ ತಂ ಚ ಕೇನ ವಿಜಾನೀಯಾದಿ"ತಿ ಶ್ರುತ್ಯಾಪಿ ತರ್ಕ-ಮುದ್ರಾಯಾದ್ವೈತಾಭಾವಸ್ಯ ದೂಷಿತತ್ವಾನ್ನಾದ್ವಿತೀಯಾವಸ್ಥಾ ಮುಕ್ತಿರಿತ್ಯಾಹ – ಯದಿತಿ ॥ ಅವ್ಯಯಾನಾಮನೇಕಾರ್ಥತ್ವಾದ್ಯತ್ರೇತ್ಯಸ್ಯ ಯದೀತ್ಯರ್ಥಕಥನಮ್ । ಅನ್ಯಥಾ ತದಿತ್ಯಸ್ಯ ತತ್ರೇತ್ಯರ್ಥಕಥನಂ ಪರಸ್ಯಾಪಿ ನ ಸ್ಯಾತ್ । ಸಾಂಸಾರಿಕದ್ವೈತಮಿವೇತಿ ಅಸ್ಯ ಸಂಸಾರೇ ದ್ವೈತ-ಮಿತ್ಯವೇತ್ಯರ್ಥಃ । ಸಂಸಾರೇ ಮುಕ್ತಾವಿತಿ ಚ ಯೋಗ್ಯತಯಾ ಸಂಬಂಧಃ । ದ್ವೈತಮಿವೇತಿ ದೃಷ್ಟಾಂತೇ ದ್ವೈತಪದಬಲಾತ್ । ದಾರ್ಷ್ಟಾಂತಿಕೇಪಿ ದ್ವೈತಮಿತ್ಯನುವರ್ತತೇ । ತಥಾ ಚ ಸಂಸಾರೇ ದ್ವೈತಮಿವ ಮುಕ್ತಾವಪಿ ದ್ವಿತಾ ದ್ವೈತಂ ಯದಿಭವೇದಿತ್ಯರ್ಥಃ ತದಿತ್ಯಸ್ಯ ಅರ್ಥ-ಕಥನಂ ತದೇತಿ । ಇತರ ಇತರಂ ಪಶ್ಯೇದಿತ್ಯಸ್ಯ । ಫಲಿತಾರ್ಥ ಕಥನಮ್ ಅನ್ಯೋನ್ಯ ದರ್ಶನಂ ಸ್ಯಾದಿತ್ಯಾದಿ ॥ ೨೯೧ ॥

**ವಿವರಣೆ–** 'ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ । ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್ ಕೇನ ಕಂ ಜಿಘ್ರೇತ್ ವಿಜ್ಞಾತಾರಮರೇ ಕೇನ ವಿಜಾನೀಯಾತ್ ಯೇನೇದ ಮಖಿಲಂ ವೇದ ತಂ ಚ ಕೇನ ವಿಜಾನೀಯಾತ್' ಎಂಬ ಶ್ರುತಿಯಿಂದಲೂ ತರ್ಕಶೈಲಿಯಿಂದ ದ್ವೈತಾಭಾವವು ದೂಷಿತವಾದ್ದರಿಂದ ಅದ್ವಿತೀಯತ್ವವು ಮೋಕ್ಷವಲ್ಲವೆಂದು ಇಲ್ಲಿ ಉಪಪಾದನೆ ಮಾಡುತ್ತಾರೆ. ಆ ವಾಕ್ಯದಲ್ಲಿ ಮೊದಲಿನ ಭಾಗವಾದ ಯತ್ರದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ ಎಂಬ ಅಂಶವನ್ನು ಈ ಶ್ಲೋಕದಲ್ಲಿ ವ್ಯಾಖ್ಯಾನ ಮಾಡುತ್ತಾರೆ. ಅವ್ಯಯಗಳಿಗೆ ಅನೇಕಾರ್ಥಗಳು ಇರುವುದರಿಂದ ಯತ್ರ ಎಂಬ ಶಬ್ದಕ್ಕೆ ಯದಿ ಎಂಬ ಅರ್ಥವನ್ನು ತೆಗೆದುಕೊಳ್ಳಬೇಕು.

ಇಲ್ಲದಿದ್ದರೆ ಮಾಯಾವಾದಿಗಳು ತದಿತರಃ ಎಂಬಲ್ಲಿ ತತ್ ಪದಕ್ಕೆ ತತ್ರ ಎಂಬ ಅರ್ಥವನ್ನು ಸ್ವೀಕರಿಸಲು ಸಾಧ್ಯವಿಲ್ಲ. ಯತ್ರ ದ್ವೈತಮಿವ ಭವತಿ ಎಂದು ದೃಷ್ಟಾಂತವಾದ ಸಂಸಾರದಲ್ಲಿ ದ್ವೈತವನ್ನು ಹೇಳಿದಂತೆ ಮೋಕ್ಷದಲ್ಲಿಯೂ ದ್ವೈತವನ್ನು ಇಟ್ಟುಕೊಳ್ಳಬೇಕು. ಸಂಸಾರದಲ್ಲಿ ದ್ವೈತವಿರುವಂತೆ ಮೋಕ್ಷದಲ್ಲೂ ದ್ವೈತವಿದ್ದರೆ ತದಿತರ ಇತರಂ ಪಶ್ಯತಿ ಮುಂತಾದವುಗಳು ಉಪಪನ್ನವಾಗುತ್ತವೆ. ಎಂದರೆ ಅನ್ಯೋನ್ಯದರ್ಶನಾದಿಗಳು ಉಪಪನ್ನವಾಗುತ್ತವೆ ಎಂದು ಅಭಿಪ್ರಾಯ.

**ಯದಾ ತ್ವಾತ್ಮೈಕ ಏವ ಸ್ಯಾನ್ಮುಕ್ತೌ ನಾನ್ಯತ್ತು ಕಿಂಚನ ।**
**ತದಾ ಕಂ ಕೇನ ಪಶ್ಯೇತ್ ಸಕಂ ಜಿಘ್ರೇತ್ ಸ್ವಂ ಚ ಕೇನ ವಾ ॥ ೨೯೨ ॥**

**ಪಶ್ಯೇದಕರಣಸ್ತಸ್ಮಾನ್ಮೋಕ್ಷಸ್ಯಾಪುರುಷಾರ್ಥತಾ ।**
**ಅತೋಽವಶ್ಯಂ ಭವೇದ್ ದ್ವೈತಂ ಮುಕ್ತೌ ಸಂಸಾರವತ್ ಸತಾಂ॥ ೨೯೩ ॥**

**ಇತಿ ಶ್ರುತಿಸ್ತರ್ಕಮುದ್ರಾಮಾಶ್ರಿತ್ಯ ದ್ವೈತಮೇವ ಯತ್ ।**
**ಸ್ಥಿರೀಕರೋತಿ ಮುಕ್ತಾನಾಂ ಕಸ್ಯ ಸ್ಯಾದದ್ವಿತೀಯತಾ ॥ ೨೯೪ ॥**

**ಅರ್ಥ –** ಯದಾ= ಯಾವಾಗ ಮೋಕ್ಷದಲ್ಲಿ, ಅಸ್ಯ= ಈ ಜೀವನಿಗೆ, ಆತ್ಮ ಏಕ ಏವಸ್ಯಾತ್= ಆತ್ಮನು ತಾನೊಬ್ಬನೇ ಇರುವುದಾದರೆ, ಅನ್ಯತ್ ಕಿಂಚನ= ಬೇರೆ ಯಾವುದೂ, ನ ತು ಸ್ಯಾತ್= ಇಲ್ಲದೆ ಇರುವುದಾದರೆ, ತದಾ= ಆಗ, ಅಕರಣಃ= ಇಂದ್ರಿಯ ರಹಿತನಾದ ಅವನು, ಕಂ= ಯಾರನ್ನು, ಕೇನ= ಯಾವ ಕರಣದಿಂದ, ಪಶ್ಯೇತ್= ನೋಡುತ್ತಾನೆ, ಸಃ= ಆ ಮುಕ್ತನು, ಕಂ= ಯಾವುದನ್ನು, ಜಿಘ್ರೇತ್= ಮೂಸಿನೋಡುತ್ತಾನೆ, ಸ್ವಂ ಚ= ತನ್ನನ್ನಾಗಲೀ, ಕೇನ ವಾ= ಯಾವ ಕರಣದಿಂದ, ಪಶ್ಯೇತ್= ನೋಡುತ್ತಾನೆ, ತಸ್ಮಾತ್= ಆ ಕಾರಣದಿಂದ, ಮೋಕ್ಷಸ್ಯ= ಮೋಕ್ಷಕ್ಕೆ, ಅವಶ್ಯಂ= ಅವಶ್ಯವಾಗಿ, ಅಪುರುಷಾರ್ಥತಾ= ಅಪುರುಷಾರ್ಥತ್ವವು, ಭವೇತ್= ಉಂಟಾಗುತ್ತದೆ, ಅತಃ= ಆದ್ದರಿಂದ, ಸತಾಂ= ಸಜ್ಜನರಿಗೆ, ಸಂಸಾರವತ್= ಸಂಸಾರದಲ್ಲಿದ್ದಂತೆ, ಮುಕ್ತೌ= ಮೋಕ್ಷದಲ್ಲಿಯೂ, ಅವಶ್ಯಂ= ಅವಶ್ಯವಾಗಿ, ದ್ವೈತಂ ಭವೇತ್= ದ್ವೈತವು ಇದ್ದೇ ಇರುತ್ತದೆ, ಇತಿ= ಈ ರೀತಿಯಾಗಿ, ಶ್ರುತಿಃ= ಈ ಶ್ರುತಿಯು, ತರ್ಕಮುದ್ರಾಮಾಶ್ರಿತ್ಯ= ತರ್ಕ ಶೈಲಿಯನ್ನು ಅವಲಂಬಿಸಿ, ಯತ್= ಯಾವ ಕಾರಣದಿಂದ, ಮುಕ್ತಾನಾಂ= ಮುಕ್ತರಿಗೆ, ದ್ವೈತಂ= ದ್ವೈತವನ್ನೇ, ಸ್ಥಿರೀಕರೋತಿ= ಸ್ಥಿರವಾಗಿ ಪ್ರತಿಪಾದನೆ ಮಾಡುತ್ತದೆಯೋ, ಆ ಕಾರಣದಿಂದ, ಅದ್ವಿತೀಯತಾ= ಅದ್ವಿತೀಯತ್ವವು, ಕಸ್ಯ ಸ್ಯಾತ್= ಯಾರಿಗೆ ಉಂಟಾಗುತ್ತದೆ?

**ಅನುವಾದ – ಮೋಕ್ಷದಲ್ಲಿ ಜೀವನೊಬ್ಬನೇ ಉಳಿದು ಬೇರೆ ಯಾವ ವಸ್ತುವೂ ಇಲ್ಲದಿದ್ದರೆ ಆಗ ಕರಣರಹಿತನಾದ ಆ ಮುಕ್ತನು ಯಾವುದರಿಂದ ಯಾವುದನ್ನು**

ನೋಡುತ್ತಾನೆ? ಯಾವುದರಿಂದ ಯಾವುದನ್ನು ಆಘ್ರಾಣಿಸುತ್ತಾನೆ? ತನ್ನ ಜ್ಞಾನವನ್ನಾದರೂ ಯಾವುದರಿಂದ ಪಡೆಯುತ್ತಾನೆ? ಆದ್ದರಿಂದ ಮೋಕ್ಷವು ಅಪುರುಷಾರ್ಥವಾಗಬೇಕಾದ ಪ್ರಸಂಗವು ಬರುತ್ತದೆ. ಆದ್ದರಿಂದ ಸಜ್ಜನರಿಗೆ ಸಂಸಾರದಲ್ಲಿದ್ದಂತೆ ಮೋಕ್ಷದಲ್ಲಿಯೂ ಅವಶ್ಯವಾಗಿ ದ್ವೈತವು ಸಿದ್ಧವಾಗುತ್ತದೆ.

**ಭಾವವಿಲಾಸಿನೀ**–ಯತ್ರತ್ವಸ್ಯ ಸರ್ವಮಾತ್ಮೈವಾಭೂದಿತ್ಯಸ್ಯ ಫಲಿತಾರ್ಥಕಥನಂ ಯದೇತ್ಯಾದಿ । ತಥಾಚಾಯಮರ್ಥಃ । ಯದಾ ಮುಕ್ತೌ । ಅಸ್ಯ ಮುಕ್ತಸ್ಯ ಸರ್ವಂ ದೇಹೇಂದ್ರಿಯಾದಿಕಂ ಯದ್ಯಾತ್ಮೈವಾಭೂದಾತ್ಮ ವ್ಯತಿರೇಕೇಣ ಕಿಮಪಿ ನಾಭೂದಿತಿ ಯಾವತ್ । ಮೌಕ್ತಸ್ತ್ರೀಪುರುಷಾದಿ ನಾನಾವಿಧಜೀವದೇಹಾನಾಂ ತದೀಂದ್ರಿಯಾಣಾಂ ತದ್ಭೋಗಾರ್ಹದಿವ್ಯಾನ್ನಪಾನೀಯಾದೀನಾಂ ಚ ದ್ವೈತಂ ಯದಿ ನ ಸ್ಯಾದಿತಿ ತಾತ್ಪರ್ಯಾರ್ಥಃ । ಸ್ವದೇಹೇಂದ್ರಿಯಾದಿಭಿಃ ಸಹ ಸ್ವಸ್ಯ ತು ದ್ವಿತ್ವಾ ವ್ಯವಹಾರಸಾಧಕತ್ವೇನ ದ್ವಿತ್ವಾಸಂಬಂಧಿತ್ವಾತ್ ದ್ವೈತಪದೋದಿತೋ ವಿಶೇಷ ಏವ ಗ್ರಾಹ್ಯಃ । ತರ್ಹಿ ತದಾ ಮುಕ್ತೌ ಸ ಮುಕ್ತಃ ಕೇನ ಕರಣೇನ ಕಿಂ ರೂಪಾದಿವಿಷಯಂ ಪಶ್ಯೇತ್ಕೇನ ಕರಣೇನ ಕಂ ಗಂಧಾದಿವಿಷಯಂ ಜಿಘ್ರೇತ್ । ವಿಜ್ಞಾತಾರಮಾತ್ಮಾನಮನ್ಯಂ ಚ ಕೇನ ಕರಣೇನ ವಿಜಾನೀಯಾತ್ । ಯೇನ ಪರಮಾತ್ಮನೇದಂ ಮುಕ್ತಾವಪೇಕ್ಷಿತ ಸದ್ರೂಪಸಂದ್ಗಂಧಾದಿವಿಷಯಂ ವೇದ ಅನುಭವತಿ । ಯತ್ ಪ್ರಸಾದಾನ್ಮೌಕ್ತ ಸರ್ವಕಾಮಾನನುಭವತೀತಿ ಯಾವತ್ । ತಂ ಪರಮಾತ್ಮಾನಂ ಕೇನ ವಿಜಾನೀಯಾತ್ । ದೇಹೇಂದ್ರಿಯಾದಿ ರಹಿತಘಟೋ ಯಥಾ ಪಶ್ಯತಿ ಜಿಘ್ರತಿ ಚ ಮುಕ್ತಃ ಸರ್ವಾನ್ ಕಾಮಾನ್ । ''ಸೋಽಶ್ನುತೇ ಸರ್ವಾನ್ ಕಾಮಾನಿ''ತಿ ಶ್ರುತೇಃ । ಅತಶ್ಚಿದ್ರೂಪನಾನಾಜೀವದೇಹೇಂದ್ರಿಯಾದೀನಾಂ ದಿವ್ಯಗಂಧಸಾನ್ನಪಾನಾದಿನಾ ದ್ವೈತಮಪಿ ಮುಕ್ತಾವವಶ್ಯಮಸ್ತೀತಿ ಯುಕ್ತಮ್ । ಇಮಮೇವಾರ್ಥಮಭಿಪ್ರೇತ್ಯೋಕ್ತಂ ಯದೇತ್ಯಾದಿನಾ । ಆಪಾದ್ಯಸ್ಯೇಷ್ಟಾಪಾದನರೂಪತ್ವಪರಿಹಾರಾಯ ತಸ್ಮಾನ್ಮೋಕ್ಷಸ್ಯಾ ಪುರುಷಾರ್ಥತಾ ಸ್ಯಾದಿತ್ಯ-ನಿಷ್ಟಾಂತರಮುಕ್ತಮ್ ॥ ೨೯೨, ೨೯೩, ೨೯೪ ॥

**ವಿವರಣೆ** – ಈ ಮೂರು ಶ್ಲೋಕಗಳಿಂದ ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ಎಂಬ ವಾಕ್ಯಶೇಷವನ್ನು ವ್ಯಾಖ್ಯಾನ ಮಾಡುತ್ತಾರೆ. ಸಂಸಾರದಲ್ಲಿ ದ್ವೈತವಿದ್ದಂತೆ ಮೋಕ್ಷದಲ್ಲಿಯೂ ದ್ವೈತವಿದ್ದರೆ ಒಬ್ಬನು ಇನ್ನೊಬ್ಬನನ್ನು ನೋಡುತ್ತಾನೆ ಮುಂತಾದ ಅರ್ಥಗಳು ಹಿಂದಿನ ವಾಕ್ಯಖಂಡದ ಅರ್ಥ. ಈ ವಾಕ್ಯಖಂಡಕ್ಕಾದರೂ ಮೋಕ್ಷದಲ್ಲಿ ದೇಹೇಂದ್ರಿಯಾದಿ- ಗಳೆಲ್ಲವೂ ಆತ್ಮನೇ ಆಗಿ ಆತ್ಮವ್ಯತಿರಿಕ್ತವಾದ ಯಾವ ವಸ್ತುವೂ ಇಲ್ಲದಿದ್ದರೆ ಮುಕ್ತರಾದ ಸ್ತ್ರೀಪುರುಷಾದಿ ನಾನಾವಿಧ ಜೀವರ ದೇಹಗಳೂ ಅವುಗಳ ಇಂದ್ರಿಯಗಳು ಅವುಗಳ ಭೋಗಕ್ಕೆ ಅರ್ಹವಾದ ದಿವ್ಯಾನ್ನಪಾನಾದಿಗಳು ಒಂದು ಪಕ್ಷ ಇಲ್ಲದಿದ್ದರೆ ಎಂದು ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ಎಂಬ ಭಾಗಕ್ಕೆ ಅರ್ಥವಾಗುತ್ತದೆ. ಇಲ್ಲಿ ದ್ವೈತ ಶಬ್ದದಿಂದ ತನ್ನ ಮುಕ್ತದೇಹೇಂದ್ರಿಯಗಳಿಂದ ದ್ವಿತ್ವವ್ಯವಹಾರಕ್ಕೆ ಕಾರಣವಾದ ವಿಶೇಷವನ್ನೇ ತೆಗೆದುಕೊಳ್ಳಬೇಕು. ಹಾಗಾದರೆ ಆಗ ಆ ಮುಕ್ತನು ಯಾವ ಚಕ್ಷುರಾದಿ ಕರಣಗಳಿಂದ ನೋಡುತ್ತಾನೆ? ವಿಜ್ಞಾತೃವಾದ ತನ್ನನ್ನೂ

ಸಹ ಯಾವ ಕರಣದಿಂದ ತಿಳಿಯುತ್ತಾನೆ? ಯಾವ ಪರಮಾತ್ಮನ ಅನುಗ್ರಹದಿಂದ ಮೌಕ್ತ ಸಕಲ ಕಾಮಗಳನ್ನೂ ಅನುಭವಿಸುತ್ತಾನೆಯೋ ಅಂತಹ ಪರಮಾತ್ಮನನ್ನಾದರೂ ಯಾವ ಕರಣದಿಂದ ತಿಳಿಯುತ್ತಾನೆ? ದೇಹೇಂದ್ರಿಯಾದಿರಹಿತವಾದ ಘಟಕ್ಕೆ ಹೇಗೆ ಯಾವ ಜ್ಞಾನವೂ ಇಲ್ಲವೋ ಅದರಂತೆ ದೇಹೇಂದ್ರಿಯಾದಿ ರಹಿತನಾದ ಮುಕ್ತನಿಗೂ ಯಾವ ಜ್ಞಾನವೂ ಇರಲು ಸಾಧ್ಯವಿಲ್ಲ. ಆದರೆ ಈ ಮುಕ್ತನು ನೋಡುತ್ತಾನೆ. ಕೇಳುತ್ತಾನೆ, ಸರ್ವಕಾಮಗಳನ್ನೂ ಭೋಗಿಸುತ್ತಾನೆ. ಏಕೆಂದರೆ ಸೋಶ್ನುತೇ ಸರ್ವಾನ್ ಕಾಮಾನ್ ಎಂಬ ಶ್ರುತಿಯು ಇಂತಹ ಕಾಮಭೋಗವನ್ನು ಹೇಳುತ್ತದೆ. ಆದ್ದರಿಂದ ನಾನಾ ಜೀವರ ಚಿದ್ರೂಪವಾದ ದೇಹೇಂದ್ರಿಯಗಳನ್ನು ದಿವ್ಯರಸಗಂಧ ಅನ್ನಪಾನಾದಿಗಳನ್ನು ಒಪ್ಪಿ ಮೋಕ್ಷದಲ್ಲಿಯೂ ದ್ವೈತವನ್ನು ಒಪ್ಪಬೇಕು. ಯಾವ ಜ್ಞಾನವೂ ಇಲ್ಲದಿದ್ದರೆ ಮೋಕ್ಷವು ಪುರುಷಾರ್ಥವೇ ಆಗುವುದಿಲ್ಲ ಎಂದು ತರ್ಕಮುದ್ರೆಯಿಂದ ಈ ವಾಕ್ಯವು ಮೋಕ್ಷದಲ್ಲಿ ದ್ವೈತವನ್ನು ಪ್ರತಿಪಾದಿಸುತ್ತದೆ ಎಂದು ಅಭಿಪ್ರಾಯ.

**ಯದಿ ವಸ್ತುಸ್ಥಿತಿಕಥಾ ವೃಥಾಭೂತ್ ತರ್ಹಿ ತೇ ಶ್ರುತಿಃ ।**
**ವಿಜ್ಞಾತಾರಮರೇ ಕೇನ ವಿಜಾನೀಯಾದಿತಿ ಸ್ಫುಟಮ್ ॥ ೨೯೫ ॥**

**ಯತ್ ಸ್ವಜ್ಞಾನಂ ಚ ನೇತ್ಯಾಹ ತತಸ್ತಾರ್ಕಿಕಮೋಕ್ಷವಾಕ್ ।**
**ಅಭೂದಿಯಂ ವೇದವಾಣೀ ಕೃಪಾಣೀ ತೇ ಭವೇದ್ ಧ್ರುವಮ್ ॥ ೨೯೬ ॥**

**ಅರ್ಥ** – ಯದಿ= ಒಂದು ಪಕ್ಷ ಈ ವಾಕ್ಯವು, ತೇ= ನಿನ್ನ ರೀತ್ಯಾ, ವಸ್ತುಸ್ಥಿತಿಕಥಾ= ವಸ್ತುಸ್ಥಿತಿಯನ್ನು ಮಾತ್ರ ಹೇಳುವುದಾದರೆ, ಶ್ರುತಿಃ= ಈ ಶ್ರುತಿಯು, ತರ್ಹಿ= ಆಗ, ತೇ= ನಿನಗೆ, ವೃಥಾಭೂತ್= ವ್ಯರ್ಥವಾಗುತ್ತದೆ, ಅರೇ= ಎಲೌ ಗಾರ್ಗಿಯೇ, ವಿಜ್ಞಾತಾರಂ= ವಿಜ್ಞಾತೃವಾದ ತನ್ನನ್ನು, ಕೇನ= ಯಾವ ಕರಣದಿಂದ, ವಿಜಾನೀಯಾತ್= ತಿಳಿಯುತ್ತಾನೆ, ಇತಿ= ಎಂದು, ಸ್ಫುಟಂ= ಸ್ಪಷ್ಟವಾಗಿ, ಸ್ವಜ್ಞಾನಂ ಚ= ತನ್ನ ಜ್ಞಾನವೂ ಕೂಡ, ನ ಇತಿ= ಇಲ್ಲವೆಂದು, ಯತ್= ಯಾವ ಕಾರಣದಿಂದ, ಸ್ಫುಟಂ= ಸ್ಪಷ್ಟವಾಗಿ, ಆಹ= ಹೇಳುತ್ತದೆಯೋ, ಅತಃ= ಆದ್ದರಿಂದ ಈ ವಾಕ್ಯವು, ತಾರ್ಕಿಕ ಮೋಕ್ಷವಾಕ್= ತಾರ್ಕಿಕರ ಮೋಕ್ಷವನ್ನು ಹೇಳುವ ವಾಕ್ಯವಾಯಿತು ಆದ್ದರಿಂದ, ಇಯಂ ವೇದವಾಣೀ= ಈ ವೇದವಾಕ್ಯವು, ತೇ= ನಿನಗೆ, ಧ್ರುವಂ= ನಿಶ್ಚಯವಾಗಿ, ಕೃಪಾಣೀ ಅಭೂತ್= ಖಡ್ಗವೇ ಆಯಿತು.

**ಅನುವಾದ – ಈ ಶ್ರುತಿಯು ವಸ್ತುಸ್ಥಿತಿಯನ್ನು ಮಾತ್ರ ನಿರೂಪಿಸುತ್ತದೆ ಎಂದು ಹೇಳಿದರೆ ಈ ಶ್ರುತಿಯು ನಿನಗೆ ವ್ಯರ್ಥವೇ ಆಗುತ್ತದೆ. ವಿಜ್ಞಾತೃವಾದ ತನ್ನನ್ನಾದರೂ ಯಾವ ಕರಣದಿಂದ ತಿಳಿಯುತ್ತಾನೆ ಎಂದು ಸ್ಪಷ್ಟವಾಗಿ ತನ್ನ ಜ್ಞಾನವೂ ಇಲ್ಲವೆಂದು ಹೇಳಿರುವುದರಿಂದ ಈ ವಾಕ್ಯವು ತಾರ್ಕಿಕರ ಮೋಕ್ಷವನ್ನು ಹೇಳುವ ವಾಕ್ಯವೇ ಆಯಿತು. ಆದ್ದರಿಂದ ಈ ವೇದವಾಕ್ಯವು ನಿನಗೆ ನಿಶ್ಚಯವಾಗಿ ಖಡ್ಗಪ್ರಾಯವೇ ಆಯಿತು.**

**ಭಾವವಿಲಾಸಿನೀ–** ಅಸ್ಮದುಕ್ತತರ್ಕಮುದ್ರಾಮನಂಗೀಕೃತ್ಯ ಮುಕ್ತಾವಾತ್ಮ ವ್ಯತಿರಿಕ್ತಸ್ಯಾ-ಭಾವಾತ್ಕಿಮಪಿ ನ ಪಶ್ಯೇನ್ನಾಪಿ ಜಿಘ್ರೇದಿತಿ ವಸ್ತುಸ್ಥಿತಿಪರತಯಾ ವ್ಯಾಖ್ಯಾತುರ್ದೋಷಮಾಹ **–ಯದಿತಿ** ॥ ತತಃ ಪರಜ್ಞಾನವಸ್ವಜ್ಞಾನಸ್ಯಾಪ್ಯಭಾವಾತ್ ತಾರ್ಕಿಕ ಮೋಕ್ಷವಾಕ್ । ಜ್ಞಾನಮಾತ್ರ-ನಾಸ್ತಿತ್ವರೂಪ ತಾರ್ಕಿಕಮೋಕ್ಷಪ್ರತಿಪಾದಕವಾಕ್ಯಂ ಸ್ಯಾತ್ । ವಸ್ತುಸ್ಥಿತಿ ಪರತ್ವಾಂಗೀಕಾರೇ ''ವಿಜ್ಞಾತಾರಮರೇ ಕೇನ ವಿಜಾನೀಯಾದಿ''ತ್ಯಪಿ ವಸ್ತುಸ್ಥಿತಿಃ ಸ್ಯಾತ್ । ಏವಂ ಚ ತವಾಪಿ ಸಿದ್ಧಾಂತಃ ಸ್ಯಾತ್ । ಪರಸ್ಯೈವಾಭಾವೇನ ಪರಜ್ಞಾನಾಭಾವಮಾತ್ರಸ್ಯ ತವಾನುಕೂಲತ್ವೇಽಪಿ ಸುಖಜ್ಞಾನಾತ್ಮಕ ಸ್ವರೂಪಮಾತ್ರಸ್ಯ ತದಾಪಿ ಸತ್ತ್ವೇನ ತದುಭಯಾನುಭವಸ್ಯ ತ್ವಯಾಪ್ಯಂಗೀಕಾರಾತ್ । ನ ಚ ವಾಚ್ಯಂ ಸ್ವಾವೇದ್ಯತ್ವರೂಪಸ್ವಪ್ರಕಾಶತ್ವಂ ವದತೋ ಮಮ ತದನುಭಾವೇಪಿ ನಾಪೇಕ್ಷಿತ ಇತಿ । ತಥಾ ಸತಿ ಮೋಕ್ಷಸ್ಯಾ ಪುರುಷಾರ್ಥತ್ವ ಪ್ರಸಂಗಾತ್ । ತವ ಮತೇಽಪಿ ಸುಖಜ್ಞಾನಾತ್ಮಕ ಮನಸ ಇವ ತದನುಭವಿತೃತ್ವಾಭಾವೇಽಚೇತನತ್ವಸ್ಯಾತ ಏವಾಪುರುಷಾರ್ಥಭಾಕ್ತ್ವಸ್ಯಚಾ ಪರಿಹಾರೇಣ ತದನುಭಾವಾವಶ್ಯಂ ಭಾವಾತ್ । ಸ್ವಾವೇದ್ಯತ್ವಮಾತ್ರಸ್ಯ ಘಟೇಽಪಿ ಸತ್ತ್ವೇನ ಜ್ಞಾನರೂಪತ್ವೇ ಸತಿ ಸ್ವಾವೇದ್ಯತ್ವಸ್ಯ ಮನಸಿ ವಿದ್ಯಮಾನತ್ವೇನ ಚ ಸ್ವವಿಷಯಪ್ರಕಾಶತ್ವಸ್ಯ ಏವ ಸ್ವಪ್ರಕಾಶತ್ವಸ್ಯ ವಕ್ತವ್ಯತ್ವಾಚ್ಚ । ಏವಂ ಚ ಸ್ವವಿಷಯಜ್ಞಾನಭಾವಕಥನಂ ನ ಕಥಂಚನ ವಸ್ತುಸ್ಥಿತಿಃ ಸ್ಯಾತ್ । ಅತಸ್ತರ್ಕಮುದ್ರೈವ ಪರೇಣಾಪ್ಯಾಶ್ರಯಣೀಯೇತಿ ಭಾವಃ ॥ ೨೯೫-೨೯೬ ॥

**ವಿವರಣೆ** – ತರ್ಕಮುದ್ರೆಯನ್ನು ಅವಲಂಬಿಸದೆ ಕೇವಲ ವಸ್ತುಸ್ಥಿತಿಕಥನವೆಂದು ಹೇಳಿದರೆ ಶ್ರುತಿಯು ವ್ಯರ್ಥವಾಗುತ್ತದೆ. ಜೊತೆಗೆ ಮುಕ್ತನಿಗೆ ತನ್ನ ಜ್ಞಾನವಾದರೂ ಹೇಗೆ ಉಂಟಾಗುತ್ತದೆ ಎಂದು ಆಕ್ಷೇಪಿಸಿ ತನ್ನ ಜ್ಞಾನವೂ ಇಲ್ಲವೆಂದು ಹೇಳುವುದರಿಂದ ಈ ವಾಕ್ಯದಲ್ಲಿ ಹೇಳುವ ಮೋಕ್ಷಸ್ವರೂಪವು ತಾರ್ಕಿಕರು ಹೇಳುವ ಜ್ಞಾನಾದಿರಹಿತವಾದ ಮೋಕ್ಷಸ್ವರೂಪವೇ ಆಗುತ್ತದೆ. ಏಕೆಂದರೆ ತತ್ ಕೇನ ಕಂ ಪಶ್ಯೇತ್ ಎಂಬುದು ದರ್ಶನಾಭಾವರೂಪವಾದ ವಸ್ತುಸ್ಥಿತಿಯನ್ನು ಹೇಳುವುದಾದರೆ ವಿಜ್ಞಾತಾರಮರೇ ಕೇನ ವಿಜಾನೀಯಾತ್ ಎಂಬ ಅಂಶವು ಸ್ವಜ್ಞಾನಾಭಾವವನ್ನೇ ಹೇಳಬೇಕಷ್ಟೆ? ತಥಾಚ ಪರಜ್ಞಾನವು ಇಲ್ಲವೆಂದು ಹೇಳುವ ಅಂಶವು ನಿನಗೆ ಅನುಕೂಲವಾದರೂ ಸ್ವಜ್ಞಾನವು ಇಲ್ಲವೆಂದು ಹೇಳುವ ಅಂಶವು ನಿನಗೆ ಅಪಸಿದ್ಧಾಂತದೋಷವನ್ನು ತರುವುದರಿಂದ ಈ ವಾಕ್ಯವು ನಿನ್ನ ಪಾಲಿಗೆ ಪ್ರಹಾರ ಮಾಡುವ ಖಡ್ಗವೇ ಆಯಿತು ಎಂದು ಅಭಿಪ್ರಾಯ. ಆದ್ದರಿಂದ ವಸ್ತುಸ್ಥಿತಿಕಥನವೆಂದು ಹೇಳದೆ ತರ್ಕಮುದ್ರೆಯನ್ನೇ ಅವಲಂಬಿಸಿ ಪರನಾದರೂ ಈ ವಾಕ್ಯಕ್ಕೆ ಅರ್ಥವನ್ನು ಹೇಳಬೇಕು ಎಂದು ಅಭಿಪ್ರಾಯ.

ನ ಪ್ರೇತ್ಯಸಂಜ್ಞೇತಿ ಚ ವಾಕ್ ಪ್ರಾಕೃತಜ್ಞಾನಶೂನ್ಯತಾಂ ।
ಮುಕ್ತಸ್ಯಾಹ ಪರಂ ನೋ ಚೇಜ್ಜಿಗ್ಯುಸ್ತಾರ್ಕಿಕಬಾಲಕಾಃ ॥ ೨೯೭ ॥

**ಅರ್ಥ** – ನ ಪ್ರೇತ್ಯಸಂಜ್ಞೇತಿ ಚ ವಾಕ್= ನ ಪ್ರೇತ್ಯಸಂಜ್ಞಾಸ್ತಿ ಎಂಬ ಶ್ರುತಿವಚನವು, ಮುಕ್ತಸ್ಯ= ಮುಕ್ತನಿಗೆ, ಪರಂ= ಕೇವಲ, ಪ್ರಾಕೃತಜ್ಞಾನಶೂನ್ಯತಾಂ= ಮನೋವೃತ್ತಿ-ರೂಪವಾದ ಜ್ಞಾನಶೂನ್ಯತ್ವವನ್ನು, ಆಹ= ಹೇಳುತ್ತದೆ, ನೋ ಚೇತ್= ಇಲ್ಲದಿದ್ದರೆ (ಸ್ವರೂಪಜ್ಞಾನದ ಅಭಾವವನ್ನು ಹೇಳಿದರೆ) ತಾರ್ಕಿಕ ಬಾಲಕಾಃ= ತಾರ್ಕಿಕ ಬಾಲಕರೇ, ಜಿಗ್ಯುಃ= ಜಯಿಸಿದರು.

**ಅನುವಾದ** – ನ ಪ್ರೇತ್ಯಸಂಜ್ಞೇತಿ ಎಂಬ ವಾಕ್ಯವಾದರೂ ಮುಕ್ತನಿಗೆ ಕೇವಲ ಮನೋವೃತ್ತಿರೂಪವಾದ ಜ್ಞಾನರಾಹಿತ್ಯವನ್ನು ಹೇಳುತ್ತದೆ. ಇಲ್ಲದಿದ್ದರೆ ತಾರ್ಕಿಕ ಬಾಲಕರೇ ಜಯಿಸಿದರು.

**ಭಾವವಿಲಾಸಿನೀ**– ಅತ ಏವ ನ ಪ್ರೇತ್ಯಸಂಜ್ಞಾಸ್ತೀತಿ ವಾಕ್ಯಸ್ಯ ಸ್ವರೂಪಭೂತ ಜ್ಞಾನ-ಮಂಗೀಕುರ್ವತಾ ತ್ವಯಾ ಮಯಾ ಚಾನ್ಯ ಏವಾರ್ಥೋ ವಕ್ತವ್ಯ ಇತ್ಯಾಹ – ನ ಪ್ರೇತ್ಯೇತಿ ॥ ನೋಚೇತ್ ಪ್ರಾಕೃತಜ್ಞಾನಮಾತ್ರಾಪರಿಹಾರಿಣೇ ನೋ ಚೇತ್ । ಜ್ಞಾನಮಾತ್ರನಿಷೇಧಿ ಕಾಚೇದಿತ್ಯರ್ಥಃ ॥ ೨೯೭ ॥

**ವಿವರಣೆ** – ಇನ್ನು ನಪ್ರೇತ್ಯಸಂಜ್ಞಾಸ್ತಿ ಎಂಬ ಬೃಹದಾರಣ್ಯಕ ವಾಕ್ಯವನ್ನು ವಿಮರ್ಶೆ ಮಾಡುತ್ತಾರೆ. ಸಂಜ್ಞಾನಾಸ್ತಿ ಎಂದರೆ ಕೇವಲ ಪ್ರಾಕೃತಜ್ಞಾನವಿಲ್ಲವೆಂದು ಅರ್ಥ ಮಾಡಬೇಕು. ಸ್ವರೂಪಜ್ಞಾನವೂ ಇಲ್ಲವೆಂದು ಅರ್ಥಮಾಡಿದರೆ ಆ ಮೋಕ್ಷವು ಸರ್ವಥಾ ಜ್ಞಾನಶೂನ್ಯರೂಪವಾದ ತಾರ್ಕಿಕರ ಮೋಕ್ಷವಾಗುವುದರಿಂದ ತಾರ್ಕಿಕ ಬಾಲಕರೇ ಗೆದ್ದರು ಎಂದು ಅಭಿಪ್ರಾಯ.

**ಕಿಂಚ ನ ಪ್ರೇತ್ಯ ಸಂಜ್ಞಾಸ್ತೀತ್ಯುಕ್ತಿರ್ಮೋಹನಿಪಾತನಮ್ ।**
**ಇತಿ ಶ್ರುತೇಶ್ಚ ನ ಜ್ಞಾನಮಾತ್ರಂ ಸಾ ವಾಙ್ನಿಷೇಧತಿ ॥ ೨೯೮ ॥**

**ಅರ್ಥ** – ಕಿಂಚ= ಮತ್ತು, ನ ಪ್ರೇತ್ಯಸಂಜ್ಞಾಸ್ತಿ ಇತ್ಯುಕ್ತಿಃ= ಮುಕ್ತನಾದವನಿಗೆ ಜ್ಞಾನವಿಲ್ಲ ಎಂಬ ಈ ವಚನವು, ಮೋಹನಿಪಾತನಂ= ಭ್ರಾಂತಿಯಲ್ಲಿ ಕೆಡಹುವ ಮಾತು, ಇತಿ= ಎಂದು, ಶ್ರುತೇಶ್ಚ= ಶ್ರುತಿವಾಕ್ಯವಿರುವುದರಿಂದಲೂ, ಸಾ ವಾಕ್= ಆ ವಾಕ್ಯವು, ಜ್ಞಾನಮಾತ್ರಂ= ಸರ್ವವಿಧವಾದ ಜ್ಞಾನವನ್ನು, ನ ನಿಷೇಧತಿ= ನಿಷೇಧ ಮಾಡುವುದಿಲ್ಲ.

**ಅನುವಾದ** – ಮತ್ತು ನ ಪ್ರೇತ್ಯಸಂಜ್ಞಾಸ್ತಿ ಎಂಬ ವಚನವು ಮೋಹದಲ್ಲಿ ಕೆಡಹುವಂತಹದು ಎಂಬ ಶ್ರುತಿ ಇರುವುದರಿಂದ ಆ ವಾಕ್ಯವು ಸರ್ವಜ್ಞಾನವನ್ನು ನಿಷೇಧ ಮಾಡುವುದಿಲ್ಲ.

**ಭಾವವಿಲಾಸಿನೀ**– ಅಪಿ ಚಾತ್ರೈವ ಮಾ ಭಗವಾನ್ ಮೋಹಾಂತಮಾಪೀಪತತ್ । ನ ಪ್ರೇತ್ಯಸಂಜ್ಞಾಸ್ತೀತ್ಯುತ್ತರವಾಕ್ಯಪರ್ಯಾಲೋಚನಯಾಪಿ ನ ಸಾ ಶ್ರುತಿಜ್ಞಾನಮಾತ್ರ ನಿಷೇಧಿ

ಕೇತ್ಯಾಹ – **ಕಿಂಚೇತಿ** ॥ ಇತಿ ಶ್ರುತೇರಿತ್ಯರ್ಥ ಪ್ರತಿಪಾದಿಕಾಯಾ ಅತ್ರೈವೇತಿ ಶ್ರುತೇಃ । ತದೇವ ವಾಕ್ಯಮನೂದ್ಯ ತದರ್ಥಸ್ಯ ಮೋಹಾಖ್ಯನಾಶೇ ಪಾತನರೂಪತ್ವೋಕ್ತೇಶ್ಚ ನ ಸ ವಾಕ್ ಜ್ಞಾನಮಾತ್ರನಿಷೇಧಿಕೇತಿ ಭಾವಃ ॥ ೨೮೮ ॥

**ವಿವರಣೆ** – ನ ಪ್ರೇತ್ಯಸಂಜ್ಞಾಸ್ತಿ ಎಂದು ಯಾಜ್ಞವಲ್ಕ್ಯರು ಹೇಳಿದಾಗ ಮುಕ್ತನಾದವನಿಗೆ ಜ್ಞಾನವೇ ಇಲ್ಲವೆಂಬ ಅರ್ಥವನ್ನು ಗ್ರಹಿಸಿ ಗಾರ್ಗಿಯು ಅತ್ರೈವ ಮಾ ಭಗವಾನ್ ಮೋಹಾಂತಮಾಪಿಪತ್ ಎಂದು ಇಲ್ಲಿ ನನ್ನನ್ನು ಮೋಹದಲ್ಲಿ ಕೆಡವಿದಿರಿ ಎಂದು ಹೇಳುತ್ತಾರೆ. ಎಂದರೆ ಮುಕ್ತರಿಗೆ ಜ್ಞಾನಸಾಮಾನ್ಯಾಭಾವವನ್ನು ಒಪ್ಪಿದರೆ ಅದು ಅಂಗೀಕಾರಾರ್ಹವಲ್ಲ ಎಂದು ಗಾರ್ಗಿಯ ಅಭಿಪ್ರಾಯ. ಆದ್ದರಿಂದ ಆ ವಾಕ್ಯವು ಮುಕ್ತರ ಸ್ವರೂಪಜ್ಞಾನವನ್ನು ನಿಷೇಧ ಮಾಡುವುದಿಲ್ಲ ಬಾಹ್ಯಜ್ಞಾನವನ್ನು ಮಾತ್ರ ನಿಷೇಧ ಮಾಡುತ್ತದೆ ಎಂದು ಅಭಿಪ್ರಾಯ.

ಯತ್ರ ವಸ್ತು ದ್ವೈತಮಿವ ದ್ವಿತ್ರ ಲಗ್ನಂ ಮನೋ ಭವೇತ್ ।
ತತ್ರೇತರಃ ಪುಮಾನ್ ಪಶ್ಯೇದಿತರಾರ್ಥಾನಪಿ ಸ್ಫುಟಮ್ ॥ ೨೮೯ ॥

**ಅರ್ಥ** – ಯತ್ರ= ಎಲ್ಲಿ, ವಸ್ತುದ್ವೈತಮಿವ= ಎರಡು ವಸ್ತುಗಳು ಇದ್ದಂತೆ, ಮನಃ= ಮನಸ್ಸು, ದ್ವಿತ್ರಲಗ್ನಂ= ಎರಡು ಮೂರು ಕಡೆಗಳಲ್ಲಿ ಆಸಕ್ತವಾಗಿ, ಭವೇತ್= ಇರುತ್ತದೆಯೋ, ತತ್ರ= ಆ ಸ್ಥಳದಲ್ಲಿ, ಇತರಃ= ಭಿನ್ನನಾದ, ಪುಮಾನ್= ಪುರುಷನು, ಇತರಾರ್ಥಾನ್= ಇತರವಾದ ಅರ್ಥವನ್ನು, ಸ್ಫುಟಂ= ಸ್ಪಷ್ಟವಾಗಿ, ಪಶ್ಯೇತ್= ನೋಡುತ್ತಾನೆ.

**ಅನುವಾದ** – ಎಲ್ಲಿ ಅನೇಕ ವಸ್ತುಗಳಿದ್ದು ಮನಸ್ಸು ಎರಡು ಮೂರು ವಸ್ತುಗಳಲ್ಲಿ ಲಗ್ನವಾಗುತ್ತದೆಯೋ ಅಲ್ಲಿ ಪುರುಷನು ಭಿನ್ನಭಿನ್ನ ವಸ್ತುಗಳನ್ನು ಸ್ಪಷ್ಟವಾಗಿ ನೋಡುತ್ತಾನ.

**ಭಾವವಿಲಾಸಿನೀ**– ಯತ್ರ ತ್ವಸ್ಯೇತಿ ವಾಕ್ಯಸ್ಯ ಯಥಾಸ್ಥಿತ ಪದೈರೇವ ಲಭ್ಯಮಾರ್ಥಾಂತರಮಾಹ – **ಯತ್ರ ವಸ್ತು ದ್ವೈತಮಿವೇತಿ** ॥ ವಸ್ತೂನಾಂ ದ್ವೈತಂ ನಾನಾತ್ವಮಿವೇತ್ಯರ್ಥಃ । ಯಥಾ ವಸ್ತು-ನಾನಾತ್ವಂ ನಾನಾ ವಸ್ತುಷು ಲಗ್ನಂ ಭವತಿ ತಥೇತಿಯಾವತ್ । ದ್ವಿತ್ರಲಗ್ನಂ ದ್ವಿತ್ರೇಷು ವಸ್ತುಷು ಲಗ್ನಂ ಮನೋ ಭವೇದ್ಯಥಾ ಯಥಾ ವಸ್ತುಷು ವೈಚಿತ್ರ್ಯಮತ್ತಿ ತಥಾ । ಯಥಾತಥಾ ತತ್ತದರ್ಥ-ದಿದೃಕ್ಷಾಪಿ ಯತ್ರ ದೇಶೇ ಭವೇದಿತಿ ಯಾವತ್ । ದೃಷ್ಟಾಂತಕಥನಾದೇವ ತದನು-ಕೂಲದಾರ್ಷ್ಟಾಂತಿಕೋಹನಮಪಿ ಪದಲಭ್ಯಮೇವೇತಿ ದ್ರಷ್ಟವ್ಯಮ್ । ತದಿತ್ಯಸ್ಯಾರ್ಥ ಕಥನಂ ತತ್ರೇತಿ ॥ ೨೮೯ ॥

**ವಿವರಣೆ** – ಯತ್ರಹಿದ್ವೈತಮೇವ ಭವತಿ ಎಂಬ ಶ್ರುತಿಯಲ್ಲಿ ಶಬ್ದಗಳಿಗೆ ಸ್ವಾಭಾವಿಕವಾಗಿ ತೋರುವ ಒಂದು ಹೊಸ ಅರ್ಥವನ್ನು ಇಲ್ಲಿ ನಿರೂಪಿಸುತ್ತಾರೆ.

ಯತ್ರ ತ್ವೇಕಾಗ್ರಮನಸಃ ಸರ್ವಮಿಷ್ಟಂ ಚ ಯೋಗಿನಃ ।
ಆತ್ಮೈವಾಭೂತ್ ತತ್ರ ಕೇನ ತತೋಽನ್ಯಂ ಕಂ ಸ ಪಶ್ಯತಿ ॥ ೩೦೦ ॥

ಕಂ ಜಿಘ್ರತಿ ಸ್ವಕಂ ರೂಪಂ ಕೇನ ವಾಽಸೌ ಪ್ರಪಶ್ಯತಿ ।
ಯೇನೇದಮಖಿಲಂ ವೇದ ಪಶ್ಯೇದ್ವಾ ಕೇನ ತಂ ಗುರುಮ್ ।
ಇತ್ಯಾತ್ಮರತಮಸ್ತೌದ್ವಾ ಯತ್ರ ತ್ವಸ್ಯೇತಿ ವಾಗಿಯಮ್ ॥ ೩೦೧ ॥

**ಅರ್ಥ–** ಯತ್ರ ತು= ಆದರೆ ಎಲ್ಲಿ (ತಪಸ್ಸಿಗೂ ನಿಯುಕ್ತವಾದ ಪ್ರದೇಶದಲ್ಲಿ), ಯೋಗಿನಃ= ಯೋಗಿಯ, ಏಕಾಗ್ರಮನಸಃ= ಏಕಾಗ್ರವಾದ ಮನಸ್ಸಿಗೆ, ಸರ್ವಮಿಷ್ಟಂ= ಇಷ್ಟವಾದುದೆಲ್ಲವೂ, ಆತ್ಮೈವಾಭೂತ್= ಪರಮಾತ್ಮನೇ ಆಗುತ್ತಾನೆಯೋ, ತತ್ರ= ಅಲ್ಲಿ, ಕೇನ= ಯಾವ ಕರಣದಿಂದ, ತತೋನ್ಯಂ= ಪರಮಾತ್ಮ ಭಿನ್ನವಾದ, ಕಂ= ಯಾವ ವಸ್ತುವನ್ನು, ಸಃ= ಆ ಜ್ಞಾನಿಯು, ಪಶ್ಯತಿ= ನೋಡುತ್ತಾನೆ? ಕಂ= ಯಾವ ವಸ್ತುವನ್ನು, ಜಿಘ್ರತಿ= ಆಘ್ರಾಣಿಸುತ್ತಾನೆ, ಸ್ವಕಂ ರೂಪಂ ವಾ= ತನ್ನ ರೂಪವನ್ನಾದರೂ, ಅಸೌ= ಈ ಯೋಗಿಯು, ಕೇನ= ಯಾವ ಕರಣದಿಂದ, ಪ್ರಪಶ್ಯತಿ= ನೋಡುತ್ತಾನೆ, ಯೇನ= ಯಾವ ಗುರುವಿನಿಂದ, ಇದಮಖಿಲಂ= ಈ ಭಗವನ್‌ಮಹಿಮೆ ಎಲ್ಲವನ್ನೂ ತಿಳಿದಿದ್ದಾನೆಯೋ, ತಂ ಗುರುಂ= ಆ ಗುರುವನ್ನಾದರೂ, ಕೇನ ವಾ= ಯಾವ ಸಾಧನದಿಂದ, ಪಶ್ಯೇತ್= ನೋಡುತ್ತಾನೆ, ಇತಿ= ಈ ರೀತಿಯಾಗಿ, ಇಯಂ= ಈ, ಯತ್ರತ್ವಸ್ಯೇತಿ ವಾಕ್= ಯತ್ರತ್ವಸ್ಯ ಎಂಬ ವಚನವು, ಆತ್ಮರತಂ= ಪರಮಾತ್ಮ ರತವಾದ ಜ್ಞಾನಿಯನ್ನು, ಅಸ್ತೌದ್ವಾ= ಸ್ತೋತ್ರವನ್ನು ಮಾಡುತ್ತಿದೆ ಎಂದೂ ಅರ್ಥವನ್ನು ಮಾಡಬಹುದು.

**ಅನುವಾದ –** ಯಾವ ತಪಸ್ಸಿಗೆ ಯೋಗ್ಯವಾದ ವಿವಿಕ್ತಪ್ರದೇಶದಲ್ಲಿ ಯೋಗಿಯ ಏಕಾಗ್ರ ಮನಸ್ಸಿಗೆ ಇಷ್ಟವಾದ ಸರ್ವವೂ ಪರಮಾತ್ಮನೇ ಆಗುತ್ತಾನೆಯೋ ಅಂತಹ ಸ್ಥಳದಲ್ಲಿ ಆ ಯೋಗಿಯು ಪರಮಾತ್ಮನಿಂದ ಭಿನ್ನವಾದ ಯಾವ ವಸ್ತುವನ್ನು ಯಾವ ಕರಣದಿಂದ ನೋಡುತ್ತಾನೆ? ಯಾವ ಕರಣದಿಂದ ಆಘ್ರಾಣಿಸುತ್ತಾನೆ. ತನ್ನ ರೂಪವನ್ನೇ ಆದರೂ ಯಾವ ಕರಣದಿಂದ ನೋಡುತ್ತಾನೆ? ಯಾವ ಗುರುವಿನ ಉಪದೇಶಬಲದಿಂದ ಪರಮಾತ್ಮನನ್ನೇ ನೋಡುತ್ತಿದ್ದಾನೆಯೋ ಆ ಗುರುವನ್ನಾದರೂ ಯಾವ ಕರಣದಿಂದ ನೋಡುತ್ತಾನೆ ಎಂಬುದಾಗಿ ಯತ್ರತ್ವಸ್ಯ ಎಂಬ ಈ ವಾಕ್ಯವು ಆತ್ಮರತನಾದ ಯೋಗಿಯನ್ನೇ ಸ್ತೋತ್ರ ಮಾಡುತ್ತದೆ ಎಂದೂ ಅರ್ಥವನ್ನು ಮಾಡಬಹುದು.

**ಭಾವವಿಲಾಸಿನೀ–** ಯತ್ರ ತಪೋಯೋಗ್ಯವಿವಿಕ್ತಪ್ರದೇಶೇ । ಇಮಮೇವ ವಿಶೇಷಂ ದ್ಯೋತಯಿತುಂ ಶ್ರುತೌ ತು ಶಬ್ದಃ । ಸರ್ವಮಿಷ್ಟಂ ಸರ್ವಮಿತಿ ವಿಶೇಷಣಸ್ಯ ವಿಶೇಷ್ಯ ಸಾಪೇಕ್ಷತ್ವಾತ್ತತ್ಪೂರಣಾಯೇಷ್ಟಮಿತ್ಯುಕ್ತಮ್ । ದಿದೃಕ್ಷಾ ಜಿಘ್ರಾಶಾ ಜಿಘೃಕ್ಷಾದೀನಾಮಪಿ ವಿಷಯ

ಇತಿ ಯಾವತ್ । ಸರ್ವೇಂದ್ರಿಯೈರಪಿ ಹರಿಮೇವಾನುಭವಾಮೀತಿ ಮನೋಽಭೂದಿತಿ ಭಾವಃ। ಅಸ್ಯೇತ್ಯಸ್ಯಾರ್ಥ ಕಥನಂ ಯೋಗಿನ ಇತಿ। ಕೇನ ಕರಣೇನ ಕಂ ಪದಾರ್ಥಮ್ । ಸರ್ವೇಂದ್ರಿಯಾಣಾತ್ಮನ್ಯೇವೋಪರತತ್ವೇನ ಬಾಹ್ಯಪದಾರ್ಥೇಭ್ಯೋ ನಿವೃತ್ತೇರಿತಿ ಭಾವಃ । ಕಂ ಪಶ್ಯೇದಿತ್ಯಸ್ಯೈವಾರ್ಥಾಂತರಕಥನಂ ಸ್ವಕಂ ರೂಪಂ ಕೇನ ವಾಸೌ ಪ್ರಪಶ್ಯತೀತಿ । ಯೇನೇದಮಖಿಲಂ ವೇದ ತಂ ಚ ಕೇನ ವಿಜಾನೀಯಾದಿತ್ಯಸ್ಯಾರ್ಥ ಕಥನಂ ಯೇನೇತಿ। ಯೇನ ಗುರುಣಾ । ಇದಂ ಸ್ವೇನ ಕ್ರಿಯಾಮಾಣಧ್ಯಾನಾದಿಕೌಶಲಮ್ । ಕಿಮರ್ಥಮೇತತ್‌ಕಥನಮಿತ್ಯತ ಆಹ – ಇತೀತಿ ॥ ೩೦೦-೩೦೧ ॥

**ವಿವರಣೆ** – ಯತ್ರತ್ವಸ್ಯ ಸರ್ವಮಾತ್ಮೈವಾಭೂತ್ ಎಂಬ ಶ್ರುತಿವಾಕ್ಯವಿದೆಯಷ್ಟೆ. ಅಲ್ಲಿ ಸರ್ವಂ ಎಂಬ ವಿಶೇಷಣಕ್ಕೆ ಒಂದು ವಿಶೇಷ್ಯದ ಅಪೇಕ್ಷೆ ಇದೆ. ಅದನ್ನು ಇಷ್ಟಂ ಎಂದು ಗ್ರಂಥಕಾರರು ಪೂರ್ಣ ಮಾಡಿ ಇಷ್ಟವಾದ ವಸ್ತುವೆಲ್ಲವೂ ಪರಮಾತ್ಮನೊಬ್ಬನೇ ಆಗುತ್ತಾನೆಯೋ ಎಂದು ಅರ್ಥವನ್ನು ಮಾಡುತ್ತಾರೆ. ಪರಮಾತ್ಮ ಲಗ್ನವಾದ ಮನಸ್ಸುಳ್ಳ ಆ ಯೋಗಿಯು ತನ್ನನ್ನೂ ಮರೆತುಬಿಡುವುದರಿಂದ ತನ್ನನ್ನಾದರೂ ಯಾವ ಕರಣದಿಂದ ನೋಡುತ್ತಾನೆ ಎಂದು ಆಕ್ಷೇಪ. ಮತ್ತು ಯಾವ ಗುರುವಿನ ಉಪದೇಶದಿಂದ ಉಂಟಾದ ಧ್ಯಾನದಿಂದ ಪರಮಾತ್ಮನನ್ನು ನೋಡುತ್ತಿದ್ದಾನೆಯೋ ಅಂತಹ ಗುರುವನ್ನಾದರೂ ಯಾವ ಕರಣದಿಂದ ನೋಡುತ್ತಾನೆ ಎಂದು ಯೇನ ಎಂಬ ಪದಕ್ಕೆ ಗುರುಣಾ ಎಂಬ ಪದವನ್ನು ಸೇರಿಸಿ ಒಂದು ಹೊಸ ಅರ್ಥವನ್ನು ಈ ಶ್ರುತಿಗೆ ಹೇಳಿದ್ದಾರೆ.

**ಅಕ್ಷಾಸಕ್ತಃ ಕಿಮಶ್ರೌಷೀನ್ಮಾತುರ್ಮೃತಿಮುದೀರಿತಾಮ್ ।**
**ಕಿಂ ಪಶ್ಯೇತ್ ಪಶ್ಯತೋಽಪಿ ಸ್ವಂ ಘಟಸ್ಥಹೃದಯಾ ನಟೀ ।**
**ಶರಕೃತ್ ಕೇನ ಕಿಂ ಜಿಘ್ರೇತ್ ಕಂ ಜಾನೀಯಾತ್ ಕಮೀಕ್ಷತೇ ॥ ೩೦೨ ॥**

**ಅರ್ಥ** – ಅಕ್ಷಾಸಕ್ತಃ= ಪಗಡೆ ಚದುರಂಗ ಮೊದಲಾದ ಆಟದಲ್ಲಿ ಆಸಕ್ತನಾದವನು, ಉದೀರಿತಾಂ= ಹೇಳಲ್ಪಟ್ಟ, ಮಾತುರ್ಮೃತಿಂ= ತನ್ನ ತಾಯಿಯ ಮರಣವನ್ನು, ಅಶ್ರೌಷೀತ್ ಕಿಂ= ಕೇಳಿದನೇನು? ಘಟಸ್ಥಹೃದಯಾ= ತನ್ನ ತಲೆಯ ಮೇಲೆ ಇಟ್ಟ ಕಲಶದಲ್ಲಿಯೇ ನ್ಯಸ್ತವಾದ ಮನಸ್ಸುಳ್ಳ, ನಟೀ= ನರ್ತಕಿಯು, ಸ್ವಂ= ತನ್ನನ್ನು, ಪಶ್ಯತೋಪಿ= ನೋಡುವಂತಹ ಜನಗಳನ್ನು, ಪಶ್ಯೇತ್ ಕಿಂ= ನೋಡುತ್ತಾಳೇನು, ಶರಕೃತ್= ಬಾಣವನ್ನು ಮಾಡುತ್ತಿರುವವನು, ಕೇನ= ಯಾವುದರಿಂದ, ಕಂ= ಯಾವುದನ್ನು, ಜಿಘ್ರೇತ್= ಆಘ್ರಾಣಿಸುತ್ತಾನೆ, ಕಂ= ಯಾರನ್ನು, ಜಾನೀಯಾತ್= ತಿಳಿಯುತ್ತಾನೆ, ಕಂ= ಯಾರನ್ನು, ಈಕ್ಷತೇ= ನೋಡುತ್ತಾನೆ?

**ಅನುವಾದ** – ಪಗಡೆ ಮೊದಲಾದ ಆಟದಲ್ಲಿ ಆಸಕ್ತನಾದವನು ಸಮೀಪದಲ್ಲಿ ಹೇಳಲ್ಪಟ್ಟ ತನ್ನ ತಾಯಿಯ ಮರಣವನ್ನಾದರೂ ಕೇಳುತ್ತಾನೇನು? ತಲೆಯ ಮೇಲೆ ಕಲಶವನ್ನು

ಇಟ್ಟುಕೊಂಡು ಅದರಲ್ಲೇ ನೆಟ್ಟ ಮನಸ್ಸುಳ್ಳ ನರ್ತಕಿಯು ಎದುರಿಗೇ ತನ್ನನ್ನು ನೋಡುತ್ತಿರುವ ಜನಗಳನ್ನು ನೋಡುತ್ತಾಳೇನು? ಬಾಣವನ್ನು ಮಾಡುವವನು ಯಾವುದರಿಂದ ಯಾವುದನ್ನು ಮೂಸಿ ನೋಡುತ್ತಾನೆ? ಯಾವುದನ್ನು ನೋಡುತ್ತಾನೆ? ಯಾರನ್ನು ತಿಳಿಯುತ್ತಾನೆ?

**ಭಾವವಿಲಾಸಿನೀ–** ಭಗವದ್ಧ್ಯಾನೈಕರತ ಅನ್ಯಪದಾರ್ಥಾನವಲೋಕನಂ ನಾ ಪೂರ್ವಮಿತಿ ಭಾವೇನ ಲೌಕಿಕದೃಷ್ಟಾಂತಾನಾಹ – **ಅಕ್ಷೇತ್ಯಾದಿನಾ** ॥ ಅಕ್ಷಾಸಕ್ತಶ್ಚತುರಂಗಾದಿಕ್ರೀಡಾಸಕ್ತಃ । ಇಯಮಪಿ ಗಾಥಾ ಲೋಕೇ ಪ್ರಸಿದ್ಧಾ । ಸ್ವಮಾತ್ಮಾನಂ ಪಶ್ಯತಃ ಪುರುಷಾನ್ ಘಟಸ್ಥಹೃದಯಾ ಮೌಲೌಸ್ಥಾಪಿತ ಘಟಸ್ಥಹೃದಯಾ । ಇಯಮಪಿ ಕಥಾನಾಟ್ಯರಂಗೇ ಪ್ರಸಿದ್ಧಾ । ಶರಕೃಚ್ಛರವಕ್ರತಾದಿಕಂ ಪರಿಹರನ್ ಧನುರ್ವಿದ್ಯಾನಿಪುಣಃ ॥ ೩೦೨ ॥

**ವಿವರಣೆ** – ಭಗವದ್‌ಧ್ಯಾನದಲ್ಲಿಯೇ ರತನಾದವನಿಗೆ ಅನ್ಯಪದಾರ್ಥಗಳ ಅದರ್ಶನಾದಿಗಳು ಆಶ್ಚರ್ಯವಲ್ಲವೆಂದು ಲೌಕಿಕ ದೃಷ್ಟಾಂತಗಳ ಮೂಲಕ ತಿಳಿಸುತ್ತಾರೆ. ಮೂರನೆಯ ದೃಷ್ಟಾಂತದಲ್ಲಿ ಬಾಣವನ್ನು ತಯಾರು ಮಾಡುವವನು ಅದರಲ್ಲೇ ಕೇಂದ್ರೀಕೃತ ಮನಸ್ಸುಳ್ಳವನಾಗಿ ಹತ್ತಿರದಲ್ಲಿ ಹಾದುಹೋಗುವ ಯಾರನ್ನೂ ನೋಡಲಿಲ್ಲ ಎಂದು ಭಾಗವತ ಏಕಾದಶಸ್ಕಂದದಲ್ಲಿ ಬಂದಿರುವ ಕಥೆಯನ್ನು ಸಂಗ್ರಹಿಸಿದ್ದಾರೆ.

ಮುಕ್ತಾಃ ಸ್ವಾತ್ಮರತಾ ಜಿಘ್ರಂತೀಕ್ಷಂತೇ ಕಂ ವಿಜಾನತೇ ।
ಸೇನಾಮನ್ಯಮನಾಃ ಸೇನಾಂ ನಾಜ್ಞಾಸೀದಿತಿ ಲೌಕಿಕಮ್ ।
ಆತ್ಮೈಕಾಸಕ್ತಚಿತ್ತೋಽಪಿ ತಥೇತಿ ಕಿಮಲೌಕಿಕಮ್ ॥ ೩೦೩ ॥

**ಅರ್ಥ** – ಸ್ವಾತ್ಮರತಾಃ= ತಮ್ಮಲ್ಲಿಯೇ ರತರಾದ ಅಥವಾ ಪರಮಾತ್ಮನಲ್ಲಿಯೇ ರತರಾದ, ಮುಕ್ತಾಃ= ಮುಕ್ತರು, ಕಿಂ ಜಿಘ್ರಂತಿ= ಏನನ್ನು ಆಘ್ರಾಣಿಸುತ್ತಾರೆ, ಕಿಂ ಈಕ್ಷಂತೇ= ಏನನ್ನು ನೋಡುತ್ತಾರೆ, ಕಂ ವಿಜಾನತೇ= ಯಾರನ್ನು ತಿಳಿಯುತ್ತಾರೆ, ಅನ್ಯಮನಾಃ= ಬೇರೆ ಕಡೆಯಲ್ಲಿ ಮನಸ್ಸುಳ್ಳವನು, ಸೇನಾಂ= ರಾಜನಿಂದ ಸಹಿತವಾದ ಸೇನೆಯನ್ನು, ನಾಜ್ಞಾಸೀತ್= ತಿಳಿಯಲಿಲ್ಲ, ಇತಿ= ಎಂಬುದು, ಲೌಕಿಕಂ= ಲೌಕಿಕ ದೃಷ್ಟಾಂತ, ಆತ್ಮೈಕಾಸಕ್ತಚಿತ್ತೋಪಿ= ಪರಮಾತ್ಮನಲ್ಲಿಯೇ ನೆಟ್ಟ ಮನಸ್ಸುಳ್ಳವನೂ ಸಹ, ತಥೇತಿ= ಹಾಗೆಯೇ ಎಂದು, ಕಿಂ ಅಲೌಕಿಕಂ= ಇದರಲ್ಲಿ ಯಾವ ಆಶ್ಚರ್ಯವಿದೆ?

**ಅನುವಾದ** – ಪರಮಾತ್ಮನಲ್ಲಿಯೇ ಧ್ಯಾನರತರಾದ ಮುಕ್ತರು ಏನನ್ನು ಆಘ್ರಾಣಿಸುತ್ತಾರೆ, ಏನನ್ನು ನೋಡುತ್ತಾರೆ, ಯಾರನ್ನು ತಿಳಿಯುತ್ತಾರೆ? ಅನ್ಯತ್ರ ಆಸಕ್ತ ಮನಸ್ಸುಳ್ಳವನು ರಾಜಸಹಿತವಾಗಿ ಭೇರ್ಯಾದಿ ಶಬ್ದಗಳಿಂದ ಹೋಗುತ್ತಿರುವ ಸೈನ್ಯವನ್ನು ಗಮನಿಸಲಿಲ್ಲವೆಂಬುದು ಲೋಕದೃಷ್ಟಾಂತ. ಪರಮಾತ್ಮನಲ್ಲಿಯೇ ಆಸಕ್ತವಾದ ಹೃದಯವುಳ್ಳವನು ಅದೇ ರೀತಿ ಇರುತ್ತಾನೆ ಎಂಬ ಈ ವಿಷಯದಲ್ಲಿ ಏನು ಆಶ್ಚರ್ಯವಿದೆ?

**ಭಾವವಿಲಾಸಿನೀ**– ಪೂರ್ವಂ ಸಾಂಸಾರಿಕಪರೋಕ್ಷಜ್ಞಾನಿವಿಷಯತಯಾ ವ್ಯಾಖ್ಯಾತಮ್ । ಇದಾನೀಂ ಮೌಕ್ತಧ್ಯಾತೃವಿಷಯಂ ವಾ ಇದವಾಕ್ಯಂ ಸ್ಯಾದಿತ್ಯಾಹ – **ಮುಕ್ತಾ ಇತಿ** ॥ ತುಚ್ಛಫಲಾಯ ಶರಕಾರೇ ಧ್ವನತ್ತೂರ್ಯಭೇರ್ಯಾದಿಸಹಿತ ರಾಜಸೇನಾಯಾ ಅನವಲೋಕನಸ್ಯ ದೃಷ್ಟತ್ವಾತ್ ಮಹಾಫಲದಾಯಕ ಭಗವದ್ಧ್ಯಾತರಿ ತದನ್ಯಾನವಲೋಕನಂ ಕಿಮಪೂರ್ವಮತಃ ಶ್ರುತೇರಯ-ಮೇವಾರ್ಥ ಇತ್ಯಾಹ – **ಸೇನಾಮಿತಿ** ॥ ಸೇನಾಮಿನೇನ ರಾಜ್ಞಾ ಸಹಿತಾಂ ಸೇನಾಂ ರಾಜಚಮೂಮ್ । ಉಪಲಕ್ಷಣಂ ಚೈತತ್ । ಚತುರಂಗಬಲಬೃಂಹಿತಾದಿಘೋಷೋ-ಪೇತಾಮಿತ್ಯಪಿ ದ್ರಷ್ಟವ್ಯಮ್ ॥ ೩೦೩ ॥

**ವಿವರಣೆ** – ಹಿಂದಿನ ಶ್ಲೋಕದಲ್ಲಿ ಈ ಶ್ರುತಿವಾಕ್ಯವು ಸಂಸಾರಿಯಾದ ಅಪರೋಕ್ಷ ಜ್ಞಾನಿಯ ಪರ ಎಂದು ಅರ್ಥಮಾಡಿ ಈ ಶ್ಲೋಕದಲ್ಲಿ ಧ್ಯಾನವನ್ನು ಮಾಡುವ ಮುಕ್ತಜೀವರ ಪರವಾಗಿ ವ್ಯಾಖ್ಯಾನ ಮಾಡುತ್ತಾರೆ.

> ಅಪ್ರಾಕೃತಪ್ರಾಕೃತಾಭ್ಯಾಂ ದ್ವಾಭ್ಯಾಂ ಹೀತೋ ಭವೇ ಭವೇತ್ ।
> ದ್ವೀತಾಃ ಸಂಸಾರಿಣಸ್ತಸ್ಮಾತ್ ತತ್ಸಂಬಂಧಿವಪುಸ್ತ್ವಿದಮ್ ॥ ೩೦೪ ॥
>
> ಬಾಹ್ಯಂ ದ್ವೈತಮಿತಿ ಪ್ರೋಕ್ತಮಸ್ವಭಾವತ್ವತಶ್ಚ ತತ್ ।
> ಇವಶಬ್ದೋದಿತಂ ಜೀವೇ ಯದಾ ಭವತಿ ತನ್ನೃಣಾಮ್ ॥ ೩೦೫ ॥
>
> ತದಾ ತ್ವಿತರಶಬ್ದೋಕ್ತೋ ಬಾಹ್ಯೇಂದ್ರಿಯಗಣೋಽಪ್ಯಯಮ್ ।
> ಪಶ್ಯೇತ್ ಸ್ವರೂಪಾದಿತರಮರ್ಥಂ ದೇಹಘಟಾದಿಕಮ್ ॥ ೩೦೬ ॥

**ಅರ್ಥ** – ಭವೇ= ಸಂಸಾರದಲ್ಲಿ, ಅಪ್ರಾಕೃತಪ್ರಾಕೃತಾಭ್ಯಾಂ ದ್ವಾಭ್ಯಾಂ= ಅಪ್ರಾಕೃತ ಮತ್ತು ಪ್ರಾಕೃತವಾದ ಎರಡು ದೇಹೇಂದ್ರಿಯಾದಿಗಳಿಂದ, ಇತಃ= ಹೊಂದಲ್ಪಟ್ಟವನಾಗಿ, ಭವೇತ್ ಹಿ= ಜೀವನು ಇರುತ್ತಾನಷ್ಟೆ, ತಸ್ಮಾತ್= ಆದ್ದರಿಂದ, ದ್ವೀತಾಃ= ದ್ವೀತಾ ಎಂದರೆ, ಸಂಸಾರಿಣಃ= ಸಂಸಾರಿಗಳು ಎಂದು ಅರ್ಥ, ತತ್ಸಂಬಂಧಿ= ಸಂಸಾರ ಜೀವ ಸಂಬಂಧಿಯಾದ, ಇದಂ ಬಾಹ್ಯಂ ವಪುಸ್ತು= ಈ ಬಾಹ್ಯದೇಹವೇ, ದ್ವೈತಮಿತಿಪ್ರೋಕ್ತಂ= ದ್ವೈತ ಎಂದು ಹೇಳಲ್ಪಡುತ್ತದೆ. ಅಸ್ವಭಾವತ್ವತಃ= ಅಸ್ವಾಭಾವಿಕವಾದ್ದರಿಂದ, ಇವಶಬ್ದೋದಿತಂ= ಇವ ಶಬ್ದದಿಂದ ಹೇಳಲ್ಪಟ್ಟ, ತತ್= ಆ ಬಾಹ್ಯದೇಹವು, ಜೀವೇ= ಜೀವನಲ್ಲಿ, ಯದಾ ಭವತಿ= ಯಾವಾಗ ಇರುತ್ತದೆಯೋ, ತದಾ= ಆಗ, ನೃಣಾಂ= ಜೀವರಿಗೆ, ಇತರಶಬ್ದೋಕ್ತಃ= ಇತರ ಶಬ್ದದಿಂದ ಹೇಳಲ್ಪಟ್ಟ, ಅಯಂ= ಈ, ಬಾಹ್ಯೇಂದ್ರಿಯಗಣೋಪಿ= ಬಾಹ್ಯೇಂದ್ರಿಯ ಸಮೂಹವೂ ಕೂಡ, ಸ್ವರೂಪಾತ್= ಜೀವಸ್ವರೂಪದಿಂದ, ಇತರಂ= ಭಿನ್ನವಾದ, ದೇಹಘಟಾದಿಕಂ ಅರ್ಥಂ= ದೇಹ ಘಟ ಮೊದಲಾದ ಪದಾರ್ಥಗಳನ್ನು, ಪಶ್ಯೇತ್= ನೋಡುವುದಷ್ಟೆ?

**ಅನುವಾದ** – ಸಂಸಾರದಲ್ಲಿ ಜೀವನು ಅಪ್ರಾಕೃತ ಮತ್ತು ಪ್ರಾಕೃತವಾದ ಎರಡು ದೇಹಗಳಿಂದಲೂ ಕೂಡಿರುತ್ತಾನೆ. ಆದ್ದರಿಂದ ದ್ವಿತಾಃ ಎಂದರೆ ಸಂಸಾರಿಜೀವರು. ದ್ವೈತ ಎಂದರೆ ಸಂಸಾರಿ ಜೀವ ಸಂಬಂಧಿಯಾದುದು ಎಂದು ಅರ್ಥ. ಆ ದ್ವೈತ ಶಬ್ದೋಕ್ತವಾದುದು ಈ ಬಾಹ್ಯದೇಹ. ದ್ವೈತಮಿವ ಎಂಬಲ್ಲಿರುವ ಇವ ಶಬ್ದವು ಅದು ಅಸ್ವಾಭಾವಿಕವೆಂದು ಹೇಳುತ್ತದೆ. ಅಂತಹ ಬಾಹ್ಯದೇಹವು ಯಾವಾಗ ಇರುತ್ತದೆಯೋ ಆಗ ಇತರಶಬ್ದೋಕ್ತಃ ಇತರ ಇತರಂ ಪಶ್ಯತಿ ಎಂಬಲ್ಲಿ ಮೊದಲನೆಯ ಇತರಶಬ್ದೋಕ್ತವಾದ ಈ ಬಾಹ್ಯೇಂದ್ರಿಯ ಸಮೂಹವು ಎರಡನೆಯ ಇತರಶಬ್ದಾರ್ಥವಾದ ಆದ್ದರಿಂದ ಜೀವಸ್ವರೂಪಕ್ಕಿಂತ ಭಿನ್ನವಾದ ದೇಹಘಟಪಟಾದಿ ವಸ್ತುಗಳನ್ನು ನೋಡುತ್ತದೆ.

**ಭಾವವಿಲಾಸಿನೀ–** ಪ್ರಕಾರಾಂತರೇಣ ಶ್ರೌತಪದಾನಾಮತ್ಯಂತಮನುಕೂಲಮರ್ಥಂ-ವದನ್ನನಯೈವ ಶ್ರುತ್ಯಾ ಸಂಸಾರಾನ್ಮುಕ್ತೇರ್ವೈಲಕ್ಷಣ್ಯಂ ದರ್ಶಯತಿ – **ಅಪ್ರಾಕೃತೇತಿ** ॥ ಅಪ್ರಾಕೃತಪ್ರಾಕೃತ್ಯಾಭ್ಯಾಂ ದೇಹೇಂದ್ರಿಯಾಭ್ಯಾಮಿತಃ ಸಹಿತೋ ಜೀವಃ। ಭವೇ ಸಂಸಾರೇ। ದ್ವೀತಾನಾಮಿದಂ ದ್ವೈತಿಮಿತಿ ವ್ಯುತ್ಪತ್ತ್ಯಾ ತತ್ ಸಂಬಂಧಿ ಸಂಸಾರಿಜೀವಸಂಬಂಧಿ। ಇದಂ ಪರಿದೃಶ್ಯಮಾನಂ ಜಡಂ। ತದ್ವಪುಃ ಉಕ್ತವ್ಯುತ್ಪತ್ತೇಃ ಪ್ರಾಕೃತಾಪ್ರಕೃತದೇಹಯೋಃ ಸಮತ್ವೇಽಪಿ ಪ್ರಾಕೃತದೇಹಸ್ಯೈವಾವಗಮನೇ ನಿಮಿತ್ತಮಾಹ – **ಅಸ್ವಭಾವತ್ವತ ಇತಿ** ॥ ಇವ ಶಬ್ದೋದಿತಂ ದ್ವೈತಂ ಭವತೀವೇತಿ ಕ್ರಿಯಾಯೋಗೇ ಸತ್ಯಸ್ವಭಾವತ್ವತೋ ಸ್ವಾಭಾವಿಕತ್ವರೂಪಮರ್ಥ-ಮಾದಾಯೋದಿತಂ ಪ್ರತಿಪಾದಿತಂ ಸ್ಯಾತ್ । ಭವತೀವೇತ್ಯುಕ್ತೇಃ ಸ್ವಭಾವತೋ ನಾಸ್ತೀತ್ಯರ್ಥಾಲಾಭಾದಿತಿ ಭಾವಃ। ದ್ವೈತಪದಾರ್ಥಮುಕ್ತ್ವೇದಾನೀಂ ವಾಕ್ಯಂ ಯೋಜಯತಿ– **ಯದೇತಿ** ॥ ಯತ್ರೇತಿ ಪದಸ್ಯ ಕಾಲವಾಚಕತ್ವೇ ಯಸ್ಮಿನ್ಕಾಲ ಇತ್ಯರ್ಥಲಾಭಾದ್ಯದೇತ್ಯುಕ್ತಮ್। ತತ್ ಪ್ರಾಕೃತಶರೀರಮ್। ನೃಣಾಂ ಭವತಿ ಅಸ್ತಿ। ತದಿತಿ ಶ್ರೌತಪದಸ್ಯಾರ್ಥಸ್ತದೇತಿ। ಇತರ ಶಬ್ದೋಕ್ತಃ ಸ್ವರೂಪೇಂದ್ರಿಯೇಭ್ಯೋಭಿನ್ನತ್ವೇನೇತರಶಬ್ದೋಕ್ತ ಬಾಹ್ಯೇಂದ್ರಿಯಗಣಃ ಪ್ರಾಕೃತ ಚಕ್ಷುರಾದಿಂದ್ರಿಯಗಣಃ ಸ್ವರೂಪಾತ್ ಜೀವಸ್ವರೂಪಾತ್ ॥ ೩೦೪-೩೦೬ ॥

**ವಿವರಣೆ** – ರೀತ್ಯಂತರದಿಂದ ಶ್ರುತಿಯ ಪದಗಳಿಗೆ ಅತ್ಯಂತ ಅನುಕೂಲವಾದ ಅರ್ಥವನ್ನು ಹೇಳುತ್ತಾ ಈ ಶ್ರುತಿಯಿಂದಲೇ ಸಂಸಾರಿಗಳಿಗೂ ಮತ್ತು ಮುಕ್ತರಿಗೂ ಸಿದ್ಧವಾಗುವ ವೈಲಕ್ಷಣ್ಯವನ್ನು ಇಲ್ಲಿ ನಿರೂಪಿಸುತ್ತಾರೆ. ಯದ್ಯಪಿ ದ್ವೈತ ಎಂದರೆ ಬಾಹ್ಯ ದೇಹವಾದಂತೆ ಅಥವಾ ಸ್ವರೂಪದೇಹದ ವಿವಕ್ಷಯಾ ಬಾಹ್ಯವು ಆದಂತೆ ಬಾಹ್ಯದೇಹದ ವಿವಕ್ಷೆಯಿಂದ ಸ್ವರೂಪದೇಹವೂ ಆಗುತ್ತದೆ. ಆದರೆ ದ್ವೈತಮಿವ ಎಂಬಲ್ಲಿರುವ ಇವ ಶಬ್ದವು ಸ್ವಾಭಾವಿಕದ್ವೈತವಲ್ಲ ಅಸ್ವಾಭಾವಿಕದ್ವೈತ ಎಂದು ತಿಳಿಸುವುದರಿಂದ ಅದು ಅಸ್ವಾಭಾವಿಕವಾದ ಬಾಹ್ಯಶರೀರವೇ ಆಗಬೇಕು. ಇತರಃ ಇತರಂ ಪಶ್ಯತಿ ಎಂಬಲ್ಲಿ ಮೊದಲನೆಯ ಇತರಶಬ್ದಕ್ಕೆ ಬಾಹ್ಯೇಂದ್ರಿಯಸಮೂಹ ಎಂದು ಎರಡನೆಯ ಇತರ ಶಬ್ದಕ್ಕೆ ಜೀವಸ್ವರೂಪಕ್ಕಿಂತ ಭಿನ್ನವಾದ ವಸ್ತುಗಳು ಎಂದು ಅರ್ಥವನ್ನು ಮಾಡಿ ಸಂಸಾರದಲ್ಲಿ

ಪ್ರಾಕೃತ-ಅಪ್ರಾಕೃತ ಹೀಗೆ ದ್ವಿವಿಧವಾದ ಇಂದ್ರಿಯಗಳಿಂದ ದರ್ಶನವನ್ನು ಮಾಡುತ್ತಾನೆ. ಮೋಕ್ಷದಲ್ಲಿ ಕೇವಲ ಅಪ್ರಾಕೃತವಾದ ಇಂದ್ರಿಯಗಳಿಂದಲೇ ದರ್ಶನಾದಿಗಳನ್ನು ಮಾಡುತ್ತಾನೆ ಎಂಬ ವೈಲಕ್ಷಣ್ಯವನ್ನು ಇಲ್ಲಿ ನಿರೂಪಿಸಿದ್ದಾರೆ.

**ಯತ್ರ ತ್ವಾತ್ಮಾತ್ಮಕಂ ಸರ್ವಮಭೂದ್ ದೇಹೇಂದ್ರಿಯಾದಿಕಂ ।**
**ತತ್ರ ಮುಕ್ತೌ ಕೇನ ಬಾಹ್ಯೇನಾಕ್ಷ್ಣಾ ಬಾಹ್ಯಾರ್ಥಮೀಕ್ಷತೇ ।**
**ಕಂ ವಾ ಜಿಘ್ರೇದ್ ವಿಜಾನೀಯಾದಿತ್ಯರ್ಥೋ ವಾ ಶ್ರುತೇರ್ಭವೇತ್**
**॥ ೩೦೭ ॥**

**ಅರ್ಥ** – ಯತ್ರ= ಯಾವ ಮೋಕ್ಷದಲ್ಲಿ, ದೇಹೇಂದ್ರಿಯಾದಿಕಂ= ದೇಹೇಂದ್ರಿಯ ಮೊದಲಾದ, ಸರ್ವಂ= ಎಲ್ಲವೂ, ಆತ್ಮಾತ್ಮಕಂ= ಜೀವಸ್ವರೂಪಾಭಿನ್ನವೇ, ಅಭೂತ್= ಆಗುತ್ತದೆಯೋ, ತತ್ರ ಮುಕ್ತೌ= ಆ ಮುಕ್ತಿಯಲ್ಲಿ, ಕೇನ= ಯಾವ, ಬಾಹ್ಯೇನ= ಬಾಹ್ಯವಾದ, ಅಕ್ಷ್ಣಾ= ಚಕ್ಷುಸ್ಸಿನಿಂದ, ಬಾಹ್ಯಾರ್ಥಂ= ಬಾಹ್ಯವಾದ ಅರ್ಥವನ್ನು, ಈಕ್ಷತೇ= ನೋಡುತ್ತಾನೆ, ಕಂ ವಾ= ಯಾವ ಬಾಹ್ಯಾರ್ಥವನ್ನು, ಜಿಘ್ರೇತ್= ಆಘ್ರಾಣಿಸುತ್ತಾನೆ, ಕಂ ವಾ= ಯಾರನ್ನು, ವಿಜಾನೀಯಾತ್= ತಿಳಿಯುತ್ತಾನೆ, ಇತಿ ವಾ ಅರ್ಥಃ= ಎಂಬ ಅರ್ಥವಾಗಲೀ, ಶ್ರುತೇಃ= ಶ್ರುತಿಗೆ, ಭವೇತ್= ಆಗುತ್ತದೆ.

**ಅನುವಾದ** – ಯಾವ ಮೋಕ್ಷದಲ್ಲಿ ದೇಹೇಂದ್ರಿಯಾದಿಗಳೆಲ್ಲವೂ ಜೀವನ ಸ್ವರೂಪದಿಂದ ಅಭಿನ್ನವೇ ಆಗುತ್ತದೆಯೋ, ಆ ಮೋಕ್ಷದಲ್ಲಿ ಜೀವನು ಯಾವ ಬಾಹ್ಯವಾದ ಚಕ್ಷುಸ್ಸಿನಿಂದ ಯಾವ ಬಾಹ್ಯಾರ್ಥವನ್ನು ನೋಡುತ್ತಾನೆ, ಯಾವ ಬಾಹ್ಯವಾದ ಘ್ರಾಣದಿಂದ ಬಾಹ್ಯವಾದ ಗಂಧವನ್ನು ಆಘ್ರಾಣಿಸುತ್ತಾನೆ, ಯಾವ ಬಾಹ್ಯವಾದ ಮನಸ್ಸಿನಿಂದ ಯಾವ ಬಾಹ್ಯಪುರುಷನನ್ನು ತಿಳಿಯುತ್ತಾನೆ ಎಂಬ ಅರ್ಥವಾಗಲೀ ಶ್ರುತಿಗೆ ಸಂಗತವಾಗುತ್ತದೆ.

**ಭಾವವಿಲಾಸಿನೀ**– ಯತ್ರ ತು ಮುಕ್ತೌ ಸಂಸಾರಾದ್ವಿಶೇಷಂ ದ್ಯೋತಯಿತುಂ ತುಶಬ್ದಃ । ಸರ್ವಮಾತ್ಮೈವಾಭೂದಿತ್ಯಸ್ಯಾರ್ಥ ಆತ್ಮಾತ್ಮಕಮಿತ್ಯಾದಿ । ಏವಶಬ್ದೇನ ಶ್ರುತಿರಾತ್ಮಭಿನ್ನ-ದೇಹೇಂದ್ರಿಯಾಣಿ ವ್ಯವಚ್ಛಿನತ್ತಿ । ಅಸ್ಮಿನ್ನರ್ಥೇ ಸಾಮಾನಾಧಿಕರಣ್ಯಪ್ರಯೋಗಸ್ಯ ಸಾಕ್ಷಾದೈ-ಕ್ಯಾರ್ಥಕತ್ವೇನೌಪಚಾರಿಕತ್ವಾಂಗೀಕಾರಾದತ್ಯಂತ ಫಲಸ್ವಾರಸ್ಯಂ ದ್ರಷ್ಟವ್ಯಮ್ । ಅನುಕೂಲ-ವಿಭಕ್ತ್ಯಾನುವೃತ್ತೇತರಪದಾರ್ಥ ಕಥನಂ ಬಾಹ್ಯೇನೇತಿ। ಬಾಹ್ಯಾರ್ಥಕಂ ಬಾಹ್ಯಾರ್ಥಂ। ಅತ್ರಾ-ಪ್ಯನುವೃತ್ತೇತರಪದಾರ್ಥಕಥನಂ ಬಾಹ್ಯೇತಿ । ಬಾಹ್ಯಂ ಅಪ್ರಾಕೃತಾದಿತರಮರ್ಥಮಿತ್ಯರ್ಥಃ। ಪ್ರಾಕೃತದೇಹಸ್ಯ ಸರ್ವಥಾಽಭಾವಾದಿತರಾಭಾವಃ। ಮುಕ್ತಾವಪಿ ಸ್ವರೂಪಾದಿತರೇಷಾಂ ಶುದ್ಧಪ್ರಾಕೃತ ಜಡಾನಾಂ ಚೇತನಾನಾಂ ಚ ಬಹ್ವಂಶಸತ್ವೇಪಿ ಗೇಹಾದೀನಾಂ ತು ಲಕ್ಷ್ಮ್ಯಾತ್ಮಕತ್ವಾದಪ್ರಾಕೃತೇತರತ್ವಾಭಾವಃ। ಮುಕ್ತಾವಪಿ ಕೇಷಾಂಚಿಚ್ಛುದ್ಧಪ್ರಾಕೃತಾನಾಂ ಸತ್ತ್ವೇಽಪಿ

ಪ್ರಾಕೃತೇಂದ್ರಿಯಗಣಸ್ಯ ಸರ್ವಥಾಽಭಾವಾತ್ ಕೇನೇತರೇಣ ಚೇತರಂ ಪಶ್ಯೇತ್ ಜಿಘ್ರೇತ್ । ಕಿಂತು ಸ್ವರೂಪಚಕ್ಷುರ್ಘ್ರಾಣಾದಿನೈವ ಪಶ್ಯೇತ್ ಜಿಘ್ರೇದಿತ್ಯಾದಿ ಯೋಜನಾ ದ್ರಷ್ಟವ್ಯಾ । ಅನೇನ ಸಂಸಾರೇ ಪ್ರಾಕೃತೇಂದ್ರಿಯೈರಪಿ ವಿಷಯಾನ್ ಭುಂಕ್ತೇ ಮುಕ್ತೌ ಚ ಸ್ವರೂಪೇಂದ್ರಿಯೈರೇವ ಸಕಲವಿಷಯಭೋಗ ಇತಿ ಸ್ವರೂಪಾವಿರ್ಭಾವಾಖ್ಯ ಮಹಿಮ್ನಃ ಪ್ರತಿಪಾದನೇ ಶ್ರುತೇಸ್ತಾತ್ಪರ್ಯಮಿತ್ಯುಕ್ತಂ ಭವತಿ ॥ ೩೦೭ ॥

**ವಿವರಣೆ** – ಈ ಅರ್ಥದಲ್ಲಿ ಸರ್ವಂ ಆತ್ಮೈವಾಭೂತ್ ಎಂಬಲ್ಲಿ ಸರ್ವಂ ಮತ್ತು ಆತ್ಮಾ ಎಂಬ ಪದಗಳಿಗೆ ತೋರುವ ಸಾಮಾನಾಧಿಕರಣ್ಯವು ಹಿಂದಿನ ವ್ಯಾಖ್ಯಾನಗಳಿಗಿಂತ ಮುಖ್ಯವಾದುದೇ ಆಯಿತು. ಏಕೆಂದರೆ ಮುಕ್ತಿಯಲ್ಲಿ ದೇಹೇಂದ್ರಿಯಾದಿಗಳಿಗೂ ಮತ್ತು ಜೀವನಿಗೂ ಸಾಕ್ಷಾದೈಕ್ಯವೇ ಇದೆ. ಆದ್ದರಿಂದ ಇದು ಬಹಳ ಸ್ವರಸವಾದ ಅರ್ಥ. 'ಕೇನ ಕಂ ಪಶ್ಯೇತ್' ಎಂಬಲ್ಲಿ ಇತರೇಣ ಕೇನ ಇತರಂ ಕಂ ಪಶ್ಯೇತ್ ಮುಂತಾದ ರೀತಿಯಲ್ಲಿ ಅನ್ವಯ. ಇತರೇಣ ಎಂದರೆ ಸ್ವರೂಪಕ್ಕಿಂತ ಭಿನ್ನವಾದ ಬಾಹ್ಯೇಂದ್ರಿಯದಿಂದ ಎಂದರ್ಥ. ಕಂ ಎಂದರೆ ಸ್ವರೂಪಕ್ಕಿಂತ ಭಿನ್ನವಾದ ಯಾವ ಇತರವನ್ನು ಎಂದರ್ಥ. ಪ್ರಾಕೃತ ದೇಹಾದಿಗಳು ಇಲ್ಲದಿರುವುದರಿಂದ ಇತರವೇ ಇಲ್ಲ. ದೇಹಗೇಹಾದಿಗಳು ಇದ್ದರೂ ಅವೆಲ್ಲವೂ ಲಕ್ಷ್ಮ್ಯಾತ್ಮಕವಾದ್ದರಿಂದ ಅವು ಇತರವೇ ಅಲ್ಲ. ಆದ್ದರಿಂದ ಯಾವ ಇತರವಾದ ಪ್ರಾಕೃತವನ್ನೂ ನೋಡುವುದಿಲ್ಲ ಎಂದು ಅರ್ಥ. ಯದ್ಯಪಿ ಮೋಕ್ಷದಲ್ಲಿ ಕೆಲವು ಶುದ್ಧ ಪ್ರಾಕೃತವಾದ ವಸ್ತುಗಳೂ ಇವೆ. ಆದರೆ ಪ್ರಾಕೃತವಾದ ಇಂದ್ರಿಯಸಮೂಹವು ಸರ್ವಥಾ ಇಲ್ಲ. ಆದ್ದರಿಂದ ಪ್ರಾಕೃತವಾದ ಇಂದ್ರಿಯ ಸಮೂಹದಿಂದ ಯಾವುದನ್ನು ನೋಡುತ್ತಾನೆ? ಇತ್ಯಾದಿ ಆಕ್ಷೇಪಗಳು ಯುಕ್ತವಾಗುತ್ತವೆ. ಒಟ್ಟಿನಲ್ಲಿ ಸಂಸಾರದಲ್ಲಿ ಪ್ರಾಕೃತೇಂದ್ರಿಯ ಗಳಿಂದಲೂ ಜೀವನು ವಿಷಯವನ್ನು ಭೋಗಿಸುತ್ತಾನೆ. ಮುಕ್ತಿಯಲ್ಲಾದರೆ ಸ್ವರೂಪೇಂದ್ರಿಯಗಳಿಂದಲೇ ಸಕಲ ವಿಷಯಗಳನ್ನು ಭೋಗಿಸುತ್ತಾನೆ ಎಂಬ ಸ್ವರೂಪಾವಿರ್ಭಾವರೂಪವಾದ ಮಹಿಮೆಯನ್ನು ಪ್ರತಿಪಾದನೆ ಮಾಡುವುದರಲ್ಲಿ ಶ್ರುತಿಗೆ ತಾತ್ಪರ್ಯವಿದೆ ಎಂದು ಗ್ರಂಥಕಾರರು ನಿರೂಪಿಸುತ್ತಾರೆ.

ಯಥೋದಂ ಶುದ್ಧಮಾಸಿಕ್ತಂ ಶುದ್ಧೇ ಸ್ಯಾತ್ ತಾದೃಗೇವ ಹಿ ।
ಏವಂ ಮುನೇರ್ಜಾನತಶ್ಚ ಶುದ್ಧೋಽಪ್ಯಾತ್ಮಾ ಪರಾತ್ಮನಿ ।
ಪ್ರವಿಷ್ಟಸ್ತಾದೃಗೇವ ಸ್ಯಾನ್ನ ತದಾತ್ಮೇತಿ ಯಾ ಶ್ರುತಿಃ ॥ ೩೦೮ ॥

**ಅರ್ಥ** – ಯಥಾ= ಹೇಗೆ, ಶುದ್ಧೇ= ಶುದ್ಧವಾದ ನೀರಿನಲ್ಲಿ, ಆಸಿಕ್ತಂ= ಬೆರೆಸಲ್ಪಟ್ಟ, ಶುದ್ಧಂ ಉದಂ= ಶುದ್ಧವಾದ ನೀರು, ತಾದೃಗೇವ= ಆ ನೀರಿನಂತೆಯೇ, ಭವೇತ್ ಹಿ= ಆಗುತ್ತದೆಯೋ, ಏವಂ= ಅದೇ ರೀತಿಯಾಗಿ, ಜಾನತಃ= ಅಪರೋಕ್ಷಜ್ಞಾನ ಸಂಪಾದಿಸಿರುವ, ಮುನೇಃ= ಯೋಗಿಯ, ಶುದ್ಧಃ ಆತ್ಮಾಪಿ= ಶುದ್ಧವಾದ ಚೈತನ್ಯವೂ ಸಹ, ಪರಾತ್ಮನಿ= ಪರಮಾತ್ಮನಲ್ಲಿ, ಪ್ರವಿಷ್ಟಃ= ಪ್ರವಿಷ್ಟವಾಗಿ, ತಾದೃಗೇವ= ಪರಮಾತ್ಮನಿಗೆ ಸದೃಶವಾಗಿಯೇ,

ಸ್ಯಾತ್= ಇರುತ್ತದೆ, ತದಾತ್ಮಾ= ಆ ಪರಮಾತ್ಮನೇ, ನ= ಆಗಿಬಿಡುವುದಿಲ್ಲ, ಇತಿ= ಎಂದು, ಯಾ ಶ್ರುತಿಃ= ಯಾವ ಶ್ರುತಿ ಇದೆಯೋ (ಇದಕ್ಕೆ ಮುಂದಿನ ಶ್ಲೋಕದಿಂದ ಅನ್ವಯ).

**ಅನುವಾದ –** **ಹೇಗೆ ಶುದ್ಧವಾದ ನೀರಿನಲ್ಲಿ ಬೆರೆಸಲ್ಪಟ್ಟ ಶುದ್ಧವಾದ ನೀರು ಮೊದಲಿದ್ದ ಶುದ್ಧವಾದ ನೀರಿನಂತೆಯೇ ಆಗುತ್ತದೆಯೋ, ಅದರಂತೆಯೇ ಭಗವದಪರೋಕ್ಷ-ಜ್ಞಾನವನ್ನು ಪಡೆದು ಪರಮಾತ್ಮನನ್ನು ಪ್ರವೇಶಿಸುವ ಯೋಗಿಯ ಶುದ್ಧಚೈತನ್ಯವೂ ಸಹ ಪರಮಾತ್ಮನಿಗೆ ಸದೃಶವೇ ಆಗುತ್ತದೆ ಹೊರತು ಪರಮಾತ್ಮನೇ ಆಗುವುದಿಲ್ಲ ಎಂಬ ಯಾವ ಶ್ರುತಿ ಇದೆಯೋ (ಮುಂದಿನ ಶ್ಲೋಕದಿಂದ ಅನ್ವಯ).**

**ಭಾವವಿಲಾಸಿನೀ–** ಶ್ರುತೇಃ ಪರೋದೀರಿತಸರ್ವೈಕ್ಯರೂಪಾರ್ಥೇ ಮುಕ್ತಿಪ್ರತಿಪಾದಕ ಬಹು-ಶ್ರುತಿವಿರೋಧಶ್ಚಸ್ಯಾದಿತ್ಯಾಹ – **ಯಥೋದಮಿತ್ಯಾದಿನಾ** ॥ ಉದಮುದಕಮ್ । ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ । ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮೇತಿ ಶ್ರುತಿರನೇನ ಸಂಗೃಹೀತಾ ॥ ೩೦೮ ॥

**ಪರಮಂ ಸಾಮ್ಯಮೇವೇತಿ ಬ್ರಹ್ಮಣಾ ಸಹ ಚೇತಿ ವಾಕ್ ।**
**ಉಪಸಂಕ್ರಮ್ಯ ಚೇತ್ಯುಕ್ತಿರುಪಸಂಕ್ರಾಮತೀತಿ ವಾಕ್ ॥ ೩೦೯ ॥**

**ಸಾಕ್ಷಾಜ್ಜ್ಞಾನಫಲಂ ಮೋಕ್ಷಂ ಶಂಸಂತ್ಯಸ್ತತ್ರ ತತ್ರ ಹಿ ।**
**ಕಥಂ ಘಟೇರನ್ ಸರ್ವೈಕ್ಯೇ ಬಹ್ವ್ಯೋಽರ್ಥಾಂತರವರ್ಜಿತಾಃ ॥ ೩೧೦ ॥**

**ಅರ್ಥ –** ಪರಮಂ ಸಾಮ್ಯಮೇವೇತಿ= ಪರಮ ಸಾಮ್ಯವನ್ನೇ ಹೊಂದುತ್ತಾನೆ ಎಂಬಂತಹ, ಬ್ರಹ್ಮಣಾ ಸಹ ಚ= ಬ್ರಹ್ಮನ ಜೊತೆಯಲ್ಲಿಯೇ ಭೋಗವನ್ನು ಅನುಭವಿಸುತ್ತಾನೆ, ಇತಿ= ಎಂಬಂತಹ, ವಾಕ್= ವಾಕ್ಯವು, ಉಪಸಂಕ್ರಮ್ಯ ಚೇತ್ಯುಕ್ತಿಃ= ಉಪಸಂಕ್ರಮ್ಯ ಎಂಬ ವಾಕ್ಯವು, ಉಪಸಂಕ್ರಾಮತೀತಿ= ಉಪಸಂಕ್ರಾಮತೀತಿ ಎಂಬ, ವಾಕ್= ವಾಕ್ಯವು, ತತ್ರ ತತ್ರ= ಅಲ್ಲಲ್ಲಿ, ಸಾಕ್ಷಾತ್ ಜ್ಞಾನಫಲಂ= ಸಾಕ್ಷಾತ್ ಜ್ಞಾನಫಲವಾದ, ಮೋಕ್ಷಂ= ಮೋಕ್ಷವನ್ನು, ಶಂಸಂತ್ಯಃ= ಹೇಳುವಂತಹ, ಅರ್ಥಾಂತರವರ್ಜಿತಾಃ= ಅರ್ಥಾಂತರ ಶೂನ್ಯವಾದ, ಬಹ್ವ್ಯಃ= ಅನೇಕ ವಾಕ್ಯಗಳು, ಸರ್ವೈಕ್ಯೇ= ಮೋಕ್ಷದಲ್ಲಿ ಸರ್ವೈಕ್ಯವನ್ನು ಅಂಗೀಕಾರ ಮಾಡಿದರೆ, ಕಥಂ ಘಟೇರನ್= ಹೇಗೆ ಉಪಪನ್ನವಾಗುತ್ತವೆ?

**ಅನುವಾದ –** **ಪರಮಂ ಸಾಮ್ಯಂ ಉಪೈತಿ ಎಂಬ, ಸಹಬ್ರಹ್ಮಣಾ ವಿಪಶ್ಚಿತಾ ಎಂಬ, ಪರಂಜ್ಯೋತಿರೂಪಸಂಪದ್ಯ ಎಂಬ, ಅನ್ನಮಯಮಾತ್ಮಾನಂ ಉಪಸಂಕ್ರಮ್ಯ ಎಂಬ, ಅನ್ನಮಯಮಾತ್ಮಾನಂ ಉಪಸಂಕ್ರಾಮತಿ ಎಂಬ ಮೋಕ್ಷವೇ ಸಾಕ್ಷಾತ್ ಜ್ಞಾನದ ಫಲವೆಂದು ಶಂಸಿಸುವ ಅರ್ಥಾಂತರ ಶೂನ್ಯವಾದ ಅಲ್ಲಲ್ಲಿರುವ ಅನೇಕ ಶ್ರುತಿಗಳು ಮೋಕ್ಷದಲ್ಲಿ ಸರ್ವೈಕ್ಯವನ್ನು ಅಂಗೀಕರಿಸಿದರೆ ಹೇಗೆ ಉಪಪನ್ನವಾಗುತ್ತವೆ?**

**ಭಾವವಿಲಾಸಿನೀ–** ''ಪರಮಂ ಸಾಮ್ಯಮೇವೇತ್ಯನೇನ ''ಯದಾ ಪಶ್ಯಃ ಪಶ್ಯತೇ ರುಗ್ಮವರ್ಣಂ ಕರ್ತಾಮೀಶಂ ಪುರುಷಂ ಬ್ರಹ್ಮಯೋನಿಮ್ । ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ ನಿರಂಜನಃ ಪರಮಂ ಸಾಮ್ಯಮುಪೈತೀ''ತಿ ಶ್ರುತಿಃ ಸಂಗೃಹಿತಾ । ಬ್ರಹ್ಮಣಾ ಸಹ ಚೇತಿ ವಾಗಿತ್ಯನೇನ ''ಯೋ ವೇದನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ವಿಪಶ್ಚಿತೇ''ತಿ ಶ್ರುತಿರ್ಗೃಹೀತಾ । ಉಪಸಂಕ್ರಮ್ಯ ಚೇತ್ಯುಕ್ತಿರಿತ್ಯನೇನ ''ಪರಂ ಜ್ಯೋತಿರುಪಸಂಪದ್ಯ ಸ್ವೇನ ರೂಪೇಣಾಭಿನಿಷ್ಪದ್ಯತೇ । ಸ ತತ್ರ ಪರ್ಯೇತೀ''ತಿ ಶ್ರುತಿಃ ಸಂಗೃಹಿತಾ । ಏತಮಾನಂದಮಯಮಾತ್ಮಾನಮುಪಸಕ್ರಮ್ಯೇತ್ಯಾರಭ್ಯ ಕಾಮಾನ್ನೀಕಾಮರೂಪ್ಯ- ನುಸಂಚರನ್ನಿತ್ಯಂತಾ ಭೃಗುವಲ್ಲೀ ಶ್ರುತಿಶ್ಚ । ಉಪಸಂಕ್ರಾಮತೀತಿ ವಾಗಿತ್ಯನೇನ ಏತಮನ್ನಮಯ- ಮಾತ್ಮಾನಾಮುಪ ಸಂಕ್ರಾಮತೀತ್ಯಾದಿರೂಪಾ ಬ್ರಹ್ಮವಲ್ಲೀ ಶ್ರುತಿರ್ಗೃಹೀತಾ ।

ಏವಂ ಮುನೇರ್ವಿಜಾನತಃ ತದಾ ವಿದ್ವಾನ್ ಯೋ ವೇದೇತ್ಯಾದಿರೂಪೇಣ ಜ್ಞಾನಿನಾಮೇವ ತತ ತ್ರತ್ರೋಕ್ತ ಫಲಶ್ರವಣಾತ್ ಸಾಕ್ಷಾತ್ ಜ್ಞಾನಫಲಮಿತ್ಯುಕ್ತಂ ಮೋಕ್ಷಮ್ । ಪರಮಮೋಕ್ಷ- ಮಿತ್ಯರ್ಥಃ । ಉಪಲಕ್ಷಣಂ ಚೈತತ್ । ದೃಷ್ಟಾಂತೇ ಆಧಾರಾಧೇಯಯೋರುಭಯೋ- ರಪ್ಯುದಯೋಃ ಶುದ್ಧತ್ವೋಕ್ತ್ಯಾ ದಾರ್ಷ್ಟಾಂತಿಕೇಽಪಿ ಪ್ರವೇಷ್ಟು ಪ್ರವೇಶ್ಯಯೋರ್ಜೀವ- ಬ್ರಹ್ಮಣೋರುಭಯೋರಪಿ ಶುದ್ಧತ್ವ ಲಾಭಾಚ್ಚ ಪರಮಮೋಕ್ಷತ್ವಂ ಜ್ಞಾತವ್ಯಮ್ । ಅನ್ಯಥಾ ತತ್ತ್ವದವೈಯ್ಯರ್ಥ್ಯಮೇವೇತಿ ಭಾವಃ । ನ ಚ ವಾಚ್ಯಮನ್ನಮಯಾದೀನಾಂ ಕೋಶತ್ವಾತ್ ಕಥಂ ತತ್ ಪ್ರಾಪ್ತಿರ್ಮೋಕ್ಷ ಇತಿ । ಕಾಮಾನ್ನೀಕಾಮರೂಪ್ಯನು ಸಂಚರನ್ನಿತ್ಯುಕ್ತ ತಜ್‌ಜ್ಞಾನಫಲಸ್ಯ ಮುಕ್ತೇರನ್ಯತ್ರಾಸಂಭಾವಿತತಯಾ ಮೌಕ್ತಫಲತ್ವಾವಶ್ಯಂ ಭಾವೇನ ತತ್ಸಾಧಕಾನ್ನಮಯಾದೀನಾಂ ಬ್ರಹ್ಮತ್ವಾಪರಿಹಾರಾತ್ । ಸ್ಥಾನದ್ವಯೇಽನ್ನಮಯಾದಿಪಂಚಕೇಷ್ವನ್ನಮಯಮಾತ್ಮಾನ- ಮುಪಸಂಕ್ರಾಮತೀತ್ಯಾದಿ ರೂಪೇಣೈತಮನ್ನಮಯಮಾತ್ಮಾನುಮುಪಸಂಕ್ರಮ್ಯೇತ್ಯಾದಿ ರೂಪೇಣ ಚ ದುರ್ಜನದಂತಭಂಗಾಯ ದಶಧಾ ಶ್ರುತ್ಯೈವಾನ್ನಮಯಾದೀನಾಂ ಪಂಚಾನಾಮ- ಪ್ಯಾತ್ಮತ್ವೋಕ್ತೇಶ್ಚ । ಗೌಣಶ್ಚೇನ್ನಾತ್ಮಶಬ್ದಾದಿತಿ ಸೂತ್ರಕೃತ್ಯೈವಾತ್ಮಶಬ್ದೇನ ಗೌಣಸ್ಯ ತ್ಯಜಿತ- ತ್ವಾದಸಾಧಾರಣೋ ಹಿ ಗುಣತ್ರಯವಿಧುರೇ ಪರೇ ಬ್ರಹ್ಮಣಿ ಏವಾಸೌ ಶಬ್ದಃ । ಅತ ಏವ ಕೋಶತ್ವವಾದಿನ ಉಪಸಂಕ್ರಾಮತ್ಯುಪಸಂಕ್ರಮ್ಯೇತಿ ಚ ಪದಯೋರತಿಸಂಕ್ರಾಮತ್ಯತಿಸಂಕ್ರಮ್ಯೇತಿ ಚ ಯದನಾನುಭಾವಿಕಾರ್ಥಕಥನಂ ತದಪಿ ಗರ್ಭಸ್ರಾವೇಣೈವ ಗತಂ । ಆತ್ಮಾತಿಕ್ರಮಣಸ್ಯ ಸ್ವಮತೇ ಪ್ರಯೋಗಾತ್ । ನ ಹಿ ಕೋಽಪ್ಯುಪನಯನಶಬ್ದಸ್ಯ ವಿಪ್ರಸಮೂಹಮತಿಕ್ರಮ್ಯ ಬಹಿರ್ನಯನ- ಮರ್ಥಂ ಬ್ರೂತೇ ॥ ೩೦೯–೩೧೦ ॥

**ವಿವರಣೆ –** ಶ್ರುತಿಗಳಿಗೆ ಮಾಯಾವಾದಿಗಳು ಹೇಳುವ ಸರ್ವೈಕ್ಯವು ಅರ್ಥವೆಂದು ಅಂಗೀಕರಿಸಿದರೆ ಮುಕ್ತಿಸ್ವರೂಪವನ್ನು ಪ್ರತಿಪಾದಿಸುವ ಅನೇಕಶ್ರುತಿಗಳ ವಿರೋಧವನ್ನು ಇಲ್ಲಿ ಹೇಳುತ್ತಾರೆ. ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ಎಂಬ ಕಾಠಕಶ್ರುತಿಯು ಪರಮಾತ್ಮನ ಸಾದೃಶ್ಯವನ್ನೇ ಮೋಕ್ಷದಲ್ಲಿ ಹೇಳುತ್ತದೆ. ಪರಮಂ ಸಾಮ್ಯಮುಪೈತಿ ಎಂಬ ಅಥರ್ವಣ

ಉಪನಿಷತ್ತಿನ ವಾಕ್ಯವೂ ಸಹ ಉತ್ತಮವಾದ ಸಾಮ್ಯವನ್ನೇ ಹೇಳುತ್ತದೆ ಹೊರತಾಗಿ ಅಭೇದವನ್ನು ಹೇಳುವುದಿಲ್ಲ. ಸೋಶ್ನುತೇ ಸರ್ವಾನ್ ಕಾಮಾನ್ ಸಹ ಬ್ರಹ್ಮಣಾ ಎಂಬ ತೈತ್ತಿರೀಯಶ್ರುತಿಯು ಬ್ರಹ್ಮನ ಜೊತೆಯಲ್ಲಿಯೇ ಭೋಗವನ್ನು ಹೇಳಿ ಅಭೇದವನ್ನು ನಿರಾಕರಿಸುತ್ತದೆ. ಪರಂಜ್ಯೋತಿರುಪಸಂಪದ್ಯ ಸ್ವೇನರೂಪೇಣ ಅಭಿನಿಷ್ಪದ್ಯತೇ ಎಂಬ ಶ್ರುತಿಯು ಮೋಕ್ಷದಲ್ಲಿ ಪರಮಾತ್ಮನ ಪ್ರಾಪ್ತಿಯನ್ನೇ ಹೇಳುತ್ತದೆ. ಅನ್ನಮಯ-ಮಾತ್ಮಾನಮುಪಸಂಕ್ರಮ್ಯ ಪ್ರಾಣಮಯಮಾತ್ಮಾನಮುಪಸಂಕ್ರಮ್ಯ ಮನೋಮಯ-ಮಾತ್ಮಾನಮುಪಸಂಕ್ರಮ್ಯ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ ಆನಂದಮಯ-ಮಾತ್ಮಾನಮುಪಸಂಕ್ರಮ್ಯ ಎಂಬ ಐದು ವಾಕ್ಯಗಳು ಉಪ ಎಂದರೆ ಸಮೀಪಗಮನವನ್ನೇ ಹೇಳುತ್ತವೆ. ಅದರಂತೆಯೇ ಅನ್ನಮಯಮಾತ್ಮಾನಮುಪಸಂಕ್ರಾಮತಿ ಪ್ರಾಣಮಯ-ಮಾತ್ಮಾನಮುಪಸಂಕ್ರಾಮತಿ ಮನೋಮಯಮಾತ್ಮಾನಮುಪಸಂಕ್ರಾಮತಿ ವಿಜ್ಞಾನಮಯ-ಮಾತ್ಮಾನಮುಪಸಂಕ್ರಾಮತಿ ಆನಂದಮಯಮಾತ್ಮಾನಮುಪಸಂಕ್ರಾಮತಿ ಎಂಬ ಐದು ವಾಕ್ಯಗಳೂ ಸಹ ಪುನಃ ಸಮೀಪಪ್ರಾಪ್ತಿಯನ್ನೇ ಹೇಳುತ್ತವೆ. ಆದ್ದರಿಂದ ಯಾವ ಶ್ರುತಿಯೂ ಅಭೇದವನ್ನು ಹೇಳುವುದಿಲ್ಲ. ಅನ್ನಮಯಾದಿಶಬ್ದಗಳಿಗೆ ಪರರು ಕೋಶ ಎಂದು ಅರ್ಥಮಾಡುವುದು ಸರಿಯಲ್ಲ. ಏಕೆಂದರೆ ಈ ಹತ್ತು ವಾಕ್ಯಗಳಲ್ಲಿಯೂ ಆತ್ಮಶಬ್ದವಿದೆ. ಆತ್ಮಶಬ್ದವು ಬ್ರಹ್ಮಪರ ಎಂಬುದು ಬ್ರಹ್ಮಸೂತ್ರನ್ಯಾಯಸಿದ್ಧವಾಗಿದೆ. ಆದ್ದರಿಂದ ಅನ್ನಮಯಾದಿಗಳು ಕೋಶ ಎಂಬ ಶಂಕೆಯು ಗರ್ಭಸ್ರಾವದಿಂದಲೇ ಹೊರಟು ಹೋಗುತ್ತದೆ. ಇನ್ನು ಉಪಸಂಕ್ರಮ್ಯ ಎಂಬುದಕ್ಕೆ ಅತಿಸಂಕ್ರಮ್ಯ ಎಂದರೆ ದಾಟಿ ಎಂಬ ಅರ್ಥವು ಅಪ್ರಾಮಾಣಿಕವಾದುದು. ಯಾರೂ ಕೂಡ ವಿಪ್ರಸಮೂಹಂ ಉಪಸಂಕ್ರಾಮತಿ ಎಂಬ ವಾಕ್ಯಕ್ಕೆ ವಿಪ್ರಸಮೂಹದ ಸಮೀಪಕ್ಕೆ ಹೋಗುತ್ತಾನೆ ಎಂಬ ಅರ್ಥವನ್ನು ಬಿಟ್ಟು, ವಿಪ್ರಸಮೂಹವನ್ನು ದಾಟಿ ಹೋಗುತ್ತಾನೆ ಎಂದು ಹೇಳುವುದಿಲ್ಲ. ಆದ್ದರಿಂದ ಮೋಕ್ಷದಲ್ಲಿ ಅಭೇದವನ್ನು ನಿರಾಕರಿಸುವ ಇಷ್ಟು ಶ್ರುತಿಗಳ ಬಲದಿಂದ ಮೋಕ್ಷದಲ್ಲಿ ಜೀವಬ್ರಹ್ಮರಿಗೆ ಭೇದ ಮತ್ತು ಸಾದೃಶ್ಯಗಳನ್ನೇ ಒಪ್ಪಬೇಕು ಎಂದು ಅಭಿಪ್ರಾಯ.

ಯದಿ ಜೀವನ್ಮುಕ್ತಿಪರಾ ಸರ್ವಾಪೀಯಂ ಮಮ ಶ್ರುತಿಃ ।
ಯತ್ರತ್ವಸ್ಯೇತಿ ಯಾ ವಾಕ್ತೇ ತರ್ಹಿ ಸುಪ್ತಿಪರಾಽಸ್ತು ವಾ ॥ ೩೧೧ ॥

**ಅರ್ಥ –** ಯದಿ= ಒಂದು ಪಕ್ಷ, ಮಮ= ನಾನು ಹೇಳಿದ, ಸರ್ವಾಪಿ ಇಯಂ ಶ್ರುತಿಃ= ಈ ಎಲ್ಲ ಶ್ರುತಿಯು, ಜೀವನ್ಮುಕ್ತಿ ಪರಾ= ಜೀವನ್ಮುಕ್ತಿಪರವೆಂದು ಹೇಳುವುದಾದರೆ, ತೇ= ನಿನಗೆ ಸಮ್ಮತವಾದ, ಯತ್ರತ್ವಸ್ಯೇತಿ= ಯತ್ರತ್ವಸ್ಯ ಎಂಬ, ಯಾ ವಾಕ್= ಯಾವ ವಾಕ್ಯವಿದೆಯೋ, ಸಾ= ಅದು, ಸುಪ್ತಿಪರಾಸ್ತು= ಸುಷುಪ್ತಿ ಪರವಾಗಲಿ.

**ಅನುವಾದ** – ಒಂದು ಪಕ್ಷ ನಾನು ಹೇಳಿದ ಶ್ರುತಿಗಳೆಲ್ಲವೂ ಜೀವನ್ಮುಕ್ತಿಪರ ಹೊರತು ಪರಮ ಮೋಕ್ಷವಿಷಯಕವಲ್ಲ ಎಂದು ಹೇಳುವುದಾದರೆ ನಿನಗೆ ಸಮ್ಮತವಾದ ಯತ್ರತ್ವಸ್ಯ ಎಂಬ ಶ್ರುತಿಯೂ ಪರಮಮೋಕ್ಷಪರವಲ್ಲ ಕಿಂತು ಸುಷುಪ್ತಿ ಪರವೆಂದಾಗಲಿ.

**ಯತ್ರ ಜಾಗರಣೇ ನಾನಾಪದಾರ್ಥದ್ವೈತವನ್ನೃಣಾಂ ।**
**ತಜ್‌ಜ್ಞಾನಂ ಚ ಭವೇತ್ ತರ್ಹಿ ಸ್ಯಾದನ್ಯೋನ್ಯನಿರೀಕ್ಷಣಮ್ ॥ ೩೧೨ ॥**

**ಯತ್ರ ಸರ್ವಂ ಚ ಕರಣಮಾತ್ಮಸಾಕ್ಷ್ಯೇವ ಕೇವಲಮ್ ।**
**ಬಾಹ್ಯಾನಾಂ ಮನಆದೀನಾಂ ಯದಾ ಹ್ಯುಪರತಿಸ್ತದಾ ॥ ೩೧೩ ॥**

**ತತ್ರ ಸುಪ್ತೌ ಕೇನ ಕಿಂ ವಾ ಪಶ್ಯೇಜ್ಜಿಘ್ರೇಚ್ಚ ಕಂ ತದಾ ।**
**ಸ್ವದ್ರಷ್ಟಾರಂ ಚ ಕಂ ಪಶ್ಯೇದಜ್ಞಾನಾವರಣಾತ್ ತದಾ ।**
**ಯೇನೇದಮಖಿಲಂ ವೇದ ಜಾನೀಯಾತ್ ತಂ ಚ ಕೇನ ಸಃ ॥ ೩೧೪ ॥**

**ಅರ್ಥ** – ಯತ್ರ ಜಾಗರಣೇ= ಯಾವ ಜಾಗ್ರದವಸ್ಥೆಯಲ್ಲಿ, ನಾನಾ ಪದಾರ್ಥದ್ವೈತವತ್= ನಾನಾ ಪದಾರ್ಥಗಳ ದ್ವೈತದಂತೆ, ನೃಣಾಂ= ಮನುಷ್ಯರಿಗೆ, ತಜ್ಞಾನಂ ಚ= ಆ ಪದಾರ್ಥಗಳ ಜ್ಞಾನವೂ ಸಹ, ಭವೇತ್= ಆಗುತ್ತದೆಯೋ, ತರ್ಹಿ= ಆಗ, ಅನ್ಯೋನ್ಯನಿರೀಕ್ಷಣಂ= ಪರಸ್ಪರ ನಿರೀಕ್ಷಣಾದಿಗಳು, ಭವೇತ್= ಆಗುತ್ತವೆ. ಯತ್ರ= ಎಲ್ಲಿ, ಸರ್ವಂ ಚ ಕರಣಂ= ಎಲ್ಲ ಕರಣಗಳೂ, ಕೇವಲಂ= ಕೇವಲ, ಆತ್ಮಸಾಕ್ಷ್ಯೇವ= ಜೀವ ಸಾಕ್ಷಿರೂಪವೇ ಆಗುತ್ತವೆಯೋ, ಯದಾ= ಯಾವಾಗ, ಬಾಹ್ಯಾನಾಂ= ಬಾಹ್ಯವಾದ, ಮನಆದೀನಾಂ= ಮನಸ್ಸು ಮೊದಲಾದ ಕರಣಗಳಿಗೆ, ಉಪರತಿಃ= ಉಪರಮವು ಇರುತ್ತದೆಯೋ, ತದಾ= ಆಗ, ತತ್ರಸುಪ್ತೌ= ಆ ಸುಪ್ತಿಯಲ್ಲಿ, ಕೇನ= ಯಾವುದರಿಂದ, ಕಿಂ ವಾ= ಏನನ್ನು ತಾನೇ, ಪಶ್ಯೇತ್= ನೋಡುತ್ತಾನೆ, ತದಾ= ಆಗ, ಕಂ= ಏನನ್ನು, ಜಿಘ್ರೇತ್ ಚ= ಆಘ್ರಾಣಿಸುತ್ತಾನೆ, ಸ್ವದಷ್ಟಾರಂ= ತನ್ನನ್ನು ನೋಡುವ ಇನ್ನೊಬ್ಬ ಪುರುಷನಾದ, ಕಂ ಚ= ಯಾವನನ್ನು ತಾನೇ, ಪಶ್ಯೇತ್= ನೋಡುತ್ತಾನೆ, ತದಾ= ಆಗ, ಅಜ್ಞಾನಾವರಣಾತ್= ಅಜ್ಞಾನದ ಆವರಣವು ಇರುವುದರಿಂದ, ಯೇನ= ಯಾವ ಪರಮಾತ್ಮನಿಂದ, ಇದಮಖಿಲಂ= ಈ ಎಲ್ಲವನ್ನೂ, ವೇದ= ತಿಳಿಯುತ್ತಾನೆಯೋ, ತಂ ಚ= ಆ ಪರಮಾತ್ಮನನ್ನಾದರೂ, ಸಃ= ಆ ಸುಪ್ತನು, ಕೇನ= ಯಾವ ಕರಣದಿಂದ, ಜಾನೀಯಾತ್= ತಿಳಿಯುತ್ತಾನೆ?

**ಅನುವಾದ** – ಯಾವ ಜಾಗ್ರದವಸ್ಥೆಯಲ್ಲಿ ನಾನಾಪದಾರ್ಥಗಳು ಇರುವಂತೆ ನಾನಾ ಪದಾರ್ಥಗಳ ಜ್ಞಾನವು ಇರುತ್ತದೆಯೋ ಆಗ ಪರಸ್ಪರ ನಿರೀಕ್ಷಣಾದಿಗಳು

ಉಂಟಾಗುತ್ತವೆ. ಯಾವ ಸುಪ್ತಿಯ ಅವಸ್ಥೆಯಲ್ಲಿ ಎಲ್ಲ ಕರಣವೂ ಆತ್ಮಸಾಕ್ಷಿಯೇ ಆಗಿವೆಯೋ ಬಾಹ್ಯವಾದ ಮನಸ್ಸು ಮೊದಲಾದ ಕರಣಗಳು ಉಪರತವಾಗಿವೆಯೋ ಅಂತಹ ಸುಪ್ತ್ಯವಸ್ಥೆಯಲ್ಲಿ ಜೀವನು ಯಾವುದರಿಂದ ಏನನ್ನು ನೋಡುತ್ತಾನೆ? ಅಥವಾ ಆಗ ಏನನ್ನು ಆಘ್ರಾಣಿಸುತ್ತಾನೆ? ಸುಪ್ತನಾದ ತನ್ನನ್ನು ನೋಡುವ ಯಾವ ಇನ್ನೊಬ್ಬ ಎಚ್ಚರಗೊಂಡ ಪುರುಷನನ್ನು ನೋಡುತ್ತಾನೆ? ಆಗ ಅಜ್ಞಾನಾವರಣವಿರುವುದರಿಂದ ಯಾವ ಪರಮಾತ್ಮನ ಅನುಗ್ರಹದಿಂದ ಈ ಎಲ್ಲ ಜ್ಞಾನವನ್ನು ಪಡೆಯುತ್ತಾನೆಯೋ ಆ ಪರಮಾತ್ಮನನ್ನಾದರೂ ಯಾವ ರೀತಿಯಲ್ಲಿ ತಿಳಿಯುತ್ತಾನೆ?

**ಭಾವವಿಲಾಸಿನೀ–** ಯತ್ರ ತ್ವಸ್ಯೇತಿ ವಾಕ್ಯಸ್ಯ ಪುನರಪ್ಯರ್ಥಾಂತರಂ ವಕ್ತುಂ ಮಂದಾಶಂಕಾಮುತ್ಥಾಪಯತಿ ॥ **ಯದೀತಿ** ॥ ೩೧೧-೩೧೨ ॥

ಸುಪ್ತೌ ಸ್ವಜ್ಞಾನಸದ್ಭಾವಾತ್ ''ವಿಜ್ಞಾತಾರಮರೇ ಕೇನ ವಿಜಾನೀಯಾದಿ''ತ್ಯಸ್ಯ ಕೋಽರ್ಥ ಇತ್ಯತ ಆಹ – **ಸ್ವದ್ರಷ್ಟಾರಮಿತಿ** ॥ ಸ್ವಂ ಸುಪ್ತಂ ಸ್ವದ್ರಷ್ಟಾರಂ ಜಾಗ್ರತ್ಪುರುಷಮ್ । ತಂ ಪರಮಾತ್ಮಾನಂ । ಸ ಸುಪ್ತಃ ॥ ೩೧೩-೩೧೪ ॥

**ವಿವರಣೆ** – ಸುಪ್ತಿಪರವಾಗಿ ಅರ್ಥವನ್ನು ಮಾಡಬಹುದು ಎಂದು ಹೇಳಿದ ವಿಷಯವನ್ನು ಇಲ್ಲಿ ಸಮರ್ಥಿಸುತ್ತಾರೆ. ತನ್ನ ಜ್ಞಾನವಿರುವುದರಿಂದ ವಿಜ್ಞಾತಾರಮರೇ ಕೇನ ವಿಜಾನೀಯಾತ್ ಎಂಬ ವಾಕ್ಯಕ್ಕೆ ಅರ್ಥಮಾಡುವುದು ಸ್ವಲ್ಪ ಕಷ್ಟವಾಗುತ್ತದೆ. ಆದರೂ ರಾಜರು ಸುಲಭವಾಗಿ ಅದಕ್ಕೆ ಸ್ವವಿಜ್ಞಾತಾರಂ ಎಂದರೆ ತನ್ನನ್ನು ನೋಡುವ ಜಾಗ್ರತ್ ಪುರುಷನನ್ನು ಎಂದು ಸರಳವಾದ ಅರ್ಥವನ್ನು ಮಾಡಿ ಕ್ಲೇಶವಿಲ್ಲದೆ ವಾಕ್ಯಾರ್ಥವನ್ನು ಹೇಳಿದ್ದಾರೆ.

ಅಥವಾ ಪ್ರಾಹ ಸಾ ಮುಕ್ತೌ ಸುಖರೂಪೇಂದ್ರಿಯಾದಿಕಂ ॥ ೩೧೫ ॥

**ಅರ್ಥ** – ಅಥವಾ= ಅಥವಾ, ಸಾ= ಆ ಶ್ರುತಿಯು, ಮುಕ್ತೌ= ಮೋಕ್ಷದಲ್ಲಿ, ಸುಖರೂಪೇಂದ್ರಿಯಾದಿಕಂ= ಸುಖರೂಪವಾದ ಇಂದ್ರಿಯಾದಿಗಳನ್ನು ಪ್ರಾಹ= ಹೇಳುತ್ತದೆ.

**ಅನುವಾದ – ಅಥವಾ ಆ ಶ್ರುತಿಯು ಮೋಕ್ಷದಲ್ಲಿ ಸುಖರೂಪವಾದ ಇಂದ್ರಿಯಾದಿ ಗಳನ್ನು ಹೇಳುತ್ತದೆ.**

**ಭಾವವಿಲಾಸಿನೀ–** ಸುಖರೂಪೇಂದ್ರಿಯಾದಿಕಮಿತ್ಯನೇನ ಕ ಶಬ್ದಸ್ಯ ಸುಖವಾಚಿತ್ವಾತ್ ಕೇನ ಸುಖರೂಪೇಣ ಚಕ್ಷುಷಾ ಕಂ ಸುಖರೂಪಂ ಜೀವಾಂತರಮ್ । ಕೇನ ಸುಖರೂಪೇಣ ಘ್ರಾಣೇನ ಕಂ ಸುಖರೂಪಗಂಧಯುಕ್ತಂ ನಾರೀಮುಖಂ ಕೇನ ಸುಖರೂಪೇಣ ಸಾಕ್ಷಿಣೇತ್ಯಾದಿ ಯೋಜನಿಕಾಂ ಸೂಚಯತಿ । ''ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ ಪರೇಽವ್ಯಯೇ ಏಕೀ

ಭವಂತೀ''ತಿ ಶ್ರುತೇರರ್ಥಮಾಹ – ಏಕೀಭವಂತೀತಿ ॥ ಕ್ಷೀರೇ ನೀರಮೇಕೀಭೂತ-ಮಿತಿವನ್ಮುಕ್ತಾನಾಂ ಹರ್ಯುದರೇ ಪ್ರವೇಶೇನ ಪೃಥಗದರ್ಶನಾದೇಕೀಭವಂತೀತಿ ಪ್ರಯೋಗ ಇತಿ ಭಾವಃ ॥ ೩೧೫ ॥

**ವಿವರಣೆ** – 'ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ' ಮುಂತಾದ ಸ್ಥಳಗಳಲ್ಲಿ ಕ ಎಂದರೆ ಸುಖ ಎಂದು ವ್ಯವಸ್ಥಿತವಾಗಿದೆ. ಆದ್ದರಿಂದ ಕೇನ ಎಂದರೆ ಸುಖರೂಪವಾದ ಚಕ್ಷುಸ್ಸಿನಿಂದ ಕಂ ಸುಖಶರೀರನಾದ ಇನ್ನೊಬ್ಬ ಮುಕ್ತನನ್ನು ಪಶ್ಯೇತ್= ನೋಡುತ್ತಾನೆ, ಕೇನ= ಸುಖರೂಪವಾದ ಘ್ರಾಣದಿಂದ, ಕಂ= ಸುಖರೂಪವಾದ ಗಂಧವನ್ನು, ಜಿಘ್ರೇತ್= ಆಘ್ರಾಣಿಸುತ್ತಾನೆ ಇತ್ಯಾದಿಯಾಗಿ ಅರ್ಥವನ್ನು ಮಾಡಬಹುದು. ಸದ್ದೇಹಃ ಸುಖಗಂಧಶ್ಚ ಎಂದು ಪರಮಾತ್ಮನ ಶರೀರಕ್ಕೆ ಸುಖರೂಪವಾದ ಗಂಧವಿರುವಂತೆ ಮುಕ್ತಶರೀರಕ್ಕೂ ಸುಖರೂಪವಾದ ಗಂಧವಿರುವುದರಿಂದ ಯಾವ ಅನುಪಪತ್ತಿಯೂ ಇಲ್ಲ ಎಂದು ಅಭಿಪ್ರಾಯ.

**ಏಕೀಭವಂತಿ ಚ ಪರೇ ಮುಕ್ತಾಶ್ಚ ಕ್ಷೀರನೀರವತ್ ।**
**ಪ್ರವಿಷ್ಟತ್ವಾತ್ ತದುದರೇ ಸರ್ವೇಷಾಂ ಸ್ವಪತಾಂ ಹೃದಿ ।**
**ಅಥೋಽಪ್ಯೇವಮಭೂತ್ ಸ್ವಸ್ಥಃ ಕ್ಲಿಷ್ಟಾರ್ಥೋ ನಾಸ್ತಿ ಕಶ್ಚನ ।**
**ಪುನರಾವೃತ್ತಿರೇವಾಸೀತ್ ತದ್ವತ್ತ್ವದ್ವಚನಸ್ಯ ಚ ॥ ೩೧೬ ॥**

**ಅರ್ಥ** – ಪರೇ= ಪರಮಾತ್ಮನಲ್ಲಿ, ಮುಕ್ತಾಃ= ಮುಕ್ತರು, ಕ್ಷೀರನೀರವತ್= ಹಾಲು ಮತ್ತು ನೀರಿನಂತೆ, ಏಕೀಭವಂತಿ= ಒಂದಾಗುತ್ತಾರೆ, ಸ್ವಪತಾಂ= ಸುಷುಪ್ತಿಯಲ್ಲಿರುವವರ, ಸರ್ವೇಷಾಂ= ಎಲ್ಲರ, ಹೃದಿ= ಹೃದಯದಲ್ಲಿ ಎಂದರೆ, ತದುದರೇ= ಪ್ರಾಜ್ಞನಾಮಕ ಪರಮಾತ್ಮನ ಉದರದಲ್ಲಿ, ಪ್ರವಿಷ್ಟತ್ವಾತ್= ಪ್ರವಿಷ್ಟರಾದ ಕಾರಣದಿಂದ, ಎಂಬ, ಏವಂ= ಈ ರೀತಿಯಾದ, ಅಥೋಽಪಿ= ಅರ್ಥವೂ ಕೂಡ, ಸ್ವಸ್ಥಃ= ಸ್ವಾರಸಿಕವಾಗಿಯೇ, ಅಭೂತ್= ಆಯಿತು ಇಲ್ಲಿ, ಕಶ್ಚನ= ಯಾವ, ಕ್ಲಿಷ್ಟಾರ್ಥಃ= ಕ್ಲಿಷ್ಟಾರ್ಥವು, ನಾಸ್ತಿ= ಇಲ್ಲ, ತದ್ವತ್= ನಿನ್ನಂತೆ, ತ್ವದ್ವಚನಸ್ಯ= ನಿನ್ನ ವಾಕ್ಯಕ್ಕೂ ಕೂಡ, ಪುನರಾವೃತ್ತಿರೇವ= ಪುನರಾವೃತ್ತಿಯೇ, ಆಸೀತ್= ಉಂಟಾಯಿತು.

**ಅನುವಾದ** – ಸುಷುಪ್ತಿಯಲ್ಲಿರುವವರ ಎಲ್ಲರ ಹೃದಯದಲ್ಲಿರುವ ಪ್ರಾಜ್ಞನಾಮಕ ಪರಮಾತ್ಮನಲ್ಲಿ ಹಾಲು ಮತ್ತು ನೀರುಗಳಂತೆ ಎಲ್ಲ ಮುಕ್ತರು ಪ್ರವಿಷ್ಟರಾದುದರಿಂದ ನಾಶರಹಿತನಾದ ಪರಮಾತ್ಮನಲ್ಲಿ ಎಲ್ಲರೂ ಒಂದಾಗುತ್ತಾರೆ ಎಂಬ ಈ ಅರ್ಥವು ಯಾವ ಕ್ಲೇಶವೂ ಇಲ್ಲದೆ ಸರಳವಾಗಿಯೇ ಆಯಿತು. ಆದ್ದರಿಂದ ಮುಕ್ತಿಗೆ ಹೋಗಬೇಕಾದ ನೀನು ಮುಕ್ತಿಯಿಂದ ಹಿಂದಕ್ಕೆ ಬಂದಂತೆ ಪರೇವ್ಯಯೇ ಸರ್ವ ಏಕೀಭವಂತಿ ಎಂದು ಮುಕ್ತಿಯನ್ನು ಪ್ರತಿಪಾದನೆ ಮಾಡಲು ಹೊರಟ ನಿನ್ನ ಈ

ವಾಕ್ಯವೂ ಕೂಡ ಮುಕ್ತಿಯಿಂದ ಹಿಂದಿರುಗಿ ಬಂದು ಸುಪ್ತಿಯನ್ನೇ ಪ್ರತಿಪಾದನೆ ಮಾಡುತ್ತದೆ.

**ಭಾವವಿಲಾಸಿನೀ–** ಅರ್ಥಾಂತರಮಪ್ಯಾಹ – **ಪ್ರವಿಷ್ಟತ್ವಾದಿತಿ ॥** ಹೃದಿ ತದುದರೇ ಹೃದಯಸ್ಥಸ್ಯ ಪ್ರಾಜ್ಞನಾಮಕಸ್ಯ ತಸ್ಯ ಹರೇರುದರೇ । ''ಸತಾ ಸೌಮ್ಯ ತದಾ ಸಂಪನ್ನೋ ಭವತಿ । ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದೇ''ತ್ಯಾದಿ ಶ್ರುತೇಃ ಸುಪ್ತಾನಾಮಪಿಹರ್ಯುದರ ಪ್ರವೇಶಾದೀತಿ ಭಾವಃ । ತದ್ವತ್ ಮುಕ್ತ್ಯಯೋಗ್ಯಸ್ಯ ತವ ಮುಕ್ತಿಂ ಜಿಗಮಿಷತೋಽಪಿ ಯಥಾ ಪುನರಾವೃತ್ತಿರೇವ ಭವತಿ । ತಥಾ ಮುಕ್ತಿಪ್ರತಿಪಾದಿಕತ್ವೇನಾ- ಭಿಮತಮಿದಂ ವಾಕ್ಯಂ ಚ ಸುಪ್ತಿಪ್ರತಿಪಾದನಾಯ ಪುನರಾವೃತ್ತಿಮದಭೂದಿತಿ ವಿನೋದೋಕ್ತಿಃ ॥ ೩೧೬ ॥

**ವಿವರಣೆ** – ಈಗ 'ಪರೇವ್ಯಯೇ ಸರ್ವ ಏಕೀಭವಂತಿ' ಎಂಬ ಶ್ರುತಿಗೆ ಅರ್ಥಾಂತರವನ್ನು ಮಾಡಿ ಮೋಕ್ಷವನ್ನು ಹೇಳಲು ಹೊರಟ ಈ ಶ್ರುತಿಯು ಹಿಂದಿರುಗಿ ಸಂಸಾರಕ್ಕೆ ಬಂದು ಸುಷುಪ್ತಿಯನ್ನೇ ಉಪಪಾದನೆ ಮಾಡುತ್ತದೆ ಎಂದು ವಿನೋದದಿಂದ ಉಪಪಾದನೆ ಮಾಡುತ್ತಾರೆ. ಸುಷುಪ್ತಿಯಲ್ಲಿ ಪರಮಾತ್ಮನ ಪ್ರಾಪ್ತಿಯು 'ಸತಾಸೌಮ್ಯ ತದಾಸಂಪನ್ನೋ ಭವತಿ, ಪ್ರಾಜ್ಞೇನಾತ್ಮನಾಸಂಪರಿಷ್ವಕ್ತಃ ನ ಬಾಹ್ಯಂ ಕಿಂಚನ ವೇದ' ಇತ್ಯಾದಿ ಶ್ರುತಿಗಳಿಂದ ಸಿದ್ಧವಾಗಿರುವುದರಿಂದ ಈ ಅರ್ಥದಲ್ಲಿ ಯಾವ ಕ್ಲೇಶವೂ ಇಲ್ಲ ಎಂದು ಅಭಿಪ್ರಾಯ.

ಮಮ ವಾಕ್ಯಾನಿ ನ ಪುನರಾವರ್ತಂತೇ ಕದಾಚನ ।<br>
ತೇಷು ತೇಷು ಪ್ರಕರಣೇಷ್ವನುಕ್ತ್ವಾನ್ಯಽಫಲಸ್ಯ ಹಿ ॥ ೩೧೭ ॥

**ಅರ್ಥ** – ಮಮ ವಾಕ್ಯಾನಿ= ನನ್ನ ವಾಕ್ಯಗಳಾದರೂ, ಕದಾಚನ= ಎಂದಿಗೂ, ನ ಪುನರಾವರ್ತಂತೇ= ಮೋಕ್ಷದಿಂದ ಹಿಂದಿರುಗಿ ಬರುವುದಿಲ್ಲ, ಹಿ= ಏಕೆಂದರೆ, ತೇಷು ತೇಷು ಪ್ರಕರಣೇಷು= ಆಯಾ ಪ್ರಕರಣಗಳಲ್ಲಿ, ಅನ್ಯಫಲಸ್ಯ= ಬೇರೆ ಫಲಗಳನ್ನು, ಅನುಕ್ತ್ವಾ= ಹೇಳದೇ ಇರುವುದರಿಂದ.

**ಅನುವಾದ** – ನನ್ನ ವಾಕ್ಯಗಳಾದರೋ ಆಯಾ ಪ್ರಕರಣಗಳಲ್ಲಿ ಅನ್ಯಫಲವನ್ನು ಹೇಳದೇ ಇರುವುದರಿಂದ ಪರಮ ಮುಕ್ತಿಯನ್ನು ಬಿಟ್ಟು ಎಂದಿಗೂ ಹಿಂದಿರುಗಿ ಬರುವುದಿಲ್ಲ.

**ಭಾವವಿಲಾಸಿನೀ–** ಆವರ್ತಂತೇ ಪರಮಮುಕ್ತಿಪ್ರತಿಪಾದನಂ ವಿಹಾಯ ಜೀವನ್ಮುಕ್ತಿ- ಪ್ರತಿಪಾದಕತಯಾ ನ ಯೋಜಯಿತುಂ ಶಕ್ಯಂತ ಇತ್ಯರ್ಥಃ । ಅನ್ಯಫಲಸ್ಯ ತತ್ರೋಕ್ತ ಫಲಾದನ್ಯಫಲಾದಸ್ಯ । ತದಾಹೀದಂ ಉಕ್ತಂ ಕಾಮಾನ್ನತ್ವಾದಿಕಂ ಜೀವನ್ಮುಕ್ತಿಸ್ಥ ಫಲಂ ಸ್ಯಾದ್ಯದಿ ತತ್ರೈವ ಪ್ರಕರಣೇ ಪರಮಮುಕ್ತಿಸ್ಥ ಫಲಾಂತರಮುಚ್ಯೇತ । ನ ಚ ತದಸ್ತಿ । ಏಕಸ್ಯಾಂ ಶಾಖಾಯಾಂ ಸಾಧನಮುಕ್ತ್ವಾ ಶಾಖಾಂತರೇ ಫಲಕಥನಸ್ಯ ಸ್ವೋಕ್ತಮೋಕ್ಷಸಾಧನೇ ಜ್ಯೋತಿಷ್ಟೋಮಾದಿ

ವಾಕ್ಯವತ್ತತ್ರೈವ ಫಲಂ ಪ್ರದರ್ಶ್ಯ ರುಚಿಂಮುತ್ಪಾದಯಂತ್ಯಾಃ ಶ್ರುತೇರಸಂಗತತ್ವಾತ್ । ಅತಸ್ತತ್ರ ತತ್ರೋದಿತಮೇವ ಫಲಂ ಪರಮಮುಕ್ತಿಸ್ಥಮೇವ ಫಲಮಿತಿಭಾವಃ । ಉಪಲಕ್ಷಣಂ ಚೈತತ್ । ಜೀವನ್ಮುಕ್ತಸ್ಯೈವೋಷಸ್ತೇ ದುರ್ವಾಸಸಃ ಪರಂಪ್ರತ್ಯನ್ನಪ್ರಾರ್ಥನದರ್ಶನೇನ ಕಾಮಾನ್ನತ್ವಾದೇರ್ಜೀವನ್ಮುಕ್ತಾವಸಂಭವಾತ್ ಚೇತ್ ಇತ್ಯಪಿ ದ್ರಷ್ಟವ್ಯಮ್ ॥ ೩೧೭ ॥

**ವಿವರಣೆ** – ನನ್ನ ಮುಕ್ತಿಪ್ರತಿಪಾದಕವಾಕ್ಯಗಳು ಪರಮಮೋಕ್ಷವನ್ನು ಪ್ರತಿಪಾದನೆ ಮಾಡುತ್ತವೆ ಎಂದೂ ಜೀವನ್ಮುಕ್ತಿಯನ್ನು ಪ್ರತಿಪಾದನೆ ಮಾಡುವುದಿಲ್ಲ. ಏಕೆಂದರೆ ಅಲ್ಲಿ ಹೇಳಿದ ಕಾಮಾನ್ನೀ ಕಾಮರೂಪೀ ಇತ್ಯಾದಿ ಫಲಗಳು ಜೀವನ್ಮುಕ್ತಿದೆಶೆಯಲ್ಲಿ ಉಪಪನ್ನವಾಗುವುದಿಲ್ಲ. ಅದನ್ನು ಬಿಟ್ಟು ಆ ಪ್ರಕರಣಗಳಲ್ಲಿ ಬೇರೆ ಫಲವನ್ನು ಹೇಳಿಲ್ಲ. ಮತ್ತು ಒಂದು ಶಾಖೆಯಲ್ಲಿ ಸಾಧನವನ್ನು ಹೇಳಿ, ಇನ್ನೊಂದು ಶಾಖೆಯಲ್ಲಿ ಶ್ರುತಿಯು ಫಲವನ್ನು ಹೇಳುವುದು ಅಸಂಗತವಾದುದು. ಆದ್ದರಿಂದ ಅಲ್ಲಲ್ಲಿ ಹೇಳಿದ ಫಲಗಳು ಪರಮ ಮೋಕ್ಷದಲ್ಲಿಯೇ ಉಪಪನ್ನವಾಗುವುದರಿಂದ ಅದನ್ನು ಮೋಕ್ಷಪ್ರಕರಣವೆಂದೇ ಹೇಳಬೇಕು. ಮತ್ತು ಜೀವನ್ಮುಕ್ತಿಯ ಅವಸ್ಥೆಯಲ್ಲಿ ಕಾಮಾನ್ನಿತ್ವವು ಕೂಡುವುದೂ ಇಲ್ಲ. ಏಕೆಂದರೆ ಜೀವನ್ಮುಕ್ತನಾದ ಶಾವಸ್ತಿಯೇ ದೂರ್ವಾಸರ ಬಳಿ ಅನ್ನಪ್ರಾಪ್ತಿಗಾಗಿ ಪ್ರಾರ್ಥನೆಯನ್ನು ಮಾಡಿರುವುದು ಉಪನಿಷತ್ತುಗಳಲ್ಲಿ ಕಂಡುಬರುತ್ತದೆ. ಆದ್ದರಿಂದ ನನ್ನ ವಾಕ್ಯಗಳು ಎಂದೂ ಹಿಂದಿರುಗುವುದಿಲ್ಲ ಎಂದು ಅಭಿಪ್ರಾಯ.

ಮುಮುಕ್ಷೋಸ್ತ್ವಸ್ಯ ಕೇನೇದಂ ಫಲಂ ವಕ್ತ್ಯನಪೇಕ್ಷಿತಮ್ ।
ಅನ್ಯತ್ರ ಹಿ ವಿರಕ್ತಾಸ್ತೇ ಸರ್ವವಿದ್ಯಾವಿಶಾರದಾಃ ॥ ೩೧೮ ॥

**ಅರ್ಥ** – ಮುಮುಕ್ಷೋಃ= ಮುಮುಕ್ಷುವಾದ, ಅಸ್ಯ= ಈ ಜೀವನಿಗೆ, ಅನಪೇಕ್ಷಿತಂ= ಅನಪೇಕ್ಷಿತವಾದ, ಇದಂ ಫಲಂ= ಈ ಕಾಮಾನ್ನಿತ್ವಾದಿ ಫಲಗಳನ್ನು, ಕೇನ= ಏತಕ್ಕಾಗಿ, ವಕ್ತಿ= ಹೇಳುತ್ತದೆ? ಸರ್ವವಿದ್ಯಾವಿಶಾರದಾಃ= ಸರ್ವವಿದ್ಯಾವಿಶಾರದರಾದ, ತೇ= ಆ ಯೋಗಿಗಳು, ಅನ್ಯತ್ರ= ಬೇರೆ ಎಲ್ಲ ವಿಷಯಗಳಲ್ಲಿಯೂ, ವಿರಕ್ತಾ ಹಿ= ವಿರಕ್ತರಷ್ಟೆ.

**ಅನುವಾದ** – ಮತ್ತು ಮೋಕ್ಷವನ್ನು ಬಯಸುವ ಈ ಸಾಧಕನಿಗೆ ಅನಪೇಕ್ಷಿತವಾದ ಕಾಮಾನ್ನಿತ್ವಾದಿ ಫಲಗಳನ್ನು ಶ್ರುತಿಯು ಏಕೆ ಹೇಳುತ್ತದೆ? ಸರ್ವವಿದ್ಯಾವಿಶಾರದರಾದ ಆ ಯೋಗಿಗಳು ಬೇರೆ ಎಲ್ಲ ವಿಷಯಗಳಲ್ಲಿಯೂ ವಿರಕ್ತರಾದವರಷ್ಟೆ?

**ಭಾವವಿಲಾಸಿನೀ**– ಯುಕ್ತ್ಯಂತರಂಚಾಹ – ಮುಮುಕ್ಷೋರಿತಿ ॥ ಮೋಕ್ಷೇಚ್ಛೋರ್ಮೋಕ್ಷೇತರಫಲಕಥನಸ್ಯ "ಆಮ್ರಾನ್ ಪೃಷ್ಟಃ ಕೋವಿದಾರಾನಾಚಷ್ಟ" ಇತಿವದಸಂಗತತ್ವಾಚ್ಚೇತಿ ಭಾವಃ ॥ ೩೧೮ ॥

**ವಿವರಣೆ** – ಕಾಮಾನ್ವಿತ್ವವು ಮೋಕ್ಷದಲ್ಲಲ್ಲದೆ ಮೋಕ್ಷೇತರಫಲವಾದರೆ ಅಂತಹ ಫಲವನ್ನು ಬಯಸದ ವಿರಕ್ತರಾದ ಯೋಗಿಗಳಿಗೆ ಅದನ್ನು ಹೇಳುವುದು ಅಸಂಗತವಾಗುತ್ತದೆ. ಎಂದು ಅಭಿಪ್ರಾಯ.

**ಅಜ್ಞಾನಾಖ್ಯಾಂಜನಚ್ಛೇದಃ ಪುಣ್ಯಪಾಪವಿಮೋಚನಮ್ ।**
**ಸರ್ವಕಾಮಾಶನಂ ಚೈವ ಸ್ವರೂಪವ್ಯಕ್ತಿರೇವ ಚ ।**
**ಜೀವನ್ಮುಕ್ತೌ ಕರ್ಮಫಲೇ ಕಥಂ ಸ್ಯಾದ್ ಧಿಮತಾಂ ಮತೇ ॥ ೩೧೯ ॥**

**ಅರ್ಥ** – ಧೀಮತಾಂ ಮತೇ= ವಿವೇಕಿಗಳ ಮತದಲ್ಲಿ, ಅಜ್ಞಾನಾಖ್ಯ ಅಂಜನಚ್ಛೇದಃ= ಅಜ್ಞಾನವೆಂಬ ಅಂಜನದ ನಾಶವೂ, ಪುಣ್ಯಪಾಪವಿಮೋಚನಂ= ಪುಣ್ಯಪಾಪ ವಿಮೋಚನೆಯೂ, ಸರ್ವಕಾಮಾಶನಂ ಚೈವ= ಸರ್ವಕಾಮಪ್ರಾಪ್ತಿಯೂ, ಸ್ವರೂಪವ್ಯಕ್ತಿರೇವ ಚ= ಸ್ವರೂಪಾಭಿವ್ಯಕ್ತಿಯೂ, ಕರ್ಮಫಲೇ= ಕರ್ಮಫಲವಾದ, ಜೀವನ್ಮುಕ್ತೌ= ಜೀವನ್ಮುಕ್ತಿದೆಶೆಯಲ್ಲಿ, ಕಥಂ ಸ್ಯಾತ್= ಹೇಗೆ ಉಂಟಾಗುತ್ತದೆ?

**ಅನುವಾದ – ವಿವೇಕಿಗಳ ಮತದಲ್ಲಿ ನಿರಂಜನ ಶಬ್ದೋಕ್ತವಾದ ಅಜ್ಞಾನರೂಪ ದೋಷಚ್ಛೇದವೂ, ಪುಣ್ಯಪಾಪೇವಿಧೂಯ ಎಂದು ಹೇಳಲ್ಪಟ್ಟ ಪುಣ್ಯಪಾಪ ವಿಮೋಚನೆಯೂ, ಸೋಽಶ್ನುತೇ ಸರ್ವಾನ್ ಕಾಮಾನ್ ಎಂದು ಹೇಳಿದ ಸರ್ವಕಾಮಭೋಗವೂ, ಸ್ವೇನರೂಪೇಣ ಅಭಿನಿಷ್ಪದ್ಯತೇ ಎಂದು ಹೇಳಿದ ಸ್ವರೂಪಾಭಿವ್ಯಕ್ತಿಯೂ ಕರ್ಮಫಲವಾದ ಜೀವನ್ಮುಕ್ತಿದೆಶೆಯಲ್ಲಿ ಹೇಗೆ ಉಪಪನ್ನವಾಗುತ್ತದೆ?**

**ಭಾವವಿಲಾಸಿನೀ**– ಏತಚ್ಚುತ್ಯುಕ್ತಫಲಸ್ಯ ಜೀವನ್ಮುಕ್ತಾವಸಂಭಾವಿತತ್ವಾಚ್ಚ ಪರಮಮುಕ್ತಿಸ್ಥ-ಮೇವೇದಂ ಫಲಮಿತ್ಯಾಹ – **ಅಜ್ಞಾನೇತಿ** ॥ ೩೧೯ ॥

**ವಿವರಣೆ** – ಜೀವನ್ಮುಕ್ತಿಯು ಸಂಸಾರದಲ್ಲಿಯೇ ಇರುವ ಒಂದು ದೆಶೆಯಾದ್ದರಿಂದ ಅದು ಕರ್ಮಫಲ. ಅಜ್ಞಾನನಾಶ ಮೊದಲಾದಗಳೆಲ್ಲವೂ ಜ್ಞಾನದ ಫಲ. ಆದ್ದರಿಂದ ಜೀವನ್ಮುಕ್ತಿದೆಶೆಯಲ್ಲಿ ಆ ಜ್ಞಾನದ ಫಲವು ಯಾವುದೂ ಇರುವುದಿಲ್ಲ ಎಂದು ಅಭಿಪ್ರಾಯ.

**ಯದಿ ಕಾಮಾಶನಂ ತೇಷಾಂ ಮಮಂಥುಃ ಕ್ಷೀರಸಾಗರಂ ।**
**ಯಜ್ಞಾಶನಾರ್ಥಂ ಕಲಹಸ್ತತ್ರ ತತ್ರ ಕಥಂ ವದ ॥ ೩೨೦ ॥**

**ಅರ್ಥ** – ಯದಿ= ಒಂದು ಪಕ್ಷ, ತೇಷಾಂ= ಆ ಜೀವನ್ಮುಕ್ತರಿಗೆ, ಕಾಮಾಶನಂ= ತಮಗೆ ಇಷ್ಟವಾದ ಭೋಗವು ಇರುತ್ತಿದ್ದರೆ, ಕಥಂ= ಹೇಗೆ, ಕ್ಷೀರಸಾಗರಂ= ಕ್ಷೀರಸಮುದ್ರವನ್ನು, ಮಮಂಥುಃ= ಮಥನ ಮಾಡಿದರು, ತತ್ರ ತತ್ರ= ಅಲ್ಲಲ್ಲಿ ಕೇಳಿ ಬರುವ,

ಯಜ್ಞಾಶನಾರ್ಥಂ= ಯಜ್ಞಭಾಗದ ಸಲುವಾಗಿ, ಕಲಹಃ= ಕಲಹವು, ಕಥಂ= ಹೇಗೆ ಉಪಪನ್ನವಾಗುತ್ತದೆ ಎಂದು, ವದ= ಹೇಳು.

**ಅನುವಾದ – ಜೀವನ್ಮುಕ್ತರಿಗೆ ಕಾಮಾಶನವಿರುವುದಾದರೆ ಜೀವನ್ಮುಕ್ತರಾದ ದೇವತೆಗಳು ಕ್ಷೀರಸಮುದ್ರವನ್ನು ಏಕೆ ಮಥನ ಮಾಡಿದರು? ಶ್ರುತಿಪುರಾಣಗಳಲ್ಲಿ ಅಲ್ಲಲ್ಲಿ ಕಂಡುಬರುವ ಯಜ್ಞಭಾಗಕ್ಕಾಗಿ ಕಲಹವು ಅವರಿಗೆ ಏಕೆ ಉಂಟಾಗುತ್ತದೆ ಎಂದು ಹೇಳು.**

**ಭಾವವಿಲಾಸಿನೀ–** ತೇಷಾಂ ಜೀವನ್ಮುಕ್ತಾನಾಮ್ । ಜೀವನ್ಮುಕ್ತಾವಪಿ ಕಾಮಾನ್ನತ್ವ ಸರ್ವ-ಕಾಮಾಶನಾದಿಸದ್ಭಾವೇಽಪರೋಕ್ಷಜ್ಞಾನಿತಯಾ ಜೀವನ್ಮುಕ್ತಾನಾಮೇವ ದೇವಾನಾ-ಮಮೃತಾರ್ಥಂ ಸಮುದ್ರಮಥನಂ ಯಜ್ಞಾಹುತ್ಯರ್ಥಂ ರುದ್ರಾದೀನಾಂ ಕಲಹಶ್ಚ ನಿರ್ನಿಬಂಧನ ಏವಸ್ಯಾದಿತಿ ಭಾವಃ ॥ ೩.೨೦ ॥

**ವಿವರಣೆ** – ದೇವತೆಗಳೆಲ್ಲರೂ ಅಪರೋಕ್ಷಜ್ಞಾನವನ್ನು ಹೊಂದಿದವರಾದ್ದರಿಂದ ಜೀವನ್ಮುಕ್ತರು. ಅವರೂ ಸಹ ಅಮೃತಕ್ಕಾಗಿ ಕ್ಷೀರಸಮುದ್ರವನ್ನು ಮಥನ ಮಾಡಿದುದರಿಂದ ಅವರಿಗೆ ಕಾಮಾಶನವಿಲ್ಲವೆಂದು ತಿಳಿಯುತ್ತದೆ. ಅದರಂತೆ ಯಜ್ಞಭಾಗಕ್ಕಾಗಿ ಕಲಹವನ್ನು ಮಾಡಿದುದು ದೇವತೆಗಳಲ್ಲಿ ಕಂಡುಬರುತ್ತದೆ. ಕಾಮಾಶನವಿದ್ದರೆ ಈ ಯಜ್ಞಾಶನಕ್ಕಾಗಿ ಕಲಹವು ಉಪಪನ್ನವಾಗುತ್ತಿರಲಿಲ್ಲ. ಆದ್ದರಿಂದ ಜೀವನ್ಮುಕ್ತರಿಗೆ ಕಾಮಾಶನವಿಲ್ಲ. ಕಾಮಾನ್ನಿತ್ವಾದಿಗಳು ಪರಮಮೋಕ್ಷದ ಮಹಿಮೆಯೆಂದೇ ತಿಳಿಯಬೇಕು.

**ತ್ವಗಸ್ಥಿಮಾತ್ರಗಾತ್ರಾಣಾಂ ವಾತಪರ್ಣೋದಕಾಶಿನಾಂ ।**
**ಸದಾ ಶರೀರಸಂತಾಪತಪಸ್ಯಾಸಕ್ತಚೇತಸಾಂ ॥ ೩.೨೧ ॥**

**ಮುನೀನಾಂ ನಾರದಾದೀನಾಂ ಸಾಕ್ಷಾತ್ಕೃತಪರಾತ್ಮನಾಂ ।**
**ಜೀವನ್ಮುಕ್ತಿದಶಾಸ್ಥಾನಾಂ ಕಥಂ ಕಾಮಾನ್ನಿತಾ ವದ ॥ ೩.೨೨ ॥**

**ಅರ್ಥ** – ಸಾಕ್ಷಾತ್ ಕೃತಪರಾತ್ಮನಾಂ= ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು, ಜೀವನ್ಮುಕ್ತಿ ದಶಾಸ್ಥಾನಾಂ= ಜೀವನ್ಮುಕ್ತಿ ದೆಶೆಯಲ್ಲಿರುವ, ತ್ವಗಸ್ಥಿಮಾತ್ರಗಾತ್ರಾಣಾಂ= ಕೇವಲ ಚರ್ಮಾಸ್ಥಿ ಶರೀರಗಳಾದ, ವಾತಪರ್ಣೋದಕಾಶಿನಾಂ= ಗಾಳಿ, ನೀರು ಮತ್ತು ಎಲೆಗಳನ್ನು ಆಹಾರವಾಗಿ ಸೇವಿಸುವ, ಸದಾ= ಯಾವಾಗಲೂ, ಶರೀರಸಂತಾಪ ತಪಸಿ= ಶರೀರವನ್ನು ತಾಪಸಗೊಳಿಸುವ ತಪಸ್ಸಿನಲ್ಲಿ, ಆಸಕ್ತಚೇತಸಾಂ= ಆಸಕ್ತವಾದ ಮನಸ್ಸುಳ್ಳ, ನಾರದಾದೀನಾಂ= ನಾರದಾದಿ, ಮುನೀನಾಂ= ಮುನಿಗಳಿಗೆ, ಕಾಮಾನ್ನಿತಾ= ಕಾಮಾನ್ನಿತ್ವವು, ಕಥಂ= ಹೇಗೆ ಎಂದು, ವದ= ಹೇಳು.

**ಅನುವಾದ** – ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದು ಜೀವನ್ಮುಕ್ತಿ ದೆಶೆಯಲ್ಲಿ ಇದ್ದರೂ ಸಹ ಅಸ್ಥಿಚರ್ಮ ಮಾತ್ರ ಶರೀರರಾದ ವಾಯುಭಕ್ಷ, ಜಲಭಕ್ಷ ತೃಣಭಕ್ಷರಾದ ಯಾವಾಗಲೂ . ಶರೀರಶೋಷಕವಾದ ತಪಸ್ಸಿನಲ್ಲಿ ಆಸಕ್ತರಾದ ನಾರದಾದಿಮುನಿಗಳಿಗೆ ಹೇಗೆ ಕಾಮಾನ್ವಿತ್ವವು ಇದೆ ಎಂದು ಹೇಳು.

**ಭಾವವಿಲಾಸಿನೀ**– ನ ಕೇವಲಂ ಜೀವನ್ಮುಕ್ತೌ ಸರ್ವಕಾಮಾಶನಸಂಭಾವಿತಂ ಪ್ರತ್ಯುತ ವಿರುದ್ಧಮಿತ್ಯಾಹ – **ತ್ವಗಸ್ಥೀತ್ಯಾದಿನಾ** ॥ ತಪಸ್ಯಾಸಕ್ತಚೇತಸಾಂ ಶರೀರಸ್ಯ ಸಂತಾಪೋ ಯಸ್ಯಾಂ ಸಾ ತಸ್ಯಾಂ ತಪಸ್ಯಾಯಾಮಾಸಕ್ತಚೇತಸಾಂ ॥ ೩೨೧–೩೨೨ ॥

ಅತೋ ನಿರವಕಾಶಾನಿ ವಚನಾನ್ಯಖಿಲಾನಿ ಮೇ ।
ಬ್ರೂಯುರ್ಮುಕ್ತಿಮನಾವೃತ್ತಿಂ ನಾವರ್ತಂತೇ ಕಥಂಚನ ॥ ೩೨೩ ॥

**ಅರ್ಥ** – ಅತಃ= ಆದ್ದರಿಂದ, ಮೇ= ನನ್ನ, ಅಖಿಲಾನಿ ವಚನಾನಿ= ಎಲ್ಲ ವಚನಗಳೂ, ನಿರವಕಾಶಾನಿ= ನಿರವಕಾಶವಾದವು ಅವು, ಮುಕ್ತಿಂ= ಮೋಕ್ಷವನ್ನು, ಅನಾವೃತ್ತಿಂ= ನಿವೃತ್ತಿ ರಹಿತವಾದುದೆಂದು, ಬ್ರೂಯುಃ= ಹೇಳುತ್ತವೆ, ಕಥಂಚನ= ಯಾವ ರೀತಿಯಿಂದಲೂ, ನಾವರ್ತಂತೇ= ಮುಕ್ತಿಯಿಂದ ಹಿಂದಿರುಗಿ ಸಂಸಾರವನ್ನು ಹೇಳುವುದಿಲ್ಲ.

**ಅನುವಾದ** – ಆದ್ದರಿಂದ ನನ್ನ ನಿರವಕಾಶವಾದ ಎಲ್ಲ ವಚನಗಳೂ ಅನಾವೃತ್ತಿ ರೂಪವಾದ ಪರಮ ಮೋಕ್ಷವನ್ನೇ ಹೇಳುತ್ತವೆ. ಅವು ಎಂದೂ ಹಿಂದಿರುಗಿ ಬಂದು ಸಂಸಾರಸ್ತುತಿಯನ್ನು ಹೇಳುವುದಿಲ್ಲ.

ಯತ್ ಸಮೀಪಾಪ್ತಿಸಾಹಿತ್ಯಸಾಮ್ಯಾನಿ ಚ ವಿಭಿನ್ನಯೋಃ ।
ತತಃ ಪರಮಮೋಕ್ಷೇ ಚ ಭೇದೋऽಯಂ ಸುಸ್ಥಿರೋऽಭವತ್ ॥ ೩೨೪ ॥

**ಅರ್ಥ** – ಯತ್= ಯಾವ ಕಾರಣದಿಂದ, ಸಮೀಪಾಪ್ತಿ= ಸಮೀಪಪ್ರಾಪ್ತಿ, ಸಾಹಿತ್ಯ= ಜೊತೆಯಲ್ಲಿರುವುದು, ಸಾಮ್ಯಾನಿ= ಮತ್ತು ಸಾಮ್ಯವು, ವಿಭಿನ್ನಯೋಃ ಚ= ಭಿನ್ನವಾದ ವಸ್ತುಗಳಿಗೇ ಉಂಟಾಗುತ್ತದೆಯೋ, ತತಃ= ಆ ಕಾರಣದಿಂದ, ಅಯಂ ಭೇದಃ= ಈ ಭೇದವು, ಪರಮಮೋಕ್ಷೇ ಚ= ಪರಮ ಮೋಕ್ಷದಲ್ಲಿಯೂ, ಸುಸ್ಥಿರೋऽಭವತ್= ಅತ್ಯಂತ ಸ್ಥಿರವಾಯಿತು.

**ಅನುವಾದ** – ಯಾವ ಕಾರಣದಿಂದ ಸಮೀಪಪ್ರಾಪ್ತಿ, ಸಾಹಿತ್ಯ ಮತ್ತು ಸಾಮ್ಯಗಳು ಭಿನ್ನವಾದ ವಸ್ತುಗಳಿಗೇ ಉಂಟಾಗುತ್ತವೆಯೋ ಆ ಕಾರಣದಿಂದ ಪರಮ ಮೋಕ್ಷದಲ್ಲಿಯೂ ಸಹ ಈ ಭೇದವು ಅತ್ಯಂತ ಸ್ಥಿರವಾಯಿತು.

**ಭಾವವಿಲಾಸಿನೀ**– ಆವರ್ತಂತೇ ಮುಕ್ತಿಕಥನಾದನ್ಯತ್ರಾವರ್ತಂತೇ ॥ ೩೨೩-೩೨೪ ॥

ಸರ್ವೀಭೂಯ ಪರಂಬ್ರಹ್ಮ ಸರ್ವಾನ್ ಕಾಮಾನ್ ಕಿಲಾಶ್ನುತೇ ।
ಮುಕ್ತಸ್ತದ್ಬ್ರಹ್ಮರೂಪೇಣ ಭುಙ್ಕ್ತೇ ತಾನಖಿಲಾನ್ ಕಿಲ ॥ ೩೨೫ ॥

ಸಹಶಬ್ದೋ ಯೌಗಪದ್ಯಂ ವದೇದಾತ್ಮೇಚ್ಛಯಾ ಕಿಲ ।
ತಸ್ಯ ಕ್ರಮಿಕಭೋಗಾಂಶ್ಚ ಭುಙ್ಕ್ತೇಽಯಂ ಯುಗಪತ್ ಕಿಲ ।
ಯೇ ಪ್ರಾಹುರಿತ್ಥಂ ಶ್ರುತ್ಯರ್ಥಮನರ್ಥಂ ಕಿಂ ನ ತೇ ವಿದುಃ ॥ ೩೨೬ ॥

**ಅರ್ಥ –** ಪರಂಬ್ರಹ್ಮ= ಪರಬ್ರಹ್ಮನು, ಸರ್ವೀಭೂಯ= ಪಶುಪಕ್ಷ್ಯಾದಿ ಸರ್ವಾತ್ಮಕನಾಗಿ, ಸರ್ವಾನ್ ಕಾಮಾನ್= ಎಲ್ಲ ಕಾಮಗಳನ್ನು, ಅಶ್ನುತೇ ಕಿಲ= ಭೋಗಿಸುತ್ತಾನೆ, ಮುಕ್ತಃ= ಮುಕ್ತನಾದವನು, ತದ್ಬ್ರಹ್ಮರೂಪೇಣ= ಆ ಬ್ರಹ್ಮರೂಪದಿಂದ, ತಾನಖಿಲಾನ್= ಆ ಎಲ್ಲ ಕಾಮಗಳನ್ನು, ಭುಙ್ಕ್ತೇ ಕಿಲ= ಭೋಗಿಸುತ್ತಾನಷ್ಟೆ, ಸಹಶಬ್ದಃ= ಬ್ರಹ್ಮಣಾ ಸಹ ಎಂಬಲ್ಲಿ ಸಹ ಶಬ್ದವು, ಯೌಗಪದ್ಯಂ= ಏಕಕಾಲದಲ್ಲಿ ಎಂಬ ಅರ್ಥವನ್ನು, ವದೇತ್= ಹೇಳುತ್ತದೆ, ಮುಕ್ತನು, ಆತ್ಮೇಚ್ಛಯಾ= ತನ್ನ ಇಚ್ಛೆಯಿಂದ, ತಸ್ಯ= ಆ ಬ್ರಹ್ಮನ, ಕ್ರಮಕಭೋಗಾನ್= ಕ್ರಮಿಕವಾದ ಭೋಗಗಳನ್ನು, ಯುಗಪತ್= ಏಕಕಾಲದಲ್ಲಿ, ಭುಙ್ಕ್ತೇ ಕಿಲ= ಭೋಗಿಸುತ್ತಾನಷ್ಟೆ ಇತ್ಥಂ= ಈ ರೀತಿಯಾಗಿ, ಯೇ= ಯಾರು, ಶ್ರುತ್ಯರ್ಥಂ= ಶ್ರುತ್ಯರ್ಥವನ್ನು, ಆಹುಃ= ಹೇಳುತ್ತಾರೆಯೋ, ತೇ= ಅವರು, ಅನರ್ಥಂ= ಯೌಗಪದ್ಯ ಮತ್ತು ಕ್ರಮಿಕ ಎಂಬ ಶಬ್ದಗಳಿಗೆ ವಿರೋಧವನ್ನು, ನ ವಿದುಃ ಕಿಂ= ತಿಳಿಯುವುದಿಲ್ಲವೆ?

**ಅನುವಾದ –** ಪರಬ್ರಹ್ಮನು ಪಶುಪಕ್ಷ್ಯಾದಿ ಸರ್ವಭಾವವನ್ನು ಹೊಂದಿ ಕಾಮಗಳನ್ನು ಭೋಗಿಸುತ್ತಾನೆ. ಮುಕ್ತನು ಆ ಬ್ರಹ್ಮರೂಪದಿಂದ ಆ ಎಲ್ಲ ಕಾಮಗಳನ್ನೂ ಭೋಗಿಸುತ್ತಾನೆ. ಬ್ರಹ್ಮಣಾ ಸಹ ಎಂಬಲ್ಲಿ ಸಹ ಶಬ್ದವು ಯೌಗಪದ್ಯವನ್ನು ಹೇಳುತ್ತದೆ. ಆದ್ದರಿಂದ ಈ ಮುಕ್ತನು ಆ ಬ್ರಹ್ಮನ ಕ್ರಮಿಕವಾದ ಭೋಗಗಳನ್ನು ಏಕಕಾಲದಲ್ಲಿ ಅನುಭವಿಸುತ್ತಾನೆ ಎಂದು ಯಾರು ಶ್ರುತ್ಯರ್ಥವನ್ನು ಹೇಳುತ್ತಾರೆಯೋ, ಅವರು ಕ್ರಮ ಮತ್ತು ಯೌಗಪದ್ಯಗಳಿಗೆ ಇರುವ ವಿರೋಧವನ್ನು ತಿಳಿಯುವುದಿಲ್ಲವೇ?

**ಭಾವವಿಲಾಸಿನೀ–** ''ಬ್ರಹ್ಮಣಾ ಸಹ ಸರ್ವಾನ್ಕಾಮಾನಶ್ನುತ'' ಇತ್ಯಸ್ಯ ಮುಕ್ತೋಽಪಿ ಬ್ರಹ್ಮತಾದಾತ್ಮ್ಯಂ ಪ್ರಾಪ್ಯ ಪಶುಪಕ್ಷ್ಯಾದಿನಾನಾಜೀವಾತ್ಮಕಬ್ರಹ್ಮಣಾ ಭುಜ್ಯಮಾನಾನ್ ಸರ್ವಾನ್ ಭೋಗಾನ್ ಸಹ ಯುಗಪದಶ್ನುತ ಇತಿ ಮಾಯಾವಾದಿನೋ ವದಂತಿ ತದತ್ಯಂತಪರಿಹಾಸ್ಯಮಿತ್ಯಾಹ–**ಸರ್ವೀಭೂಯೇತಿ॥** ತದ್ಬ್ರಹ್ಮರೂಪೇಣ ತಚ್ಚ ತದ್ಬ್ರಹ್ಮ ತಸ್ಯ ಸರ್ವಾತ್ಮಕ ಬ್ರಹ್ಮಣೋ ರೂಪೇಣ ॥ ೩೨೫ ॥

ಕ್ರಮಿಕಭೋಗಾತ್ ದಿನೇ ದಿನೇ ಕ್ರಮೇಣ ಜಾಯಮಾನಭೋಗಾನ್ । ಅಯಂ ಮುಕ್ತಃ । ಸಹಶಬ್ದ ಯೌಗಪದ್ಯಾರ್ಥಸ್ಯ ಕ್ರಮಿಕಭೋಗಾನಾಂ ಯುಗಪದ್ಯೋಜನಸ್ಯ ಚಾಸಂಭಾವಿತತ್ವೇ-ನಾನುವಾದ- ಸಮಯ ಏವ ದೃಶ್ಯಮಾನ ದೋಷತ್ವಾದತ್ಯಂತ ಪರಿಹಾಸ್ಯಮ್ ॥ ೩೨೬ ॥

**ವಿವರಣೆ** – ಹೀಗೆ ಅರ್ಥವನ್ನು ಹೇಳುವುದು ವಿರುದ್ಧವಾದುದು ಮತ್ತು ಹಾಸ್ಯಾಸ್ಪದವಾದುದು ಎಂದು ಅಭಿಪ್ರಾಯ.

**ತುಷಾನ್ನಂ ಕಂಟಕಾನ್ನಂ ಚ ಮಲಂ ನಾರಕಭೋಜನಮ್ ।**
**ನಾನಾಯೋನಿಸ್ಥಜೀವಾನಾಂ ಹೀನಾಹೀನಾಶನಾನಿ ಚ ॥ ೩.೨೭ ॥**

**ಇಮೇ ಸರ್ವಾತ್ಮಕಬ್ರಹ್ಮಕಾಮಾ ಮುಕ್ತಸ್ಯ ಚೇತ್ ತವ ।**
**ಮುಕ್ತಿರ್ನ ಬಂಧಾತ್ ತರ್ಹ್ಯೇಷಾ ಮುಕ್ತಿರ್ಮುಕ್ತೇರಭೂದಹೋ ।**
**ತಸ್ಮಾದೀದೃಗ್ವಿಧವ್ಯಾಖ್ಯಾ ಪ್ರತ್ಯಾಖ್ಯಾ ಮುಕ್ತಿಸಂಪದಃ ॥ ೩.೨೮ ॥**

**ಅರ್ಥ** – ತುಷಾನ್ನಂ= ರಾಸಭಗಳ ಅನ್ನ, ಕಂಟಕಾನ್ನಂ= ಒಂಟೆಗಳ ಮುಳ್ಳಿನ ಅನ್ನ, ಮಲಂ= ನಾಯಿಗಳ ಅನ್ನ, ನಾರಕಭೋಜನಂ= ನರಕದಲ್ಲಿ ಅನುಭವಿಸುವ ದುಃಖ, ನಾನಾಯೋನಿಸ್ಥಜೀವಾನಾಂ= ಮತ್ತು ಅನೇಕ ಯೋನಿಗಳಲ್ಲಿರುವ ಜೀವರ, ಹೀನಾಹೀನಾಶನಾನಿ ಚ= ಉತ್ತಮ ಮತ್ತು ನೀಚವಾದ ಅನ್ನಗಳು, ಸರ್ವಾತ್ಮಕಬ್ರಹ್ಮಕಾಮಾಃ= ಸರ್ವಾತ್ಮಕಬ್ರಹ್ಮನಿಂದ ಕಾಮಿಸಲ್ಪಡುವ, ಇಮೇ= ಈ ಎಲ್ಲ ಅನ್ನಗಳು, ತವ= ನಿನ್ನ ರೀತಿಯಲ್ಲಿ, ಮುಕ್ತಸ್ಯಚೇತ್= ಮುಕ್ತನಿಗೆ ಎಂದಾದರೆ, ತರ್ಹಿ= ಆಗ, ಮುಕ್ತಿಃ= ಮೋಕ್ಷವು, ಬಂಧಾತ್ ನ= ಬಂಧದಿಂದ ಅಲ್ಲ, ಏಷಾ= ಇದು, ಮುಕ್ತೇಃ ಮುಕ್ತಿಃ= ಮುಕ್ತಿಯಿಂದಲೇ ಮೋಕ್ಷ, ಅಭೂತ್= ಆಯಿತು, ಅಹೋ= ಆಶ್ಚರ್ಯವು, ತಸ್ಮಾತ್= ಆದ್ದರಿಂದ, ಈದೃಗ್ವಿಧವ್ಯಾಖ್ಯಾ= ಇಂತಹ ವ್ಯಾಖ್ಯಾನವು, ಮುಕ್ತಿಸಂಪದಃ= ಮುಕ್ತಿಯ ಸೌಭಾಗ್ಯವನ್ನು, ಪ್ರತ್ಯಾಖ್ಯಾ= ನಿರಾಕರಣೆ ಮಾಡುವಂತಹದು.

**ಅನುವಾದ – ರಾಸಭಗಳ ಅನ್ನ, ಒಂಟೆಯ ಕಂಟಕಾನ್ನ, ನಾಯಿಗಳ ಅನ್ನ, ನರಕ ದುಃಖಗಳು ಮತ್ತು ನಾನಾ ಯೋನಿಯಲ್ಲಿರುವ ಜೀವರ ಉಚ್ಚನೀಚವಾದ ಅನ್ನಗಳು ಸರ್ವಾತ್ಮಕಬ್ರಹ್ಮನಿಂದ ಭೋಗ್ಯವಾದ ಈ ಎಲ್ಲ ಅನ್ನಗಳು ನಿನ್ನ ರೀತಿಯಲ್ಲಿ ಮುಕ್ತನಿಗೆ ಎಂದಾದರೆ ಮುಕ್ತಿಯು ಬಂಧದಿಂದ ಮುಕ್ತಿಯಲ್ಲ. ಮುಕ್ತಿಯಿಂದಲೇ ಮುಕ್ತಿಯಾಯಿತು. ಇದು ಆಶ್ಚರ್ಯ. ಆದ್ದರಿಂದ ಇಂತಹ ವ್ಯಾಖ್ಯಾನವು ಶ್ರುತಿಯು ಹೇಳುವ ಮುಕ್ತರ ಸೌಭಾಗ್ಯವನ್ನೇ ನಿರಾಕರಣೆ ಮಾಡುವಂತಹದು.**

**ವಿವರಣೆ** – ಇಂತಹ ಮೋಕ್ಷವು ಬಂಧಕ್ಕಿಂತ ಭಯಂಕರವಾದುದರಿಂದ ಅದು ಮುಕ್ತಿಯ ಮೋಕ್ಷವೇ ಆಗುತ್ತದೆ ಹೊರತು ಬಂಧದಿಂದ ಮೋಕ್ಷವಾಗುವುದಿಲ್ಲ ಎಂದು ಅಭಿಪ್ರಾಯ.

**ಕಥಂ ಚ ಪರಮಂ ಸಾಮ್ಯಂ ಜೀವನ್ಮುಕ್ತೌ ಹಿ ದುಃಖಿನಾಮ್ ।**
**ನಿರ್ದುಃಖಬ್ರಹ್ಮಣಾ ಸಾಕಮಿತಿ ಚಿಂತ್ಯಂ ವಿವೇಕಿಭಿಃ ॥ ೩.೨೯ ॥**

**ಅರ್ಥ–** ಜೀವನ್ಮುಕ್ತೌ= ಜೀವನ್ಮುಕ್ತಿಯಲ್ಲಿ, ದುಃಖಿನಾಂ= ದುಃಖಿಗಳಾದ ಜೀವರಿಗೆ, ನಿರ್ದುಃಖಬ್ರಹ್ಮಣಾ ಸಾಕಂ= ದುಃಖರಹಿತನಾದ ಬ್ರಹ್ಮನ ಜೊತೆಯಲ್ಲಿ, ಪರಮಂ ಸಾಮ್ಯಂ= ಅತ್ಯಂತ ಸಾಮ್ಯವು, ಕಥಮಿತಿ= ಹೇಗೆ ಎಂದು, ವಿವೇಕಿಭಿಃ= ವಿವೇಕವುಳ್ಳವರಿಂದ, ಚಿಂತ್ಯಂ= ಚಿಂತಿಸಲ್ಪಡಬೇಕು.

**ಅನುವಾದ –** ಜೀವನ್ಮುಕ್ತಿ ದೆಶೆಯಲ್ಲಿ ದುಃಖಿಗಳಾದ ಜೀವರಿಗೆ ದುಃಖರಹಿತನಾದ ಪರಬ್ರಹ್ಮನಿಂದ ಪರಮಸಾಮ್ಯವು ಹೇಗೆ ಉಂಟಾಗುತ್ತದೆ ಎಂದು ವಿವೇಕಿಗಳು ಚಿಂತಿಸಬೇಕು.

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇಽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥ ೩೩೦ ॥**

**ಇತಿ ಗೀತಾಸು ಯತ್ ಸ್ಪಷ್ಟಂ ಸ್ವಸಾಧರ್ಮ್ಯಂ ಹರಿರ್ಜಗೌ ।**
**ಸರ್ಗಪ್ರಲಯಶೂನ್ಯಾನಾಂ ಮಹಾಮೋಕ್ಷಸ್ಥದೇಹಿನಾಂ ॥ ೩೩೧ ॥**

**ಅರ್ಥ –** ಇದಂ ಜ್ಞಾನಂ= ಈ ಜ್ಞಾನವನ್ನು, ಉಪಾಶ್ರಿತ್ಯ= ಆಶ್ರಯಿಸಿ, ಮಮ= ನನ್ನ, ಸಾಧರ್ಮ್ಯಂ= ಸಮಾನ ಧರ್ಮವನ್ನು, ಆಗತಾಃ= ಹೊಂದಿದವರಾಗಿ, ಸರ್ಗೇಽಪಿ= ಸೃಷ್ಟಿಕಾಲದಲ್ಲಿಯೂ, ನ ಉಪಜಾಯಂತೇ= ಹುಟ್ಟುವುದಿಲ್ಲ, ಚ= ಮತ್ತು, ಪ್ರಲಯೇ= ಪ್ರಲಯ ಕಾಲದಲ್ಲಿ, ನ ವ್ಯಥಂತಿ= ವ್ಯಥೆ ಪಡುವುದಿಲ್ಲ, ಮೃತರಾಗುವುದಿಲ್ಲ, ಇತಿ= ಈ ರೀತಿಯಾಗಿ, ಗೀತಾಸು= ಭಗವದ್ಗೀತೆಯಲ್ಲಿ, ಯತ್= ಯಾವ ಕಾರಣದಿಂದ, ಸರ್ಗಪ್ರಲಯ ಶೂನ್ಯಾನಾಂ= ಸೃಷ್ಟಿಪ್ರಲಯಶೂನ್ಯರಾದ, ಮಹಾಮೋಕ್ಷಸ್ಥದೇಹಿನಾಂ= ಪರಮ ಮೋಕ್ಷದಲ್ಲಿರುವ ಜೀವರಿಗೆ, ಸ್ವಸಾಧರ್ಮ್ಯಂ= ತನ್ನ ಸಾಧರ್ಮ್ಯವನ್ನೇ, ಹರಿಃ= ಹರಿಯು, ಜಗೌ= ಹೇಳಿದ್ದಾನೆಯೋ (ಆದ್ದರಿಂದ ಅಲ್ಲಿಯೂ ಭೇದವಿದೆ).

**ಅನುವಾದ –** ಈ ಜ್ಞಾನವನ್ನು ಆಶ್ರಯಿಸಿ ನನ್ನ ಸಾಧರ್ಮ್ಯವನ್ನು ಹೊಂದಿದವರಾಗಿ ಮುಕ್ತರು ಸೃಷ್ಟಿಕಾಲದಲ್ಲಿ ಜನಿಸುವುದಿಲ್ಲ ಮತ್ತು ಪ್ರಲಯಕಾಲದಲ್ಲಿ ಮೃತರಾಗುವುದಿಲ್ಲ ಎಂದು ಸ್ಪಷ್ಟವಾಗಿ ಭಗವದ್ಗೀತೆಯಲ್ಲಿ ಕೃಷ್ಣನು ಜನ್ಮಮರಣ-ಶೂನ್ಯರಾದ ಮಹಾಮೋಕ್ಷದಲ್ಲಿರುವ ಜೀವರಿಗೆ ತನ್ನ ಸಾಧರ್ಮ್ಯವನ್ನೇ ಹೇಳಿರುವ ಆ ಕಾರಣದಿಂದಲೂ ಮೋಕ್ಷದಲ್ಲಿ ಭೇದವೇ ಸಿದ್ಧವಾಗುತ್ತದೆ.

**ಜೀವನ್ಮುಕ್ತಾಶ್ಚ ಜಾಯಂತೇ ಮ್ರಿಯಂತೇ ಚ ತದಾ ತದಾ ।**
**ಅತಃ ಪರಮಮುಕ್ತಸ್ಯ ಪ್ರಶಂಸೇಯಂ ನ ಸಂಶಯಃ ॥ ೩೩೨ ॥**

**ಅರ್ಥ –** ಜೀವನ್ಮುಕ್ತಾಶ್ಚ= ಮತ್ತು ಜೀವನ್ಮುಕ್ತರು, ತದಾ ತದಾ= ಆಗಾಗ, ಜಾಯಂತೇ= ಹುಟ್ಟುತ್ತಾರೆ, ಚ= ಮತ್ತು, ಮ್ರೀಯಂತೇ= ಮರಣವನ್ನು ಹೊಂದುತ್ತಾರೆ, ಅತಃ= ಆದ್ದರಿಂದ,

ಇಯಂ= ಈ ವಾಕ್ಯವು, ಪರಮಮುಕ್ತಸ್ಯ= ಪರಮ ಮೋಕ್ಷವನ್ನು ಹೊಂದಿದವನ, ಪ್ರಶಂಸಾ= ಪ್ರಶಂಸಾರೂಪವಾದುದು, ನ ಸಂಶಯಃ= ಇದರಲ್ಲಿ ಸಂಶಯವಿಲ್ಲ.

**ಅನುವಾದ – ಜೀವನ್ಮುಕ್ತರೂ ಸಹ ಆಗಾಗ ಜನಿಸುತ್ತಾರೆ ಮತ್ತು ಮರಣವನ್ನು ಹೊಂದುತ್ತಾರೆ. ಆದ್ದರಿಂದ ಈ ಕೃಷ್ಣನ ವಾಕ್ಯವು ಪರಮ ಮೋಕ್ಷದ ಪ್ರಶಂಸೆಯೇ ಎಂಬ ವಿಷಯದಲ್ಲಿ ಸಂಶಯವಿಲ್ಲ.**

**ಭಾವವಿಲಾಸಿನೀ–** ತುಷಾನ್ನಂ ರಾಸಭೇನ ಭುಜ್ಯಮಾನವ್ । ಕಂಟಕಾನ್ನಮುಷ್ಟ್ರೇಣ ಭುಜ್ಯಮಾನಮ್ । ಮಲಂ ಶುನಾಭುಜ್ಯಮಾನಮ್ । ನಾರಕಭೋಜನಂ ನರಕೇಽನುಭೂಯ-ಮಾನ ನಾನಾದುಃಖಭೋಜನಮ್ । ಇಮೇ ಕಾಮಾ ಉಕ್ತಕಾಮಾಃ । ಉಪಲಕ್ಷಣಂ ಚೈತತ್ । ಸರ್ವಮುಕ್ತಾವುಕ್ತಕಾಮಾನಾಪ್ಯ ಭಾವಾತ್ ಪುನರರ್ಥಾಯೋಗಶ್ಚ ದ್ರಷ್ಟವ್ಯಃ ॥೩೨೭-೩೩೨॥

**ವಿವರಣೆ** – ಜನನಮರಣರಹಿತರಾದವರು ಪರಮಮುಕ್ತರೇ ಹೊರತು ಜೀವನ್ಮುಕ್ತರಲ್ಲ. ಜನನಮರಣ ರಹಿತವಾದ ಆ ಅವಸ್ಥೆಯಲ್ಲಿಯೂ ಸಾಧರ್ಮ್ಯಶಬ್ದದಿಂದ ಕೃಷ್ಣದೇವರು ಭೇದಸಾಪೇಕ್ಷವಾದ ಸಾದೃಶ್ಯವನ್ನೇ ಹೇಳುತ್ತಿದ್ದಾರೆಯೇ ಹೊರತು ಅಭೇದವನ್ನು ಹೇಳುತ್ತಿಲ್ಲ. ಆದ್ದರಿಂದ ಪರಮಸಾಮ್ಯ ಎಂಬ ಶಬ್ದಕ್ಕೆ ಅಭೇದವೆಂದು ಅರ್ಥವನ್ನು ಮಾಡಬಾರದು. ಅಥವಾ ಆನಂದಸಾಮ್ಯ ಎಂದು ಅರ್ಥವನ್ನೂ ಮಾಡಬಾರದು. ಸಂಸಾರಾವಸ್ಥೆಯಲ್ಲಿ ಜೀವರಿಗೂ ಮತ್ತು ಬ್ರಹ್ಮನಿಗೂ ಚೇತನತ್ವೇನ ಮಾತ್ರ ಸಾಮ್ಯವಿದೆ. ಮೋಕ್ಷದಲ್ಲಿ ಇಬ್ಬರೂ ನಿರ್ದುಃಖರಾಗಿರುವುದರಿಂದ ನಿರ್ದುಃಖತ್ವೇನ ಸಾಮ್ಯವಿದೆ. ಈ ಸಾಮ್ಯವು ಸಂಸಾರಾವಸ್ಥೆಯಲ್ಲಿ ಇಲ್ಲದಿರುವುದರಿಂದ ಇದು ಪರಮಸಾಮ್ಯ ಎಂದರೆ ಶ್ರೇಷ್ಠವಾದ ಸಾದೃಶ್ಯ ಎಂದು ಅಭಿಪ್ರಾಯ.

**ತಥಾಽನ್ಯೋಪನಿಷತ್ ಪ್ರಾಹ ಶರವತ್ ತನ್ಮಯೋ ಭವೇತ್ ।**
**ಇತಿ ಮುಕ್ತಿಪ್ರಕರಣೇ ಶರವನ್ಮುಕ್ತಚೇತನಃ ॥ ೩೩೩ ॥**

**ಲಕ್ಷ್ಯವದ್ ಬ್ರಹ್ಮತಸ್ಯಾಂತಃ ಪ್ರವೇಶಃ ಕ್ಷೀರನೀರವತ್ ।**
**ಇದಮೇವಾಸ್ಯ ಸಾಯುಜ್ಯಂ ಮಯಟೋಽರ್ಥೋಽಪ್ಯಯಂ ಕಿಲ ॥ ೩೩೪ ॥**

**ಅರ್ಥ–** ತಥಾ = ಮತ್ತು, ಅನ್ಯಾ = ಮತ್ತೊಂದು, ಉಪನಿಷತ್ = ಆಥರ್ವಣೋಪನಿಷತ್, ಮುಕ್ತಿಪ್ರಕರಣೇ = ಮುಕ್ತಿಯ ಸ್ವರೂಪವನ್ನು ವಿವರಿಸುವ ಭಾಗದಲ್ಲಿ, ಮುಕ್ತಚೇತನಃ = ಮುಕ್ತಚೇತನನು, ಶರವತ್ = ಬಾಣದಂತೆ, ತನ್ಮಯಃ = ಶ್ರೀಹರಿಯಲ್ಲಿಯೇ ನೆಟ್ಟ ಮನಸ್ಸುಳ್ಳವನು, ಭವೇತ್ = ಆಗುತ್ತಾನೆ, ಇತಿ = ಎಂಬುದಾಗಿ, ಪ್ರಾಹ = ಹೇಳುತ್ತದೆ. ಮುಕ್ತಚೇತನಃ = ಮುಕ್ತಜೀವನು, ಶರವತ್ = ಬಾಣದಂತೆ ಆಗಿದ್ದಾನೆ. ಬ್ರಹ್ಮ = ಪರಬ್ರಹ್ಮನು, ಲಕ್ಷ್ಯವತ್ = ಗುರಿಯಂತೆ ಆಗಿದ್ದಾನೆ. ತಸ್ಯ = ಮುಕ್ತಜೀವನ,

ಅಂತಃಪ್ರವೇಶಃ = ಪರಮಾತ್ಮನ ಒಳಗೆ ಪ್ರವೇಶವು, ಕ್ಷೀರನೀರವತ್ = ನೀರು ಹಾಲಿನೊಡನೆ ಇರುವಂತೆ ಆಗುತ್ತದೆ. ಅಸ್ಯ = ಈ ಮುಕ್ತನಿಗೆ, ಇದಂ ಏವ = ಪರಮಾತ್ಮನೊಳಗೆ ಗಾಢವಾದ ಸಂಬಂಧವನ್ನು ಪಡೆದು ಇರುವಿಕೆಯೇ, ಸಾಯುಜ್ಯಂ = ಸಾಯುಜ್ಯಮೋಕ್ಷವು. ಮಯಟಃ = ಶರವತ್ ತನ್ಮಯಃ ಎಂಬಲ್ಲಿನ ಮಯಟ್ ಪ್ರತ್ಯಯದ, ಅರ್ಥಃ ಅಪಿ = ಅರ್ಥವೂ ಕೂಡ, ಅಯಂ ಏವ = ಪರಮಾತ್ಮನಿಂದ ಭಿನ್ನನಾಗಿಯೇ ಆತನ ಗಾಢಸಂಬಂಧವನ್ನು ಪಡೆಯುವುದೇ, ಕಿಲ = ಆಗಿದೆಯಷ್ಟೇ.

**ಅನುವಾದ–** ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮ ತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥
(ಅಥರ್ವಣೋಪನಿಷತ್ - ೪-೫)

ಓಂಕಾರವೇ ಬಿಲ್ಲು, ಜೀವಾತ್ಮನೇ ಬಾಣ, ಬ್ರಹ್ಮನೇ ಲಕ್ಷ್ಯ, ಗುರಿತಪ್ಪದೇ ಮನಸ್ಸನ್ನು ಪರಮಾತ್ಮನತ್ತ ಹರಿಸಿದರೆ (ಉಪಾಸಕನು) ಮುಕ್ತಚೇತನನು ಪರಮಾತ್ಮನಲ್ಲಿ ಮಗ್ನನಾಗುತ್ತಾನೆ. ಆಥರ್ವಣೋಪನಿಷತ್‌ನ ಚತುರ್ಥಖಂಡದ ನಾಲ್ಕು, ಐದು ಮತ್ತು ಆರನೆಯ ಶ್ಲೋಕಗಳು ಉಪಾಸನೆಮಾಡುವ ಬಗೆಯನ್ನು ಮತ್ತು ಉಪಾಸಕನು ಉಪಾಸನೆಯ ಫಲವಾಗಿ ಪಡೆಯುವ ಸಾಯುಜ್ಯಮುಕ್ತಿಯ ಸ್ವರೂಪವನ್ನು ಲೌಕಿಕ ದೃಷ್ಟಾಂತದೊಂದಿಗೆ ವಿವರಿಸುತ್ತವೆ.

**ಭಾವವಿಲಾಸಿನೀ–** ಇತ್ಯುಪನಿಷದಿತಿ ಸಂಬಂಧಃ । ತಸ್ಯ ಬ್ರಹ್ಮಣಃ । ಅಯಮಂತಃಪ್ರವೇಶಃ ॥
॥ ೩೩೩–೩೩೪ ॥

**ವಿವರಣೆ–** ಆರನೆಯ ಶ್ಲೋಕದ ಅಮೃತಸ್ಯೈಷ ಸೇತುಃ ಎಂಬ ಭಾಗಕ್ಕೆ ಅಮೃತಸ್ಯ ಮುಕ್ತಸ್ಯ ಸೇತುಃ ಎಂಬುದಾಗಿ ಮಧ್ವರ ಭಾಷ್ಯವು ಪರಮಾತ್ಮನು ಮುಕ್ತರಿಗೆ ಆಶ್ರಯನು ಎಂದು ಹೇಳುತ್ತದೆ. ಸಾಯುಜ್ಯ ಮುಕ್ತಿಯನ್ನು ಪಡೆದ ಜೀವನು ಪರಮಾತ್ಮನೊಳಗೆ ಪ್ರವೇಶಿಸುವುದೆಂದರೆ ನೀರು ಹಾಲಿನೊಂದಿಗೆ ಇರುವಂತೆ ಆಗುತ್ತದೆ. ತನ್ಮಯಃ ಎಂಬಲ್ಲಿನ ಮಯಟ್‌ಪ್ರತ್ಯಯಕ್ಕೂ ಗಾಢಸಂಬಂಧ ಎಂಬ ಅರ್ಥವೇ ಹೊರತು ಅಭೇದ ಎಂಬ ಅರ್ಥವಲ್ಲ.

ಏಕೆಂದರೆ ಹಾಲಿನ ಪಾತ್ರೆಯಲ್ಲಿ ನೀರಿನ್ನು ಹಾಕಿದಾಗ ನೀರು ಹಾಲಿನೊಂದಿಗೆ ಅಭೇದವನ್ನು ಪಡೆಯುವುದಿಲ್ಲ. ಹೊರತಾಗಿ ಸುಲಭವಾಗಿ ಬೇರ್ಪಡಿಸಲಾಗದಷ್ಟು ಗಾಢ ಸಂಬಂಧವನ್ನು ಮಾತ್ರವೇ ಪಡೆಯುತ್ತದೆ. (ನೋಡಿ - ಭೇದಸೌರಭ - 588 ನೆಯ ಶ್ಲೋಕ.)

ಹೀಗೆ ಬಾಣವು ತನ್ನ ಗುರಿಯೊಂದಿಗೆ ಅಭೇದವನ್ನು ಹೊಂದದೆ ಅಲ್ಲಿ ಕೇವಲ ಗಾಢವಾಗಿ ನೆಟ್ಟಿರುವಂತೆ ಸಾಯುಜ್ಯಮುಕ್ತಿಯನ್ನು ಪಡೆದ ಜೀವನೂ ಪರಮಾತ್ಮನ

ಅಭೇದವನ್ನು ಪಡೆಯದೇ ಗಾಢಸಂಬಂಧವನ್ನು ಮಾತ್ರ ಪಡೆಯುತ್ತಾನೆಂದು ಶ್ರುತಿಯ ತಾತ್ಪರ್ಯವಾಗಿದೆ.

**ಬಾಣದಂತೆ ಮುಕ್ತನು ಭಗವಂತನಲ್ಲಿ ಆಸಕ್ತನಾಗಬೇಕೆಂದು ಹೇಳುವ ಶ್ರುತಿಗೆ ದೃಷ್ಟಾಂತ - ದಾರ್ಷ್ಟಾಂತಿಕಗಳೆರಡರಲ್ಲೂ ಬಾಣ - ಲಕ್ಷ್ಯಗಳು, ಹಾಗೂ ಜೀವ-ಪರಮಾತ್ಮರಲ್ಲಿ ಭೇದವನ್ನೇ ತಿಳಿಸುವ ಅಭಿಪ್ರಾಯವಿದೆ ಎಂಬುದನ್ನು ಈ ಶ್ಲೋಕದಲ್ಲಿ ಸಮರ್ಥಿಸುತ್ತಾರೆ-**

**ಜಾತಿಭೇದೋ ವರ್ಣಭೇದೋ ಮುಕ್ತಭೇದೋऽಸ್ತಿ ತತ್ರ ಚ ।**
**ಭೇದೇನಾದರ್ಶನಾದೇವ ತದೇಕೀಭಾವವಚ್ಛ್ರುತೌ ।**
**ಅದೃಷ್ಟಾಂತೋಕ್ತಿತೋ ಯಸ್ಮಾತ್ ಸದೃಷ್ಟಾಂತಾ ಬಲೀಯಸೀ ॥ ೩೩೫ ॥**

**ಅರ್ಥ–** ತತ್ರ ಚ = ಮುಕ್ತಿಯಲ್ಲಿಯೂ ಕೂಡ, ಜಾತಿಭೇದಃ = ಬಾಣದಲ್ಲಿ ಬಾಣತ್ವ ಜಾತಿ, ಬಾಣಕ್ಕೆ ಗುರಿಯಾದ ವ್ಯಕ್ತಿಯಲ್ಲಿ ಪುರುಷತ್ವಜಾತಿ ಇರುವಂತೆ ಜೀವನಲ್ಲಿ ಜೀವತ್ವ ಜಾತಿ, ಉಪಾಸ್ಯನಾದ ಬ್ರಹ್ಮನಲ್ಲಿ ಬ್ರಹ್ಮತ್ವಜಾತಿಗಳು, ವರ್ಣಭೇದ; ಬಾಣದಲ್ಲಿ, ಕೃಷ್ಣವರ್ಣಃ = ಕಬ್ಬಿಣದ ಕಪ್ಪು ಬಣ್ಣ ಬಾಣಕ್ಕೆ ಗುರಿಯಾದ ವ್ಯಕ್ತಿಯಲ್ಲಿ, ಗೌರವರ್ಣ ಚರ್ಮದ ಶ್ವೇತಾದಿವರ್ಣಗಳು ಇರುವಂತೆ ಜೀವನಲ್ಲಿ ಅಲ್ಪಪ್ರಕಾಶ, ಉಪಾಸ್ಯನಾದ ಬ್ರಹ್ಮನಲ್ಲಿ ಉಜ್ವಲಪ್ರಕಾಶಗಳು, ಮುಕ್ತಭೇದಃ; ಬಾಣದಲ್ಲಿ, ಮುಕ್ತತ್ವ = ಧನುಸ್ಸಿನ ಮೂಲಕ ಪ್ರಯೋಜ್ಯತ್ವ, ಬಾಣಕ್ಕೆ ಗುರಿಯಾದ ವ್ಯಕ್ತಿಯಲ್ಲಿ ಲಕ್ಷ್ಯತ್ವಗಳು ಇರುವಂತೆ, ಜೀವನಲ್ಲಿ ಮುಕ್ತತ್ವ = ಸಂಸಾರಬಂಧನದಿಂದ ಕಳಚಿಕೊಂಡಿರುವಿಕೆ, ಉಪಾಸ್ಯನಾದ ಬ್ರಹ್ಮನಲ್ಲಿ ಸಂಸಾರಬಂಧನಕ್ಕೆ ಸಿಲುಕದಿರುವಿಕೆಗಳು, ಈ ಮೊದಲಾದ ಭಿನ್ನಧರ್ಮಗಳ ಉಪಲಬ್ಧಿಯು. ಅಸ್ತಿ = ಇದೆ. ಮುಕ್ತಸ್ಯ = ಸಾಯುಜ್ಯ ಮುಕ್ತಿಪಡೆದ ಜೀವನಿಗೆ, ಬ್ರಹ್ಮಣಃ = ಪರಬ್ರಹ್ಮನ ದೆಸೆಯಿಂದ, ಭೇದೇನ ಅದರ್ಶನಾತ್ ಏವ = ಭಿನ್ನತ್ವೇನ ಕಾಣುವಿಕೆ ಇಲ್ಲವಾದ್ದರಿಂದಲೇ (ಸಾಯುಜ್ಯ ಮುಕ್ತಿಯನ್ನು ಪಡೆದಾತನು ಬ್ರಹ್ಮನಿಂದ ಪ್ರತ್ಯೇಕವಾಗಿ ಕಾಣುವುದಿಲ್ಲವಾದ್ದರಿಂದಲೇ) ಶ್ರುತೌ = ವೇದದಲ್ಲಿ, ತದೇಕೀಭಾವವಾಕ್ = ಜೀವಬ್ರಹ್ಮರಿಗೆ ಏಕೀಭಾವವನ್ನು ಹೇಳುವ ವಾಕ್ಯವು ಇದೆ.

ಯಸ್ಮಾತ್ = ಯಾವಕಾರಣದಿಂದ, ಅದೃಷ್ಟಾಂತೋಕ್ತಿತಃ = ದೃಷ್ಟಾಂತವಿಲ್ಲದ ವಿಷಯಕಥನಕ್ಕಿಂತ, ಸದೃಷ್ಟಾಂತಾ = ದೃಷ್ಟಾಂತದೊಂದಿಗಿನ ವಿಷಯಕಥನವು, ಬಲೀಯಸೀ = ಹೆಚ್ಚು ಸ್ಪಷ್ಟಪಡಿಸುವ ಮೂಲಕ ಪರಿಣಾಮಕಾರಿಯೋ, ತಸ್ಮಾತ್ = ಆ ಕಾರಣದಿಂದ, ಶ್ರುತಿಃ = ಅಥರ್ವಣಶ್ರುತಿಯು, ಸದೃಷ್ಟಾಂತಂ = ಬಾಣದ ದೃಷ್ಟಾಂತದೊಂದಿಗೆ, ತನ್ಮಯಃ = ಜೀವನು ಭಗವಂತನಲ್ಲಿ ಮನಸ್ಸುಳ್ಳವನು, ಭವೇತ್ = ಆಗಬೇಕು, ಇತಿ = ಎಂದು, ಪ್ರಾಹ = ಹೇಳುತ್ತದೆ.

**ಅನುವಾದ– ಮುಕ್ತಿಯಲ್ಲಿಯೂ ಜಾತಿಭೇದ-ವರ್ಣಭೇದ-ಮುಕ್ತರಲ್ಲಿ ಭೇದಗಳಿವೆ. ಶ್ರುತಿಯು ಸಾಯುಜ್ಯಮುಕ್ತರಿಗೂ ಬ್ರಹ್ಮರಿಗೂ ಏಕೀಭಾವವನ್ನು ಹೇಳಿದೆ. ಅತ್ಯಂತ**

ಸಾಮೀಪ್ಯವು ಇಲ್ಲಿ ಏಕೀಭಾವವೆನಿಸಿದೆ. ದೃಷ್ಟಾಂತವಚನಗಳ ಮುಂದೆ ಅದೃಷ್ಟಾಂತೋಕ್ತಿಗಳು ದುರ್ಬಲವಾಗುತ್ತವೆ.

**ಭಾವವಿಲಾಸಿನೀ–** ಜಾತಿಭೇದಾಂತಃಪ್ರವಿಷ್ಟಶರಸ್ಥ ಶರತ್ವಜಾತಿವಲ್ಲಕ್ಷೀಭೂತಪುರುಷಸ್ಥ ಪುರುಷತ್ವಜಾತಿವಚ್ಚ ಬ್ರಹ್ಮಣಿ ಬ್ರಹ್ಮತ್ವಜಾತಿಃ ಅಂತಃಪ್ರವಿಷ್ಟಜೀವೇ ಜೀವತ್ವ ಜಾತಿಶ್ಚೇತಿ ಜಾತಿಭೇದಃ ವರ್ಣಭೇದಃ । ಪುರುಷಸ್ಯ ಮಹಾಕಾಂತಿವದಯೋಮಯ ಶ(ರೀ)ರಸ್ಯಾಲ್ಪಕಾಂತಿ ವಜ್ಜೀವಬ್ರಹ್ಮಣೋರ್ವರ್ಣಭೇದಃ । ಮುಕ್ತಭೇದ ಏಕಶರೀರ ಪ್ರವಿಷ್ಟಬಹುಶ(ರೀ)ರಭೇದವತ್ ಬ್ರಹ್ಮಣಿ ಪ್ರವಿಷ್ಟಮುಕ್ತಾನಾಂ ಪರಸ್ಪರಭೇದೋ ಮುಕ್ತಭೇದಃ । ತತ್ರ ಮುಕ್ತೌ । ಅದೃಷ್ಟಾಂತೋಕ್ತಿತಃ ನ ವಿದ್ಯತೇ ದೃಷ್ಟಾಂತೋಕ್ತಿರ್ಯಸ್ಯಾಂ ಸಾಽದೃಷ್ಟಾಂತೋಕ್ತಿಸ್ತಸ್ಯಾಃ ಸದೃಷ್ಟಾಂತಾ ಉಕ್ತಿಃ ॥೩೩೫॥

**ವಿವರಣೆ–** ಅ)ದೃಷ್ಟಾಂತದಲ್ಲಿ - ಬಾಣ ಪುರುಷನಲ್ಲಿ ಕ್ರಮವಾಗಿ ಬಾಣತ್ವ ಪುರುಷತ್ವಗಳೆಂಬ ಜಾತಿವ್ಯತ್ಯಾಸವಿದೆ. ದಾರ್ಷ್ಟಾಂತಿಕದಲ್ಲಿ ಜೀವ ಈಶ್ವರರಲ್ಲಿ ಕ್ರಮವಾಗಿ ಜೀವತ್ವ, ಈಶ್ವರತ್ವಗಳೆಂಬ ಜಾತಿವ್ಯತ್ಯಾಸವಿದೆ.

ಬ) ದೃಷ್ಟಾಂತದಲ್ಲಿ - ಬಾಣ, ಲಕ್ಷ್ಯಗಳಲ್ಲಿ ಕ್ರಮವಾಗಿ ಕಬ್ಬಿಣದ ಕಪ್ಪುಬಣ್ಣ ಬಾಣಕ್ಕೆ ಗುರಿಯಾದ ಮನುಷ್ಯನ ಶರೀರದ ಬಿಳಿಯ ಬಣ್ಣಗಳೆಂಬ ಬಣ್ಣದ ವ್ಯತ್ಯಾಸವಿದೆ. ದಾರ್ಷ್ಟಾಂತಿಕದಲ್ಲಿ - ಜೀವ,ಈಶ್ವರರಲ್ಲಿ ಕ್ರಮವಾಗಿ ಅಲ್ಪಪ್ರಕಾಶ, ಮಹಾಪ್ರಕಾಶಗಳೆಂಬ ವರ್ಣ - ಪ್ರಕಾಶವ್ಯತ್ಯಾಸವಿದೆ.

ಕ) ದೃಷ್ಟಾಂತದಲ್ಲಿ - ಬಾಣ, ಲಕ್ಷ್ಯಪುರುಷರಲ್ಲಿ ಕ್ರಮವಾಗಿ ಮುಕ್ತತ್ವ - ಧನುಸ್ಸಿನಿಂದ ಪ್ರಯೋಗಿಸಲ್ಪಟ್ಟಿರುವಿಕೆ, ಲಕ್ಷ್ಯತ್ವಗಳೆಂಬ ಅವಸ್ಥಾ ವ್ಯತ್ಯಾಸವಿದೆ. ದಾರ್ಷ್ಟಾಂತಿಕದಲ್ಲಿ - ಜೀವ,ಈಶ್ವರರಲ್ಲಿ ಕ್ರಮವಾಗಿ ಸಂಸಾರದಿಂದ ಮುಕ್ತನಾಗಿರುವಿಕೆ, ಸಂಸಾರಕ್ಕೆ ಸಿಲುಕದಿರುವಿಕೆಗಳೆಂಬ ಅವಸ್ಥಾವ್ಯತ್ಯಾಸವಿದೆ.

ಹೀಗೆ ದೃಷ್ಟಾಂತದಲ್ಲಿ - ಬಾಣ ಮತ್ತು ಲಕ್ಷ್ಯಪುರುಷರು ವಿಭಿನ್ನಗುಣಧರ್ಮಗಳನ್ನು ಹೊಂದಿರುವ ಕಾರಣ ಪರಸ್ಪರ ಭಿನ್ನರಾಗಿದ್ದಾರೆ. ಆದುದರಿಂದ ದಾರ್ಷ್ಟಾಂತಿಕದಲ್ಲಿ ಜೀವ ಮತ್ತು ಈಶ್ವರರೂ ಕೂಡ ವಿಭಿನ್ನಗುಣಧರ್ಮಗಳಿಗೆ ಆಶ್ರಯರೇ ಆದ್ದರಿಂದ ಪರಸ್ಪರ ಭಿನ್ನರಾಗಿದ್ದಾರೆಂಬುದೇ ಶ್ರುತಿಯ ತಾತ್ಪರ್ಯವಾಗಿದೆ.

ಪ್ರಶ್ನೆ - ಭಿನ್ನತ್ವವೇ ಶ್ರುತಿಯ ತಾತ್ಪರ್ಯವಾದರೆ ಅದು ಅಭೇದವಾಚಕಗಳಾದ ಏಕೀಭವಂತಿ ಇತ್ಯಾದಿ ಪದಗಳನ್ನು ಏಕೆ ಪ್ರಯೋಗಿಸುತ್ತದೆ?

ಸಮಾಧಾನ - ಸಾಯುಜ್ಯಮುಕ್ತಿಯನ್ನು ಪಡೆದ ಜೀವನು ಸ್ಥೂಲದೃಷ್ಟಿಗೆ ಈಶ್ವರನಿಂದ ಭಿನ್ನನಾಗಿ (ಪ್ರತ್ಯೇಕವಾಗಿ) ಕಾಣಲಾರನಾದ್ದರಿಂದ ಅಭೇದವಾಚಕಶಬ್ದಗಳನ್ನು ಪ್ರಯೋಗಿಸಿದೆ.

ಅಭೇದವನ್ನು ಪಡೆಯದೇ ಗಾಢಸಂಬಂಧವನ್ನು ಮಾತ್ರ ಪಡೆಯುತ್ತಾನೆಂದು ಶ್ರುತಿಯ ತಾತ್ಪರ್ಯವಾಗಿದೆ.

**ಬಾಣದಂತೆ ಮುಕ್ತನು ಭಗವಂತನಲ್ಲಿ ಆಸಕ್ತನಾಗಬೇಕೆಂದು ಹೇಳುವ ಶ್ರುತಿಗೆ ದೃಷ್ಟಾಂತ - ದಾರ್ಷ್ಟಾಂತಿಕಗಳೆರಡರಲ್ಲೂ ಬಾಣ - ಲಕ್ಷ್ಯಗಳು, ಹಾಗೂ ಜೀವ-ಪರಮಾತ್ಮರಲ್ಲಿ ಭೇದವನ್ನೇ ತಿಳಿಸುವ ಅಭಿಪ್ರಾಯವಿದೆ ಎಂಬುದನ್ನು ಈ ಶ್ಲೋಕದಲ್ಲಿ ಸಮರ್ಥಿಸುತ್ತಾರೆ-**

**ಜಾತಿಭೇದೋ ವರ್ಣಭೇದೋ ಮುಕ್ತಭೇದೋಽಸ್ತಿ ತತ್ರ ಚ ।**
**ಭೇದೇನಾದರ್ಶನಾದೇವ ತದೇಕೀಭಾವವಚ್ಛ್ರುತೌ ।**
**ಅದೃಷ್ಟಾಂತೋಕ್ತಿತೋ ಯಸ್ಮಾತ್ ಸದೃಷ್ಟಾಂತಾ ಬಲೀಯಸೀ ॥ ೩೩೫ ॥**

**ಅರ್ಥ–** ತತ್ರ ಚ = ಮುಕ್ತಿಯಲ್ಲಿಯೂ ಕೂಡ, ಜಾತಿಭೇದಃ = ಬಾಣದಲ್ಲಿ ಬಾಣತ್ವ ಜಾತಿ, ಬಾಣಕ್ಕೆ ಗುರಿಯಾದ ವ್ಯಕ್ತಿಯಲ್ಲಿ ಪುರುಷತ್ವಜಾತಿ ಇರುವಂತೆ ಜೀವನಲ್ಲಿ ಜೀವತ್ವ ಜಾತಿ, ಉಪಾಸ್ಯನಾದ ಬ್ರಹ್ಮನಲ್ಲಿ ಬ್ರಹ್ಮತ್ವಜಾತಿಗಳು, ವರ್ಣಭೇದ; ಬಾಣದಲ್ಲಿ, ಕೃಷ್ಣವರ್ಣಃ = ಕಬ್ಬಿಣದ ಕಪ್ಪು ಬಣ್ಣ ಬಾಣಕ್ಕೆ ಗುರಿಯಾದ ವ್ಯಕ್ತಿಯಲ್ಲಿ, ಗೌರವರ್ಣ ಚರ್ಮದ ಶ್ವೇತಾದಿವರ್ಣಗಳು ಇರುವಂತೆ ಜೀವನಲ್ಲಿ ಅಲ್ಪಪ್ರಕಾಶ, ಉಪಾಸ್ಯನಾದ ಬ್ರಹ್ಮನಲ್ಲಿ ಉಜ್ವಲಪ್ರಕಾಶಗಳು, ಮುಕ್ತಭೇದಃ; ಬಾಣದಲ್ಲಿ, ಮುಕ್ತತ್ವ = ಧನುಸ್ಸಿನ ಮೂಲಕ ಪ್ರಯೋಜ್ಯತ್ವ, ಬಾಣಕ್ಕೆ ಗುರಿಯಾದ ವ್ಯಕ್ತಿಯಲ್ಲಿ ಲಕ್ಷ್ಯತ್ವಗಳು ಇರುವಂತೆ, ಜೀವನಲ್ಲಿ ಮುಕ್ತತ್ವ = ಸಂಸಾರಬಂಧನದಿಂದ ಕಳಚಿಕೊಂಡಿರುವಿಕೆ, ಉಪಾಸ್ಯನಾದ ಬ್ರಹ್ಮನಲ್ಲಿ ಸಂಸಾರಬಂಧನಕ್ಕೆ ಸಿಲುಕದಿರುವಿಕೆಗಳು, ಈ ಮೊದಲಾದ ಭಿನ್ನ ಧರ್ಮಗಳ ಉಪಲಬ್ಧಿಯು. ಅಸ್ತಿ = ಇದೆ. ಮುಕ್ತಸ್ಯ = ಸಾಯುಜ್ಯ ಮುಕ್ತಿಪಡೆದ ಜೀವನಿಗೆ, ಬ್ರಹ್ಮಣಃ = ಪರಬ್ರಹ್ಮನ ದೆಸೆಯಿಂದ, ಭೇದೇನ ಅದರ್ಶನಾತ್ ಏವ = ಭಿನ್ನತ್ವೇನ ಕಾಣುವಿಕೆ ಇಲ್ಲವಾದ್ದರಿಂದಲೇ (ಸಾಯುಜ್ಯ ಮುಕ್ತಿಯನ್ನು ಪಡೆದಾತನು ಬ್ರಹ್ಮನಿಂದ ಪ್ರತ್ಯೇಕವಾಗಿ ಕಾಣುವುದಿಲ್ಲವಾದ್ದರಿಂದಲೇ) ಶ್ರುತೌ = ವೇದದಲ್ಲಿ, ತದೇಕೀಭಾವವಾಕ್ = ಜೀವಬ್ರಹ್ಮರಿಗೆ ಏಕೀಭಾವವನ್ನು ಹೇಳುವ ವಾಕ್ಯವು ಇದೆ.

ಯಸ್ಮಾತ್ = ಯಾವಕಾರಣದಿಂದ, ಅದೃಷ್ಟಾಂತೋಕ್ತಿತಃ = ದೃಷ್ಟಾಂತವಿಲ್ಲದ ವಿಷಯಕಥನಕ್ಕಿಂತ, ಸದೃಷ್ಟಾಂತಾ = ದೃಷ್ಟಾಂತದೊಂದಿಗಿನ ವಿಷಯಕಥನವು, ಬಲೀಯಸೀ = ಹೆಚ್ಚು ಸ್ಪಷ್ಟಪಡಿಸುವ ಮೂಲಕ ಪರಿಣಾಮಕಾರಿಯೋ, ತಸ್ಮಾತ್ = ಆ ಕಾರಣದಿಂದ, ಶ್ರುತಿಃ = ಅಥರ್ವಣಶ್ರುತಿಯು, ಸದೃಷ್ಟಾಂತಂ = ಬಾಣದ ದೃಷ್ಟಾಂತದೊಂದಿಗೆ, ತನ್ಮಯಃ = ಜೀವನು ಭಗವಂತನಲ್ಲಿ ಮನಸ್ಸುಳ್ಳವನು, ಭವೇತ್ = ಆಗಬೇಕು, ಇತಿ = ಎಂದು, ಪ್ರಾಹ = ಹೇಳುತ್ತದೆ.

**ಅನುವಾದ–** ಮುಕ್ತಿಯಲ್ಲಿಯೂ ಜಾತಿಭೇದ-ವರ್ಣಭೇದ-ಮುಕ್ತರಲ್ಲಿ ಭೇದಗಳಿವೆ. ಶ್ರುತಿಯು ಸಾಯುಜ್ಯಮುಕ್ತರಿಗೂ ಬ್ರಹ್ಮರಿಗೂ ಏಕೀಭಾವವನ್ನು ಹೇಳಿದೆ. ಅತ್ಯಂತ

ಸಾಮೀಪ್ಯವು ಇಲ್ಲಿ ಏಕೀಭಾವವೆನಿಸಿದೆ. ದೃಷ್ಟಾಂತವಚನಗಳ ಮುಂದೆ ಅದೃಷ್ಟಾಂತೋಕ್ತಿಗಳು ದುರ್ಬಲವಾಗುತ್ತವೆ.

**ಭಾವವಿಲಾಸಿನೀ–** ಜಾತಿಭೇದಾಂತಃಪ್ರವಿಷ್ಟಶರಸ್ಥ ಶರತ್ವಜಾತಿವಲ್ಲಕ್ಷೀಭೂತಪುರುಷಸ್ಥ ಪುರುಷತ್ವಜಾತಿವಚ್ಚ ಬ್ರಹ್ಮಣಿ ಬ್ರಹ್ಮತ್ವಜಾತಿಃ ಅಂತಃಪ್ರವಿಷ್ಟಜೀವೇ ಜೀವತ್ವ ಜಾತಿಶ್ಚೇತಿ ಜಾತಿಭೇದಃ ವರ್ಣಭೇದಃ । ಪುರುಷಸ್ಯ ಮಹಾಕಾಂತಿವದಯೋಮಯ ಶ(ರೀ)ರಸ್ಯಾಲ್ಪಕಾಂತಿ ವಜ್ಜೀವಬ್ರಹ್ಮಣೋರ್ವರ್ಣಭೇದಃ । ಮುಕ್ತಭೇದ ಏಕಶರೀರ ಪ್ರವಿಷ್ಟಬಹುಶ(ರೀ)ರಭೇದವತ್ ಬ್ರಹ್ಮಣಿ ಪ್ರವಿಷ್ಟಮುಕ್ತಾನಾಂ ಪರಸ್ಪರಭೇದೋ ಮುಕ್ತಭೇದಃ। ತತ್ರ ಮುಕ್ತೌ। ಅದೃಷ್ಟಾಂತೋಕ್ತಿತಃ ನ ವಿದ್ಯತೇ ದೃಷ್ಟಾಂತೋಕ್ತಿರ್ಯಸ್ಯಾಂ ಸಾऽದೃಷ್ಟಾಂತೋಕ್ತಿಸ್ತಸ್ಯಾಃ ಸದೃಷ್ಟಾಂತಾ ಉಕ್ತಿಃ ॥೩೩೫॥

**ವಿವರಣೆ–** ಅ)ದೃಷ್ಟಾಂತದಲ್ಲಿ - ಬಾಣ ಪುರುಷನಲ್ಲಿ ಕ್ರಮವಾಗಿ ಬಾಣತ್ವ ಪುರುಷತ್ವಗಳೆಂಬ ಜಾತಿವ್ಯತ್ಯಾಸವಿದೆ. ದಾರ್ಷ್ಟಾಂತಿಕದಲ್ಲಿ ಜೀವ ಈಶ್ವರರಲ್ಲಿ ಕ್ರಮವಾಗಿ ಜೀವತ್ವ, ಈಶ್ವರತ್ವಗಳೆಂಬ ಜಾತಿವ್ಯತ್ಯಾಸವಿದೆ.

ಬ) ದೃಷ್ಟಾಂತದಲ್ಲಿ - ಬಾಣ, ಲಕ್ಷ್ಯಗಳಲ್ಲಿ ಕ್ರಮವಾಗಿ ಕಬ್ಬಿಣದ ಕಪ್ಪುಬಣ್ಣ, ಬಾಣಕ್ಕೆ ಗುರಿಯಾದ ಮನುಷ್ಯನ ಶರೀರದ ‵ಬಿಳಿಯ ಬಣ್ಣಗಳೆಂಬ ಬಣ್ಣದ ವ್ಯತ್ಯಾಸವಿದೆ. ದಾರ್ಷ್ಟಾಂತಿಕದಲ್ಲಿ - ಜೀವ,ಈಶ್ವರರಲ್ಲಿ ಕ್ರಮವಾಗಿ ಅಲ್ಪಪ್ರಕಾಶ, ಮಹಾಪ್ರಕಾಶಗಳೆಂಬ ವರ್ಣ - ಪ್ರಕಾಶವ್ಯತ್ಯಾಸವಿದೆ.

ಕ) ದೃಷ್ಟಾಂತದಲ್ಲಿ - ಬಾಣ, ಲಕ್ಷ್ಯಪುರುಷರಲ್ಲಿ ಕ್ರಮವಾಗಿ ಮುಕ್ತತ್ವ - ಧನುಸ್ಸಿನಿಂದ ಪ್ರಯೋಗಿಸಲ್ಪಟ್ಟಿರುವಿಕೆ, ಲಕ್ಷ್ಯತ್ವಗಳೆಂಬ ಅವಸ್ಥಾ ವ್ಯತ್ಯಾಸವಿದೆ. ದಾರ್ಷ್ಟಾಂತಿಕದಲ್ಲಿ - ಜೀವ,ಈಶ್ವರರಲ್ಲಿ ಕ್ರಮವಾಗಿ ಸಂಸಾರದಿಂದ ಮುಕ್ತನಾಗಿರುವಿಕೆ, ಸಂಸಾರಕ್ಕೆ ಸಿಲುಕದಿರುವಿಕೆಗಳೆಂಬ ಅವಸ್ಥಾವ್ಯತ್ಯಾಸವಿದೆ.

ಹೀಗೆ ದೃಷ್ಟಾಂತದಲ್ಲಿ - ಬಾಣ ಮತ್ತು ಲಕ್ಷ್ಯಪುರುಷರು ವಿಭಿನ್ನಗುಣಧರ್ಮಗಳನ್ನು ಹೊಂದಿರುವ ಕಾರಣ ಪರಸ್ಪರ ಭಿನ್ನರಾಗಿದ್ದಾರೆ. ಆದುದರಿಂದ ದಾರ್ಷ್ಟಾಂತಿಕದಲ್ಲಿ ಜೀವ ಮತ್ತು ಈಶ್ವರರೂ ಕೂಡ ವಿಭಿನ್ನಗುಣಧರ್ಮಗಳಿಗೆ ಆಶ್ರಯರೇ ಆದ್ದರಿಂದ ಪರಸ್ಪರ ಭಿನ್ನರಾಗಿದ್ದಾರೆಂಬುದೇ ಶ್ರುತಿಯ ತಾತ್ಪರ್ಯವಾಗಿದೆ.

ಪ್ರಶ್ನೆ - ಭಿನ್ನತ್ವವೇ ಶ್ರುತಿಯ ತಾತ್ಪರ್ಯವಾದರೆ ಅದು ಅಭೇದವಾಚಕಗಳಾದ ಏಕೀಭವಂತಿ ಇತ್ಯಾದಿ ಪದಗಳನ್ನು ಏಕೆ ಪ್ರಯೋಗಿಸುತ್ತದೆ?

ಸಮಾಧಾನ - ಸಾಯುಜ್ಯಮುಕ್ತಿಯನ್ನು ಪಡೆದ ಜೀವನು ಸ್ಥೂಲದೃಷ್ಟಿಗೆ ಈಶ್ವರನಿಂದ ಭಿನ್ನನಾಗಿ (ಪ್ರತ್ಯೇಕವಾಗಿ) ಕಾಣಲಾರನಾದ್ದರಿಂದ ಅಭೇದವಾಚಕಶಬ್ದಗಳನ್ನು ಪ್ರಯೋಗಿಸಿದೆ.

ಲೌಕಿಕ, ವೈದಿಕ ವಿಷಯಗಳೆರಡರಲ್ಲೂ ದೃಷ್ಟಾಂತಕೊಡದೇ ವಿಷಯವನ್ನು ಮಂಡಿಸುವುದಕ್ಕಿಂತ ದೃಷ್ಟಾಂತದೊಂದಿಗಿನ ವಿಷಯನಿರೂಪಣೆಯು ಹೆಚ್ಚು ಸ್ಪಷ್ಟವಾಗಿ ಶ್ರೋತೃವಿಗೆ ಅರ್ಥವಾಗುವುದರಿಂದ ಈ ಅಥರ್ವಣ ಶ್ರುತಿಯೂ ಕೂಡ ಬಾಣದ ದೃಷ್ಟಾಂತದೊಂದಿಗೆ ಜೀವನು ಭಗವಂತನಲ್ಲಿ ಆಸಕ್ತನಾಗಬೇಕು ಎಂದು ಹೇಳುತ್ತಿದೆ.

**ಕಥಂ ಜೀವೇಶಭೇದೋ ನ ಯಂ ಮುಕ್ತೋऽಪಿ ನ ಮುಂಚತಿ ।**
**ದ್ವಾಸುಪರ್ಣೇತಿ ಸೈವಾಹ ಪುನಸ್ತದ್ಭೇದಮಂಜಸಾ ।**
**ತಸ್ಮಾದ್ ವೇದಾಂತವಾಕ್ಯಾನಾಮಸ್ಮಿನ್ನರ್ಥೇ ಮಹಾನ್ ಭರಃ ॥ ೩೩೬ ॥**

**ಅರ್ಥ–** ಯಂ = ಯಾವುದನ್ನು, ಮುಕ್ತಃ ಅಪಿ = ಮುಕ್ತಜೀವನೂ ಕೂಡ, ನ ಮುಂಚತಿ = ಬಿಡುವುದಿಲ್ಲವೋ, ಸಃ = ಅಂತಹ, ಜೀವೇಶಭೇದಃ = ಜೀವಪರಮಾತ್ಮರ ನಡುವಣ ಭೇದವು, ಕಥಂ = ಹೇಗೆ, ನ ಅಸ್ತಿ = ಇರುವುದಿಲ್ಲ? ಸಾ ಏವ = ಅದೇ ಅಥರ್ವಣೋಪನಿಷತ್ತೇ, ಪುನಃ = ಮತ್ತೊಮ್ಮೆ, ದ್ವಾಸುಪರ್ಣಾ ಇತಿ = ದ್ವಾಸುಪರ್ಣಾ ಎಂಬ ವಾಕ್ಯದಿಂದ, ತದ್ಭೇದಂ = ಜೀವೇಶ್ವರರ ನಡುವಣ ಭೇದವನ್ನು, ಅಂಜಸಾ = ಸ್ಪಷ್ಟವಾಗಿ, ಆಹ = ಹೇಳುತ್ತದೆ. ತಸ್ಮಾತ್ = ಆ ಕಾರಣದಿಂದಾಗಿ, ವೇದಾಂತವಾಕ್ಯಾನಾಂ = ಉಪನಿಷದ್ವಾಕ್ಯಗಳಿಗೆ, ಅಸ್ಮಿನ್ = ಈ, ಅರ್ಥೇ = ಅರ್ಥದಲ್ಲಿ, ಮಹಾನ್ = ಅತಿಶಯವಾದ, ಭರಃ = ತಾತ್ಪರ್ಯವು, ಅಸ್ತಿ = ಇದೆ.

**ಅನುವಾದ–** ಅಥರ್ವಣೋಪನಿಷತ್ತು ಶರವತ್ತನ್ಮಯೋ ಭವೇತ್ (ಚತುರ್ಥಖಂಡ ಐದನೇ ಶ್ಲೋಕ) ಎಂದು ಜೀವಪರಮಾತ್ಮರಿಗೆ ಭೇದವನ್ನು ಹೇಳಿ ಪುನಃ ದ್ವಾಸುಪರ್ಣಾ ಎಂಬ ವಾಕ್ಯದಿಂದ (ಪಂಚಮ ಖಂಡ ಒಂದನೆಯ ಶ್ಲೋಕ) ಅವರೀರ್ವರಿಗೆ ಭೇದವನ್ನು ಹೇಳುತ್ತಿದೆ. ಭಾಷ್ಯದಲ್ಲಿ ಸ್ವಾದುವತ್ ಸರ್ವದಾ ಅತ್ತಿ ನ ತು ಸ್ವಾದ್ವೇವ ಎಂಬ ವಾಕ್ಯದಿಂದ ಅಸಾರ, ಅರುಚಿಯಾದ ತನ್ನ ಕರ್ಮಫಲವನ್ನೇ ರುಚಿಯುಳ್ಳ ಪದಾರ್ಥದಂತೆ ಸೇವಿಸುತ್ತಾನೆ ಎಂದು ಹೇಳಲಾಗಿದೆ. ವಾದಿರಾಜೀಯ ಟಿಪ್ಪಣಿಯಲ್ಲೂ ಪ್ರಚುರದುಃಖಮಿಶ್ರಮೀಷತ್ಸುಖಾಖ್ಯಫಲಮತ ಏವಾಸ್ವಾದ್ವಪಿ ಸ್ವಾದುವಿಷಸಂಪೃಕ್ತಾನ್ನಮಿವ, ಎಂದು ಮಧ್ವರ ಅಭಿಪ್ರಾಯವನ್ನೇ ದೃಷ್ಟಾಂತಪೂರ್ವಕವಾಗಿ ವಿವರಿಸಲಾಗಿದೆ.

**ಭಾವವಿಲಾಸಿನೀ–** ಯಂ ಭೇದಮ್ । ಸೈವ ಶರವತ್ತನ್ಮಯೋ ಭವೇದಿತಿ ಪ್ರತಿಪಾದಯಂತ್ಯೇವಾ-ಥರ್ವಣೋಪನಿಷತ್ । ತದ್‌ಭೇದಂ ಜೀವೇಶ್ವರಭೇದಂ ಪುನರಿತ್ಯನೇನ ಮುಕ್ತಿಕಾಲೀನ-ಭೇದಸ್ಯೈವ ಪ್ರತಿಪಾದಿಕಾ ವಾ ದ್ವಾಸುಪರ್ಣೇತಿ ಶ್ರುತಿರಿತಿ ಸೂಚಯತಿ । ಜೀವ-ಪಕ್ಷೋಕ್ತಸ್ವಾದ್ವಶನಸ್ಯ ಮುಕ್ತಾವೇವ ಸಂಭವಾತ್ । ಅಸ್ಮಿನ್ನರ್ಥೇ ಮುಕ್ತಾವಪಿ ಜೀವೇಶ್ವರ-ಭೇದರೂಪಾರ್ಥೇ ॥ ೩೩೬ ॥

**ವಿವರಣೆ–** ಹೀಗೆ ಆಥರ್ವಣೋಪನಿಷತ್‌ನ ಮಾಧ್ವಭಾಷ್ಯ ಹಾಗೂ ವಾದಿರಾಜೀಯ ಟಿಪ್ಪಣಿಗಳೆರಡರ ಅನುಸಾರವಾಗಿ ಅಸ್ವಾದುವಾದ ಅನ್ನವನ್ನು ಸ್ವಾದುವೆಂಬಂತೆ ಜೀವನು ಉಣ್ಣುವುದು ಸಂಸಾರಾವಸ್ಥೆಯಲ್ಲೇ. ಆದ್ದರಿಂದ ಸಂಸಾರಸ್ಥಜೀವನಿಗೂ ಪರಮಾತ್ಮನಿಗೂ ಭೇದವನ್ನು ಹೇಳುವುದೇ ಶ್ರುತಿಯ ತಾತ್ಪರ್ಯವೆಂದು ತಿಳಿದುಬರುತ್ತದೆ.

ಆದರೆ ವಾದಿರಾಜರು ಯುಕ್ತಿಮಲ್ಲಿಕಾದ ಈ ಶ್ಲೋಕದಲ್ಲಿ ಆಥರ್ವಣಶ್ರುತಿಯು ಮುಕ್ತಪರಮಾತ್ಮರಿಗೆ ಭೇದವನ್ನು ಹೇಳುತ್ತದೆ ಎಂದು ಹೇಳಿದ್ದಾರೆ.

ಹೀಗೆ ಉಪನಿಷದ್ಭಾಷ್ಯ ಮತ್ತು ಯುಕ್ತಿಮಲ್ಲಿಕಾಗಳ ನಡುವೆ ತೋರಿ ಬಂದ ವಿರೋಧವನ್ನು ಹೀಗೆ ಪರಿಹರಿಸಬೇಕು. ಇದೇ ಆಥರ್ವಣೋಪನಿಷತ್ತಿನ ಆರನೆಯ ಖಂಡದ ಒಂಬತ್ತನೆಯ ಶ್ಲೋಕದಲ್ಲಿ ಆಚಾರ್ಯಮಧ್ವರು- ಶರವತ್ತನ್ಮಯೋ ಭವೇತ್ ಇತ್ಯಾದಿನಾ ಮುಕ್ತಸ್ಯ ಸರ್ವತ್ರ ಭಗವತ್ಸಕಾಶಾತ್ ಭೇದಸ್ಯೈವೋಕ್ತತ್ವಾಚ್ಚ ಎಂಬುದಾಗಿ ಈ ಉಪನಿಷತ್ತಿನ ಶರವತ್ತನ್ಮಯೋ ಭವೇತ್, ದ್ವಾಸುಪರ್ಣಾ ಇತ್ಯಾದಿವಾಕ್ಯಗಳನ್ನು ಮುಕ್ತ-ಈಶ್ವರಭೇದಪರವಾಗಿ ವ್ಯಾಖ್ಯಾನಿಸಿದ್ದಾರೆ. ನಿರ್ದಿಷ್ಟವಾಗಿ ದ್ವಾಸುಪರ್ಣಾಎಂಬ ಶ್ರುತಿವಾಕ್ಯವು ಜೀವನು ಸಂಸಾರಮುಕ್ತಿಗಳೆರಡರಲ್ಲೂ ಪರಮಾತ್ಮನಿಂದ ಭಿನ್ನನೆಂದು ಪ್ರತಿಪಾದಿಸುತ್ತಿದೆ.

ಹಾಗಾಗಿ ದ್ವಾಸುಪರ್ಣಾ ಶ್ರುತಿಯನ್ನು ಯುಕ್ತಿಮಲ್ಲಿಕಾದಲ್ಲಿ ಮಕ್ತ-ಪರಬ್ರಹ್ಮಭೇದಪರವಾಗಿ ಉದಾಹರಿಸಿರುವುದು ಯುಕ್ತವೇ ಆಗಿದೆ. ಸಯುಜೌ ಎನ್ನುವ ಶಬ್ದವು ಜೀವಬ್ರಹ್ಮರು ಅನಾದಿಕಾಲದಿಂದಲೂ ಜೊತೆಗೂಡಿಯೇ ಇದ್ದಾರೆ, ವಿಶೇಷತಃ ಮೋಕ್ಷದಲ್ಲಿ ಅವರ ಅನ್ಯೋನ್ಯತೆಯು ಮತ್ತಷ್ಟು ಸ್ಪಷ್ಟವಾಗುತ್ತದೆ ಎಂಬ ಅರ್ಥವನ್ನು ಹೇಳುತ್ತದೆ. ಅವರಿಬ್ಬರೂ ಸಮಾನವೃಕ್ಷದಲ್ಲಿ ಕುಳಿತಿರುವುದೆಂದರೆ ಸಂಸಾರದಲ್ಲಿ ಭೌತಿಕದೇಹದಲ್ಲಿ ಮತ್ತು ಮೋಕ್ಷದಲ್ಲಿ ಸ್ವರೂಪದೇಹದಲ್ಲಿ ಒಟ್ಟಿಗೆ ಇರುತ್ತಾರೆ ಎಂದು ಅರ್ಥ. ಪಿಪ್ಪಲಭೋಜನವೆಂದರೆ ಸಂಸಾರದಲ್ಲಿ ಜೀವನು ತಾನು ಆಚರಿಸಿದ ಕರ್ಮಫಲವನ್ನು ಅರುಚಿಕರವಾದರೂ ರುಚಿಕರವೆಂಬಂತೆ ಅನುಭವಿಸುತ್ತಾನೆ ಮತ್ತು ಮೋಕ್ಷದಲ್ಲಿ, ತಾನು ಮಾಡಿದ ಸಾಧನೆಯ ಫಲವಾಗಿ ಕೇವಲ ಶುದ್ಧಸ್ವರೂಪಸುಖವನ್ನೇ ಅನುಭವಿಸುತ್ತಾನೆ ಎಂದರ್ಥ.

**ತ್ವಮೇವಾಹಮಿತಿ ಪ್ರೋಕ್ತೋ ಭೃತ್ಯಸ್ತತ್ಪ್ರೇಮ ಭಾವಯೇತ್ ।**
**ಅತೋ ಮುಕ್ತೈಕ್ಯವಾಕ್ಯಂ ಚ ಮುಕ್ತಸ್ಯಾತ್ಯಾಪ್ತತಾಪರಮ್ ॥ ೩೩೭ ॥**

**ಅರ್ಥ–** ರಾಜ್ಞಾ = ತನ್ನ ಒಡೆಯನಾದ ರಾಜನಿಂದ, ತ್ವಂ = ನೀನು, ಅಹಂ ಏವ = ನಾನೇ ಆಗಿರುವಿ, ಇತಿ = ಎಂದು, ಪ್ರೋಕ್ತಃ = ಹೇಳಲ್ಪಟ್ಟ ಭೃತ್ಯಃ = ಸೇವಕನು, ತತ್ಪ್ರೇಮ = ರಾಜನು ಸೇವಕನಾದ ತನ್ನಲ್ಲಿಟ್ಟಿರುವ ಪ್ರೀತಿಯನ್ನು ಭಾವಯೇತ್ = ಅರಿತುಕೊಳ್ಳಬೇಕು. ಅತಃ ಚ =

ಈ ಲೌಕಿಕನ್ಯಾಯಕ್ಕನುಸಾರವಾಗಿ ಕೂಡ, ಮುಕ್ತೈಕ್ಯವಾಕ್ಯಂ = ಮುಕ್ತಜೀವರು ಪರಮಾತ್ಮನಿಂದ ಅಭಿನ್ನರೆಂದು ಹೇಳುವ ಶ್ರುತಿವಾಕ್ಯವನ್ನು, ಮುಕ್ತಸ್ಯ = ಮುಕ್ತಜೀವನಿಗೆ, ಅತ್ಯಾಪ್ತತಾಪರಂ = ಪರಮಾತ್ಮನಿಗೆ ಅತ್ಯಂತಸಮೀಪದವನೆಂದು ಪ್ರತಿಪಾದನೆಮಾಡುತ್ತದೆ, ಇತಿ = ಎಂದು, ಭಾವಯೇತ್ = (ಅರ್ಥ ಮಾಡಬೇಕು) ತಿಳಿಯಬೇಕು.

**ಅನುವಾದ–** ರಾಜನು ತನ್ನ ಸೇವಕನಿಗೆ ನಾವಿಬ್ಬರೂ ಒಂದೇ ಎಂದು ಹೇಳಿದರೆ ಆ ಸೇವಕನು ತಾನೂ ರಾಜನೂ ಅತ್ಯಂತಾಭಿನ್ನರೆಂದು ತಿಳಿಯುವುದಿಲ್ಲ. ಅದಕ್ಕಾಗಿ ರಾಜನು ಸೇವಕನಾದ ತನ್ನನ್ನು ಅತ್ಯಂತ ಪ್ರೀತಿಪಾತ್ರನೆಂದು ಭಾವಿಸಿದ್ದಾನೆಂದು ತಿಳಿಯುತ್ತಾನೆ. ಈ ಲೌಕಿಕನ್ಯಾಯವನ್ನು ಮುಕ್ತರಿಗೆ ಪರಮಾತ್ಮನ ಅಭೇದವನ್ನು ಹೇಳುವ ಶ್ರುತಿವಾಕ್ಯಗಳಿಗೂ ಅನ್ವಯಿಸಿ ಆ ವಾಕ್ಯಗಳಿಗೆ ಮುಕ್ತರು ಪರಮಾತ್ಮನಿಗೆ ಅತ್ಯಂತ ಪ್ರೀತಿಪಾತ್ರರು,ಪರಮಾತ್ಮನ ಗಾಢವಾದ ಸಂಬಂಧವುಳ್ಳವರು ಎಂದೇ ಅರ್ಥವನ್ನು ಹೇಳಬೇಕು, ಪರಮಾತ್ಮನ ಅತ್ಯಂತಾಭೇದವುಳ್ಳವರು ಎಂಬ ಅರ್ಥವನ್ನು ಹೇಳಬಾರದು.

ಮಮಾತ್ಮಾ ಭದ್ರಸೇನೋಽಯಮಿತ್ಯುಕ್ತಿರ್ದ್ವೇಷ್ಟಿ ಕಿಂ ದ್ವಯಮ್ ।
ಏಕೀಭೂತಾ ಇತಿ ಪ್ರೋಕ್ತೇ ಕಿಂ ಗವಾಮದ್ವಿತೀಯತಾ ॥ ೩೩೮ ॥

**ಅರ್ಥ–** ಅಯಂ = ಈ, ಭದ್ರಸೇನಃ = ಭದ್ರಸೇನನು, ಮಮ = ನನ್ನ, ಆತ್ಮಾ = ಆತ್ಮನಾಗಿದ್ದಾನೆ. ಇತಿ = ಎಂಬ, ಉಕ್ತಿಃ = ಹೇಳಿಕೆಯು, ದ್ವಯಂ = ಎರಡು ವಸ್ತುಗಳ ಅಸ್ತಿತ್ವವನ್ನು, ದ್ವೇಷ್ಟಿ ಕಿಂ? = ವಿರೋಧಿಸುವುದೇನು? ಗಾವಃ = ಗೋವುಗಳು, ಏಕೀಭೂತಾಃ = ಕೊಟ್ಟಿಗೆಯಲ್ಲಿ ಒಂದಾಗಿವೆ, ಇತಿ = ಎಂಬುದಾಗಿ, ಪ್ರೋಕ್ತೇ = ಹೇಳಲ್ಪಟ್ಟರೆ, ಗವಾಂ = ಗೋವುಗಳಿಗೆ, ಅದ್ವಿತಿಯತಾ = ಅಭೇದವು, ಅಸ್ತಿ ಕಿಂ? = ಇದೆಯೇನು?

**ಅನುವಾದ–** ವ್ಯಕ್ತಿಯೊಬ್ಬನು ತನಗೆ ಆಪ್ತನಾದ ಮತ್ತೊಬ್ಬವ್ಯಕ್ತಿಯನ್ನು ಕುರಿತು ಈ ಭದ್ರಸೇನನೆಂಬುವವನು ನನ್ನ ಆತ್ಮನೇ ಆಗಿದ್ದಾನೆ ಎಂದು ಹೇಳಿದರೆ ಆ ವ್ಯಕ್ತಿಗಳಿಬ್ಬರಿಗೆ ಅತ್ಯಂತಾಭೇದವಿದೆಯೆಂದು ಅರ್ಥವಾಗುತ್ತದೇನು? ಇಲ್ಲಿ ಹೇಗೆ ಅತ್ಯಂತ ಆಪ್ತನೆಂಬ ಅರ್ಥವನ್ನು ಸ್ವೀಕರಿಸಲಾಗುತ್ತದೆಯೋ, ಜ್ಞಾನೀತ್ವಾತ್ಮೈವ ಮೇ ಮತಂ ಇತ್ಯಾದಿ ಶಾಸ್ತ್ರವಾಕ್ಯಗಳಿಗೂ (ಜ್ಞಾನಿಯು) ಮುಕ್ತನು ಭಗವಂತನಿಗೆ ಅತ್ಯಾಪ್ತನೆಂದೇ ಅರ್ಥಮಾಡಬೇಕು.

**ಭಾವವಿಲಾಸಿನೀ–**ತತ್ರೈಮ ರಾಜ್ಞಃ ಪ್ರೇಮ ಭಾವಯೇತ್ ಸ್ವಸ್ಮಿನ್ ಭಾವಯೇತ್ ॥೩೩೭-೩೮॥

**ವಿವರಣೆ–** ಮೇಯಲು ಹೋದ ಹಸುಗಳು ಮರಳಿ ಬಂದು ಕೊಟ್ಟಿಗೆಯಲ್ಲಿ ಒಂದಾದವು ಎಂಬ ಹೇಳಿಕೆಯ ಹಸುಗಳಿಗೆ ಅಭೇದವನ್ನು ಹೇಳುವುದಿಲ್ಲವಷ್ಟೇ!

ಹಾಗೆಯೇ ಪರೇವ್ಯಯೇ ಸರ್ವೇ ಏಕೀಭವಂತಿ (ಆಥರ್ವಣ ಆರನೆಯ ಖಂಡ ಏಳನೆಯ ಶ್ಲೋಕ) ಮುಂತಾದ ಹೇಳಿಕೆಗಳಿಗೂ ಅತ್ಯಂತಾಭೇದವನ್ನು ಹೇಳದೇ (ಏಕತ್ರ ವರ್ತಮಾನತ್ವವನ್ನೇ - ಒಂದೇ ಕಡೆ ಇರುವಿಕೆಯನ್ನೇ) ಅರ್ಥವನ್ನಾಗಿ ಹೇಳಬೇಕು.

**ದ್ವೇಷಾಂಧಾಯ ವನೇ ವಾಸೋ ಯೋಷಾತ್ಯಾಗೋಽಪಿ ರೋಚತೇ ।**
**ನ ಚೇದ್ ದ್ವಿತೀಯಶೂನ್ಯತ್ವಮೋಕ್ಷಾಯ ಯತತೇ ಕಥಮ್ ॥ ೩೩೯ ॥**

**ಅರ್ಥ–** ದ್ವೇಷಾಂಧಾಯ = ಹೆಂಡತಿ ಮಕ್ಕಳು ಇತ್ಯಾದಿಗಳ ಬಗ್ಗೆ ದ್ವೇಷದಿಂದ ವಿವೇಕ-ಶೂನ್ಯನಾದ, ಪುರುಷಾಯ = ವ್ಯಕ್ತಿಗೆ, ವನೇ = ಕಾಡಿನಲ್ಲಿ, ವಾಸಃ = ವಾಸಿಸುವಿಕೆಯು, ಅಪಿ = ಮತ್ತು, ಯೋಷಾತ್ಯಾಗಃ = ಹೆಂಡತಿಮುಂತಾದ ಕುಟುಂಬವನ್ನು ಬಿಟ್ಟಿರುವಿಕೆಯು, ರೋಚತೇ= ಇಷ್ಟವಾಗುತ್ತದೆ. ಅಯಂ ಮಾಯೀ= ಈ ಮಾಯಾವಾದಿಯು, ದ್ವೇಷಾಂಧಃ ನ ಚೇತ್= ಭಗವಂತನ ಬಗ್ಗೆ ದ್ವೇಷವುಳ್ಳವನಾಗಿರದಿದ್ದರೆ, ಶ್ರುತಿಪುರಾಣಗಳ ವಾಸ್ತವ ತಾತ್ಪರ್ಯದ ಬಗ್ಗೆ ಅಸಹನೆಯುಳ್ಳವನು ಆಗಿರದಿದ್ದರೆ, ದ್ವಿತೀಯಶೂನ್ಯತ್ವಮೋಕ್ಷಾಯ= ಅದ್ವಿತೀಯತ್ವವೆಂಬ ಮೋಕ್ಷಕ್ಕಾಗಿ, ಕಥಂ = ಹೇಗೆ, ಯತತೇ = ಪ್ರಯತ್ನಿಸುತ್ತಾನೆ?

**ಅನುವಾದ–** ಪ್ರಶ್ನೆ - ಮಾಯಾವಾದಿಗಳು ವರ್ಣಿಸುವ ಮುಕ್ತಿಯು ಶ್ರುತಿಗಳಿಗೂ, ಅನುಭವಕ್ಕೂ ವಿರುದ್ಧವಾಗಿರುವುದಾದರೆ ಇಂತಹ ಅದ್ವಿತೀಯತ್ವಸ್ಥಿತಿಯನ್ನು ಅವರು ಮುಕ್ತಿಯೆಂದು ಏಕೆ ಸ್ವೀಕರಿಸುತ್ತಾರೆ?

ಉತ್ತರ - ಭಗವಂತನ ಮಹಿಮಾಪೂರ್ಣ ವ್ಯಕ್ತಿತ್ವದ ಬಗ್ಗೆ ತಮಗಿರುವ ದ್ವೇಷದಿಂದ ಅಥವಾ ಶ್ರುತಿ, ಪುರಾಣಗಳ ವಾಸ್ತವತಾತ್ಪರ್ಯದ ಬಗ್ಗೆ ಗೌರವವಿಲ್ಲದಿ-ರುವುದರಿಂದಲೇ ಇಂತಹ ಅದ್ವಿತೀಯತ್ವಸ್ಥಿತಿಯನ್ನು ಮೋಕ್ಷವೆಂದು ಪ್ರತಿಪಾದಿಸುತ್ತಾರೆ ಮತ್ತು ಆ ಮೋಕ್ಷಕ್ಕಾಗಿ ಸಾಧನಾನುಷ್ಠಾನಪೂರ್ವಕವಾಗಿ ಪ್ರಯತ್ನಿಸುತ್ತಾರೆ. ಇವರ ಈ ಪ್ರವೃತ್ತಿಯು ಹೆಂಡತಿಮಕ್ಕಳನ್ನು ದ್ವೇಷಿಸಿ ಅವರನ್ನು ತ್ಯಜಿಸಿ ಕಾಡಿನಲ್ಲಿ ಯಾವುದೇ ಸುಖವಿಲ್ಲದೇ ಒಂಟಿಯಾಗಿ ವಾಸಮಾಡುವ ಮೂರ್ಖನಾದ ವ್ಯಕ್ತಿಯೊಬ್ಬನ ವರ್ತನೆಯನ್ನು ಹೋಲುತ್ತದೆ.

**ಭಾವವಿಲಾಸಿನೀ–** ನನ್ವೇವಮನುಭವಶ್ರುತಿವಿರುದ್ಧ ಅದ್ವಿತೀಯತಾ ಕಥಂ ತರ್ಹಿ ಮಾಯಾ-ವಾದಿನಾ ಮುಕ್ತಿತಯೋಕ್ತೇತಿ ಚೇತ್ ಸತ್ಯಮ್ । ಭಗವತಿ ಪ್ರದ್ವೇಷಾದ್ವಾ ಶ್ರುತ್ಯರ್ಥತಸ್ಕರತ್ವಾ-ದ್ವೇತ್ಯಾಹ – **ದ್ವೇಷೇತಿ** ॥ ದ್ವೇಷಾಂಧಾಯ ಸ್ವಕಲತ್ರಾದೌ ದ್ವೇಷೇಣಾಂಧಾಯ ಪುರುಷಾಯ । ಸಹಿ ಸರ್ವಂ ತ್ಯಕ್ತ್ವಾ ವನೇ ಗುಹಾಯಾಂ ಸ್ಥಾತುಮಿಚ್ಛತಿ ತಥಾ ಸಕಲ ಜಗತ್ಕರ್ತೃರ್ಭಗವತೋ ಮಹಿಮಾನಮುಸಹಮಾನ ಏವೇದೃಶೀಂ ಮೋಕ್ಷದಶಾಮಾಚಷ್ಟೇತಿ ಭಾವಃ ॥ ೩೩೯ ॥

**ಚೋರಸ್ಯಾಭಾಷಣಂ ಲಿಂಗಮಸ್ಪರ್ಶನಮದರ್ಶನಮ್ ।**
**ಕಥಂ ಮೋಕ್ಷಮಶಿಕ್ಷಂತ ನ ಚೇದೇತಾದೃಶೀಂ ದಶಾಮ್ ॥ ೩೪೦ ॥**

**ಅರ್ಥ–** ಚೋರಸ್ಯ= ಕಳ್ಳನಿಗೆ, ಅಭಾಷಣಂ= ಯಾರೊಡನೆಯೂ ಮಾತನಾಡದಿರುವಿಕೆಯು, ಅಸ್ಪರ್ಶನಂ = ಯಾರನ್ನೂ ಮುಟ್ಟದಿರುವಿಕೆಯು, ಅದರ್ಶನಂ = ಯಾರನ್ನೂ ನೋಡದಿರುವಿಕೆಯು, ಲಿಂಗಂ = ಲಕ್ಷಣಗಳಾಗಿವೆ. ಮಾಯಿನಃ = ಮಾಯಾವಾದಿಗಳು, ಚೋರಾಃ = ವೇದಾರ್ಥವನ್ನೂ ಕದ್ದವರು, ನ ಚೇತ್ = ಅಲ್ಲದಿದ್ದರೆ, ತೇ =ಅವರು, ಏತಾದೃಶೀಂ = ಇಂತಹ, ದಶಾಂ = ಅದ್ವಿತೀಯತ್ವದಶಾವನ್ನು ಮೋಕ್ಷಂ ಇತಿ = ಮೋಕ್ಷವೆಂಬುದಾಗಿ, ಕಥಂ = ಹೇಗೆ, ಆಶಿಕ್ಷಂತ = ಹೇಳಿದರು?

**ಅನುವಾದ–** ಕಳ್ಳನು ಯಾರೊಡನೆಯೂ ಮಾತನಾಡದೆ, ಯಾರ ಸಮೀಪಕ್ಕೂ ಹೋಗದೆ, ಯಾರನ್ನೂ ನೋಡದೆ ಕತ್ತಲಪ್ರದೇಶದಲ್ಲಿದ್ದು ತನ್ನ ಕಾರ್ಯವನ್ನೂ ಸಾಧಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಅಂತೆಯೇ ಜಗತ್ಸತ್ಯತ್ವವನ್ನು, ಭೇದವನ್ನು ಪ್ರತಿಪಾದಿಸುವ ಶ್ರುತಿಗಳಿಗೆ ಅಪಾರ್ಥವನ್ನು ಮಾಡಿ ಕಳ್ಳರೆಂದೆನಿಸಿಕೊಂಡ ಈ ಮಾಯಾವಾದಿಗಳೂ ಯಾವುದೇ ತರಹದ ನೋಟ, ಮಾತು, ಮಿಲನಗಳಿಲ್ಲ ಇಂತಹ ಶೂನ್ಯಸ್ಥಿತಿಯನ್ನು ಮೋಕ್ಷವೆಂದು ವರ್ಣಿಸುತ್ತಾರೆ.

**ಭಾವವಿಲಾಸಿನೀ–** ಏತಾದೃಶೀಂ ಭಾಷಣಸ್ಪರ್ಶನದರ್ಶನಾದಿವ್ಯಾಪಾರಶೂನ್ಯಾಂ ದಶಾಮ್ । ದ್ವಿತೀಯ ವಸ್ತು ಶೂನ್ಯತಾಸ್ಥಿತಿ ಚೋರೋಽಪಿ ಹಿ ಯಸ್ಯ ಕಸ್ಯಾಪಿ ಪುರುಷಸ್ಯ ದರ್ಶನಸ್ಪರ್ಶನಾದಿಕಂ ಯಥಾ ನ ಭವತಿ ತಥಾ ಕ್ವಚಿತ್ತಮಸಿ ನಿಲೀನಃ ಸ್ಥಾತುಮಿಚ್ಛತಿ । ಏವಂ ವಿಶ್ವಂ ಸತ್ಯಂ ದ್ವಾಸುಪರ್ಣೇತ್ಯಾದಿಶ್ರುತ್ಯರ್ಥತಸ್ಕರತ್ವಾತ್ ಕೇವಲಂ ತನ್ನಿರ್ವಾಹಾಯೈವೇದೃಶಾಂ ಮೋಕ್ಷದಶಾಮಾಚಷ್ಟೇತಿ ಭಾವಃ ॥ ೩೪೦ ॥

ಪೂರ್ವೋತ್ತರವಿರುದ್ಧೋಕ್ತಿಂ ಮತ್ತೋ ವಕ್ತಿ ನ ಜಾತ್ವಪಿ ।
ಕಿಮೇಕಾಕೀ ನ ರಮತೇ ಇತ್ಯಾದ್ಯುಕ್ತೀಃ ಸ ನಾತ್ಯಗಾತ್ ॥ ೩೪೧ ॥

**ಅರ್ಥ–** ಮತ್ತಃ ಅಪಿ = ಹುಚ್ಚನೂ ಕೂಡ, ಪೂರ್ವೋತ್ತರವಿರುದ್ಧೋಕ್ತಿಂ = ಹಿಂದು ಮುಂದಿನ ಮಾತುಗಳಿಗೆ ವಿರುದ್ಧವಾದ ಮಾತನ್ನು, ಜಾತು ಅಪಿ = ಒಮ್ಮೆಯೂ ಕೂಡ, ನ ವಕ್ತಿ = ಆಡಲಾರನು. ಸಃ ಅದ್ವೈತೀ = ಆ ಅದ್ವೈತಿಯು, ಏಕಾಕೀ ನ ರಮತೇ ಇತ್ಯಾದ್ಯುಕ್ತೀಃ = ತಸ್ಮಾದೇಕಾಕೀ ನ ರಮತೇ ಮೊದಲಾದ ಶ್ರುತಿವಾಕ್ಯಗಳನ್ನು ನ ಅತ್ಯಗಾತ್ ಕಿಂ? = ಮೀರುವುದಿಲ್ಲವೇನು?

**ಅನುವಾದ–** ಸಾಮಾನ್ಯಮಟ್ಟದ ಹುಚ್ಚುತನವಿದ್ದವರು ಯಾರೂ ತಾವೇ ಹಿಂದೆ ಆಡಿದ ಮಾತಿಗೆ ವಿರುದ್ಧವಾದ ಮಾತನ್ನು ಆಡುವುದಿಲ್ಲ. ಆದರೆ ಈ ಅದ್ವೈತಿಯು ಮುಕ್ತನಾಗುವುದೆಂದರೆ ಅದ್ವಿತೀಯನಾಗಿರುವುದು ಎಂದು ಅಭಿಪ್ರಾಯ ಪಡುತ್ತಿದ್ದಾನೆ. ಅವನ ಅಭಿಪ್ರಾಯವು ತಸ್ಮಾತ್ ಏಕಾಕೀ ನ ರಮತೇ ಎಂಬ ಉಪನಿಷತ್‌ವಾಕ್ಯಕ್ಕೆ ವಿರುದ್ಧವಾಗಿದೆ. ಇನ್ನೊಬ್ಬರೊಡನೆ ಸೇರಿ ಸುಖವನ್ನು

**ಅನುಭವಿಸುವುದೇ ಮೋಕ್ಷವೆನ್ನುವುದು ಶ್ರುತಿಪುರಾಣವಾಕ್ಯಗಳ ಆಶಯವಾಗಿದೆ. ಹಾಗಾಗಿ ಮೋಕ್ಷವು ಅದ್ವಿತೀಯವಾಗಿದೆ ಎನ್ನುವ ಮಾತು ಪೂರ್ವಾಪರ ವಿರುದ್ಧವಾದ್ದರಿಂದ ಅದನ್ನು ಆಡುತ್ತಿರುವ ಮಾಯಾವಾದಿಯು ದೊಡ್ಡ ಹುಚ್ಚನಾಗಿದ್ದಾನೆ ಎಂದು ಅರ್ಥ.**

**ಭಾವವಿಲಾಸಿನೀ–** ಮತ್ತೋಽಪಿ ಜಾತ್ವಪಿ ನ ವಕ್ತೀತಿ ಸಂಬಂಧಃ । ಅದ್ವಿತೀಯತ್ವಂ ಮೋಕ್ಷ ಇತಿ ವದನ್ವಾದೀ ಮತ್ತಾದಪ್ಯಧಿಕೋಭ್ರಾಂತ ಇತಿ ಭಾವಃ । ಕುತ ಇತ್ಯತ ಆಹ – ಕಿಮಿತಿ ॥ ಇತ್ಯಾದ್ಯುಕ್ತೇರಿತ್ಯಾದಿ ಶ್ರುತೀಃ । ಸ ಮುಕ್ತಾವದ್ವಿತೀಯತ್ವಾವಾದೀ । "ತಸ್ಮಾದೇಕಾಕೀ ನ ರಮತ" ಇತ್ಯಾದಿ ಸ್ಪಷ್ಟಶ್ರುತಿ ವಿರುದ್ಧಮೇಕಾಕಿತ್ವಮಂಗೀಕುರ್ವನ್ ಪೂರ್ವೋತ್ತರವಿರುದ್ಧ-ಭಾಷಿತ್ವಾನ್ಮಹೋನ್ಮತ್ತ ಇತಿ ಭಾವಃ ॥ ೩೪೧ ॥

**ವಿವರಣೆ–** ಬೃಹದಾರಣ್ಯಕೋಪನಿಷತ್‌ನ ಪ್ರಥಮಾಧ್ಯಾಯದಲ್ಲಿ 'ಸವೈ ನೈವ ರೇಮೇ. ತಸ್ಮಾದೇಕಾಕೀ ನ ರಮತೇ, ಸ ದ್ವಿತೀಯಮೈಚ್ಛತ್' ಎಂಬ ವಾಕ್ಯದಲ್ಲಿ ಆದಿಸೃಷ್ಟಿಯಲ್ಲಿ ಬ್ರಹ್ಮನು ಒಬ್ಬನೇ ಇದ್ದುದರಿಂದ ಸಂತೋಷಪಡಲಿಲ್ಲ, ಆದ್ದರಿಂದ ಈಗಲೂ ಏಕಾಕಿಯಾದವನು ಯಾರೂ ಸಂತೋಷಪಡುವುದಿಲ್ಲ, ಆದ್ದರಿಂದ ಆ ಬ್ರಹ್ಮನು ಒಬ್ಬ ಸಂಗಾತಿಯನ್ನು ಬಯಸಿದನು ಎಂದು ಹೇಳಲಾಗಿದೆ.

ಏಕಾಕಿಯಾದವನು ಸಂತೋಷಪಡುವುದಿಲ್ಲವೆಂಬ ಸಂಗತಿಯು ಸಂಸಾರ, ಮೋಕ್ಷಗಳೆರಡಕ್ಕೂ ಸಂಬಂಧಿಸಿದ್ದಾಗಿದೆ. ಮೋಕ್ಷದಲ್ಲಿಯೂ ಕೂಡ ಸ್ವರೂಪಸುಖವನ್ನು ಅನುಭವಿಸಲು ಜೀವನಿಗೆ ಪರಮಾತ್ಮನ ಸಾನ್ನಿಧ್ಯ, ಸ್ತ್ರೀ, ಬಂಧು, ಮಿತ್ರರು, ರಥ, ಗಜ, ಅಶ್ವ ಇತ್ಯಾದಿಗಳ ಸಂಬಂಧವು ಸಹಾಯಕವಾಗುತ್ತದೆ. ಹಾಗಾಗಿ ಮೋಕ್ಷವು ಅದ್ವಿತೀಯವಾಗಿದೆ ಎನ್ನುವ ಮಾತು ಪೂರ್ವಾಪರವಿರುದ್ಧವಾಗಿದೆ. ಮೋಕ್ಷವನ್ನು ಪಡೆಯುವುದೆಂದರೆ ಸುಖಸಾಧನಗಳಾದ ವ್ಯಕ್ತಿ ಪದಾರ್ಥಗಳ ಸಂಬಂಧವನ್ನು ಪಡೆದು ಸುಖವನ್ನು ಅನುಭವಿಸುವುವದು ಎಂದರ್ಥ. ಆದ್ದರಿಂದ ಮೋಕ್ಷವೆಂದು ಹೇಳಿ ಅದು ಅದ್ವಿತೀಯ - ಸುಖಸಾಧನ ಮತ್ತು ಸುಖಗಳಿಂದ ರಹಿತವಾಗಿದೆ ಎಂದು ಹೇಳುವುದು ಪರಸ್ಪರ ವಿರುದ್ಧವಾಗಿದೆ. ಆ ಮಾತನ್ನಾಡುವ ಅದ್ವೈತಿಯು ದೊಡ್ಡ ಹುಚ್ಚನಾಗಿದ್ದಾನೆ ಎಂದು ತಾತ್ಪರ್ಯ.

**ಜ್ಯೋತಿಃ ಪ್ರಾಪ್ಯ ಸ ಪರ್ಯೇತಿ ಸ್ತ್ರೀಜ್ಞಾತ್ಯಜ್ಞಾತಿಸಂಯುತಃ ।**
**ಸಹಾಶ್ನುತೇ ಸರ್ವಕಾಮಾನಿತ್ಯಾದ್ಯಾಃ ಮೌಕ್ತಿಕೋಕ್ತಯಃ ॥ ೩೪೨ ॥**

**ಅರ್ಥ–** ಸಃ = ಆ ಮುಕ್ತನು, ಜ್ಯೋತಿಃ = ಪರಂ ಜ್ಯೋತಿಃಸ್ವರೂಪನಾದ ಪರಮಾತ್ಮನನ್ನು ಪ್ರಾಪ್ಯ = ಹೊಂದಿ, ಸ್ತ್ರೀ = ಸ್ತ್ರೀಯರು, ಜ್ಞಾತಿ = ಬಂಧುಗಳು, ಅಜ್ಞಾತಿ = ಬಂಧುಗಳಲ್ಲದ ಮಿತ್ರಾದಿಗಳು ಇವರಿಂದ, ಸಂಯುತಃ = ಸಹಿತನಾಗಿ, ಪರ್ಯೇತಿ = ವಿಹರಿಸುತ್ತಾನೆ. ಸಹ =

ಪರಬ್ರಹ್ಮನ ಸಂಗಡ, ಸರ್ವಕಾಮಾನ್ = ಎಲ್ಲತರಹದ ಸುಖಗಳನ್ನು, ಅಶ್ನುತೇ = ಅನುಭವಿಸುತ್ತಾನೆ. ಇತ್ಯಾದ್ಯಾಃ = ಇವೇ ಮೊದಲಾದ, ಮೌಕ್ತಿಕೋಕ್ತಯಃ = ಮುಕ್ತಿಯಲ್ಲಿ ಸದ್ವಿತೀಯತ್ವವನ್ನು ಪ್ರತಿಪಾದಿಸುವ ಶ್ರುತಿಪುರಾಣವಾಕ್ಯಗಳು, ಸಂತಿ = ಇವೆ.

**ಅನುವಾದ–** ಪರಮಪ್ರಕಾಶಸ್ವರೂಪನಾದ ಪರಮಾತ್ಮನನ್ನು ಹೊಂದಿದ ಮುಕ್ತನು ಸ್ತ್ರೀಯರು, ಬಂಧುಗಳು, ಮಿತ್ರರು ಇತ್ಯಾದಿಗಳ ಸಂಗಡ ವಿಹರಿಸುತ್ತಾನೆ, ಸರ್ವಜ್ಞನಾದ ಪರಬ್ರಹ್ಮನ ಸಂಗಡವೇ ಎಲ್ಲ ಬಗೆಯ ಸುಖಗಳನ್ನು ಅನುಭವಿಸುತ್ತಾನೆ ಎಂಬ ಅರ್ಥಗಳನ್ನು ಪ್ರತಿಪಾದಿಸುವ ಶ್ರುತಿ, ಪುರಾಣ, ವಾಕ್ಯಗಳು ಮುಕ್ತಿಯಲ್ಲಿ ಪರಸ್ಪರ ಭಿನ್ನರಾದಅನೇಕಾನೇಕ ಮುಕ್ತರೂ ಅವರೆಲ್ಲರಿಂದ ಭಿನ್ನನಾದ ಪರಮಾತ್ಮನೂ ಹಾಗೂ ಎಲ್ಲ ರೀತಿಯ ಸುಖಸಂತೋಷಗಳು ಇವೆಯೆಂದು ವರ್ಣಿಸುತ್ತವೆ. ಅದ್ವಿತೀಯ, ನಿರ್ಗುಣ ಮುಕ್ತಿಯನ್ನು ಪ್ರತಿಪಾದಿಸುವ ಅದ್ವೈತಿಗೆ ಈ ವಾಕ್ಯಗಳ ವಿರೋಧವು ಗಮನಕ್ಕೆ ಬರುವುದಿಲ್ಲವೇ?

ಸ ತತ್ರ ಪರ್ಯೇತಿ ಜಕ್ಷನ್ ಕ್ರೀಡನ್ ರಮಮಾಣಃ ಸ್ತ್ರೀಭಿರ್ವಾಯಾನೈರ್ವಾ ಜ್ಞಾತಿಭಿರ್ವಾ ಅಜ್ಞಾತಿಭಿರ್ವಾ - ಛಾಂದೋಗ್ಯೋಪನಿಷತ್

(ತನ್ನ ಜೊತೆಯಲ್ಲಿಯೇ ಮುಕ್ತರಾದವರು ಜ್ಞಾತಿಗಳು. ಬೇರೆ ಕಲ್ಪದಲ್ಲಿ ಮುಕ್ತರಾದವರು ಅಜ್ಞಾತಿಗಳು).

ಯೋ ವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ ಸೋಽಶ್ನುತೇ ಸರ್ವಾನ್ ಕಾಮಾನ್ ಸಹಬ್ರಹ್ಮಣಾ ವಿಪಶ್ಚಿತೇತಿ (ತೈತ್ತರೀಯೋಪನಿಷತ್ ಬ್ರಹ್ಮಾನಂದವಲ್ಲೀ ಎರಡನೆಯ ಮಂತ್ರ.)

**ಭಾವವಿಲಾಸಿನೀ–** ಆದಿಪದೋಕ್ತಾಃ ಶ್ರುತೀಃ ಸ್ಮಾರಯತಿ ॥ ಜ್ಯೋತಿರಿತಿ ॥ ೩೪೨ ॥

ರಾಜನ್ನಿಗಡಬದ್ಧಸ್ಯ ತನ್ಮುಕ್ತಸ್ಯ ಚ ರಾಡ್ ಭವಾನ್ ।
ಯಥಾ ಬದ್ಧಗತಿಃ ಕೃಷ್ಣೋ ಮುಕ್ತಾನಾಂ ಪರಮಾ ಗತಿಃ ॥ ೩೪೩ ॥

**ಅರ್ಥ–** ಯಥಾ = ಹೇಗೆ, ಕೃಷ್ಣಃ = ಭಗವಾನ್ ಶ್ರೀಕೃಷ್ಣನು, ಬದ್ಧಗತಿಃ = ಸಂಸಾರದಲ್ಲಿ ಬಂಧಿತರಾದವರಿಗೆ ರಕ್ಷಕನು, ಮುಕ್ತಾನಾಂ ಚ = ಸಂಸಾರದಿಂದ ಮುಕ್ತರಾದವರಿಗೂ ಕೂಡ, ಗತಿಃ = ಆಶ್ರಯನೋ, ತಥಾ = ಹಾಗೆ, ರಾಜನ್ = ರಾಜನೇ, ಭವಾನ್ = ನೀನು, ನಿಗಡಬದ್ಧಸ್ಯ = ಸಂಕೋಲೆಯಿಂದ ಬದ್ಧನಾದ ಅಪರಾಧಿಗೆ, ತನ್ಮುಕ್ತಸ್ಯ ಚ = ಶಿಕ್ಷೆಯನ್ನು ಪೂರ್ಣಗೊಳಿಸಿ ಸಂಕೋಲೆಯಿಂದ ಬಿಡುಗಡೆ ಹೊಂದಿದವನಿಗೂ, ರಾಟ್ = ಒಡೆಯನು ಆಗಿರುವಿ.

**ಅನುವಾದ–** ಭಗವಂತನು ತನ್ನ ಐಕ್ಯವನ್ನು ಮುಕ್ತರಿಗೆ ಕೊಡುತ್ತಾನೆಂಬುದು ಲೋಕದ ನೀತಿಗೆ ವಿರುದ್ಧವೂ ಆಗಿದೆ. ಅಪರಾಧಮಾಡಿ ಕೈ ಕೋಳತೊಡಿಸಿಕೊಂಡವನಿಗೂ ಮತ್ತು ಶಿಕ್ಷೆಪೂರ್ಣಗೊಳಿಸಿ ಬಂಧಮುಕ್ತನಾದವನಿಗೂ ರಾಜನೇ ಒಡಯನು. ಹಾಗೆಯೇ ಸಂಸಾರದಲ್ಲಿ ಸಿಲುಕಿಕೊಂಡವನಿಗೂ, ಸಂಸಾರದಿಂದ ಬಿಡುಗಡೆಹೊಂದಿದವನಿಗೂ ಶ್ರೀಕಷ್ಣನೇ ಆಶ್ರಯನು.

**ವಿವರಣೆ–** ಇಲ್ಲಿ ರಾಜ ಮತ್ತು ಅಪರಾಧಿಗಳ ನಡುವಣ ಸಂಬಂಧವು ದೃಷ್ಟಾಂತವಾಗಿದೆ. ಹಾಗೂ ಈಶ್ವರ ಮತ್ತು ಜೀವರ ನಡುವಣ ಸಂಬಂಧವು ದಾರ್ಷ್ಟಾಂತಿಕವಾಗಿದೆ. ಆದರೆ ಜೀವೇಶ್ವರರ ನಡುವಣ ಸಂಬಂಧವಾದ ಭೇದವು ಶ್ರುತಿ, ಪುರಾಣಗಳಿಂದ ಸ್ಪಷ್ಟವಾಗಿ ಸಿದ್ಧವಾಗಿರುವುದರಿಂದ ದಾರ್ಷ್ಟಾಂತಿಕವಾದ ಅದನ್ನೇ ದೃಷ್ಟಾಂತವನ್ನಾಗಿ ಬಳಸಿಕೊಂಡು ರಾಜ ಅಪರಾಧಿಗಳ ಸಂಬಂಧವನ್ನು ದಾರ್ಷ್ಟಾಂತಿಕವನ್ನಾಗಿ ವರ್ಣಿಸಲಾಗಿದೆ.

**ಸ್ವಾಧೀನಂ ಸ್ವಸಮಂ ಕರ್ತುಂ ನೋತ್ಸಹಸ್ವ ಕದಾಚನ ।**
**ಸಾರೂಪ್ಯದೋಽಪಿ ಕಿಂ ಶ್ರೀಶೋ ಧತ್ತೇ ಶ್ರೀವತ್ಸಕೌಸ್ತುಭೌ ॥ ೩೪೪ ॥**

**ಅರ್ಥ–** ಸಾರೂಪ್ಯದಃ ಅಪಿ = ಸಾರೂಪ್ಯಮೋಕ್ಷವನ್ನು ಕೊಡುವವನಾದರೂ, ಶ್ರೀಶಃ = ಲಕ್ಷ್ಮೀರಮಣನು, ಶ್ರೀವತ್ಸಕೌಸ್ತುಭೌ = ತನ್ನ ವಿಶಿಷ್ಟಲಕ್ಷಣಗಳಾದ ಶ್ರೀವತ್ಸಚಿಹ್ನೆಯನ್ನು ಮತ್ತು ಕೌಸ್ತುಭಮಣಿಯನ್ನು, ಮುಕ್ತೇಭ್ಯಃ = ಸಾರೂಪ್ಯಮುಕ್ತಿಯನ್ನು ಪಡೆದ ಜೀವರಿಗೆ, ಧತ್ತೇ ಕಿಂ = ಕೊಡುವನೇನು? ತಥಾ = ಹಾಗೆಯೇ, ರಾಜನ್ = ರಾಜನೇ, ಭವಾನ್ = ನೀನು, ಅಪಿ = ಕೂಡ, ಸ್ವಾಧೀನಂ = ನಿನ್ನ ಅಧೀನನಾದ ಪ್ರಜೆಯೋರ್ವನನ್ನು, ಸ್ವಸಮಂ = ನಿನಗೆ ಸಮಾನನನ್ನಾಗಿ, ಕರ್ತುಂ = ಮಾಡಲು, ಕದಾಚನ = ಎಂದೂ ಕೂಡ, ನ ಉತ್ಸಹಸ್ವ = ಇಚ್ಛಿಸಬೇಡ.

**ಅನುವಾದ–** ರಾಜನು ತನಗೆ ಅಧೀನವಾದ ಪ್ರಜಾವರ್ಗವನ್ನು ತನಗೆ ಸಮಾನವಾಗಿ ಮಾಡಿಕೊಳ್ಳಲು ಎಂದೂ ಬಯಸುವುದಿಲ್ಲ. ಅಂತೆಯೇ ಲಕ್ಷ್ಮೀರಮಣನಾದ ಭಗವಂತನು ತನ್ನ ಕೆಲವು ವಿಶಿಷ್ಟಭಕ್ತರಿಗೆ ಶಂಖಚಕ್ರಾದಿಧಾರಿತ್ವರೂಪವಾದ ಸಾರೂಪ್ಯಮೋಕ್ಷವನ್ನು ಕೊಟ್ಟರೂ ಕೂಡ ತನ್ನ ವಿಶಿಷ್ಟಲಕ್ಷಣಗಳಾದ ಶ್ರೀವತ್ಸಚಿಹ್ನೆ ಮತ್ತು ಕೌಸ್ತುಭಮಣಿಯನ್ನು ಎಂದಿಗೂ ಕೊಡುವುದಿಲ್ಲ. ಹಾಗಾಗಿ ಸಾರೂಪ್ಯಮುಕ್ತರಿಗೂ ಈಶ್ವರನಿಗೂ ಅತ್ಯಂತ ಭೇದವೇ ಇದೆಯೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ನೀತಿವಿರುದ್ಧತ್ವಾಚ್ಚ ಭಗವನ್ ಸ್ವೈನೈಕ್ಯಂ ಮುಕ್ತಾನಾಂ ನ ದಿಶತಿ । ತತ ಏವ ಭಕ್ತಾಸ್ತೇ ಮುಕ್ತಾಃ ನ ತದಾಕಾಕ್ಷಂತೇ ಚೇತ್ಯಾಹ–ರಾಜನ್ನಿತ್ಯಾದಿನಾ ॥ ದೃಷ್ಟಾಂತೇ ಪ್ರತಿಜ್ಞಾಕ್ಯಮೇವ

ಪ್ರಮಾಣಮಪಿ ಭೂಯಾದಿತಿ ಭಾವೇನ "ಮುಕ್ತಾನಾಂ ಪರಮಗತಿರಿ"ತಿ ಸಹಸ್ರನಾಮಸ್ಥಪುಣ್ಯ-ನಾಮ್ನೈವ ಭಗವನುದ್ದಿಷ್ಟಃ ॥ ೩೪೩, ೩೪೪ ॥

**ವಿವರಣೆ–** ಈ ಶ್ಲೋಕದಲ್ಲಿಯೂ ಹಿಂದಿನ ಶ್ಲೋಕದ ಮಾದರಿಯಲ್ಲಿಯೇ ದಾರ್ಷ್ಟಾಂತಿಕವಾದ ಮುಕ್ತ-ಈಶ್ವರ ಸಂಬಂಧವಾದ ಭೇದವನ್ನೇ ದೃಷ್ಟಾಂತವನ್ನಾಗಿ-ಸಿಕೊಳ್ಳಲಾಗಿದೆ.

**ಸದಾಸೇವ್ಯಪಿ ನಾಕಾಂಕ್ಷೇದಂಗನಾಲಿಂಗನಂ ಪ್ರಭೋಃ ।**
**ಇಚ್ಛಂತ್ಯಚ್ಛಹೃದೋ ಮುಕ್ತಾವಪಿ ನೈಕ್ಯಂ ತದೀಶಿತುಃ ॥ ೩೪೫ ॥**

**ಅರ್ಥ–** ಸದಾಸೇವೀ ಅಪಿ = ತನ್ನ ಒಡೆಯನನ್ನು ಯಾವಾಗಲೂ ಸೇವಿಸುವ ಭೃತ್ಯನೂ ಕೂಡ, ಪ್ರಭೋಃ = (ಅ) ಒಡೆಯನ, ಅಂಗನಾಲಿಂಗನಂ = ಮಡದಿಯ ಆಲಿಂಗನವನ್ನು, ನ ಆಕಾಂಕ್ಷೇತ್ = ಬಯಸುವುದಿಲ್ಲ. ತತ್ = ಭೃತ್ಯರು ಒಡೆಯನ ಪತ್ನೀಸಂಗವನ್ನು ಬಯಸುವುದು, ಗುರುತಲ್ಪಗಮನ ಎನಿಸಿಕೊಳ್ಳುವುದರಿಂದ, ಅಚ್ಛಹೃದಃ = ನಿರ್ಮಲಹೃದಯದ ಭಕ್ತರು, ಮುಕ್ತೌ ಅಪಿ = ಮುಕ್ತಿಯಲ್ಲಿಯೂ ಕೂಡ, ಈಶಿತುಃ = ಸರ್ವೇಶ್ವರನಾದ ನಾರಾಯಣನ, ಐಕ್ಯಂ = ಅಭೇದವನ್ನು, ನ ಇಚ್ಛಂತಿ = ಬಯಸುವುದಿಲ್ಲ.

**ಅನುವಾದ–** ಒಡೆಯನ ಸಮೀಪದಲ್ಲಿಯೇ ಯಾವಾಗಲೂ ಇದ್ದು ಆತನನ್ನು ಸೇವಿಸುವ ಊಳಿಗದವನೂ ಕೂಡ ಆ ಒಡೆಯನ ಮಡದಿಯ ಸಂಗಡ ಕೂಟವನ್ನು ಬಯಸಲಾರನು. ಹೀಗೆ ಕಿರಿಯರು ಹಿರಿಯರ ಸತಿಯರನ್ನು ಬಯಸುವುದು ಗುರುತಲ್ಪಗಮನ ಎಂಬ ದೋಷವೆನಿಸಿಕೊಳ್ಳುವುದರಿಂದ, ಸ್ವಚ್ಛವಾದ ಮನಸ್ಸುಳ್ಳ ಭಕ್ತರು ಸಾಯುಜ್ಯಾದಿಮುಕ್ತಿಯನ್ನು ಪಡೆದರೂ ಕೂಡ ಜಗದೊಡೆಯನಾದ ಹರಿಯ ಅಭೇದವನ್ನು ಪಡೆಯಲು ಒಡಂಬಡಲಾರರು. ಏಕೆಂದರೆ ಹರಿಯ ಅತ್ಯಂತಾಭೇದವನ್ನು ಬಯಸುವುದೆಂದರೆ ಆತನ ವಿಶಿಷ್ಟಲಕ್ಷಣವಾದ ಲಕ್ಷ್ಮೀರಮಣತ್ವವನ್ನೂ ಬಯಸಿದಂತೆಯೇ ಆಗುತ್ತದೆ.

**ಭಾವವಿಲಾಸಿನೀ–** ತತ್ ತಸ್ಮಾತ್ ಭೃತ್ಯಾನಾಂ ಭರ್ತುರಂಗನಾಲಿಂಗನಸ್ಯ ಗುರುತಲ್ಪಗತ್ವರೂಪ ಮಹಾಪಾಪತ್ವಾತ್ ॥ ೩೪೫ ॥

**ಹೃಷ್ಟೋಽಪಿ ರಾಜಾ ನ ಸ್ವೀಯಂ ಜಾಯಾಂ ದಿಶತಿ ಕಸ್ಯಚಿತ್ ।**
**ಪ್ರಪನ್ನಾಯ ಪ್ರಸನ್ನೋಽಪಿ ಸ್ವಾತ್ಮೈಕ್ಯಂ ನ ದಿಶೇದ್ಧರಿಃ ॥ ೩೪೬ ॥**

**ಅರ್ಥ–** ಯಥಾ = ಯಾವರೀತಿಯಲ್ಲಿ, ರಾಜಾ = ರಾಜನು, ಹೃಷ್ಟಃ ಅಪಿ = ಸಂತುಷ್ಟನಾದರೂ, ಸ್ವೀಯಾಂ = ತನ್ನ, ಜಾಯಾಂ = ಹೆಂಡತಿಯನ್ನು, ಕಸ್ಯಚಿತ್ = ಯಾರಿಗೂ, ನ ದಿಶತಿ = ಕೊಡುವುದಿಲ್ಲವೋ, ತಥಾ = ಅದೇ ರೀತಿಯಲ್ಲಿ, ಪ್ರಸನ್ನಃ ಅಪಿ =

ಸುಪ್ರೀತನಾದರೂ, ಹರಿಃ = ಶ್ರೀಹರಿಯು, ಪ್ರಪನ್ನಾಯ = ಶರಣಾಗತನಾಗಿ ಸಾಯುಜ್ಯಮುಕ್ತಿಯನ್ನು ಪಡೆದ ಮುಕ್ತನಿಗೆ, ಸ್ವಾತ್ಮೈಕ್ಯಂ = ತನ್ನ ಅತ್ಯಂತಾಭೇದವನ್ನು, ನ ದಿಶೇತ್ = ಕೊಡುವುದಿಲ್ಲ.

**ಅನುವಾದ–** ರಾಜನೋರ್ವನು ತನ್ನ ಭೃತ್ಯನ ಬಗ್ಗೆ ಎಷ್ಟೇ ಸಂತುಷ್ಟನಾದರೂ ಆತನಿಗೆ ತನ್ನ ಹೆಂಡತಿಯನ್ನು ಎಂದಿಗೂ ನೀಡಲಾರನು. ಹಾಗೆಯೇ ತನಗೆ ಶರಣಾಗತನಾಗಿ ಸಾಯುಜ್ಯ ಮುಕ್ತಿ ಮುಂತಾದ ಮುಕ್ತಿಗಳನ್ನು ಪಡೆದ ಜೀವನಿಗೂ ಪರಮಾತ್ಮನು ತನ್ನ ಅತ್ಯಂತಾಭೇದವನ್ನು ಕೊಡುವುದೊಂದರ ಹೊರತಾಗಿ ಇನ್ನಿತರ ಸುಖಸೌಲಭ್ಯಗಳನ್ನು ಮಾತ್ರ ಕೊಡುತ್ತಾನೆ. ಏಕೆಂದರೆ ಅತ್ಯಂತಾಭೇದವನ್ನು ಕೊಡುವುದೆಂದರೆ ಲಕ್ಷ್ಮೀರಮಣತ್ವಾದಿ ವಿಶಿಷ್ಟಲಕ್ಷಣಗಳನ್ನು ಮುಕ್ತರಿಗೆ ನೀಡುವುದೆಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ–** ಯಥಾ ರಾಜಾ ನ ದಿಶತಿ ತಥಾ ಹರಿರಪಿ ನ ದಿಶೇದಿತಿ ಯೋಜನಾ ॥೩೪೬॥

ನ ರಾಜವಾಹನಂ ಕಾಂಕ್ಷೇನ್ನ ತತ್ಸಿಂಹಾಸನಂ ಭಟಃ ।
ಗರುಡಾರೂಢತಾ ಶೇಷಶಾಯಿತಾ ತತ್ ಕದಾಪಿ ನ ॥ ೩೪೭ ॥

**ಅರ್ಥ–** ಯತ್ = ಯಾವ ಕಾರಣದಿಂದ, ಭಟಃ = ರಾಜಭಟನು, ರಾಜವಾಹನಂ= ರಾಜವಾಹನವನ್ನು, ತತ್ಸಿಂಹಾಸನಂ ಚ = ರಾಜನ ಸಿಂಹಾಸನವನ್ನು ಕೂಡ, ನ ಕಾಂಕ್ಷೇತ್ = ಬಯಸಬಾರದೋ, ತತ್ = ಆ ಕಾರಣದಿಂದ, ಮುಕ್ತಾನಾಂ= ಮುಕ್ತಜೀವರಿಗೆ, ಗರುಡಾರೂಢತಾ = ಗರುಡವಾಹನತ್ವವು, ಶೇಷಶಾಯಿತಾ ಚ = ಶೇಷಶಯನತ್ವವು ಕೂಡ, ಕದಾ ಅಪಿ = ಯಾವಾಗಲೂ ಕೂಡ, ನ = ದೊರೆಯಲಾರವು.

**ಅನುವಾದ–** ಊಳಿಗದವನು ತನ್ನ ಅರಸನ ವಾಹನವನ್ನು, ಸಿಂಹಾಸನವನ್ನು ಎಂದಿಗೂ ಬಯಸಬಾರದು. ಅವು ಆತನಿಗೆ ದೊರೆಯಲೂ ಆರವು. ಅಂತಯೇ ಮುಕ್ತರಿಗೂ ಗರುಡವಾಹನತ್ವ, ಶೇಷಶಾಯಿತ್ವಮೊದಲಾದ ಭಗವಂತನ ವಿಶಿಷ್ಟಲಕ್ಷಣಗಳು ಎಂದಿಗೂ ದೊರೆಯಲಾರವು. ಆ ವಿಶಿಷ್ಟಲಕ್ಷಣಗಳು ದೊರೆಯುವುದಿಲ್ಲವೆನ್ನುವುದರ ಅರ್ಥ ಮುಕ್ತನಿಗೆ ಪರಮಾತ್ಮನ ಅಭೇದ ದೊರೆಯುವುದಿಲ್ಲವೆನ್ನುವುದೇ ಆಗಿದೆ.

**ಭಾವವಿಲಾಸಿನೀ–** ತತ್ತಸ್ಮಾದ್ಭೃತ್ಯಾನಾಂ ರಾಜಸಿಂಹಾಸನಾರೋಹಾದೇರನುಚಿತತ್ವಾತ್ ॥೩೪೭॥

ಸುರೇಶ್ವರೌ ಹರೇಃ ಸೇವಾಪರೌ ಸರ್ವತ್ರ ಸರ್ವದಾ ।
ನರೋಽಲ್ಪಕಃ ಕಥಂ ಮುಕ್ತೌ ತೌ ಮುಕ್ತಾವಾರುರುಕ್ಷತಿ ॥ ೩೪೮ ॥

**ಅರ್ಥ–** ಸುರೇಶ್ವರೌ = ದೇವತಾಶ್ರೇಷ್ಠರಾದ ಗರುಡ ಮತ್ತು ಶೇಷರು ಸರ್ವತ್ರ – ಎಲ್ಲೆಡೆಯೂ, ಸರ್ವದಾ – ಅಮುಕ್ತ ಮತ್ತು ಮುಕ್ತ ಎಂಬ ಎರಡೂ ಅವಸ್ಥಾಗಳಲ್ಲಿಯೂ,

ಹರೇಃ = ಶ್ರೀಹರಿಯ, ಸೇವಾಪರೌ = ಸೇವೆಯಲ್ಲಿ ಆಸಕ್ತರಾಗಿರುತ್ತಾರೆ, ಮುಕ್ತೌ ಅಪಿ = ಮೋಕ್ಷದಲ್ಲಿಯೂ, ಅಲ್ಪಕಃ = ಅಲ್ಪಶಕ್ತಿಯುಳ್ಳವನಾದ, ನರಃ = ಮನುಷ್ಯನು, ಮುಕ್ತೌ = ಮುಕ್ತರಾದ, ತೌ = ಆ ಗರುಡಶೇಷರಿಬ್ಬರನ್ನು, ಕಥಂ = ಹೇಗೆ, ಆರುರುಕ್ಷತಿ = ಏರಲು ಅಪೇಕ್ಷಿಸುತ್ತಾನೆ.

**ಅನುವಾದ–** ದೇವತಾಶ್ರೇಷ್ಠರಾದ ಗರುಡಶೇಷರಿಬ್ಬರೂ ಅಮುಕ್ತಾವಸ್ಥೆಯಲ್ಲಿಯೂ ಮುಕ್ತಾವಸ್ಥೆಯಲ್ಲಿಯೂ ಶ್ರೀಹರಿಯ ಸೇವೆಯಲ್ಲಿಯೇ ಆಸಕ್ತರಾಗಿರುತ್ತಾರೆ. ಇತರ ಜೀವರು ಮುಕ್ತಿಗೆ ಹೋದರೂ ಗರುಡಶೇಷರಿಗಿಂತ ಯೋಗ್ಯತೆಯಲ್ಲಿ ಅಲ್ಪರೇ ಆಗಿರುತ್ತಾರೆ. ಅಂತಹ ಜೀವರು ಮುಕ್ತಿಯಲ್ಲಿ ಅವರಿಬ್ಬರ ಸೇವೆಯನ್ನು ಸ್ವೀಕರಿಸಲು ಹೇಗೆ ಬಯಸುತ್ತಾರೆ? ಹೀಗೆ ಗರುಡವಾಹನತ್ವ ಮತ್ತು ಶೇಷಶಾಯಿತ್ವಗಳೆಂಬ ಶ್ರೀಹರಿಯ ವಿಶಿಷ್ಟಲಕ್ಷಣ ಜೀವರಿಗೆ ದೊರೆಯುವುದಿಲ್ಲ ಎಂದಾದರೆ ಶ್ರೀಹರಿಯ ಅತ್ಯಂತಾಭೇದವೂ ದೊರಯುವುದಿಲ್ಲವೆಂದೇ ಅರ್ಥವಾಗುತ್ತದೆ.

**ಭಾವವಿಲಾಸಿನೀ– ಸುರೇಶ್ವರೌ ಶೇಷಗರುಡೌ ।** ಶೇಷಶಾಯಿತ್ವಸ್ಯ ಗರುಡವಾಹನತ್ವಸ್ಯ ಚ ಕದಾಪ್ಯಪಾಯಾಭಾವಾತ್ ಸರ್ವತ್ರ ಸರ್ವದೇತ್ಯುಕ್ತಮ್ । ಮುಕ್ತೌ ಮುಕ್ತಿಂ ಗತೌ । ತೌ ಗರುಡಶೇಷೌ ॥ ೩೪೮ ॥

ನ ಯತ್ರ ಮಾಯಾ ಕಿಮುತಾಪರ ಇತ್ಯಖಿಲೇಶಿತುಃ ।
ಪುರೇ ಕಾಮಕ್ರೋಧಪೂರ್ವಕಾರ್ಯಸ್ಯಾಭಾವಮಂಜಸಾ ॥ ೩೪೯ ॥

ಕಿಮುತೇತಿ ವದನ್ ಯೋಗೀ ಮಾಯಾಭಾವಾಖ್ಯಹೇತುನಾ ।
ಕಾರಣಾಭಾವರೂಪೇಣ ಸಾಧಯಾಮಾಸ ಯೌಕ್ತಿಕಃ ॥ ೩೫೦ ॥

**ಅರ್ಥ–** ಯತ್ರ=ಯಾವ ವೈಕುಂಠಾದಿ ಲೋಕಗಳಲ್ಲಿ, ಮಾಯಾ=ಜಡಪ್ರಕೃತಿಯು, ನ= ಇರುವುದಿಲ್ಲವೋ, ಅಲ್ಲಿ ಅಪರೇ=ಪ್ರಕೃತಿಜನ್ಯವಾದ ತತ್ವಗಳು, ಕಿಮುತ=ಇಲ್ಲವೆಂದು ಹೇಳುವುದೇನಿದೆ. ಅಖಿಲೇಶಿತುಃ=ಸರ್ವೇಶ್ವರನಾದ ಶ್ರೀಹರಿಯು, ಪುರೇ=ಪಟ್ಟಣವಾದ ವೈಕುಂಠದಲ್ಲಿ ಕಾಮಕ್ರೋಧಪೂರ್ವಕಾರ್ಯಸ್ಯ=ಕಾಮಕ್ರೋಧಾದಿ ಪ್ರಕೃತಿಕಾರ್ಯಗಳ, ಅಭಾವಂ=ಇಲ್ಲದಿರುವಿಕೆಯನ್ನು, ಅಂಜಸಾ=ಚೆನ್ನಾಗಿ, ಕಿಮುತ ಇತಿ ವದನ್=ಕಿಮುತ ಎಂಬ ಶಬ್ದವನ್ನು ಪ್ರಯೋಗಿಸುವವರಾಗಿ, ಕಾರಣಾಭಾವರೂಪೇಣ=ಕಾರಣವಿಲ್ಲದೇ ಕಾರ್ಯವಿಲ್ಲ ಎಂದು ಸಾಧಿಸುವ, ಮಾಯಾಭಾವಾಖ್ಯಹೇತುನಾ=ಮಾಯಾಭಾವ ಎಂಬ ಹೇತುವಿನಿಂದ, ಯೌಕ್ತಿಕಃ=ಯುಕ್ತಿನಿಪುಣರಾದ, ಯೋಗೀ=ಯೋಗಿಗಳಾದ ಶುಕಾಚಾರ್ಯರು, ಸಾಧಯಾಮಾಸ=ಸಾಧಿಸಿದ್ದಾರೆ.

**ಅನುವಾದ–** ವೈಕುಂಠಲೋಕವು ಲಕ್ಷ್ಮೀಸ್ವರೂಪವಾದುದು ಎಂಬ ವಿಷಯವನ್ನು ಭಾಗವತ ಮತ್ತು ಪಂಚರಾತ್ರ ಪ್ರಮಾಣಗಳಿಂದ ಶ್ರೀ ವಾದಿರಾಜರು ಸಾಧಿಸುತ್ತಿದ್ದಾರೆ.

ಈ ಎರಡು ಶ್ಲೋಕಗಳಲ್ಲಿ ಭಾಗವತ ಪುರಾಣವನ್ನು ಸೂಚಿಸಿ ವೈಕುಂಠವು ಅಪ್ರಾಕೃತ ಎಂದು ಸಾಧಿಸುತ್ತಿದ್ದಾರೆ.

'ನ ಯತ್ರ ಮಾಯಾ ಕಿಮುತಾಪರೇ' ಎಂಬ ಭಾಗವತ ಶ್ಲೋಕದಲ್ಲಿ ಸರ್ವತಂತ್ರ ಸ್ವತಂತ್ರನಾದ, ಸಮಸ್ತ ಪ್ರಪಂಚಕ್ಕೆ ಸ್ವಾಮಿಯಾದ ಶ್ರೀಹರಿಯ ಪವಿತ್ರವಾದ ವೈಕುಂಠ ಲೋಕದಲ್ಲಿ ಬಂಧಕವಾದ ಪ್ರಕೃತಿಯು ಇಲ್ಲದಿರುವುದರಿಂದ, ಪ್ರಕೃತಿಜನ್ಯವಾದ ಕಾಮಕ್ರೋಧಾಧಿಗಳು ಇಲ್ಲವೆಂಬುದಾಗಿ ಸ್ಪಷ್ಟವಾಗಿ ಹೇಳಲಾಗಿದೆ.

ಈ ಶ್ಲೋಕದಲ್ಲಿ ಯೋಗಿಗಳಾದ ಶುಕಾಚಾರ್ಯರು 'ಕಿಮುತ' ಎಂಬ ಪದವನ್ನು ಪ್ರಯೋಗಿಸಿ ಯುಕ್ತಿಯಿಂದ ಮೋಕ್ಷದಲ್ಲಿ ಕಾಮಕ್ರೋಧಾದಿಗಳು ಇಲ್ಲವೆಂದು ಸಾಧಿಸುತ್ತಿದ್ದಾರೆ. ಕಾಮಕ್ರೋಧಾದಿಗಳು ಪ್ರಕೃತಿಯಿಂದ ಜನ್ಯವಾಗಿವೆ. ಪ್ರಕೃತಿಯು ಕಾರಣ, ಕಾಮಕ್ರೋಧಾದಿಗಳು ಕಾರ್ಯಗಳು. ಕಾರ್ಯವು ಕಾರಣಾಧೀನ ಎಂದರೆ ಕಾರಣ ಇದ್ದಾಗ ಮಾತ್ರ ಕಾರ್ಯ ಉಂಟಾಗಲು ಸಾಧ್ಯ. 'ಕಾರಣಸತ್ವೇ ಕಾರ್ಯಸತ್ವಂ, ಕಾರಣಾಭಾವೇ ಕಾರ್ಯಾಭಾವಃ', ಎಂಬ ನಿಯಮದಂತೆ ವೈಕುಂಠದಲ್ಲಿ ಕಾರಣವಾದ ಪ್ರಕೃತಿಯೇ ಇಲ್ಲದಿರುವಾಗ ಕಾರ್ಯವಾದ ಕಾಮಕ್ರೋಧಾಧಿಗಳು ಇರಲು ಹೇಗೆ ಸಾಧ್ಯ? ಎಂಬ ಕೈಮುತ್ಯನ್ಯಾಯದಿಂದ, ಪ್ರಕೃತಿಯು ಇಲ್ಲದಿರುವುದರಿಂದ ಕಾರ್ಯವಾದ ಕಾಮಕ್ರೋಧಾದಿಗಳ ಅಭಾವವೂ ವೈಕುಂಠದಲ್ಲಿ ಸಿದ್ಧವಾಗುತ್ತದೆ. ಹೀಗೆ ಭಾಗವತದಲ್ಲಿ ಹೇಳಿರುವುದರಿಂದ ಆ ಪ್ರಮಾಣಾನುಸಾರವಾಗಿ ಭಗವಂತನ ಶ್ರೇಷ್ಠ ಧಾಮವಾದ ವೈಕುಂಠದಲ್ಲಿ ಜಡಪ್ರಕೃತಿಯೂ, ಕಾರ್ಯವಾದ ಕಾಮಕ್ರೋಧಾದಿಗಳೂ ಇಲ್ಲವೆಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಇದಾನೀಂ ವೈಕುಂಠಲೋಕಸ್ಯ ಲಕ್ಷ್ಮೀಮಯತ್ವಂ ಭಾಗವತವಾಕ್ಯೇನ ಪಂಚರಾತ್ರವಾಕ್ಯೇನ ಚ ಸಾಧಯತಿ ॥ ನ ಯತ್ರೇತ್ಯಾದಿನಾ ॥ ಕಿಮುತೇತಿ ವದನ್ ಅಪರೇ ಮಾಯಾಜನ್ಯಕಾಮಕ್ರೋಧಾದಯೋ ನೇತಿ ಕಿಮುತೇತಿ ವದನ್ನಿತ್ಯರ್ಥಃ । ಯೋಗೀ ಶುಕಃ । ಮಾಯಾಭಾವಾಖ್ಯಹೇತುನಾ ಯತ್ರ ವೈಕುಂಠ ಮಾಯಾ ನೇತಿ ಪೂರ್ವವಾಕ್ಯೋಕ್ತ-ಮಾಯಾಭಾವಾಖ್ಯ ಹೇತುನಾ ॥ ೩೪೯-೩೫೦ ॥

ಈಷನ್ಮಾಯಾವಶೇಷಂ ಚ ದೋಷಂ ಸ ಮನುತೇ ಮುನಿಃ ।
ಸಿದ್ಧೇಶ್ವರಸ್ಯ ಕಿಂ ಸ್ವೋಕ್ತಹೇತ್ವಸಿದ್ಧಿಃ ಮನಃಪ್ರಿಯಾ ।
ಚಂಡಾಲಾಂಗುಲಿಸಂಗೇಽಪಿ ಚಂಡಾಲಸ್ಪರ್ಶ ಏವ ಹಿ ॥ ೩೫೧ ॥

**ಅರ್ಥ–** ಸಃ=ಕಾರಣಾಭಾವದಿಂದ ಕಾರ್ಯಾಭಾವವನ್ನು ಸಾಧಿಸಿದ, ಮುನಿಃ= ಶುಕಾಚಾರ್ಯರು, ಈಷನ್ಮಾಯಾವಶೇಷಂ ಚ=ಮಾಯೆಯ ಅಲ್ಪ ಲೇಶವಿದ್ದರೂ ಅದನ್ನು ದೋಷಂ= ದೋಷ ಎಂಬುದಾಗಿ, ಮನುತೇ=ತಿಳಿಯುತ್ತಾರೆ. ಸಿದ್ಧೇಶ್ವರಸ್ಯ=ಅನುಮಾನ ಪ್ರಯೋಗದಲ್ಲಿ ಸಿದ್ಧಹಸ್ತರಾದ ಶುಕಾಚಾರ್ಯರಿಗೆ, ಸ್ವೋಕ್ತಹೇತ್ವಸಿದ್ಧಿಃ=ತಾನೇ ಪ್ರಯೋಗಿಸಿದ ಹೇತುವಿನ ಸ್ವರೂಪಾಸಿದ್ಧಿಯು, ಮನಃಪ್ರಿಯಾ ಕಿಂ?=ಮನಸ್ಸಿಗೆ ಸಂತೋಷವನ್ನುಂಟು ಮಾಡುತ್ತದೆಯೇ? ಸರ್ವಥಾ ಇಲ್ಲ. ಚಂಡಾಲಾಂಗುಲಿಸಂಗೇಽಪಿ =ಚಂಡಾಲನ ಒಂದು ಬೆರಳಿನ ಸ್ಪರ್ಶವಾದರೂ, ಅದು, ಚಂಡಾಲಸ್ಪರ್ಶ ಏವ=ಚಂಡಾಲನ ಸ್ಪರ್ಶ ಎಂಬುದಾಗಿಯೇ ಹಿ=ಪ್ರಸಿದ್ಧವಾಗಿದೆಯಷ್ಟೇ.

**ಅನುವಾದ– (ಮೋಕ್ಷದಲ್ಲಿ) ವೈಕುಂಠಲೋಕದಲ್ಲಿ ಸಂಪೂರ್ಣ ಮಾಯೆ ಇಲ್ಲದಿದ್ದರೂ, ಮಾಯೆಯ ಸ್ವಲ್ಪ ಅವಶೇಷ ಮಾತ್ರ ಇದೆ. ಆದ್ದರಿಂದ ಆ ಸ್ವಲ್ಪ ಮಾಯೆಯ ಕಾರ್ಯವಾದ ಕಾಮ ಕ್ರೋಧಾದಿಗಳು ಅಲ್ಲಿರುವುದಲ್ಲವೆ? ಎಂಬ ಪ್ರಶ್ನೆಗೆ ರಾಜರು ಈ ಪದ್ಯದಲ್ಲಿ ಉತ್ತರಿಸಿದ್ದಾರೆ.**

**ವೈಕುಂಠದಲ್ಲಿ ಮಾಯೆ (ಪ್ರಕೃತಿ) ಇಲ್ಲವಾದುದರಿಂದ ಅದರ ಕಾರ್ಯವಾದ ಕಾಮಾದಿಗಳು ಇಲ್ಲ ಎಂದು ಅನುಮಾನ ರೂಪ ಪ್ರಮಾಣದಿಂದ ಸಾಧಿಸಿದ ಶುಕಾಚಾರ್ಯರು. ವೈಕುಂಠದಲ್ಲಿ ಪ್ರಕೃತಿಯ ಲೇಶವಿದ್ದರೂ ಅದು ದೋಷ ಎಂಬುದಾಗಿಯೇ ತಿಳಿಯುತ್ತಾರೆ. ಎಂದರೆ ಅಲ್ಲಿ ಜಡಪ್ರಕೃತಿಯ ಪ್ರಸಕ್ತಿಯೇ ಇಲ್ಲ ಎಂದು ಹೇಳುತ್ತಾರೆ.**

**ಪೂರ್ವಪಕ್ಷಿಯು ಹೇಳಿದಂತೆ ವೈಕುಂಠದಲ್ಲಿ ಸ್ವಲ್ಪ ಮಾಯೆಯನ್ನು ಅಂಗೀಕರಿಸಿದರೆ, ಅಲ್ಲಿ ಮಾಯೆ ಇದೆ ಎಂದು ಒಪ್ಪಿದಂತಾಯಿತು. ಹಾಗೆ ಮಾಯೆಯನ್ನು ಒಪ್ಪಿದಲ್ಲಿ ಅನುಮಾನದಲ್ಲಿ ಹೇಳಿದ 'ಮಾಯಾಭಾವ' ಎಂಬ ಹೇತುವಿಗೆ ಸ್ವರೂಪಾಸಿದ್ಧಿ ಎಂಬ ದೋಷವು ಬರುತ್ತದೆ. ವೈಕುಂಠದಲ್ಲಿ ಮಾಯೆಯನ್ನು ಒಪ್ಪಿದರೆ ಮಾಯೆ ಇಲ್ಲದಿರುವುದರಿಂದ ಎಂಬ ಹೇತುವು ಸಿದ್ಧವಾಗುವುದಿಲ್ಲವಷ್ಟೇ. ಆದ್ದರಿಂದ ಈ ಅನುಮಾನಕ್ಕೆ ಹೇತ್ವಸಿದ್ಧಿ ಎಂಬ ದೋಷ ಬರುತ್ತದೆ. ಅನುಮಾನ ಪ್ರಯೋಗ ಕುಶಲರಾದ ಶುಕಾಚಾರ್ಯರಿಗೆ ದೋಷವು ಇಷ್ಟವಾದೀತೇ? ಖಂಡಿತವಾಗಿಯೂ ಅವರಿಗೆ ಇಷ್ಟವಾಗಲಾರದು. ಆದ್ದರಿಂದ ವೈಕುಂಠದಲ್ಲಿ ಮಾಯೆಯ ಲೇಶವೂ ಇಲ್ಲ. ಆದ್ದರಿಂದಲೇ ಆ ಮಾಯೆಯ ಕಾರ್ಯವಾದ ಕಾಮಕ್ರೋಧಾದಿಗಳೂ ಅಲ್ಲಿ ಇಲ್ಲ ಎಂಬುದು ಶುಕಾಚಾರ್ಯರ ಭಾವವಾಗಿದೆ.**

**ಅಲ್ಪಮಾಯೆ ಇದ್ದರೂ ಮಾಯೆ ಇದ್ದಂತೆ ಎಂಬ ವಿಷಯದಲ್ಲಿ ರಾಜರು ತಾರ್ಕಿಕ ದೃಷ್ಟಾಂತವನ್ನು ಹೇಳುತ್ತಿದ್ದಾರೆ.**

ಚಂಡಾಲನು ತನ್ನ ಕಿರುಬೆರಳಿನ ತುದಿಯಿಂದ ಮುಟ್ಟಿದರೂ ಅದು ಚಂಡಾಲ ಸ್ಪರ್ಶವೇ ಆಗಿದೆಯಷ್ಟೇ. ಕಿರುಬೆರಳಿನ ತುದಿಯ ಸ್ಪರ್ಶ ಮಾತ್ರ ಆಗಿರುವುದರಿಂದ ಅದು ಚಂಡಾಲ ಸ್ಪರ್ಶವಲ್ಲ ಎಂದು ಹೇಳಲು ಸಾಧ್ಯವೇ?

ಅದರಂತೆ ಸ್ವಲ್ಪ ಮಾಯೆ ಇದ್ದರೂ ಮಾಯೆ ಇದ್ದಂತೆಯೇ. ಹಾಗಾದಲ್ಲಿ ಅನುಮಾನವು ದುಷ್ಟವಾಗುವುದರಿಂದ ಮಾಯೆಯ ಲೇಶವೂ ವೈಕುಂಠದಲ್ಲಿ ಇಲ್ಲ ಎಂದು ಶುಕಾಚಾರ್ಯರು ಹೇಳಿದ್ದಾರೆ.

**ಭಾವವಿಲಾಸಿನೀ–** ಸಃ ಮಾಯಾಖ್ಯಕಾರಣಾಭಾವೇನ ತತ್ಕಾರ್ಯಕಾಮಕ್ರೋಧಾದ್ಯಭಾವೇ ಕೈಮುತ್ಯಂ ವದನ್ಮುನಿಃ ಶುಕಃ । ಈಷನ್ಮಯಾಸ್ಪರ್ಶೋಽಪಿ ಮಾಯಾಸ್ಪರ್ಶ ಏವೇತ್ಯತ್ರ ದೃಷ್ಟಾಂತಮಾಹ – **ಚಂಡಾಲೇತಿ॥** ಹಿ ಯಸ್ಮಾತ್ತಸ್ಮಾದೀಷನ್ಮಾಯಾ ಸ್ಪರ್ಶೋಽಪಿ ಮಾಯಾಸ್ಪರ್ಶ ಏವ । ಅತೋ ಮಾಯಾಲೇಶಸದ್ಭಾವೇಽಪಿ ಮಾಯಾರಾಹಿತ್ಯಾಖ್ಯ ಹೇತೋರಸಿದ್ಧಿಃ ಸ್ಯಾದಿತಿ ಯೋಜನಾ ॥ ೩೫೧ ॥

**ಕಾರ್ಯಾಭಾವಸ್ಯ ಚಾಂಜಸ್ಯಂ ಸರ್ವಥಾಽಭಾವ ಏವ ಯತ್ ।**
**ಅತೋಽಸೌ ಕಾರಣಸ್ಯಾಪಿ ಸರ್ವಥಾಽಭಾವಮಾಕ್ಷಿಪೇತ್ ॥ ೩೫೨ ॥**

**ಅರ್ಥ–** ಯತ್=ಯಾವ ಕಾರಣದಿಂದ, ಕಾರ್ಯಾಭಾವಸ್ಯ=ಕಾಮಕ್ರೋಧಾದಿ ಕಾರ್ಯಗಳ ಅಭಾವದ, ಆಂಜಸ್ಯಂ=ಸ್ಪಷ್ಟತೆಯು, ಸರ್ವಥಾ=ಎಲ್ಲ ರೀತಿಯಿಂದ, ಅಭಾವಃ ಏವ=ಇಲ್ಲದಿರುವಿಕೆಯೇ ಆಗಿದೆಯೋ, ಅತಃ=ಆದ್ದರಿಂದ, ಅಸೌ=ಈ ಕಾರ್ಯಾಭಾವವು, ಕಾರಣಸ್ಯಾಪಿ=ಕಾರಣವಾದ ಮಾಯೆಯ, ಸರ್ವಥಾ= ಎಲ್ಲ ರೀತಿಯಿಂದ, ಅಭಾವಂ= ಇಲ್ಲದಿರುವಿಕೆಯನ್ನು, ಆಕ್ಷಿಪೇತ್=ಆಕ್ಷೇಪಿಸುತ್ತದೆ (ಸಿದ್ಧಪಡಿಸುತ್ತದೆ).

**ಅನುವಾದ–** ಭಾಗವತದಲ್ಲಿ ಶುಕಾಚಾರ್ಯರು, ಮೋಕ್ಷದಲ್ಲಿ ಪ್ರಕೃತಿಯು ಇಲ್ಲದಿರುವುದರಿಂದ ಅದರ ಕಾರ್ಯವಾದ ಕಾಮಕ್ರೋಧಾದಿಗಳು ಸಂಪೂರ್ಣವಾಗಿ ಇಲ್ಲವೇ ಇಲ್ಲ ಎಂಬುದಾಗಿ ಕಾರ್ಯದ ಅಭಾವವನ್ನು ಚೆನ್ನಾಗಿ ಸಮರ್ಥಿಸಿರುವುದರಿಂದ ಕಾರ್ಯದ ಲೇಶವೂ ಮೋಕ್ಷದಲ್ಲಿ ಇಲ್ಲ ಎಂದು ಸಿದ್ಧವಾಗುತ್ತದೆ. ಕಾಮಕ್ರೋಧಾದಿಗಳ ಲೇಶವೂ ಲೇಶವೂ ಮೋಕ್ಷದಲ್ಲಿ ಇಲ್ಲ ಎಂದು ಸಿದ್ಧವಾಗುತ್ತದೆ.

ಇಲ್ಲಿ ಆಕ್ಷೇಪ ಎಂದರೆ ಪ್ರಶ್ನೆ ಎಂದು ಅರ್ಥ ಅಲ್ಲ. ಕಾರಣಕ್ಕೆ ಅನುಗುಣವಾದ ಕಾರ್ಯದ ಉತ್ಪತ್ತಿಯು ಲೋಕದಲ್ಲಿ ಕಂಡಿರುವುದರಿಂದ ಕಾರ್ಯವಾದ ಕಾಮಕ್ರೋಧಾದಿಗಳ ಲೇಶವೂ ಅಲ್ಲಿ ಇಲ್ಲದಿರುವುದು ಸಿದ್ಧವಾಗಿರುವುದರಿಂದ ಕಾರ್ಯಕ್ಕೆ ಅನುಗುಣವಾದ ಕಾರಣವೂ ಅಂದರೆ ಪ್ರಕೃತಿಯ ನಿಶ್ಶೇಷವಾದ

ಅಭಾವವೂ ಮೋಕ್ಷದಲ್ಲಿ ಸಿದ್ಧವಾಗುತ್ತದೆ ಎಂದು ಅರ್ಥ. ಆದ್ದರಿಂದ ವೈಕುಂಠದಲ್ಲಿ ಪ್ರಕೃತಿಯ (ಸ್ವಲ್ಪ) ಲೇಶವಿದೆ ಎಂದು ಹೇಳಲು ಬರುವುದಿಲ್ಲ.

**ಭಾವವಿಲಾಸಿನೀ–** ಅಸ್ಮೌ ನೇತಿ ಕಿಮುತೇತ್ಯುಕ್ತಃ ಸರ್ವಥಾ ಕಾರ್ಯಾಭಾವಃ ॥ ೩೫೨ ॥

**ಏವಂಚ ಮಾಯಾತ್ಯಂತಾಭಾವಸ್ಥಾನಂ ನಿತ್ಯಮುಕ್ತತಾಮ್ ।**
**ಚಿದ್ರೂಪತ್ವಂ ನ ಕಿಂ ಲೇಭೇ ಜಡಂ ಮಾಯಾಮಯಂ ಹಿ ತೇ ॥ ೩೫೩ ॥**

**ಅರ್ಥ–** ಏವಂ ಚ=ವೈಕುಂಠದಲ್ಲಿ ಅಲ್ಪ ಮಾಯೆಯೂ ಇಲ್ಲದಿರುವುದರಿಂದ, ಮಾಯಾತ್ಯಂತಾಭಾವಸ್ಥಾನಂ=ಮಾಯೆಯ ಲೇಶವೂ ಇಲ್ಲದ ಸ್ಥಾನವು, ನಿತ್ಯಮುಕ್ತತಾಂ=ನಿತ್ಯದೋಷ ದೂರತ್ವವನ್ನು ಚಿದ್ರೂಪತ್ವಂ=ಚೇತನ ಸ್ವರೂಪತ್ವವನ್ನು ನ ಲೇಭೇ ಕಿಂ=ಹೊಂದುವುದಿಲ್ಲವೇ? (ಹೊಂದುತ್ತದೆ) ತೇ=ನಿನ್ನ ಮತದ ಪ್ರಕಾರ, ಜಡಂ=ಜಡಪ್ರಕೃತಿಯೇ, ಮಾಯಾಮಯಂ ಹಿ=ಮಾಯಾಮಯವಾಗಿದೆಯಷ್ಟೇ !

**ಅನುವಾದ–** ಮಾಯಾತ್ಯಂತಾಭಾವ ಎಂದರೆ ಸಂಪೂರ್ಣವಾಗಿ ಮಾಯೆಯ ಇಲ್ಲದಿರುವಿಕೆ. ಈ ಅಭಾವಕ್ಕೆ ಸ್ಥಾನವಾದುದು ವೈಕುಂಠಲೋಕವಾಗಿದೆ. ಎಂದರೆ ವೈಕುಂಠ ಲೋಕದಲ್ಲಿ ಮಾಯೆಯ ಲೇಶವೂ ಇಲ್ಲದಿರುವುದರಿಂದ ಆ ಲೋಕವು ನಿತ್ಯದೋಷರಹಿತವಾದ ಚೇತನ ಸ್ವರೂಪವಾಗಿದೆ ಎಂದು ಸಿದ್ಧಿಸುತ್ತದೆ. ನಿನ್ನ ಮತದ ಪ್ರಕಾರ ಜಡಪದಾರ್ಥವೇ ಮಾಯಾಮಯವಾದುದು. ಆದ್ದರಿಂದ ಮಾಯಾರಹಿತವಾದ ಲೋಕವು ಜಡವಾಗ ಬಾರದು ಅದು ಚೇತನವೇ ಆಗಿರಬೇಕು. ಮಾಯೆ ಮತ್ತು ಮಾಯೆಯ ಕಾರ್ಯಗಳು ಅಲ್ಲಿಲ್ಲದಿರುವುದರಿಂದ ಆ ಲೋಕವು ನಿರ್ದೋಷ ಮತ್ತು ಚೇತನಾತ್ಮಕವಾಗಿದೆ ಎಂದು ಸಿದ್ಧವಾಗುತ್ತದೆ.

ಇಲ್ಲಿ 'ಲೋಕ' ಎಂದರೆ 'ವೈಕುಂಠ' ಮಾತ್ರ ಅಲ್ಲ 'ತ್ರಿಪಾದಸ್ಯಾಮೃತಂ ದಿವಿ' ಎಂಬ ಶ್ರುತಿಯಲ್ಲಿ ಹೇಳಿದಂತೆ ಭಗವಂತನ ಸ್ಥಾನವಾದ ಶ್ವೇತದ್ವೀಪ ಅನಂತಾಸನ, ವೈಕುಂಠ ಈ ಮೂರು ಲೋಕಗಳನ್ನು ಸ್ವೀಕರಿಸಬೇಕು. ಈ ಮೂರೂ ಲೋಕಗಳು ನಿರ್ದುಷ್ಟವಾಗಿವೆ ಮತ್ತು ಚೇತನ ಸ್ವರೂಪವಾಗಿದೆ ಎಂಬುದಾಗಿ ಅನುಮಾನ ಪ್ರಮಾಣದಿಂದ ಸಿದ್ಧವಾಗುತ್ತದೆ.

ವೈಕುಂಠವೇ ಮೊದಲಾದ ಮೂರು ಸ್ಥಾನಗಳು ನಿತ್ಯಮುಕ್ತ ಚೇತನ ಸ್ವರೂಪವಾಗಿದೆ. ಮಾಯಾತ್ಯಂತಾಭಾವಾಧಿಕರಣಗಳಾದುದರಿಂದ ಎಂಬ ಅನುಮಾನದಿಂದ ಮೂರೂ ಲೋಕಗಳು ಚಿನ್ಮಯವಾಗಿದೆ ಎಂದು ಸಿದ್ಧವಾಗುತ್ತದೆ ಎಂದು ಶ್ರೀ ಮದಾಚಾರ್ಯರು ಛಾಂದೋಗ್ಯಭಾಷ್ಯದಲ್ಲಿ ವಿವರಿಸಿದ್ದಾರೆ.

**ಭಾವವಿಲಾಸಿನೀ–** ಮಾಯಾತ್ಯಂತಾಭಾವಸ್ಥಾನೀ ಮಾಯಾತ್ಯಂತಾಭಾವಾಧಾರಭೂತೋ ವೈಕುಂಠಲೋಕೋ ನಿತ್ಯಮುಕ್ತತಾಂ ಚಿದ್ರೂಪತ್ವಂ ಚ ನ ಲೇಭೇ ಕಿಂ ಲೇಭ ಏವ । ನನು

**ಮಾಯಾಯಾಃ ಸರ್ವಥಾಽಭಾವಾತ್ ಅಸ್ತು ನಿತ್ಯಮುಕ್ತತಾ ಚಿದ್ರೂಪತ್ವಂ ತು ಕುತ ಇತ್ಯತ ಆಹ – ಜಡಮಿತಿ ॥ ತೇ ಮತೇ ॥ ೩೫೩ ॥**

**ತಲ್ಲಕ್ಷ್ಮ್ಯಾತ್ಮಕಲೋಕೋಽಪಿ ಸೋಽಭೂದ್ ಯನ್ನಿತ್ಯಮುಕ್ತಚಿತ್ ।**
**ಲಯೇಽಪ್ಯಲೀನಾ ಸೈವೈಕಾ ತತ್ಪತಿರ್ಯತ್ಪುರಃ ಪತಿಃ ॥ ೩೫೪ ॥**

**ಅರ್ಥ–** ಯತ್=ಯಾವ ಕಾರಣದಿಂದ ವೈಕುಂಠಲೋಕವು ನಿತ್ಯಮುಕ್ತಚೇತನಸ್ವರೂಪವಾಗಿದೆಯೋ, ತತ್=ಆ ಕಾರಣದಿಂದ, ಸಃ=ಆ ವೈಕುಂಠ ಲೋಕವು, ಲಕ್ಷ್ಮ್ಯಾತ್ಮಕ-ಲೋಕೋಪಿ=ಲಕ್ಷ್ಮೀಸ್ವರೂಪವಾದ ಲೋಕ ಎಂಬುದಾಗಿಯೂ, ಅಭೂತ್=ಸಿದ್ಧವಾಯಿತು. ಯತ್= ಯಾವ ಕಾರಣದಿಂದ, ಲಯೇಪಿ=ಪ್ರಲಯ ಕಾಲದಲ್ಲಿಯೂ, ಅಲೀನಾ= ಲಯಹೊಂದದ, ಏಕಾ ಏವ=ಒಬ್ಬಳೇ ಆದ, ಸಾ=ಆ ಲಕ್ಷ್ಮೀದೇವಿಯು, ನಿತ್ಯಮುಕ್ತಚಿತ್= ನಿತ್ಯಮುಕ್ತ ಚೇತನಳಾಗಿರುವಳೋ, ತತ್=ಆದ್ದರಿಂದ ವೈಕುಂಠ ಲೋಕವೂ ಲಕ್ಷ್ಮೀಸ್ವರೂಪವಾಗಿದೆ. ತತ್ಪತಿಃ=ಲಕ್ಷ್ಮೀಪತಿಯಾದ ನಾರಾಯಣನು, ಪುರಃ=ವೈಕುಂಠ ಲೋಕದ, ಪತಿಃ=ಒಡೆಯನಾಗಿದ್ದಾನೆ.

**ಭಾವವಿಲಾಸಿನೀ–** ತತ್ ತಸ್ಮಾತ್ । ಸ ವೈಕುಂಠಲೋಕಃ । ಯದ್ಯಸ್ಮಾತ್ । ಲಯೇ ಪ್ರಲಯೇ । ಸಾ ಲಕ್ಷ್ಮೀಃ । ಬ್ರಹ್ಮಲಯೇಽಪ್ಯಲೀನಾಯಾ ಲಕ್ಷ್ಮ್ಯಾ ಏವ ನಿತ್ಯಮುಕ್ತಚೈತನ್ಯತ್ವ ಸಂಭವಾನ್ನಿತ್ಯಮುಕ್ತಚೈತನ್ಯಾತ್ಮಕೋ ಲೋಕೋ ಲಕ್ಷ್ಮ್ಯಾತ್ಮಕ ಏವ ಭವೇದಿತಿ ಭಾವಃ । ತತ್ಪತಿರ್ಲಕ್ಷ್ಮ್ಯಾಃ ಪತಿಃ । ಪುರೋ ವೈಕುಂಠಪುರ್ಯಾಃ । ಯದ್ಯಪಿ ನಿತ್ಯಮುಕ್ತಚೇತನತ್ವಂ ಹರೇರಪ್ಯಸ್ತಿ । ತಥಾಪಿ ತಸ್ಯ ವೈಕುಂಠಪತಿರಿತ್ಯೇವ ಶ್ರವಣಾನ್ನ ವೈಕುಂಠರೂಪತ್ವಮ್ । ಕಿಂತು ವೈಕುಂಠಪತೇಸ್ತಸ್ಯ ಪತ್ನ್ಯಾಲಕ್ಷ್ಮ್ಯಾ ಏವ ತದ್ರೂಪತ್ವಮುಚಿತಮಿತಿ ಭಾವಃ ॥ ೩೫೪ ॥

**ವಿವರಣೆ–** ವೈಕುಂಠಾದಿ ಮೂರು ಲೋಕಗಳೂ ನಿತ್ಯಮುಕ್ತಚೇತನ ಸ್ವರೂಪ ಎಂದು ನಿಶ್ಚಯವಾದ ನಂತರ ಆ ನಿತ್ಯಮುಕ್ತಚೇತನ ಯಾರು? ಎಂಬ ಪ್ರಶ್ನೆಗೆ ಈ ಶ್ಲೋಕದಲ್ಲಿ ರಾಜರು ಉತ್ತರಿಸುತ್ತಿದ್ದಾರೆ.

ಲಕ್ಷ್ಮೀದೇವಿಯೇ ಆ ನಿತ್ಯಮುಕ್ತಚೇತನಳಾಗಿದ್ದಾಳೆ. ವೈಕುಂಠಾದಿಲೋಕತ್ರಯವು ಲಕ್ಷ್ಮೀಸ್ವರೂಪವಾಗಿದೆ. ಏಕೆಂದರೆ, ಲಕ್ಷ್ಮೀದೇವಿಯು ಪ್ರಲಯಕಾಲದಲ್ಲಿಯೂ ಲಯವನ್ನು ಹೊಂದುವುದಿಲ್ಲ. ಪ್ರಲಯ ಕಾಲದಲ್ಲಿಯೂ ಲಯವನ್ನು ಹೊಂದದಿರುವ ಲಕ್ಷ್ಮೀದೇವಿಯೊಬ್ಬಳೇ ನಿತ್ಯಮುಕ್ತಚೇತನಳಾಗಿದ್ದಾಳೆ. ಆದ್ದರಿಂದಲೇ ನಿತ್ಯಮುಕ್ತ ಚೇತನಾತ್ಮಕ ಲೋಕವೂ ಲಕ್ಷ್ಮೀಸ್ವರೂಪವೇ ಆಗಿದೆ.

ವಸ್ತುತಃ ಪ್ರಲಯಕಾಲದಲ್ಲಿ ಲಯವನ್ನು ಹೊಂದದ ನಿತ್ಯಮುಕ್ತರು ಇಬ್ಬರಿದ್ದಾರೆ. ಭಗವಂತ ಮತ್ತು ಲಕ್ಷ್ಮೀದೇವಿ. ಹೀಗಿರುವಾಗ ಲಕ್ಷ್ಮೀದೇವಿಯೊಬ್ಬಳೇ ನಿತ್ಯಮುಕ್ತ ಚೇತನಳು ಎಂಬುದು ಹೇಗೆ ಎಂಬ ಪ್ರಶ್ನೆಗೆ ಅವಕಾಶವಿದೆ.

ಆದರೆ ನಾರಾಯಣನು ವೈಕುಂಠಲೋಕದ ಅಧಿಪತಿಯಾಗಿದ್ದಾನೆ. ಲೋಕಾಧಿಪತಿಯಾದವನು ಲೋಕಸ್ವರೂಪನಾಗಲಾರ. ಆದ್ದರಿಂದ ಅವನ ಹೆಂಡತಿಯಾದ ಲಕ್ಷ್ಮೀದೇವಿಯು ನಿತ್ಯಮುಕ್ತಚೇತನಸ್ವರೂಪವಾದ ವೈಕುಂಠಲೋಕಸ್ವರೂಪಳಾಗಿದ್ದಾಳೆ.

ವೈಕುಂಠಾದಿಲೋಕಗಳು ಲಕ್ಷ್ಮೀಸ್ವರೂಪವಾಗಿದೆ. ನಾರಾಯಣನು ವೈಕುಂಠಾದಿ ಲೋಕತ್ರಯಾಧಿಪತಿಯೂ ಆಗಿದ್ದಾನೆ. ಲಕ್ಷ್ಮೀಪತಿಯೂ ಆಗಿದ್ದಾನೆ.

ಆದ್ದರಿಂದ ನಿತ್ಯಮುಕ್ತರು ಇಬ್ಬರಿದ್ದರೂ ಭಗವಂತನು ಲೋಕಪತಿಯಾದುದರಿಂದ ಲೋಕತ್ರಯವು ಲಕ್ಷ್ಮೀಸ್ವರೂಪವೇ ಆಗಿದೆ ಎಂದು ನಿಶ್ಚಯವಾಗುತ್ತದೆ.

**ಏವಂ ಚ ಯುಕ್ತಿತೋ ವೈಕುಂಠಾದಿಲೋಕಾಃ ಚಿದಾತ್ಮಕಾಃ ।**
**ಲಕ್ಷ್ಮ್ಯಾತ್ಮಕಾಃ ಸತ್ಯರೂಪಾಃ ನಿತ್ಯಾಶ್ಚಾಸನ್ ನ ಸಂಶಯಃ ॥ ೩೫೫ ॥**

**ವೈಕುಂಠಂ ನಾಮ ಲೋಕಂ ತದ್ ದಿವ್ಯಂ ಷಡ್ಗುಣಸಂಯುತಮ್ ।**
**ಅವೈಷ್ಣವಾನಾಮಪ್ರಾಪ್ಯಂ ಗುಣತ್ರಯವಿವರ್ಜಿತಮ್ ॥ ೩೫೬ ॥**

**ಅರ್ಥ–** ಏವಂ ಚ= ಹೀಗೆ, ಯುಕ್ತಿತಃ=ಸ್ಮೃತಿಮೂಲಕವಾದ ಯುಕ್ತಿಯಿಂದ, ವೈಕುಂಠಾದಿ ಲೋಕಾಃ=ವೈಕುಂಠ ಶ್ವೇತದ್ವೀಪ ಅನಂತಾಸನ ಈ ಮೂರು ಲೋಕಗಳು, ಚಿದಾತ್ಮಕಾಃ= ಚೇತನಸ್ವರೂಪಗಳು, ಲಕ್ಷ್ಮ್ಯಾತ್ಮಕಾಃ= ಲಕ್ಷ್ಮೀಸ್ವರೂಪವಾದವುಗಳು, ಸತ್ಯರೂಪಾಃ= ಸತ್ಯವಾದವುಗಳು. ನಿತ್ಯಾಶ್ಚ=ಮತ್ತು ನಿತ್ಯವಾದವುಗಳು, ಆಸನ್= (ಎಂಬುದಾಗಿ ನಿಶ್ಚಯವಾಯಿತು) ಆದವು. ನ ಸಂಶಯಃ=ಈ ವಿಷಯದಲ್ಲಿ ಸಂಶಯವಿಲ್ಲ. ತತ್= ಆ ಪ್ರಸಿದ್ಧವಾದ, ವೈಕುಂಠನಾಮ=ವೈಕುಂಠ ಎಂಬ ಹೆಸರುಳ್ಳ ಲೋಕಂ=ಲೋಕವು, ದಿವ್ಯಂ=ಅಲೌಕಿಕವಾದುದು. ಷಡ್ಗುಣಸಂಯುತಂ=ಆರು ಗುಣಗಳಿಂದ ಕೂಡಿದ್ದು. ಅವೈಷ್ಣವಾನಾಂ=ವಿಷ್ಣುಭಕ್ತರಲ್ಲದವರಿಗೆ, ಅಪ್ರಾಪ್ಯಂ=ಹೊಂದಲು ಅಸಾಧ್ಯವಾದುದು ಮತ್ತು ಗುಣತ್ರಯ ವಿವರ್ಜಿತಂ= ಸತ್ವ ರಜಸ್ಸು ಮತ್ತು ತಮಸ್ಸುಗಳೆಂಬ ಮೂರು ಗುಣಗಳಿಂದ ರಹಿತವಾದುದು ಆಗಿದೆ.

**ವಿವರಣೆ–** ಭಾಗವತ ಸ್ಮೃತಿಮೂಲಕವಾದ ಯುಕ್ತಿಗಳಿಂದ ವೈಕುಂಠಾದಿ ಮೂರೂ ಲೋಕಗಳು, ಚಿದಾತ್ಮಕ, ಲಕ್ಷ್ಮ್ಯಾತ್ಮಕ, ಸತ್ಯ ಮತ್ತು ನಿತ್ಯ ಎಂಬುದಾಗಿ ಸಿದ್ಧವಾಗುತ್ತದೆ ಈ ವಿಷಯದಲ್ಲಿ ಸಂಶಯಕ್ಕೆ ಅವಕಾಶವಿಲ್ಲ.

ಆ ಯುಕ್ತಿಗಳು ಹೀಗಿವೆ:

1) ವಿವಾದ ವಿಷಯೀಭೂತವಾದ ವೈಕುಂಠ ಲೋಕವು, (ಪಕ್ಷ), ಚೇತನಾತ್ಮಕವಾಗಿದೆ (ಸಾಧ್ಯ) ಪ್ರಕೃತಿ ಮತ್ತು ಪ್ರಾಕತಗಳಲ್ಲಿ ಯಾವುದೂ ಆಗದಿರುವುದರಿಂದ, (ಹೇತು), ಬ್ರಹ್ಮನಂತೆ (ದೃಷ್ಟಾಂತ).

2) ವಿವಾದವಿಷಯೀಭೂತವಾದ ವೈಕುಂಠ ಲೋಕವು (ಪಕ್ಷ) ಸತ್ಯ ಮತ್ತು ನಿತ್ಯವಾಗಿದೆ. (ಸಾಧ್ಯ) ಚಿದ್ರೂಪವಾದುದರಿಂದ (ಹೇತು) ಬ್ರಹ್ಮ ಚೈತನ್ಯದಂತೆ ಅಥವಾ ಜೀವ ಚೈತನ್ಯನಂತೆ (ದೃಷ್ಟಾಂತ).

3) ವಿವಾದ ವಿಷಯೀಭೂತವಾದ ವೈಕುಂಠ ಲೋಕವು (ಪಕ್ಷ) ಲಕ್ಷ್ಮ್ಯಾತ್ಮಕವಾಗಿದೆ (ಸಾಧ್ಯ) ಭಗವಂತನಿಂದ ಭಿನ್ನವಾಗಿದ್ದು ನಿತ್ಯಮುಕ್ತಚೈತನ್ಯರೂಪವಾದುದರಿಂದ (ಹೇತು) ಬ್ರಹ್ಮಚೈತನ್ಯದಂತೆ ಅಥವಾ ಜೀವಚೈತನ್ಯದಂತೆ (ದೃಷ್ಟಾಂತ).

4) ವಿವಾದ ವಿಷಯೀಭೂತವಾದ ವೈಕುಂಠ ಲೋಕವು (ಪಕ್ಷ) ಲಕ್ಷ್ಮ್ಯಾತ್ಮಕವಾಗಿದೆ (ಸಾಧ್ಯ) ಭಗವಂತನಿಂದ ಭಿನ್ನವಾಗಿದ್ದು ನಿತ್ಯಮುಕ್ತಚೈತನ್ಯಸ್ವರೂಪವಾದುದರಿಂದ (ಹೇತು) ವ್ಯತಿರೇಕದಿಂದ ಜೀವನಂತೆ ಅಥವಾ ಘಟದಂತೆ (ವ್ಯತಿರೇಕದೃಷ್ಟಾಂತ).

ಸ್ಮೃತಿ ಮೂಲಕಗಳಾದ ಈ ಮೂರು ಅನುಮಾನಗಳಿಂದ ವೈಕುಂಠಾದಿಲೋಕಗಳು ಚಿದಾತ್ಮಕ, ಸತ್ಯ, ನಿತ್ಯ, ಮತ್ತು ಲಕ್ಷ್ಮ್ಯಾತ್ಮಕವಾಗಿದೆ ಎಂದು ಸಿದ್ಧವಾಗುತ್ತದೆ.

ಆ ವೈಕುಂಠ ಲೋಕವು 1) ಪೂರ್ಣೈಶ್ವರ್ಯ, 2) ವೀರ್ಯ, 3) ಯಶಸ್ಸು 4) ಕಾಂತಿ, 5) ಜ್ಞಾನ, 6) ವಿಜ್ಞಾನ ಎಂಬ ಗುಣವುಳ್ಳದ್ದಾಗಿದೆ.

ಮುಖ್ಯವಾಗಿ ಭಗವಂತನು ಈ ಆರು ಗುಣವುಳ್ಳವನಾಗಿದ್ದಾನೆ. ಮುಕ್ತರಾದ ಜೀವರು ಯಥಾಯೋಗ್ಯವಾಗಿ ಈ ಆರು ಗುಣವುಳ್ಳವನಾಗಿದ್ದಾರೆ.

ಭಗ ಎಂದರೆ ಈ ಆರು ಗುಣಗಳು. ಈ ಗುಣಗಳು ಪ್ರಧಾನವಾಗಿ ಶ್ರೀಹರಿಯಲ್ಲಿರುವದರಿಂದಲೇ ಅವನು 'ಭಗವಾನ್' ಎಂದು ಕರೆಯಲ್ಪಡುತ್ತಾನೆ.

**ನಿತ್ಯಸಿದ್ಧೈಃ ಸಮಾಕೀರ್ಣಂ ಚಿನ್ಮಯೈಃ ಪಾಂಚಕಾಲಿಕೈಃ ।**
**ಸಭಾಪ್ರಾಸಾದಸಂಯುಕ್ತಂ ವನೈಶ್ಚೋಪವನೈಃ ಶುಭಮ್ ॥ ೩೫೭ ॥**

**ವಾಪೀಕೂಪತಟಾಕೈಶ್ಚ ವೃಕ್ಷಖಂಡೈಶ್ಚ ಮಂಡಿತಮ್ ।**
**ಅಪ್ರಾಕೃತಂ ಸುರೈರ್ವಂದ್ಯಂ ಅಯುತಾರ್ಕಸಮಪ್ರಭಮ್ ॥ ೩೫೮ ॥**

**ಪ್ರಕೃಷ್ಟಸತ್ವರಾಶಿತ್ವಾತ್ ಕದಾ ದ್ರಕ್ಷ್ಯಾಮಿ ಚಕ್ಷುಷಾ ।**
**ಇತ್ಥಂ ವೈಕುಂಠನಗರೀಂ ಅಸ್ತೌಷೀಚ್ಚತುರಾನನಃ ॥ ೩೫೯ ॥**

**ಅರ್ಥ—** ಚಿನ್ಮಯೈಃ=ಚಿನ್ಮಾತ್ರಸ್ವರೂಪರಾದ, ಪಾಂಚಕಾಲಿಕೈಃ=ತ್ರಿಸಂಧ್ಯಾಕಾಲ, ಹಗಲು, ರಾತ್ರಿ ಎಂಬ ಐದು ಕಾಲಗಳಲ್ಲಿಯೂ ಭಗವಂತನನ್ನು ಪೂಜಿಸುವವರಾದ, ನಿತ್ಯಸಿದ್ಧೈಃ=ನಿತ್ಯಮುಕ್ತರಿಂದ, ಸಮಾಕೀರ್ಣಂ=ತುಂಬಿರುವ, ಸಭಾಪ್ರಾಸಾದಸಂಯುಕ್ತಂ=

ಸಭಾಸ್ಥಾನ ಮತ್ತು ಉಪ್ಪರಿಗೆಯ ಮನೆಗಳಿಂದ ಕೂಡಿದ, ವನ್ಯೈಃ=ವನಗಳಿಂದಲೂ, ಚ=ಮತ್ತು, ಉಪವನ್ಯೈಃ=ಉದ್ಯಾನಗಳಿಂದಲೂ, ಶುಭಂ=ಮಂಗಳಕರವಾದ, ವಾಪೀಕೂಪತಟಾಕೈಃ= ಬಾವಿ, ಇಳಿಯುವ ಬಾವಿ ಮತ್ತು ಕೆರೆ ಮುಂತಾದ ಜಲಾಶಯಗಳಿಂದಲೂ ಚ=ಮತ್ತು, ವೃಕ್ಷಷಂಡೈಃ=ಮರಗಳ ಸಮೂಹದಿಂದಲೂ ಮಂಡಿತಂ=ಅಲಂಕೃತವಾದ, ಅಪ್ರಾಕೃತಂ= ಪ್ರಾಕೃತವಲ್ಲದ, ಸುರೈಃ=ದೇವತೆಗಳಿಂದ, ವಂದ್ಯಂ=ನಮಸ್ಕರಿಸಲು ಯೋಗ್ಯವಾದ, ಅಯುತಾರ್ಕಸಮಪ್ರಭಂ=ಹತ್ತುಸಾವಿರ ಸೂರ್ಯರ ಪ್ರಕಾಶಕ್ಕೆ ಸಮನವಾದ ಪ್ರಕಾಶವುಳ್ಳ, ವೈಕುಂಠ ಲೋಕವನ್ನು ಪ್ರಕಷ್ಟಸತ್ವರಾಶಿತ್ವಾತ್=ಆ ಲೋಕವು ಉತ್ತಮ ಪುರುಷರ ಸಮೂಹದಿಂದ ಕೂಡಿರುವುದರಿಂದ, ಚಕ್ಷುಷಾ=ಕಣ್ಣಿನಿಂದ, ಕದಾ=ಯಾವಾಗ, ದ್ರಕ್ಷ್ಯಾಮಿ= (ನೋಡೇನು) ನೋಡುತ್ತೇನೆ. ಇತ್ಥಂ=ಈ ರೀತಿಯಾಗಿ, ಚತುರಾನನಃ= ಚತುರ್ಮುಖಬ್ರಹ್ಮ ದೇವರು, ವೈಕುಂಠನಗರೀಂ=ವೈಕುಂಠ ನಗರವನ್ನು, ಅಸ್ತೌಷೀತ್= ಸ್ತೋತ್ರ ಮಾಡಿದರು.

**ಭಾವವಿಲಾಸಿನೀ–** ಯುಕ್ತಿತಃ ಸ್ಮೃತಿಮೂಲಯುಕ್ತಿತಃ । ಅತ್ರೈತೇ ಪ್ರಯೋಗಾಃ । ವಿಮತೋ ವೈಕುಂಠಲೋಕಶ್ಚಿದಾತ್ಮಕೋ ಭವಿತುಮರ್ಹತಿ । ಮಾಯಾಮಾಯಾಮಯಯೋರನ್ಯತರತ್ವ ರಹಿತತ್ವಾತ್ ಬ್ರಹ್ಮವತ್ । ವಿಮತೋ ವೈಕುಂಠಲೋಕಃ ಸತ್ಯೋನಿತ್ಯಶ್ಚ ಭವಿತುಮರ್ಹತಿ ಚಿದ್ರೂಪತ್ವಾತ್ ಬ್ರಹ್ಮಚೈತನ್ಯವಜ್ಜೀವಚೈತನ್ಯವದ್ವಾ । ವಿಮತೋ ವೈಕುಂಠಲೋಕೋ ಲಕ್ಷ್ಮ್ಯಾತ್ಮಕೋ ಭವಿತುಮರ್ಹತಿ ಭಗವದ್ಭಿನ್ನತ್ವೇ ಸತಿ ನಿತ್ಯಮುಕ್ತಚೈತನ್ಯಾತ್ಮಕತ್ವಾತ್ ವ್ಯತಿರೇಕೇಣ ಜೀವವದ್ಘಟವದ್ವಾ ॥ ೩೫೫-೩೫೯ ॥

**ವಿವರಣೆ–** ಇದು ಚತುರ್ಮುಖಬ್ರಹ್ಮದೇವರು ಮಾಡಿದ ವೈಕುಂಠದ ವರ್ಣನೆ ಇಲ್ಲಿ 'ಪಾಂಚಕಾಲಿಕರು' ಎಂದರೆ ಐದು ಕಾಲಗಳಲ್ಲಿ ದೇವರನ್ನು ಆರಾಧಿಸುವವರು ಎಂದು ಅರ್ಥ. ಐದು ಕಾಲಗಳೆಂದರೆ ಮೂರು ಸಂಧ್ಯಾಕಾಲಗಳು. ಹಗಲು ಮತ್ತು ರಾತ್ರಿ ಹೀಗೆ ಐದು ಕಾಲಗಳು. ಈ ಕಾಲಗಳಲ್ಲಿ ದೇವರನ್ನು ಪೂಜಿಸುವವರು ಪಾಂಚಕಾಲಿಕರು.

ಅಥವಾ ಪಾಂಚರಾತ್ರಿಕರು ಎಂದೂ ಅರ್ಥ ಮಾಡಬಹುದು.

**ಪಂಚರಾತ್ರೇ ಚತುರ್ವಕ್ತ್ರಸ್ತೋತ್ರೇಷ್ವಾದ್ಯಮಿದಂ ಕಿಲ ॥ ೩೬೦ ॥**

**ಅರ್ಥ–** ಇದಂ=ವೈಕುಂಠದ ಮಹಿಮೆಯನ್ನು ಹೇಳುವ ಈ ಸ್ತೋತ್ರವು ಪಂಚರಾತ್ರೇ= ಪಾಂಚರಾತ್ರಾಗಮದಲ್ಲಿ, ಚತುರ್ವಕ್ತ್ರಸ್ತೋತ್ರೇಷು=ಚತುರ್ಮುಖ ಬ್ರಹ್ಮದೇವರು ಮಾಡಿದ ಸ್ತೋತ್ರಗಳಲ್ಲಿ, ಆದ್ಯಂ ಕಿಲ=ಮೊದಲನೆಯದಾಗಿದೆಯಷ್ಟೇ.

**ಅನುವಾದ–** ಚತುರ್ಮುಖ ಬ್ರಹ್ಮದೇವರು ತಮ್ಮ ನಾಲ್ಕು ಮುಖಗಳಿಂದ ವೈಕುಂಠದ ಮಹಿಮೆಯನ್ನು ಹೇಳುವ ನಾಲ್ಕು ಸ್ತೋತ್ರಗಳನ್ನು ರಚಿಸಿದ್ದಾರೆ. ಆ ನಾಲ್ಕು ಸ್ತೋತ್ರಗಳಲ್ಲಿ ಇದು ಮೊದಲನೆಯ ಸ್ತೋತ್ರವಾಗಿದೆ (ಎಂಬುದಾಗಿ)

ಚತುರ್ವಕ್ತ್ರಸ್ತೋತ್ರೇಷು ಎಂಬ ಶಬ್ದಕ್ಕೆ ಶ್ರೀಸುರೋತ್ತಮ ತೀರ್ಥರು ಹೀಗೆ ವ್ಯಾಖ್ಯಾನ ಮಾಡಿದ್ದಾರೆ.

**ಭಾವವಿಲಾಸಿನೀ–** ಚತುರ್ವಕ್ತ್ರಸ್ತೋತ್ರೇಷು ಚತುರ್ವಕ್ತ್ರೈಃ ಕೃತಸ್ತೋತ್ರ ಚತುಷ್ಟಯೇಷು ॥ ೩೬೦ ॥

ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ।
ಜ್ಞಾನವಿಜ್ಞಾನಯೋಶ್ಚೈವ ಷಣ್ಣಾಂ ಭಗ ಇತೀರಣಾ ।
ಇತ್ಯುಕ್ತೇಃ ಷಡ್ಗುಣಃ ಪೂರ್ಣಜ್ಞಾನವಿಜ್ಞಾನಶಕ್ತಿಮಾನ್ ॥ ೩೬೧ ॥

ಸಂಯುತತ್ವೋಕ್ತಿತಶ್ಚಾಭೂತ್ ಸಮ್ಯಗ್ಯುಕ್ತೋ ಹಿ ತೈರ್ಗುಣೈಃ ।
ಅಪ್ರಾಕೃತಃ ಸುರೈರ್ವಂದ್ಯೋ ಲೋಕೋಽಸೌ ನಹ್ಯಚೇತನಃ ॥ ೩೬೨ ॥

**ಅರ್ಥ–** ಸಮಗ್ರಸ್ಯ=ಪರಿಪೂರ್ಣವಾದ, ಐಶ್ವಯಸ್ಯ=ಐಶ್ವರ್ಯವು, ವೀರ್ಯಸ್ಯ=ವೀರ್ಯವು, ಯಶಸಃ=ಯಶಸ್ಸು, ಶ್ರಿಯಃ=ಕಾಂತಿಯು, ಚ=ಮತ್ತು, ಜ್ಞಾನ-ವಿಜ್ಞಾನಯೋಃ= ಜ್ಞಾನ ಮತ್ತು ವಿಜ್ಞಾನಗಳು, ಪಣ್ಣಾಂ=ಈ ಆರು ಗುಣಗಳಿಗೆ ಭಗಃ ಇತಿ=ಭಗ ಎಂಬುದಾಗಿ ಈರಣಾ=ಹೆಸರು ಇದೆ. ಇತ್ಯುಕ್ತೇಃ=ಹೀಗೆ ಪ್ರಮಾಣವಿರುವುದರಿಂದ, ಚ=ಮತ್ತು, ಸಂಯುತತ್ವೋಕ್ತಿತಃ=ವೈಕುಂಠ ಲೋಕವು (ಭಗವಂತನು) ಈ ಆರು ಗುಣಗಳಿಂದ ಸಂಯುಕ್ತವಾಗಿದೆ ಎಂದು ಹೇಳಿದ್ದರಿಂದಲೂ, ಅಸೌ=ಈ ಲೋಕಃ= ವೈಕುಂಠ ಲೋಕವು, ಪೂರ್ಣಜ್ಞಾನವಿಜ್ಞಾನಶಕ್ತಿಮಾನ್= ಪರಿಪೂರ್ಣವಾದ ಜ್ಞಾನವಿಜ್ಞಾನ ಶಕ್ತಿಯುಳ್ಳದ್ದಾಗಿ, ಚ=ಮತ್ತು, ತೈಃ=ಆ ಪ್ರಸಿದ್ಧವಾದ, ಗುಣೈಃ=ಆರು ಗುಣಗಳಿಂದ, ಸಮ್ಯಗ್ಯುಕ್ತಃ= ಚೆನ್ನಾಗಿ ಕೂಡಿರುವುದಾಗಿ, ಅಭೂತ್ ಹಿ=ಆಗಿದೆಯಷ್ಟೇ.

ಅಸೌ ಲೋಕಃ= ಈ ವೈಕುಂಠಲೋಕವು, ಅಚೇತನಃ ನ ಹಿ=ಅಚೇತನವಲ್ಲ, ಆದ್ದರಿಂದಲೇ ಅದು ಅಪ್ರಾಕೃತಃ=ಪ್ರಾಕೃತವಲ್ಲ ಮತ್ತು, ಸುರೈಃ=ದೇವತೆಗಳಿಂದ ವಂದ್ಯಃ= ನಮಸ್ಕರಿಸಲು ಯೋಗ್ಯವಾಗಿದೆ.

**ಭಾವವಿಲಾಸಿನೀ –** ಷಡ್ಗುಣೋ ವೈಕುಂಠಲೋಕಃ ಶಕ್ತಿಮಾನ್ ಅಭೂದಿತಿ ಸಂಬಂಧಃ ॥ ೩೬೧-೩೬೨॥

**ವಿವರಣೆ–** ವೈಕುಂಠ ಲೋಕವು ಅಪ್ರಾಕೃತವಾಗಿದೆ ಮತ್ತು ಚೇತನಸ್ವರೂಪವಾಗಿದೆ ಎಂಬುದಾಗಿ ಪ್ರಮಾಣಪುರಸ್ಸರವಾಗಿ ರಾಜರು ಇಲ್ಲಿ ಸಮರ್ಥಿಸುತ್ತಾರೆ.

ಐಶ್ವರ್ಯಸ್ಯ ಸಮಗ್ರಸ್ಯ ಎಂಬ ಶ್ಲೋಕದಲ್ಲಿ ಆರು ಗುಣಗಳಿಗೆ ಭಗ ಎಂಬ ಹೆಸರು ಇದೆ. ಈ ಆರು ಗುಣವುಳ್ಳವನು ಭಗವಾನ್ ಎಂದು ಹೇಳಲಾಗಿದೆ. ವಸ್ತುತಃ ಈ ಆರೂ

ಗುಣವುಳ್ಳವನು ಮುಖ್ಯವಾಗಿ ನಾರಾಯಣನೇ ಆಗಿದ್ದಾನೆ. ನಿತ್ಯಮುಕ್ತಳಾದ ಲಕ್ಷ್ಮೀಸ್ವರೂಪವಾದ ವೈಕುಂಠಲೋಕವೂ ಈ ಆರು ಗುಣವುಳ್ಳದ್ದಾಗಿದೆ. ಈ ಆರು ಗುಣವುಳ್ಳದ್ದಾಗಿರುವುದರಿಂದಲೇ ವೈಕುಂಠಲೋಕವು ಶಕ್ತಿಮಾನ್ ಆಗಿದೆ. ವೈಕುಂಠ ಲೋಕವು ಈ ಆರು ಗುಣಗಳಿಂದ ಚೆನ್ನಾಗಿ ಕೂಡಿದೆ ಎಂದು ಹೇಳಿದ್ದರಿಂದಲೂ ಈ ಲೋಕವು ಜಡವಲ್ಲ ಅಪ್ರಾಕೃತವಾಗಿದೆ. ದೇವತೆಗಳಿಂದ ನಮಸ್ಕರಿಸಲು ಅರ್ಹವಾಗಿದೆ ಎಂದು ಸಿದ್ಧವಾಗುತ್ತದೆ.

**ವಿಶೇಷಣತ್ರಯಂ ಹ್ಯೇತತ್ ಶ್ರಿಯಃ ಶ್ರೀಶಸ್ಯ ಚೋಚಿತಮ್ ।**
**ಅತೋಽಪಿ ಶ್ರೀಪತೇರ್ಲೋಕಃ ಶ್ರೀರೂಪೋಽಯಂ ಭವೇದ್ ಧ್ರುವಮ್ ॥ ೩೬೩॥**

**ಅರ್ಥ–** ಹಿ=ಯಾವ ಕಾರಣದಿಂದ, ಏತತ್=ಹಿಂದಿನ ಶ್ಲೋಕದಲ್ಲಿ ಹೇಳಿದ, ವಿಶೇಷಣತ್ರಯಂ=ಮೂರು ವಿಶೇಷಣಗಳೂ, ಶ್ರಿಯಃ=ಲಕ್ಷ್ಮೀದೇವಿಗೆ, ಚ=ಮತ್ತು, ಶ್ರೀಶಸ್ಯ= ಲಕ್ಷ್ಮೀಪತಿಯಾದ ನಾರಾಯಣನಿಗೂ, ಉಚಿತಂ=ಯೋಗ್ಯವಾಗಿವೆಯೋ, ಅತೋಽಪಿ= ಈ ಕಾರಣದಿಂದಲೂ ಕೂಡ, ಅಯಂ=ಈ, ಶ್ರೀಪತೇಃ=ಲಕ್ಷ್ಮೀಪತಿಯಾದ ನಾರಾಯಣನ, ಲೋಕಃ=ವೈಕುಂಠ ಲೋಕವು, ಧ್ರುವಂ=ನಿಶ್ಚಯವಾಗಿಯೂ, ಶ್ರೀರೂಪಃ= ಲಕ್ಷ್ಮೀರೂಪವಾಗಿ, ಭವೇತ್=ಆಗಿರುತ್ತದೆ.

**ಭಾವವಿಲಾಸಿನೀ–** ಏತದ್ವಿಶೇಷಣತ್ರಯಂ ಷಡ್ಗುಣಸಂಯುತತ್ವಾತ್ ಪ್ರಾಕೃತತ್ವ ಸುರವಂದ್ಯ-ತ್ವಾಖ್ಯಮ್ ॥ ೩೬೩ ॥

**ವಿವರಣೆ–** ಆರು ಗುಣಗಳಿಂದ ಕೂಡಿರುವಿಕೆ, ಪ್ರಾಕೃತವಲ್ಲದಿರುವುದು, ಎಲ್ಲ ದೇವತೆಗಳಿಗೂ ನಮಸ್ಕರಿಸಲು ಯೋಗ್ಯವಾದುದು ಎಂಬ ಮೂರು ಗುಣಗಳನ್ನು ಹಿಂದಿನ ಶ್ಲೋಕದಲ್ಲಿ ರಾಜರು ವಿವರಿಸಿದ್ದಾರೆ. ಈ ಮೂರು ಗುಣವುಳ್ಳವರು ಯಾರು? ಎಂಬುದನ್ನು ಪರಿಶೀಲಿಸಿ ವೈಕುಂಠ ಲೋಕವು ಲಕ್ಷ್ಮೀಸ್ವರೂಪವಾಗಿದೆ ಎಂದು ಇಲ್ಲಿ ನಮಸ್ಕರಿಸುತ್ತಿದ್ದಾರೆ.

ಹಿಂದಿನ ಶ್ಲೋಕದಲ್ಲಿ ಹೇಳಿದ ಮೂರೂ ಗುಣವುಳ್ಳವರು ಲಕ್ಷ್ಮೀದೇವಿ ಮತ್ತು ಲಕ್ಷ್ಮೀಪತಿಯಾದ ನಾರಾಯಣರು. ಏಕೆಂದರೆ ಇವರಿಬ್ಬರೂ ನಿತ್ಯಮುಕ್ತರಾದುದರಿಂದ ಈ ಮೂರು ಗುಣವುಳ್ಳವರಾಗಿದ್ದಾರೆ. ಇವರಿಬ್ಬರಲ್ಲಿ ಲಕ್ಷ್ಮೀಪತಿಯಾದ ನಾರಾಯಣನು ವೈಕುಂಠಪತಿ ಆದುದರಿಂದ ಆ ಲೋಕವು ನಾರಾಯಣ ಸ್ವರೂಪವಲ್ಲ ಎಂದು ಹಿಂದೆ ವಿವರಿಸಲಾಗಿದೆ. ಹೀಗಿರುವಾಗ ವೈಕುಂಠ ಸ್ವರೂಪಳಾದವಳು ಲಕ್ಷ್ಮೀದೇವಿಯೇ ಆಗಿದ್ದಾಳೆ. ವೈಕುಂಠವು ಚೇತನ ಸ್ವರೂಪ ಎಂಬುದಾಗಿ ಹಿಂದೆಯೇ ಪ್ರತಿಪಾದಿಸಿರುವುದರಿಂದ, ಆ ಚೇತನವು ಬೇರೆ ಯಾರೂ ಅಲ್ಲ, ಆ ಚೇತನವು ಲಕ್ಷ್ಮೀದೇವಿಯೇ ಆಗಿದ್ದಾಳೆ ಎಂದು ಸಿದ್ಧವಾಗುತ್ತದೆ.

**ಪಠನ್ ಸಹಸ್ರನಾಮಾನಿ ಶಂಭುಬ್ರಹ್ಮೋರ್ಧ್ವಧಾಮಗಃ ।**
**ಇತಿ ಯಂ ಧೂರ್ಜಟಿಃ ಸ್ತೌತಿ ಕಿಂ ತದ್ಧಾಮ ವಿಚಾರ್ಯತಾಮ್ ॥ ೩೬೪ ॥**

**ಅರ್ಥ–** ಸಹಸ್ರನಾಮಾನಿ=ಸಾವಿರ ಹೆಸರುಗಳನ್ನು ಪಠನ್=ಪಠಿಸುವವರಾದ, ಧೂರ್ಜಟಿಃ=ರುದ್ರದೇವರು, ಯಂ=ಯಾವ ಹರಿಯನ್ನು ಶಂಭುಬ್ರಹ್ಮೋರ್ಧ್ವಧಾಮಗಃ= ರುದ್ರಬ್ರಹ್ಮರ ಲೋಕಕ್ಕಿಂತ ಎತ್ತರದ ಲೋಕದಲ್ಲಿರುವವನು, ಇತಿ=ಎಂಬುದಾಗಿ, ಸ್ತೌತಿ= ಸ್ತೋತ್ರ ಮಾಡುತ್ತಾರೆಯೋ, ತದ್ಧಾಮ=ಆ ಲೋಕವು, ಕಿಂ=ಯಾವುದು? ಇತಿ= ಎಂಬುದಾಗಿ, ವಿಚಾರ್ಯತಾಮ್=ವಿಚಾರಿಸಲ್ಪಡಲಿ.

**ಅನುವಾದ–** ಸಹಸ್ರನಾಮಪಠಣೆಯಲ್ಲಿ ನಿಪುಣರಾದ ರುದ್ರದೇವರು ತನ್ನ ಲೋಕವಾದ ಕೈಲಾಸ ಮತ್ತು ಚತುರ್ಮುಖಬ್ರಹ್ಮದೇವರ ಲೋಕವಾದ ಸತ್ಯಲೋಕ. ಈ ಎರಡೂ ಲೋಕಗಳಿಗಿಂತ ಮೇಲ್ಭಾಗದಲ್ಲಿರುವ ಲೋಕದಲ್ಲಿರುವ ಹರಿಯಸ್ತೋತ್ರ ಮಾಡುತ್ತಾರೆ. ಹಾಗಾದರೆ ಈ ಎರಡೂ ಲೋಕಗಳಿಗಿಂತ ಮೇಲ್ಭಾಗದಲ್ಲಿರುವ (ಎತ್ತರದಲ್ಲಿರುವ, ಶ್ರೇಷ್ಠವಾದ) ಲೋಕವು ಯಾವುದು? ಎಂದು ವಿಚಾರಿಸಬೇಕಲ್ಲವೇ? ಹಾಗಿ ವಿಚಾರಿಸಿದಲ್ಲಿ ಆ ಲೋಕವು ವೈಕುಂಠ ಲೋಕವೇ ಆಗುತ್ತದೆ ಅಲ್ಲವೇ?

**ಭಾವವಿಲಾಸಿನೀ–** ಪಠನ್‌ಧೂರ್ಜಟಿರಿತಿ ಸಂಬಂಧಃ । ಯಂ ಲೋಕಂ ಸ್ತೌತಿ ಶಂಭುಬ್ರಹ್ಮಣೋರೂರ್ಧ್ವತ್ವೇನ ಸ್ತೌತಿ ॥ ೩೬೪ ॥

**ಶಂಭುಬ್ರಹ್ಮೋರ್ಧ್ವತಾ ಧಾಮ್ನಃ ತಾಭ್ಯಾಮುತ್ತಮತೈವ ಹಿ ।**
**ಅಹಂಕಾರಾತ್ಮಕಾತ್ ಶಂಭೋಃ ಬ್ರಹ್ಮಣೋ ಮಹದಾತ್ಮಕಾತ್ ।**
**ನಹಿ ವೈಕುಂಠಪೂರೂರ್ಧ್ವಂ ತದ್ ಗುಣೈರೇವ ಸೋಪರಿ ॥ ೩೬೫ ॥**

**ಅರ್ಥ–** ಧಾಮ್ನಃ=ವೈಕುಂಠ ಲೋಕಕ್ಕೆ, ಶಂಭುಬ್ರಹ್ಮೋರ್ಧ್ವತಾ=ರುದ್ರಬ್ರಹ್ಮ ಲೋಕಗಳಿಗಿಂತ ಊರ್ಧ್ವತೆ ಎಂದರೆ, ತಾಭ್ಯಾಂ=ಆ ಎರಡು ಲೋಕಗಳಿಗಿಂತ ಉತ್ತಮತೈವ ಹಿ=ಉತ್ತಮತೆಯೇ ಆಗಿದೆಯಷ್ಟೇ. ಅಹಂಕಾರಾತ್ಮಕಾತ್=ಅಹಂಕಾರತತ್ವಸ್ವರೂಪವಾದ, ಶಂಭೋಃ= ರುದ್ರದೇವರ ಲೋಕವಾದ ಕೈಲಾಸಕ್ಕಿಂತಲೂ, ಮಹದಾತ್ಮಕಾತ್= ಮಹತ್ತತ್ವಸ್ವರೂಪವಾದ, ಬ್ರಹ್ಮಣಃ=ಚತುರ್ಮುಖಬ್ರಹ್ಮದೇವರ ಸತ್ಯ ಲೋಕಕ್ಕಿಂತಲೂ, ವೈಕುಂಠಪೂಃ= ವೈಕುಂಠ ಪಟ್ಟಣವು, ಊರ್ಧ್ವಂ ನಹಿ=ಎತ್ತರದಲ್ಲಿದೆ ಎಂದು ಅರ್ಥ ಅಲ್ಲ, ತದ್= ಆದ್ದರಿಂದ, ಗುಣೈಃ= ಗುಣಗಳಿಂದಲೇ ಆ ಎರಡು ಲೋಕಗಳಲ್ಲಿರುವ ಪ್ರಾಕೃತ ಗುಣಗಳಿಂದಲೇ, ಸಾ=ಆ ಅಪ್ರಾಕೃತವಾದ ವೈಕುಂಠ ಲೋಕವು, ಉಪರಿ=ಶ್ರೇಷ್ಠವಾಗಿದೆ ಎಂದು ಅರ್ಥವನ್ನು ಗ್ರಹಿಸಬೇಕು.

**ಭಾವವಿಲಾಸಿನೀ–** ತಾಭ್ಯಾಂ ಶಂಭುಬ್ರಹ್ಮಭ್ಯಾಮ್ । ನನು ಶಂಭುಬ್ರಹ್ಮಭ್ಯಾಮೂರ್ಧ್ವಭಾಗೇ ಸ್ಥಿತತ್ವಾದೇವೋರ್ಧ್ವತ್ವಮಸ್ತು । ಉತ್ತಮತ್ವಂ ಕುತ ಇತ್ಯತ ಆಹ – **ಅಹಂಕಾರಾತ್ಮಕಾದಿತಿ** ॥ ತತ್ ತಸ್ಮಾತ್ । ಸಾ ವೈಕುಂಠಪೂಃ ॥ ೩೬೫ ॥

**ವಿವರಣೆ–** ಊರ್ಧ್ವ ಶಬ್ದಕ್ಕೆ ಮೇಲೆ ಮತ್ತು ಶ್ರೇಷ್ಠ ಎಂಬ ಎರಡು ಅರ್ಥಗಳಿವೆ. 'ಊರ್ಧ್ವಮೂಲಮಧಃಶಾಖಂ' ಎಂಬ ಭಗವದ್‌ಗೀತೆಯಲ್ಲಿರುವ ಊರ್ಧ್ವ ಶಬ್ದಕ್ಕೆ ಶ್ರೇಷ್ಠ ಎಂಬ ಅರ್ಥವು ಪ್ರಸಿದ್ಧವಾಗಿದೆ. ಪ್ರಕೃತದಲ್ಲಿ -

ರುದ್ರದೇವರ ಕೈಲಾಸಲೋಕವು ಮತ್ತು ಬ್ರಹ್ಮ ದೇವರ ಸತ್ಯಲೋಕವು ಅಹಂಕಾರ ಮತ್ತು ಮಹತ್ ತತ್ತ್ವಾತ್ಮಕವಾಗಿದೆ. ಅವುಗಳು ಪ್ರಾಕೃತವಾಗಿವೆ. ಭಗವಂತನ ಲೋಕವಾದ ವೈಕುಂಠವು ಅಪ್ರಾಕೃತವಾಗಿದೆ. ಅದು ತ್ರಿಗುಣಾತ್ಮಕವಲ್ಲ. ಆದ್ದರಿಂದಲೇ ಆ ಲೋಕವು ಈ ಎರಡು ಲೋಕಗಳಿಗಿಂತ ಶ್ರೇಷ್ಠವಾಗಿದೆ.

ಆದ್ದರಿಂದ ಊರ್ಧ್ವ ಶಬ್ದಕ್ಕೆ ಇರುವ ಶ್ರೇಷ್ಠ ಮತ್ತು ಎತ್ತರ ಎಂಬ ಎರಡು ಅರ್ಥವನ್ನೂ ಇಲ್ಲಿ ಸ್ವೀಕರಿಸಿ ವೈಕುಂಠ ಲೋಕವು ಕೈಲಾಸಸತ್ಯಲೋಕಗಳಿಗಿಂತ ಶ್ರೇಷ್ಠವಾಗಿದೆ ಎಂಬುದಾಗಿಯೇ ಅರ್ಥೈಸಬೇಕು. ಬದಲಾಗಿ ಈ ಎರಡು ಲೋಕಗಳಿಗಿಂತ ಕೇವಲ ಎತ್ತರದಲ್ಲಿ ವೈಕುಂಠ ಲೋಕವಿದೆ ಎಂದು ಅರ್ಥೈಸಬಾರದು.

ಬ್ರಹ್ಮಾದಯೋ ಬಹುತಿಥಂ ಇತಿ ಭಾಗವತೋಕ್ತಿತಃ ।
ಬ್ರಹ್ಮಾದಿಭ್ಯೋ ಗುಣೈರುಚ್ಚಾ ಯಚ್ಛ್ರೀರೇವ ಹರೇಃ ಪ್ರಿಯಾ ।
ಏವಂ ಚ ಲಕ್ಷ್ಮೀರೂಪತ್ವಂ ಲೋಕಸ್ಯ ನ ಕಥಂ ವದ ॥ ೩೬೬ ॥

**ಅರ್ಥ–** ಯತ್=ಯಾವ ಕಾರಣದಿಂದ, ಬ್ರಹ್ಮಾದಯೋ ಬಹುತಿಥಂ ಇತಿ =ಬ್ರಹ್ಮಾದಯೋ ಬಹುತಿಥಂ ಎಂಬುದಾಗಿ, ಭಾಗವತೋಕ್ತಿತಃ=ಭಾಗವತದಲ್ಲಿ ಹೇಳಿದ್ದರಿಂದ, ಶ್ರೀರೇವ= ಲಕ್ಷ್ಮೀದೇವಿಯೇ, ಬ್ರಹ್ಮಾದಿಭ್ಯಃ=ಬ್ರಹ್ಮಾದಿ ದೇವತೆಗಳಿಗಿಂತ ಗುಣೈಃ=ಗುಣಗಳಿಂದ, ಉಚ್ಚಾ=ಶ್ರೇಷ್ಠಳಾಗಿದ್ದಾಳೆ. ಆದ್ದರಿಂದಲೇ ಲಕ್ಷ್ಮೀದೇವಿಯು, ಹರೇಃ=ನಾರಾಯಣನಿಗೆ, ಪ್ರಿಯಾ=ಪ್ರೀತಿಪಾತ್ರಳಾಗಿದ್ದಾಳೆ. ಏವಂ ಚ=ಆದ್ದರಿಂದ, ಲೋಕಸ್ಯ=ವೈಕುಂಠ ಲೋಕಕ್ಕೆ, ಲಕ್ಷ್ಮೀರೂಪತ್ವಂ= ಲಕ್ಷ್ಮೀಸ್ವರೂಪತ್ವವು, ಕಥಂ ನ=ಹೇಗೆ ಇಲ್ಲ? ವದ=ಹೇಳು.

**ಭಾವವಿಲಾಸಿನೀ–** ಬ್ರಹ್ಮಾದಯೋ ಬಹುತಿಥಮಿತ್ಯನೇನ ಬ್ರಹ್ಮಾದಯೋ ಬಹುತಿಥಂ ಯದಪಾಂಗವೋಕ್ಷಕಾಮಾ ಯಥೋಕ್ತವಿಧಿನಾ ಭಗವನ್ ಪ್ರಪನ್ನಾಃ । ಸಾ ಶ್ರೀಃ ಸ್ವವಾಸಮರವಿಂದವನಂ ವಿಹಾಯ ಯತ್ಪಾದಸೌಭಾಗಮಲಂ ಭಜತೇಽನುರಕ್ತಾ ॥ ಇತಿ ಭಾಗವತವಾಕ್ಯಂ ಸಂಗೃಹ್ಣಾತಿ । ಭಗವನ್ನಿತಿ ಧರ್ಮಂ ಪ್ರತಿಧರಾಯಾಃ ಸಂಬುದ್ಧಿಃ । ಅಸ್ಮಿನ್ ಹಿ

ಶ್ಲೋಕೇ ಬ್ರಹ್ಮಾದಿಭ್ಯೋ ಲಕ್ಷ್ಮ್ಯಾ ಉತ್ತಮತ್ವಂ ಪ್ರತಿಪಾದ್ಯತೇ । ತಸ್ಯಾಶ್ಚ ನಾರಾಯಣಸ್ಯ । ಅತಃ ಶಂಭುಬ್ರಹ್ಮೋರ್ಧ್ವತ್ವೇನೋಚ್ಯಮಾನಂ ವೈಕುಂಠಾಖ್ಯಂ ಧಾಮ ಲಕ್ಷ್ಮ್ಯಾತ್ಮಕಮೇವೇತಿ ಭಾವಃ ॥ ೩೬೬ ॥

**ವಿವರಣೆ–** ಶ್ರೀ ವಾದಿರಾಜರು ಬ್ರಹ್ಮಾದಯೋ ಬಹುತಿಥಂ ಎಂಬುದಾಗಿ ಭಾಗವತ ಶ್ಲೋಕದ ಆರಂಭವನ್ನು ಹೇಳಿ ಆ ಶ್ಲೋಕವನ್ನು ಮತ್ತು ಅದರ ಅರ್ಥವನ್ನು ಸಂಗ್ರಹಿಸಿದ್ದಾರೆ. ಭಾಗವತದ ಈ ಶ್ಲೋಕದಲ್ಲಿ ಲಕ್ಷ್ಮೀದೇವಿಯು ಬ್ರಹ್ಮಾದಿ ದೇವತೆಗಳಿಗಿಂತ ಉತ್ತಮಳಾಗಿದ್ದಾಳೆ. ಅವಳಿಗಿಂತ ನಾರಾಯಣನು ಉತ್ತಮನಾಗಿದ್ದಾನೆ. ಎಂದು ಸಮರ್ಥಿಸಿದ್ದಾರೆ. ಲಕ್ಷ್ಮೀದೇವಿಯು ಬ್ರಹ್ಮರುದ್ರಾದಿ ಎಲ್ಲ ದೇವತೆಗಳಿಗಿಂತಲೂ ಉತ್ತಮಳಾದುದರಿಂದ ಅವಳ ಪತಿಯಾದ ನಾರಾಯಣನು ಅವಳಿಗಿಂತಲೂ ಉತ್ತಮನಾದುದರಿಂದ ಸರ್ವದೇವೋತ್ತಮರಾದ ಇವರಿಬ್ಬರಲ್ಲಿ ನಾರಾಯಣನು ವೈಕುಂಠ ಲೋಕದ ಅಧಿಪತಿಯಾದುದರಿಂದ, ಬ್ರಹ್ಮರುದ್ರ ಮೊದಲಾದ ದೇವತೆಗಳ ಲೋಕಕ್ಕಿಂತಲೂ ಉತ್ತಮವಾದ, ನಿತ್ಯಚೇತನಸ್ವರೂಪವಾದ ವೈಕುಂಠ ಲೋಕವು ನಿತ್ಯಮುಕ್ತಳಾದ ಲಕ್ಷ್ಮೀದೇವಿಯ ಸ್ವರೂಪವಾಗಿದೆ ಎಂದು ಒಪ್ಪಲೇಬೇಕಾಗುತ್ತದೆ. ಆದ್ದರಿಂದಲೇ ರಾಜರು ವೈಕುಂಠ 'ಲೋಕವು ಹೇಗೆ ಲಕ್ಷ್ಮೀಸ್ವರೂಪವಾಗುವುದಿಲ್ಲ ಹೇಳು? ಎಂದು ಪೂರ್ವಪಕ್ಷಿಯನ್ನು ಪ್ರಶ್ನಿಸಿದ್ದಾರೆ. ವೈಕುಂಠವು ಲಕ್ಷ್ಮ್ಯಾತ್ಮಕವಾಗಿಯೇ ಇದೆ ಎಂಬುದು ರಾಜರ ಅಭಿಪ್ರಾಯವಾಗಿದೆ.

ಹರೇರನುವ್ರತಾ ಏವ ಮುಕ್ತಾಸ್ತತ್ರಾಪಿ ತೇ ಕಿಲ ।
ಸರ್ವೇ ಚತುರ್ಬಾಹವಶ್ಚ ಶ್ಯಾಮಕೋಮಲಮೂರ್ತಯಃ ॥ ೩೬೭ ॥

ಮಣಿಪ್ರವೇಕಾಭರಣಾಃ ನಿಷ್ಕಕಂಠಾಃ ಸುವರ್ಚಸಃ ॥ ೩೬೮ ॥

ಶ್ರೀವತ್ಸಕೌಸ್ತುಭಾಭಾವಾತ್ ಪೂರ್ಣಶಕ್ತ್ಯಾದ್ಯಭಾವತಃ ।
ವಿಲಕ್ಷಣಾಃ ಪರಂ ಸರ್ವೇಽಪ್ಯಾಕಾರೇ ಸದೃಶಾಃ ಕಿಲ ॥ ೩೬೯ ॥

ಜಗದ್ವ್ಯಾಪಾರವರ್ಜಂ ಚ ವಿನಾ ಶ್ರೀವತ್ಸಕೌಸ್ತುಭೌ ।
ಇತಿ ಸೂತ್ರೇ ಭಾಗವತೇ ಚೋಕ್ತ್ಯಾ ವಿಷ್ಣೋರ್ವಿಲಕ್ಷಣಾಃ ॥ ೩೭೦ ॥

**ಅರ್ಥ–** ತೇ ಮುಕ್ತಾಃ=ಆ ಎಲ್ಲ ಮುಕ್ತರೂ, ತತ್ರ ಅಪಿ=ಮೋಕ್ಷದಲ್ಲಿಯೂ, ಹರೇಃ= ನಾರಾಯಣನನ್ನು ಅನುವ್ರತಾ ಏವ=ಅನುಸರಿಸುವವರೇ ಆಗಿದ್ದಾರೆ. ಕಿಲ=ಈ ವಿಷಯವು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧವೇ ಆಗಿದೆ. ಸರ್ವೇ=ಎಲ್ಲಾ ಮುಕ್ತರು, ಚತುರ್ಬಾಹವಃ=ನಾಲ್ಕು ತೋಳುಗಳುಳ್ಳವರು, ಶ್ಯಾಮಕೋಮಲಮೂರ್ತಯಃ=ಶ್ಯಾಮ ವರ್ಣದ ಕೋಮಲವಾದ ದೇಹ ಉಳ್ಳವರು, ಮಣಿಪ್ರವೇಕಾಭರಣಾಃ=ಮಣಿರತ್ನಾಭರಣಗಳಿಂದ ಅಲಂಕೃತರು,

ನಿಷ್ಕಕಂಠಾಃ=ಕಂಠದಲ್ಲಿ ಸುವರ್ಣಹಾರ ಧರಿಸಿದವರು, ಸುವರ್ಚಸಃ=ಶೋಭನವಾದ ಕಾಂತಿಯುಳ್ಳವರು, ಆದರೂ, ಶ್ರೀವತ್ಸಕೌಸ್ತುಭಾಭಾವಾತ್=ಶ್ರೀವತ್ಸ ಚಿಹ್ನೆ ಮತ್ತು ಕೌಸ್ತುಭ ಮಣಿಗಳಿಲ್ಲದಿರುವುದರಿಂದ, ಪೂರ್ಣೈಶ್ವರ್ಯಾದ್ಯಭಾವತಃ=ಭಗವಂತನಂತೆ ಪೂರ್ಣಜ್ಞಾನ ಪೂರ್ಣಶಕ್ತಿಗಳಿಲ್ಲದಿರುವುದರಿಂದ, ಪರಂ=ಭಗವಂತನಿಗಿಂತ ಅತ್ಯಂತವಾಗಿ, ವಿಲಕ್ಷಣಾಃ= ವಿಭಿನ್ನರಾಗಿದ್ದಾರೆ. ಸರ್ವೇಽಪಿ=ಎಲ್ಲ ಮುಕ್ತರೂ, ಆಕಾರೇ=ರೂಪದಲ್ಲಿ, ಸದೃಶಾಃ ಕಿಲ= ಸದೃಶರಾಗಿಯೇ ಇದ್ದಾರೆ. ಜಗದ್ವ್ಯಾಪಾರ ವರ್ಜಂ ಚ=ಎಲ್ಲ ಮುಕ್ತರೂ ಜಗತ್ತಿನ ಸೃಷ್ಟ್ಯಾದಿ ವ್ಯಾಪಾರ ರಹಿತರಾಗಿದ್ದಾರೆ. ವಿನಾ ಶ್ರೀವತ್ಸ ಕೌಸ್ತುಭೌ ವರ್ತಂತೇ=ಶ್ರೀವತ್ಸ ಚಿನ್ಹೆ ಮತ್ತು ಕೌಸ್ತುಭಮಣಿಗಳಿಲ್ಲದೇ ಇರುತ್ತಾರೆ. ಇತಿ=ಹೀಗೆಂಬುದಾಗಿ, ಸೂತ್ರೇ=ಬ್ರಹ್ಮಸೂತ್ರದಲ್ಲಿಯೂ ಚ=ಮತ್ತು ಭಾಗವತೇ=ಭಾಗವತದಲ್ಲಿಯೂ ಉಕ್ತ್ಯಾ=ಹೇಳಿರುವುದರಿಂದ, ಆ ಎಲ್ಲ ಮುಕ್ತರೂ ವಿಷ್ಣೋಃ=ಭಗವಂತನಿಗಿಂತ, ವಿಲಕ್ಷಣಾಃ=ಅತ್ಯಂತ ಭಿನ್ನರಾಗಿದ್ದಾರೆ.

**ಭಾವವಿಲಾಸಿನೀ–** ಅಸ್ತು ವೈಕುಂಠಸ್ಯ ಮಾಯಾತಿದೂರತ್ವಂ ಲಕ್ಷ್ಮ್ಯಾತ್ಮಕತ್ವಂ ಚ । ತಥಾಪಿ ಪ್ರಕೃತೇ ಕಿಮಾಯಾತಮಿತ್ಯತ ಆಹ – **ಹರೇರಿತಿ** ॥ ಅನೇನ ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ವಂ ಚ ಮಿಶ್ರಂ ನ ಚ ಕಾಲವಿಕ್ರಮಃ ।

''ನ ಯತ್ರ ಮಾಯಾ ಕಿಮುತಾ ಪರೇ ಹರೇರನುವ್ರತಾ ಯತ್ರ ಸುರಾಸುರಾರ್ಚಿತಾಃ । ಶ್ಯಾಮಾವದಾತಾಃ ಶತಪತ್ರಲೋಚನಾಃ ಪಿಶಂಗವಸ್ತ್ರಃ ಸುರುಚಃ ಸುಪೇಶಸಃ । ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕ ನಿಷ್ಕಾಭರಣಾಃ ಸುವರ್ಚಸಃ । ಪ್ರವಾಲವೈಡೂರ್ಯ-ಮೃಣಾಲವರ್ಚಸಾಂ ಪರಿಸ್ಫುರತ್ ಕುಂಡಲಮೌಲಿಮಾಲಿನಾಮ್ । ಭ್ರಾಜಿಷ್ಣುಭಿರ್ಯಃ ಪರಿತೋ ವಿರಾಜಯತೇ ಲಸದ್ವಿಮಾನಾವಲಿಭಿರ್ಮಹಾತ್ಮನಾಮ್ । ವಿದ್ಯೋತಮಾನ-ಪ್ರಮದೋತ್ತಮಾಭಿಃ ಸುವಿದ್ಯುದಭ್ರಾವಲಿಭಿರ್ಯಥಾ ನಭಃ । ಶ್ರೀರ್ಯತ್ರ ರೂಪಿಣ್ಯುರುಗಾಯ ಪಾದಯೋಃ ಕರೋತಿ ಮಾನಂ ಬಹುಧಾಭಾವಿಭೂತಿಭಿಃ । ಇತಿ ಭಗವತ ಶ್ಲೋಕಾನರ್ಥತಃ ಸಂಗೃಹ್ಣಾತಿ ॥ ೩೬೭-೩೭೦ ॥

**ವಿವರಣೆ–** ವೈಕುಂಠ ಲೋಕವು ಅಪ್ರಾಕೃತವಾಗಲಿ. ಅದು ನಿತ್ಯಮುಕ್ತಳಾದ ಲಕ್ಷ್ಮೀಸ್ವರೂಪವೂ ಆಗಲಿ. ಪ್ರಕತದಲ್ಲಿ ಏನು ಹೇಳಿದಂತಾಯಿತು ಎಂಬ ಪ್ರಶ್ನೆಗೆ ಉತ್ತರವಾಗಿ ಆ ಲೋಕವು ಪರಮಮುಕ್ತರ ವಿಹಾರಸ್ಥಾನವಾಗಿದೆ ಎಂಬುದಾಗಿ ಭಾಗವತ ಮತ್ತು ಬ್ರಹ್ಮಸೂತ್ರಗಳ ಪ್ರಮಾಣದಿಂದ ಮುಕ್ತರು ಭಗವಂತನಿಂದ ಭಿನ್ನರಾಗಿದ್ದಾರೆ ಎಂಬುದಾಗಿ ಇಲ್ಲಿ ಸಮರ್ಥಿಸಿದ್ದಾರೆ.

ಮೋಕ್ಷದಲ್ಲಿ ಮುಕ್ತರು ಪರಮಾತ್ಮನಿಗೆ ಸಮಾನವಾದ ಆಕಾರ ಉಳ್ಳವರಾಗಿದ್ದಾರೆ ಯಥೇಚ್ಛವಾಗಿ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಸುಖಪಡುತ್ತಾರೆ. ಆದರೆ ಭಗವಂತನ ಅಸಾಧಾರಣಧರ್ಮವಾದ ಶ್ರೀವತ್ಸ ಚಿನ್ಹೆಯು ಮುಕ್ತರಿಗೆ ಇಲ್ಲ ಮತ್ತು ಜಗತ್ತಿನ ಸೃಷ್ಟಿಸ್ಥಿತಿಸಂಹಾರ - ಮುಂತಾದ ಭಗವಂತನ ಅಸಾಧಾರಣ ವ್ಯಾಪಾರಗಳೂ

ಮುಕ್ತರಲ್ಲಿ ಇಲ್ಲ. ಆದ್ದರಿಂದಲೇ ಮುಕ್ತರು ಭಗವಂತನಿಗಿಂತ ಅತ್ಯಂತ ಭಿನ್ನರಾಗಿದ್ದಾರೆ ಎಂದು ಸಾರೂಪ್ಯಮೋಕ್ಷ ಸ್ವರೂಪವನ್ನು ಇಲ್ಲಿ ವಿವರಿಸಿದ್ದಾರೆ.

ಮೋಕ್ಷದಲ್ಲಿ ಎಲ್ಲ ಜೀವರೂ ಸಮಾನವಾದ ಆನಂದ ಉಳ್ಳವರಾಗಿದ್ದಾರೆ ಎಂಬ ವಿಶಿಷ್ಟಾದ್ವೈತ ಮತದ ಮತ್ತು ಮುಕ್ತಿಯಲ್ಲಿ ಎಲ್ಲ ಮುಕ್ತರೂ ಬ್ರಹ್ಮನಿಂದ ಐಕ್ಯವನ್ನು ಹೊಂದುತ್ತಾರೆ ಎಂಬ ಅದ್ವೈತ ಮತದ ವಿಮರ್ಶೆಯನ್ನು ಈ ಶ್ಲೋಕದಲ್ಲಿ ರಾಜರು ಸೂಚಿಸಿದ್ದಾರೆ. ಸೂತ್ರ ಸ್ಮೃತಿಗಳು ಮುಕ್ತರು ಭಗವಂತನಿಗಿಂತ ಅತ್ಯಂತ ವಿಲಕ್ಷಣರಾಗಿದ್ದಾರೆ. ಅವರೆಲ್ಲರೂ ತಮ್ಮ ತಮ್ಮ ಯೋಗ್ಯತೆಗೆ ತಕ್ಕಂತೆ ಸುಖಪಡುತ್ತಾರೆ ಎಂದು ಹೇಳಿದ್ದರಿಂದ ಮೇಲೆ ಹೇಳಿದ ಎರಡೂ ಮತಗಳ ಅಭಿಪ್ರಾಯವು ಸೂತ್ರ ಸ್ಮೃತಿ ಸಮ್ಮತವಲ್ಲ ಎಂದು ಹೇಳಿದಂತಾಯಿತು.

ಇಲ್ಲಿ ಓಂ ಜಗದ್ವ್ಯಾಪಾರವರ್ಜಂ ಓಂ ಎಂಬ ಬ್ರಹ್ಮ ಸೂತ್ರವನ್ನು ರಾಜರು ಯಥಾವತ್ತಾಗಿ ನಿರ್ದೇಶಿಸಿದ್ದಾರೆ. 'ನ ವರ್ತತೇ ಯತ್ರ' ಇದೇ ಮೊದಲಾದ ಭಾಗವತದ ನಾಲ್ಕು ಶ್ಲೋಕಗಳನ್ನು ಅರ್ಥತಃ ರಾಜರು ಇಲ್ಲಿ ಸ್ವೀಕರಿಸಿದ್ದಾರೆ.

ಭಾಗವತದ ಆ ನಾಲ್ಕು ಶ್ಲೋಕಗಳನ್ನು ಶ್ರೀ ಸುರೋತ್ತಮತೀರ್ಥರು ತಮ್ಮ ವ್ಯಾಖ್ಯಾನದಲ್ಲಿ ಯಥಾವತ್ತಾಗಿ ಅಕ್ಷರಶಃ ಗ್ರಹಣ ಮಾಡಿದ್ದಾರೆ.

**ನ ವರ್ತತೇ ಯತ್ರ ರಜಸ್ತಮಸ್ತಯೋಃ ಸತ್ವಂ ಚ ಮಿಶ್ರಂ ನಚ ಕಾಲವಿಕ್ರಮಃ ।**

ಮುಂತಾದ ಭಾಗವತ ಶ್ಲೋಕಗಳ ಅಭಿಪ್ರಾಯವನ್ನು ಮತ್ತು ಬ್ರಹ್ಮಸೂತ್ರದ ಸಾರವನ್ನು ಶ್ರೀ ರಾಜರು ತಮ್ಮ ಮಾತುಗಳಲ್ಲಿ ಸಂಗ್ರಹಿಸಿದ್ದಾರೆ.

**ಇದಂ ಜ್ಞಾನಮುಪಾಶ್ರಿತ್ಯ ಮಮ ಸಾಧರ್ಮ್ಯಮಾಗತಾಃ ।**
**ಸರ್ಗೇऽಪಿ ನೋಪಜಾಯಂತೇ ಪ್ರಲಯೇ ನ ವ್ಯಥಂತಿ ಚ ॥**
**ಇತಿ ಗೀತಾಸು ಯೇ ಪ್ರೋಕ್ತಾಃ ತ ಏತೇ ಯೋಗಿನಃ ಕಿಲ ॥ ೩೭೧ ॥**

**ಅರ್ಥ–** ಇದಂ=ಈ ಭಗವದ್‌ಗೀತೆಯಲ್ಲಿ ಹೇಳಿದಂತೆ, ಜ್ಞಾನಂ=ಭಗವಂತನು ಸರ್ವೋತ್ತಮನಾಗಿದ್ದಾನೆ ಎಂಬ ಜ್ಞಾನವನ್ನು ಉಪಾಶ್ರಿತ್ಯ=ಆಶ್ರಯಿಸಿ (ಹೊಂದಿ) ಮಮ= ನನ್ನ (ಶ್ರೀಕಷ್ಣನು_ ಸಾಧರ್ಮ್ಯಂ=ಸಮಾನ ಧರ್ಮವನ್ನು, ಆಗತಾಃ=ಹೊಂದಿದವರಾಗಿ, ಸರ್ಗೇ ಅಪಿ= ಸೃಷ್ಟಿಕಾಲದಲ್ಲಿಯೂ, ನ ಜಾಯಂತೇ=ಹುಟ್ಟುವುದಿಲ್ಲ. ಪ್ರಲಯೇ=ಪ್ರಲಯ ಕಾಲದಲ್ಲಿ, ನ ವ್ಯಥಂತಿ ಚ=ನಷ್ಟರಾಗುವುದಿಲ್ಲ. ಇತಿ=ಹೀಗೆಂಬುದಾಗಿ ಗೀತಾಸು= ಭಗವದ್‌ಗೀತೆಯಲ್ಲಿ, ಯೇ=ಯಾರು, ಪ್ರೋಕ್ತಾಃ=ಹೇಳಲ್ಪಟ್ಟಿದ್ದಾರೆಯೋ ಅವರು, ಏತೇ ಏವ= ಇವರೇ ಯೋಗಿನಃ ಕಿಲ=ಯೋಗಿಗಳೆನಿಸಿದ್ದಾರೆ. ಮುಕ್ತಜ್ಞಾನಿಗಳಾಗಿದ್ದಾರೆ ಎಂಬು ಪ್ರಸಿದ್ಧವಾದ ವಿಷಯವಾಗಿದೆ.

**ಭಾವವಿಲಾಸಿನೀ–** ಏವಂ ಚ ಭಾಗವತೋಕ್ತಂ ಸಂಸಾರದಶಾಯಾಮ್ । ಶ್ರೀವತ್ಸಕೌಸ್ತುಭೌ ವಿನಾ ವಿದ್ಯಮಾನೈಷ್ಷೋಡಶಕಲಾಭಿಮಾನಿಭಿರ್ಮುಕ್ತದೇವೈರುಪಾಸೀನಾಮಿತ್ಯುಕ್ತ್ವಾ ಮುಕ್ತ-ಸ್ವರೂಪನಿರೂಪಕಸೂತ್ರೇ ಮುಕ್ತಾನಾಂ ಜಗತ್ ಸೃಷ್ಟ್ಯಾದಿವ್ಯಾಪರಾಶೂನ್ಯತ್ವೋಕ್ತ್ಯಾ ಚಾನುಭೂಯಮಾನತ್ವಾತ್ ಜ್ಞಾನೈಕಸಾಧ್ಯಂ ಶುಕವಾಮದೇವಾದೀನಾಂ ಜೀವನ್ಮುಕ್ತಿದಶಾಯಾಂ ಚ ನ ಸಾಧಾರಣಾನ್ಯಸ್ವಯೋಗ್ಯಬಹುತರಭಗವದ್ಧರ್ಮಾಕಾರಸಾದೃಶ್ಯಾಖ್ಯ ಸಾರೂಪ್ಯಮೇವ । ಗೀತೋಕ್ತಂ ಸಾಧರ್ಮ್ಯಮಪಿ । ನ ತು ಸರ್ವಧರ್ಮ ಸಾಧರ್ಮ್ಯಮಿತಿ ಭಾವೇನಾಹ – ಇದಂ **ಜ್ಞಾನಮಿತಿ** ॥ ಏತೇ ಭಾಗವತೋಕ್ತಾಃ । ಅತ ಏವ ಗೀತಾಯಾಮಪಿ ಸರ್ವಸಾದೃಶ್ಯಂ ನೇತಿ ಸೂಚನಾಯ ಸ್ವಯೋಗ್ಯಭಗವದ್ಧರ್ಮಸದೃಶಧರ್ಮಾಂತರೋಪಲಕ್ಷಣತಯಾ ಸರ್ಗಪ್ರಲಯಾ-ಭಾವಯೋರೇವ ನಿರೂಪಣಮ್ ॥ ೩೭೦ ॥

**ವಿವರಣೆ–** ಭಾಗವತ ಬ್ರಹ್ಮಸೂತ್ರಗಳನ್ನು ಉದಾಹರಿಸಿ ಮುಕ್ತರ ವೈಭವವನ್ನು ನಿರೂಪಿಸಿದ ರಾಜರು ಭಗವದ್‌ಗೀತೆಯನ್ನು ಉದಾಹರಿಸಿ ಮುಕ್ತರ ವೈಭವವನ್ನು ಈ ಶ್ಲೋಕದಲ್ಲಿ ಮಂಡಿಸಿದ್ದಾರೆ.

ಭಗವದ್‌ಗೀತೆಯಲ್ಲಿ ನಿರೂಪಿಸಿದಂತೆ ಭಗವಂತನ ತತ್ವಜ್ಞಾನವನ್ನು ಪಡೆದು ಮುಕ್ತರಾದ ಜೀವರು ಭಗವಂತನ ಸಮಾನ ಧರ್ಮವುಳ್ಳವರಾಗುತ್ತಾರೆ ಎಂದು ಭಗವಂತನೇ ಗೀತೆಯಲ್ಲಿ ಹೇಳಿದ್ದಾನೆ. ಇಲ್ಲಿ ಸಾಮ್ಯವನ್ನು ಹೊಂದುತ್ತಾರೆ ಎಂದರೆ ಸರ್ವಧರ್ಮಗಳಿಂದ ಸಾಮ್ಯ ಎಂದು ತಿಳಿಯಬಾರದು ಹಾಗಾದರೆ ಯಾವ ಧರ್ಮಗಳಿಂದ ಸಾಮ್ಯವನ್ನು ಹೊಂದುತ್ತಾರೆ ಎಂಬ ಪ್ರಶ್ನೆಗೆ ಉತ್ತರವಾಗಿ ಕೃಷ್ಣನೇ ಆ ಸಮಾನಧರ್ಮಗಳನ್ನು ಅದೇ ಶ್ಲೋಕದಲ್ಲಿ ನಿರೂಪಿಸಿದ್ದಾನೆ. ಭಗವಂತನ ಸ್ವಾಧರ್ಮವನ್ನು ಹೊಂದಿದ ಮುಕ್ತರು ಪ್ರಲಯ ಕಾಲ ಮುಗಿದ ನಂತರ ಸೃಷ್ಟಿಕಾಲದಲ್ಲಿ ಹುಟ್ಟುವುದಿಲ್ಲ. ಆದ್ದರಿಂದಲೇ ಸೃಷ್ಟಿ ಕಾಲದ ಕೊನೆಯ ಪ್ರಲಯ ಕಾಲದಲ್ಲಿ ಅವರು ನಾಶವಾಗುವುದಿಲ್ಲ. ಎಂದರೆ ಮುಕ್ತರಿಗೆ ಜನನ ಮರಣಗಳು ಇರುವುದಿಲ್ಲ. ಭಗವಂತನಿಗೂ ಜನನ ಮರಣಗಳಿಲ್ಲ. ಮುಕ್ತರಿಗೂ ಜನನ ಮರಣಗಳಿಲ್ಲ. ಈ ಎರಡು ಧರ್ಮಗಳಿಂದ ಮಾತ್ರ ಮುಕ್ತರು ಭಗವಂತನಿಗೆ ಸಮಾನರಾಗಿದ್ದಾರೆಯೇ ಹೊರತು ಸರ್ವಧರ್ಮಗಳಿಂದ ಸಮಾನರಾಗಿಲ್ಲ.

ಏವಂ ಚ ಜನನಾಭಾವಾತ್ ಮರಣಾಭಾವತಸ್ತಥಾ ।
ಜಡದೇಹಾದ್ಯಭಾವಾಚ್ಚ ದುಃಖಾಭಾವಾಚ್ಚ ಸರ್ವದಾ ॥ ೩೭೨ ॥

ಜ್ಞಾನಾನಂದಮಯಾಕಾರಾಃ ನಿತ್ಯಂ ಚ ಸುಖಭುಕ್ತ್ವತಃ ।
ಮುಕ್ತಿರ್ವಿಲಕ್ಷಣಾ ಬಂಧಾತ್ ಜೀವಾಃ ಸರ್ವೇ ದ್ವಯೋಃ ಸಮಾಃ ।
ತ್ರಿವಿಧಾಃ ಸಂತಿ ಸಂಸಾರೇ ಶುದ್ಧಾ ಏವ ವಿಮುಕ್ತಿಗಾಃ ॥ ೩೭೩ ॥

**ಅರ್ಥ–** ಏವಂ ಚ=ಈವರೆಗೆ ಹೇಳಿದುದರ ಸಾರವೇನೆಂದರೆ, ಜನನಾಭಾವಾತ್= ಹುಟ್ಟುವಿಕೆ ಇಲ್ಲದಿರುವುದರಿಂದ, ತಥಾ=ಹಾಗೆಯೇ, ಮರಣಾಭಾವತಃ=ಮರಣವಿಲ್ಲ ದಿರುವುದರಿಂದ, ಚ=ಮತ್ತು, ಜಡದೇಹಾದ್ಯಭಾವಾತ್=ಪ್ರಾಕೃತವಾದ ದೇಹಗಳು ಮತ್ತು ಪ್ರಾಕೃತವಾದ ಇಂದ್ರಿಯಗಳು ಇಲ್ಲದಿರುವುದರಿಂದ, ಸರ್ವದಾ=ಯಾವಾಗಲೂ, ದುಃಖಾಭಾವಾತ್ ಚ= ದುಃಖ ಇಲ್ಲದಿರುವುದರಿಂದಲೂ ಆ ಮುಕ್ತರು ಜ್ಞಾನಾನಂದಮಯಾಕಾರಾಃ=ಜ್ಞಾನಾನಂದ ಸ್ವರೂಪಗಳಾದ ದೇಹ ಉಳ್ಳವರು. ನಿತ್ಯಂ= ಯಾವಾಗಲೂ, ಸುಖಭುಕ್ತ್ವತಃ=ಸ್ವರೂಪಸುಖವನ್ನು ಅನುಭವಿಸುವುದರಿಂದಲೂ, ಮುಕ್ತಿಃ= ಇಂತಹ ಸುಖಭೋಗಸ್ಥಾನವಾದ ಮೋಕ್ಷವು, ಬಂಧಾತ್= ಬಂಧರೂಪವಾದ ಸಂಸಾರಕ್ಕಿಂತ, ವಿಲಕ್ಷಣಾ=ವಿರುದ್ಧಧರ್ಮಉಳ್ಳದ್ದಾಗಿದೆ. ಸರ್ವೇಜೀವಾಃ= ಮುಕ್ತಾಮುಕ್ತರಾದ ಎಲ್ಲ ಜೀವರೂ, ದ್ವಯೋಃ=ಬಂಧ ಮೋಕ್ಷಗಳಲ್ಲಿ, ಸಮಾಃ= ಸಮಾನರಾಗಿದ್ದಾರೆ; ಸಂಸಾರೇ=ಸಂಸಾರದಲ್ಲಿ ತ್ರಿವಿಧಾಃ=ಮುಕ್ತಿ ಯೋಗ್ಯರು, ತಮೋ ಯೋಗ್ಯರು ಮತ್ತು ನಿತ್ಯಸಂಸಾರಿಗಳೆಂಬ ಮೂರು ವಿಧ ಜೀವರು, ಸಂತಿ= ಇದ್ದಾರೆ. ಶುದ್ಧಾಃ ಏವ=ಈ ಮೂರು ವಿಧ ಜೀವರೆಲ್ಲ ಶುದ್ಧಸ್ವರೂಪರಾದವರೇ, ವಿಮುಕ್ತಿಗಾಃ= ಮುಕ್ತಿಯಲ್ಲಿರುತ್ತಾರೆ.

**ಭಾವವಿಲಾಸಿನೀ– ಏತದೇವ ದರ್ಶಯತಿ ॥ ಏವಂ ಚೇತಿ ॥ ಇದಂ ಚ ಚತುರ್ಬಾಹುತ್ವಾದ್ಯಾಕಾರಾಭರಣಾದಿಸಾದೃಶ್ಯಸ್ಯಾಪ್ಯುಪಲಕ್ಷಣಮ್ । ದ್ವಯೋರ್ಬಂಧ- ಮೋಕ್ಷಯೋಃ । ಇಯಾಂಸ್ತು ವಿಶೇಷ ಇತ್ಯಾಹ – ತ್ರಿವಿಧಾ ಇತಿ ॥ ತ್ರಿವಿಧಾಃ ಮುಕ್ತಿಯೋಗ್ಯ- ಸ್ತಮೋಯೋಗ್ಯಾ ನಿತ್ಯಸಂಸಾರಿಣಶ್ಚೇತಿ । ಶುದ್ಧಾಃ ಶುಭಜೀವಾಃ ॥ ೩೭೨-೩೭೩ ॥**

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದ ವಿಷಯವನ್ನೇ ಈ ಶ್ಲೋಕದಲ್ಲಿ ಸ್ಪಷ್ಟಪಡಿಸುತ್ತಾರೆ.

ಮುಕ್ತಜೀವರು ಜನನಮರಣಗಳಿಲ್ಲದಿರುವಿಕೆ ಎಂಬ ಧರ್ಮದಿಂದ ಮಾತ್ರ ಭಗವಂತನಿಗೆ ಸಮಾನರಲ್ಲ, ಹಿಂದೆ ವಿವರಿಸಿದಂತೆ, ನಾಲ್ಕು ತೋಳುಗಳುಳ್ಳವರಾಗಿದ್ದಾರೆ; ಮಣಿ ಮುಂತಾದ ಆಭರಣಗಳಿಂದ ಯುಕ್ತರಾಗಿದ್ದಾರೆ ಎಂಬ ಧರ್ಮಗಳಿಂದಲೂ ಭಗವಂತನಿಗೆ ಸಮಾನರಾಗಿದ್ದಾರೆ. ಅಷ್ಟೇ ಅಲ್ಲ, ಪ್ರಾಕೃತ ದೇಹ ಅವರಿಗಿಲ್ಲ, ಜ್ಞಾನಾನಂದಾತ್ಮಕ ಶರೀರ ಉಳ್ಳವರಾಗಿದ್ದಾರೆ. ನಿತ್ಯ ಸುಖಭೋಕ್ತೃಗಳಾಗಿದ್ದಾರೆ. ಈ ಧರ್ಮಗಳಿಂದಲೂ ಅವರು ಭಗವಂತನಿಗೆ ಸದೃಶರಾಗಿದ್ದಾರೆ. ಆದ್ದರಿಂದಲೇ ಅವರು ಸಂಸಾರಿಜೀವರಿಗಿಂತ ಅತ್ಯಂತ ವಿಲಕ್ಷಣರಾಗಿದ್ದಾರೆ.

ಜೀವರು ಸಂಸಾರದಲ್ಲಿಯೂ ಮತ್ತು ಮೋಕ್ಷದಲ್ಲಿಯೂ ಜೀವರಾಗಿಯೇ ಇರುತ್ತಾರೆ. ಆದರೆ ಸಂಸಾರಿಜೀವರಲ್ಲಿ ಮುಕ್ತಿಯೋಗ್ಯರು, ತಮೋಯೋಗ್ಯರು ಮತ್ತು

ನಿತ್ಯಸಂಸಾರಿಗಳು ಎಂಬುದಾಗಿ ಮೂರು ವಿಧ ಜೀವರಿದ್ದಾರೆ. ಈ ಮೂರು ವಿಧರಲ್ಲಿ ಯಾರು ಶುದ್ಧಚೇತನರೋ ಅವರು ಮುಕ್ತಿಯೋಗ್ಯಜೀವರಾಗಿದ್ದಾರೆ. ತಮೋ-ಯೋಗ್ಯರಿಗೆ ಮತ್ತು ನಿತ್ಯಸಂಸಾರಿಗಳಿಗೆ ಯಾವ ಕಾರಣದಿಂದಲೂ ಮುಕ್ತಿಯು ದೊರೆಯುವುದಿಲ್ಲ.

**ಅಶ್ವೋ ಮಾನ್ಯೋ ಗಜೋ ಮಾನ್ಯೋ ಧೇನುರ್ಮಾನ್ಯಾ ದಿವೌಕಸಾಮ್ ।**
**ವೃಕ್ಷಃ ಕಲ್ಪತರುರ್ಮಾನ್ಯಃ ಸರ್ಪೋ ಮಾನ್ಯೋ ಹರೇಃ ಪ್ರಿಯಃ ॥ ೩೭೪ ॥**

**ಅರ್ಥ–** ದಿವೌಕಸಾಂ=ದೇವತೆಗಳ, ಅಶ್ವಃ=ಸ್ವರ್ಗದಲ್ಲಿರುವ ಉಚ್ಚೈಃಶ್ರವ ಎಂಬ ಕುದುರೆಯು ಮಾನ್ಯಃ=ಪೂಜ್ಯವಾಗಿದೆ. ಗಜಃ=ಐರಾವತವು, ಮಾನ್ಯಃ=ಪೂಜಾರ್ಹವಾಗಿದೆ. ಧೇನುಃ= ಕಾಮಧೇನುವು, ಮಾನ್ಯಾ=ಪೂಜ್ಯವಾಗಿದೆ, ವೃಕ್ಷಃ=ಮರವಾಗಿರುವ, ಕಲ್ಪತರುಃ= ಕಲ್ಪವಕ್ಷವು, ಮಾನ್ಯಃ=ಪೂಜ್ಯವಾಗಿದೆ. ಹರೇಃ=ಶ್ರೀಹರಿಗೆ, ಪ್ರಿಯಃ=ಪ್ರೀತಿಪಾತ್ರವಾದ, ಸರ್ಪಃ= ಶೇಷದೇವರೂ, ಮಾನ್ಯಃ=ಪೂಜ್ಯರೇ ಆಗಿದ್ದಾರೆ.

**ಭಾವವಿಲಾಸಿನೀ– ಪಶುಪಕ್ಷ್ಯಾದಿಯೋನೀನಾಂ ಹೀನಯೋನಿತ್ವಂ ಸ್ವರ್ಗಸ್ಥಜಗತ್ಪೂಜ್ಯ-ಪಶುಪಕ್ಷ್ಯಾದಿ ನಿದರ್ಶನೇನ ಪರಿಹರನ್ ವೈಕುಂಠಪುರೇಽಪಿ ಪುರೋಚಿತಾ ಪ್ರಾಕೃತ-ಜ್ಞಾನಾನಂದಾತ್ಮಕನಾನಾಜೀವಸದ್ಭಾವಮನುಭವಾರೂಢಂ ಕರೋತಿ ॥ ಅಶ್ವ ಇತ್ಯಾದಿನಾ ॥ ಅಶ್ವ ಉಚ್ಚೈಃ ಶ್ರವಾಃ । ಗಜ ಐರಾವತಃ । ಧೇನುಃ ಕಾಮಧೇನುಃ । ಸರ್ಪಃ ಶೇಷಃ ॥ ೩೭೪ ॥**

**ವಿವರಣೆ–** ಮೋಕ್ಷದಲ್ಲಿ ಕುದುರೆ, ಆನೆ, ಹಸು, ವೃಕ್ಷ, ಸರ್ಪ ಮುಂತಾದ ಎಲ್ಲ ವಿಧ ಜೀವರಾಶಿಗಳೂ ಇದ್ದಾರೆ. ಅವರೆಲ್ಲರೂ ಅಪ್ರಾಕೃತವಾದ ಶರೀರ ಉಳ್ಳವರೇ ಜ್ಞಾನಾನಂದಾದಿ ಸ್ವರೂಪರೇ ಆಗಿದ್ದಾರೆ. ಆಯಾಯಾ ಜೀವನ ಸ್ವರೂಪಕ್ಕೆ ತಕ್ಕಂತೆ ಅವರವರು ತಮ್ಮ ತಮ್ಮ ಸ್ವರೂಪ ಶರೀರಗಳಿಂದ ಮುಕ್ತಿಯಲ್ಲಿ ಇದ್ದಾರೆ. ಅಂದ ಮಾತ್ರಕ್ಕೆ ಅವು ಹೀನ ಯೋನಿಗಳಲ್ಲ ಅವರೆಲ್ಲರೂ ಪೂಜ್ಯರೇ ಆಗಿದ್ದಾರೆ.

ಈ ವಿಷಯದಲ್ಲಿ ಒಂದು ಉದಾಹರಣೆಯನ್ನು ರಾಜರು ಈ ಶ್ಲೋಕದಲ್ಲಿ ಹೇಳಿದ್ದಾರೆ. ಸ್ವರ್ಗ ಲೋಕದಲ್ಲಿರುವ, ಸಂಸಾರಿಗಳಾದ, ಪ್ರಾಕೃತ ದೇಹವುಳ್ಳ, ಉಚ್ಚೈಃಶ್ರವ ಎಂಬ ಕುದುರೆ, ಐರಾವತ ಎಂಬ ಆನೆ, ಕಾಮಧೇನು ಎಂಬ ಹಸು, ಕಲ್ಪವೃಕ್ಷವೆಂಬ ವೃಕ್ಷ ಭಗವಂತನಿಗೆ ಪ್ರಿಯನಾದ ಶೇಷದೇವ, ಇವರೇ ಎಲ್ಲರಿಗೂ ಪೂಜ್ಯರಾಗಿರುವಾಗ, ಮೋಕ್ಷದಲ್ಲಿರುವ ಅಪ್ರಾಕೃತರಾದ ದುಃಖದ ಲೇಶವೂ ಇಲ್ಲದ ಮುಕ್ತರಾದ ಕುದುರೆ, ಆನೆ, ಹಸು, ಮರ ಜೀವರು, ತೃಣ ಜೀವರು, ಸರ್ಪ ಮೊದಲಾದವರು ಹಾಗೆ ಕೀಟಗಳು ಇವರೆಲ್ಲರೂ ಅಪ್ರಾಕೃತಕಾಶರೀರಿಗಳಾದ್ದರಿಂದ ಚಿದಾನಂದಾದ್ಯಾತ್ಮಕರಾದುದರಿಂದ ಎಲ್ಲರಿಂದಲೂ ಪೂಜ್ಯರಾಗಿದ್ದಾರೆ ಎಂಬ ವಿಷಯವನ್ನು ಹೇಳುವುದೇನಿದೆ? ಹೇಳಬೇಕಾದ ಕಾರಣವೇ ಇಲ್ಲ. ಅವರೆಲ್ಲರೂ ಪೂಜ್ಯರೇ ಆಗಿದ್ದಾರೆ.

**ಪಕ್ಷೀ ವಿಷ್ಣುರಥೋ ಮಾನ್ಯಃ ಲೋಕೋ ಮಾನ್ಯೋ ಹಿ ಯೋಽರ್ಥ್ಯತೇ ।**
**ಸ್ತ್ರಿಯಶ್ಚಾಪ್ಸರಸೋ ಮಾನ್ಯಾಃ ಶ್ವಾನಾವಪಿ ಚ ನಾಕಿನಾಮ್ ॥ ೩೭೫ ॥**

**ಅರ್ಥ–** ವಿಷ್ಣುರಥಃ= ವಿಷ್ಣುವಾಹನನಾದ, ಪಕ್ಷೀ=ಪಕ್ಷಿಯಾದ ಅಮುಕ್ತಗರುಡನು, ಮಾನ್ಯಃ=ಪೂಜ್ಯನಾಗಿದ್ದಾನೆ. ಯಃ=ಯಾವ ಸ್ವರ್ಗಲೋಕವು, ಅರ್ಥ್ಯತೇ=ಯಜ್ಞ ಯಾಗಾದಿಗಳನ್ನು ಆಚರಿಸುವುದರ ಮೂಲಕ ಸಜ್ಜನರಿಂದ ಪ್ರಾರ್ಥಿಸಲ್ಪಡುತ್ತದೆಯೋ. ಲೋಕಃ=ಆ ಅಮರಾವತೀ ಎಂಬ ಲೋಕವೂ, ಮಾನ್ಯಃ= ಪೂಜ್ಯವೇ ಅಪ್ಸರಸಃ= ದೇವಸಭೆಯಲ್ಲಿ ನಾಟ್ಯವಾಡುವ ಅಪ್ಸರ ಸ್ತ್ರೀಯರೂ, ಮಾನ್ಯಾಃ=ಪೂಜ್ಯರೇ ಆಗಿದ್ದಾರೆ. ನಾಕಿನಾಂ= ದೇವತೆಗಳ ಶ್ವಾನೌ ಅಪಿ=ಶ್ಯಾಮ ಮತ್ತು ಶಬಲಗಳೆಂಬ ಎರಡು ನಾಯಿಗಳೂ ಕೂಡ ಮಾನ್ಯೌ ಏವ=ಪೂಜ್ಯಗಳೇ ಆಗಿದೆ.

**ಭಾವವಿಲಾಸಿನೀ–** **ಲೋಕಃ ಅಮರವತ್ಯಾಖ್ಯೋ ಲೋಕಃ । ಅರ್ಥ್ಯತೇ ಯಜ್ಞಾದಿಭಿಃ ಪ್ರಾರ್ಥ್ಯತೇ ॥ ೩೭೫ ॥**

**ವಿವರಣೆ–** ವಿಷ್ಣುವಾಹನನಾದ ಗರುಡ, ಎಲ್ಲರಿಂದಲೂ ಅಪೇಕ್ಷೆಪಡುವ ಪ್ರಾಕೃತವಾದ ಸ್ವರ್ಗಲೋಕ, ಅಪ್ಸರೆಯರು, ಶ್ಯಾಮ ಶಬಲ ಎಂಬ ಹೆಸರುಳ್ಳ ಎರಡು ನಾಯಿಗಳು ಇವುಗಳೇ ಪೂಜ್ಯರಾಗಿರುವಾಗ ವೈಕುಂಠದಲ್ಲಿರುವ ಅಪ್ರಾಕೃತವಾದ ಪಶುಪಕ್ಷಿಗಳು ಮತ್ತು ಅಪ್ರಾಕೃತವಾದ ಪದಾರ್ಥಗಳು ಪೂಜ್ಯವಾಗಿವೆ ಎಂದು ಹೇಳಬೇಕಾದ್ದೇನಿದೆ. ಅಲ್ಲಿರುವ ಪ್ರತಿಯೊಬ್ಬ ಜೀವನೂ ಪ್ರತಿಯೊಂದು ಪದಾರ್ಥವೂ ಪೂಜ್ಯವೇ ಆಗಿದೆ.

**ಮಾನ್ಯೌ ಕಿಲ ಶ್ಯಾಮನಾಮಾ ಶಬಲಾಖ್ಯಶ್ಚ ಯಃ ಶ್ರುತಃ ।**
**ಭೂಲೋಕೇ ಸ್ಥಿತಪಶ್ವಾದೇಃ ಸ್ವರ್ಗಲೋಕೇ ಸ್ಥಿತೇ ಯದಾ ॥ ೩೭೬ ॥**

**ಪೂಜ್ಯತಾ ಪ್ರಾಕೃತೇಽಪ್ಯರ್ಥೇ ತದಾ ವಿಷ್ಣೋಃ ತ್ರಿಧಾಮಸು ।**
**ಸ್ಥಿತಾನಾಂ ಶುದ್ಧಸತ್ವಾನಾಂ ಜ್ಞಾನಾನಂದಸ್ವರೂಪಿಣಾಮ್ ।**
**ಶ್ರುತಿಸ್ಮೃತೀತಿಹಾಸಾದ್ಯೈಃ ಸ್ತುತಾನಾಂ ಕಿಂ ನ ಪೂಜ್ಯತಾ ॥ ೩೭೭ ॥**

**ಉತ್ತರೋತ್ತರವಸ್ತೂನಾಂ ಉತ್ತಮೋತ್ತಮತೋಚಿತಾ ।**
**ಮುಕುಂದನಗರೀಸ್ಥಾನಾಂ ಮುಕ್ತತ್ವೈವ ಗುಣೋಚಿತಾ ॥ ೩೭೮ ॥**

**ಅರ್ಥ–** ಶ್ಯಾಮನಾಮಾ=ಶ್ಯಾಮ ಎಂಬ ಹೆಸರುಳ್ಳ, ಚ=ಮತ್ತು, ಶಬಲಾಖ್ಯ=ಶಬಲ ಎಂಬ ಹೆಸರುಳ್ಳ, ಯಃ=ಈ ಎರಡು ನಾಯಿಗಳ ದ್ವಯವು, ಶ್ರುತಃ=ಯೌ ತೇ ಶ್ವಾನೌ ಎಂಬ ವೇದವಾಕ್ಯದಲ್ಲಿ ಉಕ್ತವಾದುದರಿಂದ, ಮಾನ್ಯೌ ಕಿಲ=ಪೂಜ್ಯವಾಗಿದೆಯಷ್ಟೇ. ಯದಾ= ಯಾವಾಗ, ಭೂಲೋಕೇ=ಭೂಲೋಕದಲ್ಲಿ ಸ್ಥಿತಪಶ್ವಾದೇಃ=ಇರುವ ಪಶು ಪಕ್ಷಿ ವೃಕ್ಷ

ಮುಂತಾದವುಗಳಿಗೆ, ಸ್ವರ್ಗಲೋಕೇ ಸ್ಥಿತೇ= ಸ್ವರ್ಗಲೋಕದಲ್ಲಿರುವ, ಪ್ರಾಕೃತೇ ಅರ್ಥೇಪಿ= ಹೀನ ಪ್ರಕೃತಿ ನಿರ್ಮಿತ ವಸ್ತುವಿನಲ್ಲಿಯೂ, ಪೂಜ್ಯತಾ=ಪೂಜ್ಯತೆಯು ಇದೆಯೋ, ತದಾ=ಆವಾಗ ವಿಷ್ಣೋಃ=ಪರಮಾತ್ಮನ, ತ್ರಿಧಾಮಸು=ಶ್ವೇತದ್ವೀಪ, ಅನಂತಾಸನ, ವೈಕುಂಠ ಈ ಮೂರು ಲೋಕಗಳಲ್ಲಿ ಸ್ಥಿತಾನಾಂ=ಇರುವ, ಶುದ್ಧಸತ್ವಾನಾಂ=ಶುದ್ಧ ಸತ್ವ ಸ್ವರೂಪವುಳ್ಳ, ಜ್ಞಾನಾನಂದಸ್ವರೂಪಿಣಾಂ=ಜ್ಞಾನಾನಂದ ಸ್ವರೂಪಿಗಳಾದ, ಶ್ರುತಿಸ್ಮೃತಿ ಇತಿಹಾಸಾದ್ಯೈಃ= ಶ್ರುತಿಸ್ಮೃತಿ ಇತಿಹಾಸಗಳಿಂದ, ಸ್ತುತಾನಾಂ=ಸ್ತೋತ್ರ ಮಾಡಲ್ಪಡುವ ಮುಕ್ತರಿಗೆ ಪೂಜ್ಯತಾ= ಪೂಜ್ಯತೆಯು, ನ ವಿದ್ಯತೇ ಕಿಂ=ಇರುವದಿಲ್ಲವೇನು? ಇದ್ದೇ ಇದೆ. ಉತ್ತರೋತ್ತರ- ವಸ್ತೂನಾಂ= ಮೇಲೆ ಮೇಲಿನ ವಸ್ತುಗಳಿಗೆ, ಉತ್ತಮೋತ್ತಮತಾ= ಉತ್ತಮೋತ್ತಮತ್ವವು, ಉಚಿತಾ ಏವ=ಯೋಗ್ಯವೇ ಆಗಿದೆ. ಮುಕುಂದನಗರೀಸ್ಥಾನಾಂ= ಭಗವಂತನ ನಗರವಾದ ವೈಕುಂಠ ಲೋಕದಲ್ಲಿರುವವರಿಗೆ ಮುಕ್ತತ್ವೈವ=ಮುಕ್ತತ್ವವೇ ಗುಣೋಚಿತಾ= ಅವರ ಗುಣಗಳಿಗೆ ಉಚಿತವಾಗಿದೆ.

**ಭಾವವಿಲಾಸಿನೀ– ಶ್ರುತಃ ಯೌತೇಶ್ವಾನೌ ಯಮರಕ್ಷಿತಾರೌಚತುರಕ್ಷೌ ಪಥಿ ರಕ್ಷೀನ್ನೃ ಚಕ್ಷಸಾವಿತ್ಯಾದಿ ಶ್ರುತಿಪ್ರತಿಪಾದಿತಃ । ಸ್ವರ್ಗಲೋಕಸ್ಥಿತೇ ಪಶ್ವಾದೌ ॥ ೩೭೬ ॥**

**ಯದಾ ಶ್ಯಾಮಶಬಲಾಖ್ಯೌ ಶ್ವಾನಾವಪಿ ವೈಶ್ವದೈವಿಕೇ ಕರ್ಮಣ್ಯದ್ಯಾಪಿ- ಗೃಹಸ್ಥೈರ್ದೇವತಾ ಪಂಕ್ತಾವೇವ ಪೂಜ್ಯತೇ ತದಾ ಕಿಮು ವಕ್ತವ್ಯಂ ಸ್ವರ್ಗಸ್ಥಯೋರ್ನ್ಯಂತರಪೂಜ್ಯತೇತಿ ಭಾವೇನೋಕ್ತಂ ಪೂಜ್ಯತಾ ಪ್ರಾಕೃತೇಽಪ್ಯರ್ಥ ಇತಿ । ಪ್ರಾಕೃತೇ ಹೀನಪ್ರಕೃತ್ಯಂಶನಿರ್ಮಿತೇ । ಅರ್ಥೇ ಶ್ವಾನಾಖ್ಯಾರ್ಥೇ ॥ ೩೭೭-೩೭೮ ॥**

**ವಿವರಣೆ–** ಯೌ ತೇ ಶ್ವಾನೌ ಯಮರಕ್ಷಿತಾರೌ ಚತುರಕ್ಷೌ ಪಕ್ಷಿರಷೀ ನ ಚಕ್ಷುಸೌ ಎಂಬ ವೇದ ಮಂತ್ರದಿಂದ ಶ್ಯಾಮ ಶಬಲ ಎಂಬ ಎರಡು ನಾಯಿಗಳು ಪ್ರತಿಪಾದ್ಯವಾಗಿವೆ. ವೇದಪ್ರತಿಪಾದ್ಯವಾದುದರಿಂದ ಆ ನಾಯಿಗಳೂ ಪೂಜ್ಯವಾಗಿವೆ ಭೂಲೋಕದಲ್ಲಿರುವ ಪಶು ಪಕ್ಷಿ ವೃಕ್ಷಗಳಿಗಿಂತ ಸ್ವರ್ಗದಲ್ಲಿರುವ ಪಶು ಪಕ್ಷಿ ವೃಕ್ಷಗಳು ಪೂಜ್ಯವಾಗಿವೆ. ಆದ್ದರಿಂದಲೇ ಆ ಎರಡು ನಾಯಿಗಳಿಗೆ ದೇವತೆಗಳ ಸಮಾನ ಸ್ಥಾನವನ್ನು ಕೊಟ್ಟು ಪ್ರತಿದಿನವೂ ವೈಶ್ವದೇವ ಯಜ್ಞದಲ್ಲಿ ದೇವತೆಗಳ ಜೊತೆಯಲ್ಲಿ ಆಹುತಿಯನ್ನು ಕೊಡುವ ಸಂಪ್ರದಾಯವು ಗೃಹಸ್ಥಾಶ್ರಮಿಗಳಲ್ಲಿ ಇಂದಿಗೂ ಪ್ರಚಲಿತವಾಗಿದೆ.

ಹೀನ ಪ್ರಕೃತ್ಯಂಶ ನಿರ್ಮಿತವಾದ ಪಶು ಪಕ್ಷಿ ವೃಕ್ಷಗಳು ಸ್ವರ್ಗದಲ್ಲಿವೆ ಎಂಬ ಕಾರಣದಿಂದ ಅವುಗಳಿಗೆ ಮಾನ್ಯತೆ ಬರಬಹುದಾದರೆ, ಸ್ವರ್ಗಕ್ಕಿಂತಲೂ ಉತ್ತಮವಾದ ಭಗವಂತನ ಶ್ವೇತದ್ವೀಪ ಅನಂತಾಸನ ವೈಕುಂಠ ಎಂಬ ಮೂರು ಅಪ್ರಾಕೃತವಾದ ಲೋಕದಲ್ಲಿರುವ, ಶುದ್ಧಸಾತ್ವಿಕರಾದ, ಜ್ಞಾನಾನಂದಸ್ವರೂಪಗಳಾದ, ಶ್ರುತಿ ಸ್ಮೃತಿ ಇತಿಹಾಸಗಳಿಂದ ಸ್ತುತ್ಯರಾದ ಮುಕ್ತಜೀವರಿಗೆ ಪೂಜ್ಯತೆಯು ಇದೆ ಎಂದು ಹೇಳುವ ಅವಶ್ಯಕತೆಯೇ ಇಲ್ಲ. ನಿಶ್ಚಯವಾಗಿಯೂ ಮುಕ್ತಜೀವರಿಗೆ ಪೂಜ್ಯತೆ ಇದ್ದೇ ಇದೆ.

ಭೂಲೋಕದಲ್ಲಿರುವವರಿಗಿಂತ ಸ್ವರ್ಗದಲ್ಲಿರುವವರು ಪೂಜ್ಯರು, ಸ್ವರ್ಗದಲ್ಲಿರುವವರಿಗಿಂತ ಮೋಕ್ಷದಲ್ಲಿರುವವರು ಪೂಜ್ಯರು, ಭೂಲೋಕಕ್ಕಿಂತ ಸ್ವರ್ಗವು ಶ್ರೇಷ್ಠವಾಗಿದೆ. ಸ್ವರ್ಗಕ್ಕಿಂತ ಮೋಕ್ಷವು ಶ್ರೇಷ್ಠವಾಗಿದೆ.

ಆದ್ದರಿಂದಲೇ ಭೂಲೋಕದಲ್ಲಿರುವ ಪಶುಪಕ್ಷಿಗಭಕ್ಷಗಳಿಗಿಂತ ಮನುಷ್ಯರು ಶ್ರೇಷ್ಠರು, ಮನುಷ್ಯರಿಗಿಂತ, ಸ್ವರ್ಗಲೋಕದಲ್ಲಿರುವ ಪಶುಪಕ್ಷಿಗಳು ಮತ್ತು ದೇವತೆಗಳು ಶ್ರೇಷ್ಠರು, ಅವರಿಗಿಂತ ಮೋಕ್ಷದಲ್ಲಿರುವ ಪಶು ಪಕ್ಷಿ ವೃಕ್ಷಗಳು ಹಾಗು ಮುಕ್ತರು ಶ್ರೇಷ್ಠರು.

ಮುಕ್ತಿಯಲ್ಲಿರುವ ಚೇತನರು ಅಪ್ರಾಕೃತರಾಗಿರುವುದರಿಂದ, ಆನಂದಾದಿಗುಣ-ಸ್ವರೂಪರಾಗಿರುವುದರಿಂದ, ಶ್ರುತಿ-ಸ್ಮೃತಿ-ಇತಿಹಾಸ ಸುತ್ಯರಾದುದರಿಂದ ಅವರು ಉಳಿದ ಕೆಳಗಿನವರಿಗಿಂತ ತಮ್ಮ ತಮ್ಮ ಗುಣಗಳಿಗನುಸಾರವಾಗಿ ಪೂಜ್ಯರೇ ಆಗಿದ್ದಾರೆ ಎಂಬ ವಿಷಯದಲ್ಲಿ ಸಂಶಯವೇ ಇಲ್ಲ.

ಸ್ವರ್ಗದಲ್ಲಿರುವ ಪ್ರಾಕೃತ ಪದಾರ್ಥಗಳೇ, ಭೂ ಲೋಕದಲ್ಲಿರುವ ಪ್ರಾಕೃತ ಪದಾರ್ಥಗಳಿಗಿಂತ ಶ್ರೇಷ್ಠವಾಗಿರುವಾಗ, ಮೋಕ್ಷದಲ್ಲಿರುವ ಅಪ್ರಾಕೃತ ಪದಾರ್ಥಗಳು ಎಲ್ಲಕ್ಕಿಂತಲೂ ಶ್ರೇಷ್ಠ ಎಂಬುದಾಗಿ ಹೇಳುವುದೇನಿದೆ?

ಆದ್ದರಿಂದ ಮೇಲೆ ಮೇಲೆ ಇರುವವರು ಕೆಳಗೆ ಕೆಳಗೆ ಇರುವವರಿಗಿಂತ ಉತ್ತಮರಾಗಿದ್ದಾರೆ. ವೈಕುಂಠದಲ್ಲಿರುವವರು ಎಲ್ಲ ಲೋಕಕ್ಕಿಂತಲೂ ಮೇಲಿರುವ ವೈಕುಂಠದಲ್ಲಿರುವುದರಿಂದ ಅವರು ಎಲ್ಲರಿಗಿಂತಲೂ ಶ್ರೇಷ್ಠರಾಗಿದ್ದಾರೆ ಎಂದು ನಿಶ್ಚಯವಾಗುತ್ತದೆ.

ದಿವ್ಯಾ ದಿವ್ಯತಟಾಕೇಷು ದಿವ್ಯಾ ದಿವ್ಯವನೇಷು ಚ ।
ದಿವ್ಯಾ ದಿವ್ಯನಗರ್ಯಾಂ ಚ ದಿವ್ಯಜ್ಞಾನಸುಖಾತ್ಮಕಾಃ ॥ ೩೭೯ ॥

ಮತ್ಸ್ಯಾದ್ಯಾಃ ಮೃಗಪಕ್ಷ್ಯಾದ್ಯಾಃ ಹಸ್ತ್ಯಶ್ವರಥಪೂರ್ವಕಾಃ ।
ಅರ್ಥಾಸ್ತತ್ತದಲಂಕಾರಾಃ ಮತ್ಸ್ಯಕೂರ್ಮಾದಿರೂಪಿಣಃ ॥
ವಿಷ್ಣೋರಾಕೃತಿವತ್ ಸ್ವಸ್ಥಾಃ ಸಂತಿ ಚೇತ್ ಸಂತು ಕಿಂ ತವ ॥ ೩೮೦ ॥

**ಅರ್ಥ–** ದಿವ್ಯತಟಾಕೇಷು=ಅಪ್ರಾಕೃತವಾದ ಕೆರೆ ಸರೋವರಗಳಲ್ಲಿ ದಿವ್ಯಾಃ= ಅಪ್ರಾಕೃತಗಳಾದ ದಿವ್ಯವನೇಷು=ಅಪ್ರಾಕೃತ ವನಗಳಲ್ಲಿ ಚ= ಮತ್ತು ದಿವ್ಯನಗರ್ಯಾಂ= ಅಪ್ರಾಕೃತವಾದ ಪಟ್ಟಣದಲ್ಲಿ ದಿವ್ಯಾಃ=ಅಪ್ರಾಕೃತರಾದ, ದಿವ್ಯಜ್ಞಾನ ಸುಖಾತ್ಮಕಾಃ= ಅಪ್ರಾಕೃತವಾದ ಜ್ಞಾನ ಸುಖ ಸ್ವರೂಪರಾದ, ಮತ್ಸ್ಯಾದ್ಯಾಃ=ಮೀನು ಮೊದಲಾದ ಜಲಚರ ಪ್ರಾಣಿಗಳು, ಮೃಗಪಕ್ಷ್ಯಾದ್ಯಾಃ=ಮೃಗಪಕ್ಷಿ ಮೊದಲಾದ ವನೇಚರ ಪ್ರಾಣಿಗಳು, ಹಸ್ತ್ಯಶ್ವ

ರಥಪೂರ್ವಕಾಃ= ಆನೆ ಕುದುರೆ ರಥ ಮುಂತಾದ ಭೂ ಚರಗಳಾದ, ಅರ್ಥಾಃ= ಪದಾರ್ಥಗಳು, ತತ್ತದಲಂಕಾರಾಃ=ಸರೋವರ, ಉಪವನಗಳು, ಮತ್ತು ನಗರಕ್ಕೆ ಅಲಂಕಾರ-ಪ್ರಾಯವಾಗಿ, ಮತ್ಸ್ಯಕೂರ್ಮಾದಿರೂಪಿಣಃ=ಮತ್ಸ್ಯಕೂರ್ಮ ವರಾಹ ಮುಂತಾದ ಅವತಾರಗಳುಳ್ಳ, ವಿಷ್ಣೋಃ=ಶ್ರೀಹರಿಯ, ಆಕೃತಿವತ್=ಆಕಾರಕ್ಕೆ ಸದೃಶರಾಗಿ, ಸ್ವಸ್ಥಾಃ= ನಿಶ್ಚಿಂತರಾಗಿ, ಸಂತಿ ಚೇತ್=ಇರುತ್ತಾರೆ ಎಂದಾದರೆ, ಸಂತು=ಇರಲಿ. ತವ=ನಿನಗೆ, ಕಿಂ=ಅದರಿಂದೇನು ಹಾನಿ?

**ಭಾವವಿಲಾಸಿನೀ–** ತತ್ತದಲಂಕಾರಾಸ್ತತ್ತದ್ವನಸರೋವರಾದ್ಯಲಂಕಾರಾಃ । ಮತ್ಸ್ಯಕೂರ್ಮಾದಿ-ರೂಪಿಣೋ ಮತ್ಸ್ಯಕೂರ್ಮಾದ್ಯವತಾರವತಃ ॥ ೩೭೯, ೩೮೦ ॥

**ವಿವರಣೆ–** ಅಪ್ರಾಕೃತವಾದ ವೈಕುಂಠ ಲೋಕದಲ್ಲಿರುವ ದಿವ್ಯಸರೋವರಗಳಲ್ಲಿ ಆ ಸರೋವರಕ್ಕೆ ಅಲಂಕಾರಪ್ರಾಯವಾದ ಮತ್ಸ್ಯಕೂರ್ಮಾದಿ ಪ್ರಾಣಿಗಳು ಇರುತ್ತವೆ. ಅಲ್ಲಿರುವ ವನ ಉಪವನಗಳಲ್ಲಿ ಅವುಗಳಿಗೆ ಅಲಂಕಾರಪ್ರಾಯಗಳಾದ ಮಗಪಕ್ಷ್ಯಾದಿಗಳು ಇರುತ್ತವೆ. ಅಲ್ಲಿರುವ ಸುಂದರ ಪಟ್ಟಣದಲ್ಲಿ ಅಪ್ರಾಕತವಾದ ಕುದುರೆ ಆನೆ ರಥಗಳು ಆ ನಗರಕ್ಕೆ ಅಲಂಕಾರ ಪ್ರಾಯವಾಗಿ ಇರುತ್ತವೆ ಎಂದು ಶ್ರುತಿ ಸ್ಮೃತಿಗಳು ವರ್ಣಿಸುತ್ತವೆ. ಈ ಅಲಂಕಾರಪ್ರಾಯವಾದ ಪದಾರ್ಥಗಳು ಭಗವಂತನ ಮತ್ಸ್ಯಕೂರ್ಮ ವರಾಹ ನರಸಿಂಹ ಮುಂತಾದ ಅವತಾರಗಳಿಗೆ ಸದೃಶವಾಗಿವೆ. ಕೇವಲ ಆಕಾರದಲ್ಲಿ ಮಾತ್ರ ಸದೃಶಗಳಾಗಿವೆ. ಗುಣಗಳಲ್ಲಿ ಅಜಗಜಾಂತರ ವ್ಯತ್ಯಾಸವಿದೆ. ಮೇಲ್ನೋಟಕ್ಕೆ ಭಗವಂತನ ಅವತಾರ ರೂಪಗಳಿಗೆ ಸದೃಶವಾಗಿ ಕಾಣುತ್ತದೆ. ಇಂತಹ ಸುಂದರವಾದ ಅಪ್ರಾಕೃತ ಪದಾರ್ಥಗಳು ವೈಕುಂಠದಲ್ಲಿ ಇರುವುದಾದರೆ ಇರಲಿ ಬಿಡು ನಿನಗೇನು ನಷ್ಟ? ಎಂದು ರಾಜರು, ವೈಕುಂಠದಲ್ಲಿ ಏನೂ ಇಲ್ಲ, ಎಂದು ಸಾಧಿಸುವ ಪೂರ್ವಪಕ್ಷಿಯನ್ನು ಕುರಿತು ಪ್ರಶ್ನಿಸಿದ್ದಾರೆ.

ಆದ್ದರಿಂದ ಈಗ ಭೂಲೋಕದಲ್ಲಿ ಕಾಣಬಹುದಾದ ಎಲ್ಲ ರೀತಿಯ ಪಶುಪ್ರಾಣಿ ಪಕ್ಷಿ ಮೃಗ, ಕ್ರಿಮಿ ಕೀಟ ಜಲಚರ ಪ್ರಾಣಿಗಳು ಎಲ್ಲವೂ ವೈಕುಂಠದಲ್ಲಿ ಇವೆ. ಆದರೆ ಅವೆಲ್ಲವೂ ಅಪ್ರಾಕೃತಗಳು, ಸರೋವರ, ಉದ್ಯಾನವನ ನಗರ ಇವೆಲ್ಲವೂ ಅಪ್ರಾಕೃತವೇ ಆಗಿವೆ.

**ಶ್ರುತ್ಯಾ ಸ್ಮೃತ್ಯಾ ಚ ಯಾ ವರ್ಣ್ಯಾ ಸಾ ಶೂನ್ಯಾಪೂಃ ನ ವೈಷ್ಣವೀ ॥೩೮೧॥**

**ಅರ್ಥ–** ಶ್ರುತ್ಯಾ=ವೇದ ವಾಕ್ಯದಿಂದಲೂ, ಚ=ಮತ್ತು, ಸ್ಮೃತ್ಯಾ=ಸ್ಮೃತವಾಕ್ಯಗಳಿಂದಲೂ, ಯಾ=ಪ್ರಸಿದ್ಧವಾದ, ವೈಷ್ಣವೀ=ಶ್ರೀಹರಿಯು, ಪೂಃ=ಪಟ್ಟಣವು, ವರ್ಣ್ಯಾ=ವರ್ಣಿಸಲು ಯೋಗ್ಯವಾಗಿದೆಯೋ, ಸಾ=ಅಂಥ, ಪೂಃ=ಪಟ್ಟಣವು, ನ ಶೂನ್ಯಾ=ಶೂನ್ಯವಾದುದಲ್ಲ.

**ಭಾವವಿಲಾಸಿನೀ–** ಪೂಃ ಪುರೀ । ವನೋಪವನಸರೋವರಗೃಹಗೋಪುರಾದ್ಯಾಕ್ರಾಂತ ವೈಕುಂಠನಗರೀತಿ ಶ್ರುತಿಪುರಾಣಾದೌ ಪ್ರಸಿದ್ಧಮ್ । ಏತಾದೃಶೀಚ ನಗರೀ ತತ್ತದುಚಿತಸಕಲ-

ವಸ್ತುಭಿಃ ಪರಿಪೂರ್ಣೈವ ಭವೇತ್ । ಅನ್ಯಥಾ ಶೂನ್ಯನಗರೀತ್ವ ಪ್ರಸಂಗಾತ್ । ತಾನಿ ಚ ವಸ್ತೂನಿ । ಮತ್ಸ್ಯಕೂರ್ಮವರಾಹಶಿಂಶುಮಾರಾದಿ ರೂಪಿಣೋ ಹರೇಃ ಸಕಲಜಗತ್ಪೂಜ್ಯ-ಚಿದಾನಂದಮಯದಿವ್ಯಾಕಾರವತ್ ಜ್ಞಾನಾನಂದಮಯದಿವ್ಯರೂಪಾಣಿ ಚೇತ್ ಕಾ ಹಾನಿರಿತಿ ಭಾವಃ ॥ ೩೮೧ ॥

**ವಿವರಣೆ**– ಭಗವಂತನ ಪಟ್ಟಣವಾದ ವೈಕುಂಠ ಲೋಕವು ವನ ಉಪವನ ಸರೋವರ ಗೃಹ ಗೋಪುರ ಮುಂತಾದವುಗಳಿಂದ ಶೋಭಾಯಮಾನವಾದುದು ಎಂಬುದಾಗಿ ಶ್ರುತಿ ಪುರಾಣಾದಿಗಳಲ್ಲಿ ಪ್ರಸಿದ್ಧವಾಗಿರುವದರಿಂದ, ವೈಕುಂಠ ನಗರವು ಹೀಗಿರಬೇಕಾದರೆ ಆಯಾಯಾ ಪದಾರ್ಥಗಳಿಂದ ತುಂಬಿರಲೇಬೇಕು. ಸೌಂದರ್ಯವರ್ಧಕ ಪದಾರ್ಥಗಳೇ ಇಲ್ಲದಿದ್ದಲ್ಲಿ ಅದು ಶೂನ್ಯನಗರಿ ಆದೀತು. ಆ ವಸ್ತುಗಳು, ಮತ್ಸ್ಯಕೂರ್ಮ ವರಾಹ ಶಿಂಶುಮಾರ ಮೊದಲಾದ ಶ್ರೀಹರಿಯ ಸಕಲಜಗತ್ಪೂಜ್ಯವಾದ ಚಿದಾನಂದಮಯವಾದ ದಿವ್ಯವಾದ ಅವತಾರ ರೂಪಗಳಂತೆ, ಜ್ಞಾನಾನಂದಮಯ ದಿವ್ಯರೂಪಗಳೂ ಆಗಿದೆ. ಅಂಥ ಪದಾರ್ಥಗಳಿಂದ ಪರಿಪೂರ್ಣವಾದದ್ದು ವೈಕುಂಠನಗರ ಎಂದು ಶ್ರುತಿ ಸ್ಮೃತಿಗಳು ಸಾರುತ್ತಿವೆ.

**ಪೂರ್ಣಾ ಪುರೋಚಿತೈಃ ಸತ್ತ್ವೈಃ ಸುಪುರತ್ವಾತ್ ಹರೇಃ ಪುರೀ ।**
**ಯಥಾ ಸಂಪ್ರತಿಪನ್ನೇತಿ ಕಿಂ ನ ಸ್ಯಾದನುಮಾ ಮಮ ॥ ೩೮೨ ॥**

**ಅರ್ಥ**– ಹರೇಃ=ಶ್ರೀನಾರಾಯಣನ, ಪುರೀ=ಪಟ್ಟಣವಾದ ವೈಕುಂಠವು, ಪುರೋಚಿತೈಃ= ನಗರಕ್ಕೆ ಯೋಗ್ಯವಾದ, ಸತ್ತ್ವೈಃ= ಪದಾರ್ಥಗಳಿಂದ (ಜೀವರಿಂದ), ಪೂರ್ಣಾ= ಪರಿಪೂರ್ಣವಾಗಿದೆ. ಸುಪುರತ್ವಾತ್= ಮಂಗಳಕರವಾದ ಪಟ್ಟಣವಾದುದರಿಂದ, ಯಥಾ= ಹೇಗೆಂದರೆ, ಸಂಪ್ರತಿಪನ್ನಾ=ಎಲ್ಲರಿಗೂ ಸಮ್ಮತವಾದ ಅಮರಾವತೀ ನಗರದಂತೆ. ಇತಿ= ಹೀಗೆಂಬುದಾಗಿ ಮಮ=ಸಿದ್ಧಾಂತಿಯಾದ ನನ್ನ ಅನುಮಾ= ಅನುಮಾನ ಪ್ರಮಾಣವು, ಕಿಂ ನ ಸ್ಯಾತ್= ಏಕಾಗುವುದಿಲ್ಲ?

**ಭಾವವಿಲಾಸಿನೀ**– ಉಕ್ತಾರ್ಥೇಽನುಮಾನಾನಿ ರಚಯತಿ । **ಪೂರ್ಣೇತ್ಯಾದಿನಾ** ॥ ಸಂಪ್ರತಿಪನ್ನಾ ಅಮರಾವತೀ । ಶೂನ್ಯಪುರವ್ಯವಚ್ಛೇದಾಯ ಸುಪುರತ್ವಾದಿತ್ಯುಕ್ತಮ್ । ದಿವ್ಯಪುರ್ಯಾಂ ಪರಮಶೋಭನವಸ್ತುಲಾಭಾಯ ಪುರೋಚಿತೈರಿತ್ಯುಕ್ತಮ್ ॥ ೩೮೨ ॥

**ವಿವರಣೆ**– ಅಮರಾವತೀ ನಗರಿಯು ಶೋಭನವಾದ ಪಟ್ಟಣವಾದುದರಿಂದ ಅದು ತನಗೆ ಬೇಕಾದ ಎಲ್ಲ ಪದಾರ್ಥಗಳಿಂದಲೂ ಹೇಗೆ ಪರಿಪೂರ್ಣವಾಗಿದೆಯೋ ಅದರಂತೆ ಭಗವಂತನ ಪಟ್ಟಣವಾದ ವೈಕುಂಠವೂ ಮಂಗಳಕರವಾದ ನಗರವಾದುದರಿಂದ ನಗರದಲ್ಲಿ ಇರಬೇಕಾದ ಎಲ್ಲ ಪದಾರ್ಥಗಳಿಂದಲೂ ಪರಿಪೂರ್ಣವಾಗಿದೆ ಎಂಬುದಾಗಿ ಅನುಮಾನವನ್ನು ಪ್ರಯೋಗಿಸಿ ಶ್ರೀ ರಾಜರು ವೈಕುಂಠ ಪುರಿಯು ಶೂನ್ಯವಲ್ಲ ಎಂದು

ಈ ಶ್ಲೋಕದಲ್ಲಿ ಸಾಧಿಸಿದ್ದಾರೆ. ಸಿದ್ಧಾಂತಿಗಳು ಹೇಳಬಹುದಾದ ಈ ಅನುಮಾನದಿಂದ ಪೂರ್ವ ಪಕ್ಷವನ್ನು ನಿರಾಕರಿಸಿದ್ದಾರೆ.

**ಸ ಸತ್ವರಾಶಿಃ ಮುಕ್ತತ್ವವ್ಯಾಕೋಪಸ್ಯ ನ ಕಾರಕಃ ।**
**ಪ್ರಕೃಷ್ಟತ್ವಾದ್ ಯಥಾ ವಿಷ್ಣೋಃ ಮತ್ಸ್ಯಾದ್ಯಾಃ ವ್ಯಕ್ತಿರಾಶಯಃ ॥ ೩೮೩ ॥**

**ಅರ್ಥ–** ಸಃ=ಮೋಕ್ಷದಲ್ಲಿರುವ ಆ ಜೀವಸಮೂಹವು, ಮುಕ್ತತ್ವವ್ಯಾಕೋಪಸ್ಯ= ಮುಕ್ತತ್ವವಿರೋಧವನ್ನು, ನ ಕಾರಕಃ= ಮಾಡುವುದಿಲ್ಲ. ಪ್ರಕೃಷ್ಟತ್ವಾತ್= ಗುಣಗಳಿಂದ ಉತ್ತಮವಾದುದರಿಂದ, ಯಥಾ= ಹೇಗೆ, ವಿಷ್ಣೋಃ= ಶ್ರೀಹರಿಯು, ಮತ್ಸ್ಯಾದ್ಯಾಃ= ಮತ್ಸ್ಯಕೂರ್ಮವರಾಹ ಮೊದಲಾದ, ವ್ಯಕ್ತಿರಾಶಯಃ=ಅವತಾರಗಳ ಸಮೂಹದಂತೆ.

**ಭಾವವಿಲಾಸಿನೀ– ಸಃ ವೈಕುಂಠಪುರ್ಯಾಂ ವಿದ್ಯಮಾನಃ। ಸತ್ವರಾಶಿಃ ಪ್ರಾಣಿಸಮೂಹಃ ॥೩೮೩॥**

**ವಿವರಣೆ–** ಈ ಶ್ಲೋಕದಲ್ಲಿ ರಾಜರು ಇನ್ನೊಂದು ಅನುಮಾನವನ್ನು ಪ್ರಯೋಗಿಸಿ ಮೋಕ್ಷದಲ್ಲಿ ನಾನಾವಿಧ ಪ್ರಾಣಿ ಸಮೂಹಗಳು ಇವೆ ಎಂಬುದನ್ನು ಸಮರ್ಥಿಸುತ್ತಾರೆ.

ಭಗವಂತನ ಮತ್ಸ್ಯಕೂರ್ಮವರಾಹಾದಿ ಅವತಾರಗಳು ಅತ್ಯಂತ ಉತ್ಕೃಷ್ಟಗಳಾಗಿ ರುವುದರಿಂದ ಅವು ಹೇಗೆ ನಿತ್ಯಮುಕ್ತತ್ವ ವಿರೋಧಿಗಳಲ್ಲವೋ ಅದರಂತೆ ವೈಕುಂಠದಲ್ಲಿ ಪಶು ಪಕ್ಷಿ ಮುಂತಾದ ಪ್ರಾಣಿ ಸಮೂಹವೂ ಮುಕ್ತತ್ವ ವಿರೋಧಿ ಅಲ್ಲ. ಈ ಅನುಮಾನದಲ್ಲಿ ಪ್ರಾಣಿ ಸಮೂಹವು ಪಕ್ಷ. ಮುಕ್ತತ್ವ ವಿರೋಧಿ ಅಲ್ಲ ಎಂಬುದು ಸಾಧ್ಯ. ಜ್ಞಾನಾನಂದಾದಿಗಳಿಂದ ಉತ್ಕೃಷ್ಟವಾಗಿರುವುದರಿಂದ ಎಂದು ಹೇತು. ಶ್ರೀಹರಿಯ ಮತ್ಸ್ಯಕೂರ್ಮವರಾಹಾದಿ ಅವತಾರ ಸಮೂಹವು ದೃಷ್ಟಾಂತ. ಹೀಗೆ ರಾಜರು ಅನುಮಾನವನ್ನು ಪ್ರಯೋಗಿಸಿ ವೈಕುಂಠದಲ್ಲಿ ವಿಧವಿಧವಾದ ಪ್ರಾಣಿ ಸಮೂಹವಿದ್ದರೂ ಅವರೆಲ್ಲರೂ ಮುಕ್ತರೇ ಆಗಿದ್ದಾರೆ ಎಂದು ಸಾಧಿಸಿದ್ದಾರೆ.

**ಪ್ರಕೃಷ್ಟಶ್ಚ ಸ ಸಂಸಾರದೂರತ್ವಾತ್ ತದ್ವದೇವ ಹಿ ।**
**ದುಃಖಮೇವ ಹಿ ಸಂಸಾರೇ ತತಃ ಕ್ವಾನುಪಪನ್ನತಾ ।**
**ತಚ್ಚ ಮಾಯಾತ್ಯಯಸ್ಥಾನಸ್ಥತ್ವಾತ್ ತದ್ವತ್ ಪ್ರಸಿದ್ಧ್ಯತಿ ॥ ೩೮೪ ॥**

**ಅರ್ಥ–** ಸಃ= ವೈಕುಂಠದಲ್ಲಿರುವ ಪ್ರಾಣಿ ಸಮೂಹವು, ಪ್ರಕೃಷ್ಟಶ್ಚ= ಜ್ಞಾನಾನಂದಾತ್ಮಕವಾದುದರಿಂದ ಉತ್ತಮವಾಗಿದೆ. ಸಂಸಾರದೂರತ್ವಾತ್= ಲಿಂಗ ಶರೀರ ರೂಪ ಸಂಸಾರವಿಲ್ಲದಿರುವುದರಿಂದ, ತದ್ವದೇವ=ಶ್ರೀಹರಿಯ ಅವತಾರ ಸಮೂಹದಂತೆ.

ಸಂಸಾರೇ= ಸಂಸಾರಾವಸ್ಥೆಯಲ್ಲಿ, ದುಃಖಂ ಏವ ಹಿ = ದುಃಖವೇ ಪ್ರಧಾನವಾಗಿದೆಯಷ್ಟೇ. ತತಃ=ಆದ್ದರಿಂದ, ಅನುಪಪನ್ನತಾ=ಕೂಡದಿರುವಿಕೆಯು, ಕ್ವ=

ಎಲ್ಲಿದೆ? ತಚ್ಚ= ದುಃಖರೂಪವಾದ ಸಂಸಾರ ದೂರತ್ವವಾದರೂ, ಮಾಯಾತ್ಯಯ-ಸ್ಥಾನಸ್ಥತ್ವಾತ್= ಮಾಯಾತ್ಯಂತಾಭಾವವಿರುವ ಸ್ಥಳದಲ್ಲಿರುವುದರಿಂದ, ತದ್ವತ್= ವೈಕುಂಠದಲ್ಲಿರುವ ಭಗವಂತನ ರೂಪಗಳಿರುವಂತೆ ಇದೆ.

**ಭಾವವಿಲಾಸಿನೀ–** ಸಃ ಸತ್ವಸಮೂಹಃ । ತದ್ವತ್ ಭಗವದವತಾರರಾಶಿವತ್ । ತತೋ ದುಃಖ-ರೂಪಸಂಸಾರಾಭಾವಾತ್ । ತತ್ ದುಃಖಾಖ್ಯಸಂಸಾರದೂರತ್ವಮ್ । ಮಾಯಾತ್ಯಯ-ಸ್ಥಾನಸ್ಥತ್ವಾತ್ ಮಾಯಾತ್ಯಂತಾಭಾವಸ್ಥಾನೇ ವೈಕುಂಠೇ ಸ್ಥಿತತ್ವಾತ್ । ವಿರಜಾನದ್ಯಾಂ ಜೀವ-ಬಂಧಕಲಿಂಗಶರೀರಾದಿ ಸಂಸಾರಧ್ವಂಸನಿಯಮೇನ ಮಾಯಾಧ್ವಂಸೋಚಿತಸ್ಥಾನಸ್ಥಿತತ್ವಾದ್ವಾ । ತದ್ವದ್ವೈಕುಂಠಸ್ಥಭಗವದ್ರೂಪವತ್ ॥ ೩೮೪ ॥

**ವಿವರಣೆ–** ಭಗವಂತನ ಅವತಾರ ರೂಪ ಸಮೂಹವು ದುಃಖದೂರವಾದುದರಿಂದ ಅದು ಹೇಗೆ ಉತ್ಕೃಷ್ಟವಾಗಿದೆಯೋ ಅದರಂತೆ ವೈಕುಂಠದಲ್ಲಿರುವ ಪ್ರಾಣಿಸಮೂಹವು ಸಂಸಾರ ದೂರವಾದ್ದರಿಂದ ಅಂದರೆ ದುಃಖರಹಿತವಾದುದರಿಂದ ಉತ್ಕೃಷ್ಟವಾಗಿದೆ.

ಸಂಸಾರದಲ್ಲಿ ದುಃಖವೇ ಪ್ರಧಾನವಾದುದರಿಂದ ಆ ವೈಕುಂಠದಲ್ಲಿರುವವರು ದುಃಖರಹಿತರಾಗಿರುವುದರಿಂದ ಹಾಗು ಜ್ಞಾನಾನಂದಮಯರಾಗಿರುವುದರಿಂದ ಅವರು ಉತ್ಕೃಷ್ಟರಾಗಿದ್ದಾರೆ ಎಂಬ ವಿಷಯದಲ್ಲಿ ಯಾವ ಅನುಪಪತ್ತಿಯೂ ಇಲ್ಲ.

ವೈಕುಂಠವು ಮಾಯಾಮಯ ಅಲ್ಲ. ಅದು ಮಾಯಾಜನ್ಯ ಅಲ್ಲ. ಅಲ್ಲಿ ಮಾಯೆ ಇಲ್ಲ. ಮಾಯೆಯ ಅತ್ಯಂತಾಭಾವ ಇದೆ. ಭಗವಂತನ ಅವತಾರ ರೂಪಗಳು ವೈಕುಂಠದಲ್ಲಿರುವುದರಿಂದ ಅದು ಹೇಗೆ ಉತ್ಕೃಷ್ಟವಾಗಿದೆಯೋ ಅದರಂತೆ ಮುಕ್ತಪ್ರಾಣಿ ಸಮೂಹವು ಮಾಯೆ ಇಲ್ಲದಿರುವ ಅಂದರೆ ಮಾಯೆಯ ಅತ್ಯಂತಾಭಾವ ಇರುವ ಸ್ಥಳದಲ್ಲಿ ಇರುವುದರಿಂದ ಆ ಜೀವ ಸಮೂಹವು ದುಃಖರೂಪವಾದ ಸಂಸಾರದಿಂದ ದೂರವಾಗಿದೆ.

ಸಂಸಾರ ಎಂದರೆ ಲಿಂಗ ಶರೀರ. ಆ ಲಿಂಗ ಶರೀರವೇ ದುಃಖಾದಿಗಳಿಗೆ ಕಾರಣವಾಗಿದೆ. ವಿರಜಾ ನದಿಯಲ್ಲಿ ಸ್ನಾನ ಮಾಡಿದಾಗ ಆ ಲಿಂಗ ಶರೀರವು ನಾಶವಾಗುತ್ತದೆ. ಲಿಂಗಶರೀರವನ್ನು ಕಳಚಿಕೊಂಡವರಿಗೆ ಮಾತ್ರ ವೈಕುಂಠದಲ್ಲಿ ಪ್ರವೇಶವಿದೆ. ಆದ್ದರಿಂದ ಮಾಯಾರಹಿತವಾದ ವೈಕುಂಠದಲ್ಲಿರುವವರು ದುಃಖರಹಿತರಾಗಿದ್ದಾರೆ ಮತ್ತು ಜ್ಞಾನಾನಂದಾದಿ ಸ್ವರೂಪರಾಗಿದ್ದಾರೆ.

ರಾಜರು ಈ ಎರಡು ಅನುಮಾನಗಳನ್ನು ಈ ಶ್ಲೋಕದಲ್ಲಿ ಪ್ರಯೋಗಿಸಿದ್ದಾರೆ:

1) ವೈಕುಂಠದಲ್ಲಿರುವ ಪ್ರಾಣಿ ಸಮೂಹವು (ಪಕ್ಷ) ಪ್ರಕೃಷ್ಟವಾಗಿದೆ. (ಸಾಧ್ಯ) ಸಂಸಾರ ದೂರವಾದುದರಿಂದ (ಹೇತು) ಶ್ರೀ ಹರಿಯ ಅವತಾರ ರೂಪಗಳ ಸಮೂಹದಂತೆ (ದೃಷ್ಟಾಂತ)

2) ವೈಕುಂಠದಲ್ಲಿರುವ ಪ್ರಾಣಿ ಸಮೂಹವು (ಪಕ್ಷ) ಸಂಸಾರ ದೂರವಾಗಿದೆ (ಲಿಂಗ ಶರೀರ ರಹಿತವಾಗಿದೆ) (ಸಾಧ್ಯ) ಮಾಯೆ ಇಲ್ಲದಿರುವ ಸ್ಥಳದಲ್ಲಿ (ವೈಕುಂಠದಲ್ಲಿ) ಇರುವುದರಿಂದ (ಹೇತು) ಶ್ರೀಹರಿಯ ಅವತಾರ ರೂಪಗಳ ಸಮೂಹದಂತೆ (ದೃಷ್ಟಾಂತ)

ಹೀಗೆ ಎರಡು ಅನುಮಾನಗಳನ್ನು ಪ್ರಯೋಗಿಸಿದ ರಾಜರು ಮುಕ್ತ ಪ್ರಾಣಿಸಮೂಹವು ಪ್ರಕೃಷ್ಟವಾಗಿದೆ ಮತ್ತು ಸಂಸಾರದೂರವಾಗಿದೆ ಎಂಬುದನ್ನು ಸಾಧಿಸಿದ್ದಾರೆ.

**ಭಿನ್ನಾ ಮಿಥಃ ಪರೇಶಾಚ್ಚ ಮುಕ್ತಾ ವಿಸದೃಶತ್ವತಃ ।**
**ಸತ್ವರಾಶಿರ್ಯಥಾऽತ್ರತ್ಯೋ ಯಥಾ ವಾ ರಾಜತದ್ಭಟೌ ॥ ೩೮೫ ॥**

**ಅರ್ಥ–** ಯಥಾ=ಹೇಗೆ, ಅತ್ರತ್ಯಃ=ಭೂ ಲೋಕದಲ್ಲಿರುವ, ಸತ್ವರಾಶಿಃ= ಪ್ರಾಣಿಸಮೂಹವು, ವಿಸದೃಶತ್ವತಃ=ವಿಸದೃಶರಾದುದರಿಂದ, ಮಿಥಃ=ಪರಸ್ಪರ, ಭಿನ್ನಃ= ಭೇದವುಳ್ಳದ್ದೋ, ತಥಾ= ಅದರಂತೆ, ಮುಕ್ತಾಃ=ವೈಕುಂಠದಲ್ಲಿರುವ, ಮುಕ್ತರು, ವಿಸದೃಶತ್ವತಃ= ವಿಸದೃಶರಾದುದರಿಂದ, ಮಿಥಃ=ಪರಸ್ಪರ, ಭಿನ್ನಾಃ=ಭೇದವುಳ್ಳವರಾಗಿದ್ದಾರೆ. ಯಥಾವಾ= ಹೇಗೆ, ರಾಜತದ್ಭಟೌ=ರಾಜ ಮತ್ತು ಅವನ ಭಟರು, ವಿಸದೃಶತ್ವತಃ= ವಿಸದೃಶರಾದುದರಿಂದ, ಭಿನ್ನೌ=ಭೇದ ಉಳ್ಳವರೋ, ತಥಾ=ಅದರಂತೆ, ಮುಕ್ತಾಃ= ವೈಕುಂಠದಲ್ಲಿರುವ ಮುಕ್ತರು ಪರೇಶಾತ್=ಪರಮಾತ್ಮನಿಂದ, ಭಿನ್ನಾಃ=ಭೇದವುಳ್ಳ ವರಾಗಿದ್ದಾರೆ.

**ಭಾವವಿಲಾಸಿನೀ–** ವಿಸದೃಶತ್ವಹೇತುನಾ ವೈಕುಂಠಸ್ಥಪಶುಪಕ್ಷ್ಯಾದಿಜೀವಾನಾಂ ಪರಸ್ಪರ ಭೇದಸಾಧನೇऽತ್ರತ್ಯಃ ಸತ್ವಾರಾಶಿರ್ದೃಷ್ಟಾಂತಃ । ತೇನೈವ ಹೇತುನಾ ತತ್ರಾಪಿ ಜೀವಪರಯೋ- ರ್ಭೇದಸಾಧನೇ ರಾಜತದ್ಭಟೌ ದೃಷ್ಟಾಂತಾವಿತಿ ವಿವೇಕಃ । ವೈಕುಂಠಸ್ಥಾನಾಮೇಕಜಾತೀಯಾನಾಂ ಮೃಗಮೀನಮನುಷ್ಯಾದೀನಾಮನ್ಯೋನ್ಯಸಮಾನಾಕಾರಣಾಂ ಬಾಹ್ಯವೈಸಾದೃಶ್ಯಾಭಾವೇऽಪಿ ಸ್ವಸ್ವರೂಪಾನಂದಸ್ಯ ಸ್ವೇನ ಸ್ವೇನೈವಾನುಭೂಯಮಾನತ್ವ ಲಕ್ಷಣಾಂತರವೈಸಾದೃಶ್ಯಾತ್ತೇಷಾಮಪಿ ಪರಸ್ಪರಂ ಭೇದೋऽನುಮಾತವ್ಯಃ ॥ ೩೮೫ ॥

**ವಿವರಣೆ–** ಈ ಶ್ಲೋಕದಲ್ಲಿ ರಾಜರು ವೈಕುಂಠದಲ್ಲಿರುವ ಮುಕ್ತರಿಗೆ ಪರಸ್ಪರ ಭೇದವನ್ನು ಮತ್ತು ಅವರಿಗೂ ಪರಮಾತ್ಮನಿಗೂ ಇರುವ ಭೇದವನ್ನು ಸಾಧಿಸಲು ಎರಡು ಅನುಮಾನಗಳನ್ನು ಪ್ರಯೋಗಿಸಿದ್ದಾರೆ.

ಎರಡೂ ಅನುಮಾನಗಳಿಗೆ ಹೇತು ಒಂದೇ ಆಗಿದೆ. ಅದು ವಿಸದೃಶರಾದುದರಿಂದ ಎಂಬುದು. ಮೊದಲನೆಯ ಅನುಮಾನಕ್ಕೆ ಭೂಲೋಕದಲ್ಲಿರುವ ಪ್ರಾಣಿ ಸಮೂಹವು

ದೃಷ್ಟಾಂತವಾದರೆ ಎರಡನೆಯ ಅನುಮಾನಕ್ಕೆ ರಾಜ ಮತ್ತು ಅವನ ಭಟರು ದೃಷ್ಟಾಂತರಾಗಿದ್ದಾರೆ. ಹೀಗೆ ಹೇತು ಒಂದು ದೃಷ್ಟಾಂತ ಎರಡು.

ಲೋಕದಲ್ಲಿರುವ ಜೀವರು ಪರಸ್ಪರ ಶರೀರದಿಂದಲೂ ಸ್ವಭಾವಗಳಿಂದಲೂ ವಿಸದೃಶರಾಗಿದ್ದಾರೆ. ಆದರೆ ವೈಕುಂಠದಲ್ಲಿರುವ ಮುಕ್ತರಲ್ಲಿ ಮನುಷ್ಯರೆಲ್ಲರೂ ಒಂದೇ ರೀತಿಯ ಶರೀರವುಳ್ಳವರಾಗಿದ್ದಾರೆ. ಅದರಂತೆ ಮೃಗ, ಪಕ್ಷಿ ಮೊದಲಾದವುಗಳು ಒಂದೇ ಜಾತಿಯವರು ಒಂದೇ ರೀತಿಯ ಶರೀರವುಳ್ಳವರಾಗಿದ್ದಾರೆ. ಅವರಲ್ಲಿ ವಿಸದೃಶತ್ವ ಇಲ್ಲ ಆದರೆ, ಶರೀರದಲ್ಲಿ ಸಾದೃಶ್ಯವಿದ್ದರೂ ಅವರವರ ಯೋಗ್ಯತೆಯಲ್ಲಿ ಭೇದವಿರುವುದರಿಂದ ಅವರೆಲ್ಲರೂ ಭಿನ್ನಭಿನ್ನರೇ ಆಗಿದ್ದಾರೆ ಎಂಬ ಸೂಕ್ಷ್ಮಾಂಶವನ್ನು ಶ್ರೀ ಸುರೋತ್ತಮತೀರ್ಥರು ಉಲ್ಲೇಖಿಸಿದ್ದಾರೆ.

ಆ ಎರಡು ಅನುಮಾನಗಳು ಹೀಗಿವೆ.

1) ಮುಕ್ತಜೀವರು (ಪಕ್ಷ) ಪರಸ್ಪರ ಭಿನ್ನರಾಗಿದ್ದಾರೆ (ಸಾಧ್ಯ) ವಿಸದೃಶರಾದುದರಿಂದ (ಹೇತು) ಭೂ ಲೋಕದಲ್ಲಿರುವ ಜೀವರಂತೆ (ದೃಷ್ಟಾಂತ).

2) ಮುಕ್ತ ಜೀವರು (ಪಕ್ಷ) ಪರಮಾತ್ಮನಿಂದ ಭಿನ್ನರಾಗಿದ್ದಾರೆ (ಸಾಧ್ಯ) ವಿಸದೃಶರಾದುದರಿಂದ (ಹೇತು) ರಾಜ, ರಾಜಭಟರಂತೆ (ದೃಷ್ಟಾಂತ)

ಹೀಗೆ ಎರಡು ಅನುಮಾನಗಳಿಂದ ಮುಕ್ತರಿಗೆ ಪರಸ್ಪರವಾಗಿ ಮತ್ತು ಭಗವಂತನಿಂದ ಭೇದವನ್ನು ಸಾಧಿಸಿದ್ದಾರೆ.

**ಪ್ರಕೃಷ್ಟಸತ್ವರಾಶಿತ್ವಾದ್ ಇತ್ಯಾಹ ಸ್ಮೃತಿರೇವ ಯತ್ ।**
**ಪ್ರಕೃಷ್ಟಃ ಸತ್ವರಾಶಿಶ್ಚ ಯಸ್ಯಾಸೌ ಹಿ ತಥಾಭಿಧಃ ॥ ೩೮೬ ॥**

**ತತ್ಕುತರ್ಕಕುವಾಕ್ಯೇಭ್ಯೋ ನ ಬಿಭ್ಯತ್ಯನುಮಾ ಇಮಾಃ ।**
**ಅತೋಽನುಮಾನಮಾಲೇಯಂ ತಾಮಲಂಕುರುತೇ ಪುರೀಮ್ ॥ ೩೮೭ ॥**

**ಅರ್ಥ–** ಸ್ಮೃತಿಃ ಏವ=ಪಂಚರಾತ್ರಾದಿಸ್ಮೃತಿ ಸಮೂಹವೇ, ಪ್ರಕೃಷ್ಟಸತ್ವರಾಶಿತ್ವಾತ್= ವೈಕುಂಠ ಲೋಕವು ಜ್ಞಾನಾನಂದಮಯರಾದ ಪ್ರಾಣಿಗಳ ಸಮೂಹವುಳ್ಳದ್ದಾದುದರಿಂದ, ಇತಿ= ಹೀಗೆಂಬುದಾಗಿ, ಆಹ=ಹೇಳುತ್ತಿದೆ. ಯತ್=ಯಾವ ಕಾರಣದಿಂದ, ಪ್ರಕೃಷ್ಟಃ= ಅನಾದಿಮುಕ್ತಲಕ್ಷ್ಮೀ ಸ್ವರೂಪವೂ, ಸತ್ವರಾಶಿಶ್ಚ=ಜ್ಞಾನಾನಂದಮಯರಾದ ಚೇತನರೂ, ಯಸ್ಯ ಅಸೌ=ಯಾವುದು ಉಳ್ಳದ್ದಾಗಿದೆಯೋ ಅದು, ತಥಾಭಿದಃ=ಪ್ರಕೃಷ್ಟಸತ್ವರಾಶಿ ಎಂಬ ಹೆಸರುಳ್ಳದ್ದಾಗಿದೆ ಎಂದು ಹಿ=ಪ್ರಸಿದ್ಧವಾಗಿದೆಯೋ, ತತ್=ಪಂಚರಾತ್ರ ವಾಕ್ಯದಿಂದ ಸಿದ್ಧವಾಗಿರುವುದರಿಂದ ಕುತರ್ಕವಾಕ್ಯೇಭ್ಯಃ=ಕುತ್ಸಿತವಾದ ತರ್ಕ ಮತ್ತು ಕುತ್ಸಿತವಾದ

ಮಾತುಗಳಿಂದ, ಇಮಾಃ=ಹಿಂದೆ ಹೇಳಿದ ಅನುಮಾಃ=ಅನುಮಾನಗಳು, ನ ಬಿಭ್ಯತಿ= ಹೆದರುವುದಿಲ್ಲ, ಅತಃ=ಅನುಮಾನಗಳು ದೋಷರಹಿತವಾದುದರಿಂದ, ಇಯಂ=ಹಿಂದೆ ಹೇಳಿದ, ಅನುಮಾನಮಾಲಾ= ಅನುಮಾನಗಳೆಂಬ ಪುಷ್ಪಮಾಲೆಯು, ತಾಂಪುರೀಂ=ಆ ವೈಕುಂಠ ನಗರವನ್ನು ಅಲಂಕುರು ತೇ=ಅಲಂಕರಿಸುತ್ತದೆ.

**ಭಾವವಿಲಾಸಿನೀ–** ತತ್ ತಸ್ಮಾತ್ ವೈಕುಂಠಸ್ಥಸತ್ವರಾಶೀನಾಂ ಪ್ರಕೃಷ್ಟತ್ವಸ್ಯೋಕ್ತಪಂಚರಾತ್ರ ವಾಕ್ಯೇನೈವ ಸಿದ್ಧತ್ವಾತ್ । ವಿಮತಃ ಸತ್ವರಾಶಿಃ ಪ್ರಾಕೃತೋ ಭವಿತುಮರ್ಹತಿ ಸತ್ವರಾಶಿತ್ವಾತ್ ಸಾಂಸಾರಿಕಸತ್ವರಾಶಿವದಿತ್ಯಾದಿಕುತರ್ಕೇಭ್ಯೋ ಬ್ರಹ್ಮಾತಿರಿಕ್ತಂ ಕಿಮಪಿ ನಾಸ್ತೀತ್ಯಾದಿಕುತ್ಸಿತವಾದಿ ವಾಕ್ಯೇಭ್ಯಶ್ಚ । "ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ । ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತ" ಇತಿ ಭಾರತೋಕ್ತ್ಯಾ ಪಂಚರಾತ್ರಸ್ಯ ಸರ್ವಪ್ರಮಾಣ ಜ್ಯೇಷ್ಠತ್ವೇನ ತದುಕ್ತಾರ್ಥಸ್ಯ ತ್ಯಾಗಾಯೋಗಾದಿತಿ ಭಾವಃ ॥ ೩೮೬-೩೮೭ ॥

**ವಿವರಣೆ–** ಶ್ರೀ ನಾರಾಯಣನು ತಾನು ಹೇಳಿದ ಪಂಚರಾತ್ರಾಗಮದಲ್ಲಿ ವೈಕುಂಠಲೋಕವು ಪ್ರಕೃಷ್ಟವಾಗಿದೆ ಮತ್ತು ಪ್ರಕಷ್ಟಸತ್ವರಾಶಿಯುಳ್ಳದ್ದಾಗಿದೆ ಎಂದು ಹೇಳಿರುವುದರಿಂದ ವೈಕುಂಠ ಲೋಕವು ಉತ್ತಮವಾಗಿದೆ ಮತ್ತು ಉತ್ತಮ-ಜೀವರಾಶಿಯಿಂದ ಕೂಡಿದೆ ಎಂಬ ವಿಷಯವು ಸಿದ್ಧಿಸುತ್ತದೆ.

ಹಿಂದೆ ಪ್ರಯೋಗಿಸಿದ ಅನುಮಾನಗಳು ಆಗಮ ಮೂಲಕವಾದ ಅನುಮಾನ-ಗಳಾಗಿರುವುದರಿಂದ ಅನುಮಾನಗಳು ನಿರ್ದುಷ್ಟವಾಗಿದೆ.

ವೈಕುಂಠದಲ್ಲಿರುವ ಸತ್ವ(ಜೀವ)ರಾಶಿಯು ಪ್ರಾಕತವಾಗಿದೆ ಸತ್ವರಾಶಿಯಾದುದರಿಂದ ಸಾಂಸಾರಿಕ ಸತ್ವರಾಶಿಯಂತೆ ಎಂಬ ಇಂತಹ ಕುತರ್ಕದಿಂದಲೂ ಬ್ರಹ್ಮವ್ಯತಿರಿಕ್ತವಾದುದು ಯಾವುದೂ ಇಲ್ಲ ಎಂಬ ಕುವಾಕ್ಯದಿಂದಲೂ ಹಿಂದೆ ಹೇಳಿದ ಅನುಮಾನಗಳಿಗೆ ಭಯವಿಲ್ಲ.

ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ ।
ಜ್ಞಾನೇಷ್ವೇತೇಷು ರಾಜೇಂದ್ರ ಸರ್ವೇಷ್ವೇತದ್ವಿಶಿಷ್ಯತೇ ॥ -ಮಹಾಭಾರತ

ಸಮಗ್ರವಾದ ಪಾಂಚರಾತ್ರಾಗಮವನ್ನು ಶ್ರೀ ನಾರಾಯಣನು ರಚಿಸಿದ್ದಾನೆ. ಆದ್ದರಿಂದ ಅದು ಪರಮ ಪ್ರಮಾಣವಾಗಿದೆ. ಆದ್ದರಿಂದ ಆ ಆಗಮದಿಂದ ಬಂದ ಜ್ಞಾನವು ಶ್ರೇಷ್ಠವಾಗಿದೆ ಎಂದು ಮಹಾಭಾರತ ವಾಕ್ಯದಿಂದ ಸಿದ್ಧವಾಗಿರುವುದರಿಂದ ಪಾಂಚರಾತ್ರಾಗಮ ಮೂಲಕವಾದ ಅನುಮಾನಗಳು ಪ್ರಬಲವಾಗಿರುವುದರಿಂದ ಅವುಗಳಿಗೆ ಆಗಮ ಮೂಲಕವಲ್ಲದ ದುರ್ಬಲಗಳಾದ ಮೇಲೆ ಹೇಳಿದ ಕೆಟ್ಟ ಅನುಮಾನ ಮತ್ತು ಕೆಟ್ಟ ವಾಕ್ಯಗಳಿಂದ ಭಯವಿಲ್ಲ. ಆದ್ದರಿಂದ ಆ ಅನುಮಾನಗಳೆಂಬ ಸುಗಂಧ ಪುಷ್ಪಗಳ ಮಾಲೆಯು ವೈಕುಂಠನಗರವನ್ನು ಅಲಂಕರಿಸುತ್ತದೆ.

**ಶ್ರೀರೇವ ಲೋಕರೂಪೇಣ ವಿಷ್ಣೋಸ್ತಿಷ್ಠತಿ ಸರ್ವದಾ ।**
**ಅತೋ ಹಿ ವೈಷ್ಣವಾ ಲೋಕಾ ನಿತ್ಯಾಸ್ತೇ ಚೇತನಾ ಅಪಿ ॥ ೩೮೮ ॥**

**ಅರ್ಥ–** ಶ್ರೀರೇವ=ಲಕ್ಷ್ಮೀದೇವಿಯೇ, ವಿಷ್ಣೋಃ=ನಾರಾಯಣನ, ಲೋಕರೂಪೇಣ=ವೈಕುಂಠಾದಿ ಲೋಕಾಕಾರಳಾಗಿ, ತಿಷ್ಠತಿ=ಇರುತ್ತಾಳೆ. ಅತಃ ಹಿ=ಹೀಗೆ ಸ್ಮೃತಿಯು ಹೇಳಿರುವುದರಿಂದಲೇ, ವೈಷ್ಣವಾಃ=ವಿಷ್ಣು ಸಂಬಂಧಿಯಾದ, ಲೋಕಾಃ=ವೈಕುಂಠ ಅನಂತಾಸನ ಶ್ವೇತದ್ವೀಪಗಳೆಂಬ (ತ್ರಿಧಾಮಗಳು) ಮೂರು ಲೋಕಗಳು, ನಿತ್ಯಾಃ=ನಿತ್ಯವಾಗಿದೆ. ಅಪಿ=ಮತ್ತು ತೇ=ಆ ಲೋಕಗಳು, ಚೇತನಾಃ=ಚೇತನಸ್ವರೂಪವಾಗಿವೆ.

**ಭಾವವಿಲಾಸಿನೀ–**ಉಕ್ತೇಽರ್ಥೇ ಸ್ಪಷ್ಟಂ ಪ್ರಮಾಣಾಂತರವಚನದ್ವಯಮಪ್ಯಾಹ–**ಶ್ರೀರೇವೇತಿ** ॥ ಅತಃ ಶ್ರೀರೂಪತ್ವಾತ್ । ವೈಷ್ಣವಲೋಕಾ ವಿಷ್ಣುಸಂಬಂಧಿತ್ವೇನ ಪ್ರಸಿದ್ಧಾ ವೈಕುಂಠಾನಂತಾಸನಶ್ವೇತದ್ವೀಪಾಖ್ಯಲೋಕಾಃ । ತ್ರಿಧಾಮೇತಿ ಹಿ ಭಗವತಃ ಪುಣ್ಯನಾಮ ॥೩೮೮॥

**ವಿವರಣೆ–** ಹಿಂದೆ ಹೇಳಿದ ವಿಷಯದಲ್ಲಿ ಪ್ರಮಾಣಾಂತರವನ್ನು ಉದಾಹರಿಸಿ ವಿಷ್ಣು ಲೋಕವು ನಿತ್ಯ ಹಾಗು ಚಿದ್ರೂಪ ಎಂದು ಸಾಧಿಸುತ್ತಿದ್ದಾರೆ.

ಶ್ರೀರೇವ ಎಂಬ ಸ್ಮೃತಿ ವಚನವು ಲಕ್ಷ್ಮೀದೇವಿಯೇ ಪರಮಾತ್ಮನ ಮೂರು ಲೋಕರೂಪದಿಂದ ಇದ್ದಾಳೆ. ಎಂದು ಸ್ಪಷ್ಟವಾಗಿ ಹೇಳುತ್ತಿರುವುದರಿಂದ ಲಕ್ಷ್ಮೀದೇವಿಯು ನಿತ್ಯಮುಕ್ತಳಾಗಿ ವ್ಯಾಪ್ತ ಚೇತನಳಾದುದರಿಂದ ಭಗವಂತನ ವೈಕುಂಠ ಅನಂತಾಸನ ಶ್ವೇತದ್ವೀಪಗಳೆಂಬ ಮೂರು ಲೋಕಗಳು ನಿತ್ಯವಾಗಿವೆ ಮತ್ತು ಚೇತನಸ್ವರೂಪವಾಗಿವೆ.

ಆ ಮೂರೂ ಲೋಕಗಳಲ್ಲಿ ಭಗವಂತನು ವ್ಯಾಪ್ತನಾಗಿರುವುದರಿಂದ ಅವನಿಗೆ ತ್ರಿಧಾಮಾ ಎಂಬ ಹೆಸರೂ ಪ್ರಸಿದ್ಧವಾಗಿದೆ.

**ಪಶುಪಕ್ಷ್ಯಾದಿರೂಪೇಣ ಜೀವಾ ಏವ ಪೃಥಕ್ ಸ್ಥಿತಾಃ ।**
**ಸಂಸೃತೌ ವ್ಯತ್ಯಯಸ್ತೇಷಾಂ ಮುಕ್ತೌ ತತ್ತತ್ಸ್ವರೂಪತಾ ॥ ೩೮೯ ॥**

**ಅರ್ಥ–** ಜೀವಾ ಏವ=ಮುಕ್ತ ಜೀವರೇ, ಪಶುಪಕ್ಷ್ಯಾದಿರೂಪೇಣ=ಪಶು ಪಕ್ಷಿ ಮೊದಲಾದ ರೂಪದಿಂದ ಪೃಥಕ್=ವೈಕುಂಠದಲ್ಲಿ ಪ್ರತ್ಯೇಕವಾಗಿ, ಸ್ಥಿತಾಃ=ಇರುತ್ತಾರೆ. ತೇಷಾಂ=ಅವರಿಗೆ ಸಂಸೃತೌ=ಸಂಸಾರಾವಸ್ಥೆಯಲ್ಲಿ ವ್ಯತ್ಯಯಃ=ವ್ಯತ್ಯಾಸವು, ಮುಕ್ತೌ=ಮುಕ್ತಿ ಅವಸ್ಥೆಯಲ್ಲಿ ತತ್ತತ್ಸ್ವರೂಪತಾ=ಅವರವರ ಸ್ವರೂಪದಿಂದಲೇ ಇರುವಿಕೆಯು ಆಗುತ್ತದೆ.

**ಭಾವವಿಲಾಸಿನೀ–** ವ್ಯತ್ಯಯೋ ಬಾಹ್ಯಪಶ್ವಾದಿರೂಪೇಣ ವ್ಯತ್ಯಯಃ । ತೇಷಾಂ ಪಶುಪಕ್ಷ್ಯಾದಿ ರೂಪಾಣಾಂ ಜೀವಾನಾಂ ಚಿದಾತ್ಮಕಸ್ವಭಾವಾವಿಕತಾದೃಶರೂಪಾಭಾವೇ ಘಟಪಟಸ್ತಂಭ-ಕುಡ್ಯಾದಿಷು ಜಡೇಷು ನಿಯಮೇನಾದೃಷ್ಟಂ ಪಶುಪಕ್ಷಿವೃಕ್ಷಲತಾಮಾನುಷಾದಿ ರೂಪಂ

ಸ್ಥಿರಚರಾತ್ಮಕಜೀವೇಷ್ವೇವ ಕುತೋ ನಿಯಮೇನ ದೃಶ್ಯತೇऽತೋ ಜೀವಾಸ್ವಭಾವತೋऽಪಿ ತಾದೃಶಾ ಇತಿ ಯುಕ್ತಿಮಪಿ ಸೂಚಯಿತುಂ ಸಂಸೃತೌ ವ್ಯತ್ಯಯ ಇತ್ಯುಕ್ತಮ್ ತೇಷಾಂ ಏವ ನತ್ವನ್ಯೇಷಾಂ ಇತ್ಯರ್ಥಃ। ತತ್ತತ್‌ಸ್ವರೂಪತಾ ತೇನ ತೇನಾಕಾರೇಣ ಸ್ವರೂಪಂ ಯೇಷಾಂತೇ ತತ್ತತ್ ಸ್ವರೂಪಾಸ್ತೇಷಾಂ ಭಾವಸ್ತತತ್‌ಸ್ವರೂಪತಾ ॥ ೩೮೯ ॥

**ವಿವರಣೆ–** ಜೀವರಲ್ಲಿ ಸ್ವರೂಪತಃ ಪಕ್ಷಿ ಜೀವರು, ಸ್ವರೂಪತಃ ಪಶು ಜೀವರು, ಸ್ವರೂಪತಃ ಕ್ರಿಮಿ ಜೀವರು, ಸ್ವರೂಪತಃ ಮನುಷ್ಯ ಜೀವರು, ಸ್ವರೂಪತಃ ವೃಕ್ಷ ಜೀವರು ಎಂಬುದಾಗಿ ಅನೇಕ ವಿಧರಿದ್ದಾರೆ. ಅಂದರೆ ಕೆಲವರು ಪಕ್ಷಿ ಸ್ವರೂಪರಾಗಿದ್ದಾರೆ. ಕೆಲವರು ಪಶು ಸ್ವರೂಪರಾಗಿದ್ದಾರೆ.

ಸಂಸಾರದಲ್ಲಿ ಜೀವರು ಅವರವರ ಕರ್ಮಾನುಸಾರವಾಗಿ ಬೇರೆ ಬೇರೆ ಶರೀರವನ್ನು ಪಡೆಯುತ್ತಾರೆ. ಅಂದರೆ ಸ್ವರೂಪತಃ ಪಕ್ಷಿಜೀವನಾದವನು ತನ್ನ ಕರ್ಮಕ್ಕೆ ಅನುಗುಣವಾಗಿ ಪಶು ಶರೀರವನ್ನು ಹೊಂದಬಹುದು. ಸ್ವರೂಪದಲ್ಲಿ ಮನುಷ್ಯ ಜೀವನು ಪ್ರಾಣಿಯ ಅಥವಾ ಪಕ್ಷಿಯ ಶರೀರವನ್ನು ಪಡೆಯಬಹುದು.

ಆದರೆ ಸಾಧನೆಯನ್ನು ಮುಗಿಸಿ ವಿರಜಾನದೀಸ್ನಾನವನ್ನು ಮಾಡಿ ವೈಕುಂಠಕ್ಕೆ ಹೋದ ಮುಕ್ತರು ಎಲ್ಲರೂ ಅವರವರ ಸ್ವರೂಪ ಶರೀರವನ್ನೇ ಹೊಂದಿ ಸುಖಪಡುತ್ತಾರೆ. ಅಂದರೆ ಸ್ವರೂಪತಃ ಪಶುವಾದವನು ಪಶುವಾಗಿಯೇ ಇರುತ್ತಾನೆ. ಸ್ವರೂಪತಃ ಪಕ್ಷಿ ಜೀವನು ಪಕ್ಷಿಯಾಗಿಯೇ ಇರುತ್ತಾನೆ. ಸಂಸಾರದಲ್ಲಿದ್ದಂತೆ ಅಲ್ಲಿ ವ್ಯತ್ಯಾಸವಿಲ್ಲ.

ಹೀಗೆ ಸ್ಥಿರಜೀವರು ಮತ್ತು ಚರಜೀವರು ತಮ್ಮ ತಮ್ಮ ಸ್ವರೂಪಕ್ಕೆ ತಕ್ಕಂತೆ ಸ್ಥಿರ ಚರ ಶರೀರಗಳನ್ನು ಪಡೆದುಕೊಂಡೇ ಮೋಕ್ಷದಲ್ಲಿ ಸುಖಪಡುತ್ತಾರೆ.

**ಇತ್ಯಾದಿಮಾನೈಃ ತತ್ಪ್ರೋಕ್ತೇ ಚರ್ಚಾ ಯುಕ್ತಿಬುಭುತ್ಸಯಾ ।**
**ಅತೋ ಯುಕ್ತಿಯುತಂ ಶ್ರೌತಂ ಸರ್ವಂ ಮಾನ್ಯಮಿತಿ ಸ್ಥಿತಮ್ ॥ ೩೯೦ ॥**

**ಅರ್ಥ–** ಇತ್ಯಾದಿಮಾನೈಃ=ಇದೇ ಮೊದಲಾದ ಪ್ರಮಾಣಗಳಿಂದ ತತ್ಪ್ರೋಕ್ತೇ=ಹೇಳಲ್ಪಟ್ಟ ಮೋಕ್ಷ ವಿಷಯದಲ್ಲಿ ಯುಕ್ತಿಬುಭುತ್ಸಯಾ= ವಚನಮೂಲವಾದುದರಿಂದ, ವಚನಾನುಗ್ರಾಹಕ ಯುಕ್ತಿಯನ್ನು ತಿಳಿಯುವ ಇಚ್ಛೆಯಿಂದ, ಚರ್ಚಾ=ಚರ್ಚೆಯು ಈವರೆಗೆ ಮಾಡಲ್ಪಟ್ಟಿತು. ಅತಃ=ಆದ್ದರಿಂದ, ಯುಕ್ತಿಯುತಂ=ಅನೇಕ ಯುಕ್ತಿಗಳಿಂದ ಕೂಡಿದ, ಶ್ರೌತಂ= ಶ್ರುತಿಯಿಂದ ಹೇಳಿದ ವಿಷಯವು. ಸರ್ವಂ=ಎಲ್ಲವೂ ಕೂಡ ಮಾನ್ಯಮಿತಿ= ಮಾನ್ಯವಾಗಿದೆ ಎಂಬುದಾಗಿ, ಸ್ಥಿತಂ=ಸಿದ್ಧವಾಯಿತು.

**ಭಾವವಿಲಾಸಿನೀ–** ಇತ್ಯಾದಿಮಾನೈರಿತ್ಯಾದಿಪ್ರಮಾಣವಚನೈಃ ಪ್ರೋಕ್ತೋऽರ್ಥಃ। ತತ್ ತಸ್ಮಾತ್ ವಚನಮೂಲತ್ವಾತ್ ವಚನಾನುಗ್ರಾಹಕಯುಕ್ತಿಬಭುತ್ಸಯಾ ಚರ್ಚಾ ನ ತು ಶುಷ್ಕಚರ್ಚೇತಿ ಭಾವಃ ॥ ೩೯೦ ॥

**ವಿವರಣೆ–** ಶ್ರುತಿಯಲ್ಲಿ ಹೇಳಿದ ವಿಷಯವನ್ನೇ ಸ್ಮೃತಿಗಳು ಹೇಳುತ್ತವೆ. ಆ ಸ್ಮೃತಿ ಮೂಲಕವಾದ ಯುಕ್ತಿಗಳನ್ನು ಹೇಳಲಾಗಿದೆ. ಹೀಗಾಗಿ ಶ್ರುತಿಸ್ಮೃತಿ ಮತ್ತು ಯುಕ್ತಿಗಳಿಂದ ವೈಕುಂಠದ ವಿಷಯವು ಈವರೆಗೆ ಸಮರ್ಥಿಸಲ್ಪಟ್ಟಿದೆ. ಸ್ಮೃತಿ ಮೂಲಕವಾದ ಯುಕ್ತಿಗಳಿಂದ ಶ್ರುತ್ಯುಕ್ತವಾದ ವಿಷಯವು ಈವರೆಗೆ ಚರ್ಚಿಸಲ್ಪಟ್ಟಿದೆ. ಇದು ಶುಷ್ಕ ಚರ್ಚೆ ಅಲ್ಲ. ಆದ್ದರಿಂದ, ಯುಕ್ತಿಯುಕ್ತವಾದ ಜ್ಞಾನವನ್ನು ಬಯಸುವವರು ಈ ಪ್ರಮಾಣಗಳನ್ನು ಅವಶ್ಯವಾಗಿ ಗ್ರಹಿಸಬೇಕು. ಶ್ರುತಿಯು ಯುಕ್ತಿಯುಕ್ತವಾಗಿ ಹೇಳುವ ತತ್ವಗಳೆಲ್ಲವೂ ಪ್ರಮಾಣವೇ ಆಗಿರುತ್ತವೆ. ಆದ್ದರಿಂದ ಅವು ಅಂಗೀಕಾರಾರ್ಹವಾಗಿರುತ್ತವೆ. ಈ ಯುಕ್ತಿಗಳು ಅರ್ಥವನ್ನು ಸಾಧಿಸುವುದರಿಂದ ಯುಕ್ತಿಯುಕ್ತವಾದ ಶ್ರುತ್ಯರ್ಥವು ಸರ್ವಮಾನ್ಯವಾಗಿದೆ.

**ಸ್ಪಷ್ಟಾ ಶ್ರುತಿಶ್ಚಾರ್ಥಮೇನಂ ವಕ್ತಿ ತಚ್ಚಾತುರೀಂ ಶೃಣು ॥ ೩೯೧ ॥**

**ಅರ್ಥ–** ಏನಂ= ಈವರೆಗೆ ಪ್ರತಿಪಾದಿಸಿದ, ಅರ್ಥಂ= ಅರ್ಥವನ್ನು, ಶ್ರುತಿಃ= ವೇದವಾಕ್ಯವು, ಸ್ಪಷ್ಟಂ= ಸ್ಪಷ್ಟವಾಗಿ, ವಕ್ತಿ= ಹೇಳುತ್ತದೆ. ತಚ್ಚಾತುರೀಂ= ಆ ಶ್ರುತಿಯ ಚಮತ್ಕಾರವನ್ನು ಶೃಣು=ಕೇಳು.

**ಭಾವವಿಲಾಸಿನೀ–** ತಚ್ಚಾತುರೀಂ ಶ್ರುತಿಚಾತುರೀಮ್ ॥ ೩೯೧ ॥

**ವಿವರಣೆ–** ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬ ವೇದವಾಕ್ಯವು ಈವರೆಗೆ ಪ್ರತಿಪಾದಿಸಿದ ಜೀವಬ್ರಹ್ಮರ ಹಾಗು ಮುಕ್ತರ ಪರಸ್ಪರ ಭೇದವನ್ನು ಸ್ಪಷ್ಟವಾಗಿ ಹೇಳುತ್ತದೆ. ಮುಂದೆ ರಾಜರು ಪುರುರೂಪಸ್ಯ ಎಂಬ ಶ್ಲೋಕದಲ್ಲಿ ಈ ಶ್ರುತಿಯನ್ನು ಉದಾಹರಿಸಿ ಅರ್ಥವನ್ನು ವಿವರಿಸುತ್ತಾರೆ. ಆ ಶ್ರುತಿಯ ಚಮತ್ಕಾರವನ್ನು ಕೇಳು.

**ಸುರಧೇನುದ್ರುಮಾಹೀಂದ್ರವೀಂದ್ರನದ್ಯಾದಿರೂಪಿಣಃ ।**
**ಮುಕ್ತಾಶ್ಚ ಪಶುಪಕ್ಷ್ಯಾದ್ಯಾಃ ಸಂತಿ ಚೇತ್ ಕಿಂ ತತೋ ಗತಮ್ ॥ ೩೯೨ ॥**

**ಅರ್ಥ–** ಸುರಧೇನುದ್ರುಮಾಹೀಂದ್ರವೀಂದ್ರನದ್ಯಾದಿರೂಪಿಣಃ=ಹಿಂದೆ ಹೇಳಿದಂತೆ ಸ್ವರ್ಗದಲ್ಲಿರುವ ಕಾಮಧೇನು ಕಲ್ಪವೃಕ್ಷಶೇಷಗರುಡ ದೇವಗಂಗೆ ಇವುಗಳು ಹೇಗೆ ಇವೆಯೋ, ಅದರಂತೆ, ಮುಕ್ತಾಃ=ಮುಕ್ತರಾದ, ಪಶುಪಕ್ಷ್ಯಾದ್ಯಾಶ್ಚ=ಮುಕ್ತರಾದ ಪಶುಪಕ್ಷಿಗಳೂ, ಸಂತಿ ಚೇತ್=ಮೋಕ್ಷದಲ್ಲಿ ಇರುವುದಾದರೆ, ತತಃ=ಅದರಿಂದ, ಕಿಂ ಗತಂ= ನಿನಗೆ ಏನು ನಷ್ಟವಾಯಿತು? ಯಾವ ಹಾನಿಯೂ ಇಲ್ಲ.

**ಭಾವವಿಲಾಸಿನೀ– ಶ್ರುತ್ಯರ್ಥಂ ವಕ್ತುಂ ಪ್ರಾಕ್ ಸಾಮಾನ್ಯೇನೋಕ್ತಂ ವಿಶಿಷ್ಯಾನುವದನ್ ಪ್ರಕಾರಾಂತರೇಣ ತದನುಗ್ರಾಹಕ ಯುಕ್ತಿಸ್ಮೃತ್ಯಾದಿಕಂ ದರ್ಶಯತಿ ॥ ಸುರಧೇನ್ವಿತ್ಯಾದಿನಾ ॥ ಯಥಾ ಪೂರ್ವೋಕ್ತನ್ಯಾಯೇನ ಸ್ವರ್ಗೇ ಸಂತಿ ಸರ್ವಜನಪೂಜ್ಯಾಶ್ಚ ಭವಂತಿ । ತಥಾ ಮೌಕ್ತಾಃ ಮುಕ್ತೌ ವಿದ್ಯಮಾನಾಶ್ಚ ಸಂತಿ ಚೇತ್ತತಃ ಕಿಂಗತಂ ನ ಕಿಮಪೀತ್ಯರ್ಥಃ ॥ ೩೯೨ ॥**

**ವಿವರಣೆ–** ರೂಪಂ ರೂಪಂ ಪ್ರತಿರೂಪೋ ಬಭೂವ ಎಂಬ ಶ್ರುತಿಯ ಚಾತುರ್ಯವನ್ನು ವರ್ಣಿಸಲು ಅದಕ್ಕೆ ಪೂರ್ವಭಾವಿಯಾಗಿ, ಆಶ್ರುತ್ಯರ್ಥಕ್ಕೆ ಸಾಧಕವಾದ ಯುಕ್ತಿ ಮತ್ತು ಸ್ಮೃತಿಗಳನ್ನು ಉದಾಹರಿಸುತ್ತಾರೆ.

ಹಿಂದೆ ಹೇಳಿದಂತೆ ಸ್ವರ್ಗದಲ್ಲಿರುವ ಕಲ್ಪವೃಕ್ಷ, ಕಾಮಧೇನು, ಶೇಷಗರುಡ ಮುಂತಾದ, ಎಲ್ಲರಿಂದಲೂ ಪೂಜ್ಯವಾದ ವಸ್ತುಗಳು ಇರುವಂತೆ ವೈಕುಂಠದಲ್ಲಿ ಅಪ್ರಾಕೃತವಾದ ಪಶುಪಕ್ಷ್ಯಾದಿಗಳು ಇರುವುದಾದರೆ ಇರಲಿ ಅದರಿಂದಾಗುವ ಹಾನಿಯಾದರೂ ಏನು? ವೈಕುಂಠದಲ್ಲಿ ಮುಕ್ತ ಪಶು ಪಕ್ಷಿಗಳನ್ನು ಒಪ್ಪಿದರೆ ನಿನಗೆ ಏನೂ ನಷ್ಟವಿಲ್ಲವಷ್ಟೇ !

**ನಿರ್ದುಃಖಾನಂದಚಿದ್ರೂಪಾಃ ಮುಕ್ತಾಸ್ತೇ ಚಿತ್ರಯೋನಯಃ ।**
**ಮತ್ಸ್ಯಕೂರ್ಮವರಾಹಾದ್ಯಾ ಇವ ನಿರ್ದೋಷಮೂರ್ತಯಃ ॥ ೩೯೩ ॥**

**ಅರ್ಥ–** ತೇ=ಆ, ಮುಕ್ತಾಃ=ಮುಕ್ತರು, ನಿರ್ದುಃಖಾನಂದಚಿದ್ರೂಪಾಃ= ದುಃಖರಹಿತವಾದ ಆನಂದ ಮತ್ತು ಚೇತನ ಸ್ವರೂಪರಾಗಿದ್ದಾರೆ. ಚಿತ್ರಯೋನಯಃ= ಚಿತ್ರವಿಚಿತ್ರವಾದ ಶರೀರ ಉಳ್ಳವರಾಗಿದ್ದಾರೆ. ಮತ್ಸ್ಯಕೂರ್ಮವರಾಹಾದ್ಯಾಃ ಇವ= ಭಗವಂತನ ಮತ್ಸ್ಯಕೂರ್ಮವರಾಹ ಶಿಂಶುಮಾರ ಮೊದಲಾದ ಅವತಾರ ರೂಪಗಳಂತೆ, ನಿರ್ದೋಷ ಮೂರ್ತಯಃ=ದೋಷರಹಿತವಾದ ಶರೀರ ಉಳ್ಳವರಾಗಿದ್ದಾರೆ.

**ಭಾವವಿಲಾಸಿನೀ– ಪ್ರಾಕ್ಸಾಮಾನ್ಯೇತ್ಯುಕ್ತಂ ವಿಶಿಷ್ಯಾನುವದನ್ನಾಹ – ನಿರ್ದುಃಖೇತಿ ॥೩೯೩॥**

**ವಿವರಣೆ–** ಹಿಂದೆ ಸಾಮಾನ್ಯವಾಗಿ ಹೇಳಿದ ವಿಷಯವನ್ನೇ ಇಲ್ಲಿ ವಿಶೇಷವಾಗಿ ಹೇಳುತ್ತಿದ್ದಾರೆ.

ಮುಕ್ತರು ದೋಷಲೇಶವಿಲ್ಲದವರು ಆದ್ದರಿಂದಲೇ ದುಃಖರಹಿತರು, ಆನಂದಸ್ವರೂಪರು ಮತ್ತು ಜ್ಞಾನ ಸ್ವರೂಪರು, ಅವರವರ ಸ್ವರೂಪಕ್ಕೆ ತಕ್ಕಂತೆ ನಾನಾ ರೀತಿಯ ಪಶುಪಕ್ಷ್ಯಾದಿ ಶರೀರ ಉಳ್ಳವರು, ಶ್ರೀಹರಿಯ ಮತ್ಸ್ಯಕೂರ್ಮಾದಿರೂಪಗಳು ಹೇಗೆ ದೋಷರಹಿತವಾಗಿವೆಯೋ, ಹಾಗೆಯೇ ಮುಕ್ತರೂ ನಿರ್ದುಷ್ಟರಾಗಿದ್ದಾರೆ.

**ಬ್ರಹ್ಮಲೋಕಾಪ್ತಚಂಡಾಲಾದ್ಯಶೇಷಪ್ರಾಣಿಸಾರ್ಥಪಃ ।**
**ಇತಿ ನಾಮಾರ್ಥತತ್ತ್ವಜ್ಞಾ ಮುಕ್ತೌ ಚೇತ್ಥಂ ಪ್ರಚಕ್ಷತೇ ।**
**ಸ್ವರ್ನೀತಗರ್ದಭಶ್ವಾದಿರಿತಿ ನಾಮಾಂತರಂ ಕಿಲ ॥ ೩೯೪ ॥**

**ಅರ್ಥ–** ನಾಮಾರ್ಥತತ್ತ್ವಜ್ಞಾಃ=ವಾಸುದೇವ ಸಹಸ್ರನಾಮಗಳ ಅರ್ಥವನ್ನು ಬಲ್ಲವರು, ಬ್ರಹ್ಮಲೋಕಾಪ್ತಚಂಡಾಲಾದ್ಯಶೇಷಪ್ರಾಣಿಸಾರ್ಥಪಃ=ಪರಬ್ರಹ್ಮನ ಲೋಕವನ್ನು ತನ್ನ

ಸಹಾಯದಿಂದಲೇ ಹೊಂದಿದ ಚಂಡಾಲರೇ ಮೊದಲಾದ ಎಲ್ಲ ಪಶುಪಕ್ಷಿ ಪ್ರಾಣಿಗಳ ಸಮೂಹವನ್ನು ಪಾಲಿಸುವ ರಾಮಚಂದ್ರನು ಎಂಬುದಾಗಿ, ಮುಕ್ತೌ=ಮೋಕ್ಷದಲ್ಲಿಯೂ ಇತ್ಥಂ=ಚಂಡಾಲರು ಮತ್ತು ಪಶುಪಕ್ಷ್ಯಾದಿಗಳು ಇರುತ್ತವೆ ಎಂಬುದಾಗಿ, ಪ್ರಚಕ್ಷತೇ= ಹೇಳುತ್ತಾರೆ. ಸ್ವರ್ನೀತಗರ್ದಭಶ್ವಾದಿಃ=ಶ್ವೇತದ್ವೀಪವನ್ನು ಕುರಿತು ಕರೆದೊಯ್ಯಲ್ಪಟ್ಟ ಕತ್ತೆ ನಾಯಿ ಮೊದಲಾದ ಪ್ರಾಣಿ ಸಮೂಹವುಳ್ಳವರು ಶ್ರೀರಾಮಚಂದ್ರ ದೇವರು ಎಂಬುದು, ನಾಮಾಂತರಂ ಕಿಲ=ಭಗವಂತನ ಇನ್ನೊಂದು ನಾಮವಾಗಿದೆಯಷ್ಟೇ.

**ಭಾವವಿಲಾಸಿನೀ–** ಬ್ರಹ್ಮಲೋಕಂ ಪರಬ್ರಹ್ಮಲೋಕಂ ವಿಷ್ಣುಲೋಕಮಿತ್ಯರ್ಥಃ ಶ್ವೇತದ್ವೀಪಂಗಂತುಃ ಶ್ರೀರಾಮಸ್ಯ ಮಧ್ಯೇಬ್ರಹ್ಮಲೋಕಾಂತರ ಅಭಾವಾತ್ ಉಕ್ತ ಏವಾರ್ಥಃ। ಆಪ್ತಾಃ ಸ್ವಸಹಾಯೇನ ಪ್ರಾಪ್ತಯೇ ಚಂಡಾಲಾದ್ಯಶೇಷಪ್ರಾಣಿನಃ। ಆದಿಶಬ್ದೇನ ಪಶ್ವಾದಿಕಂ ಗೃಹ್ಯತೇ। ತೇಷಾಂ ಸಾರ್ಥಂ ಸಮೂಹಂ ಪಾತೀತಿ ಬ್ರಹ್ಮಲೋಕಾಪ್ತಚಂಡಾಲಾದ್ಯಶೇಷಪ್ರಾಣಿಸಾರ್ಥಪಃ ಶ್ರೀರಾಮ-ಚಂದ್ರಃ। ಆಪ್ತೇತ್ಯತೀತಾರ್ಥಕ ಪ್ರತ್ಯಯಾಂತಪ್ರಯೋಗಬಲದಾಪ್ತ್ಯನಂತರಮಪಿ ಚಂಡಾಲಾದಿ ಜಾತಿವಿಭಾಗೋऽಸ್ತೀತಿ ಜ್ಞಾಯತೇ। ಇತ್ಯನೇನ ಪ್ರಕಾರೇಣ ಯೋ ವಾಸುದೇವ ಸಹಸ್ರ-ನಾಮಸ್ಥನಾಮ್ನೋऽರ್ಥಸ್ತಂ ಜಾನಂತೀತಿ ತಥೋಕ್ತಾಃ। ಇತ್ಥಂ ನಿರ್ದುಃಖಾನಂದಸ್ವರೂಪಪಶು-ಪಕ್ಷಿಚಂಡಾಲಾದಿನಾನಾಜಾತ್ಯಾಕ್ರಾಂತತ್ವ ಪ್ರಕಾರೇಣ ಆದಿಪದಸ್ಯಾರ್ಥಂ ಸ್ಪಷ್ಟತಯಾ ಜ್ಞಾಪಯಿತುಂ ರಾಮಸ್ಯೈವ ನಾಮಾಂತರಂ ವಾಸುದೇವಸಹಸ್ರನಾಮಸ್ಥಂ ಪಠತಿ॥ **ಸ್ವರ್ನೀತೇತಿ॥** ಸ್ವಃ ಶಬ್ದಬ್ರಹ್ಮಲೋಕಶಬ್ದಯೋರೇಕಸ್ಮಿನ್ನೇವ ಪ್ರಯೋಗಾತ್ ವಿಷ್ಣೋರೇವಾಯಂ ಲೋಕಃ। ಶ್ವೇತದ್ವೀಪಂ ಪ್ರತಿ ಗಚ್ಛತಾ ರಾಮೇಣ ಸಹೈವ ಪಶುಪಕ್ಷ್ಯಾದೀನಾಮಪಿ ಗಮನಪ್ರಸಿದ್ಧಿಶ್ಚ ॥೩೯॥

**ವಿವರಣೆ–** ವಾಸುದೇವಸಹಸ್ರನಾಮದಲ್ಲಿ ಬರುವ ಭಗವಂತನ ಎರಡು ನಾಮಗಳನ್ನು ಈ ಶ್ಲೋಕದಲ್ಲಿ ಉದಾಹರಿಸಿ. ಸಹಸ್ರನಾಮಗಳ ಅರ್ಥವನ್ನು ತಿಳಿದ ಜ್ಞಾನಿಗಳು ಈ ಎರಡು ನಾಮಗಳಿಗೆ ರಾಮದೇವರು ಎಂಬ ವ್ಯಾಖ್ಯಾನವನ್ನು ಮಾಡಿದ್ದಾರೆ ಎಂದು ರಾಜರು ಹೇಳಿದ್ದಾರೆ.

ಶ್ರೀ ರಾಮದೇವರು ತನ್ನ ರಾಜ್ಯಭಾರವನ್ನು ಮುಗಿಸಿ ವೈಕುಂಠಕ್ಕೆ ಹೊರಡುವಾಗ ಸಮಾಯಾತ ಸಮಾಯಾತ ಯೇ ಯೇ ಮೋಕ್ಷ ಪದೇಚ್ಛವಃ ಎಂದು ಡಂಗುರ ಸಾರಿಸಿದರು. ಆಗ ಕತ್ತೆಗಳು ನಾಯಿಗಳು ಚಂಡಾಲರು ಪಶು ಪಕ್ಷಿಗಳು ಕೀಟಗಳು ಎಲ್ಲರೂ ರಾಮದೇವರ ಜೊತೆಯಲ್ಲಿ ವೈಕುಂಠಕ್ಕೆ ಹೊರಟರು ಎಂಬುದಾಗಿ ಕಥೆಯು ಪ್ರಸಿದ್ಧವಾಗಿದೆಯಷ್ಟೇ ಆ ಕಥೆಗೆ ಅನುಗುಣವಾಗಿ ವಾಸುದೇವ ಸಹಸ್ರನಾಮದಲ್ಲಿ ಬರುವ ಈ ಎರಡು ಹೆಸರುಗಳನ್ನು ವ್ಯಾಖ್ಯಾನ ಚತುರರು ರಾಮನ ಪರವಾಗಿ ವ್ಯಾಖ್ಯಾನಿಸಿದ್ದಾರೆ. ತನ್ನ ಅಪ್ಪಣೆಯಂತೆ ತನ್ನ ಜೊತೆಗೆ ಹೊರಟ ಚಂಡಾಲರು ಪಶುಗಳು, ಪ್ರಾಣಿಗಳು, ಕೀಟಗಳು, ಇವುಗಳನ್ನು ಮೋಕ್ಷದಲ್ಲಿ ಪಾಲಿಸಿದವನು ಶ್ರೀರಾಮದೇವರು ಎಂದು ಆ ನಾಮಗಳ (ಸಾರಾಂಶ) ಅರ್ಥವಾಗಿದೆ.

ಇಲ್ಲಿ ಆಪ್ತ ಎಂಬ ಶಬ್ದವನ್ನು ಪ್ರಯೋಗಿಸಿರುವುದರಿಂದ ಮೋಕ್ಷವನ್ನು ಹೊಂದಿದ ನಂತರವೂ ಪಶು ಪಕ್ಷಿ ಚಂಡಾಲರಾಗಿಯೇ ಆ ಜೀವರು ಇದ್ದರು ಎಂದು ತಿಳಿಯುತ್ತದೆ.

ಈ ಎರಡು ನಾಮಗಳ ವ್ಯಾಖ್ಯಾನದಿಂದ ಮೋಕ್ಷದಲ್ಲಿ ನಿರ್ದುಃಖಾನಂದ ರೂಪರಾದ ಪಶು ಪಕ್ಷಿಚಂಡಾಲರೇ ಮೊದಲಾದ ನಾನಾ ಜಾತಿಯ ಜೀವರಾಶಿಗಳು ಇದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

**ವಿಷವೃಕ್ಷಫಲಾಕಾರಾ ಶರ್ಕರಾಕೃತಕೃತ್ರಿಮಾ ।**
**ಧತ್ತೇ ಕಿಂ ತಿಕ್ತತಾದೋಷಂ ಮುಕ್ತಾಸ್ತೇ ತದ್ವದೇವ ಹಿ ॥ ೩೯೫ ॥**

**ಮುಕ್ತೇರಮುಕ್ತಿತಾ ತು ಸ್ಯಾದ್ ದುಃಖೇ ಸತ್ಯೇವ ನಾನ್ಯಥಾ ।**
**ದೇಹಾದಿಃ ದುಃಖಹೇತುತ್ವಾದ್ ದುಃಖಮಿತ್ಯುಪಚರ್ಯತೇ ॥ ೩೯೬ ॥**

**ಅರ್ಥ–** ವಿಷವಕ್ಷಫಲಾಕಾರಾ=ವಿಷವೃಕ್ಷದ ಫಲದ ಆಕಾರದಂತೆ ಆಕಾರವುಳ್ಳ ಶರ್ಕರಾಕೃತ ಕತ್ರಿಮಾ=ಸಕ್ಕರೆಯಿಂದ ಮಾಡಿದ ಪ್ರತಿಮೆಯು, ತಿಕ್ತತಾ ದೋಷಂ=ಕಹಿ ಎಂಬ ದೋಷವನ್ನು, ಧತ್ತೇ ಕಿಂ? ಹೊಂದುತ್ತದೆಯೋ? ಹೊಂದುವುದಿಲ್ಲ. ತೇ=ಆ ಪ್ರಸಿದ್ಧರಾದ ಕತ್ತೆ ನಾಯಿ ಚಂಡಾಲ ಮೊದಲಾದ, ಮುಕ್ತಾಃ=ಮುಕ್ತರು, ತದ್ವದೇವ ಹಿ=ಸಕ್ಕರೆಯ ವೃಕ್ಷ ಫಲದಂತೆ ದೋಷವನ್ನು ಸ್ವೀಕರಿಸುವುದಿಲ್ಲವಷ್ಟೇ. ದುಃಖೇ=ದುಃಖವು, ಸತ್ಯೇವ=ಇದ್ದರೆ ಮಾತ್ರ, ಮುಕ್ತೇಃ=ಮೋಕ್ಷಕ್ಕೆ ಅಮುಕ್ತಿತಾ ತು=ಮೋಕ್ಷವಲ್ಲದಿರುವಿಕೆಯು, ಸ್ಯಾತ್= ಉಂಟಾದೀತು, ನಾನ್ಯಥಾ=ದುಃಖವಿಲ್ಲದೇ ಮೋಕ್ಷವು ಅಮೋಕ್ಷವಾಗಲಾರದು. ದೇಹಾದಿಃ= ಅಂತಃಕರಣ ದೇಹ ಮೊದಲಾದವುಗಳು, ದುಃಖಹೇತುತ್ವಾತ್ ಏವ=ದುಃಖಕ್ಕೆ ಕಾರಣವಾದುದರಿಂದಲೇ ದುಃಖಂ ಇತಿ=ದುಃಖವೆಂಬುದಾಗಿ, ಉಪಚರ್ಯತೇ= ಔಪಚಾರಿಕವಾಗಿ ಕರೆಯಲ್ಪಡುತ್ತವೆ.

**ಭಾವವಿಲಾಸಿನೀ–** ನನು ಜ್ಞಾನಾನಂದಸ್ವರೂಪತ್ವೇಽಪಿ ದೃಶ್ಯಮಾನಾಕಾರವಿಕಾರ ಸದ್ಭಾವಾತ್ ಕಥಂ ನ ದೋಷ ಇತ್ಯತಸ್ತತ್ರ ದೃಷ್ಟಾಂತಮಾಹ – **ವಿಷವೃಕ್ಷೇತಿ** ॥ ಕೃತ್ರಿಮಾ ತದಾಕಾರಪ್ರತಿಮಾ ॥ ೩೯೫-೩೯೬ ॥

**ವಿವರಣೆ–** ಮುಕ್ತರು ಜ್ಞಾನಾನಂದ-ಸ್ವರೂಪರಾದರೂ ಕೂಡ ಅವರಿಗೆ ಕತ್ತೆ ಹಂದಿ ಚಂಡಾಲ ಮುಂತಾದ ದೇಹಗಳಿರುವುದರಿಂದ ಆ ದೇಹಗಳಿಗೆ ಆಕಾರವಿಕಾರಗಳು ಇರುವುದರಿಂದ ಅವರು ದೋಷಿಗಳೇ ಆಗುತ್ತಾರೆ ಅಲ್ಲವೇ? ಎಂಬ ಪ್ರಶ್ನೆಗೆ ಶ್ರೀ ರಾಜರು ದೃಷ್ಟಾಂತಪುರಸ್ಸರವಾಗಿ ಮೊದಲನೆಯ ಶ್ಲೋಕದಲ್ಲಿ ಉತ್ತರಿಸಿದ್ದಾರೆ.

ವಿಷವಕ್ಷದ ಆಕಾರದಂತಿರುವ ಸಕ್ಕರೆಯ ಪ್ರತಿಮೆಯು ತನ್ನ ಸಿಹಿಯನ್ನು ಹೇಗೆ ಬಿಡುವುದಿಲ್ಲವೋ, ಮತ್ತು ವಿಷವನ್ನು ಹೇಗೆ ಗ್ರಹಿಸುವುದಿಲ್ಲವೋ ಅದರಂತೆ ಮುಕ್ತರು

ನಾನಾ ವಿಧವಾದ ಶರೀರವುಳ್ಳವರಾದರೂ ಆ ಎಲ್ಲ ಶರೀರಗಳು ಅಪ್ರಾಕೃತ ಶರೀರಗಳಾದುದರಿಂದ ಅವುಗಳಿಗೆ ವಿಕಾರವಿಲ್ಲ ಅದರ ಶರೀರಗಳು ಸಕ್ಕರೆಯಗೊಂಬೆ ಇದ್ದಂತೆ. ಸಕ್ಕರೆಯ ಗೊಂಬೆಯು ವಿಷವಕ್ಷದ ಫಲದ ಆಕಾರದಂತೆ ಇದ್ದರೂ ಅದು ವಿಷಮಯವಾಗುವುದಿಲ್ಲ. ಅದರಂತೆ ಮುಕ್ತರ ದೇಹಗಳು ದೋಷಪೂರಿತ ದೇಹಗಳಿಗೆ ಸದೃಶವಾಗಿದ್ದರೂ ಅವು ದೋಷಮಯವಲ್ಲ. ಅಪ್ರಾಕೃತವೇ ಆಗಿವೆ. ಮುಕ್ತಿಯಲ್ಲಿ ಪ್ರಕೃತಿಯಾಗಲೀ ಪ್ರಕೃತಿಜನ್ಯ ವಸ್ತುಗಳಾಗಲೀ ಇಲ್ಲವೇ ಇಲ್ಲ.

ಮುಕ್ತರೂ ದೋಷವುಳ್ಳವರಾಗಿದ್ದಾರೆ ದೇಹವುಳ್ಳವರಾದುದರಿಂದ ಚೈತ್ರನಂತೆ ಎಂಬ ಅನುಮಾನದಿಂದ ಮುಕ್ತರೂ ದೋಷಿಗಳು ಎಂದು ಸಾಧಿಸಬಹುದಲ್ಲವೇ? ಮುಕ್ತರೂ ದೋಷಿಗಳಾದರೆ ಮುಕ್ತಿಯೂ ದೋಷ ಉಳ್ಳದ್ದಾದುದರಿಂದ ಅದೂ ಅಮುಕ್ತಿಯಂತೆಯೇ ಆಯತಲ್ಲವೇ? ಎಂಬ ಪ್ರಶ್ನೆಗೆ ಶ್ರೀ ರಾಜರು ಎರಡನೆಯ ಶ್ಲೋಕದಲ್ಲಿ ಉತ್ತರಿಸಿದ್ದಾರೆ.

ಪೂರ್ವ ಪಕ್ಷಿಯು ಹೇಳಿದ ಅನುಮಾನವು ಸದನುಮಾನವಲ್ಲ. ಆ ಅನುಮಾನವು ಅಶುದ್ಧದೇಹತ್ವ ಎಂಬ ಉಪಾಧಿಗ್ರಸ್ತವಾಗಿದೆ. ಎಂಬುದಾಗಿ ಸುಮಧ್ವ ವಿಜಯದಲ್ಲಿ ನನು ವಿಪ್ರತಿಪನ್ನಃಸ್ಲಾತ್ ಎಂಬ ಶೋಕದಲ್ಲಿ ಶ್ರೀ ನಾರಾಯಣಪಂಡಿತಾಚಾರ್ಯರು ಅನುಮಾನವನ್ನು ಹೇಳಿ ಅನುಮಾನಕ್ಕೆ ಉಪಾಧಿದೋಷವನ್ನೂ ಹೇಳಿದ್ದಾರೆ.

ಮೋಕ್ಷದಲ್ಲಿ ದುಃಖ ಇದ್ದರೆ ಮಾತ್ರ ಮುಕ್ತಿಯು ಅಮುಕ್ತಿಯಾಗಲು ಸಾಧ್ಯ. ಅಲ್ಲಿ ದುಃಖವೇ ಇಲ್ಲ. ಏಕೆಂದರೆ ಅಲ್ಲಿ ದುಃಖಕ್ಕೆ ಕಾರಣವಾದ ಶರೀರವಿಲ್ಲ. ಎಲ್ಲಿ ಅಶುದ್ಧವಾದ ಅಥವಾ ಪ್ರಾಕೃತವಾದ ಶರೀರ ಇದೆಯೋ ಅಲ್ಲಿ ಮಾತ್ರ ದುಃಖಕ್ಕೆ ಅವಕಾಶ ಇದೆ. ಮೋಕ್ಷದಲ್ಲಿರುವ ಎಲ್ಲ ದೇಹಗಳೂ ಅಪ್ರಾಕೃತದೇಹಗಳಾದುದರಿಂದ ದೇಹಗಳು ದುಃಖಕ್ಕೆ ಕಾರಣವಾದ ದೇಹಗಳಲ್ಲ. ಆದ್ದರಿಂದಲೇ ವೈಕುಂಠದಲ್ಲಿ ದುಃಖಕ್ಕೆ ಅವಕಾಶವೇ ಇಲ್ಲ. ಪ್ರಾಕೃತ ದೇಹವು ದುಃಖಕ್ಕೆ ಕಾರಣವಾದುದರಿಂದ ಅದನ್ನೇ ದುಃಖವೆಂದು ಔಪಚಾರಿಕವಾಗಿ ಕರೆಯಲಾಗುತ್ತದೆ. ಶುದ್ಧಚಿದ್ದೇಹೇಂದ್ರಿಯಭೋಗ್ಯಸೌ ಎಂಬುದಾಗಿ ಸುಮಧ್ವವಿಜಯದಲ್ಲಿ ಮುಕ್ತರು ಅಪ್ರಾಕೃತವಾದ ಚಿತ್ ಸ್ವರೂಪವಾದ ದೇಹ ಮತ್ತು ಇಂದ್ರಿಯಗಳಿಂದ ಸುಖವನ್ನು ಭೋಗಿಸುತ್ತಾರೆ ಎಂದು ಹೇಳಿದ್ದರಿಂದ, ಅವರಿಗೆ ಕತ್ತೆ ಹಂದಿ ಮೊದಲಾದ ಸ್ವರೂಪ ಶರೀರಗಳಿದ್ದರೂ ದುಃಖವಿಲ್ಲ. ಆದ್ದರಿಂದ ಹಿಂದಿನ ಪ್ರಶ್ನೆಗಳಿಗೆ ಅವಕಾಶವಿಲ್ಲ.

**ತದ್ದುಃಖಂ ದುಃಖಹೇತುಶ್ಚ ದುಃಖಾನ್ಮುಕ್ತೇ ನ ಶೋಭತೇ ।**
**ಯದ್ದುಃಖಾತ್ಯಂತವಿಚ್ಛೇದಂ ಮೋಕ್ಷಮಾಹುರ್ವಿಚಕ್ಷಣಾಃ ॥ ೩೯೭ ॥**

**ಅರ್ಥ–** ಯತ್=ಯಾವ ಕಾರಣದಿಂದ, ವಿಚಕ್ಷಣಾಃ=ಜ್ಞಾನಿಗಳು, ದುಃಖಾತ್ಯಂತ–ವಿಚ್ಛೇದಂ= ದುಃಖದ ಲೇಶವೂ ಇಲ್ಲದಿರುವುದೇ ಮೋಕ್ಷಂ=ಮೋಕ್ಷ ಎಂಬುದಾಗಿ

ಆಹುಃ=ಹೇಳು ತ್ತಾರೆಯೋ ತತ್=ಆದ್ದರಿಂದ, ದುಃಖಂ=ದುಃಖಮಯವಾದ, ಚ= ಮತ್ತು ದುಃಖಹೇತುಃ=ದುಃಖಕ್ಕೆ ಕಾರಣವಾದ ಪ್ರಾಕೃತ ದೇಹವು. ದುಃಖಾತ್= ದುಃಖದಿಂದ, ಮುಕ್ತೇ=ಬಿಡುಗಡೆ ಹೊಂದಿದ ಮುಕ್ತನಲ್ಲಿ, ನ ಶೋಭತೇ= ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ತತ್ ತಸ್ಮಾತ್ ದುಃಖರೂಪತ್ವಾದ್ ದುಃಖದಾಯಕತ್ವಾಚ್ಚ ದುಃಖಹೇತು- ರ್ದುಃಖಹೇತುಭೂತಪ್ರಾಕೃತದೇಹಾದಿಕಂ ಚ । ಮುಕ್ತೇ ಮೋಚನಂ ಪ್ರಾಪ್ತೇ ಮುಕ್ತ- ಸಮುದಾಯೇ । ಯದ್ಯಸ್ಮಾತ್ ॥ ೩೯೭ ॥

**ವಿವರಣೆ–** ಎಲ್ಲಿ ದುಃಖದ ಲೇಶವೂ ಇಲ್ಲವೋ ಅದೇ ಮೋಕ್ಷ ಎಂದು ಜ್ಞಾನಿಗಳು ಹೇಳಿರುವುದರಿಂದ, ಸಂಸಾರದಿಂದ ಮುಕ್ತನಾದ, ಅಂದರೆ ದುಃಖ ಸ್ವರೂಪವಾದ ಮತ್ತು ದುಃಖಕ್ಕೆ ಕಾರಣವಾದ ಪ್ರಾಕೃತ ದೇಹದಿಂದ ರಹಿತನಾದ ಮುಕ್ತನಲ್ಲಿ ದುಃಖಕ್ಕೆ ಅವಕಾಶವೇ ಇಲ್ಲ. ವಿರಜಾನದಿ ಸ್ನಾನದಿಂದ ದುಃಖಕ್ಕೆ ಕಾರಣವಾದ ಲಿಂಗಶರೀರವನ್ನು ಕಳೆದುಕೊಂಡ ಮುಕ್ತನಿಗೆ (ಮತ್ತೆ) ದುಃಖವು ಹೇಗೆ ಸಾಧ್ಯ? ಖಂಡಿತವಾಗಿಯೂ ಅವನಿಗೆ ದುಃಖವಿಲ್ಲ.

**ನಿರ್ದುಃಖಾನಂದದೇಹಸ್ತು ಯದಿ ಸ್ಯಾತ್ ಪರಮಾತ್ಮವತ್ ।**
**ತಚ್ಚಿತ್ರತಾಯಾಮಪಿ ಚ ಕಿಂ ವಿತ್ತಂ ತವ ನಶ್ಯತಿ ॥ ೩೯೮ ॥**

**ಅರ್ಥ–** ಯದಿ=ಯಾವ ಪಕ್ಷದಲ್ಲಿ (ಒಂದು ವೇಳೆ) ಮುಕ್ತರಿಗೆ, ನಿರ್ದುಃಖಾನಂದದೇಹಂ ದುಃಖಮಯವಲ್ಲದ, ದುಃಖದಾಯಕವೂ ಅಲ್ಲದ ಆನಂದ ಸ್ವರೂಪವಾದ ದೇಹವು ಸ್ಯಾತ್ ತು=ಇರುವುದಾದರೆ, ಪರಮಾತ್ಮವತ್=ಪರಮಾತ್ಮನಂತೆ ತಚ್ಚಿತ್ರತಾಯಾಂ ಅಪಿ=ಆ ಮುಕ್ತರ ದೇಹಗಳು ಪಶು, ಪಕ್ಷಿ, ಮುಂತಾದ ವಿಧವಿಧವಾದ ರೂಪವುಳ್ಳವುಗಳಾದರೂ ಕೂಡ, ತವ=ನಿನ್ನ ವಿತ್ತಂ=ಹಣವು, ನಶ್ಯತಿ ಕಿಂ=ನಾಶವಾಗುತ್ತದೆಯೇ? ಇಲ್ಲವಷ್ಟೇ.

**ಭಾವವಿಲಾಸಿನೀ–** ತಚ್ಚಿತ್ರತಾಯಾಂ ಪಶುಪಕ್ಷ್ಯಾದಿರೂಪೇಣ ದೇಹಚಿತ್ರತಾಯಾಮ್ । ಹೀನಾಪಿ ಯೋನಿರ್ನಯೋನಿತ್ವೇನ ದೂಷಣಮ್ । ವಿಷ್ಣೋರ್ಮತ್ಸ್ಯಾದಿಷು ಯೋನಿಷು ತದರ್ಶನಾತ್ । ಕಿಂತು ದುಃಖದತ್ವೇನೈವ । ಮೌಕ್ತಿಕಹೀನಯೋನಿಷ್ವಪಿ ನಾಸ್ತ್ಯೇವ ಸಾ ಅಲೌಕಿಕೀತಿ ಚೇತ್ ಇಯಮಪ್ಯಲೌಕಿಕೀತಿ ಭಾವಃ ತದಿತಿ ಭಾವಃ ॥ ೩೯೮ ॥

**ವಿವರಣೆ–** ವಿರಜಾನದಿಯಲ್ಲಿ ಮಿಂದು ದುಃಖಸ್ವರೂಪವಾದ, ದುಃಖಕ್ಕೆ ಕಾರಣವಾದ ಲಿಂಗ ಶರೀರವನ್ನು ಕಳೆದುಕೊಂಡು ಮೋಕ್ಷಕ್ಕೆ ಹೋದ ಮುಕ್ತನಿಗೆ ಅಪ್ರಾಕೃತವಾದ, ದುಃಖದ ಸಂಬಂಧವೇ ಇಲ್ಲದ, ಆನಂದಮಯವಾದ, ಚೇತನ ಸ್ವರೂಪವಾದ ದೇಹವು ಇದೆ ಎಂಬುದಾಗಿ ಶ್ರುತಿ ಸ್ಮೃತಿ ಅನುಮಾನಗಳಿಂದ ಸಿದ್ಧವಾಗುತ್ತದೆ.

ಹೀಗೆ ಮುಕ್ತರಿಗೆ ನಿರ್ದುಃಖಾನಂದ ಶರೀರಗಳು ಇವೆ ಎಂದಾದ ಮೇಲೆ ಅವರಿಗೆ ಪಶು ಪಕ್ಷ್ಯಾದಿರೂಪವಾದ ನಾನಾ ಬಗೆಯ ಆನಂದ ಸ್ವರೂಪಗಳಾದ ಶರೀರಗಳು ಶ್ರುತಿ ಸ್ಮೃತಿ ರೂಪ ಪ್ರಮಾಣ ಸಿದ್ಧವಾಗಿರುವುದರಿಂದ ಅವುಗಳನ್ನು ಅಂಗೀಕರಿಸಿದರೆ ನಿನಗೇನು ನಷ್ಟ? ನಿನ್ನ ಗಂಟು ನಷ್ಟವಾಗುತ್ತದೆಯೇ? ಇಲ್ಲವಲ್ಲ.

ಪಶು ಪಕ್ಷ್ಯಾದಿ ಹೀನ ಶರೀರವಿರುವುದೇ ದೋಷವಲ್ಲ. ಆ ಶರೀರಗಳು ದುಃಖಕ್ಕೆ ಕಾರಣವಾದಾಗ ಮಾತ್ರ ದೋಷವಾಗುತ್ತದೆ. ಭಗವಂತನಿಗೆ ಮತ್ಸ್ಯಕೂರ್ಮ ಮೊದಲಾದ ಹೀನ ಶರೀರಗಳಂತೆ ಇರುವ ಶರೀರಗಳಿವೆ ಎಂದ ಮಾತ್ರಕ್ಕೆ ಅದು ದೋಷವೇ? ಖಂಡಿತವಾಗಿಯೂ ದೋಷವಲ್ಲ ಅದರಂತೆ ದುಃಖಕ್ಕೆ ಕಾರಣವಲ್ಲದ ಚಿದಾನಂದಾತ್ಮಕವಾದ ಪಶುಪಕ್ಷ್ಯಾದಿ ಶರೀರಗಳು ಮುಕ್ತರಿಗೆ ಇದ್ದರೂ ಅವುಗಳಿಂದ ಅವರಿಗೆ ದುಃಖವಾಗುವುದಿಲ್ಲ ಆದ್ದರಿಂದ ಆ ಶರೀರಗಳು ಇರುವುದರಿಂದ ಯಾರಿಗೂ ಯಾವ ಹಾನಿಯೂ ಇಲ್ಲ.

**ಪುರುರೂಪಸ್ಯ ತಸ್ಯೇಮೇ ಪ್ರತಿರೂಪಾಃ ಕಿಲಾಖಿಲಾಃ ।**
**ಶ್ರುತಿಸಿದ್ಧಂ ತತೋ ಜೀವನಾನಾರೂಪಂ ನ ಸಂಶಯಃ ॥ ೩೯ ॥**

**ಅರ್ಥ–** ಇವೇ ಅಖಿಲಾಃ= ಈ ಎಲ್ಲಾ ಜೀವರೂ ಪುರುರೂಪಸ್ಯ, ತಸ್ಯ= ಬಹುರೂಪವುಳ್ಳ ಅವನ, ಪ್ರತಿರೂಪಾಃ ಕಿಲ= ಪ್ರತಿಬಿಂಬರಷ್ಟೇ. ತತಃ= ಆದ್ದರಿಂದ, ಜೀವನಾನಾರೂಪಂ= ಜೀವರಿಗೆ ಬಹುರೂಪತ್ವವು, ಶ್ರುತಿಸಿದ್ಧಂ= ಶ್ರುತಿಯಿಂದ ಸಿದ್ಧವಾಯಿತು. ನ ಸಂಶಯಃ= ಸಂಶಯವಿಲ್ಲ.

**ಅನುವಾದ–** ಈ ಎಲ್ಲಾ ಜೀವರೂ ಬಹುರೂಪವುಳ್ಳ ಹರಿಯ ಪ್ರತಿಬಿಂಬರಷ್ಟೆ? ಆದ್ದರಿಂದ ಜೀವರಿಗೆ ಬಹುರೂಪತ್ವವು ಶ್ರುತಿಯಿಂದ ಸಿದ್ಧವಾಯಿತು. ಇದರಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಅಧುನಾ ಜೀವಸ್ವರೂಪೇ ವೈಚಿತ್ರ್ಯಸಾಧಿಕಾಯಾ ''ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ । ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾ ಹ್ಯಸ್ಯ ಹರಯಃ ಶತಾ ದಶೇ''ತಿ ಶ್ರುತೇರರ್ಥಮಾಹ – **ಪುರುರೂಪಸ್ಯೇತಿ ॥** ಅಯಂ ಸಮುದಾಯಾರ್ಥಃ । ಇಂದ್ರಃ ಪರಮೈಶ್ವರ್ಯಸಂಪನ್ನಃ ಪರಮಾತ್ಮಾ । ಶಕ್ರಪ್ರತಿಬಿಂಬತ್ವಸ್ಯ ಕೈರಪ್ಯನಂಗೀಕಾರಾನ್ನಿರ್ಗುಣಬ್ರಹ್ಮಣ ಪುರುರೂಪತ್ವಾಭಾವಾಚ್ಚ ವಿಷ್ಣುರೇವೇಂದ್ರಃ । ಮಾಯಾಭಿಃ (ಸ್ವೇಚ್ಛಾಭಿಃ) ಮಾಂ ಅವತಾರಸಂಪದಂ ಪ್ರಾಪಯಂತೀತಿ ವ್ಯುತ್ಪತ್ತ್ಯಾ ಸ್ವೇಚ್ಛಾಭಿಃ ಏಕೈತೇರೂಪಗ್ರಹಣ ದಶಾಯಾಂ ಏಕೈಕಚ್ಛಾಯಾಃ ಸತ್ವಾತ್ ಬಹುವಚನಂ । ಸ್ವಲಕ್ಷ್ಮೀರೂಪೈಃ ಸಹ ವಾ । ಪುರುರೂಪಃ ಪುರೂಣ್ಯನಂತಾನಿ ನಾನಾವಿಧಾನಿ ಚ ರೂಪಾಣಿ ಯಸ್ಯ ಪರಮಾತ್ಮನಃ ಸ ತಥೋಕ್ತಃ । ಈಯತೇ ಪ್ರತಿಪಾದ್ಯತೇ ಶ್ರುತಿಪುರಾಣಾದೌ ।

ಅಸ್ಯ ಪರಮಾತ್ಮನಃ । ಹರಯೋ ದುರಿತಹರಣಶೀಲತ್ವಾದ್ಧರಿನಾಮಾನಃ ಶತನಾರಾಯಣಾದಿ-ಶತಮೂರ್ತಯಃ । ದಶ ಮತ್ಸ್ಯಕೂರ್ಮಾದಿ ದಶಮೂರ್ತಯಶ್ಚ । ಯುಕ್ತಾ ಹ್ಯಾಕಾರ ವೈಚಿತ್ರ್ಯೇಣಾಯುಧವೈಚಿತ್ರ್ಯೇಣ ಚ ಯುಕ್ತಾ ಹಿ । ಅತಃ ಪುರುರೂಪತಯೋಕ್ತ ಇಂದ್ರಃ ಪರಮಾತ್ಮೈವ । ತಸ್ಯೈವ ದಶರೂಪತ್ವಶತರೂಪತ್ವಸಿದ್ಧೇಃ ಅಸ್ಯ ಇಂದ್ರ ರಥಸ್ಯ ದಶಶತಾಃ ಸಹಸ್ರಮಿತ್ಯರ್ಥಃ । ಹರಯಃ ಅಶ್ವಾ ಇತಿ ಕಶ್ಚಿತ್ । ತದಸತ್ । ಅಸ್ಯೇತೀಂದ್ರಸ್ಯೈವ ಪ್ರಸ್ತುತತ್ವೇನ ರಥಸ್ಯಾಪ್ರಸ್ತುತತ್ವಾತ್ । ಶತಂ ಶತಾಸ್ತೇ ಹರಯಃ ತಸ್ಮಿನ್ ಯುಕ್ತಾ ಮಹಾರಥೇ । ತಥಾ ಮಾತಲಿನಾ ತೂರ್ಣಂ ಹಯಾಶ್ಯಾಸನ್ ಪ್ರಚೋದಿತಾಃ । ತಾನ್ ದೃಷ್ಟ್ವಾ ದಶಸಾಹಸ್ರಾನ್ ಮಯೂರಸದೃಶಾನ್ ಹಯಾನ್ । ರಥಂ ಚ ರವಿಸಂಕಾಶಂ ಪ್ರಾದ್ರವನ್ ಶತಶಃ ಸ್ತ್ರಿಯಃ ಇತಿ ಭಾರತೋಕ್ತ್ಯಾ ಇಂದ್ರರಥಸ್ಯ ಅಯುತಾಶ್ವತ್ವಾಚ್ಚಾಯುಕ್ತೋಽಯಮರ್ಥಃ । ಪುರುರೂಪತ್ವಸ್ಯ ಪ್ರಾಕ್ ಪ್ರಸ್ತಾವಿತತ್ವೇನ ತದ್ರೂಪ ಬಾಹುಲ್ಯಸ್ಯೈವ ನ್ಯಾಯತ್ವಾಚ್ಚ । ಸರ್ವಾಣ್ಯಪಿ ರೂಪಾಣಿ ಸ್ವಪರಮೈಶ್ವರ್ಯ ಸಾಮರ್ಥ್ಯಾದೇವಾವಿರ್ಭೂತಾನಿ ನತು ಕರ್ಮಜಾತಾನಿ ಸ್ವಯಂ ಚ ಪರಮೈಶ್ವರ್ಯ ಸಂಪನ್ನಾನೀತಿ ಸೂಚನಾಯೇಂದ್ರ ಇತ್ಯುಕ್ತಮ್ । ಅತ ಏವ ಮಾಯಾ ಚೇಚ್ಛಾ ಶ್ರೀರ್ವಾಽತ್ರ ವಿವಕ್ಷಿತಾ । ನತು ಪರಾಭಿಮತಾಽವಿದ್ಯಾ । ಪರಮೈಶ್ವರ್ಯಶಕ್ತಿವಿರೋಧಾತ್ । ಪರಮತೇಽವಿದ್ಯಾಯಾ ಏಕತ್ವೇನ ಬಹುವಚನವಿರೋಧಾತ್ । ಚಿನ್ಮಾತ್ರಾಶ್ರಿತತ್ವಾಂಗೀಕಾರಾಚ್ಚ ಹರಿಶಬ್ದೋಕ್ತಾನಿಷ್ಟಹರಣಸಾಮರ್ಥ್ಯ ವಿರೋಧಾಚ್ಚ । 'ಸ್ವಚ್ಛಂದೋಪಾತ್ತದೇಹಾಯ' 'ತಸ್ಯೇಚ್ಛಯಾತ್ತವಪುಷಃ ಕುತ ಏವ ಬಂಧ' ಇತ್ಯಾದಿ ಪ್ರಮಾಣವಚನೈರ್ಭಗವದವತಾರಾಣಾಂ ತತ್ತತ್ಕಾಲಾವಿರ್ಭೂತಸ್ವಭಕ್ತ ಬ್ರಹ್ಮಸುರಭೂಪ್ರಹ್ಲಾದಾದ್ಯನಿಷ್ಟಪರಿಜಿಹೀರ್ಷಯಾ ಸ್ವಭಕ್ತಾಭೀಪ್ಸಿತಪುರುಷಾರ್ಥಾದಿತ್ಸಾ ದೇವರಿರಕ್ಷಾ ದೈತ್ಯಜಿಘಾಂಸಾದಿರೂಪೇಚ್ಛಾ ಮೂಲಂ । ರೂಪಸ್ಯ 'ತಾಂ ರುಗ್ಮಿಣೀಂ ಶ್ರಿಯಮನನ್ಯಗತಿಂ ನಿರೀಕ್ಷ್ಯಯಾ ಲೀಲಯಾ ಧೃತತನೋ-ರನುರೂಪರೂಪಾ ಇತಿ ವಚನಾನುಸಾರೇಣ ಸ್ವಾವತಾರೈಃ ಸಹಾವತೀರ್ಣಬಹುತರ ಶ್ರೀರೂಪಸಹಿತತ್ವಸ್ಯನ್ಯಾಯ್ಯತ್ವಾತ್ । ಲೀಲಯೇತ್ಯುಕ್ತ್ಯಾ ಕುತ ಏವಂ ಬಂಧ ಇತಿ ಬಂಧಪ್ರತಿ-ಷೇಧೇನ ಚ ಬಂಧಕಾವಿದ್ಯಾಮೂಲತ್ವಸ್ಯ ಬಾಧಿತತ್ವಾಚ್ಚ । ''ದುರ್ಗೇತಿ ಭದ್ರಕಾಲೀತಿ ವಿಜಯೀ ವೈಷ್ಣವೀತಿ ಚ । ಮಾಯಾ ನಾರಾಯಣೀಶಾನಾ ಶಾರದೇತ್ಯಂಬಿಕೇತಿಚ । ನಾಮಧೇಯಾನಿ ಕುರ್ವಂತಿ ಸ್ಥಾನಾನಿ ಚನರಾಭುವಿ ಇತಿ ವಚನೇನ ಮಾಯಾಶಬ್ದಸ್ಯ ನಾರಾಯಣೀ ವೈಷ್ಣವೀತ್ಯುಕ್ತ ಶ್ರೀರೂಪದುರ್ಗಾನಾಮಧೇಯಪಙ್ಕ್ತೌ ಪಠಿತತ್ವಾತ್ । 'ಮಹಾಮಾಯೇತ್ಯವಿದ್ಯೇತಿ ನಿಯತಿ-ರ್ಮೋಹಿನೀತಿ ಚ । ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತಕಥ್ಯತೇ ॥'

ಇತೀಚ್ಛಾನಾಮಧೇಯಪಂಕ್ತೌ ಪಠಿತತ್ವಾಚ್ಚ । ಮಾಂ ಸಂಪದ್ರೂಪಲಕ್ಷ್ಮೀಂ ಮಾಂ ಪ್ರಮಾಂ ವಾ ಯಾಪಯತೀತಿ ವ್ಯುತ್ಪತ್ತ್ಯೋಭಯತ್ರಾಪಿ ಮಾಯಾಶಬ್ದಸ್ಯ ಯೋಗಸಂಭವಾಚ್ಚ । ಮಯನಿರ್ಮಿತತ್ವೇನ ಮಯಸಂಬಂಧಿತಯಾ ಮಾಯಾಶಬ್ದವಾಚ್ಯೈಂದ್ರಜಾಲಿಕಕುವಿದ್ಯಾಯಾ ಮಾಯಾಯುದ್ಧವಿಶಾರದೇಷು ದೈತ್ಯೇಷು ಸಂಭವೇನ ತಸ್ಮಾದಪ್ಯಾದೌ ವಿದ್ಯಮಾನೇ ಪುರುಷೇ 'ವಿಜ್ಞಾನಾಸ್ತ್ರೇಣ ತಾಂ ಮಾಯಾಮಪಾಸ್ಯ ನಿಮಿಷಾಂತರೇ' ಇತಿ ವಚನಾನ್ಮಾಯಾನಿರ್ಹರಣ ಸಮರ್ಥವಿಜ್ಞಾನ ಶಕ್ತಿಯುಕ್ತೇ ಭಗವತ್ಯಯೋಗಾಚ್ಚ ।

ಪುರುರೂಪಸ್ಯ ತಸ್ಯ ಪರಮಾತ್ಮನಃ ರೂಪಂ ರೂಪಂ ಪ್ರತಿ ಅಸ್ಯೇತ್ಯತ್ರೋಕ್ತೋ ಜೀವಃ ಪ್ರತಿರೂಪಃ ಪ್ರತಿ ರೂಪಂ ಯಸ್ಯೇತಿ ವ್ಯುತ್ಪತ್ತ್ಯಾ ತದ್ರೂಪಸಮಾನರೂಪತಯಾ ಪ್ರತಿರೂಪಪದವಾಚ್ಯಃ ಪ್ರತಿಬಿಂಬೋ ಬಭೂವ । ತತ್ ಬಿಂಬಭೂತಂ ಭಗವದ್ರೂಪಂ ಅಸ್ಯ ಜೀವಸ್ಯ ಪ್ರತಿಚಕ್ಷಣಾಯಾಽಪರೋಕ್ಷಜ್ಞಾನಾಯ । ಮೋಕ್ಷಸಾಧನೀಭೂತಾಪರೋಕ್ಷಜ್ಞಾನಂ ಬಿಂಬಭೂತ ತದ್ರೂಪ ವಿಷಯಕಮೇವ ಭವೇದಿತ್ಯರ್ಥಃ । ಪುರುರೂಪಸ್ಯ ಹರೇ ರೂಪಾಣಿ ಶತಾದಶೇತಿ ಪ್ರಸ್ತಾವ್ಯ ರೂಪಂ ರೂಪಮಿತಿ ವೀಪ್ಸಯಾ ಮತ್ಸ್ಯಾದಿ ಭಗವದ್ರೂಪಾಣಾಮಪಿ ಪ್ರತಿರೂಪಜೀವಸಿದ್ಧ್ಯಾ ಜೀವಾನಾಮಪಿ ಮತ್ಸ್ಯಕೂರ್ಮವರಾಹ ನರಸಿಂಹ ಶಿಂಶುಮಾರಾದ್ಯಾಕಾರವತ್ತ್ವಸಿದ್ಧಿರಿತಿ ಭಾವಃ। ಪುರುರೂಪಸ್ಯ ಪೂರ್ಣಾನೇಕರೂಪಸ್ಯ ತಸ್ಯ ಪರಮಾತ್ಮನಃ ಇಮೇ ಜೀವಾಃ ಪ್ರತಿರೂಪಾಃ ಸಮಾನರೂಪಾಃ ॥ ೩೯ ॥

**ವಿವರಣೆ–** ಈಗ 'ರೂಪಂ ರೂಪಂ ಪ್ರತಿರೂಪೋ ಬಭೂವ ತದಸ್ಯ ರೂಪಂ ಪ್ರತಿಚಕ್ಷಣಾಯ। ಇಂದ್ರೋ ಮಾಯಾಭಿಃ ಪುರುರೂಪ ಈಯತೇ ಯುಕ್ತಾಹ್ಯಸ್ಯ ಹರಯಃ ಶತಾ ದಶ' ಎಂಬ ಜೀವಸ್ವರೂಪದಲ್ಲಿಯೇ ವೈಚಿತ್ರ್ಯವನ್ನು ಪ್ರತಿಪಾದಿಸುವ ಶ್ರುತಿಯ ಅರ್ಥವನ್ನು ವಿಚಾರಮಾಡುತ್ತಾರೆ. ಇಲ್ಲಿ ಇಂದ್ರಶಬ್ದದಿಂದ ಶ್ರುತಿವಿಪತ್ತಿಯನ್ನು ತೆಗೆದುಕೊಳ್ಳಬಾರದು. ಏಕೆಂದರೆ ಎಲ್ಲ ಜೀವರು ಆ ಇಂದ್ರನ ಪ್ರತಿಬಿಂಬವೆಂದು ಯಾವ ವಾದಿಗಳು ಒಪ್ಪುವುದಿಲ್ಲ. ಅಥವಾ ಇಂದ್ರನಿಂದಲೇ ನಿರ್ಗುಣಬ್ರಹ್ಮ ಎಂದು ತೆಗೆದುಕೊಳ್ಳಲು ಬರುವುದಿಲ್ಲ. ಏಕೆಂದರೆ ಇಲ್ಲಿ ಇಂದ್ರನಿಗೆ ಪುರುರೂಪ ಎಂಬ ಶಬ್ದದಿಂದ ಬಹುರೂಪತ್ವವನ್ನು ಹೇಳಿದೆ. ಆದ್ದರಿಂದ ಇಂದ್ರನೆಂದರೆ ಪರಮೈಶ್ವರ್ಯಸಂಪನ್ನನಾದ ವಿಷ್ಣುವೇ ಆಗಬೇಕು. ಮಾಯಾ ಎಂಬ ಶಬ್ದಕ್ಕೆ ಮಾಂ= ಅವತಾರಸಂಪತ್ತನ್ನು ಯಾಃ= ಹೊಂದಿಸುತ್ತವೆ ಎಂಬ ವ್ಯುತ್ಪತ್ತಿಯಿಂದ ಇಚ್ಛೆ ಎಂದು ಅರ್ಥ. ಒಂದೊಂದು ರೂಪವನ್ನು ತೆಗೆದುಕೊಳ್ಳಲು ಒಂದೊಂದು ಇಚ್ಛೆಯನ್ನು ಮಾಡುವುದರಿಂದ ಅನೇಕರೂಪಗಳನ್ನು ತೆಗೆದುಕೊಳ್ಳಲು ಅನೇಕ ಇಚ್ಛೆಗಳು ಇರುವುದರಿಂದ ಮಾಯಾಭಿಃ ಎಂಬಲ್ಲಿರುವ ಬಹುವಚನವು ಕೂಡುತ್ತದೆ. ಅಥವಾ ಮಾಯಾಶಬ್ದಕ್ಕೆ ಲಕ್ಷ್ಮೀ ಎಂದೂ ಅರ್ಥವನ್ನು ಮಾಡಬಹುದು. ಆಗ ಸಃ ಎಂಬ ಪದವನ್ನು ಅಧ್ಯಾಹಾರಮಾಡಬೇಕು. ಅಂತಹ ಲಕ್ಷ್ಮಿಯರೂಪಗಳ ಜೊತೆಯಲ್ಲಿ ಅನಂತ ನಾನಾವಿಧವಾದ ರೂಪವುಳ್ಳ ಪರಮಾತ್ಮನು ಪುರುರೂಪನೆಂದು ಶ್ರುತಿಪುರಾಣಾದಿಗಳಲ್ಲಿ ಪ್ರತಿಪಾದ್ಯನಾಗಿದ್ದಾನೆ. ಅಂತಹ ಈ ಪರಮಾತ್ಮನಿಗೆ ಹರಯಃ ಎಂದರೆ ಪಾಪಪರಿಹಾರಸ್ವಭಾವವುಳ್ಳ ಕಾರಣದಿಂದ ಹರಿ ಎಂದು ಕರೆಯಿಸಲ್ಪಡುವ ಶತಾ ನಾರಾಯಣಾದಿಶತಮೂರ್ತಿಗಳು, ಮತ್ಸ್ಯಾದಿ ದಶಮೂರ್ತಿಗಳು, ಯುಕ್ತಾಃ= ಅನೇಕ ಆಕಾರಗಳಿಂದ ಮತ್ತು ಅನೇಕ ಆಯುಧಗಳಿಂದ ಕೂಡಿದವುಗಳಾಗಿವೆ ಎಂದು ಹೇಳಿರುವುದರಿಂದ ಈ ಇಂದ್ರನು ಶಚಿಪತಿಯಲ್ಲ. ಏಕೆಂದರೆ ಅವನಿಗೆ ಇಂತಹ ಶತರೂಪಗಳ ಅಥವಾ ದಶರೂಪಗಳ ಪ್ರಸಿದ್ಧಿ ಇಲ್ಲ. ಕೆಲವರು ಯುಕ್ತಾಹ್ಯಸ್ಯ ಎಂಬಲ್ಲಿ ಅಸ್ಯ ಎಂಬ ಶಬ್ದದಿಂದ ಇಂದ್ರನ ರಥವನ್ನು

ತೆಗೆದುಕೊಂಡು ಅದಕ್ಕೆ ಮೂರುಕುದುರೆಗಳು ಕಟ್ಟಲ್ಪಟ್ಟಿವೆ ಎಂದು ಅರ್ಥಮಾಡುತ್ತಾರೆ. ಅದು ಸರಿಯಲ್ಲ. ಏಕೆಂದರೆ ಇಲ್ಲಿ ಇಂದ್ರ ಎಂಬ ಶಬ್ದದಿಂದ ಇಂದ್ರನೇ ಪ್ರಸ್ತುತನಾಗಿದ್ದಾನೆ ಹೊರತು ಇಂದ್ರನ ರಥವು ಪ್ರಸ್ತುತವಾಗಿಲ್ಲ. ಅಂದರೆ 'ಶತಂ ಶತಾಸ್ತೇಹರಯಃ ತಸ್ಮಿನ್ ಯುಕ್ತಾಮಹಾರಥೇ । ತಥಾ ಮಾತಲಿನಾತೂರ್ಣಂ ಹಯಾಶ್ಚಾಪನ್ ಪ್ರಚೋದಿತಾಃ । ತಾನ್ ದೃಷ್ಟ್ವಾದಶಸಾಹಸ್ರಾನ್ ಮಯೂರಸದೃಶಾನ್ ಹಯಾನ್ । ರಥಂ ಚ ರವಿಸಂಕಾಶಂ ಪ್ರಾದ್ರವನ್ ಶತಶಃ ಸ್ತ್ರಿಯಃ' ಎಂಬ ಭಾರತ ವಚನವು ಇಂದ್ರನರಥಕ್ಕೆ ಹತ್ತುಸಾವಿರ ಕುದುರೆಗಳು ಕಟ್ಟಲ್ಪಟ್ಟಿವೆ ಎಂದು ಹೇಳಿದೆ. ಆದ್ದರಿಂದ ಅಸ್ಯ ಎಂಬ ಶಬ್ದದಿಂದ ಇಂದ್ರನ ರಥವನ್ನು ತೆಗೆದುಕೊಳ್ಳುವುದು ಸರಿಯಲ್ಲ. ಪೂರ್ವಾರ್ಧದಲ್ಲಿ ಪುರುರೂಪಶಬ್ದದಿಂದ ಯಾವ ರೂಪಗಳು ಪ್ರಸ್ತುತವಾಗಿದೆಯೋ ಅವುಗಳನ್ನೇ ಇಲ್ಲಿ ಗ್ರಹಣಮಾಡುವುದು ನ್ಯಾಯವಾಗುತ್ತದೆ. ಎಲ್ಲ ರೂಪಗಳು ತಮ್ಮ ಪರಮೇಶ್ವರಸಾಮರ್ಥ್ಯದಿಂದಲೇ ಪ್ರಾದುರ್ಭೂತವಾಗಿದೆ. ಕರ್ಮಫಲವಾಗಿ ಅಲ್ಲ. ಮತ್ತು ಎಲ್ಲ ರೂಪಗಳು ಪರಮೈಶ್ವರ್ಯಸಂಪನ್ನವಾಗಿವೆ ಎಂದು ಸೂಚಿಸಲು ಇಂದ್ರ ಎಂದು ಉಕ್ತವಾಗಿದೆ. ಆದ್ದರಿಂದಲೇ ಇಲ್ಲಿ ಮಾಯಾಶಬ್ದಕ್ಕೆ ಇಚ್ಛೆ ಎಂದಾಗಲೀ ಅಥವಾ ಲಕ್ಷ್ಮೀರೂಪವೆಂದಾಗಲೀ ಅರ್ಥವಾಗುತ್ತದೆಯೇ ಹೊರತು ಪರರಿಗೆ ಅಭಿಪ್ರೇತವಾದ ಅವಿದ್ಯೆಯು ಅಭಿಪ್ರೇತವಲ್ಲ. ಏಕೆಂದರೆ ಇಂದ್ರನಿಗೆ ಅಂತಹ ಅವಿದ್ಯೆಯನ್ನು ಒಪ್ಪಿದರೆ ಇಂದ್ರಶಬ್ದದಿಂದ ಹೇಳಲ್ಪಟ್ಟ ಪರಮೈಶ್ವರ್ಯಕ್ಕೆ ವಿರೋಧವುಂಟಾಗುತ್ತದೆ. ಮತ್ತು ಪರಮತದಲ್ಲಿ ಅವಿದ್ಯೆಯು ಒಂದೇ ಇರುವುದರಿಂದ ಮಾಯಾಭಿಃ ಎಂಬಲ್ಲಿರುವ ಬಹುವಚನವೂ ಕೂಡುವುದಿಲ್ಲ. ಅಲ್ಲದೆ ಪರರು ಅಂತಹ ಅವಿದ್ಯೆಯು ಚಿನ್ಮಾತ್ರಾಶ್ರಿತ ಎಂದು ಅಂಗೀಕರಿಸುತ್ತಾರೆಯೇ ಹೊರತು ಇಂದ್ರಾಶ್ರಿತ ಎಂದು ಅಂಗೀಕರಿಸುವುದಿಲ್ಲ. ಹರಿಶಬ್ದವು ದುರಿತಹರಸಾಮರ್ಥ್ಯವನ್ನು ಹೇಳುತ್ತದೆ. ಅವನಿಗೆ ಅವಿದ್ಯೆಯನ್ನು ಒಪ್ಪಿದರೆ ಇಲ್ಲಿಯೇ ಇರುವ ಹರಿಶಬ್ದದ ವಿರೋಧವೂ ಬರುತ್ತದೆ. 'ಸ್ವಚ್ಛಂದೋಪಾತ್ತದೇಹಾಯ', 'ತಸ್ಯೈಚ್ಛಯಾತ್ತವಪುಷಃ ಕುತ ಏವ ಬಂಧಃ' ಇತ್ಯಾದಿ ಪ್ರಮಾಣವಚನಗಳು ಆಯಾ ಕಾಲದಲ್ಲಿ ಆವಿರ್ಭೂತವಾದ ರೂಪಗಳಿಗೆ ಭಕ್ತರಾದ ಬ್ರಹ್ಮ, ಪ್ರಹ್ಲಾದ ಮೊದಲಾದವರ ಅನಿಷ್ಟವನ್ನು ಪರಿಹಾರವನ್ನು ಮಾಡಿ ಇಷ್ಟವನ್ನು ಕೊಡುವ ಇಚ್ಛೆ, ದೇವತೆಗಳನ್ನು ಸಲಹುವ ಇಚ್ಛೆ, ದೈತ್ಯರನ್ನು ಸಂಹರಿಸುವ ಇಚ್ಛೆ ಎಂತಹ ಇಚ್ಛೆಗಳೇ ಮೂಲವೆಂದು ತಿಳಿಯುತ್ತದೆ. 'ತಾಂರುಗ್ಮಿಣೀಂ ಶ್ರಿಯಮನನ್ಯಗತಿಂ ನಿರೀಕ್ಷ್ಯ ಯಾ ಲೀಲಯಾ ಧೃತತನೋಃ ಅನುರೂಪರೂಪ' ಮುಂತಾದ ವಚನಗಳು ಪರಮಾತ್ಮನ ಜೊತೆಯಲ್ಲಿ ಲಕ್ಷ್ಮಿಯು ಅವತಾರಮಾಡುವಳೆಂದು ಹೇಳುವುದರಿಂದ ಪರಮಾತ್ಮನ ರೂಪಸಮುದಾಯಕ್ಕೆ ಬಹುರೂಪವಾದ ಲಕ್ಷ್ಮಿಯ ಸಹಿತತ್ವವು ಉಚಿತವಾಗುತ್ತದೆ. ಲೀಲಯಾ ಎಂಬ ಮಾತಿನಿಂದಲೂ ಕುತ ಏವ ಬಂಧಃ ಎಂದು ಬಂಧವನ್ನು ನಿಷೇಧಿಸಿರುವುದರಿಂದಲೂ ಬಂಧಕ್ಕೆ ಕಾರಣವಾದ ಅವಿದ್ಯಾಮೂಲತ್ವವು ಈ ರೂಪಗಳಿಗೆ ಬಾಧಿತವಾದುದು ಎಂದು ತಿಳಿಯುತ್ತದೆ. 'ದುರ್ಗೇತಿ ಭದ್ರಕಾಲೀತಿ ವಿಜಯೀ ವೈಷ್ಣವೀತಿ ಚ । ಮಾಯಾ

ನಾರಾಯಣೀ ಶಾನಾ ಶಾರದೇತ್ಯಂಬಿಕೇತಿಚ । ನಾಮಧೇಯಾನಿ ಕುರ್ವಂತಿ ಸ್ಥಾನಾನಿಚ ನರಾಭುವಿ' ಎಂಬ ಭಾಗವತವಚನವು ಮಾಯಾ ಎಂಬ ಶಬ್ದವನ್ನು ನಾರಾಯಣೀ ವೈಷ್ಣವೀ ಮೊದಲಾದ ದುರ್ಗಾದೇವಿಯ ನಾಮಗಳ ಪಂಕ್ತಿಯಲ್ಲಿ ಪಠಿಸಿದೆ. 'ಮಹಾಮಾಯೇತ್ಯವಿದ್ಯೇತಿ ನಿಯತಿರ್ಮೋಹಿನೀತಿ ಚ । ಪ್ರಕೃತಿರ್ವಾಸನೇತ್ಯೇವಂ ತವೇಚ್ಛಾನಂತಕಥ್ಯತೇ ॥' ಎಂಬ ಆಚಾರ್ಯರು ಉದಾಹರಿಸಿದ ಪ್ರಮಾಣದಲ್ಲಿ ಮಾಯಾಶಬ್ದವು ಇಚ್ಛಾಶಬ್ದದ ಪರ್ಯಾಯವಾಗಿ ಪಠಿತವಾಗಿದೆ. ಮಾಂ= ಸಂಪದ್ರೂಪಳಾದ ಲಕ್ಷ್ಮಿಯನ್ನು, ಯಾ= ಯಾಪಯತಿ= ಹೊಂದಿಸುತ್ತದೆ ಎಂಬ ಅರ್ಥದಲ್ಲಿಯೂ, ಮಾಂ= ಪ್ರಮೆಯನ್ನು, ವ್ಯಾ= ಹೊಂದಿಸುತ್ತದೆ ಎಂಬ ಅರ್ಥದಲ್ಲಿಯೂ ಮಾಯಾಶಬ್ದವು ಯೋಗಿಕವಾಗಿ ನಾವು ಹೇಳಿದ ಅರ್ಥವನ್ನೇ ಕೊಡುತ್ತದೆ. ಮಯನಿರ್ಮಿತವಾದ ಮಾಯಾಶಬ್ದವಾದ ಐಂದ್ರಜಾಲಿಕ ಮಾಯೆಯು ತನ್ನ ವಿಜ್ಞಾನಾಸ್ತ್ರದಿಂದ ಅಂತಹ ಮಾಯೆಗಳನ್ನು ನಿರಾಕರಿಸುವ ಭಗವಂತನಲ್ಲಿ ಕೂಡುವುದಿಲ್ಲ. ಮಾಯಾಯುದ್ಧವಿಶಾರದರಾದ ದೈತ್ಯರಲ್ಲಿ ಮಾತ್ರ ಕೂಡುತ್ತದೆ. ತದಸ್ಯ ಎಂಬಲ್ಲಿ ಅಸ್ಯ ಎಂಬ ಶಬ್ದದಿಂದ ಜೀವನನ್ನು ತೆಗೆದುಕೊಳ್ಳಬೇಕು. ಪರಮಾತ್ಮನ ರೂಪಂ ರೂಪಂ ಪ್ರತಿ= ಪ್ರತಿಯೊಂದು ರೂಪವನ್ನು ಕುರಿತು ಜೀವನು, ಪ್ರತಿರೂಪಃ= ಪ್ರತಿ ರೂಪಂ ಯಸ್ಯ ಎಂಬ ಬಹುವ್ರೀಹಿಸಮಾಸವನ್ನು ಆಶ್ರಯಿಸಿ ಪರಮಾತ್ಮನರೂಪಕ್ಕೆ ಸಮಾನವಾದ ರೂಪವುಳ್ಳ ಪ್ರತಿರೂಪಪದವಾಚ್ಯನಾದ ಪ್ರತಿಬಿಂಬನಾದನು ಎಂದು ಅರ್ಥ. ತತ್= ಆ ಬಿಂಬಭೂತವಾದ ಭಗವದ್ರೂಪವು, ಅಸ್ಯ= ಈ ಜೀವನ, ಪ್ರತಿಚಕ್ಷಣಾಯಾ= ಅಪರೋಕ್ಷಜ್ಞಾನಕ್ಕಾಗಿ ಇದೆ. ಮೋಕ್ಷಸಾಧನವಾದ ಅಪರೋಕ್ಷಜ್ಞಾನವು ಬಿಂಬನಾದ ಭಗವದ್ರೂಪವಿಷಯಕವೇ ಆಗಬೇಕು ಎಂದು ಅರ್ಥ. ಪುರುರೂಪ ಎಂಬ ಪದದಿಂದ ಪ್ರಸ್ತುತವಾದ ಹರಿಯ ಅನೇಕ ರೂಪಗಳನ್ನು ಶತಾದಶ ಎಂದು ನೂರು, ಹತ್ತು ಮೊದಲಾದ ರೀತಿ ಪ್ರಸ್ತಾವಮಾಡಿ, ರೂಪಂ ರೂಪಂ ಎಂಬ ದ್ವಿರುಕ್ತಿಯಿಂದ ಮತ್ಸ್ಯಾದಿಭಗವದ್ರೂಪಗಳಿಗೂ ಜೀವನು ಪ್ರತಿಬಿಂಬನಾಗಿದ್ದಾನೆ ಎಂದು ಸಿದ್ಧವಾಗುವುದರಿಂದ ಜೀವರೂ ಸಹ ಮತ್ಸ್ಯಕೂರ್ಮವರಾಹರೂಪರಾಗಿದ್ದಾರೆ ಎಂದು ಸಿದ್ಧಿಸುತ್ತವೆ. ಪೂರ್ಣವಾದ ಅನೇಕರೂಪವುಳ್ಳ ಪರಮಾತ್ಮನಿಗೆ ಎಲ್ಲ ಜೀವರೂ ಸಮಾನರೂಪರಾಗಿ ಪ್ರತಿಬಿಂಬರಾಗಿದ್ದಾರೆ ಎಂದು ಒಟ್ಟು ಅಭಿಪ್ರಾಯ.

**ಶತಾ ದಶೇತಿ ತದ್ರೂಪಂ ಯಚ್ಛ್ರುತ್ಯೈವ ವಿವೇಚಿತಂ ।**
**ಅತಃ ಸ್ವರೂಪಮಾತ್ರಂ ನ ರೂಪಂ ಮತ್ಸ್ಯಾದಯೋ ಹಿ ತೇ ॥ ೪೦೦ ॥**

**ಅರ್ಥ–** ತದ್ರೂಪಂ= ಆ ಬಿಂಬಭೂತರೂಪವು, ಯತ್= ಯಾವ ಕಾರಣದಿಂದ, ಶತಾದಶೇತಿ = ನೂರು, ಹತ್ತು ಎಂದು, ಶ್ರುತ್ಯೈವ= ವೇದದಿಂದಲೇ, ವಿವೇಚಿತಂ= ವಿವೇಕ ಮಾಡಲ್ಪಟ್ಟಿದೆಯೋ, ಅತಃ= ಆದ್ದರಿಂದ, ರೂಪಂ= ರೂಪವು, ಸ್ವರೂಪಮಾತ್ರಂ= ಕೇವಲ

ಸ್ವರೂಪವು, ನ= ಅಲ್ಲ, ತೇ= ರೂಪಪದದಿಂದ ಹೇಳಲ್ಪಟ್ಟವು, ಮತ್ಸ್ಯಾದಯಃ= ಮತ್ಸ್ಯವೇ ಮೊದಲಾಗಿವುಳ್ಳವು, ಹಿ= ಪ್ರಸಿದ್ಧಿಯು.

**ಅನುವಾದ–** ಜೀವರ ಬಿಂಬಭೂತವಾದ ರೂಪಗಳಿಗೆ ನೂರು, ಹತ್ತು ಎಂದು ಶ್ರುತಿಯಲ್ಲಿ ವಿಶೇಷವನ್ನು ಕೊಟ್ಟಿದೆ. ಆದ್ದರಿಂದ, ಬಿಂಬರೂಪಗಳೇ ಮತ್ಸ್ಯಾದಿ ಆಕಾರದಲ್ಲಿವೆ ಎಂದು ತಿಳಿಯುತ್ತದೆ. ತದ್ರೂಪಂ ಎಂದರೆ ಬಿಂಬಭೂತರೂಪ; ಯತ್ ಎಂದರೆ ಯಾವ ಕಾರಣದಿಂದ ಎಂದರ್ಥ, ತೇ ಎಂದರೆ ರೂಪಶಬ್ದದಿಂದ ಹೇಳಲ್ಪಟ್ಟಿತು.

**ಭಾವವಿಲಾಸಿನೀ–** ತದ್ರೂಪಂ ಬಿಂಬಭೂತರೂಪಮ್ । ಯದ್ಯಸ್ಮಾತ್ತೇ ರೂಪಪದೋದಿತಾಃ ॥ ೪೦೦ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಜೀವರ ಬಿಂಬಭೂತನಾದ ಭಗವದ್ರೂಪಗಳಿಗೆ ಹತ್ತು, ನೂರು ಮೊದಲಾದ ಸಂಖ್ಯಾವಿಶೇಷಗಳನ್ನು ವೇದದಲ್ಲಿಯೇ ಕೊಡಲಾಗಿದೆ. ಇದರಿಂದ, ಏನು ತಿಳಿಯುತ್ತದೆಂದರೆ, ಬಿಂಬರೂಪಗಳೇ ಮತ್ಸ್ಯಾದಿ ಹತ್ತು, ನಾರಾಯಣಾದಿ ನೂರು ಮೊದಲಾದ ರೂಪಗಳಲ್ಲಿವೆ, ಇವುಗಳನ್ನೇ ರೂಪಶಬ್ದದಿಂದ ಕರೆದದ್ದು, ಹೊರತಾಗಿ ಕೇವಲ ಸ್ವರೂಪವನ್ನಲ್ಲ.

**ಕಥಂ ಸ್ವರೂಪಮಾತ್ರಸ್ಯ ಶತತಾ ದಶತಾ ತವ ।**
**ತತ್ ಪುರುತ್ವಂ ನ ಪೂರ್ಣತ್ವಂ ಬಹುತ್ವೈವ ಭವೇದ್ ಧ್ರುವಮ್ ॥ ೪೦೧ ॥**

**ಅರ್ಥ–** ತವ= ನಿನ್ನ ಮತದಂತೆ, ಸ್ವರೂಪಮಾತ್ರಸ್ಯ= ಕೇವಲ ಸ್ವರೂಪಕ್ಕೆ, ಶತತಾ= ನೂರು ಆಗಿರೋಣವು, ದಶತಾ= ಹತ್ತು ಆಗಿರೋಣವು, ಕಥಂ= ಹೇಗಾದೀತು? ತತ್= ಆ ಕಾರಣದ್ದೆಸೆಯಿಂದ, ಪುರುತ್ವಂ= ಪುರುತ್ವವೆಂಬುದು, ಪೂರ್ಣತ್ವಂ= ಪೂರ್ಣತ್ವವು, ನ= ಅಲ್ಲ, ಧ್ರುವಂ= ನಿಶ್ಚಯವಾಗಿ, ಬಹುತ್ವೈವ= ಬಹುತ್ವವೇ, ಭವೇತ್= ಆಗುತ್ತದೆ.

**ಭಾವವಿಲಾಸಿನೀ–** ತವ ಮತೇ ಬ್ರಹ್ಮಣ ಏಕತ್ವಾಂಗೀಕಾರಾದಿತಿ ಭಾವಃ । ತತ್ ತಸ್ಮಾತ್ ॥ ೪೦೧ ॥

**ವಿವರಣೆ–** ಅದ್ವೈತಮತದಂತೆ ಬ್ರಹ್ಮನು ಒಬ್ಬನೇ ಸತ್ಯ. ಅವನು ಏಕಮಾತ್ರನಾದ್ದರಿಂದ, ಹತ್ತು- ನೂರು ಎಂಬ ಸಂಖ್ಯೆಯು ಕೂಡುವುದಿಲ್ಲ. ಆದ್ದರಿಂದ ಶ್ರುತಿಯಲ್ಲಿರುವ ಪುರು ಎಂಬ ಶಬ್ದಕ್ಕೆ ಪೂರ್ಣ ಎಂದರ್ಥ ಮಾಡಬಾರದು. ಹಾಗೆ ಅರ್ಥಮಾಡಿದರೆ ಹತ್ತು, ನೂರು ಎಂಬುದನ್ನು ಕೂಡಿಸಲಾಗುವುದಿಲ್ಲ. ಹಾಗಾಗಿ, ಪುರು ಎಂಬುದಕ್ಕೆ ಬಹು ಎಂದರ್ಥ ಮಾಡಬೇಕು. ಹೀಗೆ ಮಾಡಿದರೆ, ಹತ್ತು-ನೂರು ಎಂಬುದು ಬಹುತ್ವದ ವಿಶ್ಲೇಷಣೆ ಎಂದು ಹೇಳಲು ಸಾಧ್ಯವಾಗುತ್ತದೆ.

**ರೂಪಂ ರೂಪಂ ಚೇತಿ ವೀಪ್ಸಾ ಜುಗುಪ್ಸಾ ಚ ನ ಚೇದ್ ಭವೇತ್ ।
ಮತ್ಸ್ಯಕೂರ್ಮಾದಿರೂಪಾಣಾಂ ಪ್ರತಿರೂಪಾಶ್ಚ ತಾದೃಶಾಃ ।
ಕಥಂ ನ ವಾಚ್ಯಾ ಧೀಮದ್ಭಿಃ ಪ್ರತಿಶಬ್ದಾರ್ಥವೇದಿಭಿಃ ॥ ೪೦೨ ॥**

**ಅರ್ಥ–** ನ ಚೇತ್= ಹಾಗಿಲ್ಲದಿದ್ದರೆ, ರೂಪಂ ರೂಪಂ ಇತಿ= ರೂಪಂ ರೂಪಂ ಎಂಬ, ವೀಪ್ಸಾ ಜುಗುಪ್ಸಾ= ದ್ವಿರ್ವಚನವು ಜುಗುಪ್ಸಿತವಾಗಿ, ಭವೇತ್= ಆದೀತು, ಮತ್ಸ್ಯ ಕೂರ್ಮಾದಿ= ಮತ್ಸ್ಯಕೂರ್ಮ ಮೊದಲಾದ, ರೂಪಾಣಾಂ= ರೂಪಗಳ, ಪ್ರತಿರೂಪಾಃ= ಪ್ರತಿಬಿಂಬಗಳು, ತಾದೃಶಾಃ= ಮತ್ಸ್ಯಕೂರ್ಮಾದಿ ಸದೃಶಗಳೆಂದು, ಪ್ರತಿಶಬ್ದಾರ್ಥ ವೇದಿಭಿಃ= ಪ್ರತಿ ಎಂಬ ಶಬ್ದದ ಅರ್ಥವನ್ನು ತಿಳಿದ, ಧೀಮದ್ಭಿಃ= ಬುದ್ಧಿವಂತರಿಂದ, ಕಥಂ= ಹೇಗೆ, ನ ವಾಚ್ಯಾಃ= ಹೇಳಲ್ಪಡುವುದಿಲ್ಲ?

**ಅನುವಾದ–** ಜೀವರು ಮತ್ಸ್ಯಾದಿಭಗವದ್ರೂಪಗಳ ಆಕಾರಕ್ಕೆ ಸದೃಶವಾದ ಆಕಾರವುಳ್ಳವರಾಗದಿದ್ದರೆ ರೂಪಂ ರೂಪಂ ಎಂಬಲ್ಲಿರುವ ದ್ವಿರುಕ್ತಿಯು ವ್ಯರ್ಥವಾಗುತ್ತದೆ. ಮತ್ತು ಪ್ರತಿಚಕ್ಷಣಾಯ ಎಂಬಲ್ಲಿರುವ ಪ್ರತಿಶಬ್ದದ ಅರ್ಥವನ್ನು ತಿಳಿದ ಮೇಧಾವಿಗಳು ಮತ್ಸ್ಯಕೂರ್ಮಾದಿಭಗವದ್ರೂಪಗಳಿಗೆ ಸದೃಶರಾದ ಪ್ರತಿಬಿಂಬರೂಪರಾದ ಜೀವರನ್ನು ಹೇಗೆ ಒಪ್ಪದೇ ಇರಲು ಸಾಧ್ಯ?

**ಭಾವವಿಲಾಸಿನೀ–** ತಾದೃಶಾಃ ಮತ್ಸ್ಯಕೂರ್ಮಾದೀನಾಮಾಕಾರಸ್ಪದಶಾಕಾರವಂತಃ ॥೪೦೨॥

**ವಿವರಣೆ–** ರೂಪಂ ರೂಪಂ ಎಂಬಲ್ಲಿರುವ ದ್ವಿರುಕ್ತಿಯು ಪರಮಾತ್ಮನ ಪ್ರತಿಯೊಂದು ರೂಪವನ್ನು ಕುರಿತು ಜೀವರು ಪ್ರತಿಬಿಂಬರಾಗಿದ್ದಾರೆ ಎಂದು ಹೇಳುತ್ತದೆ. ಆ ಪರಮಾತ್ಮನ ಪ್ರತಿಯೊಂದು ರೂಪಗಳಲ್ಲಿ ಮತ್ಸ್ಯಕೂರ್ಮಾದಿರೂಪಗಳೂ ಸೇರುತ್ತವೆ. ಆದ್ದರಿಂದ ಮತ್ಸ್ಯಕೂರ್ಮಾದಿ ಆಕಾರವುಳ್ಳ ಪ್ರತಿಬಿಂಬರಾದ ಜೀವರನ್ನು ಒಪ್ಪಬೇಕು. ಇನ್ನು ಪ್ರತಿಚಕ್ಷಣಾಯ ಎಂಬಲ್ಲಿರುವ ಪ್ರತಿಶಬ್ದವು ಪ್ರತಿಯೊಬ್ಬ ಜೀವರ ಅಪರೋಕ್ಷಜ್ಞಾನವು ಭಿನ್ನಭಿನ್ನ ರೀತಿಯಿದೆ ಎಂದು ಹೇಳುತ್ತದೆ. ಎಲ್ಲ ಜೀವರ ಬಿಂಬವೂ ಒಂದೇ ರೀತಿ ಇದ್ದಿದ್ದರೆ ಅಪರೋಕ್ಷಜ್ಞಾನವು ಒಂದೇ ರೀತಿ ಇರುತ್ತಿತ್ತು. ಆದರೆ ಪ್ರತಿಶಬ್ದವು ಒಂದೇ ರೀತಿ ಇಲ್ಲ ಎಂದು ಹೇಳುವುದರಿಂದ ಬೇರೆ ಬೇರೆ ಜೀವರಿಗೆ ಬಿಂಬನಾದ ಪರಮಾತ್ಮನ ಬೇರೆ ಬೇರೆ ರೂಪಗಳ ದರ್ಶನ ಅದು ಬೇರೆ ಬೇರೆ ರೀತಿಯಿಂದ ಇರುತ್ತದೆ ಎಂದೇ ಒಪ್ಪಬೇಕು. ಆದ್ದರಿಂದಲೂ ಜೀವರಿಗೆ ಮತ್ಸ್ಯಾದಿಭಗವದ್ರೂಪಗಳ ಸಮಾನವಾದ ಆಕಾರವುಳ್ಳ ರೂಪಗಳು ಸಿದ್ಧವಾಗುತ್ತವೆ.

**ತತ್ತದ್ರೂಪಾಪರೋಕ್ಷ್ಯೇಣ ಮೋಕ್ಷಸ್ತೇಷಾಂ ಭವೇತ್ ಕಿಲ ।
ಪ್ರತಿಪ್ರತ್ಯಾಪರೋಕ್ಷ್ಯಂ ಹಿ ಪ್ರತಿಚಕ್ಷಣಮುಚ್ಯತೇ ॥ ೪೦೩ ॥**

**ಅರ್ಥ–** ತೇಷಾಂ= ಆ ಜೀವರಿಗೆ, ತತ್ತತ್= ಆಯಾಯ, ರೂಪ= ರೂಪಗಳ, ಆಪರೋಕ್ಷ್ಯೇಣ= ಅಪರೋಕ್ಷದಿಂದ, ಮೋಕ್ಷಃ= ಮೋಕ್ಷವು, ಭವೇತ್= ಆಗುತ್ತದೆ, ಕಿಲ= ಪ್ರಸಿದ್ಧಿಯು, ಹಿ= ಏಕೆಂದರೆ, ಪ್ರತಿಪ್ರತ್ಯಾಪರೋಕ್ಷ್ಯಂ= ಪ್ರತಿ ಪ್ರತಿ ಅಪರೋಕ್ಷವು, ಪ್ರತಿಚಕ್ಷಣಂ= ಪ್ರತಿಚಕ್ಷಣ ಎಂದು, ಉಚ್ಯತೇ= ಹೇಳಲ್ಪಡುತ್ತದೆ.

**ಅನುವಾದ– ಜೀವರಿಗೆ ತಮ್ಮ ತಮ್ಮ ಬಿಂಬರೂಪದ ಅಪರೋಕ್ಷಜ್ಞಾನದಿಂದ ಮಾತ್ರ ಮೋಕ್ಷವಾಗುವುದೆಂದು ಪ್ರಸಿದ್ಧವಾಗಿದೆಯಷ್ಟೆ, ಏಕೆಂದರೆ ಪ್ರತಿಚಕ್ಷಣ ಎಂಬ ಶಬ್ದವು ಭಿನ್ನಭಿನ್ನ ರೀತಿಯ ಅಪರೋಕ್ಷಜ್ಞಾನವನ್ನೇ ಹೇಳುತ್ತದೆ.**

**ಭಾವವಿಲಾಸಿನೀ– ಪ್ರತಿಚಕ್ಷಣ ಶಬ್ದಾರ್ಥಮಾಹ । ಪ್ರತಿಪತ್ತೀತಿ । ಏವಂ ಚ ಸ್ವಾಪೇಕ್ಷಿತ ಮೋಕ್ಷಂ ಪ್ರತಿ ಪ್ರತಿಚಕ್ಷಣಂ ಪ್ರತಿ ಚಕ್ಷಣಮಿತ್ಯರ್ಥ ಲಾಭಾತ್ । ತಸ್ಯ ಬಿಂಬ ಸಾಕ್ಷಾತ್ಕಾರಸ್ಯ ಮೋಕ್ಷ ಸಾಧನತ್ವಮಪಿ ಸಿದ್ಧ್ಯತೀತಿ ಭಾವಃ । ಅನ್ಯಥಾ ಪ್ರತಿಪದಿ ವೈಯರ್ಥ್ಯಂ ಸ್ಯಾತ್ ॥ ೪೦೩ ॥**

**ವಿವರಣೆ–** ಎಲ್ಲಾ ಜೀವರಿಗೂ ಒಂದೇ ಅಪರೋಕ್ಷವಿದ್ದಿದ್ದಲ್ಲಿ, ಶ್ರುತಿಯು, 'ಚಕ್ಷಣಾಯ' ಎನ್ನಬೇಕಿತ್ತು. ಹಾಗಿಲ್ಲ; ಅದು 'ಪ್ರತಿಚಕ್ಷಣಾಯ' ಎನ್ನುತ್ತದೆ. ಇಲ್ಲಿರುವ 'ಪ್ರತಿ' ಶಬ್ದವು, ಪ್ರತಿಯೊಂದು ಎಂಬ ಅರ್ಥವನ್ನು ಕೊಡುತ್ತದೆ. ಹೀಗಾಗಿ, ಆಯಾಯಾ ಜೀವರ ಬೇರೆ ಬೇರೆ ಅಪರೋಕ್ಷಗಳು 'ಪ್ರತಿಚಕ್ಷಣ' ಶಬ್ದದಿಂದ ಹೇಳಲ್ಪಟ್ಟಿವೆ ಎಂದು ಗೊತ್ತಾಗುತ್ತದೆ. ಆಯಾಯಾ ಜೀವರು ತಮ್ಮ ಬಿಂಬಭೂತವಾದ ಭಗವಂತನ ಬೇರೆ ಬೇರೆ ಆಕಾರದ ರೂಪಗಳ ಚಕ್ಷಣ-ದರ್ಶನ-ಅಪರೋಕ್ಷದಿಂದ ಮೋಕ್ಷವನ್ನು ಹೊಂದುತ್ತಾರೆಂದು ತಿಳಿಯುತ್ತದೆ.

**ತದಸ್ಯೇತಿ ಶ್ರುತೌ ಪ್ರೋಕ್ತಂ ಜೀವಸ್ಯ ಪರಮಸ್ಯ ಚ ।**
**ದ್ರಷ್ಟೃದೃಶ್ಯಾತ್ಮಕಂ ರೂಪದ್ವಯಂ ತತ್ ಪಾರಮಾರ್ಥಿಕಮ್ ।**
**ಯನ್ಮೋಕ್ಷದಪ್ರಮಾರೂಪಸಾಕ್ಷಾತ್ಕಾರಸ್ಯ ಗೋಚರಃ ॥ ೪೦೪ ॥**

**ಅರ್ಥ–** ತದಸ್ಯೇತಿ= ತದಸ್ಯ ಎಂಬ, ಶ್ರುತೌ= ವೇದದಲ್ಲಿ, ಪ್ರೋಕ್ತಂ= ಹೇಳಲ್ಪಟ್ಟ, ಜೀವಸ್ಯ= ಜೀವನ, ಚ= ಮತ್ತು, ಪರಮಸ್ಯ= ಪರಮಾತ್ಮ, ದ್ರಷ್ಟೃದೃಶ್ಯಾತ್ಮಕಂ= ನೋಡುವ, ನೋಡಲ್ಪಡುವ ಸ್ವರೂಪವುಳ್ಳ, ರೂಪದ್ವಯಂ= ಎರಡು ರೂಪಗಳು, ಯತ್= ಯಾವ ಕಾರಣದಿಂದ, ಮೋಕ್ಷದ= ಮೋಕ್ಷವನ್ನು ಕೊಡತಕ್ಕ, ಪ್ರಮಾರೂಪ= ಯಥಾರ್ಥ ಜ್ಞಾನರೂಪವಾದ, ಸಾಕ್ಷಾತ್ಕಾರಸ್ಯ= ಅಪರೋಕ್ಷಕ್ಕೆ, ಗೋಚರಃ= ವಿಷಯವಾದದ್ದೋ, ತತ್= ಆ ಕಾರಣದಿಂದ, ಪಾರಮಾರ್ಥಿಕಂ= ಪಾರಮಾರ್ಥಿಕ ಸತ್ಯವಾದದ್ದು.

**ಅನುವಾದ– ಈ ಶ್ರುತಿಯಲ್ಲಿ ತದಸ್ಯ ಎಂಬ ಪದದಿಂದ ಹೇಳಿದ ಜೀವನ ಮತ್ತು ಪರಮಾತ್ಮನ ಎರಡು ರೂಪಗಳು ಕ್ರಮವಾಗಿ ದ್ರಷ್ಟೃ ಮತ್ತು ದೃಶ್ಯಗಳಾಗಿವೆ.**

ಇಂತಹ ಮೋಕ್ಷಜನಕವಾದ ಪ್ರಮಾರೂಪವಾದ ಸಾಕ್ಷಾತ್ಕಾರಕ್ಕೆ ವಿಷಯವಾದ ಈ ರೂಪದ್ವಯಗಳು ಹೇಗೆ ಪಾರಮಾರ್ಥಿಕಸತ್ಯವಾಗಿ ಇರದಿರಲು ಸಾಧ್ಯ?

**ಭಾವವಿಲಾಸಿನೀ–** ತತ್ ತಸ್ಮಾತ್ । ಏತದೇವ ವಿವೃಣೋತಿ ॥ ಯದಿತಿ ॥ ಯದ್ಯಸ್ಮಾತ್ ॥೪೦೪॥

**ವಿವರಣೆ–** ತದಸ್ಯರೂಪಂ ಪ್ರತಿಚಕ್ಷಣಾಯ ಎಂಬಲ್ಲಿ ಅಸ್ಯರೂಪಂ ಎಂಬ ಶಬ್ದದಿಂದ ದೃಶ್ಯವಾದ ಭಗವಂತನ ರೂಪವು ಹೇಳಲ್ಪಟ್ಟಿದೆ. ಪ್ರತಿಚಕ್ಷಣ ಎಂಬ ಪದದಿಂದ ಹೇಳಲ್ಪಟ್ಟ ಅಪರೋಕ್ಷಜ್ಞಾನವು ಜೀವಕರ್ತೃಕವಾದದು. ಆದ್ದರಿಂದ ಈ ಅಪರೋಕ್ಷಜ್ಞಾನ ಎಂಬ ಕ್ರಿಯೆಯಲ್ಲಿ ಜೀವನ ರೂಪವು ಕರ್ತೃ ಮತ್ತು ಭಗವಂತನ ರೂಪವು ಕರ್ಮ. ಈ ಅಪರೋಕ್ಷಜ್ಞಾನವು ಮೋಕ್ಷಜನಕವಾದುದರಿಂದ ಇದಕ್ಕೆ ವಿಷಯವಾದ ಈ ಎರಡು ರೂಪಗಳು ಪಾರಮಾರ್ಥಿಕ ಸತ್ಯವೇ ಆಗಿರಬೇಕು ಎಂದು ಅಭಿಪ್ರಾಯ.

ಮೋಕ್ಷಂ ಪ್ರತ್ಯಪರೋಕ್ಷಂ ಚ ಯತಸ್ತತ್ಪ್ರತಿಚಕ್ಷಣಮ್ ।
ಅರ್ಥಂ ಪ್ರತ್ಯೇವ ದೃಷ್ಟಿಶ್ಚ ಯತೋಽಭೂತ್ ಪ್ರತಿಚಕ್ಷಣಮ್ ।
ಅತೋ ಯಥಾರ್ಥಜ್ಞಾನಾರ್ಥಾ ಪ್ರತಿಚಕ್ಷಣವಾಗಿಯಮ್ ॥ ೪೦೫ ॥

**ಅರ್ಥ–** ಯತಃ= ಯಾವ ಕಾರಣದ ದೆಸೆಯಿಂದ, ತತ್= ವೇದದಲ್ಲಿ ಹೇಳಲ್ಪಟ್ಟ, ಪ್ರತಿಚಕ್ಷಣಂ= ಪ್ರತಿಚಕ್ಷಣ ಎಂಬುದು, ಮೋಕ್ಷಂ ಪ್ರತಿ= ಮೋಕ್ಷವನ್ನು ಕುರಿತು, ಅಪರೋಕ್ಷಂ= ಅಪರೋಕ್ಷ ಜ್ಞಾನವೇ, ಚ= ಮತ್ತು, ಯತಃ= ಯಾವ ಕಾರಣದ ದೆಸೆಯಿಂದ, ಅರ್ಥಂ ಪ್ರತ್ಯೇವ= ವಿಷಯವನ್ನುದ್ದೇಶಿಸಿಯೇ ಇರುವ, ದೃಷ್ಟಿಃ= ಜ್ಞಾನವು, ಪ್ರತಿಚಕ್ಷಣಂ= ಪ್ರತಿಚಕ್ಷಣವೆನಿಸುತ್ತದೋ, ಅತಃ= ಆದ್ದರಿಂದ, ಇಯಂ= ಈ, ಪ್ರತಿಚಕ್ಷಣವಾಕ್= ಪ್ರತಿಚಕ್ಷಣವೆಂಬ ಮಾತು, ಯಥಾರ್ಥಜ್ಞಾನಾರ್ಥಾ= ಯಥಾರ್ಥ-ಜ್ಞಾನವೆಂಬ ಅರ್ಥವುಳ್ಳದ್ದು.

**ಅನುವಾದ–** ಪ್ರತಿಚಕ್ಷಣ ಎಂಬುದು ಮೋಕ್ಷಾರ್ಥವಾಗಿರುವ ಜ್ಞಾನವಾದ್ದರಿಂದ, ಪ್ರತಿಚಕ್ಷಣಶಬ್ದದ ಅರ್ಥವನ್ನು ವಿಚಾರ ಮಾಡುವುದರಿಂದಲೂ ಪ್ರತಿಚಕ್ಷಣವೆಂದರೆ ಯಥಾರ್ಥಜ್ಞಾನ ಎಂದಾಗುತ್ತದೆ. ಪ್ರತಿಚಕ್ಷಣ ಎಂಬ ಪದವು ಪ್ರತಿದರ್ಶನ ಎಂಬ ಅರ್ಥವನ್ನು ಕೊಡುತ್ತದೆ. ಮೋಕ್ಷದ ಲಾಭವು ಹೇಗಾಯಿತು ಎಂದರೆ, ಯೋಗ್ಯತಯಾ ಎನ್ನುತ್ತಾರೆ-ತತ್ ಎಂದರೆ ಶ್ರುತ್ಯುಕ್ತವಾದದ್ದೆಂದರ್ಥ. ಯಥಾರ್ಥ-ಜ್ಞಾನಕ್ಕೆ ವಿಷಯವಾದ್ದರಿಂದಲೂ, ದ್ರಷ್ಟೃ-ದೃಶ್ಯರೂಪಗಳ ಸತ್ಯತ್ವವು ಪ್ರತಿಚಕ್ಷಣ ಪದದ ಅರ್ಥದ ಪರ್ಯಾಲೋಚನೆಯಿಂದಲೇ ಪ್ರಾಪ್ತವಾಗುತ್ತದೆ ಎನ್ನುತ್ತಾರೆ.

**ಭಾವವಿಲಾಸಿನೀ–** ಪ್ರತಿಚಕ್ಷಣಪದೇನ ಪ್ರತಿ ಪ್ರತಿಚಕ್ಷಣಮಿತ್ಯುಕ್ತೇಽಪಿ ಮೋಕ್ಷಸ್ಯ ಕಥಂ ಲಾಭ ಇತ್ಯತೋ ಯೋಗ್ಯತಯೇತ್ಯಾಹ – **ಮೋಕ್ಷಮಿತಿ** ॥ ತಚ್ಛ್ರುತ್ಯುಕ್ತಮ್ । ಯಥಾರ್ಥಜ್ಞಾನ-

ವಿಷಯತ್ವೇನಾಪಿ ದ್ರಷ್ಟೃದೃಶ್ಯರೂಪಯೋಃ ಸತ್ಯತ್ವಂ ಪ್ರತಿಚಕ್ಷಣಪದಾರ್ಥಪರ್ಯಾಲೋಚನ-ಯೈವಾಯಾಸ್ಯತೀತ್ಯಾಹ – **ಅರ್ಥಮಿತಿ** ॥ ೪೦೫ ॥

**ವಿವರಣೆ–** ಚಕ್ಷಣ ಎಂದರೆ ಜ್ಞಾನ. ಪ್ರತಿಚಕ್ಷಣ ಎಂದರೆ ಏನನ್ನೋ ಕುರಿತು ಇರುವ ಜ್ಞಾನ. ಪ್ರಕೃತ, ಭಗವಂತನ ಬಿಂಬರೂಪದ ಜ್ಞಾನವಾದ್ದರಿಂದ ಅದು ಮೋಕ್ಷಕ್ಕೋಸ್ಕರ ಎಂಬುದು ಯೋಗ್ಯತಯಾ ಪ್ರಾಪ್ತವಾಗುತ್ತದೆ. ಹೀಗೆ, ಮಹಾಪುರುಷಾರ್ಥವಾದ ಮೋಕ್ಷಕ್ಕೋಸ್ಕರವಾದ ಜ್ಞಾನವಾದ್ದರಿಂದ, ಪ್ರತಿಚಕ್ಷಣವು ಯಥಾರ್ಥಜ್ಞಾನ ಎಂದಾಗುತ್ತದೆ. ಮತ್ತು ಪ್ರತಿಚಕ್ಷಣ ಎಂಬ ಶಬ್ದದ ಅರ್ಥವನ್ನು ಪರ್ಯಾಲೋಚಿಸೋಣ. ಪ್ರತಿ= ಎಂದರೆ ಅರ್ಥವನ್ನುದ್ದೇಶಿಸಿ, ಚಕ್ಷಣ= ಎಂದರೆ ಜ್ಞಾನ. ಘಟವೆಂಬ ಪದಾರ್ಥವನ್ನು ಉದ್ದೇಶಿಸಿದವ ಘಟಜ್ಞಾನವು ಹೇಗೆ ಸತ್ಯವೋ, ಹಾಗೆ ಅರ್ಥೋದ್ದೇಶಿಯಾದ ಜ್ಞಾನವೆಂಬ ಅರ್ಥವನ್ನು ಕೊಡುವ ಪ್ರತಿಚಕ್ಷಣ ಪದವು ಯಥಾರ್ಥಜ್ಞಾನವೆಂಬುದನ್ನು ಹೇಳುತ್ತದೆ. ಹೀಗೆ ಯಥಾರ್ಥಜ್ಞಾನಕ್ಕೂ ದ್ರಷ್ಟೃರೂಪನಾದ ಜೀವನೂ ಸತ್ಯ; ದೃಶ್ಯರೂಪನಾದ ಪರಮಾತ್ಮನೂ ಸತ್ಯ; ಅವರ ಭೇದವೂ ಸತ್ಯ ಎಂದಾಗುತ್ತದೆ.

**ಉದ್ದೇಶ್ಯತಾ ಕಥಂ ನೋ ಚೇದನುದ್ದೇಶ್ಯಭ್ರಮೇ ಸತಾಮ್ ।**
**ತಾದರ್ಥ್ಯೇ ಹಿ ಚತುರ್ಥೀಯಮನರ್ಥೇ ಸಾ ಕಥಂ ವದ ॥ ೪೦೬ ॥**

**ಅರ್ಥ–** ನೋ ಚೇತ್= ಹಾಗಿಲ್ಲದಿದ್ದರೆ, ಸತಾಂ= ಸಜ್ಜನರ ಮತದಂತೆ, ಅನುದ್ದೇಶ್ಯಭ್ರಮೇ= ಉದ್ದೇಶ್ಯರಹಿತವಾದ ಭ್ರಾಂತಿಯಲ್ಲಿ, ಉದ್ದೇಶ್ಯತಾ= ಉದ್ದೇಶ್ಯತ್ವವು, ಕಥಂ= ಹೇಗೆ? ಇಯಮ್= ಇದು, ತಾದರ್ಥ್ಯೇ= ಅದಕ್ಕೋಸ್ಕರ ಎಂಬರ್ಥದಲ್ಲಿ, ಚತುರ್ಥೀ= ಚತುರ್ಥೀ ವಿಭಕ್ತಿಯು, ಅನರ್ಥೇ= ಯಥಾರ್ಥವಲ್ಲದಿದ್ದರೆ, ಸಾ= ತಾದರ್ಥ್ಯೇ ಚತುರ್ಥೀ ವಿಭಕ್ತಿಯು, ಕಥಂ= ಹೇಗಾದೀತು? ವದ= ಹೇಳು.

**ಅನುವಾದ– ಅರ್ಥಕ್ಕೆ ತಕ್ಕ ಜ್ಞಾನವಿದ್ದರೆ ಯಥಾರ್ಥಜ್ಞಾನ. ಬಿಂಬರೂಪವು ಜ್ಞಾನಕ್ಕೆ ಉದ್ದೇಶ್ಯ ಎಂದು ಹೇಳಿದ್ದರಿಂದ ಆ ಜ್ಞಾನವು ಯಥಾರ್ಥವಾಗಿದೆ.**

**ಭಾವವಿಲಾಸಿನೀ–** ಪ್ರಕಾರಾಂತರೇಣಾಪಿ ಸಮ್ಯಗ್ ಜ್ಞಾನಮಾನಮಿತಿ ॥ **ಉದ್ದೇಶ್ಯೇತಿ** ॥೪೦೬॥

**ವಿವರಣೆ–** ಮತ್ತೊಂದು ರೀತಿಯಿಂದ ಪ್ರತಿಚಕ್ಷಣ ಎಂಬುದು ಸಮ್ಯಗ್ ಜ್ಞಾನವೆಂದು ಸಾಧಿಸುತ್ತಾರೆ. ಸಜ್ಜನರು, ವಿಷಯವು ಹೇಗಿದೆಯೋ ಹಾಗೆಯೇ ಜ್ಞಾನವು ಬಂದರೆ ಅದನ್ನು ಪ್ರಮಾ ಅಥವಾ ಯಥಾರ್ಥಜ್ಞಾನ ಎನ್ನುತ್ತಾರೆ. ಉದ್ದೇಶ್ಯವಾದ ಅರ್ಥವು (ವಿಷಯವು) ಬೇರೆ ರೀತಿ ಇದ್ದು ಜ್ಞಾನವು ಬೇರೆ ರೀತಿ ಬಂದರೆ ಭ್ರಮೆ ಅಥವಾ ಅಯಥಾರ್ಥಜ್ಞಾನ ಎನ್ನುತ್ತಾರೆ. ಪ್ರತಿಚಕ್ಷಣಾಯ ಎಂಬಲ್ಲಿ ಚತುರ್ಥಿವಿಭಕ್ತಿಯು ಇದೆ. ಇದು ತಾದರ್ಥ್ಯ ಎಂಬ ಅರ್ಥದಲ್ಲಿ ಇದೆ. 'ಬಿಂಬರೂಪವು ಪ್ರತಿಚಕ್ಷಣಕ್ಕೋಸ್ಕರ' ಎಂದರೆ ಬಿಂಬರೂಪವು ಪ್ರತಿಚಕ್ಷಣಕ್ಕೆ ಉದ್ದೇಶ್ಯ ಅಥವಾ ವಿಷಯ ಎಂದಾಗುತ್ತದೆ.

ಹೀಗೆ, ಬಿಂಬರೂಪವನ್ನು ಉದ್ದೇಶಿಸಿ ಅಥವಾ ವಿಷಯೀಕರಿಸಿ ಇರುವ ಜ್ಞಾನವು ಯಥಾರ್ಥವೇ ಆಗಿರಬೇಕು. ಹಾಗಿಲ್ಲದಿದ್ದರೆ, ತಾದರ್ಥ್ಯೇ ಚತುರ್ಥೀ ವಿಭಕ್ತಿಯು ಕೂಡುತ್ತಿರಲಿಲ್ಲ.

**ಐಶ್ವರ್ಯವಾನ್ ಕಿಲೇಂದ್ರೋಽಸೌ ಸದ್ಗುಣೋ ನ ತು ನಿರ್ಗುಣಃ ।**
**ಅತೋ ಮಾಯಾಪದಂ ಚಾಸ್ಯ ಮಾಹಾತ್ಮ್ಯಾನ್ಯೇವ ಶಂಸತಿ ॥ ೪೦೭ ॥**

**ಅರ್ಥ–** ಐಶ್ವರ್ಯವಾನ್= ಐಶ್ವರ್ಯವುಳ್ಳ, ಅಸೌ= ಈ, ಇಂದ್ರನು, ಸದ್ಗುಣಃ= ಕಲ್ಯಾಣಕರವಾದ ಗುಣವುಳ್ಳವನು, ಕಿಲ= ಪ್ರಸಿದ್ಧಿಯು, ತು= ಆದರೆ, ನಿರ್ಗುಣಃ= ಗುಣಹಿತನು, ನ= ಅಲ್ಲ, ಅತಃ= ಆದ್ದರಿಂದ, ಮಾಯಾಪದಂ ಚ= ಮಾಯಾ ಎಂಬ ಶಬ್ದವೂ ಕೂಡ, ಅಸ್ಯ= ಈ ಇಂದ್ರಪದವಾಚ್ಯನಾದ ಪರಮಾತ್ಮನು, ಮಹಾತ್ಮ್ಯಾನ್ಯೇವ= ಮಹಿಮೆಗಳನ್ನೇ, ಶಂಸತಿ= ಹೇಳುತ್ತದೆ.

**ಅನುವಾದ–** ಇಂದ್ರಶಬ್ದವು ಐಶ್ವರ್ಯವಂತನನ್ನು ಹೇಳುವುದರಿಂದ, ಐಶ್ವರ್ಯವಂತನು ಗುಣರಹಿತನಾಗಲು ಸಾಧ್ಯವಿಲ್ಲವಾದ್ದರಿಂದ, ಇಲ್ಲಿರುವ ಮಾಯಾಶಬ್ದವು ಮಹಿಮೆಯನ್ನು ಹೇಳುತ್ತದೆ. ಅತಃ ಎಂದರೆ ಇಂದ್ರಪದವಾಚ್ಯನು ಐಶ್ವರ್ಯಾದಿ-ಗುಣಭರಿತನಾದ್ದರಿಂದ ಎಂದರ್ಥ. ಅಸ್ಯ ಎಂದರೆ ಇಂದ್ರಪದವಾಚ್ಯನಾದ ನಾರಾಯಣನ ಎಂದರ್ಥ. ಮಹಾತ್ಮ್ಯ ಎಂಬ ಪದವು ಇಚ್ಛಾ ಮತ್ತು ಲಕ್ಷ್ಮೀದೇವಿ ಎಂಬ ಅರ್ಥಗಳಿಗೆ ಉಪಲಕ್ಷಣ. ಮಯಟ್ ಪ್ರತ್ಯಯಕ್ಕೆ ಪ್ರಾಧಾನ್ಯ ಎಂಬ ಅರ್ಥವಿರುವುದರಿಂದ, ಮಹಿಮೆ ಎಂಬುದೂ ಮಾಯಾಶಬ್ದದ ಅರ್ಥವೆಂದಭಿಪ್ರಾಯ.

**ಭಾವವಿಲಾಸಿನೀ–** ಅತ ಇಂದ್ರಪದವಾಚ್ಯಸ್ಯಾಪ್ಯಸ್ಯೈಶ್ವರ್ಯಾದಿಗುಣಭರಿತತ್ವಾತ್ ಮಾಯಾಯಾಃ ಪರಮತೇ ನಿರ್ಗುಣಚಿನ್ಮಾತ್ರಾಶ್ರಿತತ್ವಾಚ್ಚ । ಅಸ್ಯೇಂದ್ರ ಪದವಾಚ್ಯನಾರಾಯಣಸ್ಯ। ಮಾಹಾತ್ಮ್ಯಪದಮಿಚ್ಛಾಲಕ್ಷ್ಮ್ಯೋರಪ್ಯುಪಲಕ್ಷಣಮ್ । ಮಯಟಃ ಪ್ರಧಾನೇಽನುಶಾಸನಾ-ನ್ಮಹಿಮಾಪಿ ಮಾಯೇತಿ ಭಾವಃ ॥ ೪೦೭ ॥

**ವಿವರಣೆ–** 'ಇಂದ್ರೋ ಮಾಯಾಭಿಃ' ಎಂಬ ಶ್ರುತಿಯಲ್ಲಿರುವ ಇಂದ್ರ, ಮಾಯಾ ಶಬ್ದಗಳ ಅರ್ಥವಿವೇಚನೆಯನ್ನು ಮಾಡುತ್ತಿದ್ದಾರೆ. ಇಂದ್ರಶಬ್ದವು 'ಇದಿ ಪರಮೈಶ್ವರ್ಯೇ' ಎಂಬ ಧಾತುವಿನಿಂದ ನಿಷ್ಪನ್ನವಾದದ್ದು. ಇಂಥಾ ಪರಮೈಶ್ವರ್ಯಶಾಲಿಯಾದ ಭಗವಂತನು ಗುಣರಹಿತನಾಗಲು ಸಾಧ್ಯವಿಲ್ಲ. ಆತನು ಐಶ್ವರ್ಯಾದಿ ಗುಣಭರಿತನೇ ಆಗಿದ್ದಾನೆ. ಅದ್ವೈತಿಗಳು ಹೇಳುವ ಮಾಯೆಯು ನಿರ್ಗುಣನಾದ ಚಿನ್ಮಾತ್ರನನ್ನು ಆಶ್ರಯಿಸಿದೆ. ಆದ್ದರಿಂದ, ಗುಣಭರಿತನಾದ ಇಂದ್ರನ ಮಾಯೆಯು, ಅದ್ವೈತಿಗಳು ಹೇಳುವ ಮಾಯೆಯಲ್ಲ. ಮತ್ತೇನೆಂದರೆ, ಮಯಟ್ ಶಬ್ದಕ್ಕೆ ಪ್ರಧಾನ ಎಂಬ ಅರ್ಥವಿದೆ.

ಹೀಗಾಗಿ, ಮಾಯಾ ಶಬ್ದವು ಮಹಿಮೆಯನ್ನು ಹೇಳುತ್ತದೆ. ಇದು ಉಪಲಕ್ಷಣ. ಮಾಯಾ ಶಬ್ದಕ್ಕೆ ಇಚ್ಛಾ, ಲಕ್ಷ್ಮೀ ಎಂಬ ಅರ್ಥಗಳೂ ಇವೆ. ಹೀಗಾಗಿ, ಈ ಶ್ರುತಿಗೆ ಮೂರು ಅರ್ಥವನ್ನು ಮಾಡಬಹುದು. (1) ಇಂದ್ರಶಬ್ದವಾಚ್ಯನಾದ ಭಗವಂತನು ತನ್ನ ಮಹಿಮೆಯಿಂದ ಬಹುರೂಪವನ್ನು ತಾಳಿದ್ದಾನೆ. (2) ತನ್ನ ಇಚ್ಛೆಯಿಂದ ಬಹು ರೂಪವನ್ನು ತಾಳಿದ್ದಾನೆ, (3) ತನ್ನವಳಾದ ಲಕ್ಷ್ಮೀದೇವಿಯಿಂದ ಕೂಡಿ ಬಹುರೂಪವನ್ನು ತಾಳಿದ್ದಾನೆ ಎಂಬುದಾಗಿ.

**ಬಹುತ್ವಾರ್ಥವಿಭಕ್ತ್ಯರ್ಥೋ ಮಾಯೈಕಾತೇ ಕಥಂ ವದ ।**
**ಕಥಂ ಮಾಯಾಖ್ಯದೋಷಃ ಸ್ಯಾತ್ಪರಮೇಶ್ವರತಾಶ್ರಯೇ ।**
**ನ ಹಿ ಮಾಯಾಮಯಂ ರೂಪಂ ಪ್ರಮಾಗೋಚರತಾಂ ವ್ರಜೇತ್ ॥೪೦೮॥**

**ಅರ್ಥ–** ತೇ= ನಿನ್ನ, ಏಕಾ= ಒಂದೇ ಆದ, ಮಾಯಾ= ಮಾಯೆಯು, ಕಥಂ= ಹೇಗೆ, ಬಹುತ್ವಾರ್ಥವಿಭಕ್ತ್ಯರ್ಥಃ= ಬಹುತ್ವವನ್ನು ಹೇಳುವ ವಿಭಕ್ತಿಯ ಅರ್ಥವಾಗುವುದೆಂದು, ವದ= ಹೇಳು, ಪರಮೇಶ್ವರತಾಶ್ರಯೇ= ಪರಮೇಶ್ವರತ್ವಕ್ಕೆ ಆಶ್ರಯನಾದ ಭಗವಂತನಲ್ಲಿ, ಮಾಯಾಖ್ಯದೋಷಃ= ಮಾಯೆಯೆಂಬ ದೋಷವು, ಕಥಂ= ಹೇಗೆ, ಸ್ಯಾತ್= ಆದೀತು? ಮಾಯಾಮಯಂ= ಮಾಯಾ ನಿರ್ಮಿತವಾದ, ರೂಪಂ= ರೂಪವು, ಪ್ರಮಾಗೋಚರತಾಂ= ಪ್ರಮಾ= ಯಥಾರ್ಥಜ್ಞಾನಕ್ಕೆ, ಗೋಚರತಾಂ= ವಿಷಯತ್ವವನ್ನು, ನ ಹಿ ವ್ರಜೇತ್= ಹೊಂದುವುದೇ ಇಲ್ಲ.

**ಅನುವಾದ–** ಮಾಯಾವಾದಿಯು ಹೇಳುವ ಮಾಯೆ ಒಂದು. ಶ್ರುತಿಯಲ್ಲಿ ಬಹುವಚನವಿದೆ. ಆದ್ದರಿಂದ, ಇದು ಮಾಯಾವಾದಿಯ ಮಾಯೆಯಲ್ಲ. ಪರಮೈಶ್ವರ್ಯಕ್ಕೆ ಆಶ್ರಯನಾದವನು ಮಾಯೆ ಎಂಬ ದೋಷಕ್ಕೆ ಆಶ್ರಯನಾಗುವುದಿಲ್ಲ. ಪರಮೇಶ್ವರನಲ್ಲಿ ಮಾಯೆಯೆಂಬ ದೋಷಕ್ಕೆ ಅವಕಾಶವಿಲ್ಲ. ಮಾಯಾಮಯ ರೂಪವು ಪ್ರಮೇಯವಾಗಲು ಸಾಧ್ಯವೂ ಇಲ್ಲ.

**ಭಾವವಿಲಾಸಿನೀ–** ಪರಾಭಿಲಷಿತಮಾಯಾಯಾ ಅಗ್ರಹಣೇ ನಿಮಿತ್ತಾಂತರಂ ಚಾಹ – **ಬಹುತ್ವೇತಿ** ॥ ಇತೋಽಪಿ ನ ಮಾಯಾಽವಿದ್ಯೇತ್ಯಾಹ – **ಕಥಮಿತಿ** ॥ ಪ್ರತಿಚಕ್ಷಣಪದೋಕ್ತ ಪ್ರಮಾಗೋಚರತ್ವಾದ್ಯಯೋಗಾಚ್ಚ ನ ಮಾಯಾಯಾಮಯಂ ತದ್ರೂಪಮಿತ್ಯಾಹ – **ನಹೀತಿ** ॥೪೦೮॥

**ವಿವರಣೆ–** ಶ್ರುತಿಯಲ್ಲಿರುವ ಮಾಯಾಶಬ್ದವು ಮಾಯಾವಾದಿಯು ಹೇಳುವ ಮಾಯೆಯಲ್ಲ ಎಂಬುದಕ್ಕೆ ಮತ್ತೂ ಮೂರು ಕಾರಣಗಳನ್ನು ಕೊಡುತ್ತಾರೆ. ಮಾಯಾವಾದಿಯಂತೆ ಮಾಯೆ ಎಂಬುದು ಒಂದೇ. ಶ್ರುತಿಯಲ್ಲಿ 'ಮಾಯಾಭಿಃ' ಎಂದಿರುತ್ತದೆ. ಇಲ್ಲಿರುವ ಭಿಸ್ ಪ್ರತ್ಯಯವು ತೃತೀಯಾಬಹುವಚನದ್ದು. ಹೀಗಾಗಿ ಪ್ರತ್ಯಯದ ಅರ್ಥದಿಂದ ಮಾಯೆಗಳು ಅನೇಕ ಎಂದು ಗೊತ್ತಾಗುತ್ತದೆ. ಆದ್ದರಿಂದ

ಇಲ್ಲಿ ಹೇಳಿದ ಮಾಯೆಯು ಮಾಯಾವಾದಿಗೆ ಇಷ್ಟವಾದ ಮಾಯೆಯಲ್ಲವೆಂದು ತಿಳಿಯುತ್ತದೆ.

ಎರಡನೆಯದಾಗಿ, ಇಂದ್ರ ಶಬ್ದವು ಪರಮೈಶ್ವರ್ಯವುಳ್ಳವನನ್ನು ಹೇಳುತ್ತದೆ. ಇಂಥಾ ಭಗವಂತನಲ್ಲಿ ಮಾಯೆ ಅಥವಾ ಅವಿದ್ಯೆ ಎಂಬ ದೋಷವಿರಲು ಸಾಧ್ಯವಿಲ್ಲ.

ಮೂರನೆಯದಾಗಿ, ಪ್ರತಿಚಕ್ಷಣ ಎಂಬ ಪದವು ಯಥಾರ್ಥಜ್ಞಾನವನ್ನು ಹೇಳುತ್ತದೆ. ಇಂಥಾ ಜ್ಞಾನಕ್ಕೆ ವಿಷಯವಾದ ರೂಪವು ಮಾಯಾ ಅಥವಾ ಅವಿದ್ಯೆಯಿಂದ ನಿರ್ಮಿತವಾಗಿರಲು ಸಾಧ್ಯವಿಲ್ಲ.

ಶತಾ ದಶೇತಿ ಕಥನಾದಿಂದ್ರೋ ನಾಯಂ ಪುರಂದರಃ ।
ಪರಮೇಶ್ವರತಾ ಮುಖ್ಯಾ ನ ಯನ್ನಶ್ವರಸಂಪದಿ ॥ ೪೦೯ ॥

**ಅರ್ಥ**— ಶತಾದಶೇತಿ= ನೂರು, ಹತ್ತು ಎಂದು, ಕಥನಾತ್= ಹೇಳಿದ್ದರಿಂದ, ಅಯಂ= ಈ ಶ್ರುತಿಯಲ್ಲಿ ಹೇಳಲ್ಪಟ್ಟ, ಇಂದ್ರಃ= ಇಂದ್ರನು, ಪುರಂದರಃ= ಪುರಂದರನಾಮಕನು, ನ= ಅಲ್ಲ, ಯತ್= ಯಾವ ಕಾರಣದ ಧೆಸೆಯಿಂದ, ನಶ್ವರ= ನಾಶನಶೀಲವಾದ, ಸಂಪದಿ= ಸಂಪತ್ತುಳ್ಳ ಪುರಂದರನಲ್ಲಿ, ಪರಮೇಶ್ವರತಾ= ಪರಮೈಶ್ವರ್ಯವು, ಮುಖ್ಯಾ= ಮುಖ್ಯವಾದದ್ದು, ನ ಯುಕ್ತಃ= ಯುಕ್ತವಲ್ಲ.

**ಅನುವಾದ**— ಇಂದ್ರನ ರೂಪಗಳು ನೂರು, ಹತ್ತು ಎಂದು ಹೇಳಿದ್ದರಿಂದ, ಈ ಇಂದ್ರನು ಒಬ್ಬನಾದ ಶಚೀಪತಿ ಪುರಂದರನಲ್ಲ. ಈ ಪುರಂದರನ ಐಶ್ವರ್ಯವು ನಾಶವಾಗುವುದರಿಂದ, ಈತನು ಮುಖ್ಯವಾಗಿ ಪರಮೈಶ್ವರ್ಯವುಳ್ಳ ಇಂದ್ರನಲ್ಲ.

**ಭಾವವಿಲಾಸಿನೀ**— ಇಂದ್ರಪದಸ್ಯ ಪ್ರಸಿದ್ಧೇಂದ್ರಪರತ್ವಾಯೋಗೇ ಯುಕ್ತಿದ್ವಯಮಾಹ – **ಶತಾ ಇತಿ** ಅಸ್ಯೇತ್ಯುಕ್ತೇಂದ್ರಸ್ಯ ಪ್ರಾಗುಕ್ತ ಪುರುರೂಪ ಪ್ರಪಂಚನಪರೋತ್ತರ ವಾಕ್ಯೇ ತದ್ರೂಪಬಾಹುಲ್ಯ ಪ್ರದರ್ಶನಸ್ಯೈವ ನ್ಯಾನತ್ವಾತ್ ಉಕ್ತ ಏವಾರ್ಥಃ ॥ ೪೦೯ ॥

**ವಿವರಣೆ**— ಇಂದ್ರ ಶಬ್ದವು ಪ್ರಸಿದ್ಧ ಇಂದ್ರಪರವಲ್ಲವೆನ್ನುವುದಕ್ಕೆ ಎರಡು ಯುಕ್ತಿಗಳನ್ನು ಹೇಳುತ್ತಾರೆ. ಶ್ರುತಿಯಲ್ಲಿ ಇಂದ್ರನು ಮಾಯೆಯಿಂದ ನೂರು, ಹತ್ತು ಮೊದಲಾದ ಅನೇಕರೂಪವುಳ್ಳವನೆಂದು ಹೇಳಲ್ಪಟ್ಟಿದೆ. ಪ್ರಸಿದ್ಧನಾದ ಪುರಂದರನಾಮಕ ಶಚೀಪತಿ ಇಂದ್ರನಿಗೆ ವಿಷ್ಣುವಿಗೆ ಇದ್ದಂತೆ ಮತ್ಸ್ಯಾದಿ ಹತ್ತುರೂಪಗಳು, ನಾರಾಯಣಾದಿ ಶತರೂಪಗಳು ಇಲ್ಲ. ಆದ್ದರಿಂದ, ಈ ಶ್ರುತ್ಯುಕ್ತನಾದ ಇಂದ್ರನು ಪ್ರಸಿದ್ಧನಾದ ಇಂದ್ರನಲ್ಲ.

'ಮನ್ವಂತರಾಯುಷಃ ಸ್ವರ್ಗ್ಯಾಃ' ಇತ್ಯಾದಿ ಪ್ರಮಾಣಗಳಂತೆ, ಪುರಂದರನ ಐಶ್ವರ್ಯಕ್ಕೂ ಪರಮಾವಧಿ ಒಂದು ಮನ್ವಂತರಕಾಲ. ಹೀಗೆ ನಶಿಸಿಹೋಗುವ ಐಶ್ವರ್ಯವು ಮುಖ್ಯತಃ ಪರಮೈಶ್ವರ್ಯವಾಗಲಾರದು. ಆದ್ದರಿಂದಲೂ, ಇಂದ್ರಪದೋಕ್ತನು ಪುರಂದರನಲ್ಲ.

ಆದ್ದರಿಂದ, ಈ ಶ್ರುತಿಯಲ್ಲಿ ಹೇಳಿದ್ದು ಅವಿದ್ಯಾಮಯನಾದ ಸ್ವರ್ಗಾಧಿಪತಿ ಇಂದ್ರನೇ ಹೊರತಾಗಿ ವಿಷ್ಣುವಲ್ಲ ಎಂಬ ಆಕ್ಷೇಪವು ಕೂಡುವುದಿಲ್ಲ.

**ಯುಕ್ತಾ ಹೀತಿ ಸುಯುಕ್ತೀನಾಂ ವಿದ್ವತ್ಸಿದ್ಧೇಶ್ಚ ಕೀರ್ತನಾತ್ ।**
**ಸಂಶಯೋಽಸ್ಮಿನ್ ಸಮಸ್ತೇಽರ್ಥೇ ಕಾರ್ಯೋ ನಾರ್ಯೈಃ ಕದಾಚನ ॥ ೪೧೦ ॥**

**ಅರ್ಥ—** ಹಿ ಇತಿ= ಹಿ ಎಂಬುದಾಗಿ, ಸುಯುಕ್ತೀನಾಂ= ಸಮೀಚೀನ ಯುಕ್ತಿಗಳ, ವಿದ್ವತ್ ಸಿದ್ಧೇಃ= ವಿದ್ವಾಂಸರ ಪ್ರಸಿದ್ಧಿಯನ್ನು, ಕೀರ್ತನಾತ್= ಹೇಳುವುದರ ದೆಸೆಯಿಂದ, ಅಸ್ಮಿನ್= ಈ, ಸಮಸ್ತೇ= ಎಲ್ಲಾ, ಅರ್ಥೇ= ಅರ್ಥದ ವಿಷಯದಲ್ಲಿ, ಕದಾಚನ= ಎಂದೂ ಸಹ, ಆರ್ಯೈಃ= ಪೂಜ್ಯರಿಂದ, ಸಂಶಯಃ= ಸಂಶಯವು, ನ ಕಾರ್ಯಃ= ಮಾಡಲ್ಪಡಬಾರದು.

**ಅನುವಾದ—** ಹಿಂದೆ ಹೇಳಿದ ಯುಕ್ತಿಗಳು ವಿದ್ವತ್ ಪ್ರಸಿದ್ಧವೆಂದು 'ಹಿ' ಶಬ್ದವು ಸೂಚಿಸುವುದರಿಂದ, ಈ ವಿಷಯದಲ್ಲಿ ಸಂಶಯವು ಇಲ್ಲ. ಹಿ ಶಬ್ದದಿಂದ ವಿದ್ವತ್‌ಸಿದ್ಧಿಯು ಹೇಳಲ್ಪಟ್ಟಿದೆ ಎಂದು ತಿಳಿಯಬೇಕು.

**ಭಾವವಿಲಾಸಿನೀ—** ಯುಕ್ತ ಪದೇನ ಸುಯುಕ್ತೀನಾಮ್ । ಹಿ ಶಬ್ದೇನ ವಿದ್ವತ್‌ಪ್ರಸಿದ್ಧೇರಿತಿ ದ್ರಷ್ಟವ್ಯಮ್ ॥ ೪೧೦ ॥

**ವಿವರಣೆ—** ಶ್ರುತಿಯಲ್ಲಿ 'ಹಿ' ಎಂಬ ಶಬ್ದವಿದೆ. ಇದು ಪ್ರಸಿದ್ಧಿಯನ್ನು ದ್ಯೋತನ ಮಾಡತಕ್ಕದ್ದು. ಪ್ರಕೃತ, ಹಿಂದೆ ಹೇಳಿದ ಯುಕ್ತಿಗಳು ವಿದ್ವತ್‌ಸಿದ್ಧವೆಂಬುದನ್ನು ಹಿ ಶಬ್ದವು ಸೂಚಿಸುತ್ತದೆ. ಆದ್ದರಿಂದ, ಆರ್ಯರು ಎಂದರೆ ಪೂಜ್ಯರು ಅಥವಾ ಹಿರಿಯರು ಈ ವಿಷಯದಲ್ಲಿ ಸಂಶಯಪಡಬೇಕಾದ್ದಿಲ್ಲ. ಹೀಗೆ ಯುಕ್ತಿಯುಕ್ತನಾದ, ಶ್ರುತ್ಯುಕ್ತವಾದ ವಿಷಯದಲ್ಲಿ ಸಂಶಯಪಡುವವರು ಅನಾರ್ಯರು ಎಂದು ಅಭಿಪ್ರಾಯ.

**ಅಮುಕ್ತಾಗಮ್ಯಭೂರ್ಯಾ ಹಿ ಸಾ ಸಾಕ್ಷಾನ್ಮುಕ್ತಿರೇವ ಹಿ ।**
**ತತ್ರಾಪಿ ಭಗವದ್ಭಾಗ್ಯಮುಕ್ತಂ ಭಾಗವತೇ ಬಹು ।**
**ಯದಾಗಾತ್ ಸನಕಾದೀನ್ ಸ್ವಾನ್ ಮುನೀನ್ ಅನುನಿನೀಷಯಾ ॥ ೪೧೧ ॥**

**ಅರ್ಥ—** ಯಾ= ಯಾವ, ಅಮುಕ್ತಾಗಮ್ಯ= ಅಮುಕ್ತರಿಂದ ಹೊಂದಲ್ಪಡದ, ಭೂಃ= ಭೂಮಿಯೋ, ಸಾ= ಅದು, ಸಾಕ್ಷಾತ್= ಮುಖ್ಯವಾಗಿ, ಮುಕ್ತಿಃ= ಮುಕ್ತಿಸ್ಥಾನವು, ಹಿ= ಪ್ರಸಿದ್ಧವು, ಯತ್= ಯಾವ ಸ್ಥಾನವನ್ನು ಕುರಿತು, ಸನಕಾದೀನ್= ಸನಕರೇ ಮೊದಲಾದ, ಸ್ವಾನ್= ತನ್ನ ಭಕ್ತರಾದ, ಮುನೀನ್= ಮುನಿಗಳನ್ನು, ಅನುನಿನೀಷಯಾ= ಸಮಾಧಾನ ಮಾಡಲು, ಆಗಾತ್= ಬಂದನೋ, ತತ್ರಾಪಿ= ಆ ಸ್ಥಾನದಲ್ಲೂ ಸಹ, ಭಾಗವತೇ=

ಭಾಗವತದಲ್ಲಿ, ಬಹು= ಬಹಳವಾದ, ಭಗವದ್ಭಾಗ್ಯಂ= ಭಗವಂತನ ಭಾಗ್ಯವು, ಉಕ್ತಂ= ಹೇಳಲ್ಪಟ್ಟಿದೆ.

**ಅನುವಾದ–** ಗರುಡನ ಹೆಗಲಿನ ಮೇಲೆ ಲಕ್ಷ್ಮೀದೇವಿಯ ಜೊತೆಯಲ್ಲಿ ಕುಳಿತು ಯಾವ ಸ್ಥಳಕ್ಕೆ ಸನಕಾದಿಗಳನ್ನು ಸಮಾಧಾನಪಡಿಸಲು ಭಗವಂತನು ಬಂದನೋ ಅಂತಹ ವೈಕುಂಠಸ್ಥಾನವು ಅಮುಕ್ತರಿಂದ ಅಗಮ್ಯವಾದ್ದರಿಂದ ಮುಖ್ಯವಾಗಿ ಮುಕ್ತ-ಸ್ಥಾನವೆಂದು ತಿಳಿಯುತ್ತದೆ. ಅಮುಕ್ತಗಮ್ಯ ವೈಕುಂಠದಲ್ಲೂ ಸಹ ಭಾಗವತೋಕ್ತ-ವಾದ ಬಹು ಮಹಿಮೆಗಳು ಇವೆ.

**ಭಾವವಿಲಾಸಿನೀ–** ಮಾಯಾತಿದೂರವೈಕುಂಠಪತೌ ಶ್ರೂಯಮಾಣಮಾಯಾ ಮಾಹಾತ್ಮ್ಯಾದಿ-ಕಮೇವ ನಾವಿದ್ಯೇತ್ಯಾಹ – **ಅಮುಕ್ತೇತಿ** ॥ ಅನುನಿನೀಷಯಾ ಅನುನೇತುಂ ವಿನಯೋಕ್ತ್ಯಾ ರಂಜಯಿತುಮಿಚ್ಛಯಾ ॥ ೪೧೧ ॥

**ವಿವರಣೆ–** ವೈಕುಂಠದಲ್ಲಿ ಮುಕ್ತಸ್ಥಾನ, ಅಮುಕ್ತ ಸ್ಥಾನ ಎಂದು ಎರಡು ಭಾಗಗಳಿವೆ. ಇದು ಹೇಗೆ ತಿಳಿಯುತ್ತವೆಂದರೆ, ಸನಕಾದಿಗಳು ಭಗವಂತನ ದರ್ಶನಕ್ಕೆ ಬಂದಾಗ ಜಯ ವಿಜಯರು ಅಡ್ಡಿ ಹಾಕಿದರು. ಸನಕಾದಿಗಳು ಅವರಿಗೆ ಶಾಪವನ್ನು ಕೊಟ್ಟರು. ಆಗ ಭಗವಂತನು ಅವರನ್ನು ಸಮಾಧಾನ ಮಾಡಲು ಅವರಿದ್ದಲ್ಲಿಗೇ ಬಂದನು. ಅವರು ಭಗವಂತನಿದ್ದ ಭಾಗಕ್ಕೆ ಪ್ರವೇಶ ಮಾಡಲಿಲ್ಲ. ಅಮುಕ್ತರಾದ ಆ ಮುನಿಗಳಿಗೆ ಅಗಮ್ಯವಾದ ಪ್ರದೇಶವು ಮುಖ್ಯ ಮುಕ್ತಸ್ಥಾನವೆಂದು ಗೊತ್ತಾಗುತ್ತದೆ. ಅಮುಕ್ತಸ್ಥಾನ-ದಲ್ಲಿಯೂ ಅನೇಕ ಮಹಿಮೆಗಳು ಭಾಗವತದಲ್ಲಿ ವರ್ಣಿತವಾಗಿವೆ. ವೈಕುಂಠವು ಮುಕ್ತಸ್ಥಾನವಾದ್ದರಿಂದ ಅಲ್ಲಿ ಅವಿದ್ಯಾರೂಪವಾದ ಮಾಯೆಯು ಇರಲು ಸಾಧ್ಯವಿಲ್ಲ. ಆದ್ದರಿಂದ, ಅಲ್ಲಿ ಹೇಳಲ್ಪಡುವ ಮಾಯೆಯು ಮಹಿಮೆ, ಭಾಗವದಿಚ್ಛೆ ಮತ್ತು ಲಕ್ಷ್ಮೀದೇವಿರೂಪವಾದದ್ದು.

ವಿನತಾತನಯಾಂಸಸ್ಥಃ ಶ್ರಿಯಾ ದೇವ್ಯಾ ಸಮನ್ವಿತಃ ॥ ೪೧೨ ॥

ಚಾರ್ವಂಘ್ರಿಜಂಘಾಜಾನೂರುಕಟಿಕುಕ್ಷಿವಲಿತ್ರಯಃ ।
ನಿಮ್ನನಾಭಿಸ್ಫುರನ್ಮಧ್ಯವಿಶಾಲೋರಃ ಸ್ಥಲೋಜ್ಜ್ವಲಃ ॥ ೪೧೩ ॥

**ಅರ್ಥ–** ವಿನತಾತನಯಾಂಸಸ್ಥಃ= ವಿನತೆಯ ಸುತನ ಹೆಗಲಿನಲ್ಲಿರುವ, ಶ್ರಿಯಾದೇವ್ಯಾ= ಲಕ್ಷ್ಮೀದೇವಿಯಿಂದ, ಸಮನ್ವಿತಃ= ಕೂಡಿಕೊಂಡಿರುವ, ಚಾರು= ಮನೋಹರವಾದ, ಅಂಘ್ರಿ= ಪಾದಗಳು, ಜಂಘಾ= ಮೊಣಕಾಲುಗಳು, ಜಾನು= ಕಾಲ್ಗಂಡಿಗಳು, ಊರು= ತೊಡೆಗಳು, ಕಟಿ= ಸೊಂಟ, ಕುಕ್ಷಿ= ಹೊಟ್ಟೆ, ವಲಿತ್ರಯಃ= ತ್ರಿವಳಿಗಳು, ನಿಮ್ನ= ಆಳವಾದ, ನಾಭಿ= ಹೊಕ್ಕಳು, ಸ್ಫುರತ್= ಪ್ರಕಾಶಮಾನವಾದ, ಮಧ್ಯ= ಮಧ್ಯಪ್ರದೇಶ, ವಿಶಾಲ= ವಿಸ್ತಾರವಾದ, ಉರಃ ಸ್ಥಲ= ವಕ್ಷಃ ಸ್ಥಳ ಇವುಗಳಿಂದ, ಉಜ್ಜ್ವಲಃ= ಪ್ರಕಾಶಮಾನವಾದ.

**ಅನುವಾದ–** ವೈನತೈಯನ ಹೆಗಲಿನಲ್ಲಿ ಲಕ್ಷ್ಮೀಸಹಿತನಾಗಿ ಕುಳಿತಿರುವ ಭಗವಂತನ ಪಾದ, ಮೊಣಕಾಲುಗಳು, ಕಾಲ್ಗಂಡಿಗಳು, ತೊಡೆಗಳು, ಸೊಂಟ, ಹೊಟ್ಟೆ, ತ್ರಿವಳಿಗಳೆಲ್ಲವೂ ಮನೋಹರವಾಗಿದ್ದವು. ಹೊಕ್ಕಳು ಆಳವಾಗಿತ್ತು. ಮಧ್ಯಪ್ರದೇಶವು ಪ್ರಕಾಶಮಾನವಾಗಿತ್ತು, ವಕ್ಷಃಸ್ಥಳವು ವಿಶಾಲವಾಗಿತ್ತು.

**ಕಂಬುಗ್ರೀವೋ ವೃತ್ತಪೀನದೀರ್ಘಬಾಹುಚತುಷ್ಟಯಃ ।**
**ಅಮಂದಸಾಂದ್ರಸೌಂದರ್ಯಮಂದಿರಾಸ್ಯೇಂದುಮಂಡಲಃ ॥ ೪೧೪ ॥**

**ಅರ್ಥ–** ಕಂಬುಗ್ರೀವಃ= ಶಂಖದಂತೆ ಕಂಠವುಳ್ಳ, ವೃತ್ತ= ದುಂಡಾದ, ಪೀನ= ಪುಷ್ಟವಾದ, ದೀರ್ಘ= ಉದ್ದವಾದ, ಬಾಹು= ತೋಳುಗಳ, ಚತುಷ್ಟಯಃ= ನಾಲ್ಕುಳ್ಳ, ಅಮಂದ= ಪೂರ್ಣವಾದ, ಸಾಂದ್ರ= ನಿಬಿಡವಾದ, ಸೌಂದರ್ಯ= ಸೌಂದರ್ಯಕ್ಕೆ, ಮಂದಿರ= ಮಂದಿರದಂತೆ ಇರತಕ್ಕ, ಆಸ್ಯ= ಮುಖವೆಂಬ, ಇಂದುಮಂಡಲಃ= ಚಂದ್ರಮಂಡಲವುಳ್ಳ.

**ಅನುವಾದ–** ಭಗವಂತನ ಕಂಠವು ಶಂಖದಂತಿದೆ. ನಾಲ್ಕು ತೋಳುಗಳು ದುಂಡಾಗಿಯೂ, ಪುಷ್ಟವಾಗಿಯೂ, ನೀಳವಾಗಿಯೂ ಇವೆ. ಪೂರ್ಣ-ಸೌಂದರ್ಯದಿಂದ ತುಂಬಿರುವ ಮುಖವು ಚಂದ್ರಮಂಡಲದಂತಿದೆ.

**ಚಾರ್ವಕ್ಷಿಫಾಲನಾಸಾಸ್ಯಕರ್ಣಗಂಡಾರುಣಾಧರಃ ।**
**ಮಂದಸ್ಮಿತಪ್ರಭಾಮಿಶ್ರಸುಂದರೋಷ್ಠಾರುಣದ್ಯುತಿಃ ॥ ೪೧೫ ॥**

**ಅರ್ಥ–** ಚಾರು= ಮನೋಹರವಾದ, ಅಕ್ಷಿ= ಕಣ್ಣುಗಳು, ಫಾಲ= ಹಣೆ, ನಾಸಾ= ಮೂರು, ಆಸ್ಯ= ಬಾಯಿ, ಕರ್ಣ= ಕಿವಿಗಳು, ಗಂಡ= ಕಪೋಲಗಳು, ಅರುಣ= ಕೆಂಪಾದ, ಅಧರಃ= ಕೆಳದುಟಿ ಇವುಗಳುಳ್ಳ, ಮಂದಸ್ಮಿತ= ಮಂದಹಾಸದ, ಪ್ರಭಾ= ಕಾಂತಿಯಿಂದ, ಮಿಶ್ರ= ಬೆರೆತ, ಸುಂದರ= ಮನೋಹರವಾದ, ಓಷ್ಠ= ತುಟಿಯ, ಅರುಣ= ಕೆಂಪಾದ, ದ್ಯುತಿಃ= ಕಾಂತಿಯುಳ್ಳ.

**ಅನುವಾದ–** ಭಗವಂತನ ಕಣ್ಣುಗಳು, ಹಣೆ, ಮೂಗು, ಬಾಯಿ, ಕಿವಿಗಳು, ಕಪೋಲಗಳು, ಕಿಂದುಟ ಎಲ್ಲವೂ ಮನೋಹರ. ಕೆಂದುಟಿಯ ಕೆಂಪುಕಾಂತಿಗೆ ಮಂದಹಾಸದ ಧವಲಕಾಂತಿ ಮಿಶ್ರವಾಗಿದೆ.

**ಕಿರೀಟಹಾರಗ್ರೈವೇಯರತ್ನಕುಂಡಲಕೌಸ್ತುಭಃ ।**
**ಕಾಂಚೀಕಿಂಕಿಣಿಮಂಜೀರನೂಪುರಾದ್ಯೈರ್ವಿರಾಜಿತಃ ॥ ೪೧೬ ॥**

**ಅರ್ಥ–** ಕಿರೀಟ= ಕಿರೀಟ, ಹಾರ= ಮುತ್ತಿನ ಸರ, ಗ್ರೈವೇಯ= ಕೊರಳಿನ ಪದಕ, ರತ್ನಕುಂಡಲ= ರತ್ನಮಯವಾದ ಕುಂಡಲಗಳು, ಕೌಸ್ತುಭಃ= ಕೌಸ್ತುಭರತ್ನ ಇವುಗಳುಳ್ಳ,

ಕಾಂಚೀ= ಡಾಬು, ಕಿಂಕಿಣಿ= ಕಿರುಗೆಜ್ಜೆ, ಮಂಜೀರ= ಕಾಲುಗೆಜ್ಜೆ, ನೂಪುರ= ಕಾಲ್ಕಡಗ, ಆದ್ಯೈಃ= ಮೊದಲಾದವುಗಳಿಂದ, ವಿರಾಜಿತಃ= ಪ್ರಕಾಶಮಾನನಾದ.

**ಅನುವಾದ–** ಭಗವಂತನು ಕಿರೀಟ, ಮುತ್ತಿನ ಸರ, ಕೊರಳಿನ ಪದಕಗಳು ಕರ್ಣ ಕುಂಡಲಗಳು, ಕೌಸ್ತುಭರತ್ನ, ಡಾಬು, ಕಿರುಗೆಜ್ಜೆ, ಕಾಲ್ಗೆಜ್ಜೆ, ಕಾಲ್ಕಡಗಳನ್ನೂ ಧರಿಸಿದ್ದಾನೆ.

**ವಿವರಣೆ–** ಕು ಎಂದರೆ ಭೂಮಿ; ಅದನ್ನು ಸ್ತುಭ ಎಂದರೆ ಆವರಿಸತಕ್ಕ ಸಮುದ್ರಕ್ಕೆ ಕುಸ್ತುಭ ಎನ್ನುತಾರೆ. ಅಲ್ಲಿ ಹುಟ್ಟಿದ್ದು ಕೌಸ್ತುಭರತ್ನ.

**ಕರಸ್ಥಕಮಲಂ ಧುನ್ವನ್ ಕರುಣಾಲೋಲಲೋಚನಃ ।**
**ಛತ್ರಚಾಮರವಾದಿತ್ರಗೀತನೃತ್ತಾಕ್ಷತಾಂಕುರೈಃ ॥ ೪೧೭ ॥**

**ವ್ಯಜನೈರ್ಧೂಪದೀಪೈಶ್ಚ ಪುಷ್ಪೈರ್ನೀರಾಜನೈಃ ಸ್ತವೈಃ ।**
**ಅರ್ಚ್ಯಮಾನಃ ಪ್ರತಿಪದಂ ಮುಕ್ತಸಂಸಾರಬಂಧನೈಃ ॥ ೪೧೮ ॥**

**ಸುರೈರಸಂಖ್ಯೈಃ ಪರಿತೋ ಮುಕ್ತಕ್ಲೇಶೈಃ ಕೃತೋತ್ಸವಃ ।**
**ತತ್ರಾಯಾತ್ ಕಿಲ ಸರ್ವೇಶೋ ಯತ್ರ ತೇ ಸನಕಾದಯಃ ॥ ೪೧೯ ॥**

**ಅರ್ಥ–** ಕರ= ಕೈಯಲ್ಲಿ, ಸ್ಥ= ಇರತಕ್ಕ, ಕಮಲವನ್ನು, ಧುನ್ವನ್= ಕಂಪನ ಮಾಡತಕ್ಕ, ಕರುಣ= ದಯೆಯಲ್ಲಿ ಲೋಲ= ಆಸಕ್ತವಾದ, ಲೋಚನಃ= ಕಣ್ಣುಳ್ಳ, ಮುಕ್ತ= ಬಿಡಲ್ಪಟ್ಟ, ಸಂಸಾರ= ಸಂಸಾರದ, ಬಂಧನೈಃ= ಬಂಧನವುಳ್ಳ, ಮುಕ್ತಕ್ಲೇಶೈಃ= ಬಿಡಲ್ಪಟ್ಟ ಕಷ್ಟವುಳ್ಳ, ಅಸಂಖ್ಯೈಃ= ಅಸಂಖ್ಯಾತರಾದ, ಸುರೈಃ= ದೇವತೆಗಳಿಂದ, ಪರಿತಃ= ಸುತ್ತಲೂ, ಛತ್ರ= ಶ್ವೇತಚ್ಛತ್ರಿ, ಚಾಮರ= ಚಾಮರ, ವಾದಿತ್ರ= ವಾದ್ಯ, ನೃತ್ತ= ನೃತ್ಯ, ಅಕ್ಷತ= ಅಕ್ಷತೆ, ಅಂಕುರೈಃ= ಅಂಕುರ ಇವುಗಳಿಂದ, ವ್ಯಜನೈಃ= ಬೀಸಣಿಗೆಗಳಿಂದ, ಧೂಪದೀಪೈಃ= ಧೂಪ ಮತ್ತು ದೀಪಗಳಿಂದ, ಪುಷ್ಪೈಃ= ಹೂವುಗಳಿಂದ, ನೀರಾಜನೈಃ= ನೀರಾಜನಗಳಿಂದ, ಸ್ತವೈಃ= ಸ್ತೋತ್ರಗಳಿಂದ, ಪ್ರತಿಪದಂ= ಹೆಜ್ಜೆ ಹೆಜ್ಜೆಗೂ, ಅರ್ಚ್ಯಮಾನಃ= ಪೂಜಿಸಲ್ಪಡತಕ್ಕ, ಕೃತೋತ್ಸವಃ= ಕೃತ ಮಾಡಲ್ಪಟ್ಟ, ಉತ್ಸವಃ= ಉತ್ಸವವುಳ್ಳ, ಸರ್ವೇಶಃ= ಸರ್ವಸ್ವಾಮಿಯಾದ ಪರಮಾತ್ಮನು, ತೇ= ತನ್ನ ದರ್ಶನಕ್ಕೆ ಬಂದು ಜಯವಿಜಯರಿಂದ ತಡೆಯಲ್ಪಟ್ಟ, ಸನಕಾದಯಃ= ಸನಕಾದಿಗಳು, ಯತ್ರ= ಎಲ್ಲಿದ್ದರೋ, ತತ್ರ= ಅಲ್ಲಿಗೆ, ಆಯಾತ್= ಬಂದನು; ಕಿಲ= ಪ್ರಸಿದ್ಧಿಯು.

**ಅನುವಾದ–** ಭಗವಂತನು ಕೈಯಲ್ಲಿ ಲೀಲಾಕಮಲವನ್ನು ತಿರುಗಿಸುತ್ತಿದ್ದನು. ಕರುಣಾಮಯ ದೃಷ್ಟಿಯನ್ನು ಬೀರುತ್ತಿದ್ದನು. ಸಂಸಾರ ಮುಕ್ತರಾದ, ಆದ್ದರಿಂದಲೇ

ಎಲ್ಲಾ ಕಷ್ಟಗಳನ್ನು ಮೀರಿದ ದೇವತೆಗಳು ಸುತ್ತಲೂ ಇದ್ದು ಛತ್ರ, ಚಾಮರ, ವ್ಯಜನ, ವಾದ್ಯ, ಗಾನ, ನೃತ್ಯ, ಲಾಜ, ಅಕ್ಷತೆ, ಅಂಕುರ, ಧೂಪ, ದೀಪ, ನೀರಾಜನ ಮತ್ತು ಸ್ತೋತ್ರಗಳಿಂದ ಹೆಜ್ಜೆ ಹೆಜ್ಜೆಗೂ ಪೂಜಿಸಿ, ಉತ್ಸವವನ್ನು ಮಾಡುತ್ತಿದ್ದರು. ಇಂಥಾ ಭಗವಂತನು ಸನಕಾದಿಗಳು ಇದ್ದಲ್ಲಿಗೆ ಬಂದನು.

**ಭಾವವಿಲಾಸಿನೀ**–ಭಗವತ ಆಭರಣಮಪಿ ಮಾಯಾತಿದೂರತ್ವಂ ಸಮರ್ಥಯಿತುಂ ವೈಕುಂಠಾಂತಃಪುರಸ್ಥಭಗವದ್ರೂಪಂ ವರ್ಣಯತಿ ॥ **ವಿನತಾತನಯಾಂಸಸ್ಥ ಇತ್ಯಾದಿನಾ** ॥೪೧೨-೪೧೯॥

**ಈ ಶ್ಲೋಕದಲ್ಲಿ ವೈಕುಂಠವು ಮುಕ್ತಸ್ಥಾನವೆಂದು ಪ್ರತಿಪಾದಿಸುತ್ತಿದ್ದಾರೆ-**

**ಜೀವನ್ಮುಕ್ತೈಶ್ಚ ಮುನಿಭಿರಗಮ್ಯಾ ಸಾ ಹರೇಃ ಪುರೀ ।**
**ಆಸೀತ್ ಪರಮಮುಕ್ತಾನಾಮಾಸ್ಥಾನ್ಯೇವ ವಿವೇಕಿನಾಮ್ ॥ ೪೨೦ ॥**

**ಅರ್ಥ–** ವಿವೇಕಿನಾಂ= ವಿವೇಕಿಗಳ ಮತದಂತೆ, ಜೀವನ್ಮುಕ್ತೈಃ= ಜೀವನ್ಮುಕ್ತರಾದ, ಮುನಿಭಿಶ್ಚ= ಸನಕಾದಿಗಳಿಂದಲೂ ಕೂಡ, ಅಗಮ್ಯಾ= ಹೊಂದಲು ಅಯೋಗ್ಯವಾದ, ಸಾ= ಆ, ಹರೇಃ= ಭಗವಂತನ, ಪುರೀ= ಪಟ್ಟಣವು, ಪರಮಮುಕ್ತಾನಾಮೇವ= ಮುಖ್ಯಮುಕ್ತರಿಗೇ, ಆಸ್ಥಾನೀ= ವಾಸಸ್ಥಾನವು, ಆಸೀತ್= ಆಯಿತು.

**ಅನುವಾದ–** ಹಿಂದೆ ಸನಕಾದಿಗಳು ದೇವರ ದರ್ಶನಕ್ಕೆ ಬಂದರು. ಅವರಿಗೂ ಸಹ ಮುಕ್ತಸ್ಥಾನಕ್ಕೆ ಪ್ರವೇಶವಿರಲಿಲ್ಲ. ಹೀಗೆ, ಜೀವನ್ಮುಕ್ತರಾದ ಸನಕಾದಿಗಳಿಗೂ ಅಗಮ್ಯವಾದ ಆ ಅಯೋಧ್ಯಾನಾಮಕವಾದ ವೈಕುಂಠನಗರಿಯು ಸಂಸಾರದಿಂದ ಮುಕ್ತರಾದ ಮುಖ್ಯಮುಕ್ತರಿಗೇ ವಾಸಸ್ಥಾನವೆಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಮುನಿಭಿಃ ಸನಕಾದಿಭಿಃ ॥ ೪೨೦ ॥

**ಹಿಂದಿನ ಶ್ಲೋಕದಲ್ಲಿ ಹೇಳಿದ್ದನ್ನು ತರ್ಕದಿಂದ ದೃಢಪಡಿಸುತ್ತಾರೆ-**

**ನ ಚೇದಂತಃಪುರಂ ಸರ್ವಾನ್ ಪ್ರವೇಶ್ಯಾನಂದಯೇದ್ಧಿ ತಾನ್ ।**
**ಕೃಪಾಲುರ್ಭಕ್ತಿಭರಿತಾಂಸ್ತತೋ ನಾಮುಕ್ತಭೂರಸೌ ॥ ೪೨೧ ॥**

**ಅರ್ಥ–** ನ ಚೇತ್= ಹಾಗಿಲ್ಲದಿದ್ದರೆ, ಕೃಪಾಲುಃ= ದಯಾಳುವಾದ ಪರಮಾತ್ಮನು, ತಾನ್= ಆ ಭಕ್ತಿ= ಭಕ್ತಿಯಿಂದ, ಭರಿತಾನ್= ತುಂಬಿದ, ಸರ್ವಾನ್= ಎಲ್ಲರನ್ನು, ಅಂತಃಪುರಂ= ಅಂತಃ ಪುರವನ್ನು, ಪ್ರವೇಶ್ಯ= ಪ್ರವೇಶ ಮಾಡಿಸಿ, ಆನಂದಯೇತ್= ಸಂತೋಷ ಪಡಿಸಬೇಕಾಗಿತ್ತು, ಹಿ= ಯಾವ ಕಾರಣದಿಂದಲೋ, ತತಃ= ಆ ಕಾರಣದಿಂದ, ಅಸೌ= ಈ ವೈಕುಂಠಪುರಿಯು, ಅಮುಕ್ತಭೂಃ ಅಮುಕ್ತ= ಅಮುಕ್ತರಿಗೆ, ಭೂ= ಆಶ್ರಯವು, ನ= ಅಲ್ಲ.

**ಅನುವಾದ–** ವೈಕುಂಠಪುರಿಯು ಪರಮಮುಕ್ತರ ಸ್ಥಾನ ಎಂದು ಹೇಳಲಾಯಿತು. ಹಾಗಿಲ್ಲದಿದ್ದರೆ, ತನ್ನ ದರ್ಶನಕ್ಕೆ ಬಂದ ಸನಕಾದಿಗಳನ್ನು ಜಯವಿಜಯರು ತಡೆದಾಗ, ಅವರನ್ನು ಸಮಾಧಾನ ಮಾಡಲು ಭಗವಂತನು ಸನಕಾದಿಗಳಿದ್ದಲ್ಲಿಗೆ ಬರಬೇಕಾದ್ದಿರಲಿಲ್ಲ. ಮಹಾಭಕ್ತರಾದ ಅವರನ್ನು ತನ್ನ ಅಂತಃಪುರದೊಳಗೆ ಪ್ರವೇಶ ಮಾಡಿಸಿ ಅವರನ್ನು ಸಂತೋಷಪಡಿಸಬೇಕಾಗಿದ್ದಿತು. ಹಾಗೆ ಅವರಿಗೆ ಪ್ರವೇಶವನ್ನು ಕೊಟ್ಟಿಲ್ಲ. ಆದ್ದರಿಂದ, ವೈಕುಂಠಪುರಿಯು ಅಮುಕ್ತರಿಗೆ ಗಮ್ಯವಲ್ಲ; ಮುಕ್ತರ ಸ್ಥಾನ ಎಂದು ಸಿದ್ಧವಾಯಿತು.

ತತ್ರಾಪ್ಯುಕ್ತಪ್ರಮಾಣೇನ ಪ್ರಭುಃ ಸಾಕಾರ ಏವ ಸಃ ।
ಶ್ರೀಶ್ಚ ದಿವ್ಯಮನೋಜ್ಞಾಂಗೀ ಭೃತ್ಯಾಸ್ತೇ ದಿವ್ಯಮೂರ್ತಯಃ ।
ಅನಂತಾಸ್ತೇ ಚ ಸೇವಂತೇ ಸೇವ್ಯಸ್ತೈಃ ಸರ್ವದಾ ಪ್ರಭುಃ ॥ ೪೨೨ ॥

**ಅರ್ಥ–** ತತ್ರಾಪಿ= ಆ ವೈಕುಂಠದಲ್ಲಾದರೋ, ಉಕ್ತಪ್ರಮಾಣೇನ= ಹಿಂದೆ ಹೇಳಿದ ಪ್ರಮಾಣದಿಂದ, ಸಃ= ಆ, ಪ್ರಭುಃ= ಸ್ವಾಮಿಯಾದ ಪರಮಾತ್ಮನು, ಸಾಕಾರ ಏವ= ಆಕಾರ ಸಹಿತನೇ ಆಗಿರುವನು. ಶ್ರೀಶ್ಚ= 'ಲಕ್ಷ್ಮೀದೇವಿಯೂ ಕೂಡ, ಮನೋಜ್ಞಾಂಗೀ= ಮನೋಹರವಾದ ದೇಹವುಳ್ಳವರು. ತೇ= ಆ, ಭೃತ್ಯಾಃ= ಸೇವಕರು, ದಿವ್ಯಮೂರ್ತಯಃ= ಅಲೌಕಿಕವಾದ ದೇಹವುಳ್ಳವರು, ಅನಂತಾಃ= ಅಸಂಖ್ಯಾತರಾದ, ತೇ ಚ= ಅವರೆಲ್ಲರೂ ಕೂಡ, ಸೇವಂತೇ= ಸೇವೆ ಮಾಡುತ್ತಾರೆ. ಪ್ರಭುಃ= ಸ್ವಾಮಿಯಾದ ಪರಮಾತ್ಮನು, ಸರ್ವದಾ= ಯಾವಾಗಲೂ, ತೈಃ= ಆ ರಮಾಬ್ರಹ್ಮಾದಿಗಳಿಂದ, ಸೇವ್ಯಃ= ಸೇವಿಸಲ್ಪಡುವವನು.

**ಅನುವಾದ–** ಹಿಂದೆ ಶ್ಲೋಕ ೪೧೧-೪೧೯ ರಲ್ಲಿ ಹೇಳಿದ ಭಾಗವತವಚನರೂಪ ಪ್ರಮಾಣದಿಂದ ವೈಕುಂಠದಲ್ಲಿರುವ ಪರಮಾತ್ಮನು ನಿರಾಕಾರನಲ್ಲ, ಸಾಕಾರನೆಂದು ತಿಳಿಯುತ್ತದೆ. 'ಶ್ರೀರ್ಯತ್ರ ರೂಪಿಣ್ಯರು ಗಾಯಪಾದಯೋಃ' ಇತ್ಯಾದಿ ಭಾಗವತ ವಚನಗಳಿಂದ ಲಕ್ಷ್ಮೀದೇವಿಯರೂ ಮನೋಹರ ಅಸಾದೃಶ ರೂಪವುಳ್ಳವರೆಂದು ತಿಳಿಯುತ್ತದೆ. ಭಗವಂತನ ಸೇವಕರಾದ ಮುಕ್ತಬ್ರಹ್ಮಾದಿಗಳೂ ಸಹ, 'ಶ್ಯಾಮಾವದಾತಾಃ ಶಕುತ್ರ ಲೋಚನಾಃ' ಇತ್ಯಾದಿ ಭಾಗವತೋಕ್ತಿಗಳಂತೆ ದಿವ್ಯವಾದ ಶರೀರವುಳ್ಳವರು. ಅಂತಹ ಮುಕ್ತರು ಅನಂತರಿದ್ದಾರೆ. ಅವರೆಲ್ಲರೂ ಯಾವಾಗಲೂ ಭಗವಂತನ ಸೇವೆಯನ್ನು ಮಾಡುತ್ತಿರುತ್ತಾರೆ. ಭಗವಂತನು ಅವರ ಸೇವೆಯನ್ನು ಸ್ವೀಕಾರ ಮಾಡುತ್ತಾನೆ.

ವೈಕುಂಠದಲ್ಲಿರುವ ಗೃಹಗಳನ್ನು ವರ್ಣಿಸುತ್ತಾರೆ-

ಹರ್ಮ್ಯಾಣಿ ರತ್ನಭವನಾನ್ಯುದ್ಯಾನೋಪವನಾನಿ ಚ ।
ವಾಪೀಕೂಪತಟಾಕಾನಿ ಸಂತಿ ತತ್ರ ಗೃಹೇ ಗೃಹೇ ॥ ೪೨೩ ॥

**ಅರ್ಥ–** ತತ್ರ= ಆ ವೈಕುಂಠ ಪುರಿಯಲ್ಲಿ, ಗೃಹೇ ಗೃಹೇ= ಮನೆ ಮನೆಯಲ್ಲಿಯೂ, ಹರ್ಮ್ಯಾಣಿ= ಉಪ್ಪರಿಗೆಗಳು, ರತ್ನಭವನಾನಿ= ರತ್ನಗಳಿಂದ ನಿರ್ಮಿತವಾದ ಮಂದಿರಗಳು, ಉದ್ಯಾನೋಪವನಾನಿ= ಉದ್ಯಾನಗಳು ಉಪವನಗಳು, ವಾಪೀಕೂಪತಟಾಕಾನಿ= ಕೊಳಗಳು, ಬಾವಿಗಳು, ಕೆರೆಗಳು, ಸಂತಿ= ಇರುತ್ತವೆ.

**ಅನುವಾದ–** ಉದ್ಯಾನಗಳೆಂದರೆ ರಾಜಸ್ತ್ರೀಯರು ವಿಹಾರ ಮಾಡುವ ಮನೆಗೆ ಸೇರಿದಂತೆ ಇಹನ ಕೈದೋಟಗಳು, ಉಪವನಗಳೊಂದಿಗೆ ಹೊರಗೆ ಇರುವ ಕೃತಕವಾಗಿ ನಿರ್ಮಿತವಾದ ವನಗಳು.

**ಭಾವವಿಲಾಸಿನೀ–** ತಾನ್ ಸನಕಾದೀನ್ । ಅಸೌ ವೈಕುಂಠ ಅಂತಃಪುರೀ ॥ ೪೨೧-೪೨೩ ॥

ಪಕ್ವೋ ವಾತಾಪಿದೇಹೋಽಪಿ ಭಿಕ್ಷೋಃ ಶಾಕಾದಿರೂಪತಃ ।
ರಕ್ಷಃಶಕ್ತ್ಯಾ ಯಥಾಪೂರ್ವಂ ಲಕ್ಷ್ಯತೇ ತತ್ ಕ್ಷಣೇ ಕಿಲ ॥ ೪೨೪ ॥

**ಅರ್ಥ–** ಭಿಕ್ಷೋಃ= ಭಿಕ್ಷುವಿಗೋಸ್ಕರ, ಶಾಕಾದಿರೂಪತಃ= ಶಾಕ ತರಕಾರಿಯೇ, ಆದಿ= ಮೊದಲಾದವುಗಳುಳ್ಳ, ರೂಪತಃ= ರೂಪದಿಂದ, ಪಕ್ವಃ= ಬೇಯಿಸಲ್ಪಟ್ಟ, ವಾತಾಪಿ ದೇಹೋಽಪಿ= ವಾತಾಪಿ ಎಂಬ ರಾಕ್ಷಸನ ದೇಹವೂ ಕೂಡ, ರಕ್ಷಃ ಶಕ್ತ್ಯಾ= ರಾಕ್ಷಸನ ಸಾಮರ್ಥ್ಯದಿಂದ, ತತ್ಕ್ಷಣೇ= ಅದೇ ಕ್ಷಣದಲ್ಲಿ, ಯಥಾಪೂರ್ವಂ= ಮೊದಲಿನಂತೆ, ಲಕ್ಷ್ಯತೇ= ಕಾಣಲ್ಪಡುತ್ತದೆ, ಕಿಲ= ಪ್ರಸಿದ್ಧಿಯು.

**ಅನುವಾದ–** ಭಿಕ್ಷುವಿಗಾಗಿ ತರಕಾರಿಯಂತೆ ಬೇಯಿಸಿದ ವಾತಾಪಿ ಎಂಬ ರಾಕ್ಷಸನ ದೇಹವು ಅದೇಕ್ಷಣದಲ್ಲಿ ಮೊದಲಿನಂತೆ ವಾತಾಪಿದೇಹವಾಗಿಯೇ ಕಾಣಿಸುತ್ತಿತ್ತು ಎಂದು ಪುರಾಣಪ್ರಸಿದ್ಧಿ ಇದೆ.

**ಭಾವವಿಲಾಸಿನೀ–** ವೈಕುಂಠಾಂತಃ ಪುರಸ್ಥಮುಕ್ತಭೋಗ್ಯಾನ್ನಪಾಯಸಾದೀನಾಂ ನಿತ್ಯತ್ವಮುಪ-ಪಾದಯತಿ । **ಪಕ್ವ ಇತಿ ।** ಭಿಕ್ಷೋರ್ಭಿಕ್ಷಾರ್ಥಮಾಗತಸ್ಯ ಭೋಜನಾರ್ಥೇ ರಕ್ಷಃ ಶಕ್ತ್ಯಾ ಪಕ್ವೀಭೂತಸ್ಯ ಪಾಚಕಸ್ಯ ರಾಕ್ಷಸಸ್ಯ ಶಕ್ತ್ಯಾ ತತ್‌ಕ್ಷಣೇ ವಾತಾಪೇ ಆಗಚ್ಛೇತೀಲ್ವಲೋಕ್ತಿಕ್ಷಣೇ । ಕಿಲೇತ್ಯನೇನ ಇಲ್ವಲಾಖ್ಯೋ ಜ್ಯೇಷ್ಠೋಽಸುರಃ ಸ್ವತಪಃ ಸಾಮರ್ಥ್ಯೇನ ಸ್ವಕರ್ಮನಿಷ್ಠಸ್ಯ ವಾತಾಪೇಃ ಕರಚರಣಾದ್ಯಂಗಂ ಸರ್ವಂ ಛಿತ್ವಾ ನಾನಾಶಾಕಾದಿರೂಪಪಾಕಂ ಚ ಕೃತ್ವಾ ಸ್ವಗೃಹಂ ಪ್ರತ್ಯಾಗತಾನತಿಥೀನ್ ಭೋಜಯತಿ । ತದನಂತರಮರೇ ವಾತಾಪೇ ಆಗಚ್ಛೇತ್ಯಾಹ್ವಾನೇ ಕೃತೇ ಸತಿ ತದುದರಂ ನಿರ್ಭಿದ್ಯ ತತ್ತದುಚ್ಛಮಾಂಸೈರೇವ ಪೂರ್ವವತ್ಸಂಪನ್ನಾಕಾರಃ ಸನ್ಯಥಾಪೂರ್ವಂ ಸ್ವಜ್ಯೇಷ್ಠಸಮೀಪೇ ತಿಷ್ಠತಿ । ಪುನಸ್ತೇಷಾಂ ಸರ್ವಭೂತ ಶರೀರಸ್ಥಮಾಂಸಂ ಸ್ವಯಂ ಭಕ್ಷಯತಿ । ಅನೇನ ಪ್ರಕಾರೇಣ ದಿನೇ ದಿನೇ ಬಹುಬ್ರಾಹ್ಮಣವಧೇ ಕೃತೇ ಸತಿ ಕುಪಿತೋಽಗಸ್ತ್ಯಮುನಿರಾಗತ್ಯ ಪೂರ್ವಾತಿಥಿವದೇವ ಭುಕ್ತ್ವಾ ಪುನರಾಹ್ವಾನೇ ಜೀರ್ಣೋ ವಾತಾಪಿರಿತಿ ಸ್ವೋದರೇ ಸಂಸ್ಪೃಶ್ಯ ತಂ ತತ್ರೈವ ಮಾರಿತವಾನಿತಿ ಪೌರಾಣಿಕಪ್ರಸಿದ್ಧಿಂ ಸೂಚಯತಿ ॥ ೪೨೪ ॥

**ವಿವರಣೆ–** ವೈಕುಂಠದ ಅಂತಃಪುರದಲ್ಲಿರುವ ಮುಕ್ತರಿಂದ ಭೋಗ್ಯವಾದ ಅನ್ನಪಾಯಸಾದಿಗಳು ನಿತ್ಯವೆಂದು ಉಪಪಾದಿಸುತ್ತಾರೆ. ಭಿಕ್ಷೋಃ ಎಂದರೆ ಭಿಕ್ಷಾರ್ಥವಾಗಿ ಬಂದವರ ಭೋಜನಕ್ಕೋಸ್ಕರ ಎಂದರ್ಥ. ರಾಕ್ಷಸನ ಶಕ್ತಿಯಿಂದ ಎನ್ನುವುದಕ್ಕೆ ರಾಕ್ಷಸನ ಶಕ್ತಿಯಿಂದ ಬೇಯಿಸಲ್ಪಟ್ಟ ಎನ್ನುವಲ್ಲಿ ಅನ್ವಯ; ಅದೇ ಕ್ಷಣದಲ್ಲಿ ಎಂದರೆ 'ವಾತಾಪಿಯೇ ಬಾ' ಎಂದು ಇಲ್ವಲನು ಹೇಳುವ ಕ್ಷಣದಲ್ಲಿ ಎಂದರ್ಥ. ಕಿಲ ಎಂಬುವುದರಿಂದ ಪುರಾಣಪ್ರಸಿದ್ಧಿಯನ್ನು ಸೂಚಿಸುತ್ತಾರೆ. ಅದೇನೆಂದರೆ, ವಾತಾಪಿ, ಇಲ್ವಲ ಎಂಬ ಅಣ್ಣತಮ್ಮಂದಿರಿದ್ದರು. ಅಣ್ಣನಾದ ಇಲ್ವಲನೆಂಬ ಅಸುರನು ತನ್ನ ತಪಸ್ಸಿನ ಸಾಮರ್ಥ್ಯದಿಂದ, ವಾತಾಪಿಯ ಕರಚರಣಾದಿ ಅಂಗಗಳನ್ನು ಎಲ್ಲವನ್ನೂ ಕತ್ತರಿಸಿ, ನಾನಾ ತರಕಾರಿ ಮೊದಲಾದ ರೂಪದಿಂದ ಅಡುಗೆಯನ್ನು ಮಾಡಿ, ತನ್ನ ಗೃಹಕ್ಕೆ ಬಂದ ಅತಿಥಿಗಳನ್ನು ಭೋಜನ ಮಾಡಿಸುತ್ತಾನೆ. ಅನಂತರ, 'ಓ, ವಾತಾಪಿ ಬಾ' ಎಂದು ಕೂಗಿದಾಗ ವಾತಾಪಿಯು ಆ ಅತಿಥಿಯ ಹೊಟ್ಟೆಯನ್ನು ಸೀಳಿಕೊಂಡು, ಅತಿಥಿಯು ಉಂಡಿದ್ದ ಮಾಂಸಗಳಿಂದಲೇ ಮೊದಲಿನಂತೆ ದೇಹವನ್ನು ಪಡೆದು, ಹಿಂದಿನಂತೆ ಅಣ್ಣನ ಸಮೀಪಕ್ಕೆ ಬರುತ್ತಾನೆ. ಮತ್ತೆ ಆ ಅತಿಥಿಗಳ ಶರೀರದಲ್ಲಿರುವ ಮಾಂಸವನ್ನು ತಾನು ತಿನ್ನುತ್ತಾನೆ. ಈ ರೀತಿ ದಿನದಿನವೂ ಅನೇಕ ಬ್ರಾಹ್ಮಣರನ್ನು ಹಿಂಸಿಸುತ್ತಿರುವಾಗ, ಕೋಪಗೊಂಡ ಅಗಸ್ತ್ಯಮುನಿಗಳು ಹಿಂದಿನ ಅತಿಥಿಗಳಂತೆಯೇ ಭೋಜನ ಮಾಡಿ, ಪುನಃ ಕರೆದಾಗ, 'ವಾತಾಪಿಯು ಜೀರ್ಣವಾಗಿದ್ದಾನೆ' ಎಂದು ಹೇಳಿ ಜೀರ್ಣನಾದ ಅವನನ್ನು ತಮ್ಮ ಹೊಟ್ಟೆಯಲ್ಲಿ ಸ್ತಂಭನ ಮಾಡಿ ಸಂಹರಿಸಿದರು.

**ಅತೋ ಮೌಕ್ತಂ ಸಮಸ್ತಂ ಚ ವಸ್ತು ಭುಕ್ತಂ ಚ ತೈಃ ಪುನಃ ।**
**ತಥೈವ ತಿಷ್ಠೇತ್ ತನ್ನಿತ್ಯಂ ಸ್ಯಾಚ್ಚಾಜಂ ಲಿಂಗದೇಹವತ್ ॥ ೪೨೫ ॥**

**ಅರ್ಥ–** ಅತಃ= ಆದ್ದರಿಂದ, ಮೌಕ್ತಂ= ಮುಕ್ತ ಸಂಬಂಧಿಯಾದ, ಸಮಸ್ತಂ= ಎಲ್ಲಾ, ವಸ್ತು ಚ= ಪದಾರ್ಥವೂ, ತೈಃ= ಆ ಮುಕ್ತರಿಂದ, ಭುಕ್ತಂ ಚ= ತಿನ್ನಲ್ಪಟ್ಟಿದ್ದೂ ಕೂಡ, ತಥೈವ= ಹಾಗೆಯೇ, ತಿಷ್ಠೇತ್= ಇರುತ್ತದೆ, ತತ್= ಅದು, ಲಿಂಗದೇಹವತ್= ಲಿಂಗದೇಹದಂತೆ, ನಿತ್ಯಂ= ನಿತ್ಯವು, ಅಜಂ ಚ= ಉತ್ಪತ್ತಿರಹಿತವೂ ಸಹ.

**ಅನುವಾದ–** ಮೇಲೆ ಹೇಳಿದ ಪೌರಾಣಿಕ ಕಥೆಯಂತೆ, ಇಲ್ವಲನು ಕತ್ತರಿಸಿ, ಬೇಯಿಸಿ ಹಾಕಿದ್ದ ಮತ್ತು ಅತಿಥಿಗಳು ತಿಂದ ವಾತಾಪಿದೇಹವು ರಾಕ್ಷಸಶಕ್ತಿಯಿಂದ ಮೊದಲಿನಂತೆ ಆದದ್ದು ಕಂಡುಬಂದಿದೆ. ಅದರಂತೆ, ಮುಕ್ತರು ಭೋಗಿಸುವ ಪದಾರ್ಥಗಳು, ಅವರು ಉಂಡರೂ ಸಹ ಮೊದಲಿನಂತೆಯೇ ಆಗುತ್ತವೆ. ಆ ಮುಕ್ತಭೋಗ್ಯ ಪದಾರ್ಥಗಳು ಅನಾದಿ ನಿತ್ಯ. ಇದಕ್ಕೆ ಉದಾಹರಣೆ, ಲಿಂಗದೇಹ.

**ಭಾವವಿಲಾಸಿನೀ–** ಅತಶ್ಛಿನ್ನ ಭುಕ್ತದೇಹಸ್ಯ ಯಥಾಪೂರ್ವಮವಸ್ಥಾನದರ್ಶನಾತ್ । ಅಜಂ ಜನನರಹಿತಮ್ ॥ ೪೨೫ ॥

**ವಿವರಣೆ–** ಲಿಂಗದೇಹವು ಅನಾದಿ ನಿತ್ಯ. ಅದು ಜೀವನಿಗೆ ಅನಾದಿಕಾಲದಿಂದ ಸಂಬಂಧವಾಗುತ್ತದೆ; ಆ ಸಂಬಂಧವು ಲಿಂಗಭಂಗದಿಂದ ಹೋದರೂ ಲಿಂಗದೇಹವು ಮಾತ್ರ ನಿತ್ಯವಾಗಿ ಉಳಿಯುತ್ತದೆ. ಅದರಂತೆ, ಮುಕ್ತಭೋಗ್ಯ ಪದಾರ್ಥಗಳು ಅವರ ಇಚ್ಛೆಯಂತೆ ಅವರಿಗೆ ಸಂಬಂಧವಾಗುತ್ತವೆ. ಭೋಗಾನಂತರ ಮುಕ್ತರನ್ನು ಬಿಟ್ಟು ಹೋದರೂ ನಿತ್ಯವಾಗಿ ಉಳಿಯುತ್ತವೆ. ಇಲ್ಲಿ ತಿಳಿಯಬೇಕಾದ ವ್ಯತ್ಯಾಸವೇನೆಂದರೆ, ಲಿಂಗದೇಹವು ಪ್ರಾಕೃತವಾದ್ದರಿಂದ ಅದರ ಸಂಬಂಧವು ಬಂಧಕವಾಗುತ್ತದೆ. ಮುಕ್ತಭೋಗ್ಯ ಪದಾರ್ಥಗಳು ಅಪ್ರಾಕೃತವಾದ್ದರಿಂದ ಅವುಗಳ ಸಂಬಂಧವು ಬಂಧಕವಾಗುವುದಿಲ್ಲ. ಹೇಗೆಂದರೆ, ಪೊಲೀಸರು ಖೈದಿಗೆ ಹಾಕಿದ ಕಬ್ಬಿಣದ ತೋಡ ದುಃಖಕರ, ತಾನೇ ಇಷ್ಟಪಟ್ಟು ಹಾಕಿಕೊಂಡ ಬಂಗಾರದ ತೋಡ ದುಃಖಕರವಲ್ಲ.

**ಸರ್ವಃ ಸರ್ವೇಶಶಕ್ತ್ಯೈವ ಶ್ರುತ್ಯುಕ್ತಾರ್ಥಃ ಸಮರ್ಥ್ಯತೇ ।**
**ಅನ್ಯೈರಘಟಿತಂ ಯೋಽಸೌ ಘಟಯೇದಣುಗೋ ಮಹಾನ್ ॥ ೪೨೬ ॥**

**ಅರ್ಥ–** ಸರ್ವಃ= ಎಲ್ಲಾ, ಶ್ರುತ್ಯುಕ್ತಾರ್ಥಃ= ಶ್ರುತಿ ವೇದದಲ್ಲಿ, ಉಕ್ತ= ಹೇಳಲ್ಪಟ್ಟ, ಅರ್ಥಃ= ಅರ್ಥವು, ಸರ್ವ= ಎಲ್ಲಕ್ಕೂ, ಈಶ= ಒಡೆಯನಾದ ಪರಮಾತ್ಮನ, ಶಕ್ತ್ಯೈವ= ಸಾಮರ್ಥ್ಯದಿಂದಲೇ, ಸಮರ್ಥ್ಯತೇ= ಸಮರ್ಥಿಸಲ್ಪಡುತ್ತದೆ, ಯಃ= ಯಾವ, ಅಸೌ= ಪರಮಾತ್ಮನು, ಅಣು= ಪರಮಾಣುವಿನಲ್ಲಿ, ಗಃ= ಇದ್ದಾನೋ, ಮಹಾನ್= ಮಹತ್ತೂ ಆಗಿದ್ದಾನೋ, ಸಃ= ಆ ಪರಮಾತ್ಮನು, ಅನ್ಯೈಃ= ಬೇರೆಯವರಿಂದ, ಅಘಟಿತಂ= ಕೂಡದೇ ಇದ್ದದ್ದನ್ನು, ಘಟಯೇತ್= ಕೂಡಿಸುತ್ತಾನೆ.

**ಅನುವಾದ–** ಯಾವ ಪರಮಾತ್ಮನು ಅಣುಗ ಎಂದರೆ ಪರಮಾಣುವಿನಲ್ಲೂ ಇದ್ದಾನೆ ಮಹಾನ್ ಎಂದರೆ ಮಹತ್ತಾದ, ಅದರಲ್ಲೂ ಬ್ರಹ್ಮಾಂಡಕ್ಕೆ ಆಧಾರವಾದ ದೇಹವುಳ್ಳವನು. ಅಲ್ಪನಾದ ಅಸುರನ ಶಕ್ತಿಯಿಂದ ನಷ್ಟವಾದ ದೇಹವು ಮತ್ತೆ ಎದ್ದಿರುವಾಗ, ಅಘಟಿತ ಘಟಕವಾದ ಭಗವಂತನ ಶಕ್ತಿಯಿಂದ ಮುಕ್ತ ಸಂಬಂಧಿ ಯಾದ ಪದಾರ್ಥಗಳು ಅನಾದಿ ನಿತ್ಯವಾಗಿರುವುದೂ, ಅವುಗಳು ಭೋಜ್ಯವಾಗಿರುವುದೂ ಸಹ ಸುತರಾಂ ಕೂಡಿಸಲು ಬರುತ್ತದೆ ಎಂದಭಿಪ್ರಾಯ.

**ಭಾವವಿಲಾಸಿನೀ–** ಯಃ ಪರಮಾತ್ಮಾ ಅಣುಗಃ ಪರಮಾಣೌ ಸ್ಥಿತಃ । ಮಹಾಂಸ್ತತ್ರಾಪಿ ಬ್ರಹ್ಮಾಂಡಾಧಾರವಿಗ್ರಹವಾನ್ । ಅಲ್ಪಕಾಸುರಶಕ್ತ್ಯಾ ನಷ್ಟಸ್ಯ ಪುನರುತ್ಥಾನೇಽಘಟಿತಘಟಕ-ಭಗವಚ್ಛಕ್ತ್ಯಾ ಮೌಕ್ತಪದಾರ್ಥಾನಾಮನಾದ್ಯನಂತತ್ವಂ ಭೋಜ್ಯತ್ವಾದಿಕಂ ಚ ಸುತರಾಂ ಘಟಯಿತುಂ ಶಕ್ಯಮಿತಿಭಾವಃ ॥ ೪೨೬ ॥

**ವಿವರಣೆ–** ಹಿಂದೆ ನೀಡಿದ ಉದಾಹರಣೆಯಲ್ಲಿ, ಇಲ್ವಲವೆಂಬ ಅಸುರನ ಶಕ್ತಿಯಿಂದ ವಾತಾಪಿಯ ದೇಹವು ಕತ್ತರಿಸಿ, ಬೇಯಿಸಿ, ತಿನ್ನಲ್ಪಟ್ಟಿದ್ದರೂ ಮತ್ತೆ ಮೊದಲಿನಂತೆ

ಬರುತ್ತಿತ್ತೆಂದು ತಿಳಿಯುತ್ತದೆ. ಹೀಗೆ ಅಸುರನ ಶಕ್ತಿಯಿಂದಲೇ ಇಷ್ಟು ವ್ಯಾಪಾರವು ನಡೆಯುವಾಗ, ಅಘಟಿತ ಘಟಕ ಪರಮಾತ್ಮನ ಶಕ್ತಿಯಿಂದ, ಮುಕ್ತರು ಭೋಗಿಸುವ ಪದಾರ್ಥಗಳು ಅನಾದಿ ನಿತ್ಯವಾಗಿರುವುದೂ, ಭೋಗಾನಂತರ ಹಾಗೆಯೇ ಉಳಿಯುವುದೂ ಏನೂ ಆಚ್ಚರಿಯಲ್ಲ. ಭಗವಂತನ ಅಂಥಾ ಸಾಮರ್ಥ್ಯಕ್ಕೇ ರಾಜರು ಉದಾಹರಣೆ ನೀಡಿದ್ದಾರೆ. ಏನೆಂದರೆ, ಭಗವಂತನು ಅಣುವಾದ ಜೀವಿನಿಗಿಂತ ಅಣುವಾಗಿ ಜೀವನಲ್ಲಿದ್ದಾನೆ. ಅದೇ ಪರಮಾತ್ಮನು, ಅಲ್ಲಿಯೇ ಮಹತ್ತಾದ ಬ್ರಹ್ಮಾಂಡಕ್ಕಿಂತ ಮಹತ್ತಾಗಿ ಬ್ರಹ್ಮಾಂಡವನ್ನು ಧರಿಸಿದ್ದಾನೆ.

ಹೀಗೆ ಭಗವಂತನು ತನ್ನ ಅಘಟಿತ ಶಕ್ತಿಯಿಂದ ಮುಕ್ತಭೋಜ್ಯ ಪದಾರ್ಥಗಳು ಅನಾದಿ ನಿತ್ಯವಾಗಿರುವಂತೆ ಮಾಡುವುದಾದರೆ, ಅದೇ ಶಕ್ತಿಯಿಂದ ತನಗೆ ಜೀವೈಕ್ಯವನ್ನು ಮತ್ತು ತನ್ನ ನಿರ್ಗುಣತ್ವವನ್ನು ಏಕೆ ಘಟನ ಮಾಡುವುದಿಲ್ಲ ಎಂದು ಶಂಕೆ ಬಂದರೆ ಹೀಗೆ ಹೇಳುತ್ತಾರೆ-

## ಐಕ್ಯಂ ಚ ನಿರ್ಗುಣತ್ವಂ ಚ ನ ಶ್ರೌತಂ ನಾಪಿ ಯುಕ್ತಿಮತ್ ॥ ೪೨೭ ॥

**ಅರ್ಥ–** ಐಕ್ಯಂ ಚ= ಜೀವೈಕ್ಯವೂ, ನಿರ್ಗುಣತ್ವಂ ಚ= ನಿರ್ಗುಣತ್ವವೂ ಕೂಡ, ಶ್ರೌತಂ= ಶ್ರುತಿ ಸಿದ್ಧವಾದದ್ದು, ನ= ಅಲ್ಲ, ಯುಕ್ತಿಮದಪಿ= ಯುಕ್ತಿವುಳ್ಳದ್ದೂ ಕೂಡ, ನ= ಅಲ್ಲ.

**ಅನುವಾದ–** ಭಗವಂತನು ಸಮರ್ಥನಾದರೂ ಶ್ರುತ್ಯಾದಿಪ್ರಮಾಣಸಿದ್ಧವಾದ ಪದಾರ್ಥವನ್ನೇ ಘಟನೆ ಮಾಡುತ್ತಾನೆ ಹೊರತಾಗಿ ಅಪ್ರಾಮಾಣಿಕವಾದ ಶಶವಿಷಾಣ ಮೊದಲಾದ್ದನ್ನು ಘಟನೆ ಮಾಡುವುದಿಲ್ಲ. ಜೀವೈಕ್ಯಾದಿಗಳು ಅಪ್ರಾಮಾಣಿಕ ಮತ್ತು ಪ್ರಮಾಣವಿರುದ್ಧ. ಆದ್ದರಿಂದ ಅದನ್ನು ಘಟನೆ ಮಾಡುವುದಿಲ್ಲ.

**ಭಾವವಿಲಾಸಿನೀ–** ಏವಂ ಸತಿ ಸ್ವಾಘಟಿತಘಟಕಶಕ್ತ್ಯಾ ಸ್ವಸ್ಯ ಜೀವೈಕ್ಯಂ ನಿರ್ಗುತ್ವಂ ಚ ಕುತೋ ಭಗವಾನ್ನ ಘಟಯತೀತ್ಯತ ಆಹ – **ಐಕ್ಯಮಿತಿ** ॥ ಶಕ್ತೋಽಪಿ ಭಗವಾಂಚ್ಛ್ರುತ್ಯಾದಿಪ್ರಮಾಣ-ಸಿದ್ಧಮೇವಾರ್ಥಂ ಘಟಯೇತ್ । ನ ತ್ವಪ್ರಮಾಣಿಕಂ ಶಶಶೃಂಗಮಪಿ ಘಟಯೇತ್ । ಐಕ್ಯಾದಿಕಂ ಚ ಶಶಶೃಂಗವದ ಪ್ರಮಾಣಿಕಂ ಪ್ರಮಾಣವಿರುದ್ಧಂ ಚಾತಸ್ತದಪಿ ನ ಘಟಯತೀತಿ ಭಾವಃ॥೪೨೭॥

**ವಿವರಣೆ–** ಭಗವಂತನಿಗೆ ಅಘಟಿತ ಘಟಕ ಶಕ್ತಿ, ಅಚಿಂತ್ಯಾದ್ಭುತ ಶಕ್ತಿ ಇರುವುದು ಸತ್ಯ. ಆದರೆ, ಭಗವಂತನು ಈ ಶಕ್ತಿಯಿಂದ ಸತ್ಯವಾದ ಪದಾರ್ಥಗಳನ್ನೇ ನಿಯಮಿಸುತ್ತಾನೆ. ಮೂರುಕಾಲದಲ್ಲೂ ಇಲ್ಲದ ಶಶವಿಷಾಣ ಮೊದಲಾದ ಪದಾರ್ಥಗಳನ್ನು ಉಂಟು ಮಾಡುವುದಿಲ್ಲ. ಜೀವೈಕ್ಯವಾಗಲೀ, ಭಗವಂತನ ನಿರ್ಗುಣತ್ವವಾಗಲೀ ಶಶವಿಷಾಣದಂತೆ ಅಸತ್ಯವಾದದ್ದು. ಏಕೆಂದರೆ, ಶಶವಿಷಾಣಕ್ಕೆ ಹೇಗೆ ಪ್ರಮಾಣವಿಲ್ಲವೋ ಹಾಗೆ ಜೀವೈಕ್ಯಾದಿಗಳಿಗೂ ಪ್ರಮಾಣವಿಲ್ಲ. ಜೀವೈಕ್ಯವು ದ್ವಾಸುಪರ್ಣಾದಿ ಶ್ರುತಿಗಳಿಗೂ, 'ನಾನು ಈಶ್ವರನಲ್ಲ' ಎಂಬ ಅಬಾಧಿತ ಪ್ರತ್ಯಕ್ಷಕ್ಕೂ,

'ಜೀವೇಶ್ವರರು ಭಿನ್ನರು, ಭಿನ್ನ ಧರ್ಮಗಳಿಗೆ ಆಶ್ರಯರಾದ್ದರಿಂದ, ಅಗ್ನಿ ಹಿಮಗಳಂತೆ' ಎಂಬ ಅನುಮಾನಕ್ಕೂ ವಿರುದ್ಧವಾಗಿವೆ. ನಿರ್ಗುಣತ್ವವು 'ಮಯ್ಯನಂತಗುಣೇಽನಂತೇ' ಮೊದಲಾದ ಶ್ರುತಿಗಳಿಗೂ, ಗುಣವಂತನಾದ ಭಗವಂತನನ್ನು ಗೋಚರಿಸುವ ಬ್ರಹ್ಮಾದಿ ಯೋಗಿಪ್ರತ್ಯಕ್ಷಕ್ಕೂ, 'ಭಗವಂತನು ಸಗುಣ, ದ್ರವ್ಯನಾದ್ದರಿಂದ, ಭೂಮಿಯಂತೆ' ಎಂಬ ಅನುಮಾನಕ್ಕೂ ವಿರುದ್ಧವಾಗಿವೆ. ಇಂಥಾ ಜೀವೈಕ್ಯಾದಿಗಳು ಮೂರುಕಾಲದಲ್ಲೂ ಇಲ್ಲದಿರತಕ್ಕ ಅಸತ್ಯಗಳು. ಆದ್ದರಿಂದ ಭಗವಂತನು ಅವುಗಳನ್ನು ಘಟನೆ ಮಾಡುವುದಿಲ್ಲ.

ಮತ್ತೊಂದು ಯುಕ್ತಿಯನ್ನು ಹೇಳುತ್ತಿದ್ದಾರೆ-

**ರುಣದ್ಧಿ ಯದ್ಧಿ ಘಟಕಶಕ್ತೀಶತ್ವೇ ಮಹಾಪ್ರಭೋಃ ।**
**ಘಟಯೇನ್ನೇದೃಶಾನರ್ಥಕರಮರ್ಥಂ ಸ ಬುದ್ಧಿಮಾನ್ ॥ ೪೨೮ ॥**

**ಅರ್ಥ–** ಯತ್= ಯಾವ ಐಕ್ಯಾದಿಗಳು, ಮಹಾಪ್ರಭೋಃ= ಮಹಾ ಸಮರ್ಥನಾದ ಪರಮಾತ್ಮನ, ಘಟಕ ಶಕ್ತೀಶತ್ವೇ= ಘಟಕಶಕ್ತಿ ಅಘಟಿತಘಟಕ ಶಕ್ತಿ, ಈಶತ್ವೇ= ಈಶ್ವರತ್ವಗಳನ್ನು, ರುಣದ್ಧಿ= ತಡೆಯುತ್ತದೋ, ಈದೃಶ= ಇಂಥಾ, ಅನರ್ಥ= ಅನರ್ಥವನ್ನು, ಕರಂ= ಉಂಟುಮಾಡತಕ್ಕ, ಅರ್ಥಂ= ಪದಾರ್ಥವನ್ನು, ಬುದ್ಧಿಮಾನ್= ಬುದ್ಧಿವಂತನಾದ, ಸಃ= ಪರಮಾತ್ಮನು, ನ ಘಟಯೇತ್= ಘಟನೆ ಮಾಡುವುದಿಲ್ಲ; ಹಿ= ಪ್ರಸಿದ್ಧಿಯು.

**ಅನುವಾದ–** ಯಾವ ಐಕ್ಯಾದಿಗಳು ಅಘಟಿತಘಟಕಶಕ್ತಿ ಮತ್ತು ಈಶ್ವರತ್ವವನ್ನು ತಡೆಯುತ್ತವೆಯೋ ಎಂದು ಅನ್ವಯ ಮಾಡಿಕೊಳ್ಳಬೇಕು. ಅರ್ಥ ಎನ್ನುವುದಕ್ಕೆ ತನ್ನ ಶಕ್ತಿ ಮತ್ತು ಈಶ್ವರತ್ವವನ್ನು ನಾಶ ಮಾಡತಕ್ಕ ಐಕ್ಯ, ನಿರ್ಗುಣತ್ವ ಮೊದಲಾದದ್ದು ಎಂದರ್ಥ. ನೀಚನಾದ ಜೀವನಿಂದ ತನಗೆ ಐಕ್ಯವನ್ನು ಘಟನೆ ಮಾಡಿದರೆ ತಾನೂ ನೀಚನಾಗಬೇಕಾಗಿ ಬಂದು ತನ್ನ ಈಶ್ವರತ್ವ ಹಾನಿಯಾಗುತ್ತದೆ. ಧರ್ಮರಾಹಿತ್ಯ-ರೂಪವಾದ ನಿರ್ಗುಣತ್ವವನ್ನು ಘಟನೆ ಮಾಡಿದರೆ ಅಘಟಿತಘಟಕಶಕ್ತಿರೂಪವಾದ ಧರ್ಮವೇ ಲೋಪವಾದೀತು! ಆದ್ದರಿಂದ, ಅವೆರಡನ್ನು ಘಟನೆ ಮಾಡುವುದಿಲ್ಲ ಎಂದಭಿಪ್ರಾಯ.

**ಭಾವವಿಲಾಸಿನೀ–**ಯುಕ್ತ್ಯಂತರಂ ಚಾಹ–ರುಣದ್ಧೀತಿ ॥ ಯದೈಕ್ಯಾದಿಕಂ ಘಟಕಶಕ್ತೀಶತ್ವೇ ಅಘಟಿತ ಘಟಕಶಕ್ತಿಮೀಶತ್ವಂ ರುಣದ್ಧೀತಿ ಸಂಬಂಧಃ । ಅರ್ಥಂ ಸ್ವಶಕ್ತೀಶತ್ವ ನಾಶಕಮೈಕ್ಯನಿರ್ಗುಣತ್ವಾದಿಕಂ ನೀಚಜೀವೈಕ್ಯಘಟನೇ ಕೃತೇ ಸತಿ ಸ್ವಸ್ಯಾಪಿ ನೀಚತ್ವಾಪತ್ತ್ಯೇಶತ್ವಹಾನೇಃ ನಿರ್ಧರ್ಮಕತ್ವರೂಪ-ನಿರ್ಗುಣತ್ವಘಟನೇ ಚಾಘಟಿತಘಟಕಶಕ್ತಿರೂಪಧರ್ಮಸ್ಯೈವ ಲೋಪಪ್ರಸಂಗಾತ್ತದುಭಯಂ ನ ಘಟಯತೀತಿ ಭಾವಃ ॥ ೪೨೮ ॥

**ವಿವರಣೆ–** ಯಾವ ಬುದ್ಧಿವಂತನೂ ತನಗೆ ಕುತ್ತು ತರತಕ್ಕ ಕೆಲಸವನ್ನು ಮಾಡುವುದಿಲ್ಲ. ಭಗವಂತನು ಮಹಾಬುದ್ಧಿವಂತನಾದ್ದರಿಂದ ಹಾನಿಯನ್ನುಂಟುಮಾಡತಕ್ಕ

ಕಾರ್ಯವನ್ನು ಖಂಡಿತ ಮಾಡಲಾರ. ಪ್ರಕೃತ, ಭಗವಂತನು ತನ್ನ ಅಘಟಿತಘಟಕಶಕ್ತಿಯಿಂದ ಜೀವೈಕ್ಯವನ್ನು ಉಂಟುಮಾಡಿದರೆ, ಜೀವನು ಅಲ್ಪಶಕ್ತ, ಅಜ್ಞಾನಿ, ಅಸ್ವತಂತ್ರನಾದ್ದರಿಂದ, ಇಂಥಾ ಜೀವನ ಐಕ್ಯದಿಂದ ತನ್ನ ಈಶ್ವರತ್ವವನ್ನೇ ಕಳೆದುಕೊಳ್ಳಬೇಕಾಗಿ ಬರುತ್ತದೆ. ನಿರ್ಗುಣತ್ವವನ್ನು ಉಂಟುಮಾಡಿದರೆ, ಒಂದೂ ಧರ್ಮವು ಇಲ್ಲದಂತಾಗಿ ಅಘಟಿತಘಟಕಶಕ್ತಿಯೂ ಇಲ್ಲದಂತಾಗುತ್ತದೆ. ಆದ್ದರಿಂದ, ಇಂಥಾ ಅನರ್ಥವನ್ನುಂಟು ಮಾಡತಕ್ಕ ದಡ್ಡ ಕೆಲಸವನ್ನು ಬುದ್ಧಿವಂತನಾದ ಭಗವಂತನು ಮಾಡುವುದಿಲ್ಲ. ಹೀಗಾಗಿ, ತನ್ನ ಅಘಟಿತಘಟಕಶಕ್ತಿಯಿಂದ ಜೀವೈಕ್ಯಾದಿಗಳನ್ನು ಘಟನೆ ಮಾಡುವುದಿಲ್ಲ. ತಾನು ಕುಳಿತಿರುವ ಕೊಂಬೆಯನ್ನು ಯಾರಾದರೂ ಬುದ್ಧಿವಂತ ಕಡಿದು ಹಾಕುತ್ತಾನೆಯೇ?

ಅದೇ ಕಾರಣದಿಂದಲೇ ಭಗವಂತನು ತನ್ನಲ್ಲಿ ದುಃಖವನ್ನೂ ಘಟನೆ ಮಾಡುವುದಿಲ್ಲ ಎನ್ನುತ್ತಾರೆ-

**ದುಃಖಂ ಸಂಧಿತ್ಸತೋ ಯತ್ಸಾ ಶಕ್ತಿಃ ಪ್ರಚ್ಯವತೇ ಬಹಿಃ ॥ ೪೨೯ ॥**

**ಅರ್ಥ–** ಯತ್= ಯಾವ ಕಾರಣದಿಂದ, ದುಃಖಂ= ದುಃಖವನ್ನು, ಸಂಧಿತ್ಸತಃ= ಸಂಧಾನ ಮಾಡಲು ಇಚ್ಛಿಸತಕ್ಕ ಪರಮಾತ್ಮನ ದೆಸೆಯಿಂದ, ಸಾ= ಆ, ಶಕ್ತಿಃ= ಅಘಟಿತ ಘಟಕ ಶಕ್ತಿಯು, ಬಹಿಃ= ಹೊರಗೆ, ಪ್ರಚ್ಯವತೇ= ಹೋಗಿ ಬಿಡುತ್ತದೆ (ಆದ್ದರಿಂದ, ತನ್ನಲ್ಲಿ ದುಃಖವನ್ನು ಘಟನೆ ಮಾಡುವುದಿಲ್ಲ).

**ಅನುವಾದ–** ಯಾವ ಕಾರಣದಿಂದ ಶಕ್ತನು ಮತ್ತು ದುಃಖಿಯು ಎಂಬುದು ಪರಸ್ಪರವಿರುದ್ಧವಾಗಿವೆಯೋ ಆದ್ದರಿಂದ, ಅಘಟಿತವಾದ್ದನ್ನು ಘಟನೆ ಮಾಡುವವನಾದರೂ ಸಹ ಭಗವಂತನು, ತನ್ನ ಮಹಿಮೆಗೆ ಆಘಾತವನ್ನುಂಟು ಮಾಡದಿರುವ, ಮತ್ತೇನೆಂದರೆ ಸುತರಾಂ ತನ್ನ ಮಹಿಮೆಯನ್ನು ಸಂಪಾದನೆ ಮಾಡತಕ್ಕದ್ದು ಯಾವುದೋ ಅದನ್ನೇ ಘಟನೆ ಮಾಡುತ್ತಾನೆ, ಹೊರತಾಗಿ ತನಗೆ ಅನರ್ಥವನ್ನುಂಟುಮಾಡುವ ಐಕ್ಯಾದಿಗಳನ್ನು ಘಟನೆ ಮಾಡುವುದಿಲ್ಲ. ಶತ್ರುವಿನ ಹೊಟ್ಟೆಯನ್ನು ಸೀಳುವ ಸಾಮರ್ಥ್ಯವುಳ್ಳ ಉಗುರುಳ್ಳ ನರಹರಿಯು ತನ್ನ ಹೊಟ್ಟೆಯನ್ನೇ ಸೀಳುವುದಿಲ್ಲವಷ್ಟೇ.

**ಭಾವವಿಲಾಸಿನೀ–** ಅತ ಏವ ಸ್ವಾತ್ಮನಿ ದುಃಖಮಪಿ ನ ಘಟಯೇದಿತ್ಯಾಹ – **ದುಃಖಮಿತಿ ॥** ಯದ್ಯಸ್ಮಾಚ್ಛಕ್ತಶ್ಚ ದುಃಖೀಚೇತ್ಯಸ್ಯ ಪರಸ್ಪರಂ ವಿರುದ್ಧತ್ವಾದಘಟಿತಘಟಕೋಽಪಿ ಭಗವಾನ್ ಸ್ವಮಹಿಮಾಽಘಾತಕಂ ಕಿಂತು ಸುತರಾಂ ಸ್ವಮಹಿಮಾ ಸಂಪಾದಕಂ ಚ ಯದ್ಭವತಿ ತದೇವ ಘಟಯೇತ್ । ನ ತು ಸ್ವಾನರ್ಥಕರಮೈಕ್ಯಾದಿಕಮ್ । ನ ಹಿ ರಿಪೂದರವಿದಾರಣಸಮರ್ಥನಖರೋ ನರಹರಿಃ ಸ್ವೋದರವಿದಾರಣಂ ಕುರುತೇ ॥ ೪೨೯ ॥

**ವಿವರಣೆ–** ಭಗವಂತನು ತನ್ನ ಅಘಟಿತಘಟಕಶಕ್ತಿಯಿಂದ ಜೀವೈಕ್ಯವನ್ನು ಘಟನೆ ಮಾಡಿದಲ್ಲಿ, ಜೀವನು ದುಃಖಿಯಾದ್ದರಿಂದ ತಾನೂ ದುಃಖಿಯಾಗಬೇಕಾದೀತು. ದುಃಖಿ

ಮತ್ತು ಶಕ್ತಿ ಎಂಬುವು ಪರಸ್ಪರ ವಿರುದ್ಧ. ಹೀಗಾಗಿ ದುಃಖಿಯಾದಲ್ಲಿ ಶಕ್ತಿಯೇ ಲೋಪವಾಗುವ ಪ್ರಸಂಗವು ಬರುತ್ತದೆ. ಆದ್ದರಿಂದ ತನಗೆ ಅನರ್ಥಕರವಾದ ಇಂತಹ ಘಟನೆಯಲ್ಲಿ ಭಗವಂತನು ತೊಡಗುವುದಿಲ್ಲ. ಹೇಗೆಂದರೆ, ತನ್ನ ಉಗುರಿನಿಂದ ಹಿರಣ್ಯಕಶಿಪುವಿನ ಹೊಟ್ಟೆಯನ್ನು ಸೀಳುವ ಸಾಮರ್ಥ್ಯವಿರುವ ನರಸಿಂಹದೇವರು ಆ ಸಾಮರ್ಥ್ಯದಿಂದ ತನ್ನ ಹೊಟ್ಟೆಯನ್ನೇ ಸೀಳಿಕೊಳ್ಳುವುದಿಲ್ಲ; ಅದರಂತೆ.

**ತನ್ನ ಮಹಿಮೆಯನ್ನು ಭಗವಂತನು ಎಂದೂ ಬಿಡುವುದಿಲ್ಲ ಎಂಬುದನ್ನು ಭಗವಂತನ ಚರಿತ್ರೆಯಿಂದಲೇ ಅನುಭವಕ್ಕೆ ತಂದುಕೊಡುತ್ತಾರೆ-**

**ಯಃ ಸರ್ವೇಶ್ವರತಾಗುಪ್ತ್ಯೈ ಸೇಹೇ ವಿಪ್ರಪದಾಹತಿಮ್ ।**
**ಸ್ವಮಹಿಮ್ನಿ ಮಹಾಂಸ್ತಸ್ಯ ಭರಃ ಸ್ತೋತ್ರರ್ಥಕಾರಿಣಃ ॥ ೪೩೦ ॥**

**ಅರ್ಥ–** ಯಃ= ಯಾವ ಪರಮಾತ್ಮನು, ಸರ್ವ= ಎಲ್ಲರಿಗೂ, ಈಶ್ವರತಾ= ಒಡೆಯನಾಗಿರುವುದರ, ಗುಪ್ತ್ಯೈ= ರಕ್ಷಣೆಗೋಸ್ಕರ, ವಿಪ್ರ= ಬ್ರಾಹ್ಮಣರ, ಪದ= ಕಾಲಿನ, ಆಹತಿಂ= ಏಟನ್ನು, ಸೇಹೇ= ಸಹಿಸಿದನೋ ಅವನಿಗೆ, ಸ್ತೋತೃ= ಸ್ತೋತ್ರ ಮಾಡತಕ್ಕವರಿಗೆ, ಅರ್ಥ= ಪುರುಷಾರ್ಥವನ್ನು, ಕಾರಿಣಃ= ಉಂಟು ಮಾಡತಕ್ಕ, ಸ್ವಮಹಿಮ್ನಿ= ತನ್ನ ಮಹಿಮೆಯಲ್ಲಿ, ಮಹಾನ್= ಮಹತ್ತರವಾದ, ಭರಃ= ಆದರವು, ಭವತಿ= ಇರುತ್ತದೆ.

**ಅನುವಾದ–** ಯಾವ ಹರಿಯು ತನ್ನ ಸರ್ವೇಶ್ವರತ್ವವನ್ನು ರಕ್ಷಿಸಿಕೊಳ್ಳಲು ಬ್ರಾಹ್ಮಣನ ಪಾದಘಾತವನ್ನು ಸಹಿಸಿದನೋ ಅಂತಹ ತನ್ನ ಭಕ್ತರ ಇಷ್ಟಾರ್ಥವನ್ನು ನೆರವೇರಿಸುವ ಅವನಿಗೆ ತನ್ನ ಮಹಿಮೆಯಲ್ಲಿ ಬಹಳ ತಾತ್ಪರ್ಯವಿದೆ.

**ಭಾವವಿಲಾಸಿನೀ–** ಸ್ವಮಹಿಮಾನಂ ಭಗವಾನ್‌ಕದಾಪಿ ನ ಜಹಾತೀತ್ಯೇತದ್ಭಗವಚ್ಚರಿತ್ರೇಣೈವಾನುಭಾವಯತಿ– ಯ ಇತಿ ॥ ವಿಪ್ರಪದಾಹತಿಂ ಭೃಗುಮುನೇಃ ಪದಘಾತಮ್ । ಸ್ತೋತ್ರರ್ಥಕಾರಿಣ ಇತಿ ಹೇತುಗರ್ಭವಿಶೇಷಣಮ್ । ಸ್ವಮಹಿಮ್ನಿ ತಾತ್ಪರ್ಯಾಭಾವೇ ಸ್ವಸ್ತೋತೃಣಾಂ ಮೋಕ್ಷಾದಿಪುರುಷಾರ್ಥಂ ಕುತೋ ದತ್ತ ಇತಿ ಭಾವಃ ॥ ೪೩೦ ॥

**ವಿವರಣೆ–** ತ್ರಿಮೂರ್ತಿಗಳಲ್ಲಿ ಯಾರು ಸರ್ವೋತ್ತಮನೆಂದು ವಿಚಾರ ಮಾಡಲು ಹೊರಟ ಭೃಗುಮುನಿಗಳು ಭಗವಂತನ ಎದೆಗೆ ಒದ್ದರು. ಅದನ್ನು ಭಗವಂತನು ಸಹಿಸಿಕೊಂಡನು. ಏಕೆಂದರೆ, ಬ್ರಹ್ಮದೇವರಂತೆ ಮಾತನ್ನೇ ಆಡಿಸದಿದ್ದರೆ, ಮಹದೇವರಂತೆ ಕೊಲ್ಲಲು ಬಂದಿದ್ದರೆ ಭಗವಂತನ ಸರ್ವೋತ್ತಮತ್ತ್ವವು ತಿಳಿಯುತ್ತಿರಲಿಲ್ಲ. ಎದೆಗೆ ಒದ್ದ ಭೃಗುಮುನಿಯನ್ನು ಆದರ ಮಾಡುವ ಮೂಲಕ ಭಗವಂತನು ತನ್ನ ಸೌಜನ್ಯ, ವಿನಯ, ಭಕ್ತಾಪರಾಧಸಹಿಷ್ಣುತ್ವ, ಬ್ರಹ್ಮಣ್ಯತಾ ಇವುಗಳನ್ನು ಪ್ರಕಟಿಸಿ ತನ್ನ ಸರ್ವೋತ್ತಮತ್ವವನ್ನು ಸ್ಪಷ್ಟಪಡಿಸಿದನು. ಈ ಚರಿತೆಯಿಂದ ಭಗವಂತನಿಗೆ ತನ್ನ ಮಹಿಮೆಯನ್ನು ರಕ್ಷಣೆ ಮಾಡಿಕೊಳ್ಳುವುದರಲ್ಲಿ ತಾತ್ಪರ್ಯವಿದೆಯೆಂದು ತಿಳಿಯುತ್ತದೆ. ಆದ್ದರಿಂದ, ತನ್ನ

ಮಹಿಮೆಗೆ ಆಘಾತವನ್ನುಂಟು ಮಾಡುವ ಜೀವೈಕ್ಯವನ್ನಾಗಲೀ, ನಿರ್ಗುಣತ್ವವನ್ನಾಗಲೀ ಘಟನೆ ಮಾಡುವುದಿಲ್ಲ ಎಂದು ಸಿದ್ಧವಾಗುತ್ತದೆ. ಮತ್ತು ತನ್ನನ್ನು ಸ್ತೋತ್ರ ಮಾಡುವವರಿಗೆ ಭಗವಂತನು ಮೋಕ್ಷಾದಿ ಅಖಿಲ ಪುರುಷಾರ್ಥಗಳನ್ನು ಕೊಡುತ್ತಾನೆ. ಇದನ್ನು ಶ್ರುತಿಯು, 'ನ ತಾದೃಶೀ ಪ್ರೀತಿರೀಡ್ಯಸ್ಯ ವಿಷ್ಣೋಃ ಗುಣೋತ್ಕರ್ಷಜ್ಞಾತ್ತರಿ ಯಾದೃಶೀಸ್ಯಾತ್' ಎಂದು ಹೇಳುತ್ತಿದೆ. ಸ್ತೋತ್ರವೆಂದರೆ ಗುಣವರ್ಣನೆ. ತನ್ನ ಮಹಿಮೆಯಲ್ಲಿ ಭಗವಂತನಿಗೆ ತಾತ್ಪರ್ಯವಿಲ್ಲದಿದ್ದರೆ, ತನ್ನನ್ನು ತುತಿಸುವವರಿಗೆ ಪುರುಷಾರ್ಥವನ್ನು ಏಕೆ ಕೊಡುತ್ತಿದ್ದ? ಕೊಡುತ್ತಿರುವುದರಿಂದ, ತನ್ನ ಮಹಿಮೆಯಲ್ಲಿ ತಾತ್ಪರ್ಯವುಂಟೆಂದು ತಿಳಿಯುತ್ತದೆ.

**ಭಗವಂತನ ಪಟ್ಟಣದಲ್ಲಿರುವವರು ಪರಮ ಮುಕ್ತರೆಂದು ಅವಾಂತರ ಉಪಸಂಹಾರ ಮಾಡುತ್ತಿದ್ದಾರೆ-**

**ಸಾಽಯೋಧ್ಯಾಖ್ಯಾ ಹರಿಪುರೀ ರತ್ನಗೋಪುರಮಂಟಪಾ ।**
**ಶ್ರೀರೇವ ನಗರಾಕಾರಾ ಸೇವತೇ ಸ್ವಪತಿಂ ಕಿಲ ।**
**ಭಕ್ತಾಃ ಪರಮಮುಕ್ತಾಸ್ತೇ ನಿತ್ಯಮುಕ್ತೋ ಹರಿಃ ಪ್ರಭುಃ ॥ ೪೩೧ ॥**

**ಅರ್ಥ–** ಯಾ= ಯಾವ ಪುರಿಯು ಸನಕಾದಿಗಳಿಂದ ಅಗಮ್ಯವೋ, ಸಾ= ಅಂಥ, ರತ್ನಗೋಪುರ ಮಂಟಪಾ= ರತ್ನ ಗೋಪುರಗಳು ಮಂಟಪಗಳು ಇವುಗಳುಳ್ಳ, ಹರಿಪುರೀ= ಭಗವಂತನ ಪಟ್ಟಣವು, ಅಯೋಧ್ಯಾಖ್ಯಾ= ಅಯೋಧ್ಯೆಯೆಂಬ ಹೆಸರುಳ್ಳದ್ದು, ಶ್ರೀರೇವ= ಲಕ್ಷ್ಮೀದೇವಿಯೇ, ನಗರಾಕಾರಾ= ವೈಕುಂಠಪುರಿಯ ಆಕಾರವುಳ್ಳವರಾಗಿ, ಸ್ವಪತಿಂ= ತನ್ನ ಪತಿಯಾದ ಪರಮಾತ್ಮನನ್ನು, ಸೇವತೇ= ಸೇವೆ ಮಾಡುತ್ತಾಳೆ, ಕಿಲ= ಪ್ರಸಿದ್ಧಿಯು, ತೇ= ಆ, ಭಕ್ತಾಃ= ಸೇವಕರು, ಪರಮಮುಕ್ತಾಃ= ಮುಖ್ಯಮುಕ್ತರು, ಪ್ರಭುಃ= ಸ್ವಾಮಿಯಾದ, ಹರಿಃ= ಭಗವಂತನು, ನಿತ್ಯಮುಕ್ತಃ= ನಿತ್ಯಮುಕ್ತನು.

**ಅನುವಾದ– ಸನಕಾದಿಗಳಿಂದ ಅಗಮ್ಯವಾದ ರತ್ನಗೋಪಮಂಟಪಗಳಿಂದ ಕೂಡಿದ ಆ ಹರಿಯ ಪಟ್ಟಣವಾದರೂ ಅಯೋಧ್ಯೆ ಎಂದು ಕರೆಯಲ್ಪಡುತ್ತದೆ. ಲಕ್ಷ್ಮೀದೇವಿಯೇ ಪುರರೂಪಳಾಗಿ ಅಲ್ಲಿ ತನ್ನ ಪತಿಯನ್ನು ಸೇವಿಸುತ್ತಾಳೆ. ಅಲ್ಲಿರುವ ಭಕ್ತರೆಲ್ಲರೂ ಪರಮಮುಕ್ತರು. ಪ್ರಭುವಾದ ಹರಿಯು ನಿತ್ಯಮುಕ್ತನಾದವನು.**

**ಭಾವವಿಲಾಸಿನೀ–** ಸಾ ಯಾ ಸನಕಾದಿಭಿರಗಮ್ಯಾ । ತೇ ತತ್ರಾಽಪಿ ಭಗವತ್ಪರಿಚರ್ಯಾಂ ಕುರ್ವಂತಃ ॥ ೪೩೧ ॥

**ವಿವರಣೆ–** ಜೀವನ್ಮುಕ್ತರಾದ ಸನಕಾದಿಗಳಿಗೂ ಅಗಮ್ಯವಾದ್ದರಿಂದ, ವೈಕುಂಠಪುರಿಯು ಪರಮಮುಕ್ತಗಮ್ಯವೆಂದಾಯಿತು. ಆ ನಗರಿಗೆ ಅಯೋಧ್ಯೆಯೆಂದು ಹೆಸರು. ಲಕ್ಷ್ಮೀದೇವಿಯೇ ಆ ಲೋಕರೂಪದಿಂದ ಭಗವಂತನ ಸೇವೆ ಮಾಡುತ್ತಾರೆ. ಕಿಲ ಎಂಬುದರಿಂದ, 'ಶ್ರೀರೇವ ಲೋಕರೂಪೇಣ', 'ಶ್ರೀರ್ಯತ್ರ ರೂಪಿಣೆ ರಂಗಾಯಪಾದಯೋಃ' ಇತ್ಯಾದಿ ಪ್ರಮಾಣ ಪ್ರಸಿದ್ಧಿಯನ್ನು ಸೂಚಿಸಿರುತ್ತಾರೆ. ಹೀಗೆ

ಅನಾದಿಕಾಲದಿಂದಲೂ ಮುಕ್ತರಿಂದ ಸೇವ್ಯನಾದ ಭಗವಂತನು ನಿತ್ಯಮುಕ್ತನೆಂದು ಸಿದ್ಧವಾಯಿತು. ಪ್ರಭುಃ ಎಂಬುದು ಹೇತುಗರ್ಭವಿಶೇಷಣ. ಮಹಾಸಮರ್ಥನಾದ್ದರಿಂದ ಭಗವಂತನು ಪ್ರಕೃತಿಯು ತನ್ನನ್ನು ಬಂಧನ ಮಾಡದಂತೆ ಅನಾದಿಕಾಲದಿಂದ ಮಾಡಿಕೊಂಡಿದ್ದಾನೆಂದು ಅಭಿಪ್ರಾಯ.

ತಸ್ಮಾಜ್ಜೀವೇಶ್ವರಾಭೇದೋ ಜೀವಾಭೇದೋಽದ್ವಿತೀಯತಾ ।
ನಿರಾಕಾರತ್ವಮಜ್ಞತ್ವಂ ನಿರ್ಗುಣಬ್ರಹ್ಮಯತ್ ತವ ॥ ೪೩೨ ॥

ಅಪ್ರಾಮಾಣಿಕಮೇವೇದಂ ಸರ್ವಮಾಸೀನ್ನ ಸಂಶಯಃ ।
ಉಕ್ತೇ ಪರಮಮೋಕ್ಷೇಽಸ್ಮಿನ್ ಯನ್ನಾಭೂತ್ ಕುತ್ರ ತದ್ ಭವೇತ್ ॥ ೪೩೩ ॥

**ಅರ್ಥ–** ತಸ್ಮಾತ್= ಆದ್ದರಿಂದ, ಜೀವೇಶ್ವರಾಭೇದಃ= ಜೀವ ಈಶ್ವರ ಇವರ ಅಭೇದವು, ಜೀವಾಭೇದಃ= ಜೀವರುಗಳ ಪರಸ್ಪರ ಅಭೇದವು, ಅದ್ವಿತೀಯತಾ= ಬ್ರಹ್ಮನ ಅದ್ವಿತೀಯತ್ವವು, ನಿರಾಕಾರತ್ವಂ= ನಿರಾಕಾರತ್ವವು, ಅಜ್ಞತ್ವಂ= ಅಜ್ಞಾನದಿಂದ ಆವೃತವಾಗಿರೋಣವು, ತವ= ನಿನ್ನ, ನಿರ್ಗುಣಬ್ರಹ್ಮ= ನಿರ್ಗುಣಬ್ರಹ್ಮನು, ಯತ್= ಯಾವ ಐಕ್ಯಾದಿಗಳು, ಇದಂ= ಈ, ಸರ್ವಂ= ಎಲ್ಲವೂ, ಅಪ್ರಾಮಾಣಿಕಮೇವ= ಪ್ರಮಾಣ ರಹಿತವಾದದ್ದೇ, ಆಸೀತ್= ಆಯಿತು; ಸಂಶಯಃ= ಸಂದೇಹವು, ನ= ಇಲ್ಲ, ಉಕ್ತೇ= ಹೇಳಲ್ಪಟ್ಟ, ಪರಮ ಮೋಕ್ಷೇ= ಮುಖ್ಯ ಮೋಕ್ಷದಲ್ಲಿ, ಯತ್= ಯಾವ ಐಕ್ಯಾದಿಗಳು, ನ ಅಭೂತ್= ಆಗಲಿಲ್ಲವೋ, ತತ್= ಅದು, ಕುತ್ರ= ಎಲ್ಲಿ, ಭವೇತ್= ಆದೀತು?

**ಅನುವಾದ–** ಆದ್ದರಿಂದ ನಿನಗೆ ಅಭಿಮತವಾದ ಜೀವೇಶ್ವರಾಭೇದ, ಜೀವರಪರಸ್ಪರಾಭೇದ, ಅದ್ವಿತೀಯತ್ವ ನಿರಾಕಾರತ್ವ ಅಜ್ಞಾನಾಶ್ರಯತ್ವ ಮತ್ತು ನಿರ್ಗುಣಬ್ರಹ್ಮಸ್ವರೂಪ ಇವೆಲ್ಲವೂ ಅಪ್ರಾಮಾಣಿಕವಾದವು. ಇದರಲ್ಲಿ ಸಂಶಯವಿಲ್ಲ. ಇಂತಹ ಪರಮಮೋಕ್ಷದಲ್ಲಿ ಯಾವುದು ಇಲ್ಲವೋ ಅದು ಇನ್ನು ಎಲ್ಲಿ ಇರಲು ಸಾಧ್ಯ?

**ವಿವರಣೆ–** ಉಪಸಂಹಾರ ಮಾಡುತ್ತಿದ್ದಾರೆ. ಹಿಂದೆ ಹೇಳಿದಂತೆ ಪರಮ ಮೋಕ್ಷಸ್ಥಾನದಲ್ಲೂ ಭಗವಂತನನ್ನು ಮುಕ್ತರು ಸೇವಿಸುತ್ತಾರೆ; ಭಗವಂತನಿಗೆ ಮನೋಹರವಾದ ರೂಪನಿದೆ ಎಂದು ಪ್ರಮಾಣಗಳು ತಿಳಿಸುತ್ತವೆ. ಭಗವಂತನು ಸೇವ್ಯ, ಮುಕ್ತರು ಸೇವಕರಾದ್ದರಿಂದ ಜೀವ-ಈಶ್ವರರಿಗೆ ಅಭೇದವಿಲ್ಲವೆಂದು ತಿಳಿಯಿತು. ಅನೇಕ ಮುಕ್ತರು ಇರುವುದರಿಂದ ಜೀವ-ಜೀವ ಭೇದವು ಸಿದ್ಧವಾಯಿತು. ಬ್ರಹ್ಮದೇವರು ಕರಚರಣಾದಿ ಸುಂದರರೂಪವನ್ನು ಕಂಡಿದ್ದರಿಂದ ಬ್ರಹ್ಮನು ಒಬ್ಬನೇ ಸತ್ಯ ಎಂಬ

ವಾದವೂ ತಪ್ಪಾಯಿತು; ಇದರಿಂದಲೇ, ಬ್ರಹ್ಮನೇ ಅಜ್ಞಾನಾವೃತನಾಗಿ ಜೀವಭಾವವನ್ನು ತಾಳುತ್ತಾನೆ ಎಂಬುದೂ ಸುಳ್ಳಾಯಿತು. ಪರಬ್ರಹ್ಮಸ್ವರೂಪಿಯಾದ ಭಗವಂತನಿಗೆ ಸೌಂದರ್ಯ, ಮುಕ್ತಸೇವ್ಯತ್ವ ಮೊದಲಾದ್ದು ಕಂಡು ಬಂದದ್ದರಿಂದ ಬ್ರಹ್ಮನು ನಿರ್ಗುಣನಲ್ಲ ಎಂದಾಯಿತು. ಹೀಗೆ ಮಾಯಾವಾದಿಗೆ ಸಮ್ಮತವಾದ ಐಕ್ಯಾದಿಗಳೆಲ್ಲವೂ ನಿಸ್ಸಂಶಯವಾಗಿ ಪ್ರಮಾಣರಹಿತವಾದವು. ಪರಮ ಮೋಕ್ಷದಲ್ಲೇ ಐಕ್ಯಾದಿಗಳು ಇಲ್ಲವೆಂದ ಮೇಲೆ, ಬೇರೆಯ ಕಾಲ, ದೇಶ, ಅವಸ್ಥೆಗಳಲ್ಲಿ ಹೇಗೆ ಅವು ಇರಲು ಸಾಧ್ಯ? ಏಕೆಂದರೆ, ಮೋಕ್ಷಾವಸ್ಥೆಯಲ್ಲಿರತಕ್ಕದ್ದು ಪಾರಮಾರ್ಥಿಕ ಸತ್ಯ. ಅಲ್ಲಿ ಭೇದ, ಸಾಕಾರತ್ವ, ಗುಣ ಪೂರ್ಣತ್ವಗಳು ಇರುವಾಗ, ಅವೆಲ್ಲವೂ ಪಾರಮಾರ್ಥಿಕ ಸತ್ಯವಾದವು. ಆದ್ದರಿಂದಲೇ, ಅಭೇದಾದಿಗಳು ಪ್ರಮಾಣರಹಿತವಾದವು.

**ಅತೋ ದುರಾಶಾಂ ಸಂತ್ಯಜ್ಯ ಭಜ ಕೃಷ್ಣಪದಾಂಬುಜಂ ।**
**ಗರ್ತೇ ವಾ ಪತ ಮಧ್ಯೇ ತೇ ಸ್ಥಿತಿರ್ಲಜ್ಜಾತುರಸ್ಯ ನ ॥ ೪೩೪ ॥**

**ಅರ್ಥ–** ಅತಃ= ಆದ್ದರಿಂದ, ದುರಾಶಾಂ= ದುರಾಶೆಯನ್ನು, ಸಂತ್ಯಜ್ಯ= ಬಿಟ್ಟು, ಕೃಷ್ಣಪದಾಂಬುಜಂ= ಕೃಷ್ಣ ಪರಮಾತ್ಮನ ಕಮಲದಂತಿರತಕ್ಕ ಪಾದವನ್ನು ಸೇವೆ ಮಾಡು, ವಾ= ಅಥವಾ, ಗರ್ತೇ= ಅಂಧಂತಮಸ್ಸಿನಲ್ಲಿ, ಪತ= ಬೀಳು, ಲಜ್ಜಾ= ಲಜ್ಜೆಯಿಂದ, ಆತುರಸ್ಯ= ರೋಗಿಯಂತಿರುವ, ತೇ= ನಿನಗೆ, ಮಧ್ಯೇ= ಇವೆರಡರ ಮಧ್ಯದಲ್ಲಿ, ಸ್ಥಿತಿಃ= ಸ್ಥಾನವು, ನ= ಇಲ್ಲ.

**ಅನುವಾದ–** ಆದ್ದರಿಂದ ದುರಾಶೆಯನ್ನು ತ್ಯಜಿಸಿ ಕೃಷ್ಣನ ಪಾದವನ್ನು ಭಜಿಸು. ಅಥವಾ ಅಂಧಂತಮಸ್ಸಿನಲ್ಲಿ ಬೀಳು. ಲಜ್ಜಾತುರನಾದ ನಿನಗೆ ಈ ಎರಡನ್ನು ಬಿಟ್ಟು ಮಧ್ಯದ ಒಂದು ಸ್ಥಿತಿಯು ಶೋಭಿಸುವುದಿಲ್ಲ.

**ಭಾವವಿಲಾಸಿನೀ–** ತಸ್ಮಾತ್ ಪರಮಮೋಕ್ಷಸ್ಥಲ್ಯಾಮಪಿ ಹರೇರ್ಮುಕ್ತಸೇವ್ಯತ್ವಮನೋಹರಾಕಾರತ್ವಾದ್ಯಮಹಿಮದರ್ಶನಾತ್ । ಅಜ್ಞತ್ವಮಜ್ಞಾನಾವೃತತ್ವಮ್ । ಯದ್ವೈಕ್ಯಾದಿಕಮ್ ॥ ಗರ್ತೇಽಂಧಂತಮಸಿ ॥ ೪೩೨-೪೩೪ ॥

**ವಿವರಣೆ–** ಇಷ್ಟು ಪ್ರಬಂಧದಿಂದ ಭೇದಾದಿಗಳು ಪ್ರಾಮಾಣಿಕವೆಂದೂ, ಐಕ್ಯಾದಿಗಳು ಅಪ್ರಾಮಾಣಿಕವೆಂದೂ ಸಿದ್ಧವಾಯಿತು. ಆದ್ದರಿಂದ, ನಾನೇ ಬ್ರಹ್ಮನೆಂಬ ದುರಾಶೆಯನ್ನು ಬಿಡು; ಮುಕ್ತರಿಂದಲೂ ಸೇವ್ಯನಾದ ಶ್ರೀಕೃಷ್ಣನ ಪಾದಕಮಲವನ್ನು ಸೇವೆ ಮಾಡು ಎಂಬುದಾಗಿ ರಾಜರು ಅಭೇದವಾದಿಯನ್ನು ಕುರಿತು ಹೇಳುತ್ತಿದ್ದಾರೆ. ಹಾಗೆ ಮಾಡದೆ, ನಾನೇ ಬ್ರಹ್ಮನೆಂಬ ಉಪಾಸನೆಯನ್ನು ಮಾಡಿದರೆ, ಅಂಧಂತಮಸ್ಸು ಎಂಬ ನಿತ್ಯನರಕವಾಗುತ್ತದೆ. ಆದ್ದರಿಂದ, ಭೇದವಾದವನ್ನಾದರೂ ಒಪ್ಪಬೇಕು, ತಮಸ್ಸಿನಲ್ಲಾದರೂ ಬೀಳಬೇಕು. ಮೂರನೆಯ ಮಾರ್ಗವಿಲ್ಲ. ತನ್ನ ಮತವು ಬಿದ್ದು

ಹೋದದ್ದರಿಂದ ಮಾಯಾವಾದಿಯು ಲಜ್ಜೆಯಿಂದ ರೋಗಿಯಂತೆ ಆಗಿಬಿಟ್ಟನು. ಲಜ್ಜೆಯಾದವನು ಮುಖತಗ್ಗಿಸಿ ಅಡಗಿಕೊಳ್ಳುವಂತೆ, ಮುಖ ತೋರಿಸಲಾರದೆ ತಮಸ್ಸಿನಲ್ಲೇ ಬೀಳಬೇಕಾಗಿ ಬಂತು. ಮಧ್ಯ ಸ್ಥಿತಿಯಲ್ಲಿ ಎನ್ನುವುದರಿಂದ, ಮಧ್ಯ ಲೋಕವಾದ ಭೂಮಿಯಲ್ಲೇ ವಾಸವಿಲ್ಲ, ಉತ್ತಮ ಲೋಕಗಳ ಆಸೆ ಎಲ್ಲಿ ಎಂದು ಸೂಚಿಸಿದ್ದಾರೆ.

**ಏವಂ ಚ ಸುಖರೂಪೇಣ ಚಕ್ಷುಷಾ ಸುಖರೂಪಿಣಂ ।**
**ಮುಕ್ತಂ ಪಶ್ಯತಿ ಮುಕ್ತೋऽನ್ಯಃ ಸುಖರೂಪೇಣ ಜಿಘ್ರತಿ ॥ ೪೩೫ ॥**

**ಘ್ರಾಣೇನ ಸುಖರೂಪತ್ವಾತ್ ಘ್ರೇಯಮೇವಂ ಸುಖಾತ್ಮನಾ ।**
**ಮನಸೈವ ವಿಜಾನೀಯಾದ್ ವಿಜ್ಞಾತಾರಂ ಹರಿಂ ಪ್ರಭುಮ್ ॥ ೪೩೬ ॥**

**ಇತ್ಯೇವ ಯತ್ರತ್ವಸ್ಯೇತಿ ಶ್ರುತಿಃ ಸ್ವಾರ್ಥಮುಪಾದದೇ ।**
**ಯತಃ ಸುಖಂ ಕಮಿತ್ಯಾಹುಃ ಶಬ್ದತತ್ವವಿಶಾರದಾಃ ॥ ೪೩೭ ॥**

**ಅರ್ಥ–** ಏವಂ ಚ= ಹೀಗಾದ್ದರಿಂದ, ಅನ್ಯಃ= ಭಿನ್ನನಾದ, ಮುಕ್ತಃ= ಮುಕ್ತನು, ಸುಖರೂಪೇಣ= ಸುಖರೂಪವಾದ, ಚಕ್ಷುಷಾ= ಕಣ್ಣಿನಿಂದ, ಸುಖರೂಪಿಣಂ= ಸುಖರೂಪಿಯಾದ, ಮುಕ್ತಂ= ಮುಕ್ತನನ್ನು, ಪಶ್ಯತಿ= ನೋಡುತ್ತಾನೆ, ಸುಖರೂಪೇಣ= ಸುಖರೂಪವಾದ, ಘ್ರಾಣೇನ= ಮೂಗಿನಿಂದ, ಸುಖರೂಪತ್ವಾತ್= ಸುಖರೂಪವಾದ್ದರಿಂದ, ಘ್ರೇಯಂ= ಮೂಸಲು ಯೋಗ್ಯವಾದ್ದನ್ನು, ಜಿಘ್ರತಿ= ಮೂಸಿ ನೋಡುತ್ತಾನೆ, ಏವಂ= ಇದರಂತೆ, ಸುಖಾತ್ಮನಾ= ಸುಖರೂಪವಾದ, ಮನಸಿ ಏವ= ಮನಸ್ಸಿನಿಂದಲೇ, ವಿಜ್ಞಾತಾರಂ= ಎಲ್ಲವನ್ನೂ ತಿಳಿಯತಕ್ಕ, ಪ್ರಭುಂ= ಸ್ವಾಮಿಯಾದ, ಹರಿಂ= ಪರಮಾತ್ಮನನ್ನು, ವಿಜಾನೀಯಾತ್= ತಿಳಿಯುತ್ತಾನೆ, ಇತ್ಯೇವ= ಹೀಗೆಯೇ, ಯತ್ರತ್ವಸ್ಯೇತಿ ಶ್ರುತಿಃ= ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ...' ಎಂಬ ಬ್ರಹ್ಮದಾರಣ್ಯಕ ಶ್ರುತಿಯು, ಸ್ವಾರ್ಥಂ= ತನ್ನ ಅರ್ಥವಾಗಿ, ಉಪಾದದೇ= ಸ್ವೀಕರಿಸಿತು, ಯತಃ= ಏಕೆಂದರೆ, ತತ್ವವಿಶಾರದಾಃ= ತತ್ವ= ಸಮೇಯದಲ್ಲಿ, ವಿಶಾರದಾಃ= ಪಂಡಿತರು, ಸುಖಂ= ಸುಖವನ್ನು, ಕ ಮಿತಿ= 'ಕಂ' ಎಂಬುದಾಗಿ, ಆಹುಃ= ಹೇಳುತ್ತಾರೆ.

**ಅನುವಾದ– ಈ ರೀತಿಯಾಗಿ ಮುಕ್ತನಾದ ಒಬ್ಬ ಜೀವನು ಸುಖರೂಪವಾದ ಚಕ್ಷುಸ್ಸಿನಿಂದ ಸುಖರೂಪನಾದ ಇನ್ನೊಬ್ಬ ಮುಕ್ತನನ್ನು ನೋಡುತ್ತಾನೆ. ಸುಖರೂಪವಾದ ಘ್ರಾಣೇಂದ್ರಿಯದಿಂದ ಸುಖರೂಪವಾದ ಇನ್ನೊಂದು ಆಘ್ರಾಣಿಸುವ ವಸ್ತುವನ್ನು ಮೂಸಿನೋಡುತ್ತಾನೆ. ಹೀಗೆ ಸರ್ವಜ್ಞನಾದ ಪ್ರಭುವಾದ ಹರಿಯನ್ನು ಸುಖರೂಪವಾದ ಮನಸ್ಸಿನಿಂದಲೇ ತಿಳಿಯುತ್ತಾನೆ ಎಂಬುದಾಗಿ 'ಯತ್ರತ್ವಸ್ಯ' ಎಂಬ ಶ್ರುತಿಯು ತನ್ನ ಅರ್ಥವನ್ನು ಪಡೆಯುತ್ತದೆ.**

**ಏಕೆಂದರೆ ಶಬ್ದತತ್ತ್ವ ನಿಪುಣರಾದವರು 'ಕ' ಎಂಬ ಪದಕ್ಕೆ ಸುಖವೆಂಬ ಅರ್ಥವನ್ನು ಹೇಳುತ್ತಾರೆ.**

**ವಿವರಣೆ–** 'ಯತ್ರತ್ವಸ್ಯ' ಎಂಬುದು ಬೃಹದಾರಣ್ಯಕ ಶ್ರುತಿಯು ಮೇಲ್ನೋಟಕ್ಕೆ ಅದ್ವೈತ ಪರವಾಗಿ ಕಾಣುತ್ತದೆ. ಅದನ್ನು ಸರಿಯಾಗಿ ವ್ಯಾಖ್ಯಾನಿಸುತ್ತಾರೆ- ಈ ಶ್ರುತಿಯು ಎಲ್ಲವೂ ಆತ್ಮನೇ ಆಗಿರುವಾಗ ಯಾರು ಯಾರನ್ನು ನೋಡುತ್ತಾರೆ, ಯಾರು ಯಾರನ್ನು ಮೂಸುತ್ತಾರೆ, ಯಾರು ಯಾವ ಬ್ರಹ್ಮನನ್ನು ತಿಳಿಯುತ್ತಾರೆ ಎಂದು ಹೇಳುವಂತೆ ಕಾಣುತ್ತದೆ. ಆದರೆ, ಮುಕ್ತಿಯಲ್ಲಿ ಭೇದವುಂಟೆಂದು ಪ್ರಮಾಣಗಳಿಂದ ಸಾಧಿಸಿದ್ದರಿಂದ, ಮುಕ್ತಿಯಲ್ಲಿ ಅಭೇದವು ಅಪ್ರಾಮಾಣಿಕ ಹಾಗೂ ಪ್ರಮಾಣವಿರುದ್ಧವಾದ್ದರಿಂದ, ಈ ಶ್ರುತಿಗೆ ಸಮ್ಮತವಾದ ಅರ್ಥ ಇದಲ್ಲ. ಇಲ್ಲಿರುವ 'ಕಂ' ಎಂಬ ಶಬ್ದಕ್ಕೆ ಸುಖ ಎಂದರ್ಥ. ಇದು ತತ್ತ್ವಜ್ಞಾನಿಗಳು ಒಪ್ಪಿರುವ ಅರ್ಥ. ಆದ್ದರಿಂದ, ಕಂ ಎಂದರೆ ಸುಖರೂಪಿಯಾದ ಮುಕ್ತನನ್ನು, ಕೇನ ಎಂದರೆ ಸುಖರೂಪನಾದ ಕಣ್ಣಿನಿಂದ ನೋಡುತ್ತಾನೆ ಇತ್ಯಾದಿಯಾಗಿ ಅರ್ಥ ಮಾಡಬೇಕು.

**ಅನ್ಯಾರ್ಥಸ್ಯ ಮಹಾಮೋಕ್ಷೇಽಪ್ಯೇತಸ್ಮಿನ್ ವೈಷ್ಣವೇ ಪದೇ ।**
**ಉಕ್ತರೀತ್ಯಾ ಬಾಧಿತತ್ವಾದಯೋಗ್ಯಂ ತಜ್ಜಹೌ ಶ್ರುತಿಃ ॥ ೪೩೮ ॥**

**ಅರ್ಥ–** ತತ್= ಆ ಕಾರಣದಿಂದ, ಮಹಾಮೋಕ್ಷೇಽಪಿ= ಪರಮ ಮೋಕ್ಷದಲ್ಲಿಯಾದರೋ, ಏತಸ್ಮಿನ್= ಹಿಂದೆ ಹೇಳಿದ, ವೈಷ್ಣವೇ= ವಿಷ್ಣುಸಂಬಂಧಿಯಾದ, ಪದೇ= ಸ್ಥಾನದಲ್ಲಿ, ಉಕ್ತರೀತ್ಯಾ= ಹಿಂದೆ ಹೇಳಿದ ಪ್ರಕಾರದಿಂದ, ಅನ್ಯ= ಬೇರೆಯ, ಅರ್ಥಸ್ಯ= ಅರ್ಥಕ್ಕೆ, ಬಾಧಿತತ್ವಾತ್= ಬಾಧೆ ಬರುವುದರಿಂದ, ಶ್ರುತಿಃ= ವೇದವು, ಅಯೋಗ್ಯಂ= ಅಯೋಗ್ಯವಾದ ಅರ್ಥವನ್ನು ಜಹೌ= ಬಿಟ್ಟಿತು.

**ಅನುವಾದ– ವೈಷ್ಣವಸ್ಥಾನವಾದ ಈ ಮಹಾಮೋಕ್ಷದಲ್ಲಿ ಬೇರೆ ಅರ್ಥವು ಹಿಂದೆ ಹೇಳಿದ ರೀತಿಯಲ್ಲಿ ಬಾಧಿತವಾದುದರಿಂದ ಅಯೋಗ್ಯವಾದ ಆ ಅರ್ಥವನ್ನು ಶ್ರುತಿಯು ತಿರಸ್ಕರಿಸುತ್ತದೆ.**

**ವಿವರಣೆ–** ಹಿಂದೆ ಹೇಳಿದಂತೆ ಮೋಕ್ಷದಲ್ಲಿ ಅಭೇದವಿದೆ ಎಂದು ಅರ್ಥೈಸುವುದು ಪ್ರಮಾಣವಿರುದ್ಧ ಹಾಗೂ ಅಪ್ರಾಮಾಣಿಕ. ಆದ್ದರಿಂದ, ಶ್ರುತಿಯು ಪ್ರಮಾಣಬಾಧಿತವಾದ ಅಂತಹ ಅರ್ಥವನ್ನು ಹೇಳುವುದಿಲ್ಲ. ಆದ್ದರಿಂದ, ನಾವು ಹೇಳಿದ ಅರ್ಥವೇ ಸರಿ ಎಂದಭಿಪ್ರಾಯ.

**ವಿಸ್ತರಸ್ತ್ವಸ್ಯ ಸರ್ವಸ್ಯ ಮೂಲಶಾಸ್ತ್ರಮಹಾರ್ಣವೇ ।**
**ದ್ರಷ್ಟವ್ಯಶ್ಚಿತ್ತಶುದ್ಧ್ಯರ್ಥಮೇತಾವಚ್ಚರ್ಚಿತಂ ಮಯಾ ॥ ೪೩೯ ॥**

**ಅರ್ಥ–** ಅಸ್ಯ= ಈ ಶ್ರುತಿವಾಕ್ಯದ, ವಿಸ್ತರಸ್ತು= ವಿಸ್ತಾರವಾದರೋ, ಸರ್ವಸ್ಯ= ಎಲ್ಲಕ್ಕೂ, ಮೂಲಶಾಸ್ತ್ರಮಹಾರ್ಣವೇ= ಮೂಲವಾದ, ಶಾಸ್ತ್ರ= ಸರ್ವಮೂಲಶಾಸ್ತ್ರವೆಂಬ, ಮಹಾರ್ಣವೇ= ಮಹಾಸಮುದ್ರದಲ್ಲಿ, ದ್ರಷ್ಟವ್ಯಃ= ನೋಡಲ್ಪಡಬೇಕು, ಮಯಾ= ನನ್ನಿಂದ, ಚಿತ್ತ= ಮನಸ್ಸಿನ, ಶುದ್ಧ್ಯರ್ಥಂ= ಶುದ್ಧಿಗೋಸ್ಕರ, ಏತಾವನತ್= ಇಷ್ಟು, ಚರ್ಚಿತಂ= ಚರ್ಚೆ ಮಾಡಲ್ಪಟ್ಟಿತು (ಅಸ್ಯ ಸರ್ವಸ್ಯ= ಈ ಎಲ್ಲದರ ಎಂದೂ ಅನ್ವಯ ಮಾಡಬಹುದು).

**ಅನುವಾದ–** ಈ ಎಲ್ಲ ಪ್ರಮೇಯಗಳ ವಿಸ್ತಾರವನ್ನೂ ಮೂಲಶಾಸ್ತ್ರವೆಂಬ ಸಮುದ್ರದಲ್ಲಿಯೇ ನೋಡಬೇಕು. ನಮ್ಮ ಮನಶ್ಶುಧಿಗಾಗಿ ಇಷ್ಟು ಅಲ್ಪವಿಷಯವನ್ನು ಮಾತ್ರ ಚರ್ಚಿಸಿದ್ದೇವೆ.

**ಭಾವವಿಲಾಸಿನೀ–** ತತ್ ತಸ್ಮಾತ್ ॥ ೪೩೮-೪೩೯ ॥

**ವಿವರಣೆ–** ಶ್ರುತ್ಯರ್ಥವನ್ನು ಸಂಕ್ಷೇಪ ಮಾಡಿದ್ದಕ್ಕೆ ಕಾರಣವನ್ನು ಹೇಳುತ್ತಾ, ವಿಸ್ತರದ ಆಕರವನ್ನು ಸೂಚಿಸುತ್ತಾರೆ. ಈ ಎಲ್ಲಾ ಅರ್ಥವು ಸಮುದ್ರದಂತೆ ವಿಸ್ತಾರವಾದ ಹಾಗೂ ಗಂಭೀರವಾದ, ಶ್ರೀಮದಾಚಾರ್ಯರಿಂದ ರಚಿತವಾದ ಸರ್ವಮೂಲಶಾಸ್ತ್ರದಲ್ಲಿ ಇರುತ್ತದೆ. ಅಲ್ಲಿಂದ ನೋಡಿ ತಿಳಿಯಬಹುದು. ಆದ್ದರಿಂದ, ಇಲ್ಲಿ ಸಂಕ್ಷೇಪವಾಗಿ ಅಲ್ಲಿ ಹೇಳಿದ ಅರ್ಥವಿಶೇಷವನ್ನು ಹೇಳಲಾಗಿದೆ. ಇಷ್ಟು ಹೇಳಿದ್ದಾದರೂ ಚಿತ್ತಶುದ್ಧಿಗಾಗಿ ಎಂದರೆ, ಇದರ ಶ್ರವಣ ಪಠಣಾದಿಗಳಿಂದ ಮನಶ್ಶುದ್ಧಿಯಾಗುತ್ತದೆ. ಅದ್ವೈತ ಭಾಷ್ಯವನ್ನು ನೋಡಿ ಕಲುಷಿತವಾದ ಮನಸ್ಸು ಸರಿಯಾದ ಅರ್ಥವನ್ನು ಗ್ರಹಿಸಿ ನಿರ್ಮಲವಾಗುತ್ತದೆ ಎಂದು ಅಭಿಪ್ರಾಯ.

**ಅತೋ ಯೋಗ್ಯೋರುಸೌಭಾಗ್ಯಾಪೇಕ್ಷೀ ಮುಕ್ತೋನುಮೀಯತೇ ।**
**ಮುಕ್ತತ್ವಾನ್ನಿತ್ಯಮುಕ್ತೋಽಸೌ ಯಥಾ ಸ್ವಾನಂದನಿರ್ಭರಃ ॥ ೪೪೦ ॥**

**ಅರ್ಥ–** ಅತಃ= ಆದ್ದರಿಂದ, ಮುಕ್ತಃ= ಮುಕ್ತನು, ಯೋಗ್ಯೇರುಸೌಭಾಗ್ಯಾಪೇಕ್ಷೀ= ಯೋಗ್ಯವಾದ ಬಹಳವಾದ ಸೌಭಾಗ್ಯದ ಅಪೇಕ್ಷೆವುಳ್ಳವನು, ಮುಕ್ತತ್ವಾತ್= ಮುಕ್ತನಾದ್ದರಿಂದ, ಯಥಾ= ಹೇಗೆಂದರೆ, ನಿತ್ಯಮುಕ್ತಃ= ನಿತ್ಯಮುಕ್ತನಾದ, ಆನಂದನಿರ್ಭರಃ = ಆನಂದದ ಅತಿಶಯವುಳ್ಳ, ಅಸೌ= ಪರಮಾತ್ಮನಂತೆ, ಇತಿ= ಹೀಗೆ, ಅನುಮೀಯತೇ= ಅನುಮಾನ ಮಾಡಲ್ಪಡುತ್ತದೆ.

**ಅನುವಾದ–** ಆದ್ದರಿಂದ ನಿತ್ಯಮುಕ್ತನಾದ ಹರಿಯು ಹೇಗೆ ಸ್ವಾನಂದ-ಪೂರ್ಣನಾಗಿದ್ದಾನೆಯೋ ಅದರಂತೆ ಪರಮಮುಕ್ತನಾದ ಜೀವನೂ ಸಹ ತನಗೆ ಯೋಗ್ಯವಾದ ಮಹಾಸೌಭಾಗ್ಯದ ಅಪೇಕ್ಷೆಯುಳ್ಳವನಾಗಿದ್ದಾನೆ ಎಂದು ಅನುಮಾನದಿಂದ ಸಾಧಿಸುತ್ತೇವೆ.

**ಭಾವವಿಲಾಸಿನೀ**– ಮುಕ್ತಸ್ಯ ಸ್ವಯೋಗ್ಯಸಕಲಸೌಭಾಗ್ಯೋಪೇತತ್ವೇಽನುಮಾನಮಪ್ಯಾಹ – **ಅತ ಇತಿ** ॥ **ಅಸೌ** ಭಗವಾನ್ ॥ ೪೪೦ ॥

**ವಿವರಣೆ**– ಆಗಮ ಪ್ರಮಾಣಗಳಿಂದ ಮುಕ್ತಿಯಲ್ಲಿ ಸುಖವುಂಟೆಂದು ಹಿಂದೆ ಸಾಧಿಸಲಾಗಿದೆ.. ಮುಕ್ತಿಸುಖವು ಪ್ರಮಿತವಾದ್ದರಿಂದ ಆ ವಿಷಯದಲ್ಲಿ ಅನುಮಾನವನ್ನೂ ಮಾಡಬಹುದಾಗಿದೆ. 'ಮುಕ್ತಃ ಸ್ವಯೋಗ್ಯಸುಖವಾನ್ ಮುಕ್ತತ್ವಾತ್ ಪರಮಾತ್ಮವತ್' ಎಂದು ಅನುಮಾನದ ಆಕಾರ. ಪರಮಾತ್ಮನಲ್ಲಿ ಹೇತುವಾದ ಮುಕ್ತತ್ವ ಹಾಗೂ ಸಾಧ್ಯವಾದ ಸ್ವಯೋಗ್ಯಸುಖವತ್ತ್ವಗಳು ಉಂಟೆಂದು ತೋರಿಸಲು ಕ್ರಮವಾಗಿ ನಿತ್ಯಮುಕ್ತ ಆನಂದ ನಿರ್ಭರ ಎಂಬ ವಿಶೇಷಣಗಳನ್ನು ಕೊಡಲಾಗಿದೆ. ಇದರಿಂದ, ಸಾಧನವೈಕಲ್ಯ, ಸಾಧ್ಯವೈಕಲ್ಯಗಳೆಂಬ ದೋಷಗಳು ದೃಷ್ಟಾಂತದಲ್ಲಿ ಇಲ್ಲವೆಂದಾಯಿತು. ಎಲ್ಲಾ ಮುಕ್ತರು ಪಕ್ಷದಲ್ಲೇ ಸೇರಿರುವುದರಿಂದ, ಹೇತುವಿದ್ದು ಸಾಧ್ಯವಿಲ್ಲದ ಸ್ಥಳವೇ ಸಿಗುವುದಿಲ್ಲವಾದ್ದರಿಂದ ವ್ಯಭಿಚಾರಶಂಕೆಯೂ ಬರುವುದಿಲ್ಲ. ಯಾರು ಸ್ವಯೋಗ್ಯ-ಸುಖವುಳ್ಳವರು ಅಲ್ಲವೋ ಅವರು ಮುಕ್ತರಲ್ಲ ಎಂಬ ವ್ಯತಿರೇಕವ್ಯಾಪ್ತಿಯೂ ವ್ಯಭಿಚಾರ-ಶಂಕೆಯನ್ನು ನಿವಾರಣೆ ಮಾಡುತ್ತದೆ. ಎಲ್ಲಾ ಮುಕ್ತರಲ್ಲೂ ಮುಕ್ತತ್ವವು ಇರುವುದರಿಂದ ಅಸಿದ್ಧಿಯೂ ಇಲ್ಲ. ಹೀಗಾಗಿ ಆಗಮ ಮೂಲವಾದ ಈ ಅನುಮಾನವು ದೃಢವಾಗಿದೆ ಎಂದು ತಿಳಿಯಬೇಕು.

**ತಸ್ಮಾಚ್ಛೂನ್ಯತ್ವಮೋಕ್ಷಾಯ ನಾಕಾಂಕ್ಷಾ ಜಾಯತೇ ನೃಣಾಮ್ ।**
**ಅನಾಕಾಂಕ್ಷಿತಮೋಕ್ಷಾಯ ನ ಪರೋಕ್ತಾ ಭವೇಚ್ಛ್ರುತಿಃ ॥ ೪೪೧ ॥**

**ಅರ್ಥ**– ತಸ್ಮಾತ್= ಹೀಗೆ ಯುಕ್ತಿವಿರುದ್ಧವಾದ್ದರಿಂದ, ಶೂನ್ಯತ್ವಮೋಕ್ಷಾಯ= ಶೂನ್ಯಭಾವರೂಪವಾದ ಮೋಕ್ಷಕ್ಕೋಸ್ಕರ, ನೃಣಾಂ= ವಿವೇಕಿ ಪುರುಷರಿಗೆ, ಆಕಾಂಕ್ಷಾ= ಇಚ್ಛೆಯು, ನ ಜಾಯತೇ= ಹುಟ್ಟುವುದಿಲ್ಲ, ಪರೋಕ್ತ= ಪರರಿಂದ ಹೇಳಲ್ಪಟ್ಟ, ಶ್ರುತಿಃ= ವೇದವು, ಅನಾಕಾಂಕ್ಷಿತ= ಅನಪೇಕ್ಷಿತವಾದ, ಮೋಕ್ಷಾಯ= ಮೋಕ್ಷಪ್ರತಿಪಾದನೆಗೋಸ್ಕರ, ನ ಭವೇತ್= ಆಗುವುದಿಲ್ಲ.

**ಅನುವಾದ**– ಆದ್ದರಿಂದ ಶೂನ್ಯಭಾವರೂಪವಾದ ಮೋಕ್ಷವನ್ನು ಪಡೆಯಲು ಯಾರಿಗೂ ಅಪೇಕ್ಷೆಯುಂಟಾಗುವುದಿಲ್ಲ ಮತ್ತು ಆಕಾರಣದಿಂದ ಪರರು ಉದಾಹರಿಸಿದ ಶ್ರುತಿಯು ಅನಪೇಕ್ಷಿತವಾದ ಅಂತಹ ಮೋಕ್ಷಸ್ವರೂಪವನ್ನು ಹೇಳುವುದಿಲ್ಲ.

**ವಿವರಣೆ**– ಹಿಂದೆ ಹೇಳಿದಂತೆ ನಿರ್ಗುಣಬ್ರಹ್ಮಭಾವರೂಪವಾದ ಮೋಕ್ಷವು ಯುಕ್ತಿ ವಿರುದ್ಧ. ಮಾಯಾವಾದಿಗಳ ನಿರ್ಗುಣಬ್ರಹ್ಮನಿಗೂ ಬೌದ್ಧರ ಶೂನ್ಯಕ್ಕೂ ಯಾವುದೇ ವ್ಯತ್ಯಾಸವಿಲ್ಲವಾದ್ದರಿಂದ ರಾಜರು ನಿರ್ಗುಣಬ್ರಹ್ಮ ಎಂಬ ಸ್ಥಾನದಲ್ಲಿ ಶೂನ್ಯ ಎಂಬ ಪದವನ್ನು ಪ್ರಯೋಗ ಮಾಡಿದ್ದಾರೆ. ಯುಕ್ತಿ ವಿರುದ್ಧವಾದದ್ದನ್ನು ಬುದ್ಧಿಯುಳ್ಳ

**ಅರ್ಥ–** ಅಸ್ಯ= ಈ ಶ್ರುತಿವಾಕ್ಯದ, ವಿಸ್ತರಸ್ತು= ವಿಸ್ತಾರವಾದರೋ, ಸರ್ವಸ್ಯ= ಎಲ್ಲಕ್ಕೂ, ಮೂಲಶಾಸ್ತ್ರಮಹಾರ್ಣವೇ= ಮೂಲವಾದ, ಶಾಸ್ತ್ರ= ಸರ್ವಮೂಲಶಾಸ್ತ್ರವೆಂಬ, ಮಹಾರ್ಣವೇ= ಮಹಾಸಮುದ್ರದಲ್ಲಿ, ದ್ರಷ್ಟವ್ಯಃ= ನೋಡಲ್ಪಡಬೇಕು, ಮಯಾ= ನನ್ನಿಂದ, ಚಿತ್ತ= ಮನಸ್ಸಿನ, ಶುದ್ಧ್ಯರ್ಥಂ= ಶುದ್ಧಿಗೋಸ್ಕರ, ಏತಾವನತ್= ಇಷ್ಟು, ಚರ್ಚಿತಂ= ಚರ್ಚೆ ಮಾಡಲ್ಪಟ್ಟಿತು (ಅಸ್ಯ ಸರ್ವಸ್ಯ= ಈ ಎಲ್ಲದರ ಎಂದೂ ಅನ್ವಯ ಮಾಡಬಹುದು).

**ಅನುವಾದ–** ಈ ಎಲ್ಲ ಪ್ರಮೇಯಗಳ ವಿಸ್ತಾರವನ್ನೂ ಮೂಲಶಾಸ್ತ್ರವೆಂಬ ಸಮುದ್ರದಲ್ಲಿಯೇ ನೋಡಬೇಕು. ನಮ್ಮ ಮನಶ್ಶುದ್ಧಿಗಾಗಿ ಇಷ್ಟು ಅಲ್ಪವಿಷಯವನ್ನು ಮಾತ್ರ ಚರ್ಚಿಸಿದ್ದೇವೆ.

**ಭಾವವಿಲಾಸಿನೀ–** ತತ್ ತಸ್ಮಾತ್ ॥ ೪೩೮-೪೩೯ ॥

**ವಿವರಣೆ–** ಶ್ರುತ್ಯರ್ಥವನ್ನು ಸಂಕ್ಷೇಪ ಮಾಡಿದ್ದಕ್ಕೆ ಕಾರಣವನ್ನು ಹೇಳುತ್ತಾ, ವಿಸ್ತರದ ಆಕರವನ್ನು ಸೂಚಿಸುತ್ತಾರೆ. ಈ ಎಲ್ಲಾ ಅರ್ಥವು ಸಮುದ್ರದಂತೆ ವಿಸ್ತಾರವಾದ ಹಾಗೂ ಗಂಭೀರವಾದ, ಶ್ರೀಮದಾಚಾರ್ಯರಿಂದ ರಚಿತವಾದ ಸರ್ವಮೂಲಶಾಸ್ತ್ರದಲ್ಲಿ ಇರುತ್ತದೆ. ಅಲ್ಲಿಂದ ನೋಡಿ ತಿಳಿಯಬಹುದು. ಆದ್ದರಿಂದ, ಇಲ್ಲಿ ಸಂಕ್ಷೇಪವಾಗಿ ಅಲ್ಲಿ ಹೇಳಿದ ಅರ್ಥವಿಶೇಷವನ್ನು ಹೇಳಲಾಗಿದೆ. ಇಷ್ಟು ಹೇಳಿದ್ದಾದರೂ ಚಿತ್ತಶುದ್ಧಿಗಾಗಿ ಎಂದರೆ, ಇದರ ಶ್ರವಣ ಪಠಣಾದಿಗಳಿಂದ ಮನಶ್ಶುದ್ಧಿಯಾಗುತ್ತದೆ. ಅದ್ವೈತ ಭಾಷ್ಯವನ್ನು ನೋಡಿ ಕಲುಷಿತವಾದ ಮನಸ್ಸು ಸರಿಯಾದ ಅರ್ಥವನ್ನು ಗ್ರಹಿಸಿ ನಿರ್ಮಲವಾಗುತ್ತದೆ ಎಂದು ಅಭಿಪ್ರಾಯ.

**ಅತೋ ಯೋಗ್ಯೋರುಸೌಭಾಗ್ಯಾಪೇಕ್ಷೀ ಮುಕ್ತೋನುಮೀಯತೇ ।**
**ಮುಕ್ತತ್ವಾನ್ನಿತ್ಯಮುಕ್ತೋಽಸೌ ಯಥಾ ಸ್ವಾನಂದನಿರ್ಭರಃ ॥ ೪೪೦ ॥**

**ಅರ್ಥ–** ಅತಃ= ಆದ್ದರಿಂದ, ಮುಕ್ತಃ= ಮುಕ್ತನು, ಯೋಗ್ಯೇರುಸೌಭಾಗ್ಯಾಪೇಕ್ಷೀ= ಯೋಗ್ಯವಾದ ಬಹಳವಾದ ಸೌಭಾಗ್ಯದ ಅಪೇಕ್ಷೆವುಳ್ಳವನು, ಮುಕ್ತತ್ವಾತ್= ಮುಕ್ತನಾದ್ದರಿಂದ, ಯಥಾ= ಹೇಗೆಂದರೆ, ನಿತ್ಯಮುಕ್ತಃ= ನಿತ್ಯಮುಕ್ತನಾದ, ಆನಂದನಿರ್ಭರಃ = ಆನಂದದ ಅತಿಶಯವುಳ್ಳ, ಅಸೌ= ಪರಮಾತ್ಮನಂತೆ, ಇತಿ= ಹೀಗೆ, ಅನುಮೀಯತೇ= ಅನುಮಾನ ಮಾಡಲ್ಪಡುತ್ತದೆ.

**ಅನುವಾದ–** ಆದ್ದರಿಂದ ನಿತ್ಯಮುಕ್ತನಾದ ಹರಿಯು ಹೇಗೆ ಸ್ವಾನಂದ-ಪೂರ್ಣನಾಗಿದ್ದಾನೆಯೋ ಅದರಂತೆ ಪರಮಮುಕ್ತನಾದ ಜೀವನೂ ಸಹ ತನಗೆ ಯೋಗ್ಯವಾದ ಮಹಾಸೌಭಾಗ್ಯದ ಅಪೇಕ್ಷೆಯುಳ್ಳವನಾಗಿದ್ದಾನೆ ಎಂದು ಅನುಮಾನದಿಂದ ಸಾಧಿಸುತ್ತೇವೆ.

**ಭಾವವಿಲಾಸಿನೀ**– ಮುಕ್ತಸ್ಯ ಸ್ವಯೋಗ್ಯಸಕಲಸೌಭಾಗ್ಯೋಪೇತತ್ವೇಽನುಮಾನಮಪ್ಯಾಹ – ಅತ ಇತಿ ॥ ಅಸೌ ಭಗವಾನ್ ॥ ೪೪೦ ॥

**ವಿವರಣೆ**– ಆಗಮ ಪ್ರಮಾಣಗಳಿಂದ ಮುಕ್ತಿಯಲ್ಲಿ ಸುಖವುಂಟೆಂದು ಹಿಂದೆ ಸಾಧಿಸಲಾಗಿದೆ.. ಮುಕ್ತಿಸುಖವು ಪ್ರಮಿತವಾದ್ದರಿಂದ ಆ ವಿಷಯದಲ್ಲಿ ಅನುಮಾನವನ್ನೂ ಮಾಡಬಹುದಾಗಿದೆ. 'ಮುಕ್ತಃ ಸ್ವಯೋಗ್ಯಸುಖವಾನ್ ಮುಕ್ತತ್ವಾತ್ ಪರಮಾತ್ಮವತ್' ಎಂದು ಅನುಮಾನದ ಆಕಾರ. ಪರಮಾತ್ಮನಲ್ಲಿ ಹೇತುವಾದ ಮುಕ್ತತ್ವ ಹಾಗೂ ಸಾಧ್ಯವಾದ ಸ್ವಯೋಗ್ಯಸುಖವತ್ತ್ವಗಳು ಉಂಟೆಂದು ತೋರಿಸಲು ಕ್ರಮವಾಗಿ ನಿತ್ಯಮುಕ್ತ ಆನಂದ ನಿರ್ಭರ ಎಂಬ ವಿಶೇಷಣಗಳನ್ನು ಕೊಡಲಾಗಿದೆ. ಇದರಿಂದ, ಸಾಧನವೈಕಲ್ಯ, ಸಾಧ್ಯವೈಕಲ್ಯಗಳೆಂಬ ದೋಷಗಳು ದೃಷ್ಟಾಂತದಲ್ಲಿ ಇಲ್ಲವೆಂದಾಯಿತು. ಎಲ್ಲಾ ಮುಕ್ತರು ಪಕ್ಷದಲ್ಲೇ ಸೇರಿರುವುದರಿಂದ, ಹೇತುವಿದ್ದು ಸಾಧ್ಯವಿಲ್ಲದ ಸ್ಥಳವೇ ಸಿಗುವುದಿಲ್ಲವಾದ್ದರಿಂದ ವ್ಯಭಿಚಾರಶಂಕೆಯೂ ಬರುವುದಿಲ್ಲ. ಯಾರು ಸ್ವಯೋಗ್ಯ-ಸುಖವುಳ್ಳವರು ಅಲ್ಲವೋ ಅವರು ಮುಕ್ತರಲ್ಲ ಎಂಬ ವ್ಯತಿರೇಕವ್ಯಾಪ್ತಿಯೂ ವ್ಯಭಿಚಾರ-ಶಂಕೆಯನ್ನು ನಿವಾರಣೆ ಮಾಡುತ್ತದೆ. ಎಲ್ಲಾ ಮುಕ್ತರಲ್ಲೂ ಮುಕ್ತತ್ವವು ಇರುವುದರಿಂದ ಅಸಿದ್ಧಿಯೂ ಇಲ್ಲ. ಹೀಗಾಗಿ ಆಗಮ 'ಮೂಲವಾದ ಈ ಅನುಮಾನವು ದೃಢವಾಗಿದೆ ಎಂದು ತಿಳಿಯಬೇಕು.

ತಸ್ಮಾಚ್ಛೂನ್ಯತ್ವಮೋಕ್ಷಾಯ ನಾಕಾಂಕ್ಷಾ ಜಾಯತೇ ನೃಣಾಮ್ ।
ಅನಾಕಾಂಕ್ಷಿತಮೋಕ್ಷಾಯ ನ ಪರೋಕ್ತಾ ಭವೇಚ್ಛ್ರುತಿಃ ॥ ೪೪೧ ॥

**ಅರ್ಥ**– ತಸ್ಮಾತ್= ಹೀಗೆ ಯುಕ್ತಿವಿರುದ್ಧವಾದ್ದರಿಂದ, ಶೂನ್ಯತ್ವಮೋಕ್ಷಾಯ= ಶೂನ್ಯಭಾವರೂಪವಾದ ಮೋಕ್ಷಕ್ಕೋಸ್ಕರ, ನೃಣಾಂ= ವಿವೇಕಿ ಪುರುಷರಿಗೆ, ಆಕಾಂಕ್ಷಾ= ಇಚ್ಛೆಯು, ನ ಜಾಯತೇ= ಹುಟ್ಟುವುದಿಲ್ಲ, ಪರೋಕ್ತ= ಪರರಿಂದ ಹೇಳಲ್ಪಟ್ಟ, ಶ್ರುತಿಃ= ವೇದವು, ಅನಾಕಾಂಕ್ಷಿತ= ಅನಪೇಕ್ಷಿತವಾದ, ಮೋಕ್ಷಾಯ= ಮೋಕ್ಷಪ್ರತಿಪಾದನೆಗೋಸ್ಕರ, ನ ಭವೇತ್= ಆಗುವುದಿಲ್ಲ.

**ಅನುವಾದ**– ಆದ್ದರಿಂದ ಶೂನ್ಯಭಾವರೂಪವಾದ ಮೋಕ್ಷವನ್ನು ಪಡೆಯಲು ಯಾರಿಗೂ ಅಪೇಕ್ಷೆಯುಂಟಾಗುವುದಿಲ್ಲ ಮತ್ತು ಆಕಾರಣದಿಂದ ಪರರು ಉದಾಹರಿಸಿದ ಶ್ರುತಿಯು ಅನಪೇಕ್ಷಿತವಾದ ಅಂತಹ ಮೋಕ್ಷಸ್ವರೂಪವನ್ನು ಹೇಳುವುದಿಲ್ಲ.

**ವಿವರಣೆ**– ಹಿಂದೆ ಹೇಳಿದಂತೆ ನಿರ್ಗುಣಬ್ರಹ್ಮಭಾವರೂಪವಾದ ಮೋಕ್ಷವು ಯುಕ್ತಿ ವಿರುದ್ಧ. ಮಾಯಾವಾದಿಗಳ ನಿರ್ಗುಣಬ್ರಹ್ಮನಿಗೂ ಬೌದ್ಧರ ಶೂನ್ಯಕ್ಕೂ ಯಾವುದೇ ವ್ಯತ್ಯಾಸವಿಲ್ಲವಾದ್ದರಿಂದ ರಾಜರು ನಿರ್ಗುಣಬ್ರಹ್ಮ ಎಂಬ ಸ್ಥಾನದಲ್ಲಿ ಶೂನ್ಯ ಎಂಬ ಪದವನ್ನು ಪ್ರಯೋಗ ಮಾಡಿದ್ದಾರೆ. ಯುಕ್ತಿ ವಿರುದ್ಧವಾದದ್ದನ್ನು ಬುದ್ಧಿಯುಳ್ಳ

ಮನುಷ್ಯರು ಒಪ್ಪುವುದಿಲ್ಲ; ಹಾಗೆ ಒಪ್ಪುವರು ಮನುಷ್ಯರಲ್ಲ ಪಶುಗಳು ಎಂದಭಿಪ್ರಾಯ. ಹೀಗಾಗಿ, ಯುಕ್ತಿವಿರುದ್ಧವಾದ ಶೂನ್ಯಭಾವರೂಪಮೋಕ್ಷವನ್ನು ವಿವೇಕಿಗಳು ಇಚ್ಛಿಸುವುದಿಲ್ಲ. ಇಚ್ಛೆಪಡದಿದ್ದನ್ನು ಬೋಧಿಸುವ ವೇದವಾಕ್ಯವು ಅಪ್ರಮಾಣವಾಗ ಬೇಕಾಗುತ್ತದೆ. ಹೇಗೆಂದರೆ, ವಿರಕ್ತನನ್ನು ಕುರಿತು ವಾಣಿಜ್ಯೋಪದೇಶ ಮಾಡಿದಂತೆ, ನಿರ್ದುಷ್ಟವಾಕ್ಯವು ಆಕಾಂಕ್ಷಾ, ಯೋಗ್ಯತಾ, ಸನ್ನಿಧಿ ಎಂಬ ಗುಣಗಳುಳ್ಳ ಪದಗಳ ಸಮೂಹವಾಗಿರಬೇಕು. ವಿರಕ್ತನಿಗೆ ವಾಣಿಜ್ಯದ ಆಕಾಂಕ್ಷೆ ಇಲ್ಲ. ಆತನಿಗೆ ಅದನ್ನು ಬೋಧಿಸಿದರೆ, ಆಕಾಂಕ್ಷಾ ವಿರಹ ಅಥವಾ ಅಸಂಗತಿ ಎಂಬ ದೋಷವು ಬರುತ್ತದೆ. ಅದರಂತೆ, ಮುಮುಕ್ಷುಗಳಿಗೆ ಇರುವುದನ್ನು ಕಳೆದುಕೊಳ್ಳುವುದೆಂಬ ಶೂನ್ಯಭಾವ-ರೂಪವಾದ ಮೋಕ್ಷದ ಆಕಾಂಕ್ಷೆಯಿಲ್ಲ. ವೇದಗಳು ಹೊರಟದ್ದೇ ಜೀವರಿಗೆ ಮೋಕ್ಷ-ಮಾರ್ಗವನ್ನು ಉಪದೇಶಿಸುವುದಕ್ಕೋಸ್ಕರ. ಹೀಗಾಗಿ, ಅವರಿಗೆ ಆಕಾಂಕ್ಷೆ ಇಲ್ಲದ ಮೋಕ್ಷವನ್ನು ಉಪದೇಶಿಸಿದರೆ, ಅಸಂಗತ ಭಾಷಣ ಮಾಡಿ ಅಪ್ರಮಾಣ ವಾಗಬೇಕಾಗುತ್ತದೆ.

**ವಿಶೇಷಾಂಶ–** 'ಪರೋಽರಿಪರಮಾತ್ಮನೋಃ' ಎಂಬ ಅಮರಕೋಶದಂತೆ ಪರ ಎಂದರೆ ಶತ್ರು ಎಂದರ್ಥವಾಗುತ್ತದೆ. ಮಾಯಾವಾದಿಯನ್ನು ಪರ ಎಂದು ನಿರ್ದೇಶಿಸುವ ರಾಜರ ಅಭಿಪ್ರಾಯವೇನೆಂದರೆ, ಅವನು ವೇದಕ್ಕೂ ಅಪಾರ್ಥಮಾಡುವುದರಿಂದ ವೇದಶತ್ರು ಎಂಬುದಾಗಿ.

ತಸ್ಮಾತ್ ಎನ್ನುವುದಕ್ಕೆ ಯುಕ್ತಿ ವಿರುದ್ಧವಾದ್ದರಿಂದ ಎಂದರ್ಥ. ಅನಾಕಾಂಕ್ಷಿತ ಮೋಕ್ಷಕ್ಕೋಸ್ಕರ ಎಂದರೆ ಅಪೇಕ್ಷೆ ಪಡದೇ ಇರತಕ್ಕ ಮೋಕ್ಷದ ಪ್ರತಿಪಾದನೆಗೋಸ್ಕರ ಎಂದರ್ಥ. ವಿರಕ್ತನನ್ನು ಕುರಿತು ವಾಣಿಜ್ಯವನ್ನು ಉಪದೇಶ ಮಾಡಿದಂತೆ, ಆಕಾಂಕ್ಷೆಯು ಇಲ್ಲದ್ದನ್ನು ಬೋಧಿಸುವ ವಾಕ್ಯವು ಪರನಿಗೆ ಅಪ್ರಮಾಣವಾಗುವ ಪ್ರಸಂಗವು ಬರುತ್ತದೆಯಾದ್ದರಿಂದ.

**ತಸ್ಮಾಚ್ಛುಭಜನಾಕೀರ್ಣಾ ದಿವ್ಯಭೋಗವತೀ ಸ್ಥಿತಿಃ ।**
**ಮುಕ್ತಿರುಕ್ತಶ್ರುತಿಶತೈರಪ್ಯಾಮ್ನಾನಾದಿತಿ ಸ್ಥಿತಂ ॥ ೪೪೨ ॥**

**ಅರ್ಥ–** ತಸ್ಮಾತ್= ಆಕಾರಣದ ದೆಸೆಯಿಂದ, ಮುಕ್ತಿಃ= ಮುಕ್ತಿಯು, ಶುಭಜನಾಕೀರ್ಣಾ= ಸಜ್ಜನರಿಂದ ಹರಡಿದ, ದಿವ್ಯ= ಅಲೌಕಿಕವಾದ, ಭೋಗವತೀ= ಭೋಗಗಳುಳ್ಳ, ಸ್ಥಿತಿಃ= ಸ್ಥಾನವು, ಇತಿ= ಹೀಗೆಂದು, ಉಕ್ತ= ಹೇಳಲ್ಪಟ್ಟ, ಶ್ರುತಿಃ= ವೇದಗಳ, ಶತೈಃ= ನೂರುಗಳಿಂದ, ಆಮ್ನಾನಾತ್= ವೇದದ ದೆಸೆಯಿಂದ, ಸ್ಥಿತಂ= ಸ್ಥಾಪಿತವಾಯಿತು.

**ಅನುವಾದ– ಆದ್ದರಿಂದ ಹಿಂದೆ ಹೇಳಿದ ನೂರಾರು ಶ್ರುತಿಗಳ ಬಲದಿಂದ ಮೋಕ್ಷವೆಂಬುದು ಶುಭಜನರಿಂದ ಕೂಡಿದ ದಿವ್ಯಭೋಗಸಂಪನ್ನವಾದ ಒಂದು ಸ್ಥಿತಿ ಎಂದು ಸ್ಪಷ್ಟವಾಗುತ್ತದೆ.**

**ಭಾವವಿಲಾಸಿನೀ–** ತಸ್ಮಾದ್ಯುಕ್ತಿ ವಿರುದ್ಧತ್ವಾತ್ । ಅನಾಕಾಂಕ್ಷಿತವೋಕ್ಷಾಯಾ ನಪೇಕ್ಷಿತ ಮೋಕ್ಷಪ್ರತಿಪಾದನಾಯೇತ್ಯರ್ಥಃ । ವಿರಕ್ತಂ ಪ್ರತಿ ವಾಣಿಜ್ಯೋಪದೇಶವದಾನಾಕಾಂಕ್ಷಿತ ಬೋಧಕಸ್ಯ ವಾಕ್ಯಸ್ಯ ಪರಂ ಪ್ರತ್ಯಪ್ರಾಮಾಣ್ಯಪ್ರಸಂಗಾತ್ ॥ ೪೪೧-೪೪೨ ॥

**ವಿವರಣೆ–** ಅನೇಕ ಶ್ರುತಿಗಳು ಹಾಗೂ ಅನುಮಾನದಿಂದ ಸಿದ್ಧವಾದ ಮೋಕ್ಷಸ್ವರೂಪವನ್ನು ಉಪಸಂಹಾರ ಮಾಡುತ್ತಿದ್ದಾರೆ. ಮುಕ್ತಸ್ಥಾನದಲ್ಲಿ ಭಗವದ್ಭಕ್ತರು ಸಜ್ಜನರು ತುಂಬಿದ್ದಾರೆ. ಅಲ್ಲಿ ಅಲೌಕಿಕವಾದ ಭೋಗಗಳಿವೆ.

**ಯತ್ರ ಮುಕ್ತೌ ಮುಕ್ತವರ್ಗಾದ್ಧರೇರ್ದ್ವೈತಮಿವ ಪ್ರಭೋಃ ।**
**ದ್ವೈತೋಪಮೋ ವಿಶೇಷಶ್ಚ ಭವತಿ ಸ್ವಗುಣಾದಿನಾ ॥ ೪೪೩ ॥**

**ಅರ್ಥ–** ಯತ್ರ= ಯಾವ, ಮುಕ್ತೌ= ಮುಕ್ತಿಯಲ್ಲಿ, ಹರೇಃ= ಪರಮಾತ್ಮನಿಗೆ, ಮುಕ್ತವರ್ಗಾತ್= ಮುಕ್ತರ ಸಮೂಹದ ದೆಸೆಯಿಂದ, ದ್ವೈತಮಿವ= ಭೇದದಂತೆ, ಪ್ರಭೋಃ= ಸಮರ್ಥನಾದ ಭಗವಂತನಿಗೆ, ಸ್ವಗುಣಾದಿಭಿಃ= ತನ್ನ ಗುಣಗಳೇ ಮೊದಲಾದವುಗಳಿಂದ, ದ್ವೈತೋಪಮಃ= ಭೇದಕ್ಕೆ ಸದೃಶವಾದ, ವಿಶೇಷಶ್ಚ= ವಿಶೇಷವೂ ಸಹ, ಭವತಿ= ಇರುತ್ತದೆಯೋ (ಮುಂದಿನ ಶ್ಲೋಕದಿಂದ ಅನ್ವಯ).

**ವಿವರಣೆ–** ಈ ಶ್ರುತಿಯ ಆರಂಭದಲ್ಲಿ 'ಯತ್ರಹಿ ದ್ವೈತಮಿವ ಭವತಿ' ಎಂದಿರುತ್ತದೆ. ದ್ವೈತಮಿವ ಎಂಬುದಕ್ಕೆ ರಾಜರು 'ಭೇದಸದೃಶವಾದ ವಿಶೇಷ' ಎಂದು ಅರ್ಥ ಮಾಡಿರುತ್ತಾರೆ. 'ವಿಶೇಷ' ಎಂಬುದು ಶ್ರೀಮದಾಚಾರ್ಯರು ಪ್ರಮಾಣಗಳಿಗೆ ಅನುಸಾರವಾಗಿ ತೋರಿಸಿಕೊಟ್ಟ ಒಂದು ಪ್ರಮೇಯ. ಅಭೇದವಿದ್ದಕಡೆ ಭೇದಕಾರ್ಯವನ್ನು ನಿರ್ವಾಹ ಮಾಡುವ ಶಕ್ತಿವಿಶೇಷವನ್ನೇ ವಿಶೇಷ ಎನ್ನುತ್ತಾರೆ. ಇದು ಎಲ್ಲಾ ಪದಾರ್ಥದಲ್ಲೂ ಇರುತ್ತದೆ.

ಹೇಗೆಂದರೆ, 'ಸಕ್ಕರೆ ಸಿಹಿ' ಎಂದು ಪ್ರಯೋಗ ಮಾಡುತ್ತೇವೆ. ವಸ್ತುಸ್ಥಿತಿಯಲ್ಲಿ ಸಿಹಿಯು ಸಕ್ಕರೆಯ ಸ್ವರೂಪಗುಣ. ಅದನ್ನು ಸಕ್ಕರೆಯಿಂದ ಪ್ರತ್ಯೇಕ ಮಾಡಿ ತೋರಿಸಲು ಸಾಧ್ಯವಿಲ್ಲ. ಹೀಗೆ ಸಕ್ಕರೆ ಮತ್ತು ಸಿಹಿಗಳಿಗೆ ಅಭೇದವಿದ್ದರೂ, ಸಕ್ಕರೆ ಮತ್ತು ಸಿಹಿ ಎಂಬ ಪದಗಳು ಪರ್ಯಾಯಪದಗಳಲ್ಲ. ಸಕ್ಕರೆಯು ಸಿಹಿಮಾತ್ರವೇ ಆಗಿದ್ದಿದ್ದರೆ, ಸಕ್ಕರೆ ಸಿಹಿ ಎಂದು ಹೇಳಿದರೆ, 'ಸಕ್ಕರೆ ಸಕ್ಕರೆ' ಎಂದು ಹೇಳಿದಂತಾಗುತ್ತಿತ್ತು. ಹೀಗಾಗುತ್ತಿಲ್ಲ. ಆದ್ದರಿಂದ, ಸಕ್ಕರೆ-ಸಿಹಿಗಳಿಗೆ ಅಭೇದವಿದ್ದರೂ, 'ಸಕ್ಕರೆ ಸಿಹಿ' ಎಂಬ ಅಬಾಧಿತ ಪ್ರಯೋಗವಿದೆ. ಇದು ಸಾಧ್ಯವಾದದ್ದು, ಸಕ್ಕರೆ ಸಿಹಿಗಳಿಗೆ ವಿಶೇಷವಿರುವುದರಿಂದ. ಸಕ್ಕರೆಯೇ ಸಿಹಿಯಾದರೂ, ಸಿಹಿಯು ಸಕ್ಕರೆಯ ವಿಶೇಷ ಎನ್ನುತ್ತೇವೆ. ಇದರಂತೆ, ಭಗವಂತನು ಆನಂದರೂಪನೇ ಆದರೂ, 'ಭಗವಂತನ ಆನಂದ' ಎಂದು ಪ್ರಯೋಗ ಮಾಡುತ್ತೇವೆ. ಇದು ಸಾಧ್ಯವಾದದ್ದು, ಭಗವಂತ ಮತ್ತು ಆನಂದಕ್ಕೆ ಅಭೇದವಿದ್ದರೂ,

ವಿಶೇಷವಿರುವುದರಿಂದ. ಈ ಪ್ರಯೋಗ ವಿಶೇಷವನ್ನು, 'ದ್ವೈತಮಿವ' ಎಂಬ ಪದವು ಹೇಳುತ್ತಿದೆ ಎಂದು ರಾಜರ ಅಭಿಪ್ರಾಯ.

ಮುಕ್ತರಿಗೂ ಪರಮಾತ್ಮನಿಗೂ ಭೇದವಿದೆಯೆಂದು ಹಿಂದೆ ಸಮರ್ಥಿಸಲಾಗಿದೆ. ಅದರಂತೆ, ಪರಮಾತ್ಮನಿಗೂ ಪರಮಾತ್ಮನ ಗುಣಗಳೂ .ರೂಪಗಳಿಗೂ, ಕ್ರಿಯೆಗಳಿಗೂ ಭೇದಪ್ರತಿನಿಧಿಯಾದ ವಿಶೇಷವಿದೆ.

**ಮುಕ್ತಾನಾಂ ಚ ಮಿಥಃ ಸರ್ವೇಶಾಚ್ಚ ದ್ವೈತಮಿವಾಂಜಸಾ ।**
**ದ್ವೈತೋಪಮೋ ವಿಶೇಷಶ್ಚ ಭವತಿ ಸ್ವಗುಣಾದಿಭಿಃ ॥ ೪೪೪ ॥**

**ಅರ್ಥ–** ಮುಕ್ತಾನಾಂ ಚ= ಮುಕ್ತರಿಗೂ ಕೂಡ, ಮಿಥಃ= ಪರಸ್ಪರವಾಗಿ, ಸರ್ವೇಶಾಚ್ಚ= ಸರ್ವೇಶ್ವರನಾದ ಪರಮಾತ್ಮನ ದೆಸೆಯಿಂದಲೂ ಕೂಡ, ಅಂಜಸಾ= ಚೆನ್ನಾಗಿ, ದ್ವೈತಮಿವ= ಭೇದದಂತೆ, ಸ್ವಗುಣಾದಿಭಿಃ= ತಮ್ಮ ಗುಣಗಳೇ ಮೊದಲಾಗಿವುಳ್ಳವುಗಳಿಂದ, ದ್ವೈತೋಪಮಃ= ಭೇದಕ್ಕೆ ಸದೃಶವಾದ, ವಿಶೇಷಶ್ಚ= ವಿಶೇಷವೂ ಸಹ, ಭವತಿ= ಇರುತ್ತದೆಯೋ (ಮುಂದಿನ ಶ್ಲೋಕದಿಂದ ಅನ್ವಯ).

**ವಿವರಣೆ–** ಭಗವಂತನಿಗೂ, ಭಗವಂತನ ಗುಣರೂಪಕ್ರಿಯೆಗಳಿಗೂ ವಿಶೇಷವುಂಟೆಂದು ಹೇಳಲಾಯಿತು. ಇದರಂತೆ, ಮುಕ್ತರಿಗೂ ಸಹ ತಮ್ಮ ಗುಣರೂಪ-ಕ್ರಿಯೆಗಳಿಂದ ವಿಶೇಷವುಂಟು. ಮುಕ್ತರಿಗೆ ಪರಸ್ಪರ ಹಾಗೂ ಭಗವಂತನಿಗೆ ಭೇದವಿರುವಂತೆ, ಸ್ವಗುಣ ಸ್ವಕ್ರಿಯೆಗಳಿಂದ ಭೇದಸದೃಶವಾದ ವಿಶೇಷವುಂಟೆಂದು ಅಭಿಪ್ರಾಯ.

**ತತ್ರೈವ ಮೋಕ್ಷೇ ವೈಕುಂಠಪೂರ್ವಕೇ ಸ್ವಂ ವಿಜಾನತೇ ।**
**ಪರಾನ್ ಜಾನಂತಿ ಭೋಗಾಂಶ್ಚ ಭುಂಜತೇನುಭವಂತಿ ಚ ॥ ೪೪೫ ॥**

**ಸ್ವಾನಂದಮಪಿ ತೇ ಬಹ್ವೀಭವಂತ್ಯೇಕೀಭವಂತಿ ಚ ।**
**ಯಾನೈಶ್ಚರಂತಿ ಶ್ಲಿಷ್ಯಂತಿ ಕ್ರೀಡಂತಿ ಚ ಹಸಂತಿ ಚ ॥ ೪೪೬ ॥**

**ಅರ್ಥ–** ವೈಕುಂಠಪೂರ್ವಕೇ= ವೈಕುಂಠವೇ ಮೊದಲಾಗಿವುಳ್ಳ, ತತ್ರೈವ ಮೋಕ್ಷೇ= ಅದೇ ಮೋಕ್ಷದಲ್ಲಿಯೇ, ಸ್ವಂ= ತಮ್ಮನ್ನು, ವಿಜಾನತೇ= ತಿಳಿಯುತ್ತಾರೆ. ಪರಾನ್= ಬೇರೆಯವರನ್ನು, ಜಾನಂತಿ= ತಿಳಿಯುತ್ತಾರೆ, ಭೋಗಾಂಶ್ಚ= ಭೋಗಗಳನ್ನೂ ಕೂಡ, ಅನುಭವಂತಿ= ಅನುಭವಿಸುತ್ತಾರೆ; ಬಹ್ವೀಭವಂತಿ= ಅನೇಕರಾಗುತ್ತಾರೆ; ಚ= ಮತ್ತು, ಏಕೀಭವಂತಿ= ಒಬ್ಬರಾಗುತ್ತಾರೆ. ಯಾನೈಃ= ವಾಹನಗಳಿಂದ, ಚರಂತಿ= ಸಂಚರಿಸುತ್ತಾರೆ, ಶ್ಲಿಷ್ಯಂತಿ= ಆಲಿಂಗಿಸುತ್ತಾರೆ, ಕ್ರೀಡಂತಿ= ಆಟವಾಡುತ್ತಾರೆ, ಚ= ಮತ್ತು, ಹಸಂತಿ= ನಗುತ್ತಾರೆ.

**ವಿವರಣೆ–** ಮುಕ್ತರ ಭೋಗಗಳನ್ನು ವರ್ಣಿಸುತ್ತಾ, ವಿಶೇಷವನ್ನೂ ಸಮರ್ಥಿಸುತ್ತಾರೆ. ವೈಕುಂಠಾದಿ ಅನೇಕ ಮುಕ್ತಸ್ಥಾನಗಳು ಇವೆ. ಅಲ್ಲಿ ತಮ್ಮ ಜ್ಞಾನವೂ ಉಂಟು, ಇತರ ಮುಕ್ತರ ಜ್ಞಾನವೂ ಉಂಟು. ವಾಹನಗಳಿಂದ ಸ್ತ್ರೀಯರಿಂದ ವಿಹಾರ ಮಾಡುತ್ತಾರೆ.

ತಮ್ಮ ಜ್ಞಾನವು ಉಂಟು ಎಂದಿದ್ದರಿಂದ ಜ್ಞಾತೃ-ತಿಳಿಯುವವರೂ ತಾವೇ, ಜ್ಞೇಯ-ತಿಳಿಯಲ್ಪಡುವ ವಸ್ತುವೂ ತಾನೇ ಎಂದಾಯಿತು. ಹೀಗೆ ಜ್ಞಾನವೆಂಬ ಒಂದೇ ಕ್ರಿಯೆಯಲ್ಲಿ ತಾನೇ ಕರ್ತೃ, ಕರ್ಮ ಎರಡೂ ಆಗಿರಬೇಕಾದರೆ ವಿಶೇಷವನ್ನು ಒಪ್ಪಲೇಬೇಕು. ಇದೇ ರೀತಿ ಸ್ವಾನಂದಾನುಭವವೂ ಸಹ ವಿಶೇಷವನ್ನು ಒಪ್ಪಿದರೆ ಸಾಧ್ಯ. 'ಅಥೈಕೀಭವತಿ ಅಥ ಬಹ್ವೀಭವತಿ', 'ಸ್ತ್ರೀಭಿರ್ವಾಯಾನೈರ್ವಾಜ್ಞಾತಿಭಿರ್ವಾಽಜ್ಞಾತಿಭಿರ್ವಾ' ಇತ್ಯಾದಿ ಶ್ರುತಿಗಳು ಮುಕ್ತಭೋಗವಿಷಯದಲ್ಲಿ ಪ್ರಮಾಣಗಳಾಗಿವೆ.

**ಯತ್ರ ಮೋಕ್ಷೇ ಸರ್ವಮಾತ್ಮೈವಾಭೂದನ್ಯನ್ನ ಕಿಂಚನ ।**
**ನ ದ್ವೈತಂ ನ ವಿಶೇಷೋ ವಾ ತವ ಜ್ಞಾತೃತ್ವಮೇವ ನ ॥ ೪೪೭ ॥**

**ಅರ್ಥ–** ಯತ್ರ ಮೋಕ್ಷೇ= ಯಾವ ಮೋಕ್ಷದಲ್ಲಿ, ಸರ್ವಂ= ಎಲ್ಲವೂ, ಆತ್ಮೈವಾಭೂತ್= ಆತ್ಮವೇ ಆಯಿತೋ, ಅನ್ಯತ್= ಬೇರೆಯದು, ನ ಕಿಂಚನ= ಸ್ವಲ್ಪವೂ ಇಲ್ಲವೋ, ದ್ವೈತಂ= ಭೇದವು, ನ= ಇಲ್ಲವೋ, ವಿಶೇಷೋ ವಾ= ವಿಶೇಷವಾಗಲೀ, ನ= ಇಲ್ಲವೋ, ತತ್ರ= ಅಂತಹ ಮೋಕ್ಷದಲ್ಲಿ, ಜ್ಞಾತೃತ್ವಮೇವ ನ= ತಿಳಿಯುವಿಕೆ ಎನ್ನುವುದೇ ಇಲ್ಲ.

**ಅನುವಾದ–** ಯಾವ ಮೋಕ್ಷದಲ್ಲಿ ಪ್ರಭುವಾದ ಹರಿಗೆ ಮುಕ್ತಸಮುದಾಯದಿಂದ ಮತ್ತು ತನ್ನ ಗುಣಗಳಿಂದ ಭೇದದಂತಿರುವ ಭೇದಪ್ರತಿನಿಧಿಯಾದ ವಿಶೇಷವಾದರೂ ಇರುತ್ತದೆಯೋ ಅದರಂತೆ ಮುಕ್ತರಿಗೆ ಪರಸ್ಪರವಾಗಿ ಭೇದವಿರುವಂತೆ ಮತ್ತು ಮುಕ್ತರಿಗೂ ಹರಿಗೂ ಸ್ಪಷ್ಟವಾಗಿ ಭೇದವಿರುವಂತೆ ಮುಕ್ತಜೀವರಿಗೂ ಸಹ ಸುಗುಣಾದಿಗಳಿಂದ ಭೇದದಂತಿರುವ ವಿಶೇಷವಾದರೂ ಇರುತ್ತದೆಯೋ ಅಂತಹ ವೈಕುಂಠ ಮೊದಲಾದ ಲೋಕರೂಪವಾದ ಮೋಕ್ಷದಲ್ಲಿ ಜೀವನು ತನ್ನನ್ನು ತಿಳಿಯುತ್ತಾನೆ, ಪರರನ್ನು ತಿಳಿಯುತ್ತಾನೆ, ಭೋಗವನ್ನು ಭೋಗಿಸುತ್ತಾನೆ, ಸ್ವಾನಂದವನ್ನು ಅನುಭವಿಸುತ್ತಾನೆ, ಅನೇಕರೂಪಗಳನ್ನು ಹೊಂದುತ್ತಾನೆ, ಪುನಃ ಆ ರೂಪಗಳನ್ನು ಒಂದುಗೂಡಿಸುತ್ತಾನೆ, ವಾಹನಗಳಲ್ಲಿ ಸಂಚರಿಸುತ್ತಾನೆ, ಪ್ರಿಯರನ್ನು ಆಲಿಂಗಿಸುತ್ತಾನೆ, ಕ್ರೀಡೆಯಾಡುತ್ತಾನೆ, ನಗುತ್ತಾನೆ, ಆದರೆ ಯಾವ ಮೋಕ್ಷದಲ್ಲಿ ಆತ್ಮನನ್ನು ಬಿಟ್ಟು ಬೇರೆ ಯಾವ ವಸ್ತುವು ಇಲ್ಲವೋ, ಭೇದವೂ ಇಲ್ಲವೋ, ಭೇದಪ್ರತಿನಿಧಿಯಾದ ವಿಶೇಷವೂ ಇಲ್ಲವೋ ಅಲ್ಲಿ ಆ ಮುಕ್ತನಿಗೆ ಜ್ಞಾತೃತ್ವವೇ ಕೂಡುವುದಿಲ್ಲ.

**ಭಾವವಿಲಾಸಿನೀ–** ಭೇದಕಾರ್ಯಕಾರಿತ್ವೇನ ಭೇದೋಪಮೋ ಯೋ ವಿಶೇಷಸ್ತತ್ಸಮರ್ಥನ-ಪರತಯಾಪಿ ಯತ್ರತ್ವಸ್ಯೇತಿ ವಾಕ್ಯಂ ಯೋಜಯತಿ– **ಯತ್ರೇತಿ** ॥ ಯತ್ರ ಮೋಕ್ಷೇ ದ್ವೈತಮಿವ ದ್ವೈತೋಪಮಃ ಭೇದ ಪ್ರತಿನಿಧಿರ್ವಿಶೇಷ ಇತ್ಯರ್ಥಃ ಭವತಿಸ್ಯಾತ್ ॥ ೪೪೩-೪೪೭ ॥

**ವಿವರಣೆ–** 'ಯತ್ರತ್ವಸ್ಯ' ಎಂಬ ಶ್ರುತಿಗೆ ನಾನು ಹೇಳಿದ ಅರ್ಥವನ್ನು ಒಪ್ಪದೆ, 'ಮೋಕ್ಷದಲ್ಲಿ ಆತ್ಮಭಿನ್ನ ಯಾವುದೂ ಇಲ್ಲ; ಅದು ನಿರ್ಗುಣಬ್ರಹ್ಮಭಾವರೂಪವಾದದ್ದು' ಎಂದು ಒಪ್ಪಿದರೆ ಬಾಧಕವನ್ನು ಹೇಳುತ್ತಾರೆ. ಮೋಕ್ಷದಲ್ಲಿ ಎಲ್ಲವೂ ಕೇವಲ ಆತ್ಮವೇ, ಮತ್ತೇನೂ ಇಲ್ಲ; ಅಲ್ಲಿ ಭೇದವೂ ಇಲ್ಲ, ಭೇದಪ್ರತಿನಿಧಿಯಾದ ವಿಶೇಷವೂ ಇಲ್ಲ ಎನ್ನುವ ಪಕ್ಷದಲ್ಲಿ, ಅಲ್ಲಿ ಯಾರೂ ಯಾರನ್ನೂ ತಿಳಿಯಲಾರರು. ಭೇದವಿದ್ದರೆ ಮತ್ತೊಬ್ಬರನ್ನು ತಿಳಿಯಬಹುದಿತ್ತು. ವಿಶೇಷವಿದ್ದರೆ ತಮ್ಮನ್ನು ತಾವು ತಿಳಿಯಬಹುದಿತ್ತು. ಎರಡೂ ಇಲ್ಲದಿರುವಾಗ, ಅಲ್ಲಿ ತಿಳಿಯತಕ್ಕ ಪುರುಷನೂ ಇಲ್ಲ; ತಿಳುವಳಿಕೆಯೂ ಇಲ್ಲ ಎಂದಾಗುತ್ತದೆ.

**ದೂರೇಽಭೂದ್ ಭೋಕ್ತೃತಾ ತಸ್ಮಾದವಿದ್ಯಾಸ್ತಮಯೋ ನ ಸಃ ।**
**ವಿದ್ಯಾಸ್ತಮಯ ಏವಾಭೂತ್ ಸ್ವಜ್ಞಾನಂ ಚ ಯತೋಽಸ್ಯ ನ ॥ ೪೪೮ ॥**

**ಅರ್ಥ–** ಭೋಕ್ತೃತಾ= ಭೋಗಿಸೋಣವು, ದೂರೇ= ದೂರದಲ್ಲಿಯೇ ಇಲ್ಲವೆಂದಾಗುತ್ತದೆ, ತಸ್ಮಾತ್= ಆದ್ದರಿಂದ, ಸಃ= ಆ ಮೋಕ್ಷವು, ಅವಿದ್ಯಾಸ್ತಮಯಃ= ಅವಿದ್ಯೆಯ ನಾಶ ರೂಪವಾದದ್ದು, ನ= ಅಲ್ಲ, (ಮತ್ತೇನೆಂದರೆ) ವಿದ್ಯಾಸ್ತಮಯಃ ಏವ= ವಿದ್ಯೆಯ ನಾಶ ರೂಪವಾದದ್ದೇ, ಅಭೂತ್= ಆಯಿತು, ಯತಃ= ಏಕೆಂದರೆ, ಅಸ್ಯ= ಈ ಮುಕ್ತನಿಗೆ, ಸ್ವಜ್ಞಾನಂ ಚ= ತನ್ನ ಜ್ಞಾನವೂ ಕೂಡ, ನ= ಇರುವುದಿಲ್ಲ.

**ಅನುವಾದ–** ಜ್ಞಾತೃತ್ವವೇ ಕೂಡದಿರುವಾಗ ಭೋಕ್ತೃತ್ವವು ದೂರದಲ್ಲಿಯೇ ಉಳಿಯಿತು. ಆದ್ದರಿಂದ ಅಂತಹ ಮೋಕ್ಷವು ಅವಿದ್ಯಾಸ್ತಮಯಸ್ವರೂಪವಾಗಲಿಲ್ಲ. ವಿದ್ಯಾಸ್ತಮಯ ಸ್ವರೂಪವೇ ಆಯಿತು. ಏಕೆಂದರೆ ಮುಕ್ತನಿಗೆ ತನ್ನ ಜ್ಞಾನವೂ ಇಲ್ಲವಷ್ಟೆ.

**ಭಾವವಿಲಾಸಿನೀ– ದೂರೇ ಸತಿ** । ಭೋಗ್ಯವಸ್ತುಸಾಮಾನ್ಯಾಭಾವಾತ್ ಕ್ರಿಯಾಸಾಮಾನ್ಯಾ-ಭಾವಚ್ಚೇತಿ ಭಾವಃ ॥ ತತ್ ತತ್ರ ಇತರಃ ಇತರಂ ಪಶ್ಯತಿ । ವಿಶೇಷಶಕ್ತ್ಯಾ ಪರವಿಷಯಕ-ಸ್ವಸ್ವರೂಪಭೂತ ಜ್ಞಾನೇಽಪಿ ಸ್ವಯಮೇವ ಕರ್ತಾಭವತೀತಿ ಯಃ ಶ್ರೌತೋಽರ್ಥಃ ಸೋಽಪ್ಯುಪಲಕ್ಷಕ ಇತಿ ಭಾವೇನ ತಂ ಪ್ರಪಂಚಯತಿ ಸ್ವಜ್ಞಾನಮಿತ್ಯಾದಿನಾ ॥ ಸ ಮೋಕ್ಷಃ ಅಸ್ಯ ಮುಕ್ತಸ್ಯ ॥೪೪೮॥

**ವಿವರಣೆ–** ತಿಳುವಳಿಕೆ ಅಥವಾ ಜ್ಞಾನವು ಇಲ್ಲದೇ ಹೋಗಲಿ; ಅದರಿಂದ ಏನಾಗುತ್ತದೆ ಎಂದರೆ, ಮಾಯಾವಾದಿಯು ಒಪ್ಪುವ ಅವಿದ್ಯಾಸ್ತಮಯ ಮೋಕ್ಷವು

ಇಲ್ಲದಂತಾಗುತ್ತದೆ ಎನ್ನುತ್ತಾರೆ. ಹಿಂದಿನ ಶ್ಲೋಕದಲ್ಲಿ ಹೇಳಿದಂತೆ, ಜ್ಞಾನಸಾಮಾನ್ಯವೇ ಇಲ್ಲ ಎಂದಾಗಿದೆ. ಅದನ್ನೇ 'ಸ್ವಜ್ಞಾನವೂ ಇಲ್ಲ' ಎಂದು ಸ್ಪಷ್ಟಪಡಿಸಿದ್ದಾರೆ. ಪರರು ಇಲ್ಲವಾದ್ದರಿಂದ ಪರಜ್ಞಾನವಿಲ್ಲ. ವಿಶೇಷವನ್ನು ಒಪ್ಪದಿದ್ದರಿಂದ ಸ್ವಜ್ಞಾನವೂ ಇಲ್ಲ. ಹೀಗೆ ಜ್ಞಾನವೇ ಇಲ್ಲದಿರುವಾಗ ಭೋಗವು ಸುತರಾಂ ಇಲ್ಲವೆಂದಾಯಿತು; ಏಕೆಂದರೆ, ಸುಖದುಃಖಗಳ ಜ್ಞಾನವನ್ನೇ ಭೋಗ ಎನ್ನುವುದು. 'ನೀಚೋಚ್ಚತ್ವೈವ ದುಃಖಾದೇಃ ಭೋಗ ಇತ್ಯಭಿಧೀಯತೇ' ಎಂದು ಸ್ಕಾಂದಪುರಾಣದಲ್ಲಿದೆ. ಇದರಿಂದ ಆಗಿದ್ದೇನೆಂದರೆ, ಮಾಯಾವಾದಿಯು ಹೇಳುವಂತೆ ಮೋಕ್ಷವು ಅವಿದ್ಯಾಸ್ತಮಯ ಅಥವಾ ಅವಿದ್ಯಾ ನಾಶರೂಪವಾದದ್ದಾಗಲಿಲ್ಲ; ಅದಕ್ಕೆ ವಿರುದ್ಧವಾಗಿ ವಿದ್ಯಾಸ್ತಮಯ ಅಥವಾ ವಿದ್ಯಾನಾಶ ರೂಪವಾಗಿಬಿಟ್ಟಿತು!

**ನಾಪಿ ದುಃಖಸ್ಯ ವಿಧ್ವಂಸಃ ಸುಖಸ್ಯ ಧ್ವಂಸ ಏವ ಸಃ ।**
**ಏಕಾಕೀ ರಮತೇ ನಾಸೌ ಕಥಂ ಕಾಮಾಂಶ್ಚ ಸೋಽಶ್ನುತೇ ॥ ೪೪೯ ॥**

**ಅರ್ಥ–** ಸಃ= ಆ ಮೋಕ್ಷವು, ದುಃಖಸ್ಯ= ದುಃಖದ, ವಿಧ್ವಂಸಃ ಅಪಿ= ನಾಶರೂಪವಾದದ್ದೂ ಸಹ, ನ= ಅಲ್ಲ (ಮತ್ತೇನೆಂದರೆ), ಸುಖಸ್ಯ= ಸುಖದ, ಧ್ವಂಸ ಏವ= ನಾಶ ರೂಪವಾದದ್ದೇ (ಆಯಿತು), ಏಕಾಕೀ= ಒಬ್ಬಂಟಿಗನಾದ, ಅಸೌ= ಮುಕ್ತನು, ನ ರಮತೇ= ಸುಖಿಸುವುದಿಲ್ಲ, ಸಃ= ಆ ಮುಕ್ತನು, ಕಥಂ= ಹೇಗೆ, ಕಾಮಾನ್= ವಿಷಯಗಳನ್ನು, ಅಶ್ನುತೇ= ಭೋಗಿಸುತ್ತಾನೆ!

**ಅನುವಾದ–** ಅಂತಹ ಮೋಕ್ಷದಲ್ಲಿ ದುಃಖದ ಧ್ವಂಸವೂ ಇಲ್ಲ. ಸುಖದ ಧ್ವಂಸವೇ ಉಂಟಾಗುತ್ತದೆ. ಏಕಾಕಿಯಾದ ಅವನು ಸುಖವನ್ನು ಅನುಭವಿಸುವುದಿಲ್ಲ. ಮತ್ತು ಏಕಾಕಿಯಾದ ಅವನು ಯಾವ ಕಾಮಭೋಗವನ್ನು ಹೊಂದುವುದಿಲ್ಲ.

**ಭಾವವಿಲಾಸಿನೀ–** ಸುಖಧ್ವಂಸಮೇವೋಪಪಾದಯತಿ ॥ **ಏಕಾಕೀತಿ** ॥ ಅನೇನ ತಸ್ಮಾದೇಕಾಕೀ ನ ರಮತ ಇತಿ ಶ್ರುತಿಂ ಸೂಚಯತಿ । ಸೋಽಶ್ನುತೇ ಸರ್ವಾನ್ ಕಾಮಾನಿತಿ ಶ್ರುತಿಸೂಚನಾಯ ಸೋಽಶ್ನುತ ಇತ್ಯುಕ್ತಮ್ ॥ ೪೪೯ ॥

**ವಿವರಣೆ–** ಮೋಕ್ಷದಲ್ಲಿ ಜ್ಞಾನವಾಗಲೀ, ಭೋಗವಾಗಲೀ ಇಲ್ಲ ಎಂದಿದ್ದರಿಂದ ಒದಗಿದ ಮತ್ತೊಂದು ಅನಿಷ್ಟವನ್ನು ಆಪಾದನೆ ಮಾಡುತ್ತಾರೆ. ಮೋಕ್ಷದಲ್ಲಿ ಜ್ಞಾನವೇ ಇಲ್ಲ ಎಂದಾಗ, ಮೋಕ್ಷವು ದುಃಖನಾಶರೂಪವಾದದ್ದಲ್ಲ, ಸುಖನಾಶರೂಪವಾದದ್ದು ಎಂದಾಗುತ್ತದೆ. ಏಕೆಂದರೆ, 'ಮಗ್ನಸ್ಯ ಹಿ ಪರೇಽಜ್ಞಾನೇ ಕಿಂ ನ ದುಃಖತರಂ ಭವೇತ್' ಎಂದು ಪ್ರಮಾಣವಿದೆ. ನಮ್ಮ ಅನುಭವವೂ ಹಾಗೇ ಇದೆ. ಯಾವುದಾದರೂ ಒಂದು ಇಂದ್ರಿಯದ ಪಾಟವವು ಕಡಿಮೆಯಾದರೂ, ನಮಗೆ ಅಷ್ಟು ಜ್ಞಾನದ ಕೊರತೆಯಿಂದ ದುಃಖವಾಗುತ್ತದೆ. ಹೀಗಿರುವಾಗ, ಮೋಕ್ಷದಲ್ಲಿ ಯಾವ ಇಂದ್ರಿಯವೂ ಇಲ್ಲ, ಯಾವ

ಜ್ಞಾನವೂ ಇಲ್ಲ ಎಂದಾಗಿ ಬಿಟ್ಟರೆ, ಅದು ಮಹಾದುಃಖಮಯ ಆಗುತ್ತದೆ. ಆದ್ದರಿಂದ, ಸುಖಧ್ವಂಸರೂಪವಾಗಿ ಬಿಡುತ್ತದೆ.

ಮೋಕ್ಷದಲ್ಲಿ ಆತ್ಮನೊಬ್ಬನೇ ಇದ್ದಾನೆ ಎಂದು ಒಪ್ಪಿದರೂ, ಸುಖಧ್ವಂಸರೂಪವಾದದ್ದು ಎಂದಾಗುತ್ತದೆ. ಹೇಗೆಂದರೆ, ಬೃಹದಾರಣ್ಯಕ ಉಪನಿಷತ್ತಿನಲ್ಲಿ, 'ಬ್ರಹ್ಮದೇವರು ಒಬ್ಬರೇ ಇದ್ದಾಗ ರಮಿಸಲಿಲ್ಲ; ತಮಗೆ ದ್ವಿತೀಯಳಾದ ಸರಸ್ವತೀದೇವಿಯನ್ನು ಸೃಷ್ಟಿಸಿ ರಮಿಸಿದರು' ಎಂದಿದೆ. ಹೀಗೆ ಒಬ್ಬಂಟಿಗನು ರಮಿಸಲಾರನಾದ್ದರಿಂದ ಮೋಕ್ಷದಲ್ಲಿ ಸುಖವಿಲ್ಲ ಎಂದಾಗುತ್ತದೆ. ಅಷ್ಟು ಮಾತ್ರವಲ್ಲ; ತೈತ್ತಿರೀಯ ಶ್ರುತಿಯು, 'ಮುಕ್ತನು ಎಲ್ಲಾ ಕಾಮಗಳನ್ನೂ ಹೊಂದುತ್ತಾನೆ' ಎನ್ನುತ್ತದೆ. ಆತ್ಮನನ್ನು ಬಿಟ್ಟು ಬೇರೆ ವಸ್ತುವೇ ಇಲ್ಲದಿದ್ದಾಗ, ಇದು ಹೇಗೆ ಸಾಧ್ಯ?

ಇತ್ಯಾಕ್ಷಿಪಂತೀ ಶೂನ್ಯತ್ವಮೋಕ್ಷಂ ಸರ್ವಾನಪೇಕ್ಷಿತಮ್ ।
ವೈಕುಂಠಾಖ್ಯಂ ಮಹಾಮೋಕ್ಷಂ ಯತ್ರ ದ್ವೈತಮಿವೇತಿ ವಾಕ್ ।
ನಿರಣೀನಯದೇವೇಯಂ ಯತೋ ನಾವರ್ತತೇ ಯತಿಃ ॥ ೪೫೦ ॥

**ಅರ್ಥ**– ಇತಿ= ಈ ಪ್ರಕಾರ, ಸರ್ವಾನಪೇಕ್ಷಿತಂ= ಎಲ್ಲರಿಂದ ಇಚ್ಛಿಸಲ್ಪಡದಿರುವ, ಶೂನ್ಯತ್ವ ಮೋಕ್ಷಂ= ಶೂನ್ಯಭಾವರೂಪವಾದ ಮೋಕ್ಷವನ್ನು, ಆಕ್ಷಿಪಂತೀ= ಆಕ್ಷೇಪ ಮಾಡತಕ್ಕ, ಯತ್ರದ್ವೈತಮಿವ ಇತಿ ವಾಕ್= ಯತ್ರದ್ವೈತಮಿವ ಎಂಬ ವೇದವಾಣಿಯು, ವೈಕುಂಠಾಖ್ಯಂ= ವೈಕುಂಠವೆಂಬ, ಮಹಾಮೋಕ್ಷಮೇವ= ಪರಮಮೋಕ್ಷವನ್ನೇ, ನಿರಣೀನಯತ್= ನಿರ್ಣಯ ಮಾಡಿತು, ಯತಃ= ಯಾವ ವೈಕುಂಠಲೋಕದ ದೆಸೆಯಿಂದ, ಯತಿಃ= ಪ್ರಯತ್ನಶೀಲನಾದ ಮುಕ್ತನು, ನಾವರ್ತತೇ= ಹಿಂದಿರುಗುವುದಿಲ್ಲವೋ.

**ಅನುವಾದ**– ಹೀಗೆ ಯತ್ರದ್ವೈತಂ ಎಂಬ ಶ್ರುತಿಯು ಯಾರಿಗೂ ಬೇಡದ ಶೂನ್ಯಭಾವ-ರೂಪವಾದ ಮೋಕ್ಷವನ್ನು ಆಕ್ಷೇಪಿಸಿ ಯಾವ ವೈಕುಂಠಕ್ಕೆ ಹೋದ ಜೀವನು ಪುನಃ ಹಿಂದಿರುಗಿ ಬರುವುದಿಲ್ಲವೋ ಅಂತಹ ವೈಕುಂಠವೆಂಬ ಮಹಾಮೋಕ್ಷವನ್ನು ನಿರ್ಣಯಿಸಿತು.

**ಭಾವವಿಲಾಸಿನೀ**– ಯತೋ ವೈಕುಂಠಲೋಕಾತ್ । ಯತ್ರ ನಾರಾಯಣಃ ಸಾಕ್ಷಾದ್ಯತೋ ನಾವರ್ತತೇ ಯತಿರಿತಿ ವಾಕ್ಯಸೂಚನಾಯೇತ್ಥಮುಕ್ತಮ್ । ಕಿಂಚ "ನಾಸ್ತಿ ವಿಷ್ಣೋಃ ಪರಂ ಸ್ಥಾನಂ ನಾಸ್ತಿ ವಿಷ್ಣೋಃ ಪರಂತಪಃ ನಾಸ್ತಿ ವಿಷ್ಣೋಃ ಪರಂ ಧ್ಯಾನಂ ನಾಸ್ತಿ ಮೋಕ್ಷೋ ಹ್ಯವೈಷ್ಣವ" ಇತಿ ವಾಸುದೇವಸಹಸ್ರನಾಮಸ್ಥ ರುದ್ರವಾಕ್ಯೇನ ವಿಷ್ಣುಸಂಬಂಧರಹಿತಮೋಕ್ಷಸ್ಯ ದೂಷಿತತಯಾ ತತ್ ಸಂಬಂಧೇ ಸಕಲಸಂಪತ್ಸಮೇತವೈಕುಂಠಸ್ಯೈವ ಪರಮೋಕ್ಷತ್ವಾದ್ಯತ್ರತ್ವಸ್ಯೇತಿ ವಾಕ್ಯಮುಕ್ತವಿಧಯಾ ವಿಶೇಷಸಮರ್ಥನಪರತಯಾ ಯೋಜನೀಯಮ್ ॥ ೪೫೦ ॥

**ವಿವರಣೆ–** ಯಾರೂ ಅಪೇಕ್ಷಿಸದ ಮೋಕ್ಷವನ್ನು ವೇದವು ವರ್ಣಿಸುತ್ತದೆ ಎಂದು ಹೇಳಿದರೆ, ವೇದಕ್ಕೆ ಅಪ್ರಾಮಾಣ್ಯ ಬರುತ್ತದೆ ಎಂದು ಹೇಳಲಾಗಿದೆ. ಹೀಗೆ ಯಾರೂ ಅಪೇಕ್ಷಿಸದ ಶೂನ್ಯಭಾವರೂಪಮೋಕ್ಷವನ್ನು ವೇದವು ಆಕ್ಷೇಪ ಮಾಡುತ್ತದೆ. ಎಲ್ಲವೂ ಆತ್ಮವೇ ಆಗಿಬಿಟ್ಟಾಗ ಯಾರು ಯಾರನ್ನು ನೋಡಲಾಗುತ್ತದೆ ಇತ್ಯಾದಿಯಾಗಿ. ಆದ್ದರಿಂದ ಇದೇ ಅನುವಾಕದಲ್ಲಿರುವ 'ಯತ್ರ ದ್ವೈತಮಿವ' ಎಂಬ ವಚನವು ವಿಶೇಷಪರವಾಗಿದ್ದು, ಈ ಅನುವಾಕವು ವೈಕುಂಠವೆಂಬ ಮಹಾಮೋಕ್ಷವನ್ನೇ ನಿರ್ಣಯಮಾಡುತ್ತದೆ. ವೈಕುಂಠ ಲೋಕಕ್ಕೆ ಹೋದವನು ಹಿಂದಿರುಗುವುದಿಲ್ಲವೆಂಬ ಭಾಗವತವಾಕ್ಯವೂ ಸಹ ವೈಕುಂಠವೇ ಪರಮಸ್ಥಾನವೆಂದು ತಿಳಿಸುತ್ತಿದೆ. ವಾಸುದೇವ ಸಹಸ್ರನಾಮದಲ್ಲಿಯೂ ಸಹ ರುದ್ರದೇವರು ವಿಷ್ಣುಸ್ಥಾನವೇ ಪರಮಸ್ಥಾನ; ವಿಷ್ಣುಸಂಬಂಧವಿಲ್ಲದ ಮೋಕ್ಷವೇ ಇಲ್ಲ ಎಂದು ಹೇಳಿದ್ದಾರೆ. ಇದರಿಂದಲೂ, ವಿಷ್ಣುಸ್ಥಾನವಾದ ವೈಕುಂಠವೇ ಪರಮ-ಮೋಕ್ಷವಾಯಿತು. ಆದ್ದರಿಂದ ಬೃಹದಾರಣ್ಯಕವಾಕ್ಯವನ್ನು ವಿಶೇಷ ಪರವಾಗಿಯೇ ವ್ಯಾಖ್ಯಾನಿಸಬೇಕು ಹೊರತಾಗಿ, ಅದ್ವೈತ ಪರವಾಗಲ್ಲ.

ಯತಃ ಎಂಬುದಕ್ಕೆ ಯಾವ ವೈಕುಂಠ ಲೋಕದಿಂದ ಎಂದರ್ಥ. 'ಯತ್ರ ... ಯತಃ' ಎಂಬ ಭಾಗವತ ವಾಕ್ಯವನ್ನು ಸೂಚಿಸುವುದಕ್ಕೋಸ್ಕರ ಶ್ಲೋಕದಲ್ಲೂ 'ಯತೋ ನಾವರ್ತತೇ ಯತಃ' ಎಂದು ಹೇಳಿದ್ದಾರೆ. ಮತ್ತೇನೆಂದರೆ, ವಿಷ್ಣುವಿನ ಸ್ಥಾನಕ್ಕಿಂತ ಉತ್ತಮ ಸ್ಥಾನವಿಲ್ಲ, ವಿಷ್ಣುವಿನ ಧ್ಯಾನಕ್ಕಿಂತ ಉತ್ತಮವಾದ ಧ್ಯಾನವಿಲ್ಲ; ವಿಷ್ಣು ಸಂಬಂಧವಿಲ್ಲದ ಮೋಕ್ಷವಿಲ್ಲ' ಎಂದು ವಾಸುದೇವ ಸಹಸ್ರನಾಮದಲ್ಲಿ ರುದ್ರದೇವರ ವಾಕ್ಯವಿದೆ. ಇದರಿಂದ, ವಿಷ್ಣು ಸಂಬಂಧರಹಿತವಾದ ಮೋಕ್ಷವನ್ನು ದೂಷಿಸಿರುವುದರಿಂದ, ಸಕಲ ಸಂಪತ್ತಿನಿಂದ ಕೂಡಿದ ವೈಕುಂಠವೇ ಪರಮ ಮೋಕ್ಷವಾದ್ದರಿಂದ, 'ಯತ್ರತ್ವಸ್ಯ' ಎಂಬ ವಾಕ್ಯವನ್ನು ಹಿಂದೆ ಹೇಳಿದಂತೆ ವಿಶೇಷ ಸಮರ್ಥನ ಪರವಾಗಿ ಯೋಜನೆ ಮಾಡಬೇಕು.

**ವಿಶೇಷವೀಕ್ಷಿತಾತ್ಮೇತಿ ಯತೋ ಭಾಗವತೇ ರಮಾ ।**
**ವಿಶೇಷಾಣಾಂ ಚಾಧಿಪತಿಂ ಗೃಣೀತೇ ಸ್ವಪತಿಂ ಸ್ಫುಟಂ ॥ ೪೫೧ ॥**

**ಅರ್ಥ–** ಯತಃ= ಯಾವಕಾರಣದಿಂದ, ಭಾಗವತೇ= ಭಾಗವತದಲ್ಲಿ, ರಮಾ= ಲಕ್ಷ್ಮೀದೇವಿಯು, ವಿಶೇಷಣಾಂ= ವಿಶೇಷಗಳ, ಅಧಿಪತಿಂ= ಸ್ವಾಮಿಯಾದ, ಸ್ವಪತಿಂ= ತನ್ನ ಗಂಡನನ್ನು, ಸ್ಫುಟಂ= ಸ್ಪಷ್ಟವಾಗಿ, ವಿಶೇಷವೀಕ್ಷಿತಾತ್ಮಾ ಇತಿ= ವಿಶೇಷದಿಂದ ನೋಡಲ್ಪಟ್ಟ ಸ್ವರೂಪವುಳ್ಳವನೇ! ಎಂದು, ಗೃಣೀತೇ= ಸ್ತುತಿಸಿದ್ದಾಳೆ.

**ಅನುವಾದ–** ಭಾಗವತ ಪಂಚಮಸ್ಕಂಧದಲ್ಲಿ ರಮಾದೇವಿಯು ಸರ್ವವಿಶೇಷ-ವೀಕ್ಷಿತಾತ್ಮನೇ ಎಂದು ತನ್ನ ಪತಿಯನ್ನು ವಿಶೇಷಗಳಿಗೆ ಅಧಿಪತಿಯಾದವನು ಎಂದು ಸ್ಪಷ್ಟವಾಗಿ ಸ್ತೋತ್ರಮಾಡುತ್ತಾಳೆ.

ಜ್ಞಾನವೂ ಇಲ್ಲ ಎಂದಾಗಿ ಬಿಟ್ಟರೆ, ಅದು ಮಹಾದುಃಖಮಯ ಆಗುತ್ತದೆ. ಆದ್ದರಿಂದ, ಸುಖಧ್ವಂಸರೂಪವಾಗಿ ಬಿಡುತ್ತದೆ.

ಮೋಕ್ಷದಲ್ಲಿ ಆತ್ಮನೊಬ್ಬನೇ ಇದ್ದಾನೆ ಎಂದು ಒಪ್ಪಿದರೂ, ಸುಖಧ್ವಂಸರೂಪವಾದದ್ದು ಎಂದಾಗುತ್ತದೆ. ಹೇಗೆಂದರೆ, ಬೃಹದಾರಣ್ಯಕ ಉಪನಿಷತ್ತಿನಲ್ಲಿ, 'ಬ್ರಹ್ಮದೇವರು ಒಬ್ಬರೇ ಇದ್ದಾಗ ರಮಿಸಲಿಲ್ಲ; ತಮಗೆ ದ್ವಿತೀಯಳಾದ ಸರಸ್ವತೀದೇವಿಯನ್ನು ಸೃಷ್ಟಿಸಿ ರಮಿಸಿದರು' ಎಂದಿದೆ. ಹೀಗೆ ಒಬ್ಬಂಟಿಗನು ರಮಿಸಲಾರನಾದ್ದರಿಂದ ಮೋಕ್ಷದಲ್ಲಿ ಸುಖವಿಲ್ಲ ಎಂದಾಗುತ್ತದೆ. ಅಷ್ಟು ಮಾತ್ರವಲ್ಲ; ತೈತ್ತಿರೀಯ ಶ್ರುತಿಯು, 'ಮುಕ್ತನು ಎಲ್ಲಾ ಕಾಮಗಳನ್ನೂ ಹೊಂದುತ್ತಾನೆ' ಎನ್ನುತ್ತದೆ. ಆತ್ಮನನ್ನು ಬಿಟ್ಟು ಬೇರೆ ವಸ್ತುವೇ ಇಲ್ಲದಿದ್ದಾಗ, ಇದು ಹೇಗೆ ಸಾಧ್ಯ?

ಇತ್ಯಾಕ್ಷಿಪಂತೀ ಶೂನ್ಯತ್ವಮೋಕ್ಷಂ ಸರ್ವಾನಪೇಕ್ಷಿತಮ್ ।
ವೈಕುಂಠಾಖ್ಯಂ ಮಹಾಮೋಕ್ಷಂ ಯತ್ರ ದ್ವೈತಮಿವೇತಿ ವಾಕ್ ।
ನಿರಣೇನಯದೇವೇಯಂ ಯತೋ ನಾವರ್ತತೇ ಯತಿಃ ॥ ೪೫೦ ॥

**ಅರ್ಥ–** ಇತಿ= ಈ ಪ್ರಕಾರ, ಸರ್ವಾನಪೇಕ್ಷಿತಂ= ಎಲ್ಲರಿಂದ ಇಚ್ಛಿಸಲ್ಪಡದಿರುವ, ಶೂನ್ಯತ್ವ ಮೋಕ್ಷಂ= ಶೂನ್ಯಭಾವರೂಪವಾದ ಮೋಕ್ಷವನ್ನು, ಆಕ್ಷಿಪಂತೀ= ಆಕ್ಷೇಪ ಮಾಡತಕ್ಕ, ಯತ್ರದ್ವೈತಮಿವ ಇತಿ ವಾಕ್= ಯತ್ರದ್ವೈತಮಿವ ಎಂಬ ವೇದವಾಣಿಯು, ವೈಕುಂಠಾಖ್ಯಂ= ವೈಕುಂಠವೆಂಬ, ಮಹಾಮೋಕ್ಷಮೇವ= ಪರಮಮೋಕ್ಷವನ್ನೇ, ನಿರಣೇನಯತ್= ನಿರ್ಣಯ ಮಾಡಿತು, ಯತಃ= ಯಾವ ವೈಕುಂಠಲೋಕದ ದೆಸೆಯಿಂದ, ಯತಃ= ಪ್ರಯತ್ನಶೀಲನಾದ ಮುಕ್ತನು, ನಾವರ್ತತೇ= ಹಿಂದಿರುಗುವುದಿಲ್ಲವೋ.

**ಅನುವಾದ–** ಹೀಗೆ ಯತ್ರದ್ವೈತಂ ಎಂಬ ಶ್ರುತಿಯು ಯಾರಿಗೂ ಬೇಡದ ಶೂನ್ಯಭಾವ-ರೂಪವಾದ ಮೋಕ್ಷವನ್ನು ಆಕ್ಷೇಪಿಸಿ ಯಾವ ವೈಕುಂಠಕ್ಕೆ ಹೋದ ಜೀವನು ಪುನಃ ಹಿಂದಿರುಗಿ ಬರುವುದಿಲ್ಲವೋ ಅಂತಹ ವೈಕುಂಠವೆಂಬ ಮಹಾಮೋಕ್ಷವನ್ನು ನಿರ್ಣಯಿಸಿತು.

**ಭಾವವಿಲಾಸಿನೀ–** ಯತೋ ವೈಕುಂಠಲೋಕಾತ್ । ಯತ್ರ ನಾರಾಯಣಃ ಸಾಕ್ಷಾದ್ಯತೋ ನಾವರ್ತತೇ ಯತಿರಿತಿ ವಾಕ್ಯಸೂಚನಾಯೇತ್ಥಮುಕ್ತಮ್ । ಕಿಂಚ "ನಾಸ್ತಿ ವಿಷ್ಣೋಃ ಪರಂ ಸ್ಥಾನಂ ನಾಸ್ತಿ ವಿಷ್ಣೋಃ ಪರಂತಪಃ ನಾಸ್ತಿ ವಿಷ್ಣೋಃ ಪರಂ ಧ್ಯಾನಂ ನಾಸ್ತಿ ಮೋಕ್ಷೋ ಹ್ಯವೈಷ್ಣವ" ಇತಿ ವಾಸುದೇವಸಹಸ್ರನಾಮಸ್ಥ ರುದ್ರವಾಕ್ಯೇನ ವಿಷ್ಣುಸಂಬಂಧರಹಿತಮೋಕ್ಷಸ್ಯ ದೂಷಿತತಯಾ ತತ್ ಸಂಬಂಧೇ ಸಕಲಸಂಪತ್ಸಮೇತವೈಕುಂಠಸ್ಯೈವ ಪರಮೋಕ್ಷತ್ವಾದ್ಯತ್ರತ್ವಸ್ಯೇತಿ ವಾಕ್ಯಮುಕ್ತವಿಧಯಾ ವಿಶೇಷಸಮರ್ಥನಪರತಯಾ ಯೋಜನೀಯಮ್ ॥ ೪೫೦ ॥

**ವಿವರಣೆ–** ಯಾರೂ ಅಪೇಕ್ಷಿಸದ ಮೋಕ್ಷವನ್ನು ವೇದವು ವರ್ಣಿಸುತ್ತದೆ ಎಂದು ಹೇಳಿದರೆ, ವೇದಕ್ಕೆ ಅಪ್ರಾಮಾಣ್ಯ ಬರುತ್ತದೆ ಎಂದು ಹೇಳಲಾಗಿದೆ. ಹೀಗೆ ಯಾರೂ ಅಪೇಕ್ಷಿಸದ ಶೂನ್ಯಭಾವರೂಪಮೋಕ್ಷವನ್ನು ವೇದವು ಆಕ್ಷೇಪ ಮಾಡುತ್ತದೆ. ಎಲ್ಲವೂ ಆತ್ಮವೇ ಆಗಿಬಿಟ್ಟಾಗ ಯಾರು ಯಾರನ್ನು ನೋಡಲಾಗುತ್ತದೆ ಇತ್ಯಾದಿಯಾಗಿ. ಆದ್ದರಿಂದ ಇದೇ ಅನುವಾಕದಲ್ಲಿರುವ 'ಯತ್ರ ದ್ವೈತಮಿವ' ಎಂಬ ವಚನವು ವಿಶೇಷಪರವಾಗಿದ್ದು, ಈ ಅನುವಾಕವು ವೈಕುಂಠವೆಂಬ ಮಹಾಮೋಕ್ಷವನ್ನೇ ನಿರ್ಣಯಮಾಡುತ್ತದೆ. ವೈಕುಂಠ ಲೋಕಕ್ಕೆ ಹೋದವನು ಹಿಂದಿರುಗುವುದಿಲ್ಲವೆಂಬ ಭಾಗವತವಾಕ್ಯವೂ ಸಹ ವೈಕುಂಠವೇ ಪರಮಸ್ಥಾನವೆಂದು ತಿಳಿಸುತ್ತಿದೆ. ವಾಸುದೇವ ಸಹಸ್ರನಾಮದಲ್ಲಿಯೂ ಸಹ ರುದ್ರದೇವರು ವಿಷ್ಣುಸ್ಥಾನವೇ ಪರಮಸ್ಥಾನ; ವಿಷ್ಣುಸಂಬಂಧವಿಲ್ಲದ ಮೋಕ್ಷವೇ ಇಲ್ಲ ಎಂದು ಹೇಳಿದ್ದಾರೆ. ಇದರಿಂದಲೂ, ವಿಷ್ಣುಸ್ಥಾನವಾದ ವೈಕುಂಠವೇ ಪರಮ-ಮೋಕ್ಷವಾಯಿತು. ಆದ್ದರಿಂದ ಬೃಹದಾರಣ್ಯಕವಾಕ್ಯವನ್ನು ವಿಶೇಷ ಪರವಾಗಿಯೇ ವ್ಯಾಖ್ಯಾನಿಸಬೇಕು ಹೊರತಾಗಿ, ಅದ್ವೈತ ಪರವಾಗಲ್ಲ.

ಯತಃ ಎಂಬುದಕ್ಕೆ ಯಾವ ವೈಕುಂಠ ಲೋಕದಿಂದ ಎಂದರ್ಥ. 'ಯತ್ರ ... ಯತಃ' ಎಂಬ ಭಾಗವತ ವಾಕ್ಯವನ್ನು ಸೂಚಿಸುವುದಕ್ಕೋಸ್ಕರ ಶ್ಲೋಕದಲ್ಲೂ 'ಯತೋ ನಾವರ್ತತೇ ಯತಃ' ಎಂದು ಹೇಳಿದ್ದಾರೆ. ಮತ್ತೇನೆಂದರೆ, ವಿಷ್ಣುವಿನ ಸ್ಥಾನಕ್ಕಿಂತ ಉತ್ತಮ ಸ್ಥಾನವಿಲ್ಲ, ವಿಷ್ಣುವಿನ ಧ್ಯಾನಕ್ಕಿಂತ ಉತ್ತಮವಾದ ಧ್ಯಾನವಿಲ್ಲ; ವಿಷ್ಣು ಸಂಬಂಧವಿಲ್ಲದ ಮೋಕ್ಷವಿಲ್ಲ' ಎಂದು ವಾಸುದೇವ ಸಹಸ್ರನಾಮದಲ್ಲಿ ರುದ್ರದೇವರ ವಾಕ್ಯವಿದೆ. ಇದರಿಂದ, ವಿಷ್ಣು ಸಂಬಂಧರಹಿತವಾದ ಮೋಕ್ಷವನ್ನು ದೂಷಿಸಿರುವುದರಿಂದ, ಸಕಲ ಸಂಪತ್ತಿನಿಂದ ಕೂಡಿದ ವೈಕುಂಠವೇ ಪರಮ ಮೋಕ್ಷವಾದ್ದರಿಂದ, 'ಯತ್ರತ್ವಸ್ಯ' ಎಂಬ ವಾಕ್ಯವನ್ನು ಹಿಂದೆ ಹೇಳಿದಂತೆ ವಿಶೇಷ ಸಮರ್ಥನ ಪರವಾಗಿ ಯೋಜನೆ ಮಾಡಬೇಕು.

**ವಿಶೇಷವೀಕ್ಷಿತಾತ್ಮೇತಿ ಯತೋ ಭಾಗವತೇ ರಮಾ ।**
**ವಿಶೇಷಾಣಾಂ ಚಾಧಿಪತಿಂ ಗೃಣೀತೇ ಸ್ವಪತಿಂ ಸ್ಫುಟಂ ॥ ೪೫೧ ॥**

**ಅರ್ಥ–** ಯತಃ= ಯಾವಕಾರಣದಿಂದ, ಭಾಗವತೇ= ಭಾಗವತದಲ್ಲಿ, ರಮಾ= ಲಕ್ಷ್ಮೀದೇವಿಯು, ವಿಶೇಷಣಾಂ= ವಿಶೇಷಗಳ, ಅಧಿಪತಿಂ= ಸ್ವಾಮಿಯಾದ, ಸ್ವಪತಿಂ= ತನ್ನ ಗಂಡನನ್ನು, ಸ್ಫುಟಂ= ಸ್ಪಷ್ಟವಾಗಿ, ವಿಶೇಷವೀಕ್ಷಿತಾತ್ಮಾ ಇತಿ= ವಿಶೇಷದಿಂದ ನೋಡಲ್ಪಟ್ಟ ಸ್ವರೂಪವುಳ್ಳವನೇ! ಎಂದು, ಗೃಣೀತೇ= ಸ್ತುತಿಸಿದ್ದಾಳೆ.

**ಅನುವಾದ–** ಭಾಗವತ ಪಂಚಮಸ್ಕಂಧದಲ್ಲಿ ರಮಾದೇವಿಯು ಸರ್ವವಿಶೇಷ-ವೀಕ್ಷಿತಾತ್ಮನೇ ಎಂದು ತನ್ನ ಪತಿಯನ್ನು ವಿಶೇಷಗಳಿಗೆ ಅಧಿಪತಿಯಾದವನು ಎಂದು ಸ್ಪಷ್ಟವಾಗಿ ಸ್ತೋತ್ರಮಾಡುತ್ತಾಳೆ.

**ಭಾವವಿಲಾಸಿನೀ–** ಅಪಿ ಚ "ಓಂ ನಮೋ ಭಗವತೇ ಹೃಷೀಕೇಶಾಯ ಸರ್ವವಿಶೇಷವೀಕ್ಷಿತಾತ್ಮನ ಆಕೂತೀನಾಂ ಚಿತ್ತಾನಾಂ ಚೇತಸಾಂ ವಿಶೇಷಣಾಮಧಿಪತಯ" ಇತಿ ಭಾಗವತಸ್ಥರಾಮವಾಕ್ಯೇ ಸ್ಪಷ್ಟಂ ಭಗವತಿ ವಿಶೇಷಸ್ಯ ಶಕ್ತ್ಯಾ ವೀಕ್ಷಿತ್ರಾತ್ಮತ್ವಸ್ಯ ಸಮರ್ಥಿತತಾತ್ತತ್ಪರೈವೇಯಂ ಶ್ರುತಿರಿತ್ಯಾಹ **– ವಿಶೇಷೇತಿ** ॥ ಅನೇನ ಸರ್ವವಿಶೇಷ ವೀಕ್ಷಿತತ್ರಾತ್ಮನ ಇತಿ ಪದ ಮುಪಾದತ್ತೇ ಸರ್ವೇಣ ಸಕಲಸ್ವ ಚಕ್ಷುರಾದಿಂದ್ರಿಯಾಗತೇನ ವಿಶೇಷವೀಕ್ಷಿತಾತ್ಮಾ ವಿಶೇಷಬಲೇನೇತ್ಯರ್ಥಃ । ವೀಕ್ಷಿತಃ ಸ್ವರೂಪಭೂತವೀಕ್ಷಣ ಕರ್ತಾऽऽತ್ಮಾಸ್ವರೂಪಂ ಯಸ್ಯ ಸ ತಥೋಕ್ತಃ ॥೪೫೧॥

ಅತೋ ಹರೌ ವಿಶೇಷೋಽಸ್ತಿ ತನ್ನಿಯಮ್ಯಶ್ಚ ದೇಹಿಷು ।
ಕಥಂ ನಾಭೂದ್ ವಿಶೇಷೋಽಯಂ ಯೋ ವಿಶಿಷ್ಟ್ಯೈವ ಗೀಯತೇ ।
ಅತೋ ದ್ವೈತಮಿಮೇತ್ಯುಕ್ತೋ ದ್ವೈತಪ್ರತಿನಿಧಿರ್ಹಿ ಸಃ ॥ ೪೫೨ ॥

**ಅರ್ಥ–** ಅತಃ= ಆದ್ದರಿಂದ, ಹರೌ= ಶ್ರೀಹರಿಯಲ್ಲಿ, ವಿಶೇಷಃ= ವಿಶೇಷವು, ಅಸ್ತಿ= ಇದೆ, ತನ್ನಿಯಮ್ಯಶ್ಚ= ಭಗವಂತನಿಂದ ನಿಯಮ್ಯವಾದ ವಿಶೇಷವು, ದೇಹಿಷು= ಜೀವರಲ್ಲಿ, ಅಸ್ತಿ= ಇದೆ. ಯಃ= ಯಾವ ವಿಶೇಷವು, ವಿಶಿಷ್ಟ್ಯೈವಗೀಯತೇ= ವಿಶೇಷ ಎಂಬುದಾಗಿಯಾಗಿಯೇ ಹೇಳಲ್ಪಡುತ್ತದೆಯೋ ಅಂತಹ, ಅಯಂ ವಿಶೇಷಃ= ಈ ವಿಶೇಷವು, ಕಥಂ ನಾಭೂತ್= ಹೇಗೆ ಇಲ್ಲವೆಂದು ಹೇಳುವುದು? ಅತಃ= ಆದ್ದರಿಂದ, ದ್ವೈತಮಿವ ಇತ್ಯುಕ್ತಃ= ದ್ವೈತದಂತೆ ಎಂದು ಹೇಳಲ್ಪಟ್ಟ ಸಃ= ಆ ವಿಶೇಷವು, ದ್ವೈತಪ್ರತಿನಿಧಿ ರ್ಹಿ= ದ್ವೈತದ ಪ್ರತಿನಿಧಿಯಾಗಿದೆಯಷ್ಟೆ.

**ಅನುವಾದ–** ಆದ್ದರಿಂದ ಹರಿಯಲ್ಲಿ ವಿಶೇಷವಿದೆ. ಉಳಿದ ಜೀವರಲ್ಲಿಯೂ ಹರಿಯಿಂದ ನಿಯಮ್ಯವಾದ ವಿಶೇಷವಿದೆ. ಯಾವುದು ಸ್ಪಷ್ಟವಾಗಿ ವಿಶೇಷವೀಕ್ಷಿತಾತ್ಮನೇ ಎಂದು ಹೇಳಲ್ಪಡುತ್ತದೆಯೋ, ಅದು ವಿಶೇಷವಲ್ಲದೇ ಬೇರೆ ಯಾವುದು ಆಗಲು ಸಾಧ್ಯ? ಆದ್ದರಿಂದ ಯತ್ರದ್ವೈತಮಿವ ಎಂಬ ಶ್ರುತಿಯಲ್ಲಿ ದ್ವೈತಮಿವ ಎಂಬ ಶಬ್ದದಿಂದ ಹೇಳಲ್ಪಟ್ಟದ್ದು ಭೇದಪ್ರತಿನಿಧಿಯಾದ ವಿಶೇಷವೇ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಅತಃ ಸ್ಪಷ್ಟಸ್ಮೃತಿಸಿದ್ಧತ್ವಾತ್ । ಯೋಗವಿಶೇಷಃ ॥ ೪೫೨ ॥

ಸಾರೂಪ್ಯಂ ಚೈವ ಸಾಲೋಕ್ಯಂ ಸಾಮೀಪ್ಯಂ ಯೋಗ ಏವ ಚ । •
ಮುಕ್ತಿಶ್ಚತುರ್ವಿಧಾ ಪ್ರೋಕ್ತಾ ಭೇದಾಪೇಕ್ಷಾ ಹಿ ಸಾಽಖಿಲಾ ॥ ೪೫೩ ॥

ಕುಚೋದ್ಯಕೃದವದ್ಯಾರ್ಥೀ ದೃಶ್ಯಮರ್ಥಂ ನ ಪಶ್ಯತಿ ।
ಕಿಂ ಯೋಗಾರ್ಥಕಧಾತೂತ್ಥಾಂ ಸಾಯುಜ್ಯಾಖ್ಯಾಂ ವಿದುಃ ಖಲಾಃ ॥೪೫೪॥

ಯುಜಿರ್ಯೋಗೇ ಸಹಯುಜೌ ಸಯುಜೌ ಶಬ್ದವಿನ್ಮತೇ ।
ತಯೋರ್ಭಾವಶ್ಚ ಸಾಯುಜ್ಯಂ ಕಥಮೈಕ್ಯಮಿಹೋಚ್ಯತೇ ॥ ೪೫೫ ॥

**ಅರ್ಥ–** ಮುಕ್ತಿಃ= ಮುಕ್ತಿಯು ಸಾರೂಪ್ಯಂಚೈವ= ಸಾರೂಪ್ಯ ಎಂಬುದಾಗಿಯೂ, ಸಾಲೋಕ್ಯಂ= ಸಾಲೋಕ್ಯ ಎಂಬುದಾಗಿಯೂ, ಸಾಮೀಪ್ಯಂ= ಸಾಮೀಪ್ಯ ಎಂಬುದಾಗಿಯೂ, ಚತುರ್ವಿಧಾ= ನಾಲ್ಕು ವಿಧವಾಗಿ, ಪ್ರೋಕ್ತ= ಹೇಳಲ್ಪಟ್ಟಿದೆ. ಸಾಽಖಿಲಾ= ಆ ಎಲ್ಲ ವಿಧದ ಮೋಕ್ಷವು, ಭೇದಾಪೇಕ್ಷಾ ಹಿ= ಭೇದದ ಅಪೇಕ್ಷೆ ಉಳ್ಳದ್ದೇ ಆಗಿದೆ.

ಕುಚೋದ್ಯಕೃತ್= ಕುಚೋದ್ಯವನ್ನು ಮಾಡುವ, ಅವದ್ಯಾರ್ಥೀ= ದೋಷವನ್ನೇ ಬಯಸುವ ವ್ಯಕ್ತಿಯು, ದೃಶ್ಯಮರ್ಥಂ= ನೋಡಬೇಕಾದ ಅರ್ಥವನ್ನು, ನ ಪಶ್ಯತಿ= ನೋಡುವುದಿಲ್ಲ. ಹೀಗಿರಲು ಖಲಾಃ= ದುಷ್ಟರು ಯೋಗಾರ್ಥಕಧಾತೂತ್ಥಾಂ= ಯೋಗಾರ್ಥಕಧಾತುವಿನಿಂದ ನಿಷ್ಪನ್ನವಾದ, ಸಾಯುಜ್ಯಾಖ್ಯಾಂ= ಸಾಯುಜ್ಯ ಎಂಬ ಹೆಸರನ್ನು, ಕಿಂ ವಿದುಃ= ತಿಳಿದಿದ್ದಾರೆನು?

ಯುಜಿರ್= ಯುಜಿರ್ ಎಂಬ ಧಾತುವು, ಯೋಗೇ= ಯೋಗ ಎಂಬ ಅರ್ಥದಲ್ಲಿದೆ, ಶಬ್ದವಿನ್ಮತೇ= ವ್ಯಾಕರಣಶಾಸ್ತ್ರವನ್ನು ತಿಳಿದವರ ಮತದಲ್ಲಿ, ಸಹಯುಜೌ= ಒಟ್ಟಿಗೇ ಇರತಕ್ಕವರು, ಸಯುಜೌ= ಸಯಜರೆನಿಸುತ್ತಾರೆ, ತಯೋಃ= ಅವರಿಬ್ಬರ, ಭಾವಶ್ಚ= ಭಾವವಾದರೋ, ಸಾಯುಜ್ಯಂ= ಸಾಯುಜ್ಯ ಎನಿಸುತ್ತದೆ. ಇಹ= ಈ ಮೋಕ್ಷದಲ್ಲಿ, ಐಕ್ಯಂ= ಐಕ್ಯವು, ಕಥಂ= ಹೇಗೆ, ಉಚ್ಯತೇ= ಹೇಳಲ್ಪಡುತ್ತದೆ? ಅನು= ವ್ಯಾಕರಣ ಶಾಸ್ತ್ರದಂತೆ ಸಾಯುಜ್ಯ ಎಂಬುದಕ್ಕೆ ಒಟ್ಟಿಗೆ ಇಡೋಣ ಎಂದು ಅರ್ಥವಾಗುತ್ತದೆ.

**ಅನುವಾದ–** **ಮೋಕ್ಷವು ಸಾರೂಪ್ಯ, ಸಾಲೋಕ್ಯ, ಸಾಮೀಪ್ಯ ಮತ್ತು ಯೋಗ (ಸಾಯುಜ್ಯ) ಎಂದು ನಾಲ್ಕುವಿಧವಾದುದು. ಈ ನಾಲ್ಕುವಿಧವಾದ ಮೋಕ್ಷವೂ ಸಹ ಭೇದವನ್ನೇ ಅಪೇಕ್ಷಿಸುತ್ತದೆ. ದೋಷವನ್ನೇ ಹೇಳಲು ಬಯಸಿ ಕುಚೋದ್ಯವನ್ನು ಮಾಡುವವನು ಕಣ್ಣಿಗೆ ಕಾಣುವ ವಸ್ತುವನ್ನೂ ನೋಡುವುದಿಲ್ಲ. . ಸಾಯುಜ್ಯ ಎಂಬ ಶಬ್ದದಲ್ಲಿ ಸಂಬಂಧಾರ್ಥದಲ್ಲಿರುವ ಯುಜಿರ್‌ಯೋಗೇ ಎಂಬ ಧಾತುವನ್ನು ಖಳರು ನೋಡುತ್ತಾರೆಯೇ? ಯುಜಿರ್ ಎಂಬ ಧಾತುವು ಯೋಗ ಎಂದರೆ ಸಂಬಂಧ ಎಂಬ ಅರ್ಥದಲ್ಲಿದೆ. ಸಯುಜೌ ಎಂದರೆ ಶಬ್ದಾರ್ಥವನ್ನು ತಿಳಿದವರ ದೃಷ್ಟಿಯಲ್ಲಿ ಸಹ ಯುಜೌ- ಜೊತೆಯಲ್ಲಿ ಸೇರಿರುವವರು ಎಂದು ಅರ್ಥ. ಸಯುಜರ ಭಾವಕ್ಕೆ ಸಾಯುಜ್ಯವೆಂದು ಹೆಸರು. ಆದ್ದರಿಂದ ಸಾಯುಜ್ಯಶಬ್ದದ ಅರ್ಥವಾಗಿ ಐಕ್ಯವು ಹೇಗೆ ಹೇಳಲ್ಪಡುತ್ತದೆ.**

**ಭಾವವಿಲಾಸಿನೀ–** ಅಧುನಾ ಸಾಯುಜ್ಯಶಬ್ದಸ್ಯ ಶಬ್ದಶಕ್ತ್ಯೈಕ್ಯಪರತಾಂ ನಿರಾಕರ್ತುಂ ಸಾಯುಜ್ಯಸ್ಥಾನೇ ಯೋಗಶಬ್ದಪ್ರಯೋಗೋಪೇತಸ್ಮೃತಿವಾಕ್ಯಸ್ಯಾರ್ಥಮೇವ ಪೂರ್ವಾರ್ಧಂ ಕುರ್ವಂಶ್ಚಿಕೀರ್ಷಿತಂ ಪ್ರತಿಜಾನೀತೇ - **ಸಾರೂಪ್ಯಮಿತಿ ॥ ೪೫೩ ॥**

ದೃಶ್ಯಂ ದ್ರಷ್ಟುಂ ಯೋಗ್ಯಮ್ । ಸಾಯುಜ್ಯಾಖ್ಯಾಂ ಸಾಯುಜ್ಯಶಬ್ದಮ್ ॥ ೪೫೪ ॥ ಧಾತುಮೇವ ಪಠನ್ ಶಬ್ದನಿಷ್ಪತ್ತಿಂ ದರ್ಶಯತಿ – ಯುಜಿರ್ಯೋಗ ಇತಿ ॥ ಇಹ ಸಂಬಂಧಾರ್ಥಕತಯಾ ಸರ್ವಜನಪ್ರಸಿದ್ಧಧಾತುನಿಷ್ಪನ್ನಶಬ್ದೇ ॥ ೪೫೫ ॥

**ವಿವರಣೆ–** ವ್ಯಾಕರಣವನ್ನು ಬಲ್ಲವರು ಯಜಿರ್ ಎಂಬ ಧಾತುವನ್ನು ಯೋಗ ಎಂಬ ಅರ್ಥದಲ್ಲಿ ಪ್ರಯೋಗ ಮಾಡುತ್ತಾರೆ. ಸಯುಜೌ ಎಂಬಲ್ಲಿ ಸಹ ಎಂಬುವ ಅರ್ಥದಲ್ಲಿ 'ಸ' ಎಂಬ ಆದೇಶವು ಬಂದಿದೆ. ಹೀಗಾಗಿ ಸಯುಜೌ ಎಂದರೆ ಸಹಯುಜೌ-ಸಹಯೋಗವುಳ್ಳವರು ಎಂದರ್ಥ. ಇದರ ಮೇಲೆ ಭಾವಾರ್ಥಕ ಷ್ಯಞ್ ಪ್ರತ್ಯಯವು ಬಂದು ಸಾಯುಜ್ಯ ಎಂಬ ಪದವು ನಿಷ್ಪನ್ನವಾಗಿದೆ. ಹೀಗಾಗಿ, ಸಾಯುಜ್ಯ ಎಂಬುದಕ್ಕೆ 'ಒಟ್ಟಿಗೇ ಇರೋಣ' ಎಂಬ ಅರ್ಥವು ವ್ಯಾಕರಣಾಭಿಜ್ಞರು ಒಪ್ಪುವ ಅರ್ಥವಾಗಿದೆ. ಆದ್ದರಿಂದ, ಈ ಶಬ್ದಕ್ಕೆ ಐಕ್ಯವೆಂಬ ಅರ್ಥವು ಕೂಡುವುದಿಲ್ಲ. ಹೀಗಾಗಿ, ಮೋಕ್ಷದಲ್ಲಿ ಐಕ್ಯವು ಕೂಡುವುದಿಲ್ಲ.

**ಉಕ್ತಂ ಪುರೈವ ಯದ್ ವ್ಯಾಪ್ತಿಂ ವಕ್ತ್ಯೈಕ್ಯಪದಮಿತ್ಯಪಿ ।**
**ಮುಖ್ಯತ್ವಾನ್ಯತ್ವಾರ್ಥಕಂ ತತ್ ಕಿಲಾತೋ ಹತೋಽಸ್ಯಹೋ ।**
**ಅತಃ ಸಂಯುಕ್ತತೈವಾಸೀತ್ ಸಾಯುಜ್ಯಂ ನ ತ್ವಭಿನ್ನತಾ ॥ ೪೫೬ ॥**

**ಅರ್ಥ–** ಐಕ್ಯಪದಂ ಅಪಿ= ಐಕ್ಯ ಎಂಬ ಪದವೂ ಕೂಡ, ವ್ಯಾಪ್ತಿಂ= ಸ್ಥಾನೈಕ್ಯರೂಪವಾದ ವ್ಯಾಪ್ತಿಯನ್ನು, ವಕ್ತಿ= ಹೇಳುತ್ತದೆ, ಇತಿ ಯತ್= ಹೀಗೆಂಬುದು, ತತ್= ಅದು, ಪುರೈವ= ಹಿಂದೆಯೇ, ಉಕ್ತಂ= ಹೇಳಲ್ಪಟ್ಟಿದೆ, ಚ= ಮತ್ತು, ತತ್= ಆ ಐಕ್ಯ ಪದವು, ಮುಖ್ಯಾತ್ವಾನ್ಯತ್ವಾರ್ಥಕಂ= ಪ್ರಾಧಾನ್ಯ ಭೇದ ಎಂಬ ಅರ್ಥವುಳ್ಳದ್ದು, ಕಿಲ= ಪ್ರಸಿದ್ಧಿಯು, ಅತಃ= ಆದ್ದರಿಂದ, ತ್ವಂ= ನೀನು, ಹತಃ= ಸತ್ತವನು, ಅಸಿ= ಆಗಿದ್ದೀಯೆ, ಅಹೋ= ಆಶ್ಚರ್ಯವು, ಅತಃ= ಆದ್ದರಿಂದ, ಸಾಯುಜ್ಯ= ಸಾಯುಜ್ಯವು, ಸಂಯುಕ್ತತೈವ= ಒಟ್ಟಿಗೇ ಇರೋಣವೇ, ಆಸೀತ್= ಆಯಿತು, ನತ್ವಭಿನ್ನತಾ= ಅಭೇದವೆಂದಾಗಲಿಲ್ಲ.

**ಅನುವಾದ–** ನಾವು ಹಿಂದೆಯೇ ಐಕ್ಯಪದವು ವ್ಯಾಪ್ತಿಯನ್ನು ಹೇಳುತ್ತದೆ ಎಂದು ಹೇಳಿದ್ದೇವೆ. ಅದರಂತೆ ಏಕಪದವು ಮುಖ್ಯ ಎಂಬ ಅರ್ಥವನ್ನು, ಭಿನ್ನ ಎಂಬ ಅರ್ಥವನ್ನು ಹೇಳುತ್ತದೆ. ಆದ್ದರಿಂದ ನೀನು ಸತ್ತಿದ್ದೀಯೇ (ಏಕೆಂದರೆ ಐಕ್ಯಪದವು ನಿನಗೆ ಅಭಿಮತವಾದ ಐಕ್ಯವನ್ನು ಹೇಳುವುದಿಲ್ಲ, ನಿನಗೆ ವಿರುದ್ಧವಾದ ಭೇದವನ್ನೇ ಹೇಳುತ್ತದೆ). ಆದ್ದರಿಂದ ಸಾಯುಜ್ಯ ಎಂದರೆ ಸಂಯುಕ್ತವಾಗಿರುವಿಕೆ ಎಂದೇ ಅರ್ಥವೇ ಹೊರತು ಅಭಿನ್ನವಾಗಿರುವಿಕೆ ಎಂದರ್ಥವಲ್ಲ.

**ಭಾವವಿಲಾಸಿನೀ–** ತತ್ ಐಕ್ಯಪದಮ್ । ಅತಸ್ಸಾಯುಜ್ಯಪದಸ್ಯೈಕ್ಯ ಪದಸ್ಯ ಚ ಭೇದಾರ್ಥಕತ್ವಾತ್ ಅತಃ ಉಕ್ತಹೇತೋಃ ॥ ೪೫೬ ॥

**ವಿವರಣೆ–** ಐಕ್ಯ ಎಂಬ ಪದವು ವ್ಯಾಪ್ತಿಯನ್ನು ಹೇಳುತ್ತದೆ. ವ್ಯಾಪ್ತಿ ಎಂದರೆ ಒಂದೇ ಕಡೇ ಇರೋಣ. ಹೀಗೆ, ಜೀವನು ಬ್ರಹ್ಮನ ಐಕ್ಯವನ್ನು ಪಡೆಯುತ್ತಾನೆ ಎಂದರೆ, ಬ್ರಹ್ಮನು ವ್ಯಕ್ತನಾಗಿರುವ ಬ್ರಹ್ಮನ ಒಟ್ಟಿಗೆ ಇರುತ್ತಾನೆ ಎಂದರ್ಥ. ಇದನ್ನು ಹಿಂದೆಯೇ ಹೇಳಲಾಗಿದೆ. ಅಥವಾ, ಐಕ್ಯ ಎಂದರೆ ಪ್ರಾಧಾನ್ಯ. 'ಏಕ ಏವ ಧನುರ್ಧರಃ' ಎಂದರೆ ಒಬ್ಬನೇ ಬಿಲ್ಲಾಳು ಎಂದರ್ಥವಲ್ಲ. ಪ್ರಧಾನವಾದ ಬಿಲ್ಲಾಳು ಎಂದರ್ಥ. 'ಏಕೇ ಮುಖ್ಯಾನ್ಯಕೇವಲಾಃ' ಎಂಬ ಶ್ಲೋಕವೂ ಸಹ ಏಕ ಎಂಬ ಶಬ್ದಕ್ಕೆ ಮುಖ್ಯ, ಅನ್ಯ ಎಂಬ ಅರ್ಥಗಳನ್ನು ಹೇಳುತ್ತಿದೆ. ಹೀಗೆ ವ್ಯಾಕರಣ ಮೀಮಾಂಸಾಗಳ ನಿಟ್ಟಿನಲ್ಲಿ ವಿಚಾರ ಮಾಡಿದಾಗ ಐಕ್ಯಶಬ್ದವು ಭೇದವನ್ನೇ ಹೇಳುತ್ತಿರುವುದರಿಂದ ಐಕ್ಯವಾದಿಯು ಸತ್ತಂತಾಯಿತು.

ಹಿಂದಿನ ಶ್ಲೋಕದಲ್ಲಿ ಹೇಳಿದಂತೆ ಸಾಯುಜ್ಯಶಬ್ದವೂ ಭೇದವನ್ನು ಹೇಳುತ್ತಿದೆ. ಆದ್ದರಿಂದ, ಅಭೇದವಾದವು ಸರಿಯಲ್ಲ.

**ಇಹಾಚ್ಯುತಾಂಗಗಾ ದೇವಾ ಯನ್ಮುಕ್ತೌ ಚ ತದಂಗಗಾಃ ।**
**ಸಾರೂಪ್ಯಂ ಚೈವ ಸಾಮೀಪ್ಯಂ ಸಾಲೋಕ್ಯಂ ಚ ಹರೇರ್ಬಹಿಃ ।**
**ಸದಾ ಹರ್ಯಂಗಸಂಗಸ್ತು ಸಾಯುಜ್ಯಮಿತಿ ಸಿದ್ಧ್ಯತಿ ॥ ೪೫೭ ॥**

**ಅರ್ಥ–** ಯತ್= ಯಾವ ಕಾರಣದ ದೆಸೆಯಿಂದ, ದೇವಾಃ= ದೇವತೆಗಳು, ಇಹ= ಸಂಸಾರದಲ್ಲಿ, ಅಚ್ಯುತಾಂಗಗಾಃ=ಪರಮಾತ್ಮನ ಅವಯವಗಳಲ್ಲಿ ಇದ್ದಾರೋ, ಮುಕ್ತೌ ಚ= ಮುಕ್ತಿಯಲ್ಲಿಯೂ ಕೂಡ, ತದಂಗಗಾಃ= ಪರಮಾತ್ಮನ ಅವಯವಗಳಲ್ಲಿ ಇದ್ದಾರೋ, ಯತ್= ಯಾವ ಕಾರಣದ ದೆಸೆಯಿಂದ, ಸಾರೂಪ್ಯಂ= ಸಾರೂಪ್ಯವು, ಸಾಮೀಪ್ಯಂ= ಸಾಮೀಪ್ಯವು, ಚ= ಮತ್ತು, ಸಾಲೋಕ್ಯಂ= ಸಾಲೋಕ್ಯವು, ಹರೇಃ= ಭಗವಂತನ ದೆಸೆಯಿಂದ, ಬಹಿರೇವ= ಹೊರಗೇ ಆಗುತ್ತದೋ, ತತ್= ಆ ಕಾರಣದ ದೆಸೆಯಿಂದ, ಸದಾ= ಯಾವಾಗಲೂ, ತು= ವಿಶೇಷವಾಗಿ, ಹರ್ಯಂಗಸಂಗಃ= ಭಗವಂತನ ಅಂಗ-ಅವಯವಗಳ ಸಂಬಂಧವು, ಸಾಯುಜ್ಯಮಿತಿ= ಸಾಯುಜ್ಯವೆಂದು, ಸಿದ್ಧ್ಯತಿ= ಸಿದ್ಧವಾಗುತ್ತದೆ.

**ಅನುವಾದ–** ಸಂಸಾರದಲ್ಲಿ ಯಾವ ದೇವತೆಗಳು ವಿಶ್ವರೂಪನಾದ ಹರಿಯ ಯಾವ ಅಂಗಗಳಲ್ಲಿ ಇರುತ್ತಾರೆಯೋ ಮೋಕ್ಷದಲ್ಲಿಯೂ ಕೂಡ ಅದೇ ಅಂಗಗಳಲ್ಲಿ ಇರುತ್ತಾರೆ. ಇದು ಸಾಯುಜ್ಯದ ಸ್ಥಿತಿ. ಸಾರೂಪ್ಯ, ಸಾಮೀಪ್ಯ ಮತ್ತು ಸಾಲೋಕ್ಯ ಇವುಗಳನ್ನು ಪಡೆದವರು ಹರಿಯ ದೇಹದ ಹೊರಗೆ ಇರುತ್ತಾರೆ. ಸದಾ ಹರಿಯ ಅಂಗಸಂಗವನ್ನು ಪಡೆಯುವವರು ಮಾತ್ರ ಸಾಯುಜ್ಯವನ್ನು ಹೊಂದುತ್ತಾರೆ ಎಂದು ಸಿದ್ಧವಾಗುತ್ತದೆ.

**ಭಾವವಿಲಾಸಿನೀ–** ಇಹ ಸಂಸಾರೇ । ಅಂಗಾಗಾಃ ವಿಶ್ವರೂಪಸ್ಯ ಹರೇರ್ಹಸ್ತಪಾದಾದ್ಯವ-ಯವಾಶ್ರಿತಾಃ । ಯದ್ಯಸ್ಮಾತ್ । ಯಚ್ಛಬ್ದಬಲಾದೇವ ತಸ್ಮಾದಿತಿ ಲಭ್ಯತೇ । ಇದಮೇವ ಪದದ್ವಯಮಾವರ್ತಯಿತ್ವಾ ಸಾರೂಪ್ಯಮಿತ್ಯಾದಿಯೋಜನಾ ಕರ್ತವ್ಯಾ ॥ ೪೫೭ ॥

**ವಿವರಣೆ–** ದೇವತೆಗಳು ವಿಶ್ವರೂಪಾಧ್ಯಾಯದಲ್ಲಿ ಹೇಳಿದಂತೆ ಸಂಸಾರಾ-ವಸ್ಥೆಯಲ್ಲಿಯೂ ಭಗವಂತನ ಕರಚರಣಾದಿ ಅವಯವಗಳನ್ನು ಆಶ್ರಯಿಸಿರುವುದು ಕಂಡುಬಂದಿದೆ. ಫಲಾಧ್ಯಾಯದ ಭೋಗಪಾದದಲ್ಲಿ ಹೇಳಿದಂತೆ ಮುಕ್ತಿಯಲ್ಲಿಯೂ ಭಗವಂತನ ಅವಯವಗಳನ್ನು ಆಶ್ರಯಿಸುತ್ತಾರೆ. ಮೋಕ್ಷದಲ್ಲಿ ಹಿಂದೆ ಹೇಳಿದಂತೆ ಸಾಲೋಕ್ಯ, ಸಾರೂಪ್ಯ, ಸಾಮೀಪ್ಯ, ಸಾಯುಜ್ಯ ಎಂದು ನಾಲ್ಕು ವಿಧಗಳಿವೆ. ಇವುಗಳಲ್ಲಿ ಸಾಲೋಕ್ಯಾದಿ ಮೂರುವಿಧಮೋಕ್ಷಗಳಲ್ಲಿ ಆ ಹೆಸರುಗಳೇ ಸೂಚಿಸುವಂತೆ, ಮುಕ್ತರು ಭಗವಂತನಿಂದ ಆಚೆ ಇರುತ್ತಾರೆ. ಉಳಿದದ್ದು ಸಾಯುಜ್ಯ. ಆದ್ದರಿಂದ, ದೇವತೆಗಳು ಭಗವದವಯವಗಳನ್ನು ಆಶ್ರಯ ಮಾಡಿರುವ ಮುಕ್ತಿಯು ಸಾಯುಜ್ಯ ಎಂದು ಸಿದ್ಧಿಸುತ್ತದೆ. ಸಂಸಾರದಲ್ಲಿಯೂ ಭಗವದವಯಗಳನ್ನು ಆಶ್ರಯ ಮಾಡಿದ್ದಾರಲ್ಲಾ ಎಂದರೆ, 'ತು' ಎಂಬುವುದರಿಂದ ವಿಶೇಷವನ್ನು ಸೂಚಿಸುತ್ತಿದ್ದಾರೆ. ವೈಕುಂಠಾದಿ ಸ್ಥಾನಗತನಾದ ಪರಮಾತ್ಮನ ಅಂಗಗಳಲ್ಲಿಯೇ ಸೇರಿ ಸ್ವರೂಪಾನಂದಾನುಭವವನ್ನು ಅನುಭವಿಸುವುದೆಂಬ ವಿಶೇಷ ಅಂಗಸಂಗವು ಸಾಯುಜ್ಯ ಮುಕ್ತಿ ಎಂದಭಿಪ್ರಾಯ.

**ನಿತ್ಯಮುಕ್ತಾಪಿ ಯಸ್ಯ ಶ್ರೀರ್ನಿತ್ಯಂ ವಕ್ಷಸಿ ಲಕ್ಷ್ಯತೇ ।**
**ಅನಿತ್ಯಮುಕ್ತಃ ಕೋ ಮುಕ್ತೋ ತದೈಕ್ಯಂ ಪ್ರಾಪ್ನುಯಾದ್ ವದ ॥ ೪೫೮ ॥**

**ಅರ್ಥ–** ನಿತ್ಯಮುಕ್ತಾ= ನಿತ್ಯಮುಕ್ತರಾದ, ಶ್ರೀರಪಿ= ಲಕ್ಷ್ಮೀದೇವಿಯೂ ಕೂಡ, ಯಸ್ಯ= ಯಾವ ಭಗವಂತನ, ವಕ್ಷಸಿ= ವಕ್ಷಸ್ಥಲದಲ್ಲಿ, ಲಕ್ಷ್ಯತೇ= ಕಾಣಲ್ಪಡುತ್ತಾರೋ, ತದೈಕ್ಯಂ= ಆ ಭಗವಂತನ ಐಕ್ಯವನ್ನು, ಅನಿತ್ಯಮುಕ್ತಃ= ಅನಿತ್ಯಮುಕ್ತನಾದ, ಕಃ= ಯಾವ, ಮುಕ್ತಃ= ಮುಕ್ತನು, ಪ್ರಾಪ್ನುಯತ್= ಹೊಂದಿಯಾನು? ವದ= ಹೇಳು.

**ಅನುವಾದ–** ನಿತ್ಯಮುಕ್ತಳಾದ ಲಕ್ಷ್ಮೀದೇವಿಯೂ ಸಹ ಅವನ ವಕ್ಷಸ್ಸ್ಥಲದ ಸಂಗವನ್ನು ಹೊಂದಿರುತ್ತಾಳೆ. ಇನ್ನು ಅನಿತ್ಯಮುಕ್ತನಾದ ಯಾವ ಜೀವನು ಅವನಿಂದ ಐಕ್ಯವನ್ನು ಹೊಂದುತ್ತಾನೆ ಎಂದು ಹೇಳು.

**ಭಾವವಿಲಾಸಿನೀ–** ಮುಕ್ತಾನಾಂ ಭಗವದೈಕ್ಯಾಭಾವೇ ಕೈಮುತ್ಯಂ ದರ್ಶಯತಿ ॥ ನಿತ್ಯೇತಿ ॥ ವಕ್ಷಸಿ ಲಕ್ಷ್ಯತೇ ನತ್ವೈಕ್ಯಂ ಪ್ರಾಪ್ತೇರಿತಿ ಭಾವಃ ॥ ೪೫೮ ॥

**ವಿವರಣೆ–** ಮುಕ್ತರಿಗೆ ಭಗವಂತನ ಐಕ್ಯವಿಲ್ಲವೆಂಬ ವಿಷಯದಲ್ಲಿ ಕೈಮುತ್ಯವನ್ನು ತೋರಿಸುತ್ತಾರೆ. ರಮಾದೇವಿಯು ವಕ್ಷಸ್ಥಲದಲ್ಲಿ ಕಾಣುತ್ತಾರೆ ಹೊರತಾಗಿ ಐಕ್ಯವನ್ನು ಹೊಂದಿಲ್ಲ ಎಂದಭಿಪ್ರಾಯ.

'ದ್ವಾವೇತಾ ನಿತ್ಯಮುಕ್ತೌ ಪ್ರಕೃತಿಶ್ಚ ಪರಮಶ್ಚ' ಎಂಬ ಶ್ರುತಿಯಂತೆ ಲಕ್ಷ್ಮೀದೇವಿಯು ನಿತ್ಯಮುಕ್ತರು. ಏಕೆಂದರೆ 'ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ' ಎಂಬ ಬ್ರಹ್ಮಸೂತ್ರದಂತೆ (4.2) ಅವರಿಗೆ ಸಂಸಾರದ ಆರಂಭವೇ ಇಲ್ಲ. ಇಂಥಾ ಲಕ್ಷ್ಮೀದೇವಿಯೂ ಕೂಡ ಭಗವಂತನ ವಕ್ಷಸ್ಥಲದಲ್ಲಿ ಶ್ರೀವತ್ಸಚಿಹ್ನೆಯ ರೂಪದಿಂದ ಇದ್ದಾರೆ, ಹೊರತಾಗಿ ಭಗವಂತನ ಐಕ್ಯವನ್ನು ಹೊಂದಿಲ್ಲ. ಹೀಗಿರುವಾಗ, ಸಂಸಾರದಿಂದ ಮುಕ್ತರಾದ ಬ್ರಹ್ಮಾದಿಗಳಲ್ಲಿ ಯಾರು ತಾನೇ ಭಗವಂತನ ಐಕ್ಯವನ್ನು ಹೊಂದಿಯಾರು? ಹೊಂದುವುದೇ ಇಲ್ಲ ಎಂದು ಅಭಿಪ್ರಾಯ.

**ಪ್ರಲಯೇ ನ ಲಯೋ ಯಸ್ಯಾಃ ಪ್ರೋದ್ಭವೇ ಚಾಸ್ತಿ ನೋದ್ಭವಃ ।**
**ಪ್ರಕೃತಿಃ ಕಿಲ ಯಾ ದೇವೀ ನಿತ್ಯಮುಕ್ತಾ ಕಥಂ ನ ಸಾ ॥ ೪೫೯ ॥**

**ಅರ್ಥ–** ಯಸ್ಯಾಃ= ಯಾವ ರಮಾದೇವಿಗೆ, ಅಸ್ಯ= ಈ ಜಗತ್ತಿನ, ಪ್ರಲಯೇ= ಪ್ರಳಯ ಕಾಲದಲ್ಲಿ, ಲಯಃ= ಲಯವು, ನ= ಇಲ್ಲವೋ, ಚ= ಮತ್ತು, ಪ್ರೋದ್ಭವೇ= ಸೃಷ್ಟಿಕಾಲದಲ್ಲಿ, ಉದ್ಭವಃ= ಸೃಷ್ಟಿಯು, ನ= ಇಲ್ಲವೋ, ಯಾ= ಯಾವ, ದೇವೀ= ಕ್ರೀಡಾದಿ ಗುಣವಿಶಿಷ್ಟರಾದ ರಮಾದೇವಿಯು, ಪ್ರಕೃತಿಃ= ಪ್ರಕೃತಿಯೆಂದು, ಕಿಲ= ಪ್ರಸಿದ್ಧರಾಗಿದ್ದಾರೋ, ಸಾ= ಅಂಥಾ ರಮಾದೇವಿಯು, ಕಥಂ= ಹೇಗೆ, ನಿತ್ಯಮುಕ್ತಾ= ನಿತ್ಯಮುಕ್ತರು, ನ= ಅಲ್ಲ?

**ಅನುವಾದ–** ಯಾವ ದೇವಿಗೆ ಪ್ರಲಯದಲ್ಲಿ ನಾಶವಿಲ್ಲವೋ ಮತ್ತು ಸೃಷ್ಟಿಯಲ್ಲಿ ಸೃಷ್ಟಿ ಇಲ್ಲವೋ ಅವಳೇ ಪ್ರಕೃತಿಯಷ್ಟೆ. ಆದ್ದರಿಂದ ಆ ದೇವಿಯು ಹೇಗೆ ನಿತ್ಯಮುಕ್ತಳಾಗುವುದಿಲ್ಲ?

**ಭಾವವಿಲಾಸಿನೀ–** ಲಕ್ಷ್ಮ್ಯಾ ನಿತ್ಯಮುಕ್ತತ್ವಮುಪಪಾದಯತಿ–ಪ್ರಲಯ ಇತಿ । ಯಸ್ಯಾ ಲಕ್ಷ್ಮ್ಯಾಃ । ಅಸ್ಯ ಜಗತಃ ಪ್ರಕೃತಿಃ ಪ್ರಲಯೇಽಪ್ಯವರ್ಜಿತಪ್ರಕೃತ್ಯಭಿಮಾನಿತ್ವಾತ್ ಪ್ರಕೃತಿಪದವಾಚ್ಯಾ ॥ ೪೫೯॥

**ವಿವರಣೆ–** ಜಗತ್ತು ಸೃಷ್ಟಿಯಾಗುವಾಗ ರಮಾದೇವಿಗೆ ಸೃಷ್ಟಿಯಿಲ್ಲ; ಜಗತ್ತು ಲಯವಾಗುವಾಗ ರಮಾದೇವಿಗೆ ಲಯವಿಲ್ಲ. ಹೀಗೆ, ಉತ್ಪತ್ತಿ-ನಾಶ ಎರಡೂ ಇಲ್ಲವಾದ್ದರಿಂದ ಅವರು ನಿತ್ಯಮುಕ್ತರು. ಮತ್ತೇನೆಂದರೆ, ಅವರು ಪ್ರಕೃತಿಗೆ ಅಭಿಮಾನಿಯಾದ್ದರಿಂದಲೂ ನಿತ್ಯಮುಕ್ತರು. ಅದು ಹೇಗೆಂದರೆ, ಪ್ರಕೃತಿಯ ಕಾರ್ಯವಾದ ಜಗತ್ತು ಪ್ರಳಯವಾದರೂ, ಕಾರಣರೂಪದಿಂದ ಪ್ರಕೃತಿಯು ಇದ್ದೇ ಇರುತ್ತದೆ. ಹೀಗೆ, ಕಾರಣರೂಪದಿಂದ ನಿತ್ಯವಾದ ಪ್ರಕೃತಿಗೆ ಅಭಿಮಾನಿಯಾದ್ದರಿಂದ, ಅವರು ನಿತ್ಯಮುಕ್ತರಾಗಿರಲೇಬೇಕು. ಏಕೆಂದರೆ, ಅಭಿಮನ್ಯವಾದ ವಸ್ತುವಿಗೆ; ಅಭಿಮಾನಿಯು ಇಲ್ಲ ಎಂಬುದು ಕೂಡುವುದಿಲ್ಲ.

**ಆದ್ಯಃ ಕಲ್ಪೋ ಯತೋ ಬ್ರಾಹ್ಮೋ ಯದ್ಬ್ರಹ್ಮಪ್ರಲಯೋ ಲಯಃ ।**
**ಅತೋ ರಮಾರಮೇಶೌ ದ್ವೌ ಸರ್ಗಪ್ರಲಯವರ್ಜಿತೌ ॥ ೪೬೦ ॥**

**ಅರ್ಥ–** ಯತಃ= ಯಾವ ಕಾರಣದ ದೆಸೆಯಿಂದ, ಆದ್ಯಃ= ಮೊದಲನೆಯದು, ಬ್ರಾಹ್ಮಃ= ಬ್ರಾಹ್ಮ ಎಂಬ, ಕಲ್ಪಃ= ಕಲ್ಪವೋ, ಯತ್= ಯಾವ ಕಾರಣದ ದೆಸೆಯಿಂದ, ಬ್ರಹ್ಮಪ್ರಲಯಃ= ಬ್ರಹ್ಮ ಪ್ರಳಯ ಎಂಬುದು, ಲಯಃ= ಮಹಾಪ್ರಳಯವೋ, ಅತಃ= ಆದ್ದರಿಂದ, ರಮಾ ರಮೇಶೌ= ಲಕ್ಷ್ಮೀನಾರಾಯಣರು, ದ್ವೌ= ಇಬ್ಬರು, ಸರ್ಗಪ್ರಲಯವರ್ಜಿತೌ= ಸೃಷ್ಟಿ ಪ್ರಳಯ ಇವುಗಳಿಂದ ರಹಿತರು.

**ಅನುವಾದ–** ಮೊದಲನೆಯ ಕಲ್ಪವೆಂದರೆ ಬ್ರಹ್ಮದೇವರ ಸೃಷ್ಟಿ, ಅಂತಿಮ ಲಯವೆಂದರೆ ಬ್ರಹ್ಮದೇವರ ಪ್ರಲಯ. ಮೊದಲಿನ ಸೃಷ್ಟಿಗಿಂತ ಮೊದಲು ಮತ್ತು ಬ್ರಹ್ಮದೇವರ ಪ್ರಲಯವಾದ ನಂತರವೂ ಇರುವ ಲಕ್ಷ್ಮೀ ಮತ್ತು ಲಕ್ಷ್ಮೀಪತಿ ಇವರಿಬ್ಬರೂ ಸೃಷ್ಟಿಪ್ರಲಯವರ್ಜಿತರಾದವರು.

**ಭಾವವಿಲಾಸಿನೀ–** ಆದ್ಯಸರ್ಗಾಂತಿಮಪ್ರಲಯಯೋಃ ಪ್ರತಿಪಾದಕಶಬ್ದಾರ್ಥ ಪರ್ಯಾ-ಲೋಚನಯಾಪಿ ಬ್ರಹ್ಮಣ ಏವ ಸರ್ಗ ಪ್ರಲಯೌ ನ ತು ರಮಾರಮೇಶಯೋರಿತ್ಯಾಹ – ಆದ್ಯ ಇತಿ ॥ ಪ್ರಥಮಂ ಬ್ರಹ್ಮಣ ಏವೋತ್ಪತ್ತಿಮತ್ತ್ವಾತ್ ಬ್ರಾಹ್ಮಸಂಜ್ಞಃ। ಯದ್ಯಸ್ಮಾತ್ । ಬ್ರಹ್ಮಪ್ರಲಯೋ ಬ್ರಹ್ಮಪ್ರಲಯನಾಮಕೋ ಲಯೋ ಮಹಾಪ್ರಲಯಃ । ಅತೋ ಬ್ರಹ್ಮಣ ಏವ ಸರ್ಗಪ್ರಲ-ಯಾವಧಿಭೂತತ್ವಾತ್ ॥ ೪೬೦ ॥

**ವಿವರಣೆ–** ಬ್ರಹ್ಮದೇವರ ಉತ್ಪತ್ತಿಯು ಯಾವ ದಿನಕಲ್ಪದಲ್ಲಿ ಆಯಿತೋ ಆ ಪ್ರಥಮ ಕಲ್ಪಕ್ಕೆ ಬ್ರಾಹ್ಮಕಲ್ಪ ಎಂದು ಹೆಸರು. ಇದು ಶ್ರೀಮದ್ಭಾಗವತ ತೃತೀಯಸ್ಕಂದದಲ್ಲಿ ಸ್ಪಷ್ಟವಿದೆ. ಆದರಂತೆ, ಬ್ರಹ್ಮದೇವರ ಲಯವು ಯಾವಾಗ ಆಗುತ್ತದೋ ಅದಕ್ಕೆ ಮಹಾಪ್ರಳಯ ಎನ್ನುತ್ತಾರೆ. ಇದರಿಂದ ಏನು ತಿಳಿಯುತ್ತದೆಂದರೆ, ಬ್ರಹ್ಮದೇವರನ್ನು ಆರಂಭಿಸಿಯೇ ಸೃಷ್ಟಿಯಾಗುತ್ತದೆ. ಬ್ರಹ್ಮದೇವರ ಪರ್ಯಂತವೇ ಲಯವಾಗುತ್ತದೆ. ಆದ್ದರಿಂದ, ಅವರನ್ನು ಮೀರಿದ ಹಾಗೂ ಅವರ ಮಾತಾಪಿತೃಸ್ಥಾನದಲ್ಲಿರುವ ಲಕ್ಷ್ಮೀನಾರಾಯಣರು ಸೃಷ್ಟಿ ಮತ್ತು ಪ್ರಳಯರಹಿತರು-ನಿತ್ಯಮುಕ್ತರು ಎಂದು ಸಿದ್ಧವಾಗುತ್ತದೆ.

**ಯೌ ಹಿ ಸರ್ವಲಯೇ ಸಂತೌ ತಯೋರಂತೋ ನ ಯೌಕ್ತಿಕಃ ।**
**ಅತಃ ಪ್ರಾಗಸತಃ ಸತ್ತಾಸಂಬಂಧಶ್ಚ ನ ಯೌಕ್ತಿಕಃ ॥ ೪೬೧ ॥**

**ಅರ್ಥ–** ಯೌ= ಯಾರಿಬ್ಬರು, ಸರ್ವಲಯೇ= ಎಲ್ಲಾ ಜಗತ್ತಿನ ಪ್ರಳಯಕಾಲದಲ್ಲಿ, ಸಂತೌ= ಇರತಕ್ಕವರೆಂದು, ಹಿ= ಪ್ರಸಿದ್ಧಿಯೋ, ತಯೋಃ= ಅವರಿಬ್ಬರಿಗೆ, ಅಂತಃ= ನಾಶವು, ಯೌಕ್ತಿಕಃ= ಯುಕ್ತಿ ಸಿದ್ಧವಾದದ್ದು, ನ= ಅಲ್ಲ, ಅತಃ= ಆದ್ದರಿಂದ, ಪ್ರಾಕ್= ಮೊದಲು, ಅಸತಃ= ಇಲ್ಲದಿದ್ದಕ್ಕೆ, ಸತ್ತಾಸಂಬಂಧಃ= ಇರುವಿಕೆಯು ಸಂಬಂಧವೂ, ಚ= ಕೂಡ, ಯೌಕ್ತಿಕಃ= ಯುಕ್ತಿ ಸಿದ್ಧವಾದದ್ದು, ನ= ಅಲ್ಲ.

**ಅನುವಾದ–** ಮಹಾಪ್ರಳಯವಾದಾಗ ಉಳಿದ ಲಕ್ಷ್ಮೀನಾರಾಯಣರಿಗೆ ನಾಶವಾಗಲೀ, ನಾಶವಿಲ್ಲದ ಅವರಿಗೆ ಉತ್ಪತ್ತಿಯಾಗಲಿ ಯುಕ್ತಿಯುಕ್ತವಲ್ಲ. ಆದ್ದರಿಂದ ಅವರಿಬ್ಬರೂ ನಿತ್ಯಮುಕ್ತರು.

**ವಿವರಣೆ–** ಸಂತೌ ಎಂದರೆ ಇರತಕ್ಕವರು. ಅಂತ ಎಂದರೆ ನಾಶ. ಅತಃ ಎಂದರೆ ಪ್ರಳಯದಲ್ಲೂ ಇರುವುದರಿಂದ ಎಂದರ್ಥ. ಎಲ್ಲಾ ಜಗತ್ತು ನಾಶವಾದರೂ, ಉಳಿದಿದ್ದವರು ಲಕ್ಷ್ಮೀನಾರಾಯಣರು. ಲಕ್ಷ್ಮೀದೇವಿಯೇ ಪ್ರಳಯಜಲವಾಗಿ, ಆಲದೆಲೆಯಾಗಿ, ಕತ್ತಲಿನ ರೂಪವಾದ ಹೊದಿಕೆಯಾಗಿ ಭಗವಂತನನ್ನು ಸೇವಿಸುತ್ತಿದ್ದರು. ಇಂಥವರಿಗೆ ನಾಶವೆಂಬುದು ಯುಕ್ತವಿರುದ್ಧ. 'ಲಕ್ಷ್ಮೀನಾರಾಯಣೌ ನ ನಾಶವಂತೌ ಪ್ರಲಯೇ ಅವಶಿಷ್ಟತ್ವಾತ್ ವ್ಯತಿರೇಕೇಣ ಬ್ರಹ್ಮಾದಿವತ್' ಎಂದು ಯುಕ್ತಿ. ಹೀಗೆ ನಾಶರಹಿತರಾಗಿ ಪ್ರಳಯಕಾಲದಲ್ಲೂ ಅವರಿದ್ದರೆಂದಮೇಲೆ, ಅವರಿಗೆ ಸೃಷ್ಟಿಯೂ ಇಲ್ಲವೆಂದಾಯಿತು. ಸೃಷ್ಟಿ ಎಂಬುದಕ್ಕೆ 'ಪ್ರಾಗಸತಃ ಸತ್ತಾಪಾದನಮ್' ಎಂದು ವಿಶ್ಲೇಷಣೆ. ಮೊದಲು ಇಲ್ಲದಿದ್ದಕ್ಕೆ ಸತ್ತಾ (ಇರುವಿಕೆಯ) ಸಂಪಾದನೆ ಎಂದರ್ಥ. ಪ್ರಳಯದಲ್ಲೂ ಇದ್ದವರಿಗೆ, ಈ ರೀತಿಯ ಸೃಷ್ಟಿಯೂ ಯುಕ್ತಿವಿರುದ್ಧ. 'ಲಕ್ಷ್ಮೀನಾರಾಯಣೌ ನ ಸೃಷ್ಟಿಮಂತೌ ಪ್ರಳಯೇ ವಿದ್ಯಮಾನತ್ವಾತ್ ವ್ಯತಿರೇಕೇಣ ಬ್ರಹ್ಮಾದಿವತ್' ಎಂದು ಯುಕ್ತಿ.

**ಯಯೋಃ ಸೃಷ್ಟಿಶ್ಚ ನಷ್ಟಿಶ್ಚ ನ ಶ್ರುತಾ ನಾಪಿ ಯೌಕ್ತಿಕೀ ।**
**ಲಕ್ಷ್ಮೀನಾರಾಯಣೌ ತೌ ದ್ವೌ ನಿತ್ಯಮುಕ್ತೌ ನ ಸಂಶಯಃ ॥ ೪೬೨ ॥**

**ಅರ್ಥ–** ಯಯೋಃ= ಯಾರಿಬ್ಬರ, ಸೃಷ್ಟಿಃ= ಉತ್ಪತ್ತಿಯು, ಚ= ಮತ್ತು, ನಷ್ಟಿಃ= ನಾಶವು, ನ ಶ್ರುತಾ= ಆಗಮದಲ್ಲಿ ಹೇಳಲ್ಪಟ್ಟಿಲ್ಲವೋ, ಯೌಕ್ತಿಕೀ ಅಪಿ= ಯುಕ್ತಿಸಿದ್ಧವೂ ಕೂಡ, ನ= ಅಲ್ಲವೋ, ತೌ= ಅಂತಹ, ಲಕ್ಷ್ಮೀನಾರಾಯಣೌ= ಲಕ್ಷ್ಮೀನಾರಾಯಣರೆಂಬ, ದ್ವೌ= ಇಬ್ಬರು, ನಿತ್ಯಮುಕ್ತೌ= ನಿತ್ಯಮುಕ್ತರು, ಸಂಶಯಃ= ಸಂಶಯವು, ನ= ಇಲ್ಲ.

**ಅನುವಾದ–** ಲಕ್ಷ್ಮೀನಾರಾಯಣರ ಉತ್ಪತ್ತಿ ನಾಶಗಳಿಗೆ ಆಧಾರವಾದ ಶ್ರುತಿಗಳೂ ಇಲ್ಲ; ಯುಕ್ತಿಗಳೂ ಇಲ್ಲ; ಯುಕ್ತಿವಿರೋಧವೂ ಇದೆ. ಆದ್ದರಿಂದ ಅವರಿಬ್ಬರು ನಿತ್ಯಮುಕ್ತರು.

**ಭಾವವಿಲಾಸಿನೀ–** ಸಂತೌ ವಿದ್ಯಮಾನೌ । ಅಂತೋ ನಾಶಃ । ಅತಃ ಪ್ರಲಯೇಽಪಿ ವಿದ್ಯಮಾನತ್ವಾತ್ ॥ ೪೬೧-೪೬೨ ॥

**ವಿವರಣೆ–** ಯಾವುದೇ ಪ್ರಮೇಯವು ಸಿದ್ಧಿಸಲು ಪ್ರಮಾಣವು ಬೇಕಾಗಿದೆ. ಪ್ರಕೃತ, ಲಕ್ಷ್ಮೀನಾರಾಯಣರ ಉತ್ಪತ್ತಿ ವಿಷಯದಲ್ಲಾಗಲೀ, ನಾಶದ ವಿಷಯದಲ್ಲಾಗಲೀ ಯಾವುದೇ ಆಗಮ ಪ್ರಮಾಣವಿಲ್ಲ. ಯುಕ್ತಿಗಳೂ ಇಲ್ಲ. ಅವರ ಸೃಷ್ಟಿ ಲಯಗಳು ಮೇಲೆ

ಹೇಳಿದ ಶ್ರುತಿಯುಕ್ತಿವಿರುದ್ಧವೂ ಆಗಿವೆ; ಆದ್ದರಿಂದ, ಅವರು ನಿತ್ಯಮುಕ್ತರೆಂದು ಸಿದ್ಧವಾಯಿತು.

ದ್ವಿವಚನ ಪ್ರಯೋಗದಿಂದಲೇ ಇಬ್ಬರು ಎಂದು ಗೊತ್ತಾಗುತ್ತದೆ. ಆದರೂ 'ದ್ವೌ' ಎಂಬ ಶಬ್ದದ ಪ್ರಯೋಗ ಮಾಡಿದುದು, 'ದ್ವಾವೇತೌ ನಿತ್ಯಮುಕ್ತೌ' ಇತ್ಯಾದಿ ಶ್ರುತಿ ಸಂಗ್ರಹಕ್ಕೋಸ್ಕರ.

**ಅತಸ್ತ್ವಾಂ ಶಬ್ದಮರ್ಯಾದಾ ಬಾಧತೇ ಬುಧಸಂಸದಿ ।**
**ಉಕ್ತರೀತ್ಯಾರ್ಥಮರ್ಯಾದಾಪ್ಯನರ್ಥಂ ಕುರುತೇ ವದ ॥ ೪೬೩ ॥**

**ಅರ್ಥ–** ಅತಃ= ಆದ್ದರಿಂದ, ಶಬ್ದಮರ್ಯಾದಾ= ಶಬ್ದಗಳ ಮರ್ಯಾದೆಯು (ಎಲ್ಲೆಕಟ್ಟು), ತ್ವಾಂ= ನಿನ್ನನ್ನು, ಬುಧಸಂಸದಿ= ಜ್ಞಾನಿಗಳ ಸಭೆಯಲ್ಲಿ, ಬಾಧತೇ= ಬಾಧೆಗೊಳಿಸುತ್ತದೆ, ಅರ್ಥಮರ್ಯಾದಾ= ಅರ್ಥದ ಮರ್ಯಾದೆಯು, ಅಪಿ= ಕೂಡ, ಉಕ್ತರೀತ್ಯಾ= ಹಿಂದೆ ಹೇಳಿದ ರೀತಿಯಿಂದ, ಅನರ್ಥಂ= ಅನರ್ಥವನ್ನು, ಕುರುತೇ= ಉಂಟುಮಾಡುತ್ತದೆ; ವದ= ನೀನೇ ಹೇಳು.

**ಅನುವಾದ–** ಸಾಯುಜ್ಯಾದಿ ಶಬ್ದಗಳ ಸ್ವರೂಪವನ್ನು ನಿತ್ಯಮುಕ್ತರಾದ ಲಕ್ಷ್ಮೀದೇವಿಗೂ ಐಕ್ಯವಿಲ್ಲವೆಂಬ ಅರ್ಥದ ವಿಚಾರವನ್ನೂ ಮಾಡಿದಾಗ ಜೀವಬ್ರಹ್ಮೈಕ್ಯವು ಬಾಧಿತವಾಗುತ್ತದೆ.

**ಭಾವವಿಲಾಸಿನೀ–** ಶಬ್ದಮರ್ಯಾದಾ ಸಾಯುಜ್ಯಾದಿಶಬ್ದಮರ್ಯಾದಾ । ಅರ್ಥಮರ್ಯಾದಾ ನಿತ್ಯಮುಕ್ತಲಕ್ಷ್ಮ್ಯಾ ಅಪ್ಯೈಕ್ಯಾಭಾವರೂಪಾರ್ಥಮರ್ಯಾದಾ ॥ ೪೬೩ ॥

**ವಿವರಣೆ–** ಹಿಂದೆ ಹೇಳಿದಂತೆ ಸಾಯುಜ್ಯ ಎಂಬ ಶಬ್ದವು 'ಒಟ್ಟಿಗೆ ಇರುವಿಕೆ' ಎಂಬ ಅರ್ಥವನ್ನು ಕೊಡುತ್ತದೆಯೇ ಹೊರತಾಗಿ, ಐಕ್ಯವೆಂಬ ಅರ್ಥವನ್ನಲ್ಲ. ಇದರಂತೆ, ಸಾಲೋಕ್ಯಾದಿ ಶಬ್ದಗಳೂ ಭೇದಸಾಪೇಕ್ಷವಾಗಿವೆ. ನಿತ್ಯಮುಕ್ತರಾದ ರಮಾದೇವಿಗೂ ಐಕ್ಯವಿಲ್ಲದಿರುವಾಗ, ಬೇರೆ ಜೀವರ ಐಕ್ಯವಿಲ್ಲವೆಂಬುದು ಕೈಮುತ್ಯನ್ಯಾಯದಿಂದ ಸಿದ್ಧವಾಗಿದೆ. ಈ ಶಬ್ದ ಅಥವಾ ಪ್ರಮೇಯವನ್ನು ವಿಚಾರಿಸಿದರೂ ಸಹ ಐಕ್ಯವಿಲ್ಲ ಎಂದು ಗೊತ್ತಾಗುತ್ತದೆ. ಆದ್ದರಿಂದ, ಜೀವಬ್ರಹ್ಮೈಕ್ಯವು ಬಾಧಿತ, ಇದು ಸರಿಯೋ, ಅಲ್ಲವೋ ನೀನೇ ಹೇಳು ಎಂದು ಅದ್ವೈತಿಗೆ ಸವಾಲನ್ನು ಹಾಕಿದ್ದಾರೆ.

**ಪ್ರಾಗುಕ್ತಶ್ರುತಯಶ್ಚ ತ್ವಾಂ ನಿಘ್ನಂತ್ಯಜ್ಞ ಪದೇ ಪದೇ ।**
**ಅತೋ ಮುಕ್ತಾಶ್ರಯೋ ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ ॥ ೪೬೪ ॥**

**ಅರ್ಥ–** ಹೇ ಅಜ್ಞ= ಎಲೈ! ಅಜ್ಞಾನಿಯೇ (ವಿರುದ್ಧಜ್ಞಾನಿಯೇ), ಪ್ರಾಗುಕ್ತಶ್ರುತಯಶ್ಚ= ಹಿಂದೆ ಹೇಳಿದ ಶ್ರುತಿಗಳೂ ಕೂಡ, ಪದೇ ಪದೇ= ಹೆಜ್ಜೆ ಹೆಜ್ಜೆಗೂ (ಪ್ರತಿಪದದಲ್ಲಿಯೂ),

ತ್ವಾಂ= ನಿನ್ನನ್ನು, ನಿಘ್ನಂತಿ= ಕೊಲ್ಲುತ್ತವೆ, ಅತಃ= ಆದ್ದರಿಂದ, ಮುಕ್ತಾಶ್ರಯಃ= ಮುಕ್ತರಿಗೆ, ಆಶ್ರಯಃ= ಆಶ್ರಯನಾದವನು, ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ= ಬ್ರಹ್ಮದೇವರು ರುದ್ರದೇವರು ಮೊದಲಾದವರಿಗಿಂತ ಶ್ರೇಷ್ಠನಾದ ಪರಮಚೇತನನಾದ ವಿಷ್ಣುವು.

**ಅನುವಾದ–** ಹಿಂದೆ ಹೇಳಿದ ಪ್ರತಿಯೊಂದು ಶ್ರುತಿಯಲ್ಲಿರುವ ಪದಗಳು ಅದ್ವೈತಿಗೆ ವಿರೋಧವನ್ನುಂಟು ಮಾಡುತ್ತವೆ. ಆದ್ದರಿಂದ, ಬ್ರಹ್ಮಾದಿ ಮುಕ್ತರಿಗೆ ಆಶ್ರಯನಾದವನು ಅವರಿಗಿಂತ ಉತ್ತಮನಾದ ವಿಷ್ಣುವೆಂದು ಸಿದ್ಧಿಸುತ್ತದೆ.

**ಭಾವವಿಲಾಸಿನೀ–** ಪ್ರಾಗುಕ್ತಶ್ರುತಯಃ ''ಸಹ ಬ್ರಹ್ಮಣೇ''ತ್ಯಾದಿಶ್ರುತಯಃ । ಶ್ರುತಯ ಇತ್ಯುಪಲಕ್ಷಣಮ್ । ''ಭೇಜೇ ಖಗೇಂದ್ರಧ್ವಜಪಾದಮೂಲಮಿ''ತ್ಯಾದಿ ಸ್ಮೃತಯೋऽಪಿ ಗ್ರಾಹ್ಯಾಃ । ಉಪಸಂಹಾರವ್ಯಾಜೇನ ದ್ವಿಪ್ರಕಾರಕ ಸಹಸ್ರಾನಾಮಸ್ಥಭಗವಾನ್ನಾಮದ್ವಯಂ ಮುಕ್ತಾವಪಿ ಭೇದೇ ಪ್ರಮಾಣಯತಿ– **ಅತ ಇತಿ** ॥ ಮುಕ್ತಾಶ್ರಯ ಇತ್ಯನೇನ ಮುಕ್ತಾನಾಂ ಪರಮಾಗತಿರಿತಿ ನಾಮ ಸೂಚಿತಮ್ । ಬ್ರಹ್ಮರುದ್ರಾದ್ಯುತ್ಕೃಷ್ಟಚೇತನ ಇತಿ ವಾಸುದೇವಸಹಸ್ರ-ನಾಮಸ್ಥನಾಮ ॥ ೪೬೪ ॥

**ವಿವರಣೆ–** ಹಿಂದೆ ಹೇಳಿದ ಶ್ರುತಿಗಳಿಂದ 'ಸಹ ಬ್ರಹ್ಮಣಾ' ಮೊದಲಾದ ಶ್ರುತಿಗಳು. ಶ್ರುತಿಗಳೆಂಬುದು ಉಪಲಕ್ಷಣ. ಭೇಜೇ ಖಗೇಪ್ರಧಜನಾದಮೂಲಮ್' ಇತ್ಯಾದಿ ಭಾಗವತಾದಿ ಸ್ಮೃತಿಗಳನ್ನೂ ಇಟ್ಟುಕೊಳ್ಳಬೇಕು. ಉಪಸಂಹಾರ ಮಾಡುವ ವ್ಯಾಜದಿಂದ ಎರಡು ಪ್ರಕಾರವಾದ ಸಹಸ್ರನಾಮದಲ್ಲಿರುವ ಭಗವಂತನ ಎರಡು ನಾಮಗಳನ್ನು ಮುಕ್ತಿಯಲ್ಲೂ ಭೇದವುಂಟೆಂಬ ವಿಷಯದಲ್ಲಿ ಪ್ರಮಾಣೀಕರಿಸುತ್ತಾರೆ. ಮುಕ್ತಾಶ್ರಯ ಎಂಬುದರಿಂದ 'ಮುಕ್ತಾನಾಂ ಪರಮಾಗತಿಃ' ಎಂಬ ವಿಷ್ಣುಸಹಸ್ರನಾಮಗತ ನಾಮವನ್ನೂ ಸೂಚಿಸಿದ್ದಾರೆ. ಬ್ರಹ್ಮರುದ್ರಾಯತ್ಕೃಷ್ಟ ಚೇತನಃ ಎಂಬುದು ವಾಸುದೇವ ಸಹಸ್ರನಾಮದಲ್ಲಿರುವ ನಾಮವು.

453ನೇ ಶ್ಲೋಕವನ್ನು ಆರಂಭಿಸಿ ಮಾಡಿದ ವಿಚಾರವನ್ನು ಉಪಸಂಹಾರ ಮಾಡುತ್ತಿದ್ದಾರೆ. ಭೇದಸಾಪೇಕ್ಷವಾದ 'ಸಹ ಬ್ರಹ್ಮಣಾ', 'ಸಯುಜೌ' ಮೊದಲಾದ ಶ್ರುತಿಗಳೂ, ಭಾಗವತದಲ್ಲಿ ಹೇಳಿದಂತೆ, 'ಪರೀಕ್ಷಿತರಾಜರು ಭಗವಂತನ ಪಾದ ಮೂಲವನ್ನು ಹೊಂದಿದರು' ಇತ್ಯಾದಿ ಅರ್ಥವನ್ನು ಕೊಡತಕ್ಕ ಸ್ಮೃತಿಗಳೂ ಅದ್ವೈತಿಯನ್ನು ಪ್ರತಿಪದದಲ್ಲಿಯೂ ಎಂದರೆ ಹೆಜ್ಜೆ ಹೆಜ್ಜೆಗೂ ಅಥವಾ ಪ್ರತಿಯೊಂದು ಪದದ ಅರ್ಥವನ್ನು ವಿಚಾರ ಮಾಡಲಾಗಿಯೂ ಕೊಲ್ಲುತ್ತದೆ. ಇದರ ಅಭಿಪ್ರಾಯವೇನೆಂದರೆ, 'ನಿಹತಾಯೇನ ದಾನವಾಃ' ಎಂಬ ಮಹಾಭಾರತ ವಾಕ್ಯಕ್ಕೆ ಶ್ರೀಮದಾಚಾರ್ಯರು ಅರ್ಥೈಸಿದಂತೆ, ಶ್ರುತಿಸ್ಮೃತಿಗಳಿಗೆ ವಿರುದ್ಧವಾಗಿ ಹೇಳುವ ಅದ್ವೈತಿಗಳೆಂಬ ದೈತ್ಯರಿಗೆ ಅಂಧಂತಮಸ್ಸಿನಲ್ಲಿ ಸ್ಥಿತಿ ಎಂಬ ಸಂಹಾರಕ್ಕೆ ಕಾರಣವಾಗಿವೆ. ಅದ್ವೈತಿಗೆ ಅಂಧಂತಮಸ್ಸು ಏಕೆ ಎಂದು ಸೂಚಿಸಲು 'ಅಜ್ಞ' ಎಂದು ಸಂಬೋಧಿಸಿದ್ದಾರೆ.

ಅಜ್ಞಾನಿ ಎಂಬುದಕ್ಕೆ ತಿಳಿಯದವನು ಎಂದಿಷ್ಟೇ ಅರ್ಥವಲ್ಲ. 'ಅ' ಎಂಬುದು ವಿರೋಧವಾದಿಯಾದ್ದರಿಂದ, 'ವಿರುದ್ಧ ಜ್ಞಾನಿ' ಎಂದರ್ಥವಾಗುತ್ತದೆ. ಶ್ರುತಿಸ್ಮೃತಿಗಳಿಗೆ ವಿರುದ್ಧವಾಗಿ ತಿಳಿದಾಗ, 'ಅಂಧಂತಮಃ ಪ್ರವಿಶಂತಿ ಯೇಽವಿದ್ಯಾಮುಪಾಸತೇ' ಎಂದು ಈಶಾವಾಸ್ಯದಲ್ಲಿ ಹೇಳಿದಂತೆ ಅಂಧಂತಮಸ್ಸು ನಿಶ್ಚಿತ.

ಉಪಸಂಹಾರ ಮಾಡುವಾಗ ರಾಜರು ಭಗವಂತನ ಎರಡು ನಾಮಗಳನ್ನು ಉಚ್ಚರಿಸಿದ್ದಾರೆ. ಈ ನಾಮಗಳಿಂದಲೂ ಮುಕ್ತಭೇದವನ್ನು ಸೂಚಿಸುತ್ತಿದ್ದಾರೆ. ವಿಷ್ಣು ಸಹಸ್ರನಾಮದಲ್ಲಿ 'ಮುಕ್ತಾನಾಂ ಪರಮಾಗತಿಃ' ಎಂದಿದೆ. ಇದನ್ನೇ 'ಮುಕ್ತಾಶ್ರಯಃ' ಎಂಬ ಪದದಿಂದ ಸೂಚಿಸಿದ್ದಾರೆ. ಇಲ್ಲಿ ಪರಮಾಗತಿ ಎಂದು ಹೇಳಿದ್ದರಿಂದ, ಮುಕ್ತಾನಾಂ ಎಂದು ಬಹುವಚನಪ್ರಯೋಗಮಾಡಿದ್ದರಿಂದ, ಮುಖ್ಯಮುಕ್ತಿಯಲ್ಲಿಯೇ ಜೀವೇಶ್ವರ ಭೇದವೂ, ಜೀವಜೀವಭೇದವೂ ಇದೆಯೆಂದು ತಿಳಿಯುತ್ತದೆ. ವಾಸುದೇವ-ಸಹಸ್ರನಾಮದಲ್ಲಿ 'ಬ್ರಹ್ಮರುದ್ರಾದ್ಯುತ್ಕೃಷ್ಟಚೇತನಃ' ಎಂದರೆ. ಇದರಿಂದಲೂ, ಬ್ರಹ್ಮರುದ್ರಾದಿ ಜೀವಭೇದವೂ, ಜೀವೇಶ್ವರಭೇದವೂ ಸಿದ್ಧವಾಗುತ್ತದೆ.

**ದ್ವಿತೀಯಾದ್ವೈಭಯಮಿತಿ ಸದೃಶಾದ್ ಭೀತಿರುಚ್ಯತೇ ।**
**ನ ಚೇತ್ ದ್ವಿತೀಯಾದ್ ದ್ವಿಚನಾದ್ ಭೀಃ ಸ್ವಸ್ಯೈವ ಭವೇದ್ ಧ್ರುವಮ್ ।**
**ಯದೇಕಾಕೀ ನ ರಮತ ಇತ್ಯಸ್ಯಾನ್ಯಾರ್ಥಶೂನ್ಯವಾಕ್ ॥ ೪೬೫ ॥**

**ಅರ್ಥ–** ದ್ವಿತೀಯಾದ್ವೈಭಯಮಿತಿ= ದ್ವಿತೀಯಾದ್ವೈಭಯಂ ಭವತಿ ಎಂಬ ಶ್ರುತಿಯಿಂದ, ಸದೃಶಾತ್= ಸದೃಶವಾದ ಇನ್ನೊಂದು ವಸ್ತುವಿನಿಂದ, ಭೀತಿಃ= ಭಯವು, ಉಚ್ಯತೇ= ಹೇಳಲ್ಪಡುತ್ತದೆ, ನ ಚೇತ್= ಇಲ್ಲದಿದ್ದರೆ (ಅಥವಾ), ದ್ವಿತೀಯಾದ್ವಚನಾತ್= ಏಕಾಕೀ ನ ರಮತೇ ಎಂಬ ಮುಂದಿನ ವಾಕ್ಯದಿಂದ, ಸ್ವಸ್ಯೈವ= ತನಗೇ, ಭೀಃ= ಭಯವು, ಧ್ರುವಂ= ನಿಶ್ಚಯವಾಗಿ, ಭವೇತ್= ಉಂಟಾಗುತ್ತದೆ, ಯತ್= ಏಕೆಂದರೆ, ಏಕಾಕೀ ನ ರಮತೇ= ಏಕಾಕಿಯಾದವನು ಸುಖವಾಗಿರುವುದಿಲ್ಲ, ಇತಿ= ಎಂಬ, ಅನ್ಯಾರ್ಥಶೂನ್ಯವಾಕ್= ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲದಿರುವ, ವಾಕ್= ವಾಕ್ಯವು, ಅಸ್ತಿ= ಇದೆ.

**ಅನುವಾದ–** 'ದ್ವಿತೀಯಾದ್ವೈಭಯಂ ಭವತಿ' ಎಂಬ ಶ್ರುತಿಯು ಸದೃಶವಾದ ದ್ವಿತೀಯದಿಂದ ಭಯವುಂಟಾಗುವುದೆಂದು ಹೇಳುತ್ತದೆ. ಅಥವಾ 'ಏಕಾಕೀ ನ ರಮತೇ' ಏಕಾಕಿಯಾದವನು ಸುಖವಾಗಿರುವುದಿಲ್ಲ ಎಂಬ ಬೇರೆ ಅರ್ಥವನ್ನು ಮಾಡಲು ಸಾಧ್ಯವಿಲ್ಲದ ಮುಂದಿನ ವಾಕ್ಯವಿರುವುದರಿಂದ ಆ ವಾಕ್ಯದಿಂದ ದ್ವಿತೀಯಾದ್ ವೈ ಭಯಂ ಭವತಿ ಎಂಬ ವಾಕ್ಯವಾದ ತನಗೇ ಭಯವುಂಟಾಗುತ್ತದೆ.

**ಭಾವವಿಲಾಸಿನೀ–** ''ದ್ವಿತೀಯಾದ್ವೈ ಭಯಂ ಭವತೀ''ತಿ ಶ್ರುತೇಃ ಸ್ವಾಭಿಮತಾರ್ಥಂ ವದನ್ ಪರಾಭಿಮತಾರ್ಥಂ ತಯೈವ ದೂಷಯತಿ ॥ **ದ್ವಿತೀಯಾದಿತಿ** ॥ ಅಸ್ಯ ಗೋರ್ದ್ವಿತೀಯೇನ ಭವಿತವ್ಯಮಿತ್ಯುಕ್ತೇಃ ಸದೃಶೋ ಗೌರೇವಾನಿಯತೇ ನಾಶ್ವೋ ನ ಗರ್ದಭ ಇತಿ ವಚನೇನ ದ್ವಿತೀಯಶಬ್ದಸ್ಯ ಸದೃಶೇ ಪ್ರಯೋಗಾತ್ ಪ್ರತಿಗಜಾದಿನಾ ಯುದ್ಧಾದಿಜನಿತದಂತಭಂಗಾದಿ-ಭಯದರ್ಶನಾಚ್ಚೇತಿ ಭಾವಃ । ನ ಚೇದುಕ್ತಃ ಶ್ರುತ್ಯರ್ಥೋ೯ ನ ಚೇತ್ । ಸ್ವಸ್ಯ ಸ್ವತೋ ದ್ವಿತೀಯಮಾತ್ರಸ್ಯ ಭಯಜನಕತ್ವಂ ವದತೋ ವಾದಿನ ಇತ್ಯರ್ಥಃ । ಯದ್ಯಸ್ಮಾತ್ । ''ಏಕಾಕೀ ನ ರಮತ'' ಇತ್ಯನೇನೈತತ್ಪ್ರಕರಣಸ್ಥಿತಂ ತಸ್ಮಾದೇಕಾಕೀ ನ ರಮತ ಇತಿ ವಾಕ್ಯಂ ಗೃಹ್ಣಾತಿ । ಅನ್ಯಾರ್ಥಶೂನ್ಯವಾಗರ್ಥಾಂತರೇಽವಕಾಶಶೂನ್ಯವಾಕ್ । ಅನೇನ ನಿರವಕಾಶೈತದ್ವಚನಾ-ನುಸಾರೇಣ ಸಾವಕಾಶತ್ವದ್ವಚನಸ್ಯೇತ್ಯುಕ್ತ ಏವಾರ್ಥ ಇತಿ ಸೂಚಯತಿ ॥ ೪೬೫ ॥

**ವಿವರಣೆ–** ಇನ್ನು 'ದ್ವಿತೀಯಾದ್ವೈಭಯಂ ಭವತಿ' ಎಂಬ ಶ್ರುತಿಗೆ ಗ್ರಂಥಕಾರರು ತಮಗೆ ಅಭಿಮತವಾದ ಅರ್ಥವನ್ನು ಹೇಳುತ್ತಾರೆ. ಅದೇ ಶ್ರುತಿಯಿಂದಲೇ ಅನಭಿಮತವಾದ ಅರ್ಥವನ್ನು ನಿರಾಕರಿಸುತ್ತಾರೆ. 'ಅಸ್ಯಗೋಃ ದ್ವಿತೀಯೇನ ಭವಿತವ್ಯಂ' ಈ ಗೋವಿಗೆ ದ್ವಿತೀಯವನ್ನು ಹುಡುಕಬೇಕು ಎಂಬ ಮಾತಿಗೆ ಸದೃಶವಾದ ಇನ್ನೊಂದು ಗೋವನ್ನು ಹುಡುಕಬೇಕು. ಅಶ್ವವನ್ನಾಗಲೀ, ರಾಸಭವನ್ನಾಗಲೀ ಅಲ್ಲ ಎಂಬ ಶಾಸ್ತ್ರ ಪ್ರಸಿದ್ಧ ವಚನವಿರುವುದರಿಂದ ದ್ವಿತೀಯಶಬ್ದವು ಸದೃಶವಾದ ದ್ವಿತೀಯವನ್ನೇ ಹೇಳುತ್ತದೆ. ಅಥವಾ ಏಕಾಕೀ ನ ರಮತೇ ಎಂಬ ವಾಕ್ಯವು ದ್ವಿತೀಯಾದ್ವೈಭಯಂ ಎಂಬ ವಾಕ್ಯಕ್ಕೆ ವಿರೋಧಿಯಾದ್ದರಿಂದ 'ದ್ವಿತೀಯಾದ್ವೈಭಯಂ ಭವತಿ' ಎಂಬ ವಾಕ್ಯವೇ ಹೆದರುತ್ತದೆ ಎಂದು ಅಭಿಪ್ರಾಯ.

ದ್ವಿತೀಯಾದಾಶ್ರಮಾನ್ನೃಣಾಂ ಭಯಂ ಸ್ಯಾದ್ ಬಹು ಸಂಸೃತೇಃ ।
ಅತಸ್ತೃತೀಯಂ ತುರ್ಯಂ ವಾ ಪ್ರಥಮಾದಾಶ್ರಮಾದ್ ವ್ರಜೇತ್॥ ೪೬೬ ॥

ಇತಿ ವಾ ಸಾ ಶ್ರುತಿರ್ವಕ್ತಿ ಪುಣ್ಯಪಾಪಾಖ್ಯಯೋರ್ದ್ವಯೋಃ ।
ದ್ವಿತೀಯಾದ್ಧಿ ಭಯಂ ದುಃಖಂ ನರಕಾದ್ಯಂ ತತಃ ಸುಧೀಃ ।
ಪ್ರಥಮಂ ಧರ್ಮಮೇವೈಕಂ ಭಜೇದ್ ದ್ವಂದ್ವಸಹೋಽನ್ವಹಂ ॥ ೪೬೭ ॥

**ಅರ್ಥ–** ನೃಣಾಂ= ಮನುಷ್ಯರಿಗೆ, ಬಹುಸಂಸೃತೇಃ= ಬಹಳವಾದ ಸಂಸಾರಕ್ಕೆ ಕಾರಣವಾದುದರಿಂದ, ದ್ವಿತೀಯಾದಾಶ್ರಮಾತ್= ಎರಡನೆಯ ಆಶ್ರಮವಾದ ಗೃಹಸ್ಥಾಶ್ರಮದಿಂದ, ಭಯಂ ಸ್ಯಾತ್= ಭಯವುಂಟಾಗುತ್ತದೆ, ಅತಃ= ಆದ್ದರಿಂದ, ಪ್ರಥಮಾದಾಶ್ರಮಾತ್= ಮೊದಲನೆಯದಾದ ಬ್ರಹ್ಮಚರ್ಯಾಶ್ರಮದಿಂದಲೇ, ತೃತೀಯಂ= ಮೂರನೆಯದಾದ ವಾನಪ್ರಸ್ಥಾಶ್ರಮವನ್ನಾಗಲೀ, ತುರ್ಯಂ ವಾ= ಅಥವಾ ನಾಲ್ಕನೆಯದಾದ ಸಂನ್ಯಾಸಾಶ್ರಮವನ್ನಾಗಲೀ, ವ್ರಜೇತ್= ಸ್ವೀಕರಿಸಬೇಕು, ಇತಿ ವಾ=

ಎಂದಾಗಲೀ, ಸಾ ಶ್ರುತಿಃ= ದ್ವಿತೀಯಾದ್ವೈಭಯಂ ಎಂಬ ಶ್ರುತಿಯು, ವಕ್ತಿ= ಹೇಳುತ್ತದೆ, ಪುಣ್ಯಪಾಪಾಖ್ಯಯೋಃ= ಪುಣ್ಯ ಮತ್ತು ಪಾಪಗಳೆಂಬ, ದ್ವಯೋಃ= ಎರಡರ ಮಧ್ಯದಲ್ಲಿ, ದ್ವಿತೀಯಾದ್ಧಿ= ಎರಡನೆಯದಾದ ಪಾಪದಿಂದಲೇ, ಭಯಂ ದುಃಖಂ ನರಕಾದ್ಯಂ= ಭಯ, ದುಃಖವು ನರಕಾದಿಗಳು ಆಗುತ್ತದೆ, ತತಃ= ಆದ್ದರಿಂದ, ಸುಧೀಃ= ವಿವೇಕಿಯಾದವನು, ಅನ್ವಹಂ= ಯಾವಾಗಲೂ, ದ್ವಂದ್ವಸಹಃ= ದ್ವಂದ್ವಸಹಿಷ್ಣುವಾಗಿ, ಪ್ರಥಮಂ= ಮೊದಲನೆಯದಾದ, ಧರ್ಮಮೇವ ಏಕಂ= ಧರ್ಮವೊಂದನ್ನೇ, ಭಜೇತ್= ಆಶ್ರಯಿಸಬೇಕು.

**ಅನುವಾದ–** ದ್ವಿತೀಯಾಶ್ರಮವಾದ ಗೃಹಸ್ಥಾಶ್ರಮವು ಬಹಳವಾದ ಸಂಸಾರಕ್ಕೆ ಕಾರಣವಾಗಿರುವುದರಿಂದ ಮನುಷ್ಯರಿಗೆ ಭಯಜನಕವಾಗಿರುವುದರಿಂದ ಬ್ರಹ್ಮಚರ್ಯಾಶ್ರಮದಿಂದಲೇ ವಾನಪ್ರಸ್ಥಾಶ್ರಮವನ್ನಾಗಲೀ ಅಥವಾ ಸಂನ್ಯಾಸಾಶ್ರಮವನ್ನಾಗಲೀ ಸ್ವೀಕರಿಸಬೇಕು ಎಂದು ಆ ಶ್ರುತಿಯು ಹೇಳುತ್ತದೆ. ಪುಣ್ಯ ಪಾಪ ಇವೆರಡರ ಮಧ್ಯದಲ್ಲಿ ಎರಡನೆಯದಾದ ಪಾಪದಿಂದ ನರಕಾದಿದುಃಖವು ಇರುವುದರಿಂದ ವಿವೇಕಿಯಾದವನು ಯಾವಾಗಲೂ ದ್ವಂದ್ವಸಹಿಷ್ಣುವಾಗಿ ಮೊದಲನೆಯದಾದ ಧರ್ಮವೊಂದನ್ನೇ ಆಶ್ರಯಿಸಬೇಕು ಎಂದಾಗಲೀ (ಆ ಶ್ರುತಿಯು ಹೇಳುತ್ತದೆ).

**ಭಾವವಿಲಾಸಿನೀ–** ಏವಂ ಚ "ದ್ವಿತೀಯಾದ್ವೈ ಭಯಂ ಭವತೀ"ತಿ ಶ್ರುತೇರನಭಿಮತಾರ್ಥಸ್ಯಾಪಿ ತಯೈವ ಶ್ರುತ್ಯಾ ದೂಷಣಾದಪಿ ಚ ಮತ್ಕಾರಾಯ ಶ್ರುತೇರರ್ಥದ್ವಯಮುಕ್ತ್ವಾ ಪುನಶ್ಚ ಸರ್ವಾನುಭವಸಿದ್ಧಾಂ ದ್ವಿತೀಯಪದಸ್ವಾರಸ್ಯೇನೈವ ಲಬ್ಧಾಂಶ್ಚ ಶ್ರುತೇಶ್ಚತುರ್ದಶಾರ್ಥಾನಾಹ – **ದ್ವಿತೀಯಾದಿತ್ಯಾದಿನಾ** ॥ ಆಶ್ರಮಾದ್ಗೃಹಸ್ಥಾಶ್ರಮಾತ್ । ಸಂಸೃತೇಃ ಪುತ್ರಕಲತ್ರವಿತ್ತಗೇಹಾದಿ ರೂಪಸಂಸಾರಾನ್ನಿಮಿತ್ತಾತ್ । ತೃತೀಯಂ ವಾನಪ್ರಸ್ಥಾಶ್ರಮಂ ತುರೀಯಂ ಯತ್ಯಾಶ್ರಮಮ್ । ಉಭಯೋರಪಿ ಧರ್ಮಹೇತುತ್ವಾದಿತಿ ಭಾವಃ ॥ ೪೬೬–೪೬೭ ॥

**ವಿವರಣೆ–** ಹಿಂದಿನ ಶ್ಲೋಕದಲ್ಲಿ ದ್ವಿತೀಯಾದ್ವೈಭಯಂ ಎಂಬ ಶ್ರುತಿಗೆ ಎರಡು ಅರ್ಥಗಳನ್ನು ಹೇಳಿ ಶ್ರುತಿಗೆ ಅನಭಿಪ್ರೇತವಾದ ಅರ್ಥವನ್ನು ಅದೇ ಶ್ರುತಿಯೇ ನಿರಾಕರಿಸುತ್ತದೆ ಎಂಬ ಚಮತ್ಕಾರವನ್ನು ತೋರಿಸಲು ಪುನಃ ಸರ್ವಾನುಭವಸಿದ್ಧವಾದ, ದ್ವಿತೀಯಪದಸ್ವಾರಸ್ಯದಿಂದಲೇ ಲಭ್ಯವಾದ, ಹದಿನಾಲ್ಕು ಅರ್ಥಗಳನ್ನು ಇಲ್ಲಿಂದ ಪ್ರಾರಂಭಿಸಿ ಹೇಳುತ್ತಾರೆ.

ಇತಿ ವಾ ವಕ್ತಿ ಸತ್ಸಂಗಂ ಶಂಸತೀ ಮೋಕ್ಷಕಾರಣಂ ।
ದ್ವಯೋಃ ಸದಸತೋರ್ನೃಣಾಂ ದ್ವಿತೀಯಾದ್ವಾ ಭಯಂ ಜಗೌ ॥ ೪೬೮ ॥

**ಅರ್ಥ–** ಇತಿ ವಾ ವಕ್ತಿ= ಹೀಗಾದರೂ ಹೇಳುತ್ತದೆ (ಇದಕ್ಕೆ ಹಿಂದಿನ ಶ್ಲೋಕದಿಂದ ಅನ್ವಯ), ಆ ಶ್ರುತಿಯು, ನೃಣಾಂ= ಮನುಷ್ಯರಿಗೆ, ಸದಸತೋಃ ದ್ವಯೋಃ= ಸತ್ಸಂಗ ಮತ್ತು

ದುಸ್ಸಂಗ ಇವೆರಡರ ಮಧ್ಯದಲ್ಲಿ, ಸತ್ಸಂಗಂ= ಸತ್ಸಂಗವನ್ನು ಮೋಕ್ಷಕಾರಣಂ= ಮೋಕ್ಷಕಾರಣವೆಂದು, ಶಂಸತೀ= ಹೊಗಳುತ್ತಾ, ದ್ವಿತೀಯಾತ್= ಎರಡನೆಯದಾದ ದುಸ್ಸಂಗದಿಂದ, ಭಯಂ= ಭಯವನ್ನು, ಜಗೌ= ಹೇಳಿತು.

**ಅನುವಾದ–** ಸತ್ಸಂಗ ಮತ್ತು ದುಸ್ಸಂಗ ಇವೆರಡರ ಮಧ್ಯದಲ್ಲಿ ಸತ್ಸಂಗವು ಮೋಕ್ಷಕ್ಕೆ ಕಾರಣವೆಂದು ಹೇಳುತ್ತಾ ಶ್ರುತಿಯು ಎರಡನೆಯದಾದ ದುಸ್ಸಂಗದಿಂದ ಭಯವನ್ನು ಹೇಳಿತು.

**ಭಾವವಿಲಾಸಿನೀ–** ಮೋಕ್ಷಕಾರಣಂ ಸತ್ಸಂಗಂ ಶಂಸಂತೀ ಸ್ತುವಂತೀ । ಸದಸತೋಃ ಸತ್ಸಂಗಾಸತ್ಸಂಗಯೋರಿತ್ಯರ್ಥಃ । ದ್ವಿತೀಯಾದಸತ್ಸಂಗಾತ್ ॥ ೪೬೮ ॥

**ಏವಂ ದ್ವಿತೀಯಾಜ್ಜಗತೋ ಭಯಂ ಮೃತ್ಯುರ್ಯತೋ ನೃಣಾಮ್ ।**
**ತನ್ಮೃತ್ಯುಭಯಭಂಗಾಯ ಪ್ರಥಮಂ ಪುರುಷೋತ್ತಮಮ್ ॥ ೪೬೯ ॥**

**ಭಜೇದನನ್ಯಭಕ್ತಃ ಸನ್ನಿತಿ ವಾ ಶಾಸ್ತಿ ಸಜ್ಜನಾನ್ ।**
**ಇತಿ ಸಾಮಾನ್ಯವಾಗ್ ವಕ್ತಿ ಮೋಕ್ಷಹೇತುಪರಂಪರಾಮ್ ॥ ೪೭೦ ॥**

**ಅರ್ಥ–** ಏವಂ= ಆದರಂತೆ, ದ್ವಿತೀಯಾತ್ ಜಗತಃ= ಬ್ರಹ್ಮರುದ್ರಾದಿ ಜಗತ್ತಿನಿಂದ, ಅಥವಾ ಕೈಲಾಸ ಭೂಲೋಕಾದಿಗಳಿಂದ, ಯತಃ= ಯಾವ ಕಾರಣದಿಂದ, ನೃಣಾಂ= ಮನುಷ್ಯರಿಗೆ, ಭಯಂ ಮೃತ್ಯುಃ= ಮೃತ್ಯುರೂಪವಾದ ಭಯವಿದೆಯೋ, ತತ್= ಆದ್ದರಿಂದ, ಮೃತ್ಯುಭಯ ಭಂಗಾಯ= ಮೃತ್ಯುಭಯವನ್ನು ಪರಿಹರಿಸಿಕೊಳ್ಳಲು, ಪ್ರಥಮಂ= ಪ್ರಥಮನಾದ ಸರ್ವೋತ್ತಮನಾದ, ಪುರುಷೋತ್ತಮಂ= ಪುರುಷೋತ್ತಮನನ್ನು, ಅನನ್ಯಭಕ್ತಃಸನ್= ಅನನ್ಯ ಭಕ್ತನಾಗಿ, ಭಜೇತ್= ಭಜಿಸತಕ್ಕದ್ದು, ಇತಿ ವಾ= ಎಂದಾಗಲೀ, ಸಜ್ಜನಾನ್= ಸಜ್ಜನರನ್ನು ಕುರಿತು, ಶಾಸ್ತಿ= ಶಾಸನವನ್ನು ಮಾಡುತ್ತಿದೆ, ಇತಿ= ಈ ರೀತಿಯಾಗಿ, ಸಾಮಾನ್ಯವಾಕ್= ದ್ವಿತೀಯ ಎಂಬ ಸಾಮಾನ್ಯ ವಚನವು, ಮೋಕ್ಷಹೇತುಪರಂಪರಾಂ= ಮೋಕ್ಷಹೇತು ಪರಂಪರೆಯನ್ನೇ, ವಕ್ತಿ= ಹೇಳುತ್ತದೆ.

**ಅನುವಾದ–** ಮನುಷ್ಯರಿಗೆ ದ್ವಿತೀಯವಾದ ಬ್ರಹ್ಮರುದ್ರಾದಿಗಳ ಲೋಕಗಳಿಂದಲೂ ಮತ್ತು ಭೂಲೋಕಾದಿಗಳಿಂದಲೂ ಮೃತ್ಯುರೂಪವಾದ ಭಯವಿರುವುದರಿಂದ ಅಂತಹ ಮೃತ್ಯುಭಯಪರಿಹಾರಕ್ಕಾಗಿ ಪ್ರಥಮನಾದ ಸರ್ವೋತ್ತಮನಾದ ಪುರುಷೋತ್ತಮನನ್ನು ಅನನ್ಯಭಕ್ತಿಯಿಂದ ಭಜಿಸತಕ್ಕದ್ದು ಎಂದಾಗಲೀ ಆ ಶ್ರುತಿಯು ಸಜ್ಜನರಿಗೆ ಶಾಸನವನ್ನು ಮಾಡುತ್ತದೆ. ಹೀಗೆ ದ್ವಿತೀಯ ಎಂಬ ಸಾಮಾನ್ಯ ವಚನವು ಮೋಕ್ಷಹೇತುಪರಂಪರೆಯನ್ನೇ ಹೇಳುತ್ತದೆ.

**ಭಾವವಿಲಾಸಿನೀ–** ದ್ವಿತೀಯಾಜ್ಜಗತೋ ಬ್ರಹ್ಮರುದ್ರಾದಿಜಗತಃ । ತಲ್ಲೋಕಭೂಲೋಕಾದಿ ಜಗತಶ್ಚ ಮೃತ್ಯುರ್ಭಯಂ ಮೃತ್ಯುರೂಪಭಯಮಿತ್ಯರ್ಥಃ । ಮರ್ತ್ಯೋ ಮೃತ್ಯುವ್ಯಾಲಭೀತ ಇತಿ

ವಚನಾತ್ । ತತ್ ತಸ್ಮಾತ್ ವಿಷ್ಣೋರನ್ಯೇಷಾಂ ಮೃತ್ಯುನಿವಾರಕತ್ವಾಭಾವಾತ್ । ವಿಷ್ಣೋರೇವ ಪ್ರಥಮತ್ವೋಪಪಾದನಾಯ ಪುರುಷೋತ್ತಮಮಿತ್ಯುಕ್ತಮ್ । ಸಾಮಾನ್ಯವಾಕ್ ವಿಶೇಷ್ಯಾವಧಿ ಭೂತಂ ಕಂಚಿತ್‌ಪದಾರ್ಥಮನುಕ್ತ್ವಾ ತೂಷ್ಣೀಂ ದ್ವಿತೀಯಾದಿತಿ ವಾಗಿತ್ಯರ್ಥಃ। ತತಶ್ಚಾವಧೇ- ರೂಹ್ಯತ್ವಾದ್ಯಥಾಸಂಭವಮೂಹೇ ಉಕ್ತಾರ್ಥಲಾಭ ಇತಿ ಲಾಭಃ ॥ ೪೯-೪೭೦ ॥

**ವಿವರಣೆ–** ಪುರುಷೋತ್ತಮನನ್ನು ಬಿಟ್ಟು ಬೇರೆ ಯಾರಿಗೂ ಮೃತ್ಯುಭಯನಿವಾರಕತ್ವ ಇಲ್ಲವಾದ್ದರಿಂದ ವಿಷ್ಣುವಿಗೇ ಪ್ರಥಮತ್ವವು ಉಂಟಾಗುತ್ತದೆ ಎಂದು ಸೂಚಿಸಲು ಪುರುಷೋತ್ತಮಂ ಎಂದು ಹೇಳಿದ್ದಾರೆ. ದ್ವಿತೀಯ ಎಂಬ ಶಬ್ದವು ಯಾವುದರಿಂದ ದ್ವಿತೀಯ ಎಂದು ಹೇಳದೆ ಸಾಮಾನ್ಯವಾಗಿ ದ್ವಿತೀಯ ಎಂದು ಹೇಳುವುದರಿಂದ ಮೋಕ್ಷಹೇತುವಾದ ಧರ್ಮಾಚರಣೆ, ದ್ವಂದ್ವ ಸಹಿಷ್ಣುತೆ, ಸತ್ಸಂಗ, ವಿಷ್ಣುವಿನಲ್ಲಿ ಅನನ್ಯಭಕ್ತಿ ಮೊದಲಾದ ಮೋಕ್ಷಸಾಧನಪರಂಪರೆಯನ್ನೇ ಹೇಳುತ್ತದೆ ಎಂದು ಅಭಿಪ್ರಾಯ.

**ನ ಚೇದ್ ದ್ವಿತೀಯಾದ್ ವಚನಾತ್ ಸ್ವಸ್ಯಾ ಭಯಮಿತೀರಿತಮ್ ॥ ೪೭೧ ॥**

**ಅರ್ಥ–** ನ ಚೇತ್= ಹೀಗೆ ಅರ್ಥವನ್ನು ಅಂಗೀಕರಿಸದಿದ್ದರೆ, ದ್ವಿತೀಯಾತ್ ವಚನಾತ್= ಏಕಾಕಿ ನ ರಮತೇ ಎಂಬ ದ್ವಿತೀಯವಚನದಿಂದ, ಸ್ವಸ್ಯಾಃ= ತನಗೇ, ಭಯಂ= ವಿರೋಧ ರೂಪವಾದ ಭಯವು ಉಂಟಾಗುತ್ತದೆ, ಇತಿ= ಎಂದು, ಈರಿತಂ= ಮೊದಲೇ ಹೇಳಿದ್ದೇವೆ.

**ಅನುವಾದ–** ಈ ಅರ್ಥವನ್ನು ಅಂಗೀಕರಿಸದಿದ್ದರೆ ಏಕಾಕೀ ನ ರಮತೇ ಎಂಬ ದ್ವಿತೀಯವಚನದಿಂದ ತನಗೇ ಭಯವುಂಟಾಗುತ್ತದೆ ಎಂದು ಮೊದಲೇ ಹೇಳಿದ್ದೇವೆ.

**ಭಾವವಿಲಾಸಿನೀ–** ವಿಪಕ್ಷೇ ಪ್ರಾಗುಕ್ತಂ ಬಾಧಕಂ ಸೂಚಯತಿ ॥ **ನ ಚೇದಿತಿ** ॥ ದ್ವಿತೀಯಾತ್ ಸ್ವಾಪೇಕ್ಷಯಾ ದ್ವಿತೀಯಾತ್ ಸ್ವವಿರುದ್ಧಾರ್ಥಕಾದ್ವಾ ವಚನಾದೇಕಾಕೀ ನ ರಮತ ಇತಿ ವಚನಾತ್ । ಸ್ವಸ್ಯಾ ದ್ವಿತೀಯಾದ್ವೈ ಭಯಂ ಭವತೀತಿ ಶ್ರುತೇರೇವೇತ್ಯರ್ಥಃ । ಭಯಂ ಪರಸ್ಪರ- ವಿರೋಧಾಖ್ಯಭಯಮ್ । ನ ಕೇವಲಮೇತಾವತ್ ಕಿಂತು ಭೇದಪ್ರತಿಪಾದಕ-ದ್ವಾಸುಪರ್ಣೇ- ತ್ಯಾದಿ ಶ್ರುತಿಭ್ಯಃ ಶ್ರೌತ ಯುಕ್ತಿಭ್ಯಶ್ಚ ॥ ೪೭೧ ॥

**ವಿವರಣೆ–** ಏಕಾಕೀ ನರಮತೇ ಎಂಬ ವಾಕ್ಯದ ವಿರೋಧರೂಪವಾದ ಭಯವು ಉಪಲಕ್ಷಣ. ಭೇದಪ್ರತಿಪಾದಕವಾದ ದ್ವಾಸುಪರ್ಣಾದಿಶ್ರುತಿಗಳ ಭಯವೂ ಶ್ರುತಿ- ಮೂಲವಾದ ಯುಕ್ತಿಗಳ ಭಯವೂ ಉಂಟಾಗುತ್ತದೆ ಎಂದು ಅಭಿಪ್ರಾಯ.

**ಏಕದ್ವಿತೀಯತೋ ಭೀತಾ ಸಾಽತಿಭೀತೇತಿ ಮೇ ಮತಿಃ ।**
**ಬಹೂನಾಂ ಭೇದವಾಕ್ಯಾನಾಂ ಯುಕ್ತೀನಾಂ ಚ ಪರಾಕ್ರಮಾತ್ ॥ ೪೭೨ ॥**

**ಅರ್ಥ–** ಏಕದ್ವಿತೀಯತೋ= ಏಕಾಕೀ ನ ರಮತೇ ಎಂಬ ಒಂದು ದ್ವಿತೀಯದಿಂದ, ಭೀತಾ= ಹೆದರಿದ ಆ ಶ್ರುತಿಯು, ಬಹೂನಾಂ= ಅನೇಕ, ಭೇದವಾಕ್ಯಾನಾಂ= ಭೇದವಾಕ್ಯಗಳ,

ಚ= ಮತ್ತು, ಯುಕ್ತೀನಾಂ= ಯುಕ್ತಿಗಳ, ಪರಾಕ್ರಮಾತ್= ಸಾಮರ್ಥ್ಯದಿಂದ, ಅತಿಭೀತಾ= ಬಹಳ ಭಯಗ್ರಸ್ತವಾಗುತ್ತದೆ, ಇತಿ= ಎಂದು, ಮೇ ಮತಿಃ= ನನ್ನ ಅಭಿಪ್ರಾಯ.

**ಅನುವಾದ–** ಏಕಾಕೀ ನ ರಮತೇ ಎಂಬ ಒಂದು ಶ್ರುತಿಗೇ ಹೆದರಿದ ದ್ವಿತೀಯಾದ್ವೈಭಯಂ ಎಂಬ ಶ್ರುತಿಯು ಭೇದಪ್ರತಿಪಾದಕವಾದ ಅನೇಕ ಶ್ರುತಿಗಳ ಮತ್ತು ಯುಕ್ತಿಗಳ ಪರಾಕ್ರಮದಿಂದ ಬಹಳವಾಗಿ ಹೆದರುತ್ತದೆ ಎಂದು ನನ್ನ ಅಭಿಪ್ರಾಯ.

**ಭಾವವಿಲಾಸಿನೀ–** ಜಾತ್ಯೇಕವಚನತಯಾ ದ್ವಿತೀಯಶಬ್ದವಾಚ್ಯೇಭ್ಯೋ ಬಹುಭ್ಯೋ ಭಯಂ ಚ ಸ್ಯಾದಿತ್ಯಾಹ – **ಏಕೇತಿ** ॥ ೪೭೨ ॥

**ವಿವರಣೆ–** ದ್ವಿತೀಯಾತ್ ಎಂಬಲ್ಲಿರುವ ಏಕವಚನವು ಜಾತ್ಯೇಕವಚನವೆಂದು ತಿಳಿದುಕೊಂಡು ಅನೇಕ ಭೇದಪ್ರತಿಪಾದಕಶ್ರುತಿಗಳನ್ನೂ ಮತ್ತು ಯುಕ್ತಿಗಳನ್ನೂ ತೆಗೆದುಕೊಳ್ಳಬೇಕು ಎಂದು ಅಭಿಪ್ರಾಯ.

**ಚಿದಚಿದ್ರೂಪಜಗತಾ ಸರ್ವೇಣೈಕ್ಯಂ ಯದೀಷ್ಯತೇ ।**
**ದ್ವಿತೀಯತೋ ಭಯಂ ತರ್ಹಿ ದ್ವಿತೀಯಾರ್ಥಾಚ್ಚ ಪೂರ್ವಭೀಃ ॥ ೪೭೩ ॥**

**ಅರ್ಥ–** ಸರ್ವೇಣ= ಸಮಗ್ರವಾದ, ಚಿದಚಿದ್ರೂಪಜಗತಾ= ಚೇತನ ಜಡಾತ್ಮಕವಾದ ಜಗತ್ತಿನಿಂದ, ಐಕ್ಯಂ= ಐಕ್ಯವನ್ನು, ಯದಿ= ಒಂದು ಪಕ್ಷ, ಇಷ್ಯತೇ= ಅಂಗೀಕರಿಸುವುದಾದರೆ, ತರ್ಹಿ= ಆಗ, ದ್ವಿತೀಯತಃ= ಎರಡನೆಯದಾದ ಜಡೈಕ್ಯದಿಂದ, ಭಯಂ= ಭಯವು ಉಂಟಾಗುತ್ತದೆ, ಚ= ಮತ್ತು, ದ್ವಿತೀಯಾರ್ಥಾತ್= ಏಕಾಕೀ ನರಮತೇ ಎಂಬ ದ್ವಿತೀಯ ಶ್ರುತಿಯ ಅರ್ಥದಿಂದಲೂ, ಪೂರ್ವಭೀಃ= ಮೊದಲನೆಯ ಅರ್ಥವಾದ ಚೇತನೈಕ್ಯಕ್ಕೆ ಭಯವು ಉಂಟಾಗುತ್ತದೆ.

**ಅನುವಾದ–** ಸಮಗ್ರವಾದ ಚಿತ್‌ಜಡರೂಪವಾದ ಜಗತ್ತಿನಿಂದ ಐಕ್ಯವನ್ನು ಅಂಗೀಕರಿಸುವುದಾದರೆ ಎರಡನೆಯದಾದ ಜಡೈಕ್ಯದಿಂದ ಭಯವುಂಟಾಗುತ್ತದೆ. ಏಕಾಕೀ ನರಮತೇ ಎಂಬ ದ್ವಿತೀಯ ಶ್ರುತಿಯಿಂದಲೂ ಮೊದಲನೆಯ ಅರ್ಥವಾದ ಚೇತನೈಕ್ಯಕ್ಕೂ ಭಯವುಂಟಾಗುತ್ತದೆ.

**ಭಾವವಿಲಾಸಿನೀ–** ಶ್ರುತಿತಾತ್ಪರ್ಯವಿಷಯತಯಾ ಪರಾಭಿಮತೈಕ್ಯೇಪ್ಯನಯೈವ ಶ್ರುತ್ಯಾ ವಿರೋಧಮಾಹ – **ಚಿದಚಿದಿತಿ** ॥ ದ್ವಿತೀಯಾದಚಿದ್ರೂಪಜಗತಃ । ಮಿಥ್ಯಾಭೂತಜಡಸ್ಯ ಬ್ರಹ್ಮಣೈಕ್ಯಾನಂಗೀಕಾರಾದಿತಿ ಭಾವಃ । ದ್ವಿತಿಯಾರ್ಥತ್ ಪ್ರಥಮೋಕ್ತಾರ್ಥಾದುಪರಿ ಕಥಿತಾರ್ಥಾತ್ ದ್ವಿತೀಯಾತ್ ''ಏಕಾಕೀ ನ ರಮತ'' ಇತಿ ದ್ವಿತೀಯವಾಕ್ಯಾತ್ ಪೂರ್ವಭೀಃ ಪ್ರಥಮೋಕ್ತಸ್ಯ ಚಿದ್ರೂಪ- ಜಗದೈಕ್ಯಸ್ಯಾಪಿ ಭೀಃ ಸ್ಯಾದಿತಿ ಯೋಜನಾ । ಚೇತನೈಕಾಕಿತ್ವಸ್ಯ

**ಸ್ವಸಮಾನಜಾತೀಯಚೇತನಾಂತರೇ ಸತ್ಯೇವ ಪರಿಹಾರಾತ್ । ನ ಹಿ ಘಟಂ ಗರ್ದಭಂ ವಾಽಽದಾಯ ಗಚ್ಛಂದೇವದತ್ತೋ ನೈಕಾಕೀತಿ ಭಾವಃ ॥ ೪೭೩ ॥**

**ವಿವರಣೆ–** ಎರಡನೆಯ ಅರ್ಥ ಜಡೈಕ್ಯ. ಜಡವು ಮಿಥ್ಯೆಯಾದುದರಿಂದ ಸತ್ಯವಾದ ಬ್ರಹ್ಮನಿಗೂ ಮತ್ತು ಮಿಥ್ಯಾಭೂತವಾದ ಜಡಕ್ಕೂ ಐಕ್ಯವು ಕೂಡುವುದಿಲ್ಲ ಎನ್ನುವುದು ಒಂದು ಭಯ. ಇನ್ನು ಮೊದಲನೆಯ ಅರ್ಥ ಚೇತನೈಕ್ಯ. ಆ ಅರ್ಥವನ್ನು ಅಂಗೀಕರಿಸಿದರೆ ಏಕಾಕೀ ನರಮತೇ ಎಂಬ ಶ್ರುತಿಯು ಏಕಾಕಿಗೆ ಸುಖವಿಲ್ಲ ಎಂದು ಹೇಳುವುದರಿಂದ ಸುಖಾಭಾವರೂಪವಾದ ಫಲದ ಪ್ರಾಪ್ತಿಯ ಪ್ರಸಂಗವು ಬರುವುದರಿಂದ ಜೀವಬ್ರಹ್ಮೈಕ್ಯವು ಏಕಾಕೀ ನ ರಮತೇ ಎಂಬ ಶ್ರುತ್ಯರ್ಥಕ್ಕೆ ಹೆದರುತ್ತದೆ. ಚೇತನನಿಗೆ ಏಕತ್ವವು ಹೋಗಬೇಕಾದರೆ ಸಜಾತೀಯವಾದ ಇನ್ನೊಂದು ಚೇತನವೇ ಇರಬೇಕು. ಘಟವನ್ನಾಗಲೀ, ಗರ್ದಭವನ್ನಾಗಲೀ ತೆಗೆದುಕೊಂಡು ಹೋಗುವ ದೇವದತ್ತನನ್ನು ಜನರು ಏಕಾಕಿ ಎಂದೇ ಕರೆಯುತ್ತಾರೆ. ಆದ್ದರಿಂದ ಚೇತನನಿಗೆ ಸಮಾನವಾಗಿ ಇನ್ನೊಂದು ಚೇತನವನ್ನೇ ಅಂಗೀಕರಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ಅರ್ಥದ್ವಯೇ ದ್ವಿತೀಯಾರ್ಥಾದ್ ವಿರಮ್ಯ ವ್ಯಾಪೃತಿರ್ಭಯಮ್॥ ೪೭೪ ॥**

**ಅರ್ಥ–** ಅರ್ಥದ್ವಯೇ= ಚೇತನರಿಗೆ ಅಭೇದ ಮತ್ತು ಜಡಗಳಿಗೆ ಬ್ರಹ್ಮವ್ಯತಿರೇಕೇಣ ಅಸತ್ತ್ವ ಎಂಬ ಎರಡು ಅರ್ಥವನ್ನು ಅಂಗೀಕರಿಸಿದರೆ, ದ್ವಿತೀಯಾರ್ಥಾತ್= ಎರಡನೆಯ ಅರ್ಥದಿಂದ, ವಿರಮ್ಯ ವ್ಯಾಪೃತಿಃ= ವಿರಮ್ಯವ್ಯಾಪಾರರೂಪವಾದ, ಭಯಂ= ಭಯವು ಉಂಟಾಗುತ್ತದೆ.

**ಅನುವಾದ–** ಜೀವರಿಗೆ ಬ್ರಹ್ಮೈಕ್ಯ ಮತ್ತು ಜಡಗಳಿಗೆ ಬ್ರಹ್ಮವ್ಯತಿರೇಕೇಣ ಅಸತ್ತ್ವ ಎಂಬ ಎರಡು ಅರ್ಥವನ್ನು ಅಂಗೀಕರಿಸಿದರೆ ಎರಡನೆಯ ಅರ್ಥದಿಂದ ಶ್ರುತಿಗೆ ವಿರಮ್ಯವ್ಯಾಪಾರರೂಪವಾದ ಭಯವು ಉಂಟಾಗುತ್ತದೆ.

**ಭಾವವಿಲಾಸಿನೀ– ಅರ್ಥದ್ವಯೇ ಸ್ವರೂಪೈಕ್ಯಸ್ವವ್ಯತಿರೇಕೇಣಾಭಾವರೂಪಾರ್ಥದ್ವಯೇ । ದ್ವಿತೀಯಾರ್ಥಾತ್ ಸ್ವವ್ಯತಿರೇಕೇಣಾಭಾವರೂಪಾರ್ಥಾತ್ । ವಿರಮ್ಯ ವ್ಯಾಪಾರಾಖ್ಯಭಯಂ ಸ್ಯಾದಿತಿ ಭಾವಃ ॥ ೪೭೪ ॥**

**ವಿವರಣೆ–** ಶಬ್ದವು ಒಂದು ಕರಣ. ಕರಣವು ಒಟ್ಟಿಗೆ ಎರಡು ವ್ಯಾಪಾರಗಳನ್ನು ಮಾಡುವುದಿಲ್ಲ. ಒಂದಾದಮೇಲೊಂದರಂತೆ ವ್ಯಾಪಾರ ಮಾಡಬೇಕು. ಇದಕ್ಕೆ ವಿರಮ್ಯವ್ಯಾಪಾರವೆಂದು ಹೇಳುತ್ತಾರೆ. ಕುಠಾರಾದಿಗಳಲ್ಲಿ ಚೇತನಾಧೀನವಾಗಿ ಅದು ಕಂಡುಬಂದರೂ ಶಬ್ದದಲ್ಲಿ ಯಾರೂ ವಿರಮ್ಯವ್ಯಾಪಾರವನ್ನು ಅಂಗೀಕರಿಸುವುದಿಲ್ಲ. ಶಬ್ದವು ಒಟ್ಟಿಗೆ ಎರಡು ಅರ್ಥಗಳನ್ನು ಹೇಳಲಾರದು. ಒಂದಾದನಂತರ ಇನ್ನೊಂದು

ಅರ್ಥವನ್ನು ಹೇಳಿದರೆ ಆಗ ವಿರಮ್ಯವ್ಯಾಪಾರರೂಪವಾದ ದೋಷವು ಬರುತ್ತದೆ ಎಂದು ಅಭಿಪ್ರಾಯ.

**ಮುಚ್ಯಮಾನಾಣುನಾ ಚೈಕ್ಯಮುಚ್ಯಮಾನಮನೀದೃಶಿ ।**
**ದ್ವಿತೀಯಾ ತೇ ಭಯಂ ದದ್ಯಾತ್ ತಸ್ಮಾದಸ್ಮಾದ್ ವಿಲಕ್ಷಣಾತ್ ॥ ೪೭೫ ॥**

**ಅರ್ಥ–** ಮುಚ್ಯಮಾನ= ಮೋಕ್ಷವನ್ನು ಪಡೆಯುವ, ಅಣುನಾ= ಅಣುಜೀವನಿಂದ, ಅನೀದೃಶಿ= ಅಂತಹವನಲ್ಲದ ಎಂದರೆ ನಿತ್ಯಮುಕ್ತನಾದ ಮತ್ತು ವ್ಯಾಪ್ತನಾದ ಬ್ರಹ್ಮನಲ್ಲಿ ಉಚ್ಯಮಾನಂ= ಹೇಳಲ್ಪಡುವ, ಐಕ್ಯಂ= ಐಕ್ಯವು, ಅಸ್ಮಾತ್= ಈ ಜೀವನಿಂದ, ವಿಲಕ್ಷಣಾತ್= ವಿಲಕ್ಷಣನಾದ, ದ್ವಿತೀಯಾತ್= ಬ್ರಹ್ಮರೂಪವಾದ ದ್ವಿತೀಯದಿಂದ, ತೇ= ನಿನಗೆ, ಭಯಂ= ಭಯವನ್ನು, ದದ್ಯಾತ್= ಉಂಟುಮಾಡುತ್ತದೆ.

**ಅನುವಾದ–** ಮೋಕ್ಷವನ್ನು ಪಡೆಯುವ ಜೀವನಿಗೆ ವ್ಯಾಪ್ತನಾದ ಮತ್ತು ನಿತ್ಯಮುಕ್ತನಾದ ಬ್ರಹ್ಮನ ಜೊತೆಯಲ್ಲಿ ಹೇಳಲ್ಪಡುವ ಐಕ್ಯವು ಜೀವನಿಂದ ವಿಲಕ್ಷಣನಾದ ಬ್ರಹ್ಮರೂಪನಾದ ದ್ವಿತೀಯನಿಂದ ನಿನಗೆ ವಿರೋಧರೂಪವಾದ ಭಯವನ್ನು ಉಂಟುಮಾಡುತ್ತದೆ.

**ಭಾವವಿಲಾಸಿನೀ–** ಮುಚ್ಯಮಾನಾಣುಜೀವೇನ । ಅನೀದೃಶಿ ನಿತ್ಯಮುಕ್ತೇ ವ್ಯಾಪ್ತೇ ಬ್ರಹ್ಮಣ್ಯುಚ್ಯಮಾನೈಕ್ಯಮ್ । ಅಸ್ಮಾನ್ಮುಚ್ಯಮಾನಾಣುಜೀವಾತ್ । ಉಕ್ತವಿಧಾಯಾ ವಿಲಕ್ಷಣಾತ್ತಸ್ಮಾತ್ ಬ್ರಹ್ಮರೂಪಾತ್ ದ್ವಿತೀಯಾ ಕೇನೈಕ್ಯಂ ಇತಿ ಪ್ರಶ್ನೇ ಬ್ರಹ್ಮಣೇತಿ ದ್ವಿತೀಯವಾರೋಕ್ತಾತ್ । ತೇ ಮಾಯಾವಾದಿನಸ್ತವ ಭಯಂ ವಿರೋಧರೂಪಭಯಂ ದದ್ಯಾದಿತಿ ಯೋಜನಾ ॥ ೪೭೫ ॥

**ವಿವರಣೆ–** ಜೀವನಲ್ಲಿ ಅಣುತ್ವ ಮತ್ತು ಬದ್ಧತ್ವವಿದೆ, ಬ್ರಹ್ಮನಲ್ಲಿ ವಿಭುತ್ವ ಮತ್ತು ನಿತ್ಯಮುಕ್ತತ್ವವಿದೆ. ಇವು ವಿರುದ್ಧಧರ್ಮಗಳು. ಆದ್ದರಿಂದ ಇವುಗಳಿಗೆ ಐಕ್ಯವನ್ನು ಹೇಳಿದರೆ ವಿರುದ್ಧಧರ್ಮಾಧಿಕರಣತ್ವರೂಪವಾದ ಯುಕ್ತಿಯ ವಿರೋಧವು ಬರುತ್ತದೆ ಎಂದು ಅಭಿಪ್ರಾಯ.

**ಸತ್ತ್ವೈವಿಧ್ಯಂ ಯದಿಷ್ಟಂ ತೇ ದ್ವಿತೀಯಾದ್ವೈ ಭಯಂ ತದಾ ।**
**ಸ್ಯಾದಾದ್ಯಬ್ರಹ್ಮಣೋ ನೋಚೇದ್ ದ್ವಿತೀಯಾದ್ ವಾದಿನೋ ಭಯಮ್ ॥ ೪೭೬ ॥**

**ಅರ್ಥ–** ಯತ್= ಯಾವ, ಸತ್ತ್ವೈವಿಧ್ಯಂ= ಸತ್ತ್ವೈವಿಧ್ಯವು, ತೇ= ನಿನಗೆ, ಇಷ್ಟಂ= ಇಷ್ಟವಾಗಿದೆಯೋ, ತದಾ= ಆದರಲ್ಲಿ, ದ್ವಿತೀಯಾತ್= ಎರಡನೆಯದಾದ ವ್ಯಾವಹಾರಿಕ ಸತ್ತ್ವದಿಂದ, ತೇ= ನಿನಗೆ, ಭಯಂ ಸ್ಯಾತ್= ಭಯವುಂಟಾಗುತ್ತದೆ, ಆದ್ಯಬ್ರಹ್ಮಣಃ=

ಮೊದಲನೆಯ ಬ್ರಹ್ಮನಿಂದ, ನೋಚೇತ್= ಭಯವಿಲ್ಲದಿದ್ದರೂ, ದ್ವಿತೀಯಾತ್= ಎರಡನೆಯವನಾದ, ವಾದಿನಃ= ತತ್ತ್ವವಾದಿಯಿಂದ, ಭಯಂ= ಭಯವು ಉಂಟಾಗುತ್ತದೆ.

**ಅನುವಾದ–** ನಿನಗೆ ಇಷ್ಟವಾದ ಸತ್ತಾತ್ರೈವಿಧ್ಯದಲ್ಲಿ ದ್ವಿತೀಯವಾದ ವ್ಯಾವಹಾರಿಕ ಸತ್ತ್ವದಿಂದ ನಿನಗೆ ಭಯವುಂಟಾಗುತ್ತದೆ. ಮೊದಲನೆಯ ಬ್ರಹ್ಮನಿಂದ ಭಯವಿಲ್ಲದಿದ್ದರೂ ಎರಡನೆಯವನಾದ ಪ್ರತಿವಾದಿಯಾದ ತತ್ತ್ವವಾದಿಯಿಂದ ನಿನಗೆ ಭಯವುಂಟಾಗುತ್ತದೆ.

**ಭಾವವಿಲಾಸಿನೀ–** ಇಷ್ಟಂ ವಿಶ್ವಸತ್ಯತ್ವಪ್ರತಿಪಾದಕಶ್ರುತಿವಿರೋಧಪರಿಹಾರಾಯಾಭಿಮತಮ್ । ದ್ವಿತೀಯಾದ್ವ್ಯಾವಹಾರಿಕಸತ್ಯತ್ವೇನಾಂಗೀಕೃತಾಜ್ಜಗತಃ । ಭಯಂ ಬ್ರಹ್ಮಸತ್ಯತ್ವಪ್ರತಿಪಾದಕ ಶ್ರುತೀನಾಮಪಿ ವ್ಯವಹಾರಿಕಸತ್ಯತ್ವಪರತ್ವಸಂಭವೇನ ಬ್ರಹ್ಮಣ ಏವಾಭಾವಾಖ್ಯಭಯಮ್ । ಆದ್ಯ-ಬ್ರಹ್ಮಣಃ ಪಾರಮಾರ್ಥಿಕತ್ವೇನಾಂಗೀಕೃತ ಬ್ರಹ್ಮಣಃ । ನೋ ಚೇತ್ ಸತ್ರೈವಿಧ್ಯಂ ನೋ ಚೇತ್ । ದ್ವಿತೀಯಾದ್ವಾದಿನೋ ವಿಶ್ವಂ ಸತ್ಯಮಿತ್ಯಾದಿ ಶ್ರುತಿಬಲೇನ ಜಗತ್ಸತ್ಯತ್ವಂ ವದತೋ ವಾದಿನಃ ಸಕಾಶಾತ್ । ಭಯಂ ತಂ ಪ್ರತಿ ಪ್ರತ್ಯುತ್ತರಾಭಾವರೂಪ ಭಯಮ್ ॥ ೪೭೬ ॥

**ವಿವರಣೆ –** ವ್ಯಾವಹಾರಿಕವೆಂದರೆ ಬಾಧ್ಯವೆಂದು ಅಂಗೀಕರಿಸುವುದರಿಂದ ವ್ಯಾವಹಾರಿಕಸತ್ತ್ವ ಎಂಬ ಮಾತು ವ್ಯಾಹತವಾಗುತ್ತದೆ. ಏಕೆಂದರೆ ಸತ್ಯವೆಂದರೆ ಅಬಾಧ್ಯವಾದುದು ಎಂದು ಅರ್ಥ.

**ಇತ್ಥಂ ರಜ್ಜುಭ್ರಮಾತ್ ಸರ್ಪಗ್ರಾಹೀ ತ್ವಂ ಹಾ ಹತೋಽಸ್ಯಹೋ ॥ ೪೭೭ ॥**

**ಅರ್ಥ–** ಇತ್ಥಂ= ಈ ರೀತಿಯಾಗಿ, ರಜ್ಜುಭ್ರಮಾತ್= ಹಗ್ಗವೆಂಬ ಭ್ರಮದಿಂದ, ಸರ್ಪಗ್ರಾಹೀ= ಸರ್ಪವನ್ನು ಹಿಡಿದ, ತ್ವಂ= ನೀನು, ಹಾ= ಅಯ್ಯೋ, ಹತೋಸಿ= ಸಾಯುತ್ತೀಯೆ, ಅಹೋ= ಆಶ್ಚರ್ಯವು.

**ಅನುವಾದ–** ಹೀಗೆ, ಹಗ್ಗವೆಂಬ ಭ್ರಮದಿಂದ ಸರ್ಪವನ್ನು ಹಿಡಿದ ನೀನು ಮೃತನಾಗುತ್ತೀಯೆ. ಇದು ಆಶ್ಚರ್ಯ!

**ಭಾವವಿಲಾಸಿನೀ–** ರಜ್ಜುಭ್ರಮಾದ್ವಸ್ತುಗತ್ಯಾ ಸರ್ಪೇ ರಜ್ಜುರಿಯಮಿತಿ ಭ್ರಮವತ್ । ಉಕ್ತರೀತ್ಯಾ ವಿಚಾರ್ಯಮಾಣೇ ವಿರುದ್ಧಾರ್ಥಾಯಾಂ ಶ್ರುತಾವಾಪಾತರಮಣೀಯಾರ್ಥಮಾದಾಯ ಸ್ವಾನುಕೂಲೇತಿ ಭ್ರಮಾದಿತ್ಯರ್ಥಃ । ಸರ್ಪಗ್ರಾಹೀ ಸರ್ಪವತ್ ಸ್ವಾಭಿಲಷಿತವಿರುದ್ಧಾರ್ಥ-ಶ್ರುತಿಗ್ರಾಹೀ । ಹತಃ ಸರ್ಪೇಣ ಹತ ಪುರುಷವದುಕ್ತರೀತ್ಯಾ ಗೃಹೀತಶ್ರುತ್ಯೈವ ಹತಃ ॥ ೪೭೭ ॥

**ವಿವರಣೆ–** ನಿನಗೆ ಅನುಕೂಲವಾಗುವುದೆಂಬ ಭ್ರಾಂತಿಯಿಂದ ದ್ವಿತೀಯಾದ್ವೈಭಯಂ ಭವತಿ ಎಂಬ ಶ್ರುತಿಯನ್ನು ನೀನು ಹಿಡಿದರೆ ಅದು ನಿನಗೆ ಪ್ರತಿಕೂಲವಾಗಿಯೇ ಇದೆ ಎಂದು ಅಭಿಪ್ರಾಯ.

**ದ್ವಿತೀಯಾದ್ ದೇಹಗೇಹಾದೇರ್ಭಯಂ ಸ್ಯಾತ್ ತೇನ ತಂ ತ್ಯಜೇತ್ ।**
**ಇತ್ಯೇವಾರ್ಥಃ ಶ್ರುತೇರ್ವಾಚ್ಯೋ ಬಂಧೋಚ್ಛಿತ್ತ್ಯೈದೃಗರ್ಥಿಭಿಃ ।**
**ಗುರುಮೇವಾಭಿಗಚ್ಛೇದಿತ್ಯಾದಿವಾಕ್ಯಾರ್ಥವೇದಿಭಿಃ ॥ ೪೭೮ ॥**

**ಅರ್ಥ–** ದ್ವಿತೀಯಾತ್= ಎರಡನೆಯದಾದ, ದೇಹಗೇಹಾದೇಃ= ದೇಹಗೇಹಾದಿಗಳಿಂದ, ಭಯಂ= ಭಯವು, ಸ್ಯಾತ್= ಉಂಟಾಗುತ್ತದೆ, ತೇನ= ಆ ಕಾರಣದಿಂದ, ತಂ= ದೇಹಾದಿಗಳನ್ನು, ತ್ಯಜೇತ್= ಬಿಡಬೇಕು, ಇತ್ಯೇವಾರ್ಥಃ= ಎಂಬ ಅರ್ಥವೇ, ಶ್ರುತೇಃ= ಶ್ರುತಿಗೆ, ಬಂಧೋಚ್ಛಿತ್ತ್ಯೈ= ಬಂಧನಿವೃತ್ತಿಗಾಗಿ, ದೃಗರ್ಥಿಭಿಃ= ಜ್ಞಾನವನ್ನು ಅಪೇಕ್ಷಿಸುವಂತಹ, ಗುರುಮೇವಾಭಿಗಚ್ಛೇದಿತ್ಯಾದಿವಾಕ್ಯಾರ್ಥವೇದಿಭಿಃ= 'ತದ್ ವಿಜ್ಞಾನಾರ್ಥಂ ಸ ಗುರುಮೇವ ಅಭಿಗಚ್ಛೇತ್' ಬ್ರಹ್ಮನನ್ನು ತಿಳಿಯಲು ಗುರೂಪಸತ್ತಿಯನ್ನು ಮಾಡಬೇಕು ಎಂಬ ವಾಕ್ಯಾರ್ಥವನ್ನು ತಿಳಿದ ವಿವೇಕಿಗಳಿಂದ ವಾಚ್ಯಃ= ಹೇಳಲ್ಪಡಬೇಕು.

**ಅನುವಾದ–** ಬಂಧನಿವೃತ್ತಿಗಾಗಿ ಜ್ಞಾನವನ್ನು ಅಪೇಕ್ಷಿಸುವವರು ಬ್ರಹ್ಮನ ಜ್ಞಾನವನ್ನು ಸಂಪಾದಿಸಲು ಗುರೂಪಸತ್ತಿಯನ್ನು ಮಾಡಬೇಕು ಎಂಬ ವಾಕ್ಯದ ಅರ್ಥವನ್ನು ತಿಳಿದವರು ದ್ವಿತೀಯವಾದ ದೇಹಗೇಹಾದಿಗಳಿಂದ ಭಯವುಂಟಾಗುತ್ತದೆ ಆದ್ದರಿಂದ ಅದನ್ನು ತ್ಯಜಿಸಬೇಕು ಎಂಬ ಅರ್ಥವನ್ನೇ ಶ್ರುತಿಗೆ ಹೇಳಬೇಕು.

**ಭಾವವಿಲಾಸಿನೀ–** ತೇನ ಕಾರಣೇನ ತಂ ದೇಹಗೇಹಾದಿಕಂ ಪದಾರ್ಥಂ ತ್ಯಜೇತ್ । ತತ್ರಾಭಿಮಾನಂ ತ್ಯಜೇದಿತ್ಯರ್ಥಃ । ದೃಗರ್ಥಿಭಿರಪರೋಕ್ಷಜ್ಞಾನಾರ್ಥಿಭಿಃ ॥ ೪೭೮ ॥

**ದ್ವಿತೀಯಾದ್ ಬ್ರಹ್ಮವಿಜ್ಞಾನಾದ್ ಭಯಂ ಭವತಿ ಸಂಸೃತೇಃ ।**
**ಇತ್ಯರ್ಥೋರ್ ವಾಽತ್ರ ತಚ್ಛ್ಲಾಘ್ಯಃ ಸಮಿತ್ಪುಸ್ತಕಪಾಣಿಭಿಃ ॥ ೪೭೯ ॥**

**ಅರ್ಥ–** ದ್ವಿತೀಯಾತ್= ದ್ವಿತೀಯವಾದ, ಬ್ರಹ್ಮವಿಜ್ಞಾನಾತ್= ಬ್ರಹ್ಮಜ್ಞಾನದಿಂದ, ಸಂಸೃತೇಃ= ಸಂಸಾರಕ್ಕೆ, ಭಯಂ ಭವತಿ= ಭಯವುಂಟಾಗುತ್ತದೆ (ನಿವೃತ್ತಿ ಉಂಟಾಗುತ್ತದೆ). ಇತ್ಯರ್ಥೋರ್ವಾ= ಎಂಬ ಅರ್ಥವನ್ನಾಗಲೀ, ಅತ್ರ= ಈ ಶ್ರುತಿಗೆ, ಸಮಿತ್ಪುಸ್ತಕಪಾಣಿಭಿಃ= ಸಮಿತ್ತು ಮತ್ತು ಪುಸ್ತಕಗಳನ್ನು ಹಿಡಿದುಕೊಂಡ ಶಿಷ್ಯರಿಂದ, ಶ್ಲಾಘ್ಯಃ= ಪ್ರಶಂಸನೀಯವಾಗುತ್ತದೆ.

**ಅನುವಾದ–** ದ್ವಿತೀಯವಾದ ಬ್ರಹ್ಮನ ಜ್ಞಾನದಿಂದ ಸಂಸಾರಕ್ಕೆ ಭಯ ಉಂಟಾಗುತ್ತದೆ ಎಂಬ ಅರ್ಥವನ್ನಾದರೂ, ಕುಶಪುಸ್ತಕಪಾಣಿಗಳಾದ ಶಿಷ್ಯರು ಈ ಶ್ರುತಿಗೆ ಹೇಳುತ್ತಾರೆ.

**ಭಾವವಿಲಾಸಿನೀ–** ದ್ವಿತೀಯಾದ್ಬಂಧೋಚ್ಛಿತ್ತ್ಯರ್ಥಂ ಹೇತುತಯಾ ದ್ವಿತೀಯವಾರಕಥಿತಾತ್ । ಸಂಸೃತೇರ್ಭಯಂ ಧ್ವಂಸಾಖ್ಯಭಯಮ್ । ಏವಂ ಚ ಪರಾಭಿಲಷಿತೈಕ್ಯಮಿಥ್ಯಾತ್ವಾದಿಕಂ

ದೂಷಯಿತುಂ ಸ್ವಮತೇ ಮೋಕ್ಷಸ್ಯ ಪರಂಪರಾಸಾಧನಂ ಸಾಕ್ಷಾತ್ಸಾಧನಂ ಮೋಕ್ಷಂ ಚ ಪ್ರತಿಪಾದಯಿತುಮೇವ ಶ್ರುತಿರಿಯಂ ಪ್ರವೃತ್ತೇತಿ ಭಾವಃ ॥ ೪೭೯ ॥

**ಕಿಂಚಾಬಿಭೇದಿತಿ ಬ್ರಹ್ಮಭಯಮುಕ್ತ್ವಾ ಪುನಃ ಶ್ರುತಿಃ ।**
**ತೇನೈಕಾಕೀ ಬಿಭೇತೀತಿ ತತ್ರ ಕಾರಣಮಾಹ ಚ ॥ ೪೮೦ ॥**

**ಅರ್ಥ–** ಕಿಂಚ= ಮತ್ತು, ಅಬಿಭೇತ್ ಇತಿ= ಅವನು ಹೆದರಿದನು ಎಂದು, ಬ್ರಹ್ಮಭಯಂ ಉಕ್ತ್ವಾ= ಬ್ರಹ್ಮದೇವರಿಗೆ ಭಯವನ್ನು ಹೇಳಿ, ಪುನಃ= ಮತ್ತು, ಶ್ರುತಿಃ= ಶ್ರುತಿಯು, ತೇನ= ಆ ಕಾರಣದಿಂದ, ಏಕಾಕೀ= ಏಕಾಕಿಯಾದವನು, ಬಿಭೇತಿ ಇತಿ= ಹೆದರುತ್ತಾನೆ ಎಂದು, ತತ್ರ= ಆ ಭಯಕ್ಕೆ, ಕಾರಣಂ ಚ= ಕಾರಣವನ್ನೂ, ಆಹ= ಹೇಳಿದೆ.

**ಅನುವಾದ– ಮತ್ತು ಶ್ರುತಿಯು ಸೋಬಿಭೇತ್ ಎಂದು ಬ್ರಹ್ಮದೇವರಿಗೆ ಭಯವನ್ನು ಹೇಳಿ ಪುನಃ ಏಕಾಕಿಯಾದವನು ಹೆದರುತ್ತಾನೆ ಎಂದು ಹೇಳಿ ಭಯಕ್ಕೆ ಕಾರಣವನ್ನೂ ಹೇಳಿದೆ.**

**ಭಾವವಿಲಾಸಿನೀ– ಅಬಿಭೇದಿತಿ ॥** ಸೋऽಬಿಭೇದಿತಿ ಶ್ರುತ್ಯಾ ಬ್ರಹ್ಮಭಯಂ ಚತುರ್ಮುಖ-ಬ್ರಹ್ಮಣೋ ಭಯಮ್ । ತೇನೈಕಾಕೀ ಬಿಭೇತೀತ್ಯುರವಾಕ್ಯೇ । ತತ್ರ ಭಯೇ । ಕಾರಣಮೇಕಾಕಿತ್ವ-ರೂಪಕಾರಣಮ್ ॥ ೪೮೦ ॥

**ತಸ್ಮಾದೇಕಾಕಿತಾಯಾಂ ಚ ಭೀತ್ಯುಕ್ತ್ಯಾ ತಾಂ ಚ ಸಂತ್ಯಜ ।**
**ದ್ವಿತೀಯಮೈಚ್ಛದಿತಿ ಚ ವಚೋ ಹಂತಿ ತವೇಪ್ಸಿತಮ್ ॥ ೪೮೧ ॥**

**ಅರ್ಥ–** ತಸ್ಮಾತ್= ಆ ಕಾರಣದಿಂದ, ಏಕಾಕಿತಾಯಾಂ= ಏಕಾಕಿಯಾಗಿದ್ದರೆ, ಭೀತ್ಯುಕ್ತ್ಯಾ= ಭಯವುಂಟಾಗುತ್ತದೆ ಎಂಬ ವಚನದಿಂದ, ತಾಂ ಚ= ಆ ಏಕಾಕಿತ್ವವನ್ನೇ, ಸಂತ್ಯಜ= ಪರಿತ್ಯಜಿಸು, ದ್ವಿತೀಯಮೈಚ್ಛತ್= ಸ ದ್ವಿತೀಯಮೈಚ್ಛತ್ ಅವನು ಎರಡನೆಯದನ್ನು ಬಯಸಿದನು ಎಂಬ ವಚನವೂ ಸಹ, ತವೇಪ್ಸಿತಂ= ನಿನ್ನ ಅಭೀಷ್ಟವನ್ನು, ಹಂತಿ= ನಾಶಮಾಡುತ್ತದೆ.

**ಅನುವಾದ– ಆದ್ದರಿಂದ ಏಕಾಕಿಯಾದವನಿಗೆ ಭಯವುಂಟಾಗುತ್ತದೆ ಎಂಬ ವಚನವಿರುವುದರಿಂದ ಆ ಏಕಾಕಿತ್ವವನ್ನು ಪರಿತ್ಯಜಿಸು. ಅವನು ಎರಡನೆಯ ವಸ್ತುವನ್ನು (ಪತ್ನಿಯನ್ನು) ಅಪೇಕ್ಷಿಸಿದನು ಎಂಬ ಮುಂದಿನ ವಚನವು ನಿನ್ನ ಅಭೀಷ್ಟವನ್ನು ನಾಶಮಾಡುತ್ತದೆ.**

**ಭಾವವಿಲಾಸಿನೀ–** ತಾಮೇಕಾಕಿತಾಮ್ । ದ್ವಿತೀಯಮೈಚ್ಛದಿತಿ ವಚಃ ಸದ್ವಿತೀಯಮೈಚ್ಛದಿತಿ ವಚ ಇತ್ಯರ್ಥಃ ॥ ೪೮೧ ॥

**ವಿವರಣೆ–** ನಿನಗೆ ಇಷ್ಟವಾದಂತೆ ಏಕಾಕಿತ್ವವೇ ಪುರುಷಾರ್ಥವಾದರೆ ಬ್ರಹ್ಮದೇವರು ದ್ವಿತೀಯವನ್ನು ಬಯಸಬಾರದಾಗಿದ್ದಿತು. ಆದರೆ ಅವರು ದ್ವಿತೀಯವನ್ನು ಬಯಸಿದರು ಎಂಬ ವಚನವಿರುವುದರಿಂದ ಏಕಾಕಿತ್ವವು ಪುರುಷಾರ್ಥವಲ್ಲ. ಆದ್ದರಿಂದ ಶಾಸ್ತ್ರಪ್ರಮೇಯವೂ ಅಲ್ಲ ಎಂದು ಸಿದ್ಧವಾಗುತ್ತದೆ.

**ಅನುಕೂಲಂ ದ್ವಿತೀಯಂ ತಚ್ಛ್ರುತಿಶ್ಚ ನ ನಿಷೇಧತಿ ।**
**ರಕ್ಷೋಭೂತಪಿಶಾಚಾದಿ ದ್ವಿತೀಯಂ ಭಯದಂ ಜಗೌ ।**
**ಕಸ್ಮಾನ್ನ್ವಹಂ ಬಿಭೇಮೀತಿ ಭೀಷಕಾಭಾವವಾಙ್ನ ಕಿಮ್ ॥ ೪೮೨ ॥**

**ಅರ್ಥ–** ಅನುಕೂಲಂ ದ್ವಿತೀಯಂ= ಅನುಕೂಲವಾದ ದ್ವಿತೀಯವಸ್ತುವನ್ನು, ತಚ್ಛ್ರುತಿಃ= ಆ ಶ್ರುತಿಯು, ನ ನಿಷೇಧತಿ= ನಿಷೇಧಿಸುವುದಿಲ್ಲ, ರಕ್ಷೋಭೂತಪಿಶಾಚಾದಿ= ರಾಕ್ಷಸರು ಭೂತಪಿಶಾಚಿಗಳು ಮುಂತಾದ, ದ್ವಿತೀಯಂ= ದ್ವಿತೀಯವನ್ನು, ಭಯದಂ= ಭಯಪ್ರದವೆಂದು, ಜಗೌ= ಹೇಳಿತು, ಕಸ್ಮಾನ್ನ್ವಹಂ ಬಿಭೇಮಿ= ನಾನು ಏತಕ್ಕೆ ಹೆದರುತ್ತಿದ್ದೇನೆ, ಇತಿ= ಎಂಬುದು, ಭೀಷಕಾಭಾವವಾಕ್ ನ ಕಿಂ= ಭೀಷಕವಿಲ್ಲ ಎಂದು ಹೇಳುವ ವಚನವಲ್ಲವೇ?

**ಅನುವಾದ–** ಅನುಕೂಲವಾದ ದ್ವಿತೀಯವನ್ನು ಆ ಶ್ರುತಿಯು ನಿಷೇಧಿಸುವುದಿಲ್ಲ. ರಾಕ್ಷಸಭೂತಪಿಶಾಚಾದಿಗಳು ಭಯಪ್ರದವೆಂದು ಹೇಳುತ್ತದೆ. ನಾನು ಏತಕ್ಕೆ ಹೆದರುತ್ತಿದ್ದೇನೆ ಎಂಬ ವಾಕ್ಯವು ಭೀಷಕವಿಲ್ಲ ಎಂದು ಹೇಳುವ ವಚನವಲ್ಲವೇ?

**ಭಾವವಿಲಾಸಿನೀ–** ತತ್ ತಸ್ಮಾತ್ ಬ್ರಹ್ಮಣಾ ಸ್ವಸಹಾಯಭೂತ ದ್ವಿತೀಯಸ್ಯಾಕಾಂಕ್ಷಿತತ್ವಾತ್ । ಜಗೌ "ದ್ವಿತೀಯಾದ್ವೈ ಭಯಂ ಭವತೀ"ತಿ ಶ್ರುತಿರ್ಜಗಾವಿತ್ಯರ್ಥಃ । ಕಸ್ಮಾನ್ನ್ವಹಂ ಬಿಭೇಮೀತಿ ಶ್ರುತಿಃ ಭೀಷಕಾಭಾವವಾಗ್ಭಯಕಾರಣೀಭೂತ- ರಾಕ್ಷಸಾದ್ಯಭಾವವಾಕ್ । ಏವಂ ಚ ಭಯಕಾರಿಣೀಭೂತ ದ್ವಿತೀಯಸ್ಯೈವ "ದ್ವಿತೀಯಾದ್ವೈ ಭಯಂ ಭವತೀ"ತಿ ಶ್ರುತಿರಪಿ ನಿಷೇಧಿಕಾ । ನತು ಸಹಾಯಭೂತದ್ವಿತೀಯಸ್ಯ । ತಥಾ ಸತಿ ಸದ್ವಿತೀಯಮೈಚ್ಛದಿತಿ ಶ್ರುತಿವಿರೋಧಾತ್ । ಸ್ವಸಹಾಯಭೂತ ದ್ವಿತೀಯಮಪೇಕ್ಷಮಾಣೇನ ಕಸ್ಮಾನ್ನ್ವಹಂ ಬಿಭೇಮಿ ದ್ವಿತೀಯಾದ್ವೈ ಭಯಂ ಭವತೀತಿ ನಿಷಿಧ್ಯಮಾನಂ ದ್ವಿತೀಯಂ ಸ್ವವಿರೋಧ್ಯೇವೇತಿ ಭಾವಃ ॥ ೪೮೨ ॥

**ವಿವರಣೆ–** ಬ್ರಹ್ಮದೇವರು ಏಕಾಕಿಯಾಗಿ ಹೆದರಿ ಅನಂತರ ದ್ವಿತೀಯವನ್ನು ಇಚ್ಛಿಸಿದರು ಮತ್ತು ನಾನು ಏತಕ್ಕೆ ಹೆದರುತ್ತಿದ್ದೇನೆ ಎಂದೂ ವಿಮರ್ಶೆ ಮಾಡಿದರು. ಪ್ರತಿಕೂಲವಾದ ವಸ್ತುವಿನಿಂದ ಭಯವುಂಟಾಗುತ್ತದೆ. ಪ್ರತಿಕೂಲವಾಗಬಹುದಾದ ರಾಕ್ಷಸಾದಿಜಗತ್ತು ಇನ್ನೂ ಸೃಷ್ಟಿಸಲ್ಪಟ್ಟಿಲ್ಲ, ಸೃಷ್ಟಿಸಲ್ಪಡುವ ಜಗತ್ತು ನನ್ನ ಅಧೀನವೇ ಆಗಿದೆ. ಇನ್ನು ನಾರಾಯಣನೊಬ್ಬನಿದ್ದಾನೆ, ಅವನು ನನಗೆ ಅನುಕೂಲನಾಗಿಯೇ ಇದ್ದಾನೆ. ಆದ್ದರಿಂದ ಭಯಪಡುವ ಕಾರಣವಿಲ್ಲ ಎಂದು ವಿಮರ್ಶೆ ಮಾಡಿದರು. ಆದ್ದರಿಂದ

ಪ್ರತಿಕೂಲವಾದ ದ್ವಿತೀಯದಿಂದ ಭಯವೇ ಹೊರತು ಅನುಕೂಲವಾದ ದ್ವಿತೀಯದಿಂದ ಭಯವಿಲ್ಲವೆಂದು ಸಿದ್ಧವಾಗುತ್ತದೆ.

**ಏಕಾಕೀ ಚೇನ್ನ ರಮತೇ ತೇನೈಚ್ಛತ್ ಸ ದ್ವಿತೀಯಕಮ್ ।**
**ಇತಿ ವಾಗುಪಸಂಹರ್ತ್ರೀ ಸಂಹರ್ತ್ರೀ ತವ ದುರ್ಧಿಯಃ ॥ ೪೮೩ ॥**

**ಅರ್ಥ–** ಏಕಾಕೀ= ಏಕಾಕಿಯಾದವನು, ನರಮತೇ ಚೇತ್= ಸುಖವಾಗಿರುವುದಿಲ್ಲ ಎಂದಾದರೆ, ತೇನ= ಏಕಾಕಿಯಾಗಿದ್ದ ಕಾರಣದಿಂದ, ಸಃ= ಬ್ರಹ್ಮದೇವರು, ದ್ವಿತೀಯಕಂ= ದ್ವಿತೀಯವಾದ ಪತ್ನಿಯನ್ನು, ಐಚ್ಛತ್= ಇಚ್ಛಿಸಿದರು, ಇತಿ= ಎಂದು, ಉಪಸಂಹರ್ತ್ರೀ ವಾಕ್= ಉಪಸಂಹಾರ ವಾಕ್ಯವು, ತವ= ನಿನ್ನ, ದುರ್ಧಿಯಃ= ದುಷ್ಟಬುದ್ಧಿಗಳನ್ನು, ಸಂಹರ್ತ್ರೀ= ನಾಶಮಾಡುತ್ತದೆ.

**ಅನುವಾದ–** ಏಕಾಕಿಯು ಸುಖವಿಲ್ಲದವನಾದರೆ ಅವನು ದ್ವಿತೀಯವನ್ನು ಬಯಸಿದನು ಎಂಬ ಉಪಸಂಹಾರವಾಕ್ಯವು ನಿನ್ನ ದುರ್ಬುದ್ಧಿಯನ್ನು ನಾಶಮಾಡುತ್ತದೆ.

**ಭಾವವಿಲಾಸಿನೀ–** ಸಃ ಏಕಾಕಿತ್ವೇನ ಭೀತೋ ಬ್ರಹ್ಮಾ ॥ ೪೮೩ ॥

**ವಿವರಣೆ–** ನಿನಗೆ ಏಕಾಕಿತ್ವವು ಅಪೇಕ್ಷಿತವಾದುದು. ಬ್ರಹ್ಮದೇವರು ಏಕಾಕಿತ್ವವನ್ನು ಹೊಂದಿರುವುದರಿಂದ ಅವರು ದ್ವಿತೀಯವನ್ನು ಬಯಸಿದರು ಎಂದರೆ ಏಕಾಕಿತ್ವವು ಪುರುಷಾರ್ಥವಲ್ಲ ಎಂದಾಯಿತು. ಆದ್ದರಿಂದ ಬ್ರಹ್ಮದೇವರಿಗೆ ಯಾವುದು ಅನಭಿಪ್ರೇತವೋ ಅದು ನಿನಗೆ ಪ್ರತಿಕೂಲವಾಗುತ್ತದೆ ಎಂದು ಅಭಿಪ್ರಾಯ.

**ಅತಃ ಪ್ರಕರಣಂ ಮಂದ ಹಂತಿ ವಾದರಣಂ ತವ ।**
**ಜಿಹ್ವಾರೂಪಂ ಪ್ರಕೃಷ್ಟಂ ತೇ ಕರಣಂ ವಾ ನಿಹಂತ್ಯಹೋ ।**
**ಭಯಂ ದ್ವಿತೀಯಾದ್ ವಚನಾದಿತ್ಯುಕ್ತಂ ಸೂಕ್ತಮೇವ ತತ್ ॥ ೪೮೪ ॥**

**ಅರ್ಥ–** ಅತಃ= ಆದ್ದರಿಂದ, ಮಂದ= ಎಲೈ ಮೂಢನೇ, ಪ್ರಕರಣಂ= ಈ ಪ್ರಕರಣವು, ತವ= ನಿನ್ನ, ವಾದರಣಂ= ವಾದ ಯುದ್ಧವನ್ನು, ಹಂತಿ= ಕೊಲ್ಲುತ್ತದೆ, ವಾ= ಅಥವಾ, ತೇ= ನಿನ್ನ, ಪ್ರಕೃಷ್ಟಂ= ಉತ್ತಮವಾದ, ಜಿಹ್ವಾರೂಪಂ ಕರಣಂ= ಜಿಹ್ವಾರೂಪವಾದ ಕರಣವನ್ನು, ನಿಹಂತಿ= ನಾಶಪಡಿಸುತ್ತದೆ, ಅಹೋ= ಆಶ್ಚರ್ಯವು! ದ್ವಿತೀಯಾತ್= ಎರಡನೆಯ, ವಚನಾತ್= ವಾಕ್ಯದಿಂದ, ಭಯಂ= ಭಯವುಂಟಾಗುತ್ತದೆ, ಇತ್ಯುಕ್ತಂ= ಎಂದು ಹೇಳಿದ, ತತ್= ಆ ಪ್ರಮೇಯವು, ಸೂಕ್ತಮೇವ= ಸರಿಯಾಗಿಯೇ ಇದೆ.

**ಅನುವಾದ–** ಆದ್ದರಿಂದ ಎಲೈ ಮಂದನೇ, ಈ ಪ್ರಕರಣವು ನಿನ್ನ ವಾದಯುದ್ಧವನ್ನೇ ನಾಶಮಾಡುತ್ತದೆ ಅಥವಾ ನಿನ್ನ ಪ್ರಕೃಷ್ಟಕರಣವಾದ ಜಿಹ್ವೆಯನ್ನೇ ನಾಶಮಾಡುತ್ತದೆ.

ಪ್ರಕರಣದಿಂದಲೇ ಪ್ರಕರಣದ ನಾಶ ಎಂಬುದು ಆಶ್ಚರ್ಯ. ಆದ್ದರಿಂದ ದ್ವಿತೀಯ ವಚನದಿಂದ ಭಯವುಂಟಾಗುತ್ತದೆ ಎಂಬುದು ಸೂಕ್ತವಾಗಿದೆ.

**ಭಾವವಿಲಾಸಿನೀ–** ಪ್ರಕರಣಮೇಕಾರ್ಥಪ್ರತಿಪಾದಕಬಹುವಾಕ್ಯಸಮುದಾಯಃ । ವಾದರಣಂ ವಾದಾಖ್ಯಯುದ್ಧಮ್ । ಉಕ್ತವಿಧಯಾ ತ್ವದಭಿಲಷಿತಾರ್ಥಸ್ಯ ಪ್ರಕರಣವಿರುದ್ಧತ್ವಾದಿಮಾಂ ಶ್ರುತಿಂ ಪುರಸ್ಕೃತ್ಯ ಕಥಂ ವಾದಂ ಕರೋಷಿತಿ ಭಾವಃ । ತೇ ಜಿಹ್ವಾರೂಪಂ ಪ್ರಕೃಷ್ಟಕರಣಂ ನಿಹಂತೀತಿ ಯೋಜನಾ । ಪ್ರಕರಣಸ್ಯ ಪ್ರಕರಣಘಾತಿತ್ವಮೇವ ನ್ಯಾಯ್ಯಮಿತಿ ಭಾವೇನೇದಮುದಿತಮ್ । ತತ್ತಸ್ಮಾತ್ ಪ್ರಕರಣಸ್ಥವಾಕ್ಯೈರಪಿ ವಿರುದ್ಧತ್ವಾತ್ ॥ ೪೮೪ ॥

**ವಿವರಣೆ–** ಒಂದೇ ಅರ್ಥವನ್ನು ಪ್ರತಿಪಾದನೆ ಮಾಡುವ ವಾಕ್ಯಸಮೂಹಕ್ಕೆ ಪ್ರಕರಣವೆಂದು ಹೆಸರು. ಇದು ಅಂತಹ ಒಂದು ಪ್ರಕರಣ. ಪ್ರ-ಕರಣ ಎಂದರೆ ಪ್ರಕೃಷ್ಟವಾದ ಕರಣ ಎಂದು ಇನ್ನೊಂದು ಅರ್ಥ. ಅದು ವಾದ ಮಾಡುವವನ ಜಿಹ್ವೆ. ಈ ಪ್ರಕರಣದಲ್ಲಿ ನಮ್ಮ ಆಕ್ಷೇಪಗಳಿಗೆ ನೀನು ಉತ್ತರಕೊಡಲು ಸಾಧ್ಯವಿಲ್ಲವಾದ್ದರಿಂದ ನೀನು ಮೌನವನ್ನು ವಹಿಸಬೇಕಾಗುತ್ತದೆ ಎಂದು ಅಭಿಪ್ರಾಯ.

**ಸ್ವಾಖಂಡವಾದಖಡ್ಗೇನ ಮೃತಮೃತ್ಯೈನ ಮೇ ಕೃತಿಃ ।**
**ಸ್ವಯೂಥ್ಯಾನಾಂ ಮನಸ್ತುಷ್ಟ್ಯೈ ಭಕ್ತ್ಯೈ ಮುಕ್ತ್ಯೈ ಚ ಕೇವಲಮ್॥ ೪೮೫ ॥**

**ಅರ್ಥ–** ಸ್ವಾಖಂಡವಾದಖಡ್ಗೇನ= ತನ್ನ ಅಖಂಡವಾದ ಖಡ್ಗದಿಂದಲೇ, ಮೃತಮೃತ್ಯೈ= ಮೃತನಾದವನನ್ನು ಕೊಲ್ಲಲು, ನ ಮೇ ಕೃತಿಃ= ನನ್ನ ಈ ಪ್ರಯತ್ನವಲ್ಲ, ಆದರೆ, ಕೇವಲಂ= ಕೇವಲ, ಸ್ವಯೂಥ್ಯಾನಾಂ= ನನ್ನ ಗುಂಪಿನವರ, ಮನಸ್ತುಷ್ಟ್ಯೈ= ಮನಸ್ಸಂತೋಷಕ್ಕಾಗಿ, ಭಕ್ತ್ಯೈ= ಭಕ್ತಿಯ ಅಭಿವೃದ್ಧಿಗಾಗಿ, ಚ= ಮತ್ತು, ಮುಕ್ತ್ಯೈ= ಮುಕ್ತಿಯ ಪ್ರಾಪ್ತಿಗಾಗಿ ಇದೆ.

**ಅನುವಾದ–** ತನ್ನ ಅಖಂಡವಾದವೆಂಬ ಖಡ್ಗದಿಂದಲೇ ಮೃತನಾದ ಅದ್ವೈತಿಯನ್ನು ಕೊಲ್ಲಲು ನನ್ನ ಈ ಪ್ರಯತ್ನವಲ್ಲ. ಆದರೆ ನನ್ನ ಗುಂಪಿನ ಸಜ್ಜನರ ಮನಸ್ಸಂತೋಷಕ್ಕಾಗಿ ಭಕ್ತಿಯ ಅಭಿವೃದ್ಧಿಗಾಗಿ ಮತ್ತು ಮುಕ್ತಿಯ ಪ್ರಾಪ್ತಿಗಾಗಿ ಈ ಪ್ರಯತ್ನವು ಇದೆ.

**ವಿವರಣೆ–** ಐಕ್ಯವನ್ನಾಗಲೀ, ನಿರ್ಗುಣತ್ವವನ್ನಾಗಲೀ, ಮಿಥ್ಯಾತ್ವವನ್ನಾಗಲೀ ನಿರಾಕರಣೆ ಮಾಡಲು ನಾನು ಈ ಗ್ರಂಥವನ್ನು ರಚನೆ ಮಾಡಬೇಕಾದ ಅವಶ್ಯಕತೆ ಇಲ್ಲ. ಏಕೆಂದರೆ ಅದ್ವೈತಿಯು ಅಖಂಡಾರ್ಥವಾದವನ್ನು ಅಂಗೀಕರಿಸುವುದರಿಂದ ವೇದಗಳಿಗೆ ಬ್ರಹ್ಮಚೈತನ್ಯವನ್ನು ಬಿಟ್ಟು ಬೇರೆ ಯಾವುದರಲ್ಲೂ ತಾತ್ಪರ್ಯವಿಲ್ಲ ಎಂದು ಅವರೇ ಒಪ್ಪುವುದರಿಂದ ಅವರ ಸಮ್ಮತಿಯಂತೆಯೇ ವೇದವು ಐಕ್ಯವನ್ನಾಗಲೀ, ನಿರ್ಗುಣತ್ವ-ವನ್ನಾಗಲೀ ಅಥವಾ ಮಿಥ್ಯಾತ್ವವನ್ನಾಗಲೀ ಹೇಳುವುದಿಲ್ಲ. ಆದ್ದರಿಂದ ಅದರ ನಿರಾಕರಣೆಗಾಗಿ ನಾನು ಪ್ರಯತ್ನ ಪಡಬೇಕಾಗಿಲ್ಲ ಎಂದು ಅಭಿಪ್ರಾಯ.

**ಸಾಮಾನಾಧಿಕರಣ್ಯಾದ್ವಾ ನಾನಾತ್ವಕ್ಷೇಪತೋಽಪಿ ವಾ ।**
**ಐಕ್ಯಸಿದ್ಧಿಸ್ತ್ವಖಂಡಾರ್ಥವಾದೇನಾಭೂತ್ ತವೈವ ಹಿ ॥ ೪೮೬ ॥**

**ಅರ್ಥ–** ಸಾಮಾನಾಧಿಕರಣ್ಯಾದ್ವಾ= ತತ್ತ್ವಮಸಿ ಎಂಬ ವಾಕ್ಯದಲ್ಲಿ ತತ್ ತ್ವಂ ಪದಗಳಿಗೆ ಇರುವ ಸಾಮಾನಾಧಿಕರಣ್ಯದಿಂದಲಾಗಲೀ, ನಾನಾತ್ವಕ್ಷೇಪತೋಽಪಿ ವಾ= ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯವು ನಾನಾತ್ವವನ್ನು ನಿಷೇಧ ಮಾಡುವುದರಿಂದಲಾಗಲೀ, ಅಖಂಡಾರ್ಥವಾದೇ= ಅಖಂಡಾರ್ಥವಾದದಲ್ಲಿ ತವ ಏವ= ನಿನಗೇ, ಐಕ್ಯ ಸಿದ್ಧಿಃ= ಐಕ್ಯಸಿದ್ಧಿಯು, ನಾ ಭೂತ್= ಆಗಲಿಲ್ಲವಷ್ಟೆ

**ಅನುವಾದ–** ತತ್ತ್ವಮಸಿ ವಾಕ್ಯದ ಸಾಮಾನಾಧಿಕರಣ್ಯದಿಂದಲಾಗಲೀ ಅಥವಾ ನೇಹ ನಾನಾಸ್ತಿ ಕಿಂಚನ ಎಂಬ ವಾಕ್ಯವು ನಾನಾತ್ವವನ್ನು ಪ್ರತಿಷೇಧ ಮಾಡುವುದರಿಂದಲಾಗಲೀ ಅಖಂಡಾರ್ಥವಾದದಲ್ಲಿ ನಿನಗೇ ಐಕ್ಯಸಿದ್ಧಿಯು ಉಂಟಾಗುವುದಿಲ್ಲ.

**ವಿವರಣೆ–** ತತ್ತ್ವಮಸಿ ವಾಕ್ಯಕ್ಕಾಗಲೀ ಅಥವಾ ನೇಹ ನಾನಾಸ್ತಿ ವಾಕ್ಯಕ್ಕಾಗಲೀ ಅಖಂಡ ಬ್ರಹ್ಮನೇ ಅರ್ಥ. ಆ ವಾಕ್ಯಗಳಿಗೆ ಐಕ್ಯವಾರ್ತೆಯೇ ತಿಳಿಯದು. ಆದ್ದರಿಂದ ಅವುಗಳಿಂದ ಐಕ್ಯವು ಸಿದ್ಧವಾಗುವುದಿಲ್ಲ ಎಂದು ಅಭಿಪ್ರಾಯ.

**ಸರ್ವಜ್ಞಾಲ್ಪಜ್ಞಯೋರೈಕ್ಯಂ ನಾಸ್ತ್ಯೇವೇತಿ ತು ಯೋ ವದೇತ್ ।**
**ಐಕ್ಯಸ್ಯ ಬ್ರಹ್ಮರೂಪತ್ವಾದ್ ಬ್ರಹ್ಮವಾಗೈಕ್ಯವಾಗಿತಿ ।**
**ಕಥಂ ತಂ ಪ್ರತ್ಯುತ್ತರಂ ಸ್ಯಾನ್ನಿರ್ಮೂಲೋಽಸ್ತಿ ನ ವೈ ತರುಃ ॥ ೪೮೭ ॥**

**ಅರ್ಥ–** ಯಃ= ಯಾವ ನಿನ್ನ ಪ್ರತಿವಾದಿಯಾದ ತತ್ತ್ವವಾದಿಯು, ಸರ್ವಜ್ಞಾಲ್ಪಜ್ಞಯೋಃ= ಸರ್ವಜ್ಞ ಮತ್ತು ಅಲ್ಪಜ್ಞರಿಗೆ, ಐಕ್ಯಂ= ಐಕ್ಯವು, ನಾಸ್ತ್ಯೇವ ಇತಿ= ಇಲ್ಲವೇ ಇಲ್ಲವೆಂದು, ವದೇತ್= ಹೇಳುತ್ತಾನೆಯೋ, ತಂ ಪ್ರತಿ= ಅವನನ್ನು ಕುರಿತು, ಐಕ್ಯಸ್ಯ ಬ್ರಹ್ಮರೂಪತ್ವಾತ್= ಐಕ್ಯವು ಬ್ರಹ್ಮರೂಪವಾದುದರಿಂದ, ಬ್ರಹ್ಮವಾಕ್= ಬ್ರಹ್ಮನನ್ನು ಹೇಳುವ ವಾಕ್ಯವೇ, ಐಕ್ಯವಾಕ್ ಇತಿ= ಐಕ್ಯವಾಕ್ಯವೆಂದು, ಕಥಂ= ಹೇಗೆ, ಉತ್ತರಂ ಸ್ಯಾತ್= ಉತ್ತರವಾಗುತ್ತದೆ? ನಿರ್ಮೂಲಃ= ಬುಡವಿಲ್ಲದ, ತರುಃ= ವೃಕ್ಷವು, ನ ವೈ= ಇಲ್ಲವಷ್ಟೆ?

**ಅನುವಾದ–** ನಿನ್ನ ಪ್ರತಿವಾದಿಯಾದ ಯಾವ ತತ್ತ್ವವಾದಿಯು ಸರ್ವಜ್ಞ ಮತ್ತು ಅಲ್ಪಜ್ಞರಿಗೆ ಐಕ್ಯವು ಇಲ್ಲವೇ ಇಲ್ಲ ಎಂದು ಹೇಳುತ್ತಾನೆಯೋ ಅವನನ್ನು ಕುರಿತು ಐಕ್ಯವು ಬ್ರಹ್ಮರೂಪವಾದುದರಿಂದ ಬ್ರಹ್ಮನನ್ನು ಹೇಳುವ ವಾಕ್ಯವೇ ಐಕ್ಯವನ್ನು ಹೇಳುವ ವಾಕ್ಯವಾಗುತ್ತದೆ ಎಂಬುದು ಹೇಗೆ ಉತ್ತರವಾಗುತ್ತದೆ. ಬುಡವಿಲ್ಲದ ವೃಕ್ಷವು ಇಲ್ಲವಷ್ಟೇ?

**ವಿವರಣೆ–** ಐಕ್ಯವು ಯದ್ರೂಪವಾದರೂ ಆಗಲಿ. ಮೊದಲು ಐಕ್ಯವನ್ನು ಸಮರ್ಥನೆ ಮಾಡಬೇಕು. ಅನಂತರ ಐಕ್ಯದಲ್ಲಿ ಪ್ರಮಾಣವನ್ನು ಹೇಳಬೇಕು. ಯುಕ್ತಿ ವಿರುದ್ಧವಾದುದರಿಂದ ಐಕ್ಯವೇ ಅಸಂಭಾವಿತ ಎಂದು ಹೇಳುವ ಪ್ರತಿವಾದಿಯನ್ನು ಕುರಿತು ಐಕ್ಯವು ಬ್ರಹ್ಮರೂಪ, ಆದ್ದರಿಂದ ಬ್ರಹ್ಮವಾಕ್ಯವೇ ಐಕ್ಯವಾಕ್ಯವೆಂದು ಹೇಳುವುದು ಅಸಂಗತವಾಗುತ್ತದೆ ಎಂದು ಅಭಿಪ್ರಾಯ.

**ಅನ್ಯಥಾ ಶಶಶೃಂಗಸ್ಯ ಚಿದ್ರೂಪತ್ವಾಚ್ಚಿದುಕ್ತಿತಃ ।**
**ಶಶಶೃಂಗಂ ಚ ಸ ಕಥಂ ತ್ವಾಂ ಪ್ರತ್ಯೇವ ನ ಸಾಧಯೇತ್ ॥ ೪೮೮ ॥**

**ಅರ್ಥ–** ಅನ್ಯಥಾ= ಇಲ್ಲದಿದ್ದರೆ, ಸಃ= ಆ ಪ್ರತಿವಾದಿಯು, ಶಶಶೃಂಗಸ್ಯ= ಶಶಶೃಂಗವು, ಚಿದ್ರೂಪತ್ವಾತ್= ಚೈತನ್ಯರೂಪವಾದುದರಿಂದ, ಚಿದುಕ್ತಿತಃ= ವೇದಕ್ಕೆ ಚೈತನ್ಯದಲ್ಲಿ ಮಾತ್ರ ತಾತ್ಪರ್ಯವಿರುವುದರಿಂದ, ಶಶಶೃಂಗಂ ಚ= ಶಶಶೃಂಗವೂ ಸಹ, ತ್ವಾಂ ಪ್ರತ್ಯೇವ= ನಿನ್ನನ್ನು ಕುರಿತೇ, ಕಥಂ ನ ಸಾಧಯೇತ್= ಹೇಗೆ ಸಾಧಿಸುವುದಿಲ್ಲ.

**ಅನುವಾದ– ಇಲ್ಲದಿದ್ದರೆ ಪ್ರತಿವಾದಿಯು ನಿನ್ನನ್ನು ಕುರಿತು ಶಶಶೃಂಗವು ಚಿದ್ರೂಪವೆಂದು ವೇದಕ್ಕೆ ಚಿನ್ಮಾತ್ರದಲ್ಲಿ ತಾತ್ಪರ್ಯವನ್ನು ಹೇಳಿ ವೇದದಿಂದಲೇ ಶಶಶೃಂಗವನ್ನು ಹೇಗೆ ಸಾಧನೆ ಮಾಡುವುದಿಲ್ಲ?**

**ಐಕ್ಯಸ್ಯ ಬ್ರಹ್ಮರೂಪತ್ವಂ ಮಾಯಾವಾದೀ ವದೇದಪಿ ।**
**ಪರಂ ಪ್ರತ್ಯೈಕ್ಯಸಿದ್ಧ್ಯರ್ಥಂ ನೈವಮಾಹ ಸುಧೀರ್ಹ್ಯಸೌ ॥ ೪೮೯ ॥**

**ಅರ್ಥ–** ಮಾಯಾವಾದೀ= ಮಾಯಾವಾದಿಯು, ಪರಂಪ್ರತಿ= ಪ್ರತಿವಾದಿಯನ್ನು ಕುರಿತು, ಐಕ್ಯ ಸಿದ್ಧ್ಯರ್ಥಂ= ಐಕ್ಯಸಿದ್ಧಿಗೋಸ್ಕರವಾಗಿ, ಐಕ್ಯಸ್ಯ= ಐಕ್ಯಕ್ಕೆ, ಬ್ರಹ್ಮರೂಪತ್ವಂ= ಬ್ರಹ್ಮರೂಪತ್ವವನ್ನು, ವದೇದಪಿ= ಹೇಳಬಹುದೂ ಕೂಡ, ಅಸೌ ಸುಧೀಃ= ಆದರೆ ಈ ಮೇಧಾವಿಯಾದ ತತ್ತ್ವವಾದಿಯು, ಏವಂ ನಾಹ= ಹೀಗೆ ಹೇಳುವುದಿಲ್ಲ.

**ಅನುವಾದ–** ಮಾಯಾವಾದಿಯು ಐಕ್ಯವು ಬ್ರಹ್ಮರೂಪವೆಂದು ಅಸಂಗತವಾಗಿ ಮಾತನಾಡಬಹುದು. ಆದರೆ ತತ್ತ್ವವಾದಿಯು ಶಶಶೃಂಗವು ಚಿದ್ರೂಪವೆಂದು ಅಸಂಗತವಾಗಿ ಹೇಳುವುದಿಲ್ಲ.

**ಭಾವವಿಲಾಸಿನೀ–** ಕಿಂಚೈಕ್ಯನಿರ್ಗುಣತ್ವಜಗನ್ಮಿಥ್ಯಾತ್ವಾತ್ ಪ್ರತಿಪಾದಕತಯಾಽಭಿಮತ ಸ್ವಕಸಲವಾಕ್ಯಾನಾಮಪಿ ಬ್ರಹ್ಮಸ್ವರೂಪಮಾತ್ರಪರತ್ವರೂಪಾಖಂಡಾರ್ಥನಿಷ್ಠತ್ವಂ ವದತಾ ಪರೇಣ ಸ್ವಾಪೇಕ್ಷಿತಾಶೇಷಾರ್ಥಪ್ರತಿಪಾದಕತ್ವಾಭಾವಸ್ಯೋಕ್ತತ್ವಾನ್ನಾಸ್ಮಾಭಿಃ ಪ್ರಯತಿತವ್ಯಮಿತ್ಯಾಹ – **ಸ್ವಖಂಡೇತಿ ॥** ಮೃತಮೃತ್ಯೈ ಮೃತಸ್ಯ ಮಾಯಾವಾದಿನೋ ಮಾರಣಾಯ । ಕೃತಿಃ ಗ್ರಂಥ-ರೂಪಾಕೃತಿಃ । ಕಿಂ ತರ್ಹಿ ತಸ್ಯಾಃ ಪ್ರಯೋಜನಮಿತ್ಯತಸ್ತದತಿರಿಕ್ತ ಪ್ರಯೋಜನತ್ರಯಮಾಹ –

ಸ್ವಯೂಥ್ಯಾನಾಮಿತಿ ॥ ಉಕ್ತಮೇವಾರ್ಥ ಸ್ಥಿರೀಕುರ್ವನ್ ಕಸ್ಯ ಚಿನ್ಮಂದಾಶಂಕಾಂ ಚ ಪರಿಹಸತಿ ಸಾಮಾನಾಧಿಕರಣಾದ್ವೈತ್ಯಾದಿಸಾರ್ಧ ಶ್ಲೋಕ ಚತುಷ್ಟಯೇನೈವ ॥ ೪೮೫-೪೮೯ ॥

**ಅತಃ ಸರ್ವಗುಣೈರ್ವಿಷ್ಣುರ್ಮುಕ್ತಂ ಕುರ್ಯಾತ್ ಕಥಂ ಸಮಮ್ ।**
**ತತೋಽಪಿ ನೈಕ್ಯಂ ಸಾಮ್ಯಂ ತು ಕಿಂಚಿತ್ಸಾಮ್ಯಮಿತೀರಿತಮ್ ॥ ೪೯೦ ॥**

**ಅರ್ಥ–** ಅತಃ= ಆದ್ದರಿಂದ, ವಿಷ್ಣುಃ= ವಿಷ್ಣುವು, ಮುಕ್ತಂ= ಮುಕ್ತಜೀವನನ್ನು, ಸರ್ವಗುಣೈಃ= ಎಲ್ಲ ಗುಣಗಳಿಂದ, ಕಥಂ= ಹೇಗೆ, ಸಮಂ ಕುರ್ಯಾತ್= ಸಮಾನವಾಗಿ ಮಾಡುತ್ತಾನೆ, ತತೋಽಪಿ= ಆ ಕಾರಣದಿಂದಲೂ, ಐಕ್ಯಂ ನ= ಐಕ್ಯವು ಇಲ್ಲ, ಸಾಮ್ಯಂ ತು= ಸಾಮ್ಯವಾದರೂ, ಕಿಂಚಿತ್ಸಾಮ್ಯಮಿತಿ= ಅಲ್ಪಸಾಮ್ಯವೆಂದು, ಈರಿತಂ= ಮೊದಲೇ ಹೇಳಲ್ಪಟ್ಟಿದೆ.

**ಅನುವಾದ–** ಆದ್ದರಿಂದ ವಿಷ್ಣುವು ಹೇಗೆ ಮುಕ್ತಜೀವನನ್ನು ಸರ್ವಗುಣಗಳಿಂದಲೂ ತನ್ನ ಸಮಾನನನ್ನಾಗಿ ಮಾಡುತ್ತಾನೆ? ಆದ್ದರಿಂದಲೂ ಐಕ್ಯವು ಇಲ್ಲ. ಸಾಮ್ಯವಾದರೂ ಅಲ್ಪಸಾಮ್ಯವೆಂದು ಮೊದಲೇ ಹೇಳಲ್ಪಟ್ಟಿದೆ.

**ಭಾವವಿಲಾಸಿನೀ–** ಅತಃ ಸ್ವನಿಷ್ಠನಿತ್ಯಮುಕ್ತತ್ವಸ್ಯ ಕದಾಚಿತ್ ಮುಕ್ತೋ ಜೀವೇ ಪ್ರಯತ್ನ ಶತೇನಾಪಿ ದಾನಾಯೋಗಾತ್ ಯದ್ವಾ ಅತಃ ಐಕ್ಯೇ ಪ್ರಮಾಣಾಭಾವಾಚ್ಚ । ಐಕ್ಯ ಬಲಸಿದ್ಧವಿರುದ್ಧಾಂಶ ತ್ಯಾಗೇನಾಪಿ ಕಥಂ ಸಮಂ ಕುರ್ಯಾತ್ । ಅಥವಾ ಅತಃ ಅಘಟಿತಸ್ಯ ಬ್ರಹ್ಮಣಾಪಿ ಘಟಯಿತುಮಶಕ್ಯತ್ವಾತ್ ಸಾಮ್ಯ ಶ್ರುತ್ಯಾಪಿಕಥಂ ಸಮಂ ಕುರ್ಯಾದಿತಿ ಯೋಜನಾಕ್ಯೇ ಪ್ರಮಾಣಾಭಾವಾಚ್ಚ। (ಸಮಮೈಕ್ಯಸಾಮ್ಯ ಶ್ರುತ್ಯೋರ್ಬಲಾತ್ ಸರ್ವಧರ್ಮಾಣಾಮಭಾವ-ಭಾವತ್ವಾಭ್ಯಾಮವಿರುದ್ಧಂ ನ ಕುರ್ಯಾತ್ ।) ತತೋ ನಿತ್ಯಮುಕ್ತತ್ವ ಕದಾಚಿನ್ಮುಕ್ತತ್ವಾಭ್ಯಾಂ ಜೀವಬ್ರಹ್ಮಣೋರ್ಮುಕ್ತಿದಶಾಯಾಮಪಿ ವಿರುದ್ಧತ್ವಾದೈಕ್ಯೇ ಪ್ರಮಾಣಾಭಾವಾತ್ ಐಕ್ಯಂ ನೇತಿ ಯೋಜನಾ । ತತ್ತ್ಯಾಗೇ ಮುಕ್ತೇರೇವಾಭಾವಪ್ರಸಂಗಾತ್ ॥ ೪೯೦ ॥

**ವಿವರಣೆ–** ಬ್ರಹ್ಮನಲ್ಲಿರುವ ನಿತ್ಯಮುಕ್ತತ್ವಕ್ಕೂ, ಜೀವನಲ್ಲಿರುವ ಕದಾಚಿನ್ಮುಕ್ತತ್ವಕ್ಕೂ ಮುಕ್ತಿದೆಶೆಯಲ್ಲಿಯೂ ವಿರೋಧವಿರುವುದರಿಂದ ಮತ್ತು ಐಕ್ಯದಲ್ಲಿ ಪ್ರಮಾಣವಿಲ್ಲದಿರುವುದರಿಂದ ಐಕ್ಯವು ಸಿದ್ಧವಾಗುವುದಿಲ್ಲ. ಅಂತಹ ವಿರುದ್ಧ ಧರ್ಮಗಳನ್ನು ತ್ಯಾಗ ಮಾಡುವುದಾದರೆ ಮುಕ್ತಿಯೇ ಸಿದ್ಧವಾಗುವುದಿಲ್ಲ. ಆದ್ದರಿಂದ ಮುಕ್ತನು ಎಂದೂ ವಿಷ್ಣುವಿಗೆ ಸಮಾನನಾಗಲೀ ಅಥವಾ ವಿಷ್ಣುವಿನಿಂದ ಅಭಿನ್ನನಾಗಲೀ ಆಗುವುದಿಲ್ಲ ಎಂದು ಅಭಿಪ್ರಾಯ.

**ಕಿಲಾಮೃತಸ್ಯೈಷ ಸೇತುರ್ಮುಕ್ತಾನಾಂ ಪರಮಾ ಗತಿಃ ।**
**ಸೋಽಮೃತಸ್ಯಾಭಯಸ್ಯೇಶಃ ಕೃಷ್ಣೋ ಮುಕ್ತೈಃ ಕಿಲೇಜ್ಯತೇ ॥ ೪೯೧ ॥**

**ಅರ್ಥ–** ಅಮೃತಸ್ಯ= ಮೋಕ್ಷಕ್ಕೆ, ಏಷ= ಈ ವಿಷ್ಣು, ಸೇತುಃ ಕಿಲ= ಸಾಧನವೂ ಆಶ್ರಯನೂ ಆಗಿದ್ದಾನಷ್ಟೇ, ಮುಕ್ತಾನಾಂ= ಮುಕ್ತರಿಗೆ, ಪರಮಾ ಗತಿಃ= ಶ್ರೇಷ್ಠವಾದ ಆಶ್ರಯನಾದವನು, ಸಃ= ಅವನು, ಅಭಯಸ್ಯ= ಭಯರಹಿತವಾದ, ಅಮೃತಸ್ಯ= ಮುಕ್ತಸಮೂಹಕ್ಕೆ, ಈಶಃ= ಒಡೆಯನಾದವನು, ಕೃಷ್ಣಃ= ಕೃಷ್ಣನು, ಮುಕ್ತೈಃ= ಮುಕ್ತರಿಂದ, ಇಜ್ಯತೇ ಕಿಲ= ಪೂಜಿಸಲ್ಪಡುವವನಷ್ಟೆ.

**ಅನುವಾದ–** ಈ ವಿಷ್ಣುವು ಮೋಕ್ಷಕ್ಕೆ ಸಾಧನನೂ ಮತ್ತು ಆಶ್ರಯನೂ ಆದವನು. ಅವನು ಮುಕ್ತರಿಗೆ ಶ್ರೇಷ್ಠವಾದ ಆಶ್ರಯನು. ಅವನು ಭಯರಹಿತವಾದ ಮುಕ್ತಜೀವರಾಶಿಗೆ ಒಡೆಯನಾದವನು. ಕೃಷ್ಣನು ಮುಕ್ತರಿಂದಲೂ ಪೂಜಿಸಲ್ಪಡುತ್ತಾನೆ.

**ವಿವರಣೆ–** ಅಮೃತಸ್ಯೈಷ ಸೇತುಃ ಎಂಬುದು ಉಪನಿಷದ್ವಾಕ್ಯ. ಮುಕ್ತಾನಾಂ ಪರಮಾ ಗತಿಃ ಎಂಬುದು ವಿಷ್ಣುಸಹಸ್ರನಾಮ. ಸೋಮೃತಸ್ಯಾಭಯಸ್ಯೇಶಃ ಎಂಬುದು ಭಾಗವತ ವಾಕ್ಯ. ಕೃಷ್ಣೋ ಮುಕ್ತೈಃ ಇಜ್ಯತೇ ವೀತಮೋಹೈಃ' ಎಂಬುದು ಮಹಾಭಾರತ ವಾಕ್ಯ. ಈ ಪ್ರಮಾಣಗಳಿಂದ ಮುಕ್ತರಿಗೂ ಮತ್ತು ವಿಷ್ಣುವಿಗೂ ಸಾಮ್ಯವಾಗಲೀ ಅಥವಾ ಅಭೇದವಾಗಲೀ ಇಲ್ಲವೆಂದು ತಿಳಿಯುತ್ತದೆ.

**ಇತಿ ಶ್ರುತಿಪುರಾಣಾನಿ ಸೇತಿಹಾಸಾನಿ ಸರ್ವತಃ ।**
**ಗರ್ಜಂತ್ಯನ್ಯೇ ಮಹಿತ್ವಂ ತೇ ನಾಶ್ನುವಂತೀತಿ ಹಿ ಶ್ರುತಿಃ ।**
**ಅಪ್ಯರ್ವಾಗ್ವೃತ್ತಯೋ ಯಸ್ಯ ಮಹಿತ್ವೇ ಸ್ವಭುವಾದಯಃ ॥ ೪೯೨ ॥**

**ಅರ್ಥ–** ಇತಿ= ಈ ರೀತಿಯಲ್ಲಿ, ಸೇತಿಹಾಸಾನಿ= ಇತಿಹಾಸ ಸಹಿತವಾದ, ಶ್ರುತಿಪುರಾಣಾನಿ= ಶ್ರುತಿ ಮತ್ತು ಪುರಾಣಗಳು, ಸರ್ವತಃ= ಎಲ್ಲ ಕಡೆಗಳಲ್ಲಿಯೂ, ಗರ್ಜಂತಿ= ಗರ್ಜಿಸುತ್ತಿವೆ, ಅನ್ಯೇ= ಬೇರೆ 'ಪ್ರಮಾಣಗಳು ಇವೆ', ತೇ ಮಹಿತ್ವಂ= ನಿನ್ನ ಮಹಿಮೆಯನ್ನು, ನಾಶ್ನುವಂತಿ= ಬ್ರಹ್ಮಾದಿ ಜೀವರು ಹೊಂದುವುದಿಲ್ಲ, ಇತಿ ಶ್ರುತಿಃ ಹಿ= ಎಂದು ಶ್ರುತಿಯಿದೆಯಷ್ಟೆ, ಯಸ್ಯ= ಯಾವ ವಿಷ್ಣುವಿನ, ಮಹಿತ್ವೇ= ಮಹಿಮೆಯ ವಿಷಯದಲ್ಲಿ, ಸ್ವಭುವಾದಯಃ= ಬ್ರಹ್ಮಾದಿಗಳು, ಅರ್ವಾಗ್ವೃತ್ತಯಃ ಅಪಿ= ಕೆಳಗೆ ಇರುವವರು (ಎಂದು ಭಾಗವತವಾಕ್ಯವಿದೆ).

**ಅನುವಾದ–** ಹೀಗೆ ಇತಿಹಾಸ ಸಹಿತವಾದ ಶ್ರುತಿಪುರಾಣಗಳು ಎಲ್ಲೆಡೆಯಲ್ಲಿಯೂ ಗರ್ಜಿಸುತ್ತಿವೆ. ಇನ್ನೂ ಅನೇಕ ಪ್ರಮಾಣಗಳಿವೆ. 'ನ ತೇ ಮಹಿತ್ವಂ ಅನ್ವಶ್ನುವಂತಿ' (ಬ್ರಹ್ಮಾದಿ) ದೇವತೆಗಳು ನಿನ್ನ ಮಹಿಮೆಯನ್ನು ಹೊಂದುವುದಿಲ್ಲ ಎಂಬ ಶ್ರುತಿಯೂ ಬ್ರಹ್ಮಾದಿ ದೇವತೆಗಳು ಮಹಿಮೆಯ ವಿಷಯದಲ್ಲಿ ವಿಷ್ಣುವಿಗಿಂತ ಯಾವಾಗಲೂ ನೀಚರಾದವರು ಎಂಬ ಭಾಗವತ ವಾಕ್ಯವೂ ಇದೆ.

**ಭಾವವಿಲಾಸಿನೀ–** ಪುನರಪಿ ಮುಕ್ತೌ ಭೇದಪ್ರತಿಪಾದಕ ಶ್ರುತಿಃಸ್ಮೃತೀರಾಹ – **ಕಿಲಾಮೃತಸ್ಯೇತ್ಯಾದಿನಾ** ॥ ೪೯೧-೪೯೨ ॥

> ಬ್ರಹ್ಮೇಶಾನಾದಿಭಿರ್ದೇವೈರ್ಯತ್ಪ್ರಾಪ್ತುಂ ನೈವ ಶಕ್ಯತೇ ।
> ತದ್ಯತ್ಸ್ವಭಾವಃ ಕೈವಲ್ಯಂ ಸ ಭವಾನ್ ಕೇವಲೋ ಹರಿಃ ॥ ೪೯೩ ॥

**ಅರ್ಥ–** ಯತ್= ಯಾವ ಕೈವಲ್ಯವು, ಬ್ರಹ್ಮೇಶಾನಾದಿಭಿಃ= ಬ್ರಹ್ಮರುದ್ರ ಮೊದಲಾದ, ದೇವೈಃ= ದೇವತೆಗಳಿಂದ, ಪ್ರಾಪ್ತುಂ= ಪಡೆಯಲು, ನೈವ ಶಕ್ಯತೇ= ಸಾಧ್ಯವಾಗುವುದೇ ಇಲ್ಲವೋ, ತದ್= ಅಂತಹ, ಕೈವಲ್ಯಂ= ಜಡಾಮಿಶ್ರಿತ ಚೈತನ್ಯರೂಪವಾದ ಶಾಶ್ವತವಾದ ದೇವರೂಪವಾದ ನಿತ್ಯಮುಕ್ತತ್ವವು, ಯತ್ ಸ್ವಭಾವಃ= ಯಾವ ನಿನ್ನ ಸ್ವಭಾವವೋ, ಸಃ= ಅಂತಹ, ಭವಾನ್= ನೀನು, ಕೇವಲಃ= ಕೇವಲೋ ನಿರ್ಗುಣಶ್ಚ ಎಂಬ ಶ್ರುತಿಯಲ್ಲಿ ಉಕ್ತನಾದ, ಹರಿಃ= ಹರಿಯು.

**ಅನುವಾದ–** ಬ್ರಹ್ಮ-ರುದ್ರ ಮೊದಲಾದ ದೇವತೆಗಳಿಂದ ಹೊಂದಲು ಅಸಾಧ್ಯವಾದ ಯಾವ ನಿನ್ನ ಕೈವಲ್ಯವು ಎಂದರೆ ಜಡಾಮಿಶ್ರಿತ ಸಾರ್ವಕಾಲಿಕ ಚಿದ್ದೇಹರೂಪವಾದ ನಿತ್ಯಮುಕ್ತತ್ವವು ಯಾವ ನಿನ್ನ ಸ್ವಭಾವವೋ ಅಂತಹ ನೀನು ಕೇವಲೋ ನಿರ್ಗುಣಶ್ಚ ಎಂಬ ವೇದಪ್ರತಿಪಾದ್ಯನಾದ ಹರಿಯಾಗಿದ್ದೀಯೇ.

**ಭಾವವಿಲಾಸಿನೀ–** ಯತ್ ಕೈವಲ್ಯಮನಾದ್ಯನಂತಕಾಲೇಷು ಜಡದೇಹಜರಾದ್ಯಮಿಶ್ರತ್ವ ರೂಪನಿತ್ಯಮುಕ್ತತ್ವಮ್ । ಯತ್ ಸ್ವಭಾವೋ ಯಸ್ಯ ಪರಮಾತ್ಮನಃ ಸ್ವಭಾವಃ ಸ್ವತ ಏವ ಭವತಿ ನತ್ವನ್ಯಪ್ರೇರಣಯೇತಿ ಸ್ವಭಾವಃ । ಕೇವಲಃ ''ಕೇವಲೋ ನಿರ್ಗುಣಶ್ಚೇ''ತ್ಯಾದಿಶ್ರುತೌ ಕೇವಲ ಪದೋದಿತಃ ॥ ೪೯೩ ॥

> ಇತಿ ಭಾಗವತೋಕ್ತ್ಯಾ ಚ ಬ್ರಹ್ಮಾದ್ಯೈರ್ನೈವ ಲಭ್ಯತೇ ।
> ಯಸ್ಯ ಸ್ವಭಾವಃ ತದ್ಭಾವಂ ಮರ್ತ್ಯಃ ಕೋ ಗಂತುಮರ್ಹತಿ ॥ ೪೯೪ ॥

**ಅರ್ಥ–** ಇತಿ= ಈ ರೀತಿಯಾದ, ಭಾಗವತೋಕ್ತ್ಯಾ= ಭಾಗವತ ವಚನದಿಂದ, ಯಸ್ಯ ಸ್ವಭಾವಃ= ಯಾವ ವಿಷ್ಣುವಿನ ಸ್ವಭಾವವು, ಬ್ರಹ್ಮಾದ್ಯೈಃ= ಬ್ರಹ್ಮಾದಿ ದೇವತೆಗಳಿಂದ, ನೈವ ಲಭ್ಯತೇ= ಪಡೆಯಲು ಸಾಧ್ಯವಿಲ್ಲವೋ, ತದ್ಭಾವಂ= ಅಂತಹ ವಿಷ್ಣುವಿನ ಸ್ವಭಾವವನ್ನು, ಕಃ ಮರ್ತ್ಯಃ= ಯಾವ ಮನುಷ್ಯನು, ಗಂತುಮರ್ಹತಿ= ಪಡೆಯಲು ಸಮರ್ಥನಾಗುತ್ತಾನೆ.

**ಅನುವಾದ–** ಈ ಭಾಗವತ ವಚನದಿಂದ ಬ್ರಹ್ಮಾದಿ ದೇವತೆಗಳು ಅವನ ಸ್ವಭಾವವನ್ನು ಪಡೆಯಲು ಅಸಮರ್ಥರು ಎಂದು ಹೇಳಿದ ಮೇಲೆ ಯಾವ ಮನುಷ್ಯನು ಆ ವಿಷ್ಣುವಿನ ಸ್ವಭಾವವನ್ನು ಪಡೆಯಲು ಸಮರ್ಥನಾಗುತ್ತಾನೆ?

**ಭಾವವಿಲಾಸಿನೀ–** ತದ್ಭಾವಂತದೈಕ್ಯಮ್ ॥ ೪೯೪ ॥

ಗಿರೋ ನಿರವಕಾಶಾಯಾಃ ಸಾವಕಾಶಾ ಹಿ ಕಿಂಕರೀ ।
ಅತಸ್ತದಧ್ವನ್ಯೆವಾಽಸೌ ಗಚ್ಛೇನ್ನ ತು ಕದಧ್ವನಾ ॥ ೪೯೫ ॥

**ಅರ್ಥ–** ಸಾವಕಾಶಾ= ಸಾವಕಾಶವಾದ ವಾಕ್ಯವು, ನಿರವಕಾಶಾಯಾಃ= ನಿರವಕಾಶವಾದ, ಗಿರಃ= ವಾಕ್ಯಕ್ಕೆ, ಕಿಂಕರೀ= ದಾಸಿಯಷ್ಟೆ, ಅತಃ= ಆದ್ದರಿಂದ, ಅಸೌ= ಈ ಸಾವಕಾಶ ವಾಕ್ಯವು, ತದಧ್ವನ್ಯೆವ= ನಿರವಕಾಶ ವಾಕ್ಯದ ದಾರಿಯಿಂದಲೇ, ಗಚ್ಛೇತ್= ನಡೆಯುತ್ತದೆ, ಕದಧ್ವನಾ= ದುರ್ಮಾರ್ಗದಿಂದ, ನ ತು= ನಡೆಯುವುದಿಲ್ಲ.

**ಅನುವಾದ–** ಸಾವಕಾಶವಾದ ವಾಕ್ಯವು ನಿರವಕಾಶವಾಕ್ಯಕ್ಕೆ ದಾಸಿಯಷ್ಟೆ. ಆದ್ದರಿಂದ ಸಾವಕಾಶ ವಾಕ್ಯವು ನಿರವಕಾಶವಾಕ್ಯದ ಮಾರ್ಗದಲ್ಲಿಯೇ ಹೋಗುತ್ತದೆಯೇ ಹೊರತು ದುರ್ಮಾರ್ಗದಲ್ಲಿ ಹೋಗುವುದಿಲ್ಲ.

**ಭಾವವಿಲಾಸಿನೀ–** ಸಾವಕಾಶಾ ಏಕೀಭವಂತೀತ್ಯಾದ್ಯಾ ॥ ೪೯೫ ॥

ತಸ್ಮಾತ್ ಸರ್ವೇಶ್ವರೋ ವಿಷ್ಣುರ್ಭೂತಭವ್ಯಭವತ್ಪ್ರಭುಃ ।
ಮುಕ್ತಾಮುಕ್ತಜಗನ್ನಾಥೋ ಭಕ್ತ್ಯಾಽಽರಾಧ್ಯ ಇತಿ ಸ್ಥಿತಮ್ ॥ ೪೯೬ ॥

**ಅರ್ಥ–** ತಸ್ಮಾತ್= ಆದ್ದರಿಂದ, ಸರ್ವೇಶ್ವರಃ= ಸರ್ವೇಶ್ವರನಾದ, ಭೂತಭವ್ಯಭವತ್ಪ್ರಭುಃ= ಅತೀತ, ವರ್ತಮಾನ ಮತ್ತು ಭವಿಷ್ಯತ್ ಪ್ರಪಂಚಗಳಿಗೆ ಒಡೆಯನಾದ, ಮುಕ್ತಾಮುಕ್ತಜಗನ್ನಾಥಃ= ಮುಕ್ತಾಮುಕ್ತಜಗತ್ತಿಗೆ ಒಡೆಯನಾದ, ವಿಷ್ಣುಃ= ವಿಷ್ಣುವು, ಭಕ್ತ್ಯಾ= ಭಕ್ತಿಯಿಂದ, ಆರಾಧ್ಯಃ= ಆರಾಧಿಸಲ್ಪಡಬೇಕು, ಇತಿ ಸ್ಥಿತಂ= ಎಂದು ಸಿದ್ಧವಾಯಿತು.

**ಅನುವಾದ–** ಆದ್ದರಿಂದ ಸರ್ವೇಶ್ವರನೂ, ವರ್ತಮಾನ, ಅತೀತ ಮತ್ತು ಭವಿಷ್ಯತ್ ಪ್ರಪಂಚಕ್ಕೆ ಒಡೆಯನೂ, ಮುಕ್ತಾಮುಕ್ತಜಗನ್ನಿಯಾಮಕನೂ ಆದ ವಿಷ್ಣುವು ಭಕ್ತಿಯಿಂದ ಆರಾಧಿಸಲ್ಪಡಬೇಕು ಎಂದು ಸಿದ್ಧವಾಯಿತು.

**ಭಾವವಿಲಾಸಿನೀ–** ಉಪಸಂಹಾರವಾಕ್ಯೇಽಪಿ ಪ್ರಮಾಣಂ ಸೂಚಯಿತುಂ "ಭೂತಭವ್ಯವತ್ ಪ್ರಭುರಿ"ತಿ ಸಹಸ್ರನಾಮಸ್ಥಂ ನಾಮೈವೋಕ್ತಮ್ । ಭವ್ಯಾಃ ಪರಾಂತಕಾಲೇ ಭವಿಷ್ಯಂತೋ ಮುಕ್ತಾಃ ॥ ೪೯೬ ॥

ಯಾ ಧಾತ್ರಾದಿಜಗದ್ಧಾತ್ರೀ ಖ್ಯಾತಾ ತೈರ್ವಂದಿತಾಽರ್ಚಿತಾ ।
ಮುಕ್ತಾಮುಕ್ತಜಗನ್ಮಾತಾ ಸಾ ಶ್ರೀರ್ಮಂಗಲದೇವತಾ ॥ ೪೯೭ ॥

**ಅರ್ಥ–** ಯಾ = ಯಾವ ದೇವತೆಯು, ಧಾತ್ರಾದಿಜಗದ್ಧಾತ್ರೀ= ಬ್ರಹ್ಮಾದಿ ಜಗತ್ತನ್ನು ಪೋಷಿಸುವವಳು ಎಂದು, ಖ್ಯಾತಾ = ಪ್ರಖ್ಯಾತಳಾಗಿದ್ದಾಳೋ, ತೈಃ = ಬ್ರಹ್ಮಾದಿಗಳಿಂದ,

ವಂದಿತಾ = ನಮಸ್ಕರಿಸಲ್ಪಡುವಳೋ, ಅರ್ಚಿತಾ = ಪೂಜಿಸಲ್ಪಡುವಳೋ, ಮುಕ್ತಾಮುಕ್ತ ಜಗನ್ಮಾತಾ = ಮುಕ್ತಾಮುಕ್ತ ಜಗತ್ತಿಗೆ ತಾಯಿಯೋ, ಸಾ ಶ್ರೀಃ = ಅಂತಹ ಲಕ್ಷ್ಮೀದೇವಿಯು, ಮಂಗಲದೇವತಾ = ಮಂಗಳದೇವತೆ.

**ಅನುವಾದ–** ಯಾವಳು ಬ್ರಹ್ಮಾದಿ ಜಗತ್ತಿಗೆ ಪೋಷಕಳಾಗಿದ್ದಾಳೋ, ಅವರಿಂದ ವಂದಿತಳಾಗಿ ಪೂಜಿಸಲ್ಪಡುತ್ತಾಳೆಯೋ, ಮುಕ್ತಾಮುಕ್ತಜಗತ್ತಿಗೆ ತಾಯಿಯಾಗಿದ್ದಾಳೆಯೋ, ಅಂತಹ ಲಕ್ಷ್ಮೀದೇವಿಯು ಮಂಗಳದೇವತೆ.

**ಭಾವವಿಲಾಸಿನೀ–** ಗ್ರಂಥಸ್ಯ ಶ್ರೀಕರತ್ವದ್ಯೋತನಾಯ ಗ್ರಂಥಾಂತೇ ಸಕಲವಾಙ್ಮನಸದೇವತಾಂ ಲಕ್ಷ್ಮೀಮಪಿ ಸ್ತುವನ್ ಭಗವದೈಕ್ಯಂ ವದನ್ಮಾತೃಗಾಮೀ ಸ್ಯಾದಿತಿ ಯುಕ್ತಿಂ ಚ ಸೂಚಯತಿ– **ಯಾ ಧಾತ್ರಾದೀತಿ** ॥ ಗ್ರಂಥಸ್ಯ ಪರಮಮಂಗಲತ್ವದ್ಯೋತನಾಯ ಮಂಗಲದೇವತೇತ್ಯುಕ್ತಮ್ ॥೪೯೭॥

**ವಿವರಣೆ–** ಈ ಗ್ರಂಥವು ಶ್ರೀಕರವೆಂದು ಸೂಚಿಸಲು ಗ್ರಂಥದ ಕೊನೆಯಲ್ಲಿ ಸಕಲ ವಾಙ್ಮನದೇವತೆಯಾದ ಲಕ್ಷ್ಮೀಯನ್ನು ಸ್ತೋತ್ರಮಾಡುತ್ತಾ ಭಗವದೈಕ್ಯವನ್ನು ಹೇಳುವವನಿಗೆ ಮಾತೃಗಾಮಿತ್ವದೋಷವು ಬರುತ್ತದೆಂಬ ಯುಕ್ತಿಯನ್ನು ಇಲ್ಲಿ ಸೂಚಿಸುತ್ತಾರೆ. ಈ ಗ್ರಂಥವೂ ಸಹ ಪರಮಮಂಗಳವೆಂದು ಸೂಚಿಸಲು ಮಂಗಲ-ದೇವತಾ ಎಂಬ ಶಬ್ದಪ್ರಯೋಗವನ್ನು ಮಾಡಿದ್ದಾರೆ.

> ಜಯತಿ ಶ್ರೀರಮಾಕಾಂತೋ ಜಯತಿ ಶ್ರೀಶ್ಚ ತತ್ಪ್ರಿಯಾ ।
> ಶ್ರೀಶ್ರೀಶಭಕ್ತೋ ಜಯತಿ ಮಧ್ವೋ ವಿಧ್ವಸ್ತಸಾಧ್ವಸಃ ॥ ೪೯೮ ॥

**ಅರ್ಥ–** ಶ್ರೀರಮಾಕಾಂತಃ = ಶ್ರೀಲಕ್ಷ್ಮೀಪತಿಯು, ಜಯತಿ = ಉತ್ಕೃಷ್ಟನಾಗಿದ್ದಾನೆ, ತತ್ಪ್ರಿಯಾ = ಅವನ ಪ್ರಿಯೆಯಾದ, ಶ್ರೀಶ್ಚ = ಲಕ್ಷ್ಮೀದೇವಿಯೂ ಉತ್ಕೃಷ್ಟಳಾಗಿದ್ದಾಳೆ. ಶ್ರೀಶ್ರೀಶಭಕ್ತಃ = ರಮಾನಾರಾಯಣರ ಭಕ್ತರಾದ, ವಿಧ್ವಸ್ತಸಾಧ್ವಸಃ = ಭಯದೂರರಾದ ಅಥವಾ ಭಕ್ತರ ಭಯವನ್ನು ದೂರಮಾಡುವವರಾದ, ಮಧ್ವಃ = ಮಧ್ವಾಚಾರ್ಯರು, ಜಯತಿ = ಉತ್ಕೃಷ್ಟರಾಗಿದ್ದಾರೆ.

**ಅನುವಾದ–** ಶ್ರೀರಮಾಪತಿಯು ಉತ್ಕೃಷ್ಟನಾಗಿದ್ದಾನೆ. ಅವನ ಪ್ರಿಯೆಯಾದ ಲಕ್ಷ್ಮೀಯೂ ಉತ್ಕೃಷ್ಟಳಾಗಿದ್ದಾಳೆ, ಮತ್ತು ರಮಾನಾರಾಯಣಭಕ್ತರಾದ ಭಯರಹಿತರಾದ (ಭಕ್ತರ ಭಯವನ್ನು ನಾಶಮಾಡುವ) ಶ್ರೀಮಧ್ವಾಚಾರ್ಯರೂ ಉತ್ಕೃಷ್ಟರಾಗಿದ್ದಾರೆ.

**ಭಾವವಿಲಾಸಿನೀ–** ಉಪರಿ ಮಧ್ವಕಥಾಂ ಪ್ರಸ್ತಾವಯಿತುಂ ತಂ ಚ ಸ್ತೌತಿ ॥ **ಶ್ರೀಶ್ರೀಶಭಕ್ತ ಇತಿ** ॥ ೪೯೮ ॥

**ವಿವರಣೆ–** ಮುಂದಿನ ಭಾಗದಲ್ಲಿ ಶ್ರೀಮಧ್ವಾಚಾರ್ಯರನ್ನು ಪ್ರಸ್ತಾಪ ಮಾಡುವುದಕ್ಕಾಗಿ ಶ್ರೀಶ್ರೀಶಭಕ್ತಃ ಎಂದು ಅವರನ್ನು ಸ್ತೋತ್ರ ಮಾಡುತ್ತಿದ್ದಾರೆ.

**ಷಷ್ಠೇऽಷ್ಟಕೇಂऽತಿಮಾಧ್ಯಾಯದ್ವಯಮಾರಭ್ಯ ಸಪ್ತಮೇ ।**
**ಪವಮಾನಃ ಪೂಯಮಾನಃ ಸೋಮಶ್ಶ್ಲೋಕ್ತಃ ಪದೇಪದೇ ॥ ೪೯ ॥**

**ಅರ್ಥ–** ಷಷ್ಠೇऽಷ್ಟಕೇ = ಆರನೇ ಅಷ್ಟಕದಲ್ಲಿ, ಅಂತಿಮಾಧ್ಯಾಯದ್ವಯಮಾರಭ್ಯ = ಕೊನೆಯ ಎರಡು ಅಧ್ಯಾಯಗಳನ್ನು ಆರಂಭಿಸಿ, ಸಪ್ತಮೇ = ಸಪ್ತಮಾಷ್ಟಕದಲ್ಲಿ ಪವಮಾನಃ = ಸಂಚರಿಸುವ, ಪೂಯಮಾನಃ = ಪವಿತ್ರೀಕರಿಸುವ, ಸೋಮಃ = ವಾಯುದೇವರು, ಪದೇ ಪದೇ = ಹೆಜ್ಜೆ ಹೆಜ್ಜೆಗೂ, ಉಕ್ತಃ = ಹೇಳಲ್ಪಟ್ಟಿದ್ದಾರೆ.

**ಅನುವಾದ–** ಆರನೇ ಅಷ್ಟಕದ ಕೊನೆಯ ಎರಡು ಅಧ್ಯಾಯಗಳು ಮತ್ತು ಏಳನೆಯ ಅಷ್ಟಕದಲ್ಲಿ ಹೆಜ್ಜೆ ಹೆಜ್ಜೆಗೂ ಸಂಚರಿಸುವ (ಪವಮಾನನು) ಪವಿತ್ರೀಕರಿಸುವ ಪೂಯಮಾನನು ಆದ ವಾಯುದೇವರು ಸ್ತೋತ್ರ ಮಾಡಲ್ಪಟ್ಟಿದ್ದಾರೆ.

**ಭಾವವಿಲಾಸಿನೀ–** ಷಷ್ಠೇऽಷ್ಟಕೇ ಅಷ್ಟಾಷ್ಟಕಾಧ್ಯಾಯಾತ್ಮಕಋಗ್ವೇದಸ್ಯ ಷಷ್ಠಾಷ್ಟಕೇ । ಅಷ್ಟಾಧ್ಯಾಯಾತ್ಮಕ ಏಕೋಭಾಗಃ ಅಷ್ಟಕಮಿತ್ಯುಚ್ಯತೇ । ಅಂತಿಮಾಧ್ಯಾಯದ್ವಯಂ ಪಂಚದಶವರ್ಗೇಭ್ಯ ಉಪರಿ ಸ್ವಾದಿಷ್ಠಯೇತ್ಯಾದಿಸಪ್ತಮಮಧ್ಯಾಯಂ ಸಂಪೂರ್ಣಮಷ್ಟಮಂ ಚಾಧ್ಯಾಯಮಿತ್ಯರ್ಥಃ । ಸಪ್ತಮೇऽಷ್ಟಕೇ ಪಂಚವರ್ಗೋನಾಧ್ಯಾಯಪಂಚಕೇ । ಮಿಲಿತ್ವಾऽऽದಾವಂತೇ ಚ ಕಿಂಚಿದೂನಾಧ್ಯಾಯ ಸಪ್ತಕ ಇತ್ಯರ್ಥಃ । ವಾಯೋರ್ಗಮನಂ ತಸ್ಯ ಕರ್ತಾ ಪವಮಾನಃ । ಪೂಯಮಾನಃ ಪವಿತ್ರೀಕರಣಸಮರ್ಥಃ । ವಾಯುರ್ವಹ್ನಿಃ ಶುಚಿಃ ಶ್ರೇಷ್ಠ ಇತಿ ಸ್ಮೃತೇಃ । ಅತ ಏವ ಹಿ ಪಾಂಸವೋऽಸ್ಮಾನ್ ಪುನಂತ್ವಿತಿ ಶುದ್ಧಿಪ್ರಾರ್ಥನಾ । ಜಾಗ್ರತ್ ಸ್ವಪ್ನಪ್ರ್ಯಾಖ್ಯಾವಸ್ಥಾಸು ದೇಹಿನಾಂ ದೇಹೇ ಶ್ವಾಸರೂಪೇಣ ಸತ್ತಾತ್ಸೋಮಃ । ನಿರುಕ್ತತ್ವಾದಾಧಿಕಾರಿಕವರ್ಗೇಷು ವಾಯೋರತಿಶಯೇನೋತ್ತಮತ್ವಜ್ಞಾಪನಾರ್ಥಂ ವಾ ಕಾರಸ್ಯಾಕಾರಾಖ್ಯಾವರ್ಣವಿಕಾರಃ । ದ್ವೌ ಚಾಪರೌ ವರ್ಣವಿಕಾರನಾಶಾವಿತಿ ನಿರುಕ್ತಲಕ್ಷಣೇ ಕಥನಾತ್ । ಸು ಪ್ರಸವೈಶ್ವರ್ಯಯೋರಿತಿ ಧಾತೋರೌಣಾದಿಕೇ ಮಪ್ರತ್ಯಯೇ ಗುಣೇ ಚ ಕೃತೇ ಸತಿ ಜಗತ್ಪ್ರಸವಿತೃತ್ವಾದೈಶ್ವರ್ಯವತ್ತ್ವಾದ್ವಾ ಸೋಮಃ । ಪಿತರತುಲಗುರೋ, ಪೀಠೇ ರತ್ನೋಪಕ್ಲೃಪ್ತೇರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಮಿತಿವಚನಾತ್ ॥ ೪೯ ॥

**ವಿವರಣೆ–** ಋಗ್ವೇದದಲ್ಲಿ ಎಂಟು ಅಷ್ಟಕಗಳಿವೆ. ಒಂದೊಂದು ಅಷ್ಟಕದಲ್ಲಿ ಎಂಟು ಅಧ್ಯಾಯಗಳಿವೆ. ಆರನೆಯ ಅಷ್ಟಕದಲ್ಲಿ ಏಳನೆಯ ಅಧ್ಯಾಯದಲ್ಲಿ ಮೊದಲನೆಯ ಹದಿನೈದು ವರ್ಗಗಳನ್ನು ಬಿಟ್ಟು, ಉಳಿದ ಸಮಗ್ರವಾದ ಅಧ್ಯಾಯದಲ್ಲಿ ಹಾಗೆಯೇ ಎಂಟನೆಯ ಅಧ್ಯಾಯದಲ್ಲಿ ಮತ್ತು ಸಪ್ತಮಾಷ್ಟಕದಲ್ಲಿ ಮೊದಲನೆಯ ನಾಲ್ಕು ಅಧ್ಯಾಯಗಳಲ್ಲಿ ಮತ್ತು ಐದನೆಯ ಅಧ್ಯಾಯದಲ್ಲಿ ಕೊನೆಯ ಐದು ವರ್ಗಗಳನ್ನು ಬಿಟ್ಟು ಇಷ್ಟು ಭಾಗದಲ್ಲಿ ವಾಯುದೇವರು ಸ್ತೋತ್ರ ಮಾಡಲ್ಪಡುತ್ತಾರೆ. ಇದಿಷ್ಟು ಒಟ್ಟು ಸೇರಿ ಏಳು ಅಧ್ಯಾಯಕ್ಕೆ ಸ್ವಲ್ಪ ಕಡಿಮೆಯಾಗುತ್ತವೆ. 'ಪವಮಾನ' ಎಂದರೆ ಸಂಚಾರ

ಮಾಡುವ ವಾಯು ಎಂದರ್ಥ. 'ಪೂಯಮಾನ' ಎಂದರೆ ಪವಿತ್ರೀಕರಿಸಲು ಸಮರ್ಥನಾದವನು ಎಂದರ್ಥ. 'ವಾಯುರ್ವಹ್ನಿಃ ಶುಚಿಃ ಶ್ರೇಷ್ಠಃ' ಎನ್ನುವ ಸ್ಮೃತಿಯು ಇದಕ್ಕೆ ಪೋಷಕವಾಗಿದೆ. ಆಕಾರಣದಿಂದಲೇ ಪಂಡಿತಾಚಾರ್ಯರು 'ಪಾಂಸವೋಽಸ್ಮಾನ್ ಪುನಂತು' ಎಂದು ಶುದ್ಧಿಯನ್ನು ಪ್ರಾರ್ಥನೆ ಮಾಡಿದ್ದಾರೆ. ಜಾಗ್ರತ್, ಸ್ವಪ್ನ, ಸುಷುಪ್ತ್ಯಾವಸ್ಥೆಗಳಲ್ಲಿ ಜೀವರ ದೇಹದಲ್ಲಿ ಶ್ವಾಸರೂಪದಿಂದ ಇರುವುದರಿಂದ 'ಸೋಮ' ಎಂದು ಕರೆಯಲ್ಪಡುತ್ತಾರೆ. ವರ್ಣವಿಕಾರ ಮತ್ತು ವರ್ಣವಿನಾಶಗಳನ್ನು ಹೇಳುವ ನಿರುಕ್ತದ ಬಲದಿಂದ 'ಶ್ವಾಸ' ಎಂಬ ಶಬ್ದವು ಸೋಮ ಎಂದಾಗುತ್ತದೆ. ಅಥವಾ 'ಸು ಪ್ರಸವೈಶ್ವರ್ಯಯೋಃ' ಎಂಬ ಧಾತುವಿದೆ. ಈ ಧಾತುವಿಗೆ ಔಣಾಧಿಕ ಮ ಪ್ರತ್ಯಯವು ಬಂದು ಗುಣವು ಬಂದರೆ 'ಸೋಮ' ಎಂದು ರೂಪವಾಗುತ್ತದೆ. ಜಗತ್‌ಪ್ರಸವಿತಾ ಮತ್ತು ಐಶ್ವರ್ಯವಾನ್ ಎಂದು ಅರ್ಥ. 'ಪಿತರತುಲಗುರೋ' ಎಂಬುದರಿಂದ ಜಗತ್-ಪ್ರಸವಿತೃತ್ವವನ್ನು ಪೀತೇರತ್ನೋಪಕ್ಲೃಪ್ತೇರುಚಿರರುಚಿಮಣಿಜ್ಯೋತಿಷಾ ಸನ್ನಿಷಣ್ಣಮ್ ಎಂಬುದರಿಂದ ಐಶ್ವರ್ಯವನ್ನು ಪಂಡಿತಾಚಾರ್ಯರು ಸ್ತೋತ್ರ ಮಾಡಿದ್ದಾರೆ.

**ಸ ಮಧ್ವ ಇತಿ ತತ್ರೈವ ಪವಮಾನಸ್ಯ ಮಧ್ವತಾ ।**
**ಯತ್ ಸ್ಪಷ್ಟಂ ಶ್ರೂಯತೇ ತಸ್ಮಾನ್ಮಧ್ವಾಖ್ಯಾ ಮಾರುತೀ ತನುಃ ॥ ೫೦೦ ॥**

**ಅರ್ಥ–** ತತ್ರೈವ = ಅಲ್ಲಿಯೇ, ಸ ಮಧ್ವ ಇತಿ = ಅವರು ಮಧ್ವರೆಂದು, ಪವಮಾನಸ್ಯ = ಆ ಪವಮಾನನಿಗೆ, ಮಧ್ವತಾ = ಮಧ್ವತ್ವವು, ಯತ್ = ಯಾವ ಕಾರಣದಿಂದ, ಸ್ಪಷ್ಟಂ = ಸ್ಪಷ್ಟವಾಗಿ, ಶ್ರೂಯತೇ = ಕೇಳಿಬರುತ್ತದೆಯೋ, ತಸ್ಮಾತ್ = ಆ ಕಾರಣದಿಂದ, ಮಾರುತೀ ತನುಃ = ವಾಯುದೇವರ ಮೂರನೆಯ ಶರೀರವು, ಮಧ್ವಾಖ್ಯಾ = ಮಧ್ವ ಎಂಬ ಹೆಸರುಳ್ಳದ್ದು.

**ಅನುವಾದ–** ಅಲ್ಲಿಯೇ ಸಮಧ್ವಃ ಎಂಬ ವಾಕ್ಯದಿಂದ ಪವಮಾನನು ಮಧ್ವರು ಎಂದು ಸ್ಪಷ್ಟವಾಗಿ ಹೇಳಿರುವುದರಿಂದ ವಾಯುದೇವರ ಮೂರನೆಯ ಅವತಾರಕ್ಕೆ 'ಮಧ್ವ' ಎಂಬ ಹೆಸರು.

**ವೇವಿಜಾನಃ ಪೃಥಕ್ಕುರ್ವನ್ ಸ ಮಧ್ವಃ ಪಂಚಧಾ ಜಗತ್ ।**
**ಪೃಥಗ್ಭಾವಾತಿಶಯವಾಗ್ ವಿಜೇ ರೂಪಮಿದಂ ಯತಃ ॥ ೫೦೧ ॥**

**ಅರ್ಥ–** ವೇವಿಜಾನಃ = ವೇವಿಜಾನಃ ಎಂದರೆ, ಪೃಥಕ್ಕುರ್ವನ್ = ಪೃಥಕ್ಕರಿಸುವವನು ಎಂದು ಅರ್ಥ. ಸ ಮಧ್ವಃ = ಆ ಮಧ್ವರು, ಪಂಚಧಾ = ಐದು ರೀತಿಯಾಗಿ, ಜಗತ್ = ಜಗತ್ತನ್ನು, ಪೃಥಗ್ಭಾವಾತಿಶಯವಾಕ್ = ವಿಂಗಡಿಸಲು ಶ್ರೇಷ್ಠವಾದ ಮಾತುಗಳನ್ನು ಉಳ್ಳವರು, ಯತಃ = ಏಕೆಂದರೆ, ಇದಂ = ವೇವಿಜಾನಃ ಎಂಬ ಶಬ್ದವು, ವಿಜೇಃ = ವಿಜ್‌ಧಾತುವಿನ, ರೂಪಂ = ರೂಪವಾಗಿದೆ.

**ಅನುವಾದ–** ವೇವಿಜಾನಃ ಎಂದರೆ ಪೃಥಕ್ಕರಿಸುವನು ಎಂದು ಅರ್ಥ. ಆ ಮಧ್ವರು ಈ ಜಗತ್ತನ್ನು ಐದುಭಾಗವಾಗಿ ವಿಂಗಡಿಸುವ ಶ್ರೇಷ್ಠವಾದ ವಾಕ್ಯಗಳನ್ನು ಉಳ್ಳವರು. ಏಕೆಂದರೆ 'ವೇವಿಜಾನಃ' ಎಂಬುದು ವಿಜ್ ಧಾತುವಿನ ರೂಪವಾಗಿದೆ.

**ಭಾವವಿಲಾಸಿನೀ–** ತತ್ರ ಪೂಯಮಾನೇ । ಯದ್ಯಸ್ಮಾತ್ । ಮಾರುತೀ ಮರುತ್‌ಸಂಬಂಧಿನೀ । ಸ ಮಧ್ವ ಇತ್ಯನೇನ "ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ ಶ್ಯೇನೋ ಮಥಾಯದಿಷಿತಸ್ತಿರೋ ರಜಃ । ಸಮಧ್ವ ಆಯುವತೇ ವೇ ವಿಜಾನ ಇತ್ಕೃಶಾನೋರಸ್ತುರ್ಮನಸಾ ಹ ಭಿಭ್ಯುಷಾ । ತೇನಃ ಪೂರ್ವಾ ಸ ಉಪರಾಸ ಇಂದವೋ ಮಹೇ ವಾಜಾಯ ಧನ್ವಂತು ಗೋಮತೇ । ಈಕ್ಷೇಣ್ಯಸೋ ಅಹ್ಯೋ ನ ಚಾರವೋ ಬ್ರಹ್ಮ ಬ್ರಹ್ಮ ಯೇ ಜುಜುಷುರ್ಹವಿರ್ಹವಿರಿ"ತಿ ಋಗ್‌ದ್ವಯಂ ಗೃಹ್ಣಾತಿ । ಅಯಮಸ್ಯಾರ್ಥಃ । ಪೂರ್ವ್ಯಃ ಸರ್ವೇಷಾಂ ಜೀವಾನಾಂ ಪೂರ್ವಂ ವಿದ್ಯಮಾನಃ ಸರ್ವಜೀವಜ್ಯೇಷ್ಠ ಇತ್ಯರ್ಥಃ । "ವಂದ್ಯಂ ಚಂದ್ರೇಂದ್ರದ್ಯುಮಣಿಫಣಿವಯೋ ನಾಯಕಾದ್ಯೈರಿ-ಹಾದ್ಯೇ"ತಿ ವಚನಾತ್ । ಸ ಪವಮಾನಃ ಪವತೇ ಶ್ವಾಸರೂಪೇಣ ಪವನಂ ಕರೋತಿ । ಯಂ ಪವನಂ ದಿವೋ ದ್ಯುನಾಮಕವೈಕುಂಠಲೋಕಸ್ಯ ಪರಿ ಪರಿತೋ ವದಂತಿ । "ಆನಂದಾನ್ಮಂದ ಮಂದಾ ದದತಿ ಹಿ ಮರುತ" ಇತಿ ವಚನಾತ್ । ಶ್ಯೇನಃ ಶೀ ನಿರವಧಿಕ ಸುಖವನ್ನಾರಾಯಣ ಆಸಮಂತಾದಿನಃ ಪ್ರಭುರ್ಯಸ್ಯ ಸ ತಥೋಕ್ತಃ । ತ್ರಾತಾ ಯಸ್ಯ ತ್ರಿಧಾಮೇತಿ ವಚನಾತ್ । ಇಷಿತಃ ಸಜ್ಜನಾನಾಮಿಷ್ಟಃ । "ಭ್ರಾತರಿಷ್ಟೇ"ತಿ ವಚನಾತ್ । ಯಃ ಪವಮಾನೋ ರಜೋ ರಜೋಗುಣನಿರ್ಮಿತಂ ತದುಪಲಕ್ಷಿತತಮೋಗುಣನಿರ್ಮಿತಂ ಚ ದುಶ್ಶಾಸ್ತ್ರಂ ತಿರಸ್ತಿರಸ್ಕೃತ್ಯ "ದುರ್ಭಾಷ್ಯಂ ವ್ಯಸ್ಯ ದಸ್ಯೋ"ತಿರಿ"ತಿ ವಚನಾತ್ । ಮಥಾಯವೇದಶಾಸ್ತ್ರಾಖ್ಯ ಸಮುದ್ರಸ್ಯ ವಿಚಾರಾಖ್ಯಮಂಥನಂ ಕೃತವಾನ್ । "ಅಸುಕರಮಕರೋರ್ಬ್ರಹ್ಮಸೂತ್ರಸ್ಯ ಭಾಷ್ಯಮಿ"ತಿ ವಚನಾತ್ । ಸಃ ದುಶ್ಶಾಸ್ತ್ರಮಧಃಕೃತ್ಯ ಸಚ್ಛಾಸ್ತ್ರಂ ಪ್ರವರ್ತಯನ್ ಪವಮಾನೋ ಮಧ್ವೋ ಮಧ್ವ-ನಾಮಾ ವೇವಿಜಾನಃ ಈಶಜೀವಜಡಾತ್ಮಕಪ್ರಪಂಚಸ್ಯ ವಿಶೇಷೇಣ ಪೃಥಗ್ಭಾವಂ ಕುರ್ವನ್ । ಸರ್ವಥಾಽತಿರೋಹಿತಸ್ಯ ಪುನಃ ಸಮರ್ಥನಮಪಿ ಕರಣಮಿತ್ಯೇವೋಚ್ಯತೇ । ಪಂಚಭೇದಸ್ಥಾಪನಂ ಕುರ್ವನ್ನಿತ್ಯರ್ಥಃ । ವಿಜೃಪೃಥಗ್ಭಾವ ಇತಿ ಧಾತೋಃ ।

ಆಯುವತೇ ಸಮಂತಾತ್ ಸಜ್ಜನೇಷು ಸರ್ವದಾ ಮಿಶ್ರಿತೋ ಭವತಿ । ಭೇದಶಾಸ್ತ್ರಮುಪ-ಪಾದಯನ್ ತೇಷು ಕೃಪಾಂ ಕರೋತೀತ್ಯರ್ಥಃ । ಸಜ್ಜನಾನ್ಮೋದಯಂತಮಿತಿ ವಚನಾತ್ । ದುರ್ಜನೇಷ್ವಮಿಶ್ರಿತಶ್ಚ ಭವತಿ । ತದಭಿಮತಮದ್ವೈತಂ ಖಂಡನೀಯತ್ವಾ ತತ್ರಾಪಿ ಭೇದಸ್ಯೈವ ಸ್ಥಾಪನಾತ್ತೇಷಾಮಸಹ್ಯೋಭವತೀತ್ಯರ್ಥಃ । "ದೈತ್ಯಾನಾಮಾರ್ತಿಮಂಧೇ ತಮಸಿ ವಿದಧ-ತಾಮಿ"ತಿ ವಚನಾತ್ "ಪ್ರಮುದದಸುಧಿಯಾಂ ಮೋಹಕದ್ವೇಷಭಾಜಾಮಿ"ತಿ ವಚನಾಚ್ಚ । ಯುಮಿಶ್ರಣಾಮಿಶ್ರಣೋರಿತಿ ಧಾತೋಃ ಯುತ ಇತಿ ವಕ್ತವ್ಯೇ ಯುವತ ಇತಿ ಬಹುವಚನಂ ಸಕಲಸಜ್ಜನಾನಾಂ ಹೃದಿಸ್ಥರೂಪಬಾಹುಲ್ಯಾಪೇಕ್ಷಯಾ ತತ್ರಸ್ಥಿತದುರ್ಜನಾನಾಂ ಪರಾಭಾವ-ನಾಯ ಗೃಹೀತರೂಪಬಾಹುಲ್ಯಾಪೇಕ್ಷಯಾ ಚ ವ್ಯತ್ಯಯೋ ಬಹುಲಮಿತಿ ವಚನಾದ್ವಾ । ಏಕ-ರಣಭೇದಾದ್ವಾ ವಾಯೋರ್ದಿವ್ಯಾನಿ ರೂಪಾಣಿ ಪದ್ಮತ್ರಯಯುತಾನಿ ಚೇತ್ಯಾದಿವಚನಾತ್ ।

''ಸ್ವಾಮಿನ್‌ಸರ್ವಾಂತರಾತ್ಮನ್ನಿತ್ಯಾದಿ ವಚನಾಚ್ಚ । ಇದಿತ್ಥಂ ಮಧ್ವರೂಪವದೇವ । ಕೃಶಾನೋರ್ಬ್ರಹ್ಮಪ್ರಲಯಕಾಲೇ ಜಲಾವರಣೋಪರಿ ತೇಜೋರೂಪಾವರಣ ತಯಾಸ್ಥಿತಾಗ್ನೇಃ ಅಸ್ತುರ್ನಿರಸನಶೀಲಃ । ''ಅಸು ಕ್ಷೇಪಣ'' ಇತಿ ಧಾತೋರೌಣಾದಿಕೇಸ್ತುನ್ ಪ್ರತ್ಯಯಃ । ತೇಜಸೋ ವಾಯೌ ವಿಲಯಸ್ಯ ಶಾಸ್ತ್ರಸಿದ್ಧತ್ವಾತ್ । ತೇಜೋರೂಪಾವರಣಸಂಹರ್ತಾ ವಾಯುರೂಪಾವರಣಸ್ಥೋ ವಾಯೋಃ ಸಂಹಾರಕರೂಪವಿಶೇಷ ಇತ್ಯರ್ಥಃ । ಬಿಭ್ಯುಷಾ ಭಯಂಕರೇಣ ಮನಸಾ ಸಂಹಾರಕ ಮೂರ್ತಿತ್ವಾತ್ ಭಯಂಕರಚಿತ್ತೇನ ಸಹಿತ ಇತ್ಯರ್ಥಃ । ಆಯುವತೇ ವಿಷ್ವಗೂರ್ಧ್ವಮಧಶ್ಚ ವಿದ್ಯಮಾನೇ ಆವರಣರೂಪವಾಯೌ । ತತ್ರ ತತ್ರತ್ಯ ತೇಜಃಸಂಹಾರಾಯ ಬಹುಮೂರ್ತಿಭಿರ್ಮಿಶ್ರಿತೋ ಭವತಿ । ಅತ್ರಾಪಿ ರೂಪಬಾಹುಲ್ಯ-ವಿವಕ್ಷಯಾ ಬಹುವಚನಮ್ । ದಂಷ್ಟ್ರೋಗ್ರಕರಾಲವದನಾನಾಂ ತೇಷಾಂ ರೂಪಾಣಾಮಾ-ಶ್ಚರ್ಯಕರತ್ವಾದ್ದೇತ್ಯುಕ್ತಂ ಅಹೋ ಇತ್ಯರ್ಥಃ । ಅಭೇದಿ ಬಭ್ರೇ ಬಭೂವೇ । ''ಯೇನ ಭ್ರೂವಿಭ್ರಮಸ್ತ'' ಇತ್ಯಾದಿ ವಚನಾತ್ । ನೋಽಸ್ಮಾಕಂ ಪೂರ್ವಾಸಃ ಉಪದೇಷ್ಟೃತಯಾ ಪ್ರೇರಕತಯಾ ಚ ಜ್ಞಾನೋದಯಾತ್ ಪೂರ್ವಂ ವಿದ್ಯಮಾನಾಃ । ಇಂದವಃ ಇಷ್ಟದಾನಾ-ಶೀಲಾಸ್ತೇ ವಾಯೋರವತಾರಃ ಉಪರಾಸೋ ಮೋಕ್ಷಪ್ರಾಪಕತಯಾ ತದುಪಯುಕ್ತಸಂಹಾರ-ಕರ್ತೃತಯಾ ಚ ಜ್ಞಾನೋದಯಾದುಪರಿ ವಿದ್ಯಮಾನಾಸ್ತೇ ವಾಯೋರವತಾರಾಶ್ಚ । ಆವಿಷ್ಕರ್ತುಕಾಮಮ್ । ''ಪಿತರತುಲಗುರೋ । ತತ್ವಜ್ಞಾನುಮುಕ್ತಿಭಾಜಃ । ಸುಖಯಸಿ ಹಿ ಗುರವಿ''ತ್ಯಾದಿ ವಚನಾತ್ । ಗೋಮತೇ ಜ್ಞಾನವತೇ ಮಹೇ ಮಹತೇ ಮಹೇ ಪಂಚಪರ್ವಾದ್ಯುತ್ಸವೇ ವಾ । ವಾಜಾಯಾ ಅನ್ನಾಯ ಹೋತೄಣಾಂ ವ್ಯಾಖ್ಯಾತೄಣಾಂ ಚ ಪೋಷಣೋಪಯುಕ್ತಾನ್ನಾಯ ಜ್ಞಾನಸಾಧನಯ ಯಜ್ಞೋಪಯುಕ್ತಾನ್ನಾಯ ಚೇತ್ಯರ್ಥಃ । ಧನ್ವಂತು ಧನದಾ ಭವಂತು । ಧನ ಧಾನ್ಯ ಇತಿ ಧಾತೋಃ । ''ಭೂರಿ ಮೇ ಭೂತಿಹೇತುರಿ''ತಿ ವಚನಾತ್ । ಯೇ ಉಕ್ತಾದ್ವಿವಿಧಾ ಅಪಿ ವಾಯೋರವತಾರಾಃ ।

ಅಂಹ್ಯಃ । ಅಹೇರಿಮಾ ಅಂಹ್ಯಃ । ಹಿ ಸಂಬಂಧಿನ್ಯಃ ರತ್ನಪ್ರಭಾಃ ನ ಇವ ಈಕ್ಷೇಣ್ಯಾಸ ಈಕ್ಷಣೀಯಾಃ ವೇರಣ್ಯಪದವದೌಣಾದಿಕಣ್ಯಪ್ರತ್ಯಯಾದಿ ಪದಂ ದ್ರಷ್ಟವ್ಯಮ್ । ರತ್ನಪ್ರಭಾವದ್ಯೋತನಾತ್ ದಿವ್ಯದೇಹಾ ಇತ್ಯರ್ಥಃ ಅನುವದಾತ್ತಸ್ವರಿತರೂಪಕಂಪೇನ ಉದ್ಧಾದ್ಧೋಲೋಕ ವ್ಯಾಪಿತಾಂ ಪ್ರಭಾನಾಂ ಸೂಚಯನ್ ಅಭೂತೋಪಮೇಯಮಿತ್ಯಪ್ಯಾಹ । ''ನಿಜರುಚಿನಿಕರವ್ಯಾಪ್ತ-ಲೋಕಾವಕಾಶಃ । ಭೂಮಿಭೂಷಾಮಣಿಃ । ಪ್ರೋದ್ಯದ್ವಿದ್ಯಾನವದ್ಯದ್ಯುತಿಮಣಿಕಿರಣ-ಶ್ರೇಣಿಸಂಪೂರಿತಾಶ'' ಇತ್ಯಾದಿ ವಚನಾತ್ । ಚಾರವೋಽಗಣ್ಯಲಾವಣ್ಯಯುಕ್ತತಯಾ ಮನೋಹರಾಶ್ಚ ಸಂತಃ । ''ಸಂದ್ರಕ್ಷ್ಯೇ ಸುಂದರಮಿ''ತಿ ವಚನಾತ್ । ಬ್ರಹ್ಮ ಬ್ರಹ್ಮಾದೇಹಿನಾಂ ದೇಹೇ ದೇಹೇ ವಿದ್ಯಮಾನಂ ಪರಮಾತ್ಮಾನಂ ಯುಗೇ ಯುಗೇ ರಾಮಕೃಷ್ಣವ್ಯಾಸಾದಿ ರೂಪೇಣಾವತೀರ್ಣಂ ಪರಮಾತ್ಮಾನಂ ಚ । ಜುಜುಷುಃ ಸಿಷೇವಿರೇ । ತಸ್ಮಿನ್ ಪ್ರತಿರೂಪ ಭಕ್ತಿಂ ಚಚಕುಃ । ಜುಷೀ ಪ್ರೀತಿಸೇವನಯೋರಿತಿ ಧಾತೋಃ । ''ಜುಷ್ಟಿಂ ಮಾತರಿಶ್ವಾ ಜಗಾಮ'' ''ಆಸೇವೋದ್ಯದ್ದಯಾರ್ದ್ರಃ । ಯಾಭ್ಯಾಂ ಶುಶ್ರೂಷುಃ । ಭಕ್ತಿಮದ್ಯಾಪಿ ರಾಮ'' ಇತಿ

ವಚನಾತ್ । ಹವಿಃ ಯಜ್ಞೇ ಯಜ್ಞೇ ಯಾಜ್ಞಿಕೈರ್ವಾ ಯವೇ ಸ್ವಾಹೇತಿ ದತ್ತಂ ಹವಿಃ ಹವಿಃ ಭೋಕ್ತೃಭಿರ್ವೈದಿಕೈಃ ಪ್ರಾಣಾದಿಪಂಚಕರೂಪೇಣ ದತ್ತಂ ಹವಿರ್ಹವಿಃ ಭೀಮರೂಪೇಣೈಕ ಚಕ್ರಾನಗರೇ ಗೃಹೇ ಗೃಹೇ ಬಕಾಯ ಚ ದತ್ತಂ ಹವಿರ್ಹವಿಃ ಮಧ್ವರೂಪೇಣ ಭಿಕ್ಷಾದಾತೃಭಿರ್ದತ್ತಂ ಹವಿರ್ಹವಿಶ್ಚ ಜುಜುಷುಃ ಪ್ರೀತ್ಯಾ ಬುಭುಜಿರ ಇತಿ । ಇಮಮೇವಾರ್ಥಂ ಮನಸೀ ನಿಧಾಯಾಹ – ವೇವಿಜಾನ ಇತಿ ॥ ಪೃಥಗ್‌ಭಾವಾತಿಶಯ ಕರ್ತೃತ್ವಾಕ್ । ಭೇದಸ್ಯ ಪಾರಮಾರ್ಥಿಕತ್ವಾಖ್ಯಾತಿಶಯ ಸೂಚನಾರ್ಥಮೇವಂ ಪ್ರಯೋಗಃ । ಅತ್ಯಂತಭೇದಸೂಚನಾರ್ಥಂ ವಾ । ವಿಜೇರ್ವಿಜ್ರಪೃಥಗ್ಭಾವ ಇತಿ ಧಾತೋರಿದಂ ವೇ ವಿಜಾನ ಇತಿ ಪದಮ್ ॥ ೫೦೦-೫೦೧ ॥

**ವಿವರಣೆ–** ಇಲ್ಲಿ ರಾಜರು "ಸ ಪೂರ್ವ್ಯಃ ಪವತೇ ಯಂ ದಿವಸ್ಪರಿ ಶ್ಯೇನೋ ಮಥಾಯದಿಷಿತಸ್ತಿರೋ ರಜಃ । ಸ ಮಧ್ವ ಆ ಯುವತೇ ವೇವಿಜಾನ ಇತ್ ಕೃಶಾನೋರಸ್ತುರ್ಮನಸಾ ಹ ಭಿಭ್ಯುಷಾ ॥" ಮತ್ತು "ತೇ ನಃ ಪೂರ್ವಾಸ ಉಪರಾಸ ಇಂದವೋ ಮಹೇ ವಾಜಾಯ ಧನ್ವಂತು ಗೋಮತೇ । ಈಕ್ಷೇಣ್ಯಸೋ ಅಹ್ಯೋ ನ ಚಾರವೋ ಬ್ರಹ್ಮ ಬ್ರಹ್ಮ ಯೇ ಜುಜುಷುರ್ಹವಿರ್ಹವಿಃ ॥" 7-77-2, 3 ಈ ಮಂತ್ರಗಳ ಅರ್ಥವನ್ನು ವಿಮರ್ಶೆ ಮಾಡಿ ಶ್ರೀ ಮಧ್ವಾಚಾರ್ಯರ ಮಹಿಮೆಯನ್ನು ವರ್ಣಿಸುತ್ತಾರೆ. ಪೂರ್ವ್ಯಃ = ಸರ್ವಜೀವರಿಗಿಂತಲೂ ಮೊದಲು ಇರುವ, ಅಂದರೆ ಸರ್ವಜೀವರಿಗಿಂತಲೂ ಶ್ರೇಷ್ಠನಾದ, "ವಂದ್ಯಂ ಚಂದ್ರೇಂದ್ರರುದ್ರದ್ಯುಮಣಿಫಣಿವಯೋನಾಯಕಾದ್ಯೈರಿಹಾದ್ಯ" ಎಂಬ ವಾಯುಸ್ತುತಿಯ ವಚನವಿದೆ. ಸಃ = ಪವಮಾನನು, ಆ ಪವಮಾನಃ = ಶ್ವಾಸರೂಪದಿಂದ ಸಂಚಾರ ಮಾಡುವ, ಯಂ = ಯಾವ ಪವನನನ್ನು, ದಿವಸ್ಪರಿ = ದ್ಯುನಾಮಕನಾದ ವೈಕುಂಠಲೋಕದ ಸುತ್ತಲೂ ಇರುವನೆಂದು ಹೇಳುತ್ತಾರೆಯೋ, "ಆನಂದಾನ್ಮಂದಮಂದಾ ದದತಿ ಹಿ ಮರುತ್" ಎಂದು ವಾಯುಸ್ತುತಿಯಲ್ಲಿ ಇದು ನಿರೂಪಿತವಾಗಿದೆ. ಶ್ಯೇನಃ = ಶೀ ಎಂದರೆ ನಿರವಧಿಕ ಸುಖರೂಪನಾದ ನಾರಾಯಣ. ಏನ ಎಂಬಲ್ಲಿ ಆ ಇನ ಎಂದು ಪದಚ್ಛೇದ ಎಂದರೆ ಸಮಗ್ರವಾಗಿ ಪ್ರಭುವಾಗಿದ್ದಾನೆಯೋ ಎಂದು ಅರ್ಥ. ಶ್ಯೇನಃ = ನಾರಾಯಣನನ್ನೇ ಸಮಗ್ರವಾಗಿ ಪ್ರಭುವಾಗಿವುಳ್ಳವನು ಎಂದು ಅರ್ಥ, 'ತ್ರಾತಾ ಯಸ್ಯ ತ್ರಿಧಾಮಾ' ಎಂಬ ವಾಯುಸ್ತುತಿವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ. ಇಷಿತಃ = ಸಜ್ಜನರಿಗೆ ಇಷ್ಟನಾದಂತಹ, ಭ್ರಾತರಿಷ್ಟ = ಎಂಬ ವಾಯುಸ್ತುತಿ ವಚನದಿಂದ ಈ ಅರ್ಥವು ದೊರೆಯುತ್ತದೆ. ಅಂತಹ ಯಾವ ಪವಮಾನನಿದ್ದಾನೆಯೋ, ಅವನು ರಜಃ = ರಜೋಗುಣದಿಂದ ನಿರ್ಮಿತವಾದ, ರಜೋಗುಣವನ್ನು ಉಪಲಕ್ಷಣವಾಗಿ ತೆಗೆದುಕೊಂಡು, ಮತ್ತು ತಮೋಗುಣದಿಂದ ನಿರ್ಮಿತವಾದ ದುಶ್ಶಾಸ್ತ್ರವನ್ನು ತಿರಃ = ತಿರಸ್ಕರಿಸಿ, "ದುರ್ಭಾಷ್ಯಂ ವ್ಯಸ್ಯ ದಸ್ಯೋಃ" ಎಂಬ ವಚನದಿಂದ ಇದು ಸಿದ್ಧವಾಗುತ್ತದೆ. ಮಥಾಯತ್ = ವೇದಶಾಸ್ತ್ರವೆಂಬ ಸಮುದ್ರದಲ್ಲಿ ವಿಚಾರವೆಂಬ ಮಂಥನವನ್ನು ಮಾಡಿದರೋ, "ಅಸುಕರಮಕರೋರ್ಬ್ರಹ್ಮಸೂತ್ರಸ್ಯ ಭಾಷ್ಯಮ್" ಎಂಬ ವಚನದಿಂದ

ಈ ಅರ್ಥವು ಸಿದ್ಧವಾಗುತ್ತದೆ. ಸ = ಅಂತಹ, ದುಶ್ಶಾಸ್ತ್ರವನ್ನು ತಿರಸ್ಕರಿಸಿ, ಸಚ್ಛಾಸ್ತ್ರವನ್ನು ಪ್ರೋತ್ಸಾಹಿಸಿದಂತಹ, ಮಧ್ವಃ = ಮಧ್ವನಾಮಕ ವಾಯುವು, ವೇವಿಜಾನಃ = ಈಶ ಜೀವಜಡಾತ್ಮಕವಾಗಿ. ಪ್ರಪಂಚವನ್ನು ವಿಶೇಷವಾಗಿ ವಿಂಗಡಿಸುವವನಾಗಿ, ತಿರೋಹಿತವಾದ ವಸ್ತುವನ್ನು ಪುನಃ ಸ್ಪಷ್ಟವಾಗಿ ತೋರಿಸಿರುವುದೂ ಸಹ ವಿಭಾಗಮಾಡಿದಂತೆಯೇ ಎಂದು ತಿಳಿಯಬೇಕು, ಪಂಚಭೇದಗಳ ಸ್ಥಾಪನೆಯನ್ನು ಮಾಡುವವನಾಗಿ ಎಂದು ಅರ್ಥ. 'ವಿಜ್ಱ ಪೃಥಗ್ಭಾವೇ' ಎಂಬ ಧಾತುವಿನಿಂದ 'ಪೃಥಕ್ಕರಿಸು' ಎಂಬ ಅರ್ಥವು ದೊರೆಯುತ್ತದೆ. ಆಯುವತೇ = ಸರ್ವದಾ ಸಜ್ಜನರ ಜೊತೆಯಲ್ಲಿ ಮಿಶ್ರಿತನಾಗುತ್ತಾನೆ, ಭೇದಶಾಸ್ತ್ರವನ್ನು ಉಪಪಾದನೆ ಮಾಡಿ ಸಜ್ಜನರಿಗೆ ಉಪಕಾರವನ್ನು ಮಾಡುತ್ತಾನೆ ಎಂದು ಅರ್ಥ. 'ಸಜ್ಜನಾನ್ಮೋದಯಂತಮ್' ಎಂಬ ವಾಯುಸ್ತುತಿವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ. ಅಥವಾ ಆಯುವತೇ = ದುರ್ಜನರ ಜೊತೆಯಲ್ಲಿ ಮಿಶ್ರಣವನ್ನು ಹೊಂದುವುದಿಲ್ಲ, ಅವರಿಗೆ ಅಭಿಮತವಾದ ಅದ್ವೈತವನ್ನು ಖಂಡಿಸಿ ಅಲ್ಲಿಯೂ ಭೇದವನ್ನು ಸ್ಥಾಪನೆ ಮಾಡುವುದರಿಂದ ಅವರಿಗೆ ಸಹಿಸಲು ಅಸಾಧ್ಯನಾಗುತ್ತಾನೆ ಎಂದು ಅರ್ಥ. ''ದೈತ್ಯಾನಾಮಾರ್ತಿಮಂಧೇ ತಮಸಿ ವಿದಧತಾಮ್'' ಎಂಬ ವಚನದಿಂದಲೂ ''ಪ್ರಮದದ ಸುಧಿಯಾಂ ಮೋಹಕದ್ವೇಷಭಾಜಾಮ್'' ಎಂಬ ವಚನದಿಂದಲೂ ಈ ಅರ್ಥವು ಸಿದ್ಧವಾಗುತ್ತವೆ. ಯುಮಿಶ್ರಣಾಮಿಶ್ರಣೋರಿತಿ ಧಾತುವಿರುವುದರಿಂದ 'ಯುವತ' ಎಂಬ ಪದಕ್ಕೆ ಮಿಶ್ರತ ಮತ್ತು ಅಮಿಶ್ರಿತ ಎಂಬ ಎರಡು ಅರ್ಥಗಳು ದೊರೆಯುತ್ತವೆ. ಏಕವಚನದಲ್ಲಿ 'ಯೌತಿ' ಎಂದು ಪ್ರಯೋಗಿಸಬೇಕಾಗಿದ್ದಿತು. 'ಯುವತೇ' ಎಂಬ ಬಹುವಚನಪ್ರಯೋಗವು ಸಕಲ ಸಜ್ಜನರ ಹೃದಯದಲ್ಲಿರುವ ವಾಯುದೇವರ ರೂಪಬಾಹುಲ್ಯವಿವಕ್ಷೆಯಿಂದ ಪ್ರಯುಕ್ತವಾಗಿದೆ. ಅಥವಾ ಸಜ್ಜನರ ಹೃದಯದಲ್ಲಿರುವ ದುರ್ಜನರನ್ನು ಪರಾಭವಗೊಳಿಸಲು ಸ್ವೀಕರಿಸಿದ, ರೂಪಬಾಹುಲ್ಯಾಪೇಕ್ಷೆಯಿಂದಲೂ ಪ್ರಯೋಗಿಸಲ್ಪಟ್ಟಿದೆಯೆಂದು ಹೇಳಬಹುದು. ಅಥವಾ 'ವ್ಯತ್ಯಯೋ ಬಹುಲಮ್' ಎಂಬ ವ್ಯಾಕರಣ ಸೂತ್ರದಂತೆ ಏಕವಚನಾರ್ಥದಲ್ಲಿ ಬಹುವಚನವು ಪ್ರಯೋಗಿಸಲ್ಪಟ್ಟಿದೆ ಎಂದೂ ಹೇಳಬಹುದು. ''ವಾಯೋರ್ದಿವ್ಯಾನಿ ರೂಪಾಣಿ ಪದತ್ರಯಯುತಾನಿ ಚ'' ಎಂಬ ಸ್ಮೃತಿವಚನದಿಂದ ಈ ಅರ್ಥವು ದೊರೆಯುತ್ತದೆ. ''ಸ್ವಾಮಿನ್‌ಸರ್ವಾಂತರಾತ್ಮನ್'' ಎಂಬ ವಾಯುಸ್ತುತಿ ವಚನದಿಂದಲೂ ಈ ಅರ್ಥವು ದೊರೆಯುತ್ತದೆ. ಇತಿ ಇತ್ಥಂ = ಈ ರೀತಿಯಾಗಿ ಎಂದರೆ ಮಧ್ವರೂಪದಂತೆಯೇ, ಕೃಶಾನೋಃ = ಅಗ್ನಿಯನ್ನು ಎಂದರೆ ಬ್ರಹ್ಮಪ್ರಲಯಕಾಲದಲ್ಲಿ ಜಲಾವರಣಕ್ಕೆ ಆವರಣರೂಪದಲ್ಲಿರುವ ಅಗ್ನಿಯನ್ನು, ಅಸ್ತುಃ ನಿರಸನಶೀಲಃ = ನಾಶಮಾಡುವ ಸ್ವಭಾವವುಳ್ಳವನಾಗಿದ್ದಾನೆ. ''ಅಸು ಕ್ಷೇಪಣ'' ಎಂಬ ಧಾತುವಿನ ಮೇಲೆ ಔಣಾದಿಕ 'ತುನ್' ಪ್ರತ್ಯಯವು ಬಂದರೆ 'ಅಸ್ತು' ಎಂದು ಉಕಾರಾಂತ ಪುಲ್ಲಿಂಗರೂಪವಾಗುತ್ತದೆ. ತೇಜಸ್ಸಿಗೆ ವಾಯುವಿನಲ್ಲಿ ಲಯವು ಶಾಸ್ತ್ರಪ್ರಸಿದ್ಧವಾದುದು. ತೇಜೋರೂಪ ಆವರಣಕ್ಕೆ ಸಂಹಾರಕವಾದ ವಾಯು ಆವರಣದಲ್ಲಿ ಇರುವ

ಸಂಹಾರಕವಾದ ವಾಯುದೇವರ ರೂಪವಿಶೇಷ ಎಂದು ಅರ್ಥ. ಬಿಭ್ಯುಷಾ ಮನಸಾ = ಭಯಂಕರವಾದ ಮನಸ್ಸಿನಿಂದ, ಸಂಹಾರಕ ಮೂರ್ತಿಯಾದುದರಿಂದ ಉಗ್ರವಾದ ಸಂಕಲ್ಪದಿಂದ ಕೂಡಿದವರು ಎಂದು ಅರ್ಥ. ಆಯುವತೇ = ತೇಜಸ್ಸಿನ ಆವರಣದ ಸಂಹಾರಕ್ಕೆ ಕೆಳಗೆ, ಮೇಲೆ, ಪಕ್ಕಗಳಲ್ಲಿ ಎಲ್ಲಾ ಕಡೆಯಲ್ಲಿಯೂ ಆವರಿಸಿರುವ ವಾಯುವಿನಲ್ಲಿ ಸನ್ನಿಹಿತವಾಗಿರುತ್ತಾರೆ ಎಂದು ಅರ್ಥ. ಇಲ್ಲಿಯೂ ಸಹ ಸಂಹಾರಕ ರೂಪಬಾಹುಲ್ಯವಿವಕ್ಷೆಯಿಂದ ಬಹುವಚನ ಎಂದು ತಿಳಿಯಬೇಕು. ಹ = ಆಶ್ಚರ್ಯ, ಉಗ್ರವಾದ ದಂಷ್ಟ್ರವನ್ನು ಧರಿಸಿದ ಕರಾಲವದನವನ್ನುಳ್ಳ ಆ ವಾಯುದೇವರ ರೂಪವು ಆಶ್ಚರ್ಯಕರವಾಗಿದೆಯೆಂದು ಅಭಿಪ್ರಾಯ, "ಅಭೇದಿ ಬಭ್ರೇ ಬಭೂವೇ । ಯೇನ ಭ್ರೂವಿಭ್ರಮಸ್ತೇ" ಎಂಬ ವಾಯುಸ್ತುತಿ ವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ. ಒಟ್ಟಿನಲ್ಲಿ ವೈಕುಂಠದಲ್ಲಿ ಸುತ್ತಲೂ ಸಂಚರಿಸುವ ನಾರಾಯಣನನ್ನೇ ಸ್ವಾಮಿಯಾಗಿವುಳ್ಳ, ದುಶ್ಶಾಸ್ತ್ರವನ್ನು ತಿರಸ್ಕರಿಸುವ ಪಂಚಭೇದಗಳನ್ನು ಸ್ಥಾಪಿಸುವ ಬ್ರಹ್ಮಾಂಡವಾರಣವಾದ ಅಗ್ನಿಯನ್ನು ಶಮನಮಾಡುವ ಮಧ್ವನಾಮಕನಾದ ಭಯಂಕರವಾದ ಮತ್ತು ಆಶ್ಚರ್ಯಕರವಾದ ಸರ್ವಜೀವೋತ್ತಮವಾದ ಆ ರೂಪಗಳು ವಾಯುವಿನಲ್ಲಿ ಸನ್ನಿಹಿತವಾಗುತ್ತವೆ ಎಂದು ಸ್ಥೂಲವಾದ ಅಭಿಪ್ರಾಯ.

ಎರಡನೆಯ ಮಂತ್ರದ ಅರ್ಥ ಹೀಗಿದೆ - ನಃ = ನಮ್ಮ, ಪೂರ್ವಾಸಃ = ಉಪದೇಶಮಾಡುವುದರಿಂದ ಮತ್ತು ಪ್ರೇರಕರಾಗುವುದರಿಂದ, ನಮಗಿಂತ ಮೊದಲೇ ಇರುವ ಇಂದವಃ = ಇಷ್ಟದಾನಶೀಲನಾದ ಆ ವಾಯುವಿನ ಅವತಾರಗಳು, ಉಪರಾಸಾ = ಮೋಕ್ಷಪ್ರಾಪಕವಾಗುವುದರಿಂದಲೂ, ಮತ್ತು ಮೊಕ್ಷೋಪಯೋಗಿಯಾದ ಸಂಹಾರವನ್ನು ಮಾಡುವ ಕಾರಣದಿಂದಲೂ, ಜ್ಞಾನೋದಯದ ನಂತರವೂ ಇರುವ ಆ ವಾಯುದೇವರ ಅವತಾರಗಳು, 'ಆವಿಷ್ಕರ್ತುಕಾಮಮ್, ಪಿತರತುಲಗುರೋ, ತತ್ವಜ್ಞಾನ್ ಮುಕ್ತಿಭಾಜಃ ಸುಖಯಸಿ ಹಿ ಗುರೋಃ" ಇತ್ಯಾದಿ ವಚನಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. ಗೋಮತೇ = ಜ್ಞಾನವುಳ್ಳ, ಮಹೇ = ದೊಡ್ಡದಾನ, ಅಥವಾ ಪಂಚಪರ್ವಾದಿ ಉತ್ಸವದಲ್ಲಿ, ವಾಜಾಯ = ಅನ್ನಕ್ಕೋಸ್ಕರ ಎಂದರೆ ಹೋತೃಗಳಿಗೂ ಮತ್ತು ಪ್ರವಚನಕಾರರಿಗೂ ಪೋಷಣೆಗೆ ಉಪಯುಕ್ತವಾದ ಅನ್ನಕ್ಕೋಸ್ಕರ ಅಥವಾ ಯಜ್ಞವನ್ನು ಮಾಡಲು ಯಜ್ಞೋಪಯುಕ್ತವಾದ ಚರು ಮೊದಲಾದ ಅನ್ನಕ್ಕೋಸ್ಕರ, ಧನ್ವಂತು = ಧನವನ್ನು ಕೊಡುವವರಾಗಲಿ, ಧನ ಧಾನ್ಯ ಎಂಬ ಧಾತುವಿನಿಂದ 'ಧನ್ವಂತು' ಎಂಬ ರೂಪವು ಸಿದ್ಧವಾಗುತ್ತದೆ. 'ಭೂರಿ ಮೇ ಭೂತಿಹೇತುಃ' ಎಂಬ ವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ. ಯೇ = ಉಕ್ತ ಎರಡುವಿಧವಾದ ವಾಯುವಿನ ಅವತಾರಗಳು, ಅಹ್ಯಃ ನ = ಅಹಿ ಸಂಬಂಧವಾದ ಅಥವಾ ಸರ್ಪಸಂಬಂಧಿಗಳಾದ ರತ್ನಪ್ರಭೆಗಳಂತೆ, ಈಕ್ಷೇಣ್ಯಾಸಃ = ಈಕ್ಷಣೀಯಗಳಾಗಿ ಮನೋಹರಗಳಾಗಿವೆಯೋ, ವರೇಣ್ಯ ಪದದಂತೆ ಈಕ್ಷಧಾತುವಿನ ಮೇಲೆ ಬಂದ ರೂಪವಿದು. ರತ್ನಪ್ರಭೆಯಂತೆ

ಬೆಳಗುವ ದಿವ್ಯದೇಹವುಳ್ಳವು ಎಂದು ಅರ್ಥ. 'ನಿಜರುಚಿನಿಕರವ್ಯಾಪ್ತಲೋಕಾವಕಾಶಃ, ಭೂಮಿಭೂಷಾಮಣಿಃ, ಪ್ರೋದ್ಯದ್ವಿದ್ಯಾನವದ್ಯದ್ಯುತಿಮಣಿಕಿರಣ, ಶ್ರೇಣಿಸಂಪೂರಿತಾಶಃ' ಎಂಬ ವಾಯುಸ್ತುತಿಯ ವಚನಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. ಚಾರವಃ = ಅಗಣ್ಯಲಾವಣ್ಯದಿಂದ ಕೂಡಿರುವುದರಿಂದ ಮನೋಹರವಾಗಿರುವ, 'ಸಂದ್ರಕ್ಷ್ಯೇ ಸುಂದರಮ್' ಎಂಬ ವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ. 'ಬ್ರಹ್ಮ ಬ್ರಹ್ಮ= ಪ್ರತಿಯೊಂದು ದೇಹದಲ್ಲಿರುವ ಪರಮಾತ್ಮನನ್ನು ಅಥವಾ ಯುಗಯುಗಳಲ್ಲಿಯೂ ರಾಮಕೃಷ್ಣಾದಿ ರೂಪಗಳಿಂದ ಅವತಾರ ಮಾಡಿದ ಪರಮಾತ್ಮನನ್ನು, ಜುಜುಷುಃ =ಸೇವೆ ಮಾಡಿದರು. 'ಜುಷೀ ಪ್ರೀತಿಸೇವನಯೋಃ' ಎಂಬ ಧಾತುವಿನಿಂದ ಸೇವೆ ಮಾಡಿದರು ಎಂಬ ಅರ್ಥವು ಸಿದ್ಧವಾಗುತ್ತದೆ. ''ತಯೋಃ ಜುಷ್ಟಿಂ ಮಾತರಿಶ್ವಾ ಜಗಾಮ'', ''ಆಸೇವೋದ್ಯದ್ದಯಾರ್ದ್ರಃ'', ''ಯಾಭ್ಯಾಂ ಶುಶ್ರೂಷುಃ'', ''ಭಕ್ತಿಮದ್ಯಾಪಿ ರಾಮೇ'' ಮುಂತಾದ ವಚನಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. ಹವಿಃ = ಪ್ರತಿಯೊಂದು ಯಜ್ಞದಲ್ಲಿ, ವಾಯವೇ ಸ್ವಾಹಾ ಎಂಬ ಮಂತ್ರದಿಂದ ತನ್ನ ಹವಿಸ್ಸನ್ನು, ಭೋಜನ ಮಾಡುವ ವೈದಿಕರು ಪ್ರಾಣಾದಿಪಂಚಕರೂಪಕ್ಕೆ ನೀಡಿದ ಹವಿಸ್ಸನ್ನು, ಅಥವಾ ಏಕ ಚಕ್ರಾನಗರದಲ್ಲಿ ಬಕನಿಗೆ ಉದ್ದೇಶಿಸಿ ಭೀಮರೂಪದಲ್ಲಿ ಸ್ವೀಕರಿಸಿದ ಹವಿಸ್ಸನ್ನು, ಅಥವಾ ಭಿಕ್ಷೆಯನ್ನು ಮಾಡಿಸುವವರು, ಮನೆಮನೆಗಳಲ್ಲಿ ಕೊಟ್ಟ ಹವಿಸ್ಸನ್ನು ಮಧ್ವರೂಪದಿಂದ, ಜುಜುಷುಃ = ಸಂತೋಷದಿಂದ ಭುಂಜಿಸಿದರು ಎಂದು ಅಭಿಪ್ರಾಯ. ಪೃಥಗ್‌ಭಾವಾತಿಶಯವಾಕ್ ಎಂದರೆ ಮಧ್ವರ ಮಾತಿನಲ್ಲಿ ಭೇದಕ್ಕೆ ಪಾರಮಾರ್ಥಿಕತ್ವವನ್ನು ಸಮರ್ಥಿಸುವ ಅತಿಶಯವಿದೆ ಎಂದು ಅಭಿಪ್ರಾಯ.

**ಮಿಶ್ರೋಽಮಿಶ್ರಶ್ಚ ಭವತಿ ಸದಾ ಸುಜನದುರ್ಜನೈಃ ।**
**ಯು ಮಿಶ್ರಣಾಮಿಶ್ರಣಯೋರಿತಿ ಧಾತ್ವಾರ್ಥತಾ ದ್ವಯೋಃ ।**
**ಸಖ್ಯಂ ನಾವೈಷ್ಣವೈರ್ಯಸ್ಯ ಪ್ರತೀಪೋ ನೈವ ವೈಷ್ಣವೇ ॥ ೫೦೨ ॥**

**ಅರ್ಥ–** ಆ ವಾಯುದೇವರು ಸದಾ = ಯಾವಾಗಲೂ, ಸುಜನದುರ್ಜನೈಃ = ಸಜ್ಜನ ಮತ್ತು ದುರ್ಜನರಿಂದ, ಮಿಶ್ರೋಽಮಿಶ್ರಶ್ಚ= ಕ್ರಮವಾಗಿ ಮಿಶ್ರಿತರೂ ಮತ್ತು ಅಮಿಶ್ರಿತರೂ, ಭವತಿ = ಆಗುತ್ತಾರೆ. ಯು ಮಿಶ್ರಣಾಮಿಶ್ರಣಯೋಃ ಇತಿ = ಯು ಮಿಶ್ರಣಾಮಿಶ್ರಣೋಃ ಎಂದು, ದ್ವಯೋಃ = ಮಿಶ್ರಣ ಮತ್ತು ಅಮಿಶ್ರಣ ಇವೆರಡಕ್ಕೂ, ಧಾತ್ವಾರ್ಥತಾ = ಧಾತ್ವರ್ಥವು ಇದೆ. ಯಸ್ಯ = ಯಾವ ವಾಯುದೇವರಿಗೆ, ಅವೈಷ್ಣವೈಃ= ಅವೈಷ್ಣವರಿಂದ, ಸಖ್ಯಂ ನ = ಸಖ್ಯವಿಲ್ಲ, ವೈಷ್ಣವೇ = ವೈಷ್ಣವ ಸಮೂಹದಲ್ಲಿ, ಪ್ರತೀಪೋ ನೈವ = ಪ್ರತೀಕಾರವು ಇಲ್ಲವೇ ಇಲ್ಲ.

**ಅನುವಾದ–** ವಾಯುದೇವರು ಸದಾ ಸಜ್ಜನರಿಂದ ಮಿಶ್ರಿತರೂ, ದುರ್ಜನರಿಂದ ಅಮಿಶ್ರಿತರೂ ಆಗುತ್ತಾರೆ. 'ಯು ಮಿಶ್ರಣಾಮಿಶ್ರಣಯೋಃ' ಎಂಬ

ಧಾತುವಿರುವುದರಿಂದ ಮಿಶ್ರಣ ಮತ್ತು ಅಮಿಶ್ರಣ ಎರಡೂ 'ಯುವತೇ' ಎಂಬಲ್ಲಿರುವ 'ಯು'ಧಾತುವಿನ ಅರ್ಥವಾಗುತ್ತದೆ. ವಾಯುದೇವರು ಅವೈಷ್ಣವರ ಜೊತೆಯಲ್ಲಿ ಸಖ್ಯವನ್ನು ಹೊಂದುವುದಿಲ್ಲ. (ಆದ್ದರಿಂದ ಅವರ ಜೊತೆಯಲ್ಲಿ ಮಿಶ್ರಣವಿಲ್ಲ.) ವೈಷ್ಣವರಿಗೆ ಪ್ರತೀಕಾರವನ್ನು ಮಾಡುವುದಿಲ್ಲ. ಆದ್ದರಿಂದ ವೈಷ್ಣವರ ಜೊತೆಯಲ್ಲಿ ಅಮಿಶ್ರಣವಿಲ್ಲ.

**ಭಾವವಿಲಾಸಿನೀ–** ದ್ವಯೋರ್ಮಿಶ್ರಣಾಮಿಶ್ರಯೋಃ । ಪ್ರತೀಪೋ ವಿರೋಧಃ ॥ ೫೦೨ ॥

ಇತ್ಥಂ ಕೃಶಾನೋರಸನಶೀಲೋಽಸ್ತುಃ ಪ್ರಲಯೇ ಸತಿ ।
ಮನಸಾ ಭೀಷಕೇಣೋಗ್ರೋ ವಾಯಾವಾಯುವತೇ ಸಹ ।
ಸತ್ಯರ್ಥೇ ಬಹುತೈಕಸ್ಯೈವಾಸ್ತಿ ಯದ್ವ್ಯತ್ಯಯಸ್ತತಃ ॥ ೫೦೩ ॥

**ಅರ್ಥ–** ಇತ್ಥಂ = ಈ ರೀತಿಯಾಗಿ ಎಂದು ಅರ್ಥ, ಪ್ರಲಯೇ ಸತಿ = ಪ್ರಳಯವು ಉಂಟಾಗುವಾಗ, ಕೃಶಾನೋಃ = ಅಗ್ನಿಗೆ, ಅಸನಶೀಲಃ = ಸಂಹಾರಕಶೀಲನಾದುದರಿಂದ, ಅಸ್ತುಃ = 'ಅಸ್ತು' ಎಂದು ಕರೆಯಲ್ಪಡುತ್ತಾರೆ. ಭೀಷಕೇಣೋಗ್ರೋ = ಸಂಹಾರಕ ರೂಪವಾದುದುರಿಂದ ಉಗ್ರವಾದ ಸಂಕಲ್ಪದಿಂದ, ವಾಯು = ಅಗ್ನಿಯ ಆವರಣಕ್ಕೆ ಆವೃತವಾದ ವಾಯುವು, ವಿಷ್ಣುವಿನ ಜೊತೆಯಲ್ಲಿ, ಆಯುವತೇ = ಮಿಶ್ರಿತರಾಗುತ್ತಾರೆ, ಅರ್ಥೇ = ಪ್ರಯೋಜನವು, ಸತಿ= ಇದ್ದರೆ. ಏಕಸ್ಯೈವ = ಒಂದೇ ವಸ್ತುವಿಗೆ, ಬಹುತಾ = ಬಹುವಚನದ ಪ್ರಯೋಗವು ಉಂಟಾಗುತ್ತದೆ. ಯತ್ = ಯಾವ ಕಾರಣದಿಂದ, ವ್ಯತ್ಯಯ ಅಸ್ತಿ = ವಿಭಕ್ತಿವಚನಾದಿ ವ್ಯತ್ಯಯವಿದೆಯೋ, ತತಃ = ಆ ಕಾರಣದಿಂದಲೂ ಬಹು ವಚನ ಪ್ರಯೋಗವು ಉಂಟಾಗುತ್ತದೆ.

**ಅನುವಾದ–** ಮಂತ್ರದಲ್ಲಿರುವ ಇತ್ ಶಬ್ದಕ್ಕೆ ಈ ರೀತಿ ಎಂದು ಅರ್ಥ. ಪ್ರಲಯಕಾಲದಲ್ಲಿ ಅಗ್ನಿಯ ಸಂಹಾರಕರಾದ ಕಾರಣದಿಂದ ಅವರಿಗೆ 'ಅಸ್ತು' ಎಂದು ಹೆಸರು. ಸಂಹಾರ ಮಾಡುವ ಉಗ್ರಸಂಕಲ್ಪದಿಂದ ಕೂಡಿದವರಾಗಿ ಅವರು ಅಗ್ನಿಯ ಆವರಕವಾದ ವಾಯುವಿನ ಜೊತೆಯಲ್ಲಿ ಅನೇಕ ರೂಪಗಳಿಂದ ಮಿಶ್ರಣವನ್ನು ಹೊಂದುತ್ತಾರೆ. ಪ್ರಯೋಜನ ವಿಶೇಷಣವಿದ್ದಾಗ, ಏಕವ್ಯಕ್ತಿಯಲ್ಲಿಯೂ ಬಹುವಚನ ಪ್ರಯೋಗವು ಕೂಡುತ್ತದೆ. ಅಥವಾ ವೇದಗಳಲ್ಲಿ ವಿಭಕ್ತಿವ್ಯತ್ಯಾಸ-ಗಳಿರುವುದರಿಂದ 'ಯುವತೇ' ಎಂಬ ಬಹುವಚನಪ್ರಯೋಗವೂ ಕೂಡುತ್ತದೆ.

**ಭಾವವಿಲಾಸಿನೀ–** ಯದ್ಯಸ್ಮಾದರ್ಥೇ ಪ್ರಯೋಜನೇ ಸತ್ಯೇಕಸ್ಯೈವ ರೂಪಸ್ಯ ಬಹುತಾಽಸ್ತಿ ಯತಶ್ಚ ವ್ಯತ್ಯಯೋ ವಿಭಕ್ತಿವಚನಾದೀನಾಂ ವ್ಯತ್ಯಾಸೋ ವೇದೇಽಸ್ತಿ ತತಸ್ತಸ್ಮಾತ್ ಕಾರಣಾತ್ಸ ಆಯುವತ ಇತಿ ಯುಕ್ತಮಿತಿ ಹೃದಯಮ್ ॥ ೫೦೩ ॥

**ತೇ ವಾಯೋರವತಾರಾ ನಃ ಪೂರ್ವಾಸೋ ಗುರುತಾಂ ಗತಾಃ ।**
**ಉಪರಾಸೋಽಪರಾಸಶ್ಚ ಪ್ರಲಯೇ ಮುಕ್ತಿದಾಯಕಾಃ ॥ ೫೦೪ ॥**

**ಅರ್ಥ–** ವಾಯೋಃ = ವಾಯುದೇವರ, ತೇ ಅವತಾರಾಃ = ಆ ಅವತಾರಗಳು, ನಃ = ನಮಗೆ, ಗುರುತಾಂ ಗತಾಃ = ಗುರುಸ್ಥಾನದಲ್ಲಿ ಇದ್ದವುಗಳಾಗಿ, ಪೂರ್ವಾಸಃ = ಮೊದಲೇ ವಿದ್ಯಮಾನವಾದವುಗಳು, ಉಪರಾಸಃ = ಉಪರಾಸ ಎಂದರೆ, ಪ್ರಲಯೇ = ಪ್ರಲಯಕಾಲದಲ್ಲಿ, ಮುಕ್ತಿದಾಯಕಾಃ = ಮುಕ್ತಿಯನ್ನು ಕೊಡುವ ಕಾರಣದಿಂದ, ಅಪರಾಸಃ = ಅನಂತರದ ಕಾಲದಲ್ಲಿಯೂ ಇರುವವುಗಳು ಎಂದು ಅರ್ಥ.

**ಅನುವಾದ– ಆ ವಾಯುದೇವರ ಅವತಾರಗಳು ನಮಗೆ ಉಪದೇಶವನ್ನು ಮಾಡುವ ಕಾರಣ ನಮಗಿಂತ ಮೊದಲೇ ಇರುವವು ಮತ್ತು ಶ್ರೇಷ್ಠವಾದವು. ಪ್ರಲಯಕಾಲದಲ್ಲಿ ಮುಕ್ತಿಯನ್ನು ಕೊಡುವ ಕಾರಣದಿಂದ 'ಉಪರಾಸಃ' ಎಂದರೆ ಅನಂತರದಲ್ಲಿಯೂ ವಿದ್ಯಮಾನವಾದವುಗಳು.**

**ಭಾವವಿಲಾಸಿನೀ–** ಉಪರಾಸ ಇತ್ಯಸ್ಯ ತಾತ್ಪರ್ಯಕಥನಮಪರಾಸ ಇತಿ । ಪೂರ್ವಪದ ಸಮಭಿವ್ಯಾಹಾರಸಾಮರ್ಥ್ಯಾದ್ವರ್ಣವ್ಯತ್ಯಾಸತೋ ವಾಽಪರಾಸ ಇತ್ಯುಕ್ತಮ್ ॥ ೫೦೪ ॥

**ಇಂದವಶ್ಚೇಷ್ಟದಾತೃತ್ವಾತ್ ಪರಮೈಶ್ವರ್ಯತೋಽಪಿ ವಾ ।**
**ಮಹೇತಿ ಮಹತೇ ವಾಜಾಯಾನ್ನಾಯ ಜ್ಞಾನಗೋಮತೇ ।**
**ಧನ್ವಂತು ಧನದಾಃ ಸಂತು ಧನಧಾನ್ಯ ಇತೀರಣಾತ್ ॥ ೫೦೫ ॥**

**ಅರ್ಥ–** ಇಷ್ಟದಾತೃತ್ವಾತ್ = ಇಷ್ಟದಾನಶೀಲಗಳಾದುದರಿಂದ, ವಾ = ಅಥವಾ, ಪರಮೈಶ್ವರ್ತತೋಽಪಿ = ಪರಮೈಶ್ವರ್ಯವನ್ನು ಹೊಂದಿದವರಾದ್ದರಿಂದ, ಇಂದವಃ = ಇಂದುಗಳೆಂದು ಕರೆಯಲ್ಪಡುತ್ತದೆ. ಮಹೇ = ಮಹೇ ಎಂದರೆ, ಅತಿಮಹತೇ = ಬಹಳ ದೊಡ್ಡದಾದ ಎಂದು ಅರ್ಥ, ವಾಜಾಯ = ವಾಜಾಯ ಎಂದರೆ ಅನ್ನಾಯ = ಅನ್ನಕ್ಕೋಸ್ಕರ ಎಂದು ಅರ್ಥ, ಜ್ಞಾನಗೋಮತೇ = ಗೋಮತೇ ಎಂದರೆ ಜ್ಞಾನವುಳ್ಳ ಉತ್ಸವಗಳಿಗಾಗಿ. ಧನ್ವಂತು = ಧನ್ವಂತು ಎಂದರೆ, ಧನಧಾನ್ಯ ಇತೀರಣಾತ್ = ಧನಧಾನ್ಯ ಎಂಬ ಧಾತುವಿರುವುದರಿಂದ, ಧನದಾಃ ಸಂತು = ಧನವನ್ನು ಕೊಡುವವರಾಗಲಿ.

**ಅನುವಾದ– ಇಷ್ಟದಾತೃತ್ವವಿರುವುದರಿಂದ ಅಥವಾ ಪರಮೈಶ್ವರ್ಯವಿರುವುದರಿಂದ ವಾಯುದೇವರ ಅವತಾರಗಳು ಇಂದುಗಳೆಂದು ಕರೆಯಲ್ಪಡುತ್ತವೆ. 'ಮಹೇ' ಎಂದರೆ ಅತಿದೊಡ್ಡದಾದ ಎಂದು ಅರ್ಥ. ವಾಜಾಯ ಎಂದರೆ ಅನ್ನಕ್ಕೋಸ್ಕರ ಎಂದು ಅರ್ಥ. ಗೋಮತೇ ಎಂದರೆ ಜ್ಞಾನವುಳ್ಳ ಎಂದು ಅರ್ಥ. ಧನಧಾನ್ಯ ಎಂಬ ಧಾತುವಿರುವುದರಿಂದ, ಧನ್ವಂತು ಎಂದರೆ ಧನವನ್ನು ಕೊಡುವವರಾಗಲಿ ಎಂದು ಅರ್ಥ.**

**ಭಾವವಿಲಾಸಿನೀ–** "ಇದಿ ಪರಮೈಶ್ವರ್ಯೆ" ಇತಿ ಧಾತೋಃ ಪರಮೈಶ್ವರ್ಯತೋ ವೇಂದವ ಇತ್ಯುಕ್ತಮ್ । ಇಂದ್ರಶಬ್ದವದತ್ರಾಇತಿತೋನುಮ್ ಧಾತೋರಿತಿ ನುಮಾಗಮೇಕೃತೇಪ್ಯನುಸ್ವಾರ ಇತಿ ಭಾವಃ । ವಾಜಾಯ ಅನ್ನಂ ವೈ ವಾಜಮಿತಿ ಶ್ರುತೇರ್ವಾಜಪದವಾಚ್ಯಾನ್ನಾಯ । ಜ್ಞಾನಗೋಮತೇ ಜ್ಞಾನಾಖ್ಯಗೋಮತೇ ॥ ೫೦೫ ॥

ಪ್ರಸಿದ್ಧಿಂ ಲೌಕಿಕೀಂ ಸೌತ್ರೀಂ ಚಾಹ ರೂಪದ್ವಯೇಸ್ಯ ಹ ।
ಇತ್ಯರ್ಥೋsತ್ರ ಯತಃ ಸ್ಪಷ್ಟಂ ದೃಶ್ಯತೇ ಪದಸಂಪದಾ ॥ ೫೦೬ ॥

**ಅರ್ಥ–**ಅಸ್ಯ = ವಾಯುದೇವರ, ರೂಪದ್ವಯೇ = ರೂಪದ್ವಯದಲ್ಲಿ, ಹ= ಮನಸಾ ಹ ಎಂಬಲ್ಲಿರುವ ಹ ಎಂಬ ನಿಪಾತವು, ಲೌಕಕೀಂ ಪ್ರಸಿದ್ಧಿಂ = ಪ್ರಪಂಚದಲ್ಲಿ ಭೇದಪ್ರತಿಪಾದಕತ್ವವೆಂಬ ಲೌಕಿಕ ಪ್ರಸಿದ್ಧಿಯನ್ನು, ಚ = ಮತ್ತು, ಸೌತ್ರೀಂ = 'ವಿಪರ್ಯೇಣ ತು ಕ್ರಮಃ' ಎಂಬ ಸೂತ್ರದಲ್ಲಿ ಹೇಳಿರುವ ಅಗ್ನಿಗೆ ವಾಯುವಿನಲ್ಲಿ ಲಯವೆಂಬ ಸೌತ್ರಪ್ರಸಿದ್ಧಿಯನ್ನು, ರೂಪದ್ವಯೇ = ಉಪದೇಶಕವಾದ ಮತ್ತು ಸಂಹಾರಕವಾದ ಎರಡು ರೂಪಗಳಲ್ಲಿ, ಆಹ = ಹೇಳುತ್ತದೆ, ಇತ್ಯರ್ಥ = ಎಂಬ ಅರ್ಥವು, ಯತಃ = ಯಾವ ಕಾರಣದಿಂದ, ಪದಸಂಪದಾ = ಪದಗಳ ಮಹಿಮೆಯಿಂದಲೇ, ಅತ್ರ = ಈ ಮಂತ್ರಗಳಲ್ಲಿ, ಸ್ಪಷ್ಟಮ್ = ಸ್ಪಷ್ಟವಾಗಿ, ದೃಶ್ಯತೇ = ಕಾಣುತ್ತದೆಯೋ (ಆದ್ದರಿಂದ ಈ ಮಂತ್ರಗಳು ವಾಯುದೇವರ ಅವತಾರಗಳನ್ನೇ ಸ್ತೋತ್ರಮಾಡುವ ಮಂತ್ರಗಳು.)

**ಅನುವಾದ–** ಮನಸಾ ಹ ಎಂಬಲ್ಲಿರುವ ಹ ಶಬ್ದವು ಭೇದಪ್ರತಿಪಾದಕತ್ವರೂಪವಾದ ಲೌಕಿಕಪ್ರಸಿದ್ಧಿಯನ್ನು ಮತ್ತು ವ್ಯತ್ಕ್ರಮದಿಂದ ಲಯ ಎಂಬ ಬ್ರಹ್ಮಸೂತ್ರದ ಪ್ರಸಿದ್ಧಿಯನ್ನು ಈ ವಾಯುದೇವರಿಗೆ ಉಪದೇಶಕ ಮತ್ತು ಸಂಹಾರಕ ರೂಪಗಳಲ್ಲಿ ಕ್ರಮವಾಗಿ ಹೇಳುತ್ತದೆ. ಮಂತ್ರಗಳ ಪದಗಳ ಮಹಿಮೆಯಿಂದ ಈ ಅರ್ಥವು ಸ್ಪಷ್ಟವಾಗಿ ಲಬ್ಧವಾಗುವುದರಿಂದ ಈ ಅರ್ಥಗಳೇ ಮಂತ್ರಗಳ ಅರ್ಥವೆಂದು ತಿಳಿಯಬೇಕು.

**ಭಾವವಿಲಾಸಿನೀ–** ರೂಪದ್ವಯೇ ಉಪದೇಶಕರೂಪೇ ಸಂಹಾರಕರೂಪೇ ಚ । ಅಹಾ ಅಹೇತ್ಯವ್ಯಯ ಶಬ್ದಃ। ಆದ್ಯರೂಪೇ ಪಂಚಭೇದಖ್ಯಾಪಕತ್ವಸ್ಯಾಲೌಕಿಕೀ ಪ್ರಸಿದ್ಧಿಃ ದ್ವಿತೀಯರೂಪೇ ತೇಜಃಸಂಹಾರಕತ್ವಸ್ಯ ವಿಪರ್ಯಯೇಣ ತು ಲಯ ಇತಿ ಸೌತ್ರೀಪ್ರಸಿದ್ಧಿರಿತಿ ವಿಭಾಗಃ । ಆಶ್ಚರ್ಯಾರ್ಥಸ್ಯಾಪ್ಯುಪಲಕ್ಷಣಮೇತತ್ । ಅಸ್ಮದುಕ್ತಾರ್ಥಚದ್ವಯಾರ್ಥಸ್ಯಾಪಿ ಸೂಚಕಮಿದಮ್ ॥ ೫೦೬ ॥

ಪವಮಾನೇತಿ ಸೋಮೇತಿ ಪ್ರಾಕ್ ಪ್ರಸ್ತಾವ್ಯೈವ ಯಂ ಶ್ರುತಿಃ ।
ಸೋಮಃ ಪವತ ಇತ್ಯಾಹ ಸ ಸೋಮೋ ಮಾರುತೋ ಧ್ರುವಮ್ ।
ಪವತೇ ಯಃ ಸ ಕಿಂ ನಾಭೂತ್ ಪವಮಾನೋ ವಿದಾಂಮತೇ ॥ ೫೦೭ ॥

**ಅರ್ಥ—** ಶ್ರುತಿಯು, ಪವಮಾನೇತಿ = ಪವಮಾನ ಎಂದು, ಸೋಮೇತಿ = ಸೋಮನೆಂದು, ಯಂ = ಯಾರನ್ನು, ಪ್ರಾಕ್ = ಮೊದಲು, ಪ್ರಸ್ತಾವ್ಯೈವ = ಪ್ರಸ್ತಾವಿಸಿಯೇ, ಸೋಮಃ ಪವತೇ = ಸೋಮನು ಸಂಚರಿಸುತ್ತಾನೆ, ಇತ್ಯಾಹ = ಎಂದು ಹೇಳಿತೋ, ಸಃ ಆ ಸೋಮಃ = ಸೋಮನು, ಧ್ರುವಮ್ = ನಿಶ್ಚಯವಾಗಿ, ಮಾರುತಃ = ವಾಯುವೇ. ವಿದಾಂಮತೇ = ಜ್ಞಾನಿಗಳ ಮತದಲ್ಲಿ, ಯಃ = ಯಾವನು, ಪವತೇ = ಪವನವನ್ನು ಮಾಡುತ್ತಾನೆಯೋ (ಸಂಚರಿಸುತ್ತಾನೆಯೋ) ಸ = ಅವನು, ಪವಮಾನಃ = ಪವಮಾನನು, ಕಿಂ ನಾಭೂತ್ = ಆಗಲಿಲ್ಲವೇ?

**ಅನುವಾದ—** ಶ್ರುತಿಯು ಯಾವನನ್ನು ಮೊದಲು ಪವಮಾನ ಎಂದೂ, ಸೋಮನೆಂದೂ ಪ್ರಸ್ತಾವಿಸಿಯೇ, ಅನಂತರ 'ಸೋಮಃ ಪವತೇ' ಎಂದು ಹೇಳಿತೋ, ಆ ಸೋಮನು ನಿಶ್ಚಯವಾಗಿ ವಾಯುವೇ. ಜ್ಞಾನಿಗಳ ಮತದಲ್ಲಿ ಯಾವನು ಪವನವನ್ನು ಮಾಡುತ್ತಾನೆಯೋ, ಅವನೇ ಪವಮಾನನಾಗಲಿಲ್ಲವೇ?

**ಭಾವವಿಲಾಸಿನೀ—** ಪವಮಾನೇತಿ ಸೋಮೇತ್ಯನೇನ "ಅಜೀಯತೇಽಹತಯೇ ಪವಸ್ವ ಸ್ವಸ್ತಯೇ ಸರ್ವತಾತಯೇ ಬೃಹತೇ । ತದುಶಂತಿ ವಿಶ್ವ ಇಮೇ ಸಖಾಯಸ್ತದಹಂ ವಶ್ಮಿ ಪವಮಾನ-ಸೋಮೇ"ತಿ ಶ್ರುತಿಂ ಸಂಗೃಹ್ಣಾತಿ । ಅಯಮರ್ಥಃ । ಹೇ ಸೋಮ ಸೋಮನಾಮಕಪವಮಾನಮುಖ್ಯಾವಾಯೋ । ತ್ವಂ ಪವಸ್ವ ಇತಸ್ತತೋ ಗಮನಂ ಕುರು । ತವ ಪವನಂ ವಿಶ್ವೇ ಸರ್ವೇ ಇಮೇ ಸಖಾಯೋ ಮಮಮಿತ್ರಭೂತಾ ವೈಷ್ಣವಾಃ । ಅಜೀತಯೇ ಜೀತಿ-ರಸುರೇಭ್ಯೋಽಸ್ಮಜ್ಜಯಸ್ತದಭಾವಾಯ । ಅಹತಯೇ ತೇಭ್ಯ ಏವಾಸ್ಮದ್ಧನನಾಭಾವಾಯ । ಸ್ವಸ್ತಯೇಽಸ್ಮಾಕಂ ಮೋ(ಕ್ಷೇ)ಕ್ಷಮಾಯ ತುಭ್ಯಂ ಚ ಕ್ಷೇಮದೇಭ್ಯ ಇತಿ ವಚನಾತ್ । ಸರ್ವತಾತಯೇ ಸರ್ವತ್ರ ವಿಸ್ತಾರವತೇ ಸರ್ವಾಭಿಷ್ಟಕರಾಯ ವಾ । ಬೃಹತೇ ಸರ್ವಗುಣ-ಪೂರ್ಣಾಯ ಸರ್ವೋತ್ತಮಾಯ ಚ ಪರಮಾತ್ಮನೇ ತತ್ ಸೇವಾರ್ಥಮಿತ್ಯರ್ಥಃ । ಉಶಂತೀ-ಚ್ಛಂತಿ ವದಂತಿ ಚ । ತ್ವತ್ಪವನುಮುಕ್ತಾಜೀವತ್ಯಾದಿಫಲಾಯ ವಶ್ಮಿ ವಚ್ಮೀಚ್ಛಾಮಿ ಚ । ತವ ಹನುಮದವತಾರೇ ರಾಮಮಮೂಢ್ವಾ ಸುಗ್ರೀವಂ ಪ್ರತಿ ಪವನೇನ ಸೀತಾನ್ವೇಷಣಾರ್ಥಂ ಮೇರೋರ್ದಕ್ಷಿಣಭಾಗೇ ಸರ್ವತ್ರ ಪವನೇನ ಲಂಕಾಂ ಪ್ರತಿ ಪವನೇನ ಯುದ್ಧೇ ಸಂಜೀವನಾರ್ಥಂ ಪವನೇನ ರಥಸ್ಥರಾವಣಂ ಪ್ರತಿ ರಾಮ ಮೂಢ್ವೈವೇತಸ್ತತಃ ಪವನೇನ । ಭೀಮಾವಾತರೇ ಚ ಲಾಕ್ಷಾಗೃಹಾದ್ಯುಧಿಷ್ಠಿರಾದೀನೂಢ್ವಾ ಗುಹಾಯಾಂ ಪವನೇನ ಏಕಚಕ್ರಾನಗರೇ ಬಕವಧಾರ್ಥಂ ಪವನೇನ, ಕೃಷ್ಣೇನ ಸಹ ಜರಾಸಂಧವಧಾರ್ಥಂ, ಪವನೇನ ವನವಾಸೇ ಸೌಗಂಧಿಕಾನಯನಾರ್ಥಂ ಪವನೇನ, ಯುದ್ಧೇ ಗದಾಂ ಗೃಹೀತ್ವೇತಸ್ತತಃ, ಪವನೇನ ಚ ಸಾಧೂನಾಂ ರಾಕ್ಷಸ್ಯೇಭ್ಯಃ ಅಹಿತಸ್ವಸ್ತಿರೂಪಫಲಸ್ಯ ರಾಮಕೃಷ್ಣರೂಪಿಣೋ ಹರೇಃ ಸೇವಾರೂಪಫಲಸ್ಯ ಚ ದರ್ಶನಾತ್ ।

ಮಧ್ವಾವತಾರೇ ಚ ಬಾಲ್ಯೇ ವಿಮಾನಗಿರೀಂದ್ರಾನ್ಮಾತೃಗೃಹಂ ಪ್ರತಿ ಪವನೇನ, ಗೋರಕ್ಷಣಾರ್ಥಂ ಪವನೇನ, ರಾಮಸೇವಾರ್ಥಂ ಸೇತುಂ ಪ್ರತಿ ಪವನೇನ, ವ್ಯಾಸ ಸೇವಾರ್ಥಂ ಬದರಿಕಾಶ್ರಮಮ್

ಪ್ರತಿ ಪವನೇನ । ಜ್ಞಾನದಾನಾರ್ಥಂ ದೇಶೇ ದೇಶೇ ಪವನೇನ, ದ್ವಾರಕಾಪುರಾದಾಗತಕೃಷ್ಣಾನಯನಾರ್ಥಂ ಜ್ಞಾನದೃಷ್ಟ್ಯೈವ ದೃಷ್ಟ್ವಾ ವಿಪ್ರೈಃ ಸಹ ಸಮುದ್ರಂ ಪ್ರತಿ ಪವನೇನ, ಚ ದುರ್ಮತಪ್ರವರ್ತಕೇಭ್ಯೋ ದೈತ್ಯೇಭ್ಯಸ್ತಾವಾಯ್ವವತಾರಪ್ರತಿಪಾದಕ ಸಾಧೂನಾಮಜ್ಞಾನಹತ್ಯಾಖ್ಯಫಲಸ್ಯ ಸತ್ಯತ್ವಸ್ಥಾಪನೇ ಪ್ರಪಂಚಸ್ಯ ಸತ್ಯಾಖ್ಯಫಲಸ್ಯ ಮೋಕ್ಷಸಾಧನಜ್ಞಾನಾತ್ ಪರಮಸ್ವಸ್ತಿರೂಪಮೋಕ್ಷಾಖ್ಯ ಫಲಸ್ಯ ಸೂತ್ರಾಪವ್ಯಾಖ್ಯಾಪ್ರತ್ಯಾಖ್ಯಾನೇನ ಯಥಾವಸ್ಥಿತಾರ್ಥಪ್ರತಿಪಾದಕಭಾಷ್ಯಕರಣೇನ ಹರೇರ್ಮೂಲರೂಪೇ ಸರ್ವಾವತಾರೇಷು ಚ ನಿರ್ದೋಷತ್ವವ್ಯಾಪ್ತತ್ವಸರ್ವಗುಣಪೂರ್ಣತ್ವ ಸರ್ವೋತ್ತಮತ್ವಸ್ಥಾಪನೇನ ಚ ಭಗವತ್ಸೇವಾರೂಪಫಲಸ್ಯ ಚ ದರ್ಶನಾತ್ । ಏತದರ್ಥಪ್ರತಿಪಾದಕರಾಮಾಯಣಭಾರತವಚನಾತ್ । "ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂತು ಕಲೌ ಯುಗೇ । ವಾಯುಶ್ಚ ಯತಿರೂಪೇಣ ಕೃತ್ವಾ ದುಃಶಾಸ್ತ್ರಖಂಡನಮಿ"ತ್ಯಾದಿ ವಾಯುಪುರಾಣವಚನಾತ್ । "ಪ್ರಾಕ್‌ಪಂಚಾಶತ್‌ಸಹಸ್ರೈರ್ವ್ಯವಹಿತಮಮಿತಂ ಯೋಜನೈಃ ಪರ್ವತಂ ತ್ವಮ್ । ಮುಷ್ಟಿರಿಷ್ಟಂ ಪ್ರದೇಷ್ಟುಂ ಕಿಂ ನೇಷ್ಟೇ । ದೇವ್ಯಾದೇಶಪ್ರಣೇತೀ"ತ್ಯಾದಿವಚನಾತ್ । "ಜಘ್ನೇ ನಿಘ್ನೇನ ವಿಘ್ನಃ । ಕ್ಷ್ವೇಲಾಕ್ಷೀಣಾಟ್ಟಹಾಸಂ ತವರಣಮರಿಹನ್ನುದ್ಗದೋದ್ದಾಮ ಬಾಹೋ । ಗಚ್ಛಂ ಸೌಗಂಧಿಕಾರ್ಥಂ ಪಥಿ । ಬಹ್ವೀಃ ಕೋಟೀರಟೀಕಃ । ಬ್ರಹ್ಮಾಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷಪಾಷಂಡವಾದಃ । ತದ್ಯುಕ್ತ್ಯಾಭಾಸ ಜಾಲಪ್ರಸರವಿಷತರೂದ್ದಾಹದಕ್ಷ ಪ್ರಮಾಣಜ್ವಾಲಾಮಾಲಾಧರೋಽಗ್ನಿಃ ॥ ಸ್ವಚ್ಛಃ ಸ್ವಚ್ಛಂದ ಮೃತ್ಯುಃ ಸುಖಯಸಿಸುಜನಂ ದೇವಕಿಂಚಿತ್ರಮತ್ರ । ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ ಕೃತ್ವಾ ಭಾಷ್ಯಾಣೀ"ತ್ಯಾದಿ ವಚನಾಚ್ಚ । ಮುಖ್ಯಪ್ರಾಣಸ್ಯ ಪವನಪ್ರಾರ್ಥನಮಿತಿ ಭಾವಃ ಯದ್ವಾ ಉಕ್ತಫಲಚತುಷ್ಟಯ ಸಂಪಾದನಾಯ ಪವಸ್ವತತ್ ಪವನಮಿಮೇ ಸಖಾಯ ಇಚ್ಛಂತಿ ಅಹಂ ಯೇಚ್ಛಾಮಿ ಇತಿ ಯೋಜನಾ । ಅಸ್ತ್ವಸ್ಯಾಮೃಚಿ ಸೋಮೇತಿ ಪವಮಾನಸ್ಯ ಪ್ರಾರ್ಥನಮ್ । ತಥಾಪಿ ಪ್ರಕೃತೇ ಕಿಮಾಯಾತಮಿತ್ಯ ಆಹ – **ಪ್ರಾಕ್‌ಪ್ರಸ್ತಾವ್ಯೇತಿ** ॥ ಯಂ ಪವಮಾನಮ್ । ಸಃ ಸೋಮಃ । ಪವನೇ ಜನಿತಾ, ಮತಿನಾಂ, ಜನಿತಾ, ದಿವೋ, ಜನಿತಾ, ಪೃಥಿವ್ಯಾಃ ಜನಿತಾ, ಅಗ್ನೇರ್ಜನಿತಾ, ಸೂರ್ಯಸ್ಯ, ಜನಿತಾ, ಇಂದ್ರಸ್ಯ, ಜನಿತೋತವಿಷ್ಣೋರಿತ್ಯವ್ಯವಹಿತೋತ್ತರ ಶ್ರುತ್ಯಾಂ ಪ್ರತಿಪಾದಿತಃ । ಕಣ್ವ ವಚನತೋಽವತಾರಾಣಾಮೇವಾತಿ ಪ್ರಸಿದ್ಧತ್ವಾತ್ । ತತ್ಕಥಂ ಪೂರ್ವಮುಕ್ತ್ವಾ ಪುನರ್ಮೂಲರೂಪವಾಯೋಃ ಕಥಾ ವಕ್ತುಂ ಇಯಂ ಶ್ರುತಿಃ ಪ್ರವೃತ್ತೇತಿಭಾವಃ । ಅಸ್ಯಾಮಪಿ ಶ್ರುತೌ ಮುಖ್ಯಪ್ರಾಣ ಪ್ರಾಪಕ ಮಸ್ತೀತ್ಯಾಹ । ಪವತ ಇತಿ । ಪೂಜ್ ಪವನ ಇತಿ ಧಾತೋರಾತ್ಮನೇ ಪದೇ ಕರ್ತರಿ ಶಾನಚ್ ಪ್ರತ್ಯಯೇ ಕೃತೇ ಸತಿ ಪವಮಾನ ಪದನಿಷ್ಪತ್ಯಾ ಪವಮಾನಾದನ್ಯತ್ರ ಪವತ ಇತ್ಯುಕ್ತ ಪವನಾಯೋಗಾದಪ್ಯತ್ರೋಕ್ತಃ ಸೋಮಃ ಪವನಏವೇತಿಭಾವಃ ॥ ೫೦೭ ॥

**ವಿವರಣೆ–** ಈ ಶ್ಲೋಕದಲ್ಲಿ ರಾಜರು - "ಅಜೀಯತೇಽಹತಯೇ ಪವಸ್ವ ಸ್ವಸ್ತಯೇ ಸರ್ವತಾತಯೇ ಬೃಹತೇ । ತದುಶಂತಿ ವಿಶ್ವ ಇಮೇ ಸಖಾಯಃ ತದಹಂ ವಷ್ಮಿ ಪವಮಾನಸೋಮ" ಎಂಬ ಮಂತ್ರವನ್ನು (7-4-6-1) ಸಂಗ್ರಹಿಸಿದ್ದಾರೆ. ಮಂತ್ರದ

ಅರ್ಥವು ಹೀಗಿದೆ - ಸೋಮ = ಎಲೈ ಸೋಮನಾಮಕನೇ, ಪವಮಾನ = ಮುಖ್ಯವಾಯುವೇ, ತ್ವಂ = ನೀನು, ಪವಸ್ವ = ಇಲ್ಲಿಂದಲ್ಲಿಗೆ ಸಂಚರಿಸು, ನಿನ್ನ ಆ ಸಂಚಾರವನ್ನು ವಿಶ್ವೇ = ಎಲ್ಲಾ ಇಮೇ ಸಖಾಯಃ = ಈ ನಿನ್ನ ಸ್ನೇಹಿತರಾದ ವೈಷ್ಣವರು, ಅಜೀತಯೇ = ಅಸುರರಿಂದ ಪರಾಭವವನ್ನು ಹೊಂದದಿರುವುದಕ್ಕಾಗಿ, (ಜೀತಿ = ಜಯ, ಅಜೀತಿ ಎಂದರೆ ಪರಾಭವ) ಅಹತಯೇ = ಅವರಿಂದ ತಮ್ಮ ಹನನವುಂಟಾಗದಿರುವುದಕ್ಕಾಗಿ, ಸ್ವಸ್ತಯೇ = ನಮ್ಮ ಕ್ಷೇಮಕ್ಕಾಗಿ, 'ತುಭ್ಯಂ ಚ ಕ್ಷೇಮದೇಭ್ಯ' ಎಂಬ ವಾಯುಸ್ತುತಿವಚನದಿಂದ ಈ ಅರ್ಥವು ಲಭಿಸುತ್ತದೆ. ಸರ್ವತಾತಯೇ = ಸರ್ವತ್ರ ವ್ಯಾಪ್ತನಾದ ಅಥವಾ ಸರ್ವಾಭೀಷ್ಟಪ್ರದನಾದ, ಬೃಹತೇ = ಸರ್ವಗುಣಪೂರ್ಣನಾದ, ಸರ್ವೋತ್ತಮನಾದ ಪರಮಾತ್ಮನ, ಅವನ ಸೇವಾರ್ಥವಾಗಿ, ಉಶಂತಿ = ಇಚ್ಛಿಸುತ್ತಾರೆ. ತ್ವತ್ = ಆ ನಿನ್ನ ಸಂಚಾರವನ್ನು, ಅಹಂ = ನಾನು, ವದ್ಮಿ ಇಚ್ಛಾಮಿ ಚ ಹಿಂದೆ ಹೇಳಿದ ಪರಾಭವಾಭಾವರೂಪವಾದ ಫಲಕ್ಕಾಗಿ ಇದೆಯೆಂದು ನಾನು, (ವದ್ಮಿ) = ನಾನು ಪ್ರವಚನ ಮಾಡುತ್ತೇನೆ ಮತ್ತು ಇಚ್ಛಿಸುತ್ತೇನೆ. ಹನುಮದವತಾರದಲ್ಲಿ ರಾಮನನ್ನು ಹೊತ್ತು ಸುಗ್ರೀವನ ಬಳಿಗೆ ಸಂಚಾರ ಮಾಡುವುದರಿಂದ, ಸೀತಾನ್ವೇಷಣಕ್ಕಾಗಿ ಮೇರುವಿನ ದಕ್ಷಿಣಪಾರ್ಶ್ವದಲ್ಲಿ ಎಲ್ಲ ಕಡೆಗಳಲ್ಲಿಯೂ ಸಂಚಾರ ಮಾಡಿದುದರಿಂದ, ಯುದ್ಧದಲ್ಲಿ ಸಂಜೀವನವನ್ನು ತರುವ ಸಲುವಾಗಿ ಸಂಚಾರ ಮಾಡಿದುದರಿಂದ, ರಥದಲ್ಲಿದ್ದ ರಾವಣನ ಎದುರಾಗಿ ರಾಮನನ್ನು ಹೆಗಲ ಮೇಲೆ ಕೂಡಿಸಿಕೊಂಡೆ ಸಂಚಾರ ಮಾಡಿದುದರಿಂದ, ಭೀಮಾವತಾರದಲ್ಲಿ ಅರಗಿನಮನೆಯಿಂದ ಯುಧಿಷ್ಠಿರಾದಿಗಳನ್ನು ಹೊತ್ತು ಗುಹೆಯಲ್ಲಿ ಸಂಚಾರ ಮಾಡಿದುದರಿಂದ, ಏಕಚಕ್ರಾನಗರದಲ್ಲಿ ಬಕನವಧೆಗಾಗಿ ಸಂಚಾರ ಮಾಡಿದುದರಿಂದ, ಜರಾಸಂಧನ ವಧೆಗಾಗಿ ಕೃಷ್ಣನ ಜೊತೆಯಲ್ಲಿ ಸಂಚಾರ ಮಾಡಿದುದರಿಂದ, ವನವಾಸದಲ್ಲಿ ಸೌಗಂಧಿಕಾಪುಷ್ಪವನ್ನು ತರಲು ಸಂಚಾರ ಮಾಡಿದುದರಿಂದ, ಯುದ್ಧದಲ್ಲಿ ಗದೆಯನ್ನು ಹಿಡಿದು ಮಂಡಲಗಳಲ್ಲಿ ಸಂಚಾರ ಮಾಡಿದುದರಿಂದ, ಸಾಧುಗಳನ್ನು ಅಸುರರಿಂದ ರಕ್ಷಿಸಿದ ಫಲವು ಮತ್ತು ರಾಮಕೃಷ್ಣಾದಿರೂಪನಾದ ಹರಿಯ ಸೇವಾರೂಪದ ಫಲವು ಸ್ಪಷ್ಟವಾಗಿ ತಿಳಿಯುತ್ತದೆ.

ಮಧ್ವಾವತಾರದಲ್ಲಿಯೂ ಸಹ ಬಾಲ್ಯದಲ್ಲಿ ವಿಮಾನಗಿರಿಯಿಂದ ತಾಯಿಯ ಮನೆಗೆ ಸಂಚಾರ ಮಾಡಿದುದರಿಂದ, ಗೋರಕ್ಷಣೆಯನ್ನು ಮಾಡಲು ಸಂಚಾರ ಮಾಡಿದು ದುರಿಂದ, ಜ್ಞಾನದಾನಾರ್ಥವಾಗಿ ದೇಶದೇಶದಲ್ಲಿ ಸಂಚಾರ ಮಾಡಿದುದರಿಂದ, ದ್ವಾರಕಾಪಟ್ಟಣದಿಂದ ಬಂದ ಕೃಷ್ಣನ ಪ್ರತಿಮೆಯನ್ನು ಜ್ಞಾನದೃಷ್ಟಿಯಿಂದಲೇ ನೋಡಿ ಅದನ್ನು ತರಲು ಬ್ರಾಹ್ಮಣರ ಜೊತೆಯಲ್ಲಿ ತೆರಳಿ ಸಮುದ್ರವನ್ನು ಕುರಿತು ಸಂಚಾರ ಮಾಡಿದುದರಿಂದ, ದುರ್ಮತಪ್ರವರ್ತಕರಾದ ದೈತ್ಯರಿಂದ ಸಾಧುಗಳಿಗೆ ತತ್ವಜ್ಞಾನರೂಪವಾದ ರಕ್ಷಣೆಯೂ ಅಜ್ಞಾನನಾಶರೂಪವಾದ ಫಲವೂ ಪ್ರಪಂಚ

ಸತ್ಯತ್ವವನ್ನು ಸ್ಥಾಪನೆ ಮಾಡುವುದರಿಂದ, ಸತ್ಯತ್ವರೂಪವಾದ ಫಲವೂ, ಮೋಕ್ಷಸಾಧನ-ಜ್ಞಾನವನ್ನು ಉಪದೇಶ ಮಾಡುವುದರಿಂದ ಸ್ವಸ್ತಿರೂಪವಾದ ಮೋಕ್ಷರೂಪವಾದ ಫಲವೂ ಹಾಗೆಯೇ ಸೂತ್ರಗಳ ಅಪವ್ಯಾಖ್ಯಾನವನ್ನು ನಿರಾಸಮಾಡಿ ಸರಿಯಾದ ಅರ್ಥವನ್ನು ಪ್ರತಿಪಾದನೆ ಮಾಡುವುದರಿಂದ ವೇದವ್ಯಾಸದೇವರ ಸೇವಾರೂಪಫಲವೂ ಕಂಡುಬರುತ್ತದೆ. ರಾಮಾಯಣ, ಭಾರತ ವಚನಗಳಿಂದಲೂ ಈ ಅರ್ಥವು ತಿಳಿಯುತ್ತದೆ. ''ದ್ವೈಪಾಯನಸ್ಯ ಸೇವಾರ್ಥಂ ಬದರ್ಯಾಂ ತು ಕಲೌ ಯುಗೇ । ವಾಯುಶ್ಚ ಯತಿರೂಪೇಣ ಕೃತ್ವಾ ದುಃಶಾಸ್ತ್ರಖಂಡನಮ್'' ಎಂಬ ವಾಯುಪುರಾಣಾದಿ-ವಚನಗಳಿಂದಲೂ ಈ ಅರ್ಥವು ತಿಳಿಯುತ್ತದೆ. ಅದರಂತೆ ''ಪ್ರಾಕ್‌ಪಂಚಾಶತ್-ಸಹಸ್ರೈರ್ವ್ಯವಹಿತಮಮಿತಂ ಯೋಜನೈಃ ಪರ್ವತಂ ತ್ವಮ್, ಮುಷ್ಟಿರಿಷ್ಟಂ ಪ್ರದೇಷ್ಟುಂ ಕಿಂ ನೇಷ್ಟೇ, ದೇವ್ಯಾದೇಶಪ್ರಣೀತಿ'' ಇತ್ಯಾದಿ ವಚನಗಳಿಂದಲೂ ''ಜಘ್ನೇ ನಿಘ್ನೇನ ವಿಘ್ನಃ, ಕ್ಷ್ವೇಲಾಕ್ಷೀಣಾಟ್ಟಹಾಸಂ ತವ ರಣಮರಿಹನ್ನುದ್ಗದೋದ್ದಾಮಬಾಹೋ, ಗಚ್ಛನ್ ಸೌಗಂಧಿಕಾರ್ಥಂ ಪಥಿ, ಬಹ್ವೀಃ ಕೋಟೀರಟೀಕಃ, ಬ್ರಹ್ಮಾಹಂ ನಿರ್ಗುಣೋಽಹಂ ವಿತಥಮಿದಮಿತಿ ಹ್ಯೇಷಪಾಷಾಂಡವಾದಃ, ತದ್ಯುಕ್ತ್ಯಾಭಾಸ ಜಾಲಪ್ರಸರವಿಷತರೂ-ದ್ದಾಹದಕ್ಷಪ್ರಮಾಣ ಜ್ವಾಲಾಮಾಲಾಧರೋಽಗ್ನಿಃ, ಸ್ವಚ್ಛಃ ಸ್ವಚ್ಛಂದ ಮೃತ್ಯುಃ ಸುಖಯಸಿ ಸುಜನಂ ದೇವ ಕಿಂಚಿತ್ರಮತ್ರ, ಪಾರಿವ್ರಾಜ್ಯಾಧಿರಾಜಃ ಪುನರಪಿ ಬದರೀಂ ಪ್ರಾಪ್ಯ ಕೃಷ್ಣಂ ಚ ನತ್ವಾ'' ಮೊದಲಾದ ವಚನಗಳಿಂದಲೂ ಮುಖ್ಯಪ್ರಾಣನಲ್ಲಿಯೇ ಪವನ-ಪ್ರಾರ್ಥನೆಯನ್ನು (ಸಂಚಾರ ಪ್ರಾರ್ಥನೆಯನ್ನು) ಇಲ್ಲಿ ಮಾಡುತ್ತಿದ್ದಾರೆ ಎಂಬುದು ಸ್ಪಷ್ಟವಾದ ಅರ್ಥವಾಗುತ್ತದೆ. ಈ ಮಂತ್ರದಲ್ಲಿ ಸೋಮ ಪವಮಾನ ಎಂದು ಸಂಬೋಧಿಸಿ, 'ಸೋಮಃ ಪವತೇ ಜನಿತಾ' ಎಂದು ಹೇಳಿದುದರಿಂದ ಆ ಪವನನು ಅಂದರೆ ಸಂಚಾರ ಮಾಡುವವನು ಮಾರುತನೆಂದೇ ಸಿದ್ಧವಾಗುತ್ತದೆ.

**ಪ್ರಸೇನಾನೀರಿತಿ ಶ್ರುತ್ಯಾ ಯದ್ಭೀಮಹನುಮತ್ಕಥಾ ।**
**ಸ್ಪಷ್ಟಂ ನಿರೂಪಿತಾಽತ್ರೈವ ತತ್ ಸೋಮಃ ಸೋಮವಂಶಜಃ ॥ ೫೦೮ ॥**

**ಅರ್ಥ–** ತತ್ರೈವ = ಇದೇ ವರ್ಗದಲ್ಲಿಯೇ, ಪ್ರಸೇನಾನೀರಿತಿ ಶ್ರುತ್ಯಾ = ಪ್ರಸೇನಾನೀಃ ಎಂಬ ಮಂತ್ರದಿಂದ, ಯತ್ = ಯಾವ ಕಾರಣದಿಂದ, ಸ್ಪಷ್ಟಂ = ಸ್ಪಷ್ಟವಾಗಿ, ಭೀಮಹನುಮತ್ಕಥಾ = ಭೀಮಸೇನನ ಮತ್ತು ಹನುಮಂತನ ಕಥೆಯು ಹೇಳಲ್ಪಟ್ಟಿದೆಯೋ, ತತ್ = ಆ ಕಾರಣದಿಂದ, ಸೋಮಃ = ಸೋಮ ಎಂದರೆ, ಸೋಮವಂಶಜಃ = ಸೋಮಕುಲದಲ್ಲಿ ಜನಿಸಿದವನು ಎಂದು ಅರ್ಥ.

**ಅನುವಾದ–** ಇದೇ ವರ್ಗದಲ್ಲಿ ಪ್ರಸೇನಾನೀ ಎಂಬ ಮಂತ್ರದಲ್ಲಿ ಯಾವ ಕಾರಣದಿಂದ, ಸ್ಪಷ್ಟವಾಗಿ ಭೀಮಸೇನನ ಮತ್ತು ಹನುಮಂತನ ಕಥೆಯು ಹೇಳಲ್ಪಟ್ಟಿದೆಯೋ, ಆ

ಕಾರಣದಿಂದ ಮಂತ್ರದಲ್ಲಿರುವ ಸೋಮಶಬ್ದಕ್ಕೆ ಸೋಮಕುಲದಲ್ಲಿ ಜನಿಸಿದವನು ಎಂದು ಅರ್ಥ.

**ಭಾವವಿಲಾಸಿನೀ—** ಪ್ರಸೇನಾನೀರಿತ್ಯನೇನ "ಪ್ರಸೇನಾನೀಃ ಶೂರೋ ಅಗ್ರೇ ರಥಾನಾಂ ಗವ್ಯನ್ನೇತಿ ಹರ್ಷತೇ ಅಸ್ಯ ಸೇನಾಃ। ಭದ್ರಾನ್ ಕೃಣ್ವನ್ನಿಂದ್ರಹವಾನ್‌ಸಖಿಭ್ಯ ಆಸೋಮೋ ವಸ್ತ್ರಾರಭಸಾನಿ ದತ್ತೇ" ಇತಿ ಶ್ರುತಿಂ ಸಂಗೃಹ್ಣಾತಿ। ಅಯಮರ್ಥಃ ಶೂರಃ ಶೌರ್ಯವಾನ್। ಗವ್ಯಂ ರಥಂ ವಿಹಾಯ ಗವಿ ಭೂಮೌ ಪಾದಾಚರೇಣೈವ ಗಚ್ಛನ್। ಇದಂ ಚ ಭೀಮಸಾಧಾರಣ್ಯ-ಧರ್ಮತ್ವಾತ್ ಭೀಮಸೇನತ್ವ ಜ್ಞಾಪಕಃ। ಸೇನಾನೀಃ ಪಾಂಡವಸೇನಾನಾಯಕೋ ಭೀಮಸೇನ ಇತ್ಯರ್ಥಃ। ಭೀಮಾ ಸೇನಾ ಯಸ್ಯೇತಿ ವ್ಯುತ್ಪತ್ತ್ಯಾ ಭೀಮಸೇನಪದಸ್ಯ ಸೇನಾನೀ ಪದಸ್ಯ ಚ ಸಮಾನಾರ್ಥಕತ್ವಾತ್। ಸ್ಕಂದಾಖ್ಯಸೇನಾನ್ಯಾಃ ಪೂಯಮಾನೇ ಪ್ರಸ್ತಾವಾಯೋಗಾತ್। ಗವ್ಯತ್‌ಪದೋಕ್ತಪದಾಚಾರಯುದ್ಧಾಯೋಗಾಚ್ಚ ಭೀಮಸೇನ ಏವಾಯಂ ಸೇನಾನೀಃ। ರಥಾನಾಂ ಪ್ರತಿಸೇನಾಸ್ಥಿತ ರಥಿಕರಥಾನಾಮಗ್ರ ಏತಿ ಯುದ್ಧಾರ್ಥಂ ಗಚ್ಛತಿ। ತದಾಽಸ್ಯ ಭೀಮ-ಸೇನಸ್ಯ ಸೇನಾ ಪ್ರಹರ್ಷತೇ। ಭೀಮಪರಾಕ್ರಮಂ ದೃಷ್ಟ್ವಾ ಪ್ರಕರ್ಷೇಣ ಹರ್ಷಂ ಕರೋತಿ। ಇಂದ್ರಹವಾನೀಂದ್ರೇಣಾಹೂಯಂತ ಇತಿ ವ್ಯುತ್ಪತ್ತ್ಯಾ ಕವೀಂದ್ರಸ್ಯ ವೇದವ್ಯಾಸಸ್ಯ ಯಾದವೇಂದ್ರಸ್ಯ ಚಾಪ್ರತಿಮೋಽಯಂ ಪರಾಕ್ರಮ ಇತ್ಯಾಹ್ವಾನ ಯೋಗ್ಯಾಂ ಭಂದ್ರಾಂ ಶೋಭನಪರಾಕ್ರಮಾನ್ ಕೃಣ್ವಂ ಕುರ್ವನ್ ಸೋಮಃ ಸೋಮಕುಲೋತ್ಪನ್ನೋ ಭೀಮೋ ಧರ್ಮರಾಜಸ್ಯ ರಾಜ್ಯಾಭಿಷೇಕೇ ಯುವರಾಜಸಂಪದಮನುಭವನ್ನಾಽಽಸಮಂತಾದಾಗತೇಭ್ಯಃ ಸಖಿಭ್ಯೋ ವೈಷ್ಣವೇಭ್ಯೋ ರಭಸಾನಿ ಆದರಾದಿಸಂಭ್ರಮವಂತಿ ವಸ್ತ್ರೇಷು ರಚಿತಚಿತ್ರ ಪ್ರಮಿತಾದಿಸಂಭ್ರಮಂತಿ ಚ। "ಅರ್ಶ ಆದಿಭ್ಯೋಜ್"ತಿ ಮತು ಬರ್ಥೇಽಚ್‌ಪ್ರತ್ಯಯಃ। ವಸ್ತ್ರಾ ವಸ್ತ್ರಾಣಿ। ಉಪಲಕ್ಷಣಮೇತತ್। ಧನಭೂಮ್ಯಾಭರಣಾದೀನಿ ಚ ದತ್ತ ಇತ್ಯೇಕೋರ್ಥಃ।

ಶೂರತ್ವಾದಿಸಕಲವಿಶೇಷಣವಾನ್ ಸೇನಾನೀಃ ಕಪಿಸೇನಾನಾಯಕೋ ಹನೂಮಾಂಶ್ಚ। ರಥಾನಾಂ ರಾಕ್ಷಸರಥಾನಾಮಗ್ರ ಏತಿ ತದಾಸ್ಯ ಸೇನಾ ಪ್ರಹರ್ಷತೇ। ಇಂದ್ರಹವಾನ್‌ಸೀತಾಪ್ರತಿ-ಕೃತಿಸ್ಥಿತದೇವೇಂದ್ರಸ್ಯ ಸ್ತುತಿರೂಪಾಹ್ವಾನಯೋಗ್ಯಾನ್ ಭದ್ರಾನ್ ಸಮುದ್ರಲಂಘನವನಭಂಗ-ಲಂಕಾದಾಹಾದಿ ಶೋಭನಪರಾಕ್ರಮಾನ್‌ಕೃಣ್ವನ್ ಸೋಮೋ ಹನುಮದಾಖ್ಯೋ ವಾಯು-ರಾಸಮಂತಾತ್ ಸ್ಥೂಲಸ್ವಪುಚ್ಛವೇಷ್ಟನಾಯ ದೈತ್ಯಜನೈರ್ದತ್ತಾನಿ ರಭಸಾನಿ ವಸ್ತ್ರಾಣಿ। ಸಖಿಭ್ಯೋ ಗಾರ್ಹ್ಯಪತ್ಯಾದ್ಯಗ್ನಿಭ್ಯಃ। ವಾಯೋರಗ್ನಿಸಖಿತ್ವಾತ್ ಪುಚ್ಛದತ್ತಾಗ್ನಿನಾ ಸ್ವಸ್ಯ ಕ್ಲೇಶೋನಾಸ್ತೀತಿ ಸೂಚನಾಯ ಸಖಿಭ್ಯ ಇತ್ಯುಕ್ತಮ್। ದತ್ತೇ ಸ್ವಪುಚ್ಛೇ ಪ್ರಕ್ಷಿಪ್ತಾಗ್ನಿಸ್ಥಿತ ವಿಷ್ಣೋರಾಹುತಿತಯಾ ದತ್ತವಾನಿತ್ಯರ್ಥಃ। ಪರಾಕೃತಾನಿಷ್ಟಮಪಿ ತಸ್ಯ ಹರಿಸೇವಾಖ್ಯಪುಣ್ಯಹೇತುರೇವಾಭೂದಿತಿ ಭಾವಃ। ಇಮಮೇವಾರ್ಥಂ ಪ್ರಪಂಚಯನ್ನಾಹ। ಪ್ರೇಸೇನಾನೀರಿತಿ ಶ್ರುತ್ಯೇತ್ಯಾದಿನಾ। ಯದ್ಯಸ್ಮಾತ್ತತ್ತಸ್ಮಾತ್ ॥ ೫೦೮ ॥

**ವಿವರಣೆ—** "ಪ್ರಸೇನಾನೀಃ ಶೂರೋ ಅಗ್ರೇ ರಥಾನಾಂ ಗವ್ಯನ್ನೇತಿ ಹರ್ಷತೇ ಅಸ್ಯ ಸೇನಾಃ। ಭದ್ರಾನ್ ಕೃಣ್ವನ್ ಇಂದ್ರಹವಾನ್ ಸಖಿಭ್ಯ ಆ ಸೋಮೋ ವಸ್ತ್ರಾ ರಭಸಾನಿ

ದತ್ತೇ' ಎಂಬ ಮೇಲಿನ ವರ್ಗದ ಮೊದಲನೆಯ ಮಂತ್ರವನ್ನು ಸಂಗ್ರಹಿಸುತ್ತಿದ್ದಾರೆ. ಮಂತ್ರದ ಅರ್ಥವು ಹೀಗಿದೆ - ಶೂರಃ = ಶೌರ್ಯವನ್ನುಳ್ಳ, ಗವ್ಯನ್ = ರಥವನ್ನು ಬಿಟ್ಟು ಭೂಮಿಯಲ್ಲಿ ಪಾದಚಾರದಿಂದ ನಡೆಯುವ, ಈ ವಿಶೇಷಣವು ಹನುಮಂತ ಮತ್ತು ಭೀಮಸೇನ ಇಬ್ಬರಿಗೂ ಅನ್ವಯಿಸುತ್ತದೆ, ಭೀಮಸೇನನ ಅಸಾಧಾರಣ ಧರ್ಮವೂ ಆಗಿದೆ. ಸೇನಾನೀಃ = ಪಾಂಡವ ಸೇನಾನಾಯಕನಾಗಿ ಭೀಮಸೇನನು, ಭೀಮಾ = ಎಂದರೆ ಭಯಂಕರವಾದ ಸೇನೆಯುಳ್ಳವನು, ಸೇನಾನೀ = ಸೇನೆಯುಳ್ಳವನು ಎಂಬರ್ಥದಲ್ಲಿ ಭೀಮಸೇನ ಶಬ್ದವು ಮತ್ತು ಸೇನಾನೀ ಶಬ್ದವು ಸಮಾನಾರ್ಥಕಗಳಾಗುತ್ತವೆ. ಯದ್ಯಪಿ ಸ್ಕಂದನು ಸೇನಾನಿಯಾಗಿದ್ದಾನೆ. ಆದರೆ ಪವಿತ್ರೀಕರಣ ಪ್ರಾರ್ಥನೆಯ ಸಂದರ್ಭದಲ್ಲಿ ಸ್ಕಂದನ ಉಲ್ಲೇಖವು ಅಸಂಗತವಾಗುತ್ತದೆ. ಮತ್ತು ಗವ್ಯನ್ ಎಂಬ ಪದದಿಂದ ಹೇಳಿದ ಪಾದಚಾರವು ಸ್ಕಂದನಲ್ಲಿ ಕೂಡುವುದಿಲ್ಲ, ರಥಾನಾಂ = ಶತ್ರುಸೈನ್ಯದ ರಥಗಳಿಗೆ, ಅಗ್ರೇ = ಎದುರಾಗಿ, ಏತಿ = ಯುದ್ಧವನ್ನು ಮಾಡಲು ಹೋಗುತ್ತಾನೆ, ಹರ್ಷತೇ = ಆಗ ಈ ಭೀಮಸೇನನ ಸೈನ್ಯವು ಸಂತೋಷಗೊಳ್ಳುತ್ತದೆ, ಭೀಮಪರಾಕ್ರಮವನ್ನು ನೋಡಿ ಅತಿಶಯವಾದ ಹರ್ಷವನ್ನು ಹೊಂದುತ್ತದೆ. ಇಂದ್ರಹವಾನ್ = ಕವೀಂದ್ರರಾದ ವೇದವ್ಯಾಸರ ಅಥವಾ ಯಾದವೇಂದ್ರನಾದ ಕೃಷ್ಣನ ಹವ ` ಎಂದರೆ ಇದು ಅಪ್ರತಿಮಪರಾಕ್ರಮ ಎಂಬ ಹೊಗಳಿಕೆಯ ರೂಪವಾದ ಆಹ್ವಾನಯೋಗ್ಯವಾದ ಎಂದು ಅರ್ಥ. ಭದ್ರಾನ್ = ಅಂತಹ ಶೋಭನವಾದ ಪರಾಕ್ರಮಗಳನ್ನು, ಕುರ್ವನ್ = ಮಾಡುತ್ತಾ ಸೋಮಃ = ಸೋಮಕುಲದಲ್ಲಿ ಉತ್ಪನ್ನನಾದ ಭೀಮಸೇನನು, ಧರ್ಮರಾಜನಿಗೆ ರಾಜ್ಯಾಭಿಷೇಕವಾದಾಗ ಯುವರಾಜಪಟ್ಟದಲ್ಲಿ ಕುಳಿತು, ಆ ಸಖಿಭ್ಯ= ಎಲ್ಲ ಕಡೆಗಳಿಂದ ಬಂದ ತನ್ನ ವೈಷ್ಣವ ಸ್ನೇಹಿತರಿಗೆ, ರಭಸಾನಿ = ಶ್ರೇಷ್ಠವಾದ ಸಂಭ್ರಮದಿಂದ ಕೂಡಿದ, ಅಥವಾ ಚಿತ್ರಗಳಿಂದ ಕೂಡಿದ ಇಲ್ಲಿ ಅರ್ಶಾದಿ ಅಚ್‌ಪ್ರತ್ಯಯವನ್ನು ಇಟ್ಟುಕೊಳ್ಳಬೇಕು. ವಸ್ತ್ರಾ= ವಸ್ತ್ರಗಳನ್ನು, ಇದನ್ನು ಉಪಲಕ್ಷಣವನ್ನಾಗಿ ಇಟ್ಟುಕೊಂಡು, ಧನ, ಭೂಮಿ, ಆಭರಣಗಳು ಎಂದು ತೆಗೆದುಕೊಳ್ಳಬೇಕು. ದತ್ತೇ = ಕೊಡುತ್ತಾನೆ. ಇದು ಒಂದು ಅರ್ಥ.

ಶೂರಃ = ಶೌರ್ಯಾದಿ ಸಕಲವಿಶೇಷಣಗಳನ್ನು ಹೊಂದಿದ, ಸೇನಾನೀಃ = ಕಪಿಸೇನಾನಾಯಕನಾದ ಹನುಮಂತನು, ರಥಾನಾಂ = ರಾಕ್ಷಸ ರಥಗಳ, ಅಗ್ರೇ ಏತಿ = ಮುಂದೆ ಹೋಗುತ್ತಾನೆ. ಆಗ ಅವನ ಸೇನೆಯು, ಹರ್ಷತೇ = ಸಂತೋಷಪಡುತ್ತದೆ. ಇಂದ್ರಹವಾನ್ = ಸೀತೆಯ ಪ್ರತಿಕೃತಿಯಲ್ಲಿದ್ದ ಇಂದ್ರನಿಂದ ಆಹ್ವಾನಿಸಲು ಯೋಗ್ಯನಾದ, ಭದ್ರಾನ್ = ಸಮುದ್ರಲಂಘನ, ವನಭಂಜನ, ಲಂಕಾದಾಹ ಮೊದಲಾದ ಪರಾಕ್ರಮಗಳನ್ನು, ಕೃಣ್ವನ್ = ಮಾಡುತ್ತಾ, ಸೋಮಃ = ಹನುಮಂತನೆಂಬ ಹೆಸರಿನ ವಾಯುವು, ಆ = ತನ್ನ ಬಾಲವನ್ನು ಸುತ್ತಲು ಎಲ್ಲ ಕಡೆಗಳಿಂದಲೂ ದೈತ್ಯರು ಕೊಟ್ಟ ಶ್ರೇಷ್ಠವಾದ, ವಸ್ತ್ರಾ = ವಸ್ತ್ರಗಳನ್ನು, ಸಖಿಭ್ಯಃ = ತನ್ನ ಸ್ನೇಹಿತನಾದ ಅಗ್ನಿಗೆ, ವಾಯುವು

ಅಗ್ನಿಸಖನೆಂದು ಪ್ರಸಿದ್ಧವಾದುದ್ದು. ಪುಚ್ಛಕ್ಕೆ ಹಚ್ಚಿದ ಅಗ್ನಿಯಿಂದ ತನಗೇನೂ ಕ್ಲೇಶವಿಲ್ಲವೆಂದು ಸೂಚಿಸಲು 'ಸಖಿಭ್ಯ' ಎಂದು ಹೇಳಿದ್ದಾರೆ. ದತ್ತೇ = ತನ್ನ ಪುಚ್ಛಕ್ಕೆ ಹೊತ್ತಿಸಿದ ಅಗ್ನಿಯಲ್ಲಿದ್ದ ವಿಷ್ಣುವಿನ ರೂಪಕ್ಕೆ ಆಹುತಿಗಳಾಗಿ (ಆ ವಸ್ತುಗಳನ್ನು ಕೊಟ್ಟನು ಎಂದು ಅರ್ಥ) ಪರರು ಉಂಟುಮಾಡಿದ ಅನಿಷ್ಟವು ಹನುಮಂತನಿಗೆ ಹರಿಸೇವಾರೂಪವಾದ ಪುಣ್ಯಕ್ಕೆ ಕಾರಣವಾಯಿತೆಂದು ಅಭಿಪ್ರಾಯ. ಆದ್ದರಿಂದ ಈ ಮಂತ್ರದಲ್ಲಿ ಹನುಮಂತನ ಮತ್ತು ಭೀಮಸೇನನ ಮಹಿಮೆಯು ಸ್ಪಷ್ಟವಾಗಿ ನಿರೂಪಿತವಾಗಿದೆಯೆಂದು ಹೇಳಿದ್ದಾರೆ.

**ಅಗ್ರೇ ರಥಾನಾಂ ಸೇನಾನೀಃ ಶೂರೋಽಸೌ ಭುವಿ ಯಸ್ತದಾ ।**
**ಏತಿ ಪ್ರಹರ್ಷತೇ ಭೀಮಸೇನಸೇನಾ ತದಾ ಕಿಲ ।**
**ಭೀಮಸೇನೋ ಹ್ಯಸೌ ಸೇನಾನೀತ್ವಂ ಯತ್ ತಸ್ಯ ಶೋಭತೇ ॥ ೫೦೯ ॥**

**ಅರ್ಥ**– ರಥಾನಾಂ = ರಥಗಳ, ಅಗ್ರೇ = ಎದುರಿನಲ್ಲಿ, ಶೂರಃ = ಶೂರನಾದ, ಯ ಅಸೌ = ಯಾವ ಈ ಭೀಮಸೇನನು, ಭುವಿ = ಭೂಮಿಯಲ್ಲಿ ಏತಿ = ನಡೆಯುತ್ತಾನೋ, ತದಾ = ಆಗ, ಭೀಮಸೇನಸೇನಾ = ಭೀಮಸೇನನ ಸೈನ್ಯವು, ಪ್ರಹರ್ಷತೇ ಕಿಲ = ಸಂತೋಷಪಡುವುದಷ್ಟೇ, ಆದ್ದರಿಂದ ಅಸೌ = ಈ ಸೇನಾನಿಯು, ಭೀಮಸೇನೋಹಿ = ಭೀಮಸೇನನೇ ಅಷ್ಟೇ, ಯತ್ = ಏಕೆಂದರೆ, ಸೇನಾನೀತ್ವಂ = ಸೇನಾನಾಯಕತ್ವವು, ತಸ್ಯ = ಆ ಭೀಮಸೇನನಿಗೇ, ಶೋಭತೇ = ಶೋಭಿಸುತ್ತದೆ.

**ಅನುವಾದ**– ಶತ್ರುಗಳ ರಥಗಳ ಎದುರಿನಲ್ಲಿ ಸೇನಾನಾಯಕನಾದ ಶೂರನಾದ ಈ ಭೀಮಸೇನನು ಯಾವಾಗ ಭೂಮಿಯ ಮೇಲೆ ನಡೆಯುತ್ತಾನೆಯೋ,ಆಗ ಭೀಮಸೇನನ ಸೈನ್ಯವು ಸಂತೋಷಪಡುವುದಷ್ಟೇ? ಆದ್ದರಿಂದ ಈ ಸೇನಾನಿಯು ಭೀಮಸೇನನೇ ಏಕೆಂದರೆ ಸೇನಾನಾಯಕತ್ವವು ಅವನಿಗೆ ಶೋಭಿಸುತ್ತದೆ.

**ಭಾವವಿಲಾಸಿನೀ**– ಯದ್ಯಸ್ಮಾದ ಸೌ ಭೀಮಸೇನಃ । ಹಿ ತಸ್ಮಾದ್ಧೇತೋಃ ಸೇನಾನೀತ್ವಂ ತಸ್ಯ ಶೋಭತ ಇತಿ ಸಂಬಂಧಃ ॥ ೫೦೯ ॥

ಕವೀಂದ್ರಯಾದವೇಂದ್ರಾಹ್ವಾನೋಚಿತಾನ್ ಸುರರಾಟ್‌ಸ್ತುತಾನ್ ।
ಭದ್ರಾನ್ ಪರಾಕ್ರಮಾನ್ ಕುರ್ವನ್ ಯುವರಾಜಪದೇ ಸ್ಥಿತಃ ॥ ೫೧೦ ॥

ಸಖಿಭ್ಯೋ ವಿಷ್ಣುಭಕ್ತೇಭ್ಯೋ ವಸ್ತ್ರಾ ವಸ್ತ್ರಾಣಿ ಸಂಭ್ರಮಾಃ ।
ಯುತಾನಿ ಚ ಸಮಂತಾತ್ ಸ ದತ್ತೇ ಕಿಲ ದಿನೇ ದಿನೇ ॥ ೫೧೧ ॥

ಇತಿ ಭೀಮಂ ಸ್ತೌತಿ ಸೈವ ಹನೂಮಂತಂ ಚ ಶಂಸತಿ ।
ಏಕಪ್ರಕಾರಕಾರ್ಯತ್ವಾದೇಕರೂಪತ್ವತೋಪಿ ವಾ ॥ ೫೧೨ ॥

**ಅರ್ಥ–** ಕವೀಂದ್ರಯಾದವೇಂದ್ರಾಹಾನೋಚಿತಾನ್ = ಕವೀಂದ್ರರಾದ ವೇದವ್ಯಾಸರು ಮತ್ತು ಯಾದವೇಂದ್ರರಾದ ಕೃಷ್ಣನಿಂದ ಆಹ್ವಾನ ಮಾಡಲು (ಪ್ರಶಂಸಿಸಲು) ಯೋಗ್ಯವಾದ, ಸುರರಾಟ್‌ಸ್ತುತಾನ್ = ದೇವೇಂದ್ರನಾದ ಇಂದ್ರನಿಂದ ಸ್ತುತ್ಯವಾದ, ಭದ್ರಾನ್ = ಮಂಗಳವಾದ, ಪರಾಕ್ರಮಾನ್ = ಪರಾಕ್ರಮವನ್ನು, ಕುರ್ವನ್ = ಮಾಡುತ್ತಾ, ಯುವರಾಜಪದೇ ಸ್ಥಿತಃ = ಯುವರಾಜ ಪದವಿಯಲ್ಲಿದ್ದವನಾಗಿ, ಸಖಿಭ್ಯಃ = ಸ್ನೇಹಿತರಾದ, ವಿಷ್ಣುಭಕ್ತೇಭ್ಯಃ = ವಿಷ್ಣುಭಕ್ತರಿಗೆ, ಯುತಾನಿ = ಅಲಂಕಾರಗಳಿಂದ ಕೂಡಿದ, ಸಂಭ್ರಮಾಃ = ಸಂಭ್ರಮಸಹಿತವಾದ, ವಸ್ತ್ರಾ ವಸ್ತ್ರಾಣಿ = ವಸ್ತ್ರಾ ಎಂದರೆ ವಸ್ತ್ರಗಳನ್ನು, ಸಮಂತಾತ್ = ಎಲ್ಲೆಡೆಯಲ್ಲಿಯೂ, ದಿನೇ ದಿನೇ = ಪ್ರತಿದಿನವೂ, ದತ್ತೇ ಕಿಲ = ಕೊಡುತ್ತಾನಷ್ಟೇ. ಇತಿ = ಈ ಕಾರಣದಿಂದ, ಭೀಮಂ = ಭೀಮನನ್ನು, ಸ್ತೌತಿ = ಈ ಮಂತ್ರವು ಸ್ತೋತ್ರಮಾಡುತ್ತದೆ. ಸೈವ = ಇದೇ ಮಂತ್ರವೇ, ಹನೂಮಂತಂ ಚ = ಹನುಮಂತನನ್ನೂ ಕೂಡ, ಏಕಪ್ರಕಾರಕಾರ್ಯತ್ವಾತ್ = ಒಂದೇ ರೀತಿಯ ಕಾರ್ಯವುಳ್ಳವನಾದ್ದರಿಂದ, ವಾ = ಅಥವಾ, ಏಕರೂಪತ್ವತೋಪಿ = ಸಮಾನವಾದ ರೂಪವುಳ್ಳ ಕಾರಣದಿಂದ, ಶಂಸತಿ = ಪ್ರಶಂಸೆಯನ್ನು ಮಾಡುತ್ತದೆ.

**ಅನುವಾದ–** ಕವೀಂದ್ರರಾದ ವೇದವ್ಯಾಸರಿಂದಲೂ, ಯಾದವೇಂದ್ರನಾದ ಕೃಷ್ಣನಿಂದಲೂ ಪ್ರಶಂಸೆ ಮಾಡಲು ಯೋಗ್ಯವಾದ ದೇವೇಂದ್ರನಿಂದ ಸ್ತುತ್ಯವಾದ ಮಂಗಳವಾದ ಪರಾಕ್ರಮಗಳನ್ನು ಯುವರಾಜ್ಯಪದವಿಯಲ್ಲಿದ್ದು ಮಾಡುತ್ತಾ ತನ್ನ ಸ್ನೇಹಿತರಾದ ವಿಷ್ಣುಭಕ್ತರಿಗೆ ಅಲಂಕಾರದಿಂದ ಕೂಡಿದ ವಸ್ತ್ರಗಳನ್ನು ಎಲ್ಲ ಕಡೆಗಳಲ್ಲಿಯೂ ಪ್ರತಿದಿನವೂ ಕೊಡುತ್ತಾನಷ್ಟೇ. ಹೀಗೆ ಈ ಮಂತ್ರವು ಭೀಮನನ್ನು ಸ್ತೋತ್ರಮಾಡುತ್ತದೆ. ಅಥವಾ ಒಂದು ರೀತಿಯಾದ ಕಾರ್ಯವನ್ನು ಮಾಡುವುದರಿಂದ ಮತ್ತು ಒಬ್ಬ ವಾಯುದೇವರ ರೂಪವೇ ಆದ್ದರಿಂದ ಹನುಮಂತನನ್ನೂ ಸ್ತೋತ್ರಮಾಡುತ್ತದೆ.

**ಭಾವವಿಲಾಸಿನೀ–** ಸುರರಾಡ್‌ದೇವೇಂದ್ರಃ ॥ ೫೦೦-೫೦೩ ॥

ಭದ್ರಾನ್ ಕುರ್ವನ್ ಕವೀಂದ್ರಸ್ಯ ರಾಘವೇಂದ್ರಸ್ಯ ವಾ ಪ್ರಭೋಃ ।
ಆಹ್ವಾನಾರ್ಹಾನ್ನಿಜಗುಣಾನ್ ಸಖಿಭ್ಯೋಽರ್ಥೇ ರಿಪೋಃ ಪುರೀಮ್ ।
ಗತ್ವಾ ವಸ್ತ್ರಾಣಿ ಚಾದತ್ತೇ ರಭಸಾನಿ ಕಿಲ ದ್ವಿಷಾಂ ॥ ೫೦೩ ॥

ಸ್ವಬಾಲಾಸಕ್ತವಸ್ತ್ರಾಣಿ ಸಖಿಭ್ಯೋಽಗ್ನಿಭ್ಯ ಏವ ವಾ ।
ಆಸಮಂತಾದ್ವಿಭುರ್ದತ್ತೇ ಪ್ರಾಗಾದತ್ತೇ ಚ ತತ್ಕೃತೇ ॥ ೫೦೪ ॥

ದ್ವಿಟ್ಪುರೀದಾಹಪೂರ್ವಾಂಶ್ಚ ಸೀತಾಸ್ಥೇಂದ್ರಸ್ಯ ತೋಷದಾನ್ ।
ಭದ್ರಾನ್ ಪರಾಕ್ರಮಾನ್ ಕುರ್ವನ್ ವನಭಂಗಾದಿಕಾನ್ ಪ್ರಭುಃ ॥ ೫೦ ॥

**ಆಗ್ರೇ ರಥಾನಾಮಿತ್ಯಾದಿ ಯೋಜ್ಯಮಸ್ಮಿಂಶ್ಚ ಪೂರ್ವವತ್ ।**
**ಸ ಸೋಮಃ ಪವನೋಽಸ್ಮದ್ಧನುಮಾನ್ ವಾ ಭವಿಷ್ಯತಿ ॥ ೫೧೬ ॥**

**ಅರ್ಥ–** ಷಭೋಃ = ಪ್ರಭುವಾದ, ಕವೀಂದ್ರಸ್ಯ = ಕವೀಂದ್ರನಾದ, ರಾಘವೇಂದ್ರಸ್ಯ = ರಾಮಚಂದ್ರನ, ಆಹ್ವಾನಾರ್ಹಾನ್ = ಆಹ್ವಾನಕ್ಕೆ ಯೋಗ್ಯವಾದ, ಭದ್ರಾನ್ = ಮಂಗಳವಾದ, ನಿಜಗುಣಾನ್ = ತನ್ನ ಪರಾಕ್ರಮಾದಿ ಗುಣಗಳನ್ನು, ಸಖಿಭ್ಯೋಽರ್ಥೇ = ತನ್ನ ಮಿತ್ರರ ಸಲುವಾಗಿ ತೋರಿಸುತ್ತಾ, ರಿಪೋಃ ಪುರೀಂ = ಶತ್ರುಪಟ್ಟಣವಾದ ಲಂಕೆಗೆ, ಗತ್ವಾ = ಹೋಗಿ, ದ್ವಿಷಾಂ = ಶತ್ರುಗಳ, ರಭಸಾನಿ = ಅಲಂಕೃತವಾದ, ವಸ್ತ್ರಾಣಿ = ವಸ್ತ್ರಗಳನ್ನು, ಆದತ್ತೇ = ಸ್ವೀಕರಿಸುತ್ತಾನೆ. ವಿಭುಃ = ಸಮರ್ಥನಾದ ಹನುಮಂತನು, ಸ್ವಬಾಲಾಸಕ್ತವಸ್ತ್ರಾಣಿ = ತನ್ನ ಬಾಲಕ್ಕೆ ಸುತ್ತಿದ ವಸ್ತ್ರಗಳನ್ನು, ಸಖಿಭ್ಯಃ = ತನ್ನ ಸ್ನೇಹಿತರಿಗೆ, ವಾ = ಅಥವಾ, ಅಗ್ನಿಭ್ಯ ಏವ = ಅಗ್ನಿಗಳಿಗೆ, ಆ ಸಮಂತಾತ್ = ಎಲ್ಲ ಕಡೆಗಳಿಂದಲೂ, ದತ್ತೇ = ಕೊಡುತ್ತಾನೆ. ತತ್ಕೃತೇ = ಆ ಅಗ್ನಿಗೆ ಕೊಡುವ ಸಲುವಾಗಿ, ಪ್ರಾಕ್ = ಮೊದಲು, ಆದತ್ತೇ = ವಸ್ತ್ರಗಳನ್ನು ಸ್ವೀಕರಿಸುತ್ತಾನೆ. ಸೀತಾಸ್ಥೇಂದ್ರಸ್ಯ ತೋಷದಾನ್ = ಸೀತಾಪ್ರತಿಕೃತಿಯಲ್ಲಿರುವ ಇಂದ್ರನಿಗೆ ಸಂತೋಷದಾಯಕವಾದ, ದ್ವಿಟ್ಪುರೀದಾಹಪೂರ್ವಾನ್ = ಶತ್ರುಪಟ್ಟಣದಾಹ ಮೊದಲಾದ, ಭದ್ರಾನ್ = ಮಂಗಳವಾದ, ವನಭಂಗಾದಿಕಾನ್ = ವನಭಂಗ ಮೊದಲಾದ, ಪರಾಕ್ರಮಾನ್ = ಪರಾಕ್ರಮಗಳನ್ನು, ಕುರ್ವನ್ = ಮಾಡುತ್ತಾ, ಪ್ರಭುಃ = ಸಮರ್ಥನಾದ ಹನುಮಂತನು, ಅಗ್ರೇ ರಥಾನಾಮಿತ್ಯಾದಿ = ರಥಗಳ ಎದುರಿನಲ್ಲಿ ಮೊದಲಾದ ರೀತಿಯಲ್ಲಿ, ಪೂರ್ವವತ್ = ಹಿಂದಿನಂತೆಯೇ, ಅಸ್ಮಿಂಶ್ಚ = ಈ ಪಕ್ಷದಲ್ಲಿಯೂ ಯೋಜ್ಯಂ = ಯೋಜನೆಯನ್ನು ಮಾಡಬೇಕು. ಸ ಸೋಮಃ ಪವಮಾನಃ = ಆ ಸೋಮ ಪವಮಾನನು, ಅಸ್ಮದ್ಧನುಮಾನ್ವಾ = ನಮ್ಮ ಹನುಮಂತನಾದರೂ, ಭವಿಷ್ಯತಿ = ಆಗುತ್ತಾನೆ.

**ಅನುವಾದ–** ಪ್ರಭುವಾದ ಕವೀಂದ್ರನಾದ ರಾಮಚಂದ್ರನ ಆಹ್ವಾನಕ್ಕೆ ಯೋಗ್ಯವಾದ ಮಂಗಳವಾದ ತನ್ನ ಪರಾಕ್ರಮಾದಿಕಾರ್ಯಗಳನ್ನು ಮಾಡುತ್ತಾ, ತನ್ನ ಸ್ನೇಹಿತರ ಸಲುವಾಗಿ ತೋರಿಸುತ್ತಾ ಶತ್ರುಪಟ್ಟಣವಾದ ಲಂಕೆಗೆ ಹೋಗಿ ಶತ್ರುಗಳ ಅಲಂಕೃತವಾದ, ವಸ್ತ್ರಗಳನ್ನು ಸ್ವೀಕರಿಸುತ್ತಾನೆ. ತನ್ನ ಬಾಲಕ್ಕೆ ಸುತ್ತಿದ ವಸ್ತ್ರಗಳನ್ನು ಸ್ನೇಹಿತರಿಗೂ ಅಥವಾ ಅಗ್ನಿಗೂ ಎಲ್ಲಾ ಕಡೆಗಳಲ್ಲಿಯೂ ಕೊಡುತ್ತಾನೆ. ಅಗ್ನಿಗೆ ಕೊಡುವ ಸಲುವಾಗಿ ಮೊದಲು ಅವುಗಳನ್ನು ಸ್ವೀಕರಿಸುತ್ತಾನೆ. ಸೀತಾ ಪ್ರತಿಕೃತಿಯಲ್ಲಿರುವ ಇಂದ್ರನಿಗೆ ಸಂತೋಷದಾಯಕವಾದ ಶತ್ರುಪುರಿದಹನ ವನಭಂಗ ಮೊದಲಾದ ಮಂಗಳವಾದ ಪರಾಕ್ರಮವನ್ನು ಮಾಡುತ್ತಾ, ಶತ್ರುಗಳ ರಥದ ಎದುರಿನಲ್ಲಿ ಹೋಗುತ್ತಾನೆ ಎಂದು ಈ ಪಕ್ಷದಲ್ಲಿಯೂ ಹಿಂದಿನಂತೆ ಯೋಜನೆ ಮಾಡಬೇಕು. ಸೋಮ ಪವಮಾನ ಎಂದು ಹೇಳಲ್ಪಟ್ಟವನು ನಮ್ಮ ಹನುಮಂತನೇ ಆಗುವನು.

**ಭಾವವಿಲಾಸಿನೀ–** ತತ್ ಕೃತೇಽಗ್ನ್ಯರ್ಥಮ್ ॥ ಅಸ್ಮಿನ್ ಪಕ್ಷೇ ॥ ೫೧೪-೫೧೬ ॥

ಮತೀನಾಂ ಜನಿತಾ ವಿಷ್ಣೋರ್ಜನಿತಾ ಯಃ ಶ್ರುತೌ ಶ್ರುತಃ ।
ವಿಪ್ರಾಣಾಮೃಷಿರಿತ್ಯುಕ್ತಃ ಸ ಮಧ್ವ ಇತಿ ಚ ಶ್ರುತಃ ॥ ೫೧೭ ॥

ಏಕ ಏವ ಭವೇದ್ ವಿಷ್ಣುರ್ಮತಿಂ ವಿಪ್ರೇಷು ಯೋಽದಿಶತ್ ।
ವಿಷ್ಣೋಃ ಪ್ರಮಾಪನಾಲ್ಲೋಕೇ ಸ ವಿಷ್ಣೋರ್ಜನಿತಾ ಶ್ರುತಃ ॥ ೫೧೮ ॥

**ಅರ್ಥ–** ಯಃ = ಯಾವನು, ಶ್ರುತೌ = ಶ್ರುತಿಯಲ್ಲಿ, ಮತೀನಾಂ = ಬುದ್ಧಿಗಳನ್ನು, ಜನಿತಾ = ಸೃಷ್ಟಿಸುವವನು, ವಿಷ್ಣೋಃ = ವಿಷ್ಣುವನ್ನು ಜನಿತಾ = ಸೃಷ್ಟಿಸುವವನು ಎಂದು, ಶ್ರುತಃ = ಹೇಳಲ್ಪಟ್ಟಿದ್ದಾನೋ, ವಿಪ್ರಾಣಾಮ್ = ವಿಪ್ರರಿಗೆ, ಋಷಿರಿತಿ = ಜ್ಞಾನೋಪದೇಶಕನೆಂದು, ಉಕ್ತಃ = ಹೇಳಲ್ಪಟ್ಟವನಾಗಿ, ಮಧ್ವ ಇತಿ ಚ = ಮಧ್ವನೆಂದೂ, ಶ್ರುತಃ = ಹೇಳಲ್ಪಟ್ಟಿದ್ದಾನೆಯೋ, ಸ = ಆ ಪುರುಷನು, ಏಕ ಏವ ಭವೇತ್ = ಒಬ್ಬನೇ ಆಗಿರಬೇಕು. ಸ = ಯಾರು, ವಿಪ್ರೇಷು = ಬ್ರಾಹ್ಮಣರಲ್ಲಿ, ವಿಷ್ಣೋರ್ಮತಿಂ = ವಿಷ್ಣುವಿಷಯಕಜ್ಞಾನವನ್ನು, ಆದಿಶತ್ = ಉಂಟುಮಾಡಿದನೋ, ಲೋಕೇ = ಲೋಕದಲ್ಲಿ, ವಿಷ್ಣೋಃ = ವಿಷ್ಣುವಿಷಯಕನಾದ, ಪ್ರಮಾಪನಾತ್ = ಯಥಾರ್ಥಜ್ಞಾನವನ್ನು ಉಂಟುಮಾಡುವುದರಿಂದ, ಸ = ಅವನು, ವಿಷ್ಣೋಃ = ವಿಷ್ಣುವಿಗೆ, ಜನಿತಾ = ಜನಕನೆಂದು, ಶ್ರುತಃ = ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ.

**ಅನುವಾದ–** ಬುದ್ಧಿಗಳಿಗೆ ಜನಕನಾದವನು, ವಿಷ್ಣುವಿಗೆ ಜನಕನಾದವನು ಎಂದು ಶ್ರುತಿಯಲ್ಲಿ ಹೇಳಲ್ಪಟ್ಟವನೂ ವಿಪ್ರರಿಗೆ ಜ್ಞಾನೋಪದೇಶಕನೆಂದು ಶ್ರುತಿಯಲ್ಲಿ ಹೇಳಲ್ಪಟ್ಟವನೂ ಅವನು ಮಧ್ವ ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟವನೂ ಒಬ್ಬನೇ ಆಗಿರಬೇಕು. ಅವನು ಬ್ರಾಹ್ಮಣರಿಗೆ ವಿಷ್ಣುವಿಷಯಕಜ್ಞಾನವನ್ನು ಉಪದೇಶ ಮಾಡುವುದರಿಂದಲೂ ಲೋಕದಲ್ಲಿ ವಿಷ್ಣುವಿಷಯಕ ಯಥಾರ್ಥಜ್ಞಾನವನ್ನು ಉಂಟುಮಾಡುವುದರಿಂದಲೂ ಅವನು ವಿಷ್ಣುವಿಗೆ ಜನಕನೆಂದು ಶ್ರುತಿಯಲ್ಲಿ ಹೇಳಲ್ಪಟ್ಟಿದ್ದಾನೆ.

**ಭಾವವಿಲಾಸಿನೀ–** 'ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ । ಜನಿತಾಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತವಿಷ್ಣೋಃ । "ಬ್ರಹ್ಮಾದೇವಾನಾಂ ಪದವೀಃ ಕವೀನಾಮೃಷಿರ್ವಿಪ್ರಾಣಾಂ ಮಹಿಷೋ ಮೃಗಾಣಾಮ್ । ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವಾನಾನಾಂ ಸೋಮಃ ಪವಿತ್ರಮತ್ಯೇತಿರೇಭನ್ನ"ತಿ ಶ್ರುತಿತದ್ವಯಾರ್ಥಪರ್ಯಾ-ಲೋಚನಯಾಪಿ ಮಧ್ವಸ್ಯೈವಾತ್ರೋಕ್ತ ಸೋಮತ್ವಂ ಘಟತ ಇತ್ಯಾಹ – **ಮತೀನಾಂ ಜನಿತೇತ್ಯಾದಿನಾ** ॥

ಅಯಮರ್ಥಃ । ಉಪದೇಶಾದಿನಾ ಮತೀನಾಂ ಬುದ್ಧೀನಾಂ ಜನಿತಾ । "ಅಯಮಿಹಸುಮತಿಂ ವಾಯುದೇವೋ ವಿದಧ್ಯಾದಿ"ತಿ ವಚನಾತ್ । ಜೀವಜಡಾತ್ಮಕಪ್ರಪಂಚಸ್ಯ ಮಿಥ್ಯಾತ್ವಪ್ರತಿ-ಪಾದನೇನ ನಷ್ಟಪ್ರಾಯಸ್ಯ ಸತ್ಯತ್ವಸ್ಥಾಪನೇನ ಪುನಃಪ್ರಸವಾದ್ಯುಭ್ವಾದೀನಾಂಮಿಂದ್ರ ಪರ್ಯಂತಾನಾಂ ಜನಿತಾ। "ಉನ್ಮಥ್ಯಾ ತಥ್ಯಮಿಥ್ಯಾತ್ವವಚನವಚನಾನುತ್ಪಥಸ್ಥಾನಿ"ತಿ ವಚನಾತ್। "ಬ್ರಹ್ಮಾದೇವಾನಾಮಿ"ತ್ಯವ್ಯವಹಿತೋತ್ತರಸ್ಯಾವೃತ್ತಿ ದೇವಾನಾಂ ಮಧ್ಯೇ ಬ್ರಹ್ಮೇತಿ ವಾಯೋರೇವ ಚತುರ್ಮುಖಬ್ರಹತ್ವತ್ವಕಥನಾದ್ಧನಿಪೂರ್ವಗ್ಯತ್ವಾ ವಾಯ್ವಾದೀನಾಂ ಜನಿತಾ । ಬ್ರಹ್ಮಾಣಂ ಭಾವಿನಂ ತ್ವಾಮಿತಿ ವಚನಾತ್ । ಅಥವಾ "ಸಾಭ್ರೋಽಷ್ಮಾ ಭಿಶುಶುಭ್ರಪ್ರಭಮ-ಭಯನಭ" ಇತ್ಯಾದಿವಚನಾತ್ "ವಾಯುನಾ ವೈ ಗೌತಮೇ"ತಿ ಶ್ರುತೇಶ್ಚ ಮಹತ್ತತ್ವಾಭಿ-ಮಾನಿನೋ ವಾಯೋರಪ್ಯಹಂಕಾರಾದಿತಿತತ್ವಸ್ರಷ್ಟುತ್ವಸದ್ಭಾವಾತ್ ಸ್ವಮೂಲರೂಪಾ-ಪೇಕ್ಷಯೈವ ಮದ್ಧ್ವೇಽಪಿ ದಿವೋ ಜನಿತ್ಯೇತ್ಯಾದಿ ಯೋಜನೀಯಮ್।

ಸರ್ವೋತ್ತಮತ್ವಾದಿಮಹಿಮ್ನೋ ಜ್ಞಾಪನಾದ್ವಿಷ್ಣೋರ್ಜನಿತಾ । ಯಸ್ತಾ ವಿಜಾನಾತ್ ಸಪಿತುಃ ಪಿತೇತಿ ಶ್ರುತೇಃ। "ಅಜಸ್ರಸೇವಾನುವೃದ್ಧ ಪ್ರಾಜ್ಞಾತ್ಮಜ್ಞಾನ ಧೂತೇ"ತ್ಯಾದಿವಚನಾತ್ । ಸೋಮಃ ಸೋಮನಾಮಕೋ ವಾಯುಃಸೋಮವಚ್ಛಾಂತಮೂರ್ತಿರ್ಮಧ್ವಾಖ್ಯೋ ವಾಯೋ-ರವತಾರೋ ಅಯಮ ಸ್ವರೂಪೇಣ ವಾ । ಪವತೇ ಹಂಸಮಂತ್ರಜಪಾದಿನಾ- ಹರಿಸೇವಾರ್ಥಂ ಪವತೇ । ದೇವಾನಾಂ ಮಧ್ಯೇ ಬ್ರಹ್ಮಾ । ವಿಪ್ರಾಣಾಂ ಮಧ್ಯೇ ಋಷಿರ್ಜ್ಞಾನೋಪದೇಷ್ಟಾ ಗುರುರಿತ್ಯರ್ಥಃ। ಮೃಗಾಣಾಂ ಮಧ್ಯೇ ಮಹಿಷೋ ಬಲದೇವತಾತ್ವಾತ್ । ಬಲದಾಯಕತಯಾ ಮಹಿಷೇ ಸ್ಥಿತಃ। ಗೃಧ್ರಾಣಾಂ ಮಧ್ಯೇ ಶ್ಯೇನೋ ಬಲದಾಯಕತಯಾ ಶ್ಯೇನೇ ಸ್ಥಿತಃ। ವನಾನಾಂ ಭೇದಾಯ ಸ್ವಧಿತಿರ್ಬಲದಾಯಕತಯಾ ಪರಶ್ವಧೇ ಸ್ಥಿತಃ। ದ್ವಯೋಃ ಕುಠಾರಃ ಸ್ವಧಿತಿಃ ಪರಶುಶ್ಚ ಪರಶ್ವಧ ಇತ್ಯಮರಃ। ರೇಭನ್ ದೇಹಿನಾಂ ದೇಹೇ ಪ್ರಾಣಘೋಷಾಖ್ಯಂ ವಾ ಪ್ರತಿವಾದಿನಃ ಪ್ರತಿ ಹುಂಕಾರಾಖ್ಯಂ ವಾ ಗರ್ಜನಂ ಕುರ್ವನ್ । ರಿಭಶಬ್ದ ಇತಿಧಾತೋಃ । ಸೋಮಃ ಶೈತ್ಯದಾಯಕತಯಾ ಸೋಮೇ ಸ್ಥಿತಃ ಸೋಮನಾಮಕೋ ವಾಯುಃ ಕವೀನಾಂ ಜ್ಞಾನಿನಾಂ ಮೋಕ್ಷಂ ಪ್ರತಿ ಗಂತೄಣಾಂ ಪದವೀ ಮಾರ್ಗಾನ್ಮೋಕ್ಷ ಮಾರ್ಗಭೂತಾರ್ಚಿರಾದಿ-ವಿದ್ಯುದಂತದೇವತಾಲೋಕಾನ್ ಪವಿತ್ರಂ ಜ್ಯೋತಿಶ್ಚಕ್ರಂ ಚಾತ್ಯೇತ್ಯತಿಕ್ರಮ್ಯ ವರ್ತತೇ । ಸರ್ವಸ್ಮಾದುಪರಿತನಲೋಕಾಧಿಪತಿರಿತಿ ಭಾವಃ । ತತ್‌ಪುರುಷೋ ಮಾನವಃ ಸ ಏನಾಂ ಬ್ರಹ್ಮಗಮಯತೀತಿ ಶ್ರುತೇಃ । "ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾ" ಇತಿ ವಚನಾತ್ । ಇಮಮೇವಾರ್ಥಂ ಪ್ರಪಂಚಯಿತುಂ ಉಕ್ತಂ ಮತೀನಾಂ ಜನಿತೇತ್ಯಾದಿ ॥ ೫೧೭-೫೧೯ ॥

**ವಿವರಣೆ**– ಇಲ್ಲಿ ಅದೇ ವರ್ಗದ ಕೊನೆಯ ಮಂತ್ರವನ್ನೂ ಮುಂದಿನ ವರ್ಗದ ಮೊದಲನೆಯ ಮಂತ್ರವನ್ನೂ ರಾಜರು ಸಂಗ್ರಹಿಸಿ ಹೇಳುತ್ತಿದ್ದಾರೆ. ಆ ಮಂತ್ರಗಳು ಹೀಗಿವೆ-'ಸೋಮಃ ಪವತೇ ಜನಿತಾ ಮತೀನಾಂ ಜನಿತಾ ದಿವೋ ಜನಿತಾ ಪೃಥಿವ್ಯಾಃ । ಜನಿತಾಽಗ್ನೇರ್ಜನಿತಾ ಸೂರ್ಯಸ್ಯ ಜನಿತೇಂದ್ರಸ್ಯ ಜನಿತೋತ ವಿಷ್ಣೋಃ ॥" ಮತ್ತು "ಬ್ರಹ್ಮಾದೇವಾನಾಂ ಪದವೀಃ ಕವೀನಾಮ್ ಋಷಿರ್ವಿಪ್ರಾಣಾಂ ಮಹಿಷೋ

ಮೃಗಾಣಾಮ್ । ಶ್ಯೇನೋ ಗೃಧ್ರಾಣಾಂ ಸ್ವಧಿತಿರ್ವನಾನಾಂ ಸೋಮಃ ಪವಿತ್ರಮತ್ಯೇತಿ ರೇಭನ್' ಈ ಎರಡು ಮಂತ್ರಗಳ ಅರ್ಥವು ಹೀಗಿದೆ - ಮತೀನಾಂ ಬುದ್ಧಿಗಳಿಗೆ (ಉಪದೇಶ ಮಾಡುವುದರಿಂದ) ಜನಿತಾ = ಜನಕನಾದವನು, 'ಆಯಮಿಹಸುಮತಿಂ ವಾಯುದೇವೋ ವಿದಧ್ಯಾತ್' ಎಂಬ ವಚನದಿಂದ ಈ ಅರ್ಥವು ದೊರೆಯುತ್ತದೆ. ದಿವಃ = ದ್ಯುಲೋಕಕ್ಕೆ, ಜನಿತಾ = ಜನಕನಾದವನು, ಪೃಥಿವ್ಯಾಃ = ಪೃಥಿವೀಲೋಕಕ್ಕೆ ಜನಕನಾದವನು, ಅಗ್ನೇಃ = ಅಗ್ನಿಗೆ ಜನಿತಾ = ಜನಕನಾದವನು, ಸೂರ್ಯಸ್ಯ = ಸೂರ್ಯನಿಗೆ, ಜನಿತಾ = ಜನಕನಾದವನು, ಇಂದ್ರಸ್ಯ = ಇಂದ್ರನಿಗೆ, ಜನಿತಾ = ಜನಕನಾದವನು, ಜೀವಜಡಾತ್ಮಕ ಪ್ರಪಂಚಕ್ಕೆ ಮಿಥ್ಯಾತ್ವವನ್ನು ಪ್ರತಿಪಾದನೆ ಮಾಡುವುದರಿಂದ ನಷ್ಟವಾದಂತಿದ್ದ ಆ ಪ್ರಪಂಪಕ್ಕೆ ಸತ್ಯತ್ವವನ್ನು ಸ್ಥಾಪಿಸಿ, ಪುನಃ ಉಜ್ಜೀವನಗೊಳಿಸಿದ್ದರಿಂದ ವಾಯುದೇವರು ಭೂಲೋಕದಿಂದ ಹಿಡಿದು ಇಂದ್ರನವರೆಗೆ ಎಲ್ಲರಿಗೂ ಜನಕರೆನಿಸುತ್ತಾರೆ. ''ಉನ್ಮಥ್ಯಾತಥ್ಯಮಿಥ್ಯಾತ್ವ ವಚನವಚನಾನುತ್ಪಥಸ್ಥಾನ್'' ಎಂಬ ವಚನದಿಂದ ಈ ಅರ್ಥವು ದೊರೆಯುತ್ತದೆ. ''ಬ್ರಹ್ಮಾದೇವಾನಾಮ್'' ಎಂಬ ಮುಂದಿನ ಮಂತ್ರದಲ್ಲಿ ದೇವತೆಗಳ ಮಧ್ಯದಲ್ಲಿ ಬ್ರಹ್ಮ ಎಂದು, ವಾಯುದೇವರಿಗೆ ಚತುರ್ಮುಖಬ್ರಹ್ಮಪದವಿಯ ಪ್ರಾಪ್ತಿಯನ್ನು ಹೇಳುವುದರಿಂದ, ವಾಯುದೇವರಿಗೂ ದ್ಯುಭ್ವಾದಿಜನಕತ್ವವು ಕೂಡುತ್ತದೆ. ''ಬ್ರಹ್ಮಾಣಂ ಭಾವಿನಂ ತ್ವಾಮ್'' ಎಂಬ ವಚನದಿಂದಲೂ, ''ಸಾಭ್ರೋಷ್ಣಾ ಭೀಶುಶುಭ್ರ'' ಎಂಬ ವಚನದಿಂದಲೂ, ''ವಾಯುನಾ ವೈ ಗೌತಮ'' ಎಂಬ ಶ್ರುತಿಯಿಂದಲೂ ಮಹತ್ತತ್ವಾಭಿಮಾನಿಗಳಾದ ವಾಯುದೇವರಿಗೆ ಅಹಂಕಾರಾದಿತತ್ವಸೃಷ್ಟಿಕರ್ತೃತ್ವವಿರುವುದರಿಂದಲೂ ಮಧ್ವರಿಗೆ ಮೂಲರೂಪದ ವಿವಕ್ಷೆಯಿಂದ ಭೂಲೋಕಾದಿಜನಕತ್ವವನ್ನು ಕೂಡಿಸಬೇಕು. ವಿಷ್ಣುವಿನಲ್ಲಿ ಸರ್ವೋತ್ತಮತ್ವಾದಿಮಹಿಮೆಗಳನ್ನು ತಿಳಿಸುವುದರಿಂದ ವಿಷ್ಣುವಿಗೆ ಜನಕನಾದವನು. ''ಯಸ್ತಾ ವಿಜಾನಾತ್ ಸಪಿತುಃ ಪಿತಾ'' ಎಂಬ ಶ್ರುತಿಯಿಂದಲೂ ''ಅಜಸ್ರಸೇವಾನುವೃದ್ಧ ಪ್ರಾಜ್ಞಾತ್ಮಜ್ಞಾನಧೂತ್'' ಎಂಬ ವಚನದಿಂದಲೂ ಈ ಅರ್ಥವು ದೊರೆಯುತ್ತದೆ. 'ಸೋಮಃ' ಎಂದರೆ ವಾಯುದೇವರು ಅಥವಾ ಚಂದ್ರನಂತೆ ಶಾಂತಮೂರ್ತಿಗಳಾದ ವಾಯುದೇವರ ಅವತಾರವಾದ ಮಧ್ವರು, ಪವತೇ = ಹಂಸಮಂತ್ರಜಪ ಮೊದಲಾದ ಮಹಿಮೆಗಳನ್ನು ತಿಳಿಸಲು ಹರಿಯ ಸೇವೆಗೋಸ್ಕರವಾಗಿ ಸಂಚರಿಸುತ್ತಾರೆ. ಎರಡನೆಯ ಮಂತ್ರದ ಅರ್ಥ ಹೀಗಿದೆ - ವಾಯುದೇವರು ದೇವಾನಾಂ = ದೇವತೆಗಳ ಮಧ್ಯದಲ್ಲಿ, ಬ್ರಹ್ಮಾ = ಬ್ರಹ್ಮದೇವರಾಗುತ್ತಾರೆ, ವಿಪ್ರಾಣಾಂ = ಬ್ರಾಹ್ಮಣರ ಮಧ್ಯದಲ್ಲಿ, ಋಷಿಃ = ಜ್ಞಾನೋಪದೇಶದ ಗುರುಗಳು. ಮೃಗಾಣಾಂ = ಮೃಗಗಳ ಮಧ್ಯದಲ್ಲಿ, ಮಹಿಷಃ = ಬಲದೇವತೆಯಾದ್ದರಿಂದ ಬಲದಾಯಕರಾಗಿ ಮಹಿಷಯದಲ್ಲಿ ಇದ್ದಾರೆ. ಗೃಧ್ರಾಣಾಂ = ಪಕ್ಷಿಗಳ ಮಧ್ಯದಲ್ಲಿ, ಶ್ಯೇನಃ = ಬಲದಾಯಕರಾಗಿ ಶ್ಯೇನಪಕ್ಷಿಯಲ್ಲಿ ಇದ್ದಾರೆ. ವನಾನಾಂ = ವನಗಳನ್ನು ಛೇದಿಸುವ ವಿಷಯದಲ್ಲಿ, ಸ್ವಧಿತಿಃ = ಬಲದಾಯಕರಾಗಿ ಪರಶುವಿನಲ್ಲಿ ಇದ್ದಾರೆ. ರೇಭನ್ = ಗರ್ಜನೆಯನ್ನು ಮಾಡುತ್ತಾ, ಸೋಮಃ = ಶೈತ್ಯದಾಯಕರಾಗಿ

ಚಂದ್ರನಲ್ಲಿ ಇದ್ದು ಸೋಮನಾಮಕರಾದ ವಾಯುದೇವರು, ಕವೀನಾಂ = ಜ್ಞಾನಿಗಳ ಮೋಕ್ಷವನ್ನು ಕುರಿತು ಹೋಗುವವರ, ಪದವೀಃ = ಮಾರ್ಗಗಳನ್ನು ಎಂದರೆ ಅರ್ಚಿರಾದಿವಿದ್ಯುದಂತವಾದ ಮೋಕ್ಷಮಾರ್ಗದಲ್ಲಿರುವ ಎಲ್ಲಾ ಲೋಕಗಳನ್ನೂ ಪವಿತ್ರಂ = ಜ್ಯೋತಿಶ್ಚಕ್ರವನ್ನೂ ಅತ್ಯೇತಿ = ಮೀರಿ ಸ್ಥಿತರಾಗಿದ್ದಾರೆ. ಇವೆಲ್ಲಕ್ಕಿಂತಲೂ ಮೀರಿರುವ ಲೋಕದ ಅಧಿಪತಿಗಳು ಎಂದು ಅಭಿಪ್ರಾಯ. 'ತತ್‌ಪುರುಷೋ ಮಾನವಃ', 'ಸ ಏನಾನ್ ಬ್ರಹ್ಮಗ್ರಮಯತಿ', ''ಜ್ವಲತಿ ನಿಜಪದೇ ವೈದಿಕಾದ್ಯಾ ಹಿ ವಿದ್ಯಾಃ'' ಎಂಬ ವಚನಗಳಿಂದ ಈ ಅರ್ಥವು ದೊರೆಯುತ್ತದೆ. ಈ ಅರ್ಥವನ್ನೇ ವಿಸ್ತಾರವಾಗಿ ಹೇಳಲು 'ಮತೀನಾಂ ಜನಿತಾ' ಇತ್ಯಾದಿಗಳನ್ನು ಹೇಳಿದ್ದಾರೆ.

ಯಸ್ತಾ ವಿಜಾನಾತ್ ಸ ಪಿತುಃ ಪಿತೇತ್ಯಸ್ತಿ ಯತಃ ಶ್ರುತಿಃ ।
ದೇಶಕಾಲಗುಣವ್ಯಾಪ್ತವಿಷ್ಣೋರ್ಜನ್ಮೇದಮೇವ ಹಿ ।
ಯತಃ ಪ್ರಾಗಸತಃ ಸತ್ತಾ ಕಾಲವ್ಯಾಪ್ತೇ ನ ಶೋಭತೇ ॥ ೫೧೯ ॥

**ಅರ್ಥ–** ಯತಃ = ಯಾವ ಕಾರಣದಿಂದ, ಯಃ = ಯಾವನು, ತಾಃ = ಆ ದೇವರ ಅಥವಾ ಹರಿಯ ಮೂರ್ತಿಗಳನ್ನು, ವಿಜಾನಾತ್ = ತಿಳಿಯುತ್ತಾನೆಯೋ, ಸಃ = ಅವನು, ಪಿತುಃ = ಜಗತ್ತಿಗೆ ತಂದೆಯಾದ ಹರಿಯ, ಪಿತಾ ಇತಿ = ತಂದೆಯೆಂದು, ಶ್ರುತಿಃ = ಶ್ರುತಿಯಿರುವುದರಿಂದ, ದೇಶಕಾಲಗುಣವ್ಯಾಪ್ತ ವಿಷ್ಣೋಃ = ದೇಶ , ಕಾಲ ಮತ್ತು ಗುಣಗಳಿಂದ ವ್ಯಾಪ್ತನಾದ ವಿಷ್ಣುವಿಗೆ, ಜನ್ಮ= ಜನನವೆಂದರೆ, ಇದಮೇವ ಹಿ = ಉಪದೇಶಿಸಿದ ಈ ಅಭಿವ್ಯಕ್ತಿಯೇ ಆಗಬೇಕಷ್ಟೇ. ಯತಃ = ಏಕೆಂದರೆ, ಪ್ರಾಗಸತಃ = ಮೊದಲು ಇಲ್ಲದಿದ್ದ ವಸ್ತುವಿಗೆ, ಸತ್ತಾ = ಅನಂತರ ಸದ್ಭಾವ ಎಂಬುದು, ಕಾಲವ್ಯಾಪ್ತೇ = ಕಾಲದಿಂದ ವ್ಯಾಪ್ತನಾದ ಎಂದರೆ ನಿತ್ಯನಾದ ಹರಿಗೆ (ವಸ್ತುವಿಗೆ), ನ ಶೋಭತೇ = ಶೋಭಿಸುವುದಿಲ್ಲ.

**ಅನುವಾದ–** ಯಾವನು ಭಗವಂತನನ್ನು ತಿಳಿಯುತ್ತಾನೆಯೋ, ಅವನು ಜಗತ್ತಿಗೆ ತಂದೆಯಾದ ಭಗವಂತನಿಗೂ ತಂದೆ ಎಂದು ಶ್ರುತಿಯು ಇರುವುದರಿಂದ, ದೇಶ, ಕಾಲ ಮತ್ತು ಗುಣಗಳಿಂದ ವ್ಯಾಪ್ತನಾದ ವಿಷ್ಣುವಿಗೆ ಉಪದೇಶದಿಂದ ಉಂಟಾಗುವ ಜ್ಞಾನದ ಅಭಿವ್ಯಕ್ತಿಯನ್ನೇ ಜನ್ಮವೆಂದು ಹೇಳಬೇಕು. ಏಕೆಂದರೆ ನಿತ್ಯವಾದ ವಸ್ತುವಿಗೆ ಮೊದಲು ಇಲ್ಲದೆ ಅನಂತರ ಸದ್ಭಾವ ಎಂಬ ಜನನವು ಕೂಡುವುದಿಲ್ಲ.

ದ್ಯಾವಾಪೃಥಿವ್ಯಾದಿಜನ್ಮಹೇತುತ್ವಂ ಬ್ರಹ್ಮಣೋ ಗುಣಂ ।
ಐಕ್ಯಾದ್ ಘಟಯಿತುಂ ಬ್ರಹ್ಮಾ ದೇವಾನಾಮಿತಿ ತಂ ಜಗೌ ॥ ೫೨೦ ॥

**ಅರ್ಥ–** ದ್ಯಾವಾಪೃಥಿವ್ಯಾದಿಜನ್ಮಹೇತುತ್ವಂ = ದ್ಯಾವಾಪೃಥಿವಿ ಮೊದಲಾದವುಗಳ ಜನ್ಮಹೇತುತ್ವರೂಪವಾದ, ಬ್ರಹ್ಮಣಃ = ಬ್ರಹ್ಮನ, ಗುಣಂ = ಗುಣವನ್ನು, ಐಕ್ಯಾತ್ =

ವಾಯುದೇವರೇ ಮುಂದೆ ಬ್ರಹ್ಮದೇವರಾಗುವುದರಿಂದ ಆ ಐಕ್ಯದಿಂದ, ಘಟಯಿತುಂ = ಘಟನೆ ಮಾಡಲು, ಬ್ರಹ್ಮಾ ದೇವಾನಾಮ್ = ದೇವತೆಗಳಲ್ಲಿ ಬ್ರಹ್ಮರಾದವರು, ಇತಿ = ಎಂದು, ತಂ = ವಾಯುದೇವರನ್ನು, ಜಗೌ = ಹೇಳಿತು.

**ಅನುವಾದ–** ದ್ಯಾವ್ಯಾಪೃಥಿವ್ಯಾದಿ ಜನ್ಮಹೇತುತ್ವವು ಬ್ರಹ್ಮದೇವರ ಗುಣ. ವಾಯುದೇವರಿಗೆ ಅದನ್ನು ಐಕ್ಯದಿಂದ ಘಟನೆ ಮಾಡಲು ಮಧ್ವರನ್ನು ಶ್ರುತಿಯು ದೇವತೆಗಳ ಮಧ್ಯದಲ್ಲಿ ಬ್ರಹ್ಮದೇವರು ಎಂದು ಹೇಳಿತು.

**ಭಾವವಿಲಾಸಿನೀ–** ಯೋ ಮಧ್ವಸ್ತಮ್ ॥ ೫೨೦ ॥

**ಬಾಧಾಭಾವೇ ತು ವಾಕ್ಯಾನಾಮರ್ಥೋ ವಾಚ್ಯೋ ಯಥಾಶ್ರುತಃ ।**
**ಬಾಧಿತಾರ್ಥಂ ತು ಯದ್ವಾಕ್ಯಂ ತತ್ ಸಂಬಂಧಾದಿಕಂ ವದೇತ್ ॥ ೫೨೧ ॥**

**ಅರ್ಥ–** ಬಾಧಾಭಾವೇ ತು = ಬಾಧವು ಇಲ್ಲದಿದ್ದರೆ, ವಾಕ್ಯಾನಾಮ್ = ವಾಕ್ಯಗಳಿಗೆ, ಯಥಾಶ್ರುತಃ ಅರ್ಥಃ = ಸಹಜವಾಗಿ ತೋರುವ ಅರ್ಥವೇ, ವಾಚ್ಯಃ = ಹೇಳಲ್ಪಡಬೇಕು, ಯದ್ವಾಕ್ಯಂ = ಯಾವ ವಾಕ್ಯವು, ಬಾಧಿತಾರ್ಥಂ ತು = ಬಾಧಿತಾರ್ಥವಾಗುತ್ತದೆಯೋ, ತತ್ = ಆ ವಾಕ್ಯವು, ಸಂಬಂಧಾದಿಕಂ = ಸಂಬಂಧ ಮತ್ತು ಸಾದೃಶ್ಯಗಳನ್ನು, ವದೇತ್ = ಹೇಳುತ್ತದೆ.

**ಅನುವಾದ–** ಬಾಧವು ಇಲ್ಲದಿದ್ದರೆ ಮಾತ್ರ ವಾಕ್ಯಗಳಿಗೆ ಯಥಾಶ್ರುತವಾದ ಅರ್ಥವನ್ನೇ ಹೇಳಬೇಕು. ಯಥಾಶುತ್ರಾರ್ಥವು ಬಾಧಿತವಾದರೆ ಮಾತ್ರ ಆ ವಾಕ್ಯವು ಸನ್ನಿಧಾನವನ್ನು ಅಥವಾ ಸಾದೃಶ್ಯವನ್ನು ಹೇಳುತ್ತದೆ.

**ಭಾವವಿಲಾಸಿನೀ–** ತದ್ವಾಕ್ಯಮ್ । ಸಂಬಂಧಃ ಸನ್ನಿಧಾನಾದಿಕಮ್ । ಆದಿಪದೇನ ಸಾದೃಶ್ಯಂ ಗೃಹ್ಯತೇ ॥ ೫೨೧ ॥

**ವಿವರಣೆ–** ಬ್ರಹ್ಮಾ ದೇವಾನಾಂ ಎಂಬಲ್ಲಿ ವಾಯುದೇವರಲ್ಲಿ ನೇರವಾಗಿ ಬ್ರಹ್ಮನ ಅಭೇದವನ್ನು ಹೇಳಬೇಕೋ, ಅಥವಾ ಬ್ರಹ್ಮನ ಸನ್ನಿಧಾನವನ್ನು ಹೇಳಬೇಕೋ ಎಂಬ ಪ್ರಶ್ನೆಯಿದೆ. ವಾಯುದೇವರೇ ಮುಂದೆ ಬ್ರಹ್ಮದೇವರಾಗುವರೆಂದು ಪ್ರಮಾಣವಿರುವುದರಿಂದ, ಭಾವಿವಿವಕ್ಷೆಯಿಂದ ಅಭೇದವನ್ನು ಗಮನಿಸಿ ಯಥಾಶ್ರುತವಾದ ಅರ್ಥವನ್ನೇ ಗ್ರಹಿಸಬೇಕು ಎಂದು ಅಭಿಪ್ರಾಯ.

**ಅಥವಾ ಪವನಂ ನಾಮ ಮರುತೋ ಗಮನಂ ಕಿಲ ।**
**ಮತೀನಾಂ ಜನ್ಮ ಕಿಂ ತೇನ ದಿವೋ ಜನ್ಮ ಭುವಶ್ಚ ಕಿಂ ।**
**ವಿಷ್ಣೋರ್ಜನ್ಮ ತತಃ ಕಿಂ ಸ್ಯಾತ್ತತ್ರತತ್ರೋಪದೇಶನಾತ್ ॥ ೫೨೨ ॥**

**ಮಧ್ವಾಖ್ಯದಿವ್ಯರೂಪೇಣ ಮತೀನಾಂ ಜನಕೋಽಪ್ಯಭೂತ್ ।**
**ದ್ಯುಭ್ವಾದೇರ್ಜನಕಶ್ಚಾಭೂನ್ಮಿಥ್ಯಾತ್ವಪ್ರವಿಮೋಚನಾತ್ ॥ ೫೨೩ ॥**

**ಅರ್ಥ–** ಅಥವಾ = ಅಥವಾ, ಪವನಂ ನಾಮ = ಪವನ ಎಂದರೆ, ಮರುತಃ = ವಾಯುವಿನ, ಗಮನಂ ಕಿಲ = ಸಂಚಾರವಷ್ಟೇ, ತೇನ = ಆ ಪವನದಿಂದ (ಸಂಚಾರದಿಂದ) ಮತೀನಾಂ = ಬುದ್ಧಿಗಳಿಗೆ, ಕಿಂ ಜನ್ಮ = ಏನು ಜನ್ಮ?, ದಿವಃ = ದ್ಯುಲೋಕಕ್ಕೆ, ಕಿಂ ಜನ್ಮ = ಏನು ಜನ್ಮ?, ಭುವಶ್ಚ = ಭೂಲೋಕಕ್ಕೂ, ಕಿಂ ಜನ್ಮ = ಏನು ಜನ್ಮ ?, ತತಃ = ಆ ಗಮನದಿಂದ, ವಿಷ್ಣೋಃ = ವಿಷ್ಣುವಿಗೆ, ಕಿಂ ಜನ್ಮಸ್ಯಾತ್ = ಯಾವ ಜನ್ಮವು ಉಂಟಾಗುತ್ತದೆ? ಆದ್ದರಿಂದ, ತತ್ರತತ್ರ = ಅಲ್ಲಲ್ಲಿ ಸಜ್ಜನರಲ್ಲಿ, ಉಪದೇಶನಾತ್ = ಉಪದೇಶ ಮಾಡುವುದರಿಂದ, ಮಧ್ವಾಖ್ಯದಿವ್ಯರೂಪೇಣ = ಮಧ್ವ ಎಂಬ ದಿವ್ಯರೂಪದಿಂದ, ಮತೀನಾಂ ಜನಕೋಽಪಿ ಅಭೂತ್ = ಬುದ್ಧಿಯ ಜನಕರೂ ಆದರು. ಮಿಥ್ಯಾತ್ವಪ್ರವಿಮೋಚನಾತ್ = ಮಿಥ್ಯಾತ್ವವನ್ನು ನಿರಾಕರಿಸುವುದರಿಂದ, ದ್ಯುಭ್ವಾದೇಃ = ದ್ಯುಲೋಕ, ಭೂಲೋಕ ಮೊದಲಾದವುಗಳಿಗೆ, ಜನಕಶ್ಚ= ಜನಕರೂ, ಅಭೂತ್ = ಆದರು.

**ಅನುವಾದ–** ಅಥವಾ ಪವನ ಎಂದರೆ, ವಾಯುವಿನ ಗಮನವಷ್ಟೇ. ಅದರಿಂದ ಬುದ್ಧಿಗಳ ಜನ್ಮವೆಂದರೇನು? ದ್ಯುಲೋಕದ ಜನ್ಮವೆಂದರೇನು? ಭೂಲೋಕದ ಜನ್ಮವೆಂದರೇನು? ಆದರಿಂದ ವಿಷ್ಣುವಿಗಾದರೂ ಎಂತಹ ಜನ್ಮ ಉಂಟಾಗುತ್ತದೆ? ಆದ್ದರಿಂದ ಅಲ್ಲಲ್ಲಿ ಸಜ್ಜನರಿಗೆ ಉಪದೇಶ ಮಾಡುವುದರಿಂದ ವಾಯುದೇವರು ಮಧ್ವ ಎಂಬ ದಿವ್ಯರೂಪದಿಂದ ಬುದ್ಧಿಯ ಜನಕರೂ ಆದರು. ಮಿಥ್ಯಾತ್ವವನ್ನು ನಿರಾಕರಣ ಮಾಡುವುದರಿಂದ, ದ್ಯುಲೋಕ, ಭೂಲೋಕಾದಿಗಳಿಗೆ ಜನಕರೂ ಆದರು.

**ಭಾವವಿಲಾಸಿನೀ–** ದಿವೋ ಜನಿತೇತ್ಯಾದೇಃ ಸಯುಕ್ತಿಕಮರ್ಥಾಂತರಂ ವಕ್ತುಮಾಹ – **ಅಥವೇತಿ** ॥ ತೇನ ಪವನೇನ । ತತೋ ವಾಯೋರ್ಗಮನಾತ್ ಶ್ವಾಸೋಚ್ಛ್ವಾಸಾದಿರೂಪೇಣ ಪವನೇಽಪಿ ಜೀವನಹೇತುತ್ವೈವ ಸ್ಯಾನ್ನ ತು ಜನ್ಮಹೇತುತಾ । ದ್ಯುಭ್ವಾದಿಲೋಕೇಷು ಶ್ವಾಸೋಚ್ಛ್ವಾಸಾ-ದೇರಪ್ಯಭಾವಾದಿತಿ ಭಾವಃ । ಕಿಂ ತರ್ಹಿ ಜನ್ಮೇತ್ಯತ ಆಹ – **ತತ್ರ ತತ್ರೇತಿ** ॥ ೫೨೨-೫೨೩ ॥

ನೀಚೈಕ್ಯನಿರ್ಗುಣತ್ವಾದೇರ್ನಿರಾಕರಣತಃ ಪ್ರಭೋಃ ।
ವಿಷ್ಣೋಶ್ಚ ಜನಕೋಽಪ್ಯಾಸೀದ್ ಭಯತ್ರಾತಾ ಪಿತಾ ಕಿಲ ॥ ೫೨೪ ॥

**ಅರ್ಥ–** ಪ್ರಭೋಃ = ಪ್ರಭುವಾದ ವಿಷ್ಣುವಿಗೆ, ನೀಚೈಕ್ಯನಿರ್ಗುಣತ್ವಾದೇಃ = ನೀಚೈಕ್ಯ ಮತ್ತು ನಿರ್ಗುಣತ್ವಾದಿಗಳನ್ನು, ನಿರಾಕರಣತಃ = ನಿರಾಕರಣ ಮಾಡುವುದರಿಂದ, ವಿಷ್ಣೋಶ್ಚ = ವಿಷ್ಣುವಿಗೂ, ಜನಕೋಽಪಿ = ಜನಕರೂ, ಆಸೀತ್ = ಆದರು. ಭಯತ್ರಾತಾ = ಭಯದಿಂದ ರಕ್ಷಿಸುವವನು, ಪಿತಾ ಕಿಲ = ತಂದೆಯಷ್ಟೇ.

**ಅನುವಾದ–** ಪ್ರಭುವಾದ ವಿಷ್ಣುವಿಗೆ ನೀಚಜೀವೈಕ್ಯವನ್ನು ನಿರ್ಗುಣತ್ವಾದಿಗಳನ್ನು ನಿರಾಕರಣ ಮಾಡುವುದರಿಂದ ಅವರು ವಿಷ್ಣುವಿಗೂ ಜನಕರಾದರು. ಭಯದಿಂದ ರಕ್ಷಿಸುವವನು ತಂದೆಯಷ್ಟೆ?

**ಭಾವವಿಲಾಸಿನೀ–** ಕಿಲೇತ್ಯನೇನ ''ಜನಿತಾ ಚೋಪನೀತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾ'' ಇತಿ ವಚನಂ ಸೂಚಯತಿ । ಸರ್ವೋತ್ತಮೇ ಸರ್ವಗುಣಪೂರ್ಣೇ ಚ ಹರೌ ನೀಚೈಕ್ಯನಿರ್ಗುಣತ್ವಾದೇರ್ಭಯರೂಪತ್ವಾತ್ ಸತ್ಯಸ್ಯ ಜಗತೋಮಿಥ್ಯಾತ್ವಸ್ಯಾಪಿ ಭಯರೂಪತ್ವಾತ್ತನ್ಮೋಚಕೋ ಮಧ್ವೋ ಹರೇರ್ಜಗತಶ್ಚ ತ್ರಾತೃತಯಾ ಪಿತೇತಿ ಭಾವಃ ॥ ೫೨೪ ॥

**ವಿವರಣೆ–** ಸರ್ವೋತ್ತಮನಾದ ಸರ್ವಗುಣಪರಿಪೂರ್ಣನಾದ ಹರಿಯಲ್ಲಿ ನೀಚೈಕ್ಯ ನಿರ್ಗುಣತ್ವಾದಿಗಳು ಭಯರೂಪವಾದವುಗಳು. ಸತ್ಯವಾದ ಜಗತ್ತಿಗೆ ಮಿಥ್ಯಾತ್ವವು ಭಯರೂಪವಾದುದು. ಮಧ್ವರು ಆ ಮಿಥ್ಯಾತ್ವವನ್ನೂ ನೀಚೈಕ್ಯವನ್ನೂ ನಿರಾಕರಣೆ ಮಾಡಿ, ಆ ಎರಡರ ಸ್ವರೂಪವನ್ನು ರಕ್ಷಣೆ ಮಾಡಿದ್ದರಿಂದ ತಂದೆಯೆನಿಸುತ್ತಾರೆ. ರಕ್ಷಣೆ ಮಾಡಿದವರನ್ನು ತಂದೆ ಎಂಬುದನ್ನು 'ಜನಿತಾ ಚೋಪನೀತಾ ಚ ಯಸ್ತು ವಿದ್ಯಾಂ ಪ್ರಯಚ್ಛತಿ । ಅನ್ನದಾತಾ ಭಯತ್ರಾತಾ ಪಂಚೈತೇ ಪಿತರಃ ಸ್ಮೃತಾಃ' ಎಂಬ ಶ್ರುತಿಯು ಹೇಳುತ್ತದೆ.

ಸ್ವಸ್ಯ ಸ್ವಜಗತಶ್ಚೇತ್ಥಂ ಸ್ಥಾಪನಾತ್ ಪರಿತುಷ್ಯತಾ ।
ಸತ್ಯಲೋಕಾಧಿಪತ್ಯೇ ಚ ದತ್ತೇ ಬ್ರಹ್ಮಾಪಿ ಸೋಽಭವತ್ ॥ ೫೨೫ ॥

**ಅರ್ಥ–** ಸ್ವಸ್ಯ = ತನಗೂ, ಚ = ಮತ್ತು, ಸ್ವಜಗತಃ = ತನ್ನ ಪ್ರಪಂಚಕ್ಕೂ, ಇತ್ಥಂ = ಈ ರೀತಿಯಾಗಿ, ಸ್ಥಾಪನಾತ್ = ಸತ್ಯತ್ವವನ್ನು ಸ್ಥಾಪನೆ ಮಾಡುವುದರಿಂದ, ಪರಿತುಷ್ಯತಾ = ಸಂತೋಷಗೊಂಡ ಹರಿಯಿಂದ, ಸತ್ಯಲೋಕಾಧಿಪತ್ಯೇ ಚ = ಸತ್ಯಲೋಕಾಧಿಪತ್ಯವೂ ಕೂಡ, ದತ್ತೇ = ಕೊಡಲ್ಪಡುತ್ತಿರಲು, ಸ = ಆ ಮಧ್ವರು, ಬ್ರಹ್ಮಾಪಿ ಅಭವತ್ = ಬ್ರಹ್ಮದೇವರೂ ಆದರು.

**ಅನುವಾದ–** ತನ್ನನ್ನು ಮತ್ತು ತನ್ನಿಂದ ಸೃಷ್ಟಿಯಾದ ಜಗತ್ತಿಗೆ ಈ ರೀತಿ ಸತ್ಯತ್ವವನ್ನು ಪ್ರತಿಪಾದಿಸಿ ಸ್ಥಾಪನೆ ಮಾಡಿದ್ದರಿಂದ ಸಂತುಷ್ಟಗೊಂಡ ಹರಿಯು ಅವರಿಗೆ ಸತ್ಯಾಲೋಕಾಧಿಪತ್ಯವನ್ನೂ ಕೊಟ್ಟಾಗ, ಆ ಮಧ್ವರು ಬ್ರಹ್ಮರೂ ಆದರು.

**ಭಾವವಿಲಾಸಿನೀ–** ಅಸ್ಮಿನ್ ಪಕ್ಷೇ ''ಬ್ರಹ್ಮಾ ದೇವಾನಾಮಿ''ತ್ಯುತ್ತರಶ್ರುತೇಃ ಕಾ ಸಂಗತಿರಿತ್ಯತ ಆಹ – ಸ್ವಸ್ಯೇತಿ ॥ ಸ ಮಧ್ವಃ ॥ ೫೨೫ ॥

**ವಿವರಣೆ–** ಮಧ್ವರು ದ್ಯುಭ್ವಾದಿಲೋಕಗಳಿಗೂ, ಮತ್ತು ವಿಷ್ಣುವಿಗೂ ಜನಕರಾದರು ಎಂಬ ಅರ್ಥವನ್ನು ಹೇಳಿದಾಗ 'ಬ್ರಹ್ಮಾ ದೇವಾನಾಮ್' ಎಂಬ ಮುಂದಿನ ಮಂತ್ರಕ್ಕೆ ಏನು ಸಂಗತಿ ಎಂಬುದನ್ನು ಇಲ್ಲಿ ಹೇಳುತ್ತಾರೆ. ಮುಂದಿನ ಮಂತ್ರದಲ್ಲಿಯೂ ಮಧ್ವರಿಗೇ ಬ್ರಹ್ಮತ್ವವನ್ನು ಹೇಳುವುದರಿಂದ ಸಂಗತಿಯಿದೆ ಎಂದು ಅಭಿಪ್ರಾಯ.

ವಿಪ್ರಾಣಾಮೃಷಿರಪ್ಯಾಸೀದ್ ಯಸ್ತಾನಿತ್ಥಮಶಿಕ್ಷಯತ್ ।
ಸ ಏವ ಬಲದೇವೋಽಭೂತ್ ಯದ್ಬಲಾದ್ ಬಲಿನಾಂ ಬಲಮ್ ॥ ೫೨೬ ॥

**ಅರ್ಥ–** ಯಃ = ಯಾವ ಮಧ್ವರು, ತಾನ್ = ಆ ವಿಪ್ರರನ್ನು (ವಿಪ್ರರಿಗೆ), ಇತ್ಥಂ = ಈ ರೀತಿಯಾಗಿ, ಅಶಿಕ್ಷಯತ್ = ತಮ್ಮ ಉಪದೇಶದಿಂದ ಶಿಕ್ಷಣವನ್ನು ನೀಡಿದರೋ, ಅಂತಹ ಮಧ್ವರು, ವಿಪ್ರಾಣಾಮ್ = ಬ್ರಾಹ್ಮಣರಿಗೆ, ಋಷಿರಪಿ = ಜ್ಞಾನೋಪದೇಶವನ್ನು ಮಾಡುವವರೂ ಕೂಡ, ಆಸೀತ್ = ಆದರು. ಸ ಏವ = ಆ ವಾಯುದೇವರೇ, ಬಲದೇವೋಭೂತ್ = ಬಲದೇವತೆಯೂ ಆದರು. ಯತ್ = ಏಕೆಂದರೆ, ಯದ್ಬಲಾತ್ = ಸನ್ನಿಹಿತರಾದ ಯಾವ ಅವರ ಬಲದಿಂದಲೇ, ಬಲಿನಾಂ = ಎಲ್ಲ ಬಲಿಷ್ಠರಿಗೂ, ಬಲಂ = ಬಲವಷ್ಟೇ.

**ಅನುವಾದ–** ಬ್ರಾಹ್ಮಣರಿಗೆ ಈ ರೀತಿ ಉಪದೇಶ ಮಾಡಿದುದರಿಂದ ಅವರು ವಿಪ್ರರಿಗೆ ಜ್ಞಾನೋಪದೇಶಕರಾದ ಗುರುಗಳೂ ಆದರು. ಸನ್ನಿಹಿತರಾದ ಅವರ ಬಲದಿಂದಲೇ ಎಲ್ಲ ಬಲಿಷ್ಠರ ಬಲವೂ ಇರುವುದರಿಂದ ಅವರೇ ಬಲದೇವತೆಯೂ ಆದರು.

**ಭಾವವಿಲಾಸಿನೀ–** ತಾನ್ ವಿಪ್ರಾನ್ । ತೃತೀಯರೂಪೇಣ ಕರಿಷ್ಯಮಾಣ ಜ್ಞಾನೋಪದೇಶಂ ಸರ್ವಜ್ಞತಯಾ ಪ್ರಾಕ್ ಜ್ಞಾತ್ವೈವ ಮಧ್ವಸ್ಯ ಮೂಲರೂಪೇ ಬಲದೇವತ್ವಾದಿಕಮಪಿ ದತ್ತಮಿತ್ಯಾಹ – **ಸ ಏವೇತಿ** ॥ ಯದ್ಬಲಾದ್ಯಸ್ಯ ಸನ್ನಿಹಿತಪವನಸ್ಯ ಬಲಾದ್ಬಲಿನಾಂ ಮಹಿಷಶ್ಯೇನಕುಠಾರಾದಿನಾಂ ಬಲಂ ಸ ಏವ ವಾಯುರೇವ ಬಲದೇವೋಽಭೂದಿತಿ ಯೋಜನಾ ॥ ವಾಯೋರ್ಬಲಾಧಿ ದೇವತ್ವಸಮರ್ಥನಾಯ ''ಶ್ಯೇನೋ ಗೃಧ್ರಾಣಾಮಿ''ತ್ಯಾದಿಕಮುಕ್ತಮಿತಿ ಭಾವಃ ॥ ೫೨೬ ॥

**ವಿವರಣೆ–** ವಾಯುದೇವರು ಬಲಾದಿದೇವತೆಯೆಂದು ಸಮರ್ಥನೆ ಮಾಡುವುದಕ್ಕೋಸ್ಕರ 'ಶ್ಯೇನೋ ಗೃಧ್ರಾಣಾಮ್' ಇತ್ಯಾದಿ ವಾಕ್ಯಶೇಷವು ಪ್ರವೃತ್ತವಾಗಿದೆಯೆಂದು ಅಭಿಪ್ರಾಯ.

ಅತ್ಯೇತಿ ಮೋಕ್ಷಪದವೀರ್ಯನ್ಮೋಕ್ಷಾಧ್ವಸು ಷೋಡಶಃ ।
ಕಾಲಚಕ್ರಂ ಚ ಸೋಽತ್ಯೇತಿ ಯತಃ ಸರ್ವೋಚ್ಚಲೋಕಗಃ ।
ಸ ರೇಭನ್ ಮೇಘಗಂಭೀರನಾದೀ ಯತ್ ಪ್ರತಿ ಗರ್ಜತಿ ॥ ೫೨೭ ॥

**ಅರ್ಥ–** ಯತ್ = ಯಾವ ಕಾರಣದಿಂದ, ಮೋಕ್ಷಾಧ್ವಸು = ಮೋಕ್ಷಮಾರ್ಗದಲ್ಲಿ, ಷೋಡಶಃ = ಹದಿನಾರನೆಯವರಾಗಿದ್ದಾರೆಯೋ, ಆ ಕಾರಣದಿಂದ, ಮೋಕ್ಷಪದವೀಃ = ಹದಿನೈದು ಮೋಕ್ಷಮಾರ್ಗಸ್ಥಾನಗಳನ್ನು ಅತ್ಯೇತಿ = ಮೀರುತ್ತಾರೆ. ಯತಃ = ಯಾವ ಕಾರಣದಿಂದ, ಸರ್ವೋಚ್ಚಲೋಕಗಃ = ಎಲ್ಲ ಲೋಕಗಳಿಗಿಂತ ಮೇಲಿರುವ

ಸತ್ಯಲೋಕದಲ್ಲಿರುವುದರಿಂದ, ಕಾಲಚಕ್ರಂ ಚ = ಕಾಲಸೂಚಕವಾದ ಜ್ಯೋತಿಶ್ಚಕ್ರವನ್ನೂ, ಸಃ = ಆ ವಾಯುದೇವರು, ಅತ್ಯೇತಿ = ಮೀರುತ್ತಾರೆ.

ಸ = ವಾಯುದೇವರು, ಯತ್ = ಯಾವ ಕಾರಣದಿಂದ, ಪ್ರತಿಗರ್ಜತಿ = ಗರ್ಜನೆಯನ್ನು ಮಾಡುತ್ತಾರೆಯೋ ಆಕಾರಣದಿಂದ, ರೇಭನ್ = ಮೇಘಗಂಭೀರ ನಾದವುಳ್ಳವರು.

**ಅನುವಾದ–** ಮೋಕ್ಷಮಾರ್ಗಗಳಲ್ಲಿ ವಾಯುದೇವರು ಹದಿನಾರನೆಯವರಾದ್ದರಿಂದ ಉಳಿದ ಹದಿನೈದು ಮಾರ್ಗಗಳನ್ನು ಮೀರುತ್ತಾರೆ. ಸರ್ವೋಚ್ಚವಾದ ಸತ್ಯಲೋಕದಲ್ಲಿರುವುದರಿಂದ ಕಾಲಸೂಚಕವಾದ ಜ್ಯೋತಿಶ್ಚಕ್ರವನ್ನು ಮೀರುತ್ತಾರೆ. ಆ ವಾಯುದೇವರು ಗರ್ಜನೆ ಮಾಡುವುದರಿಂದ ಅವರು 'ರೇಭನ್' ಎಂದರೆ ಮೇಘಗಂಭೀರನಾದವುಳ್ಳರು ಎನಿಸುತ್ತಾರೆ.

**ಭಾವವಿಲಾಸಿನೀ–** ಯದ್ಯಸ್ಮಾತ್ ಷೋಡಶಃ ಪಂಚದಶಮೋಕ್ಷಮಾರ್ಗಸ್ಥಾನೇಭ್ಯ ಉಪರಿತನಸ್ಥಾನೇ ವಿದ್ಯಮಾನ ಇತ್ಯರ್ಥಃ । ''ಉತ್ಕ್ರಾಂತಸ್ತು ಶರೀರಾತ್ ಸ್ವಾದ್ಗಚ್ಛತ್ಯರ್ಚಿಷಮೇವ ತು । ತತೋಽತಿವಾಯೋಃ ಪುತ್ರಂ ಚ ಯೋಽಸೌ ನಾಮ್ನಾತಿವಾಹಿಕಃ । ತತೋಹಃ ಪೂರ್ವಪಕ್ಷಂ ಚಾಪ್ಯುದಕ್‌ಸಂವತ್ಸರಂ ತಥಾ । ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ । ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ । ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮಿತಿ ಬ್ರಹ್ಮತರ್ಕವಾಕ್ಯೇ ವಾಯುಲೋಕಸ್ಯ ಷೋಡಶತ್ವಕಥನಾತ್ ಷೋಡಶ ಇತ್ಯುಕ್ತಮ್ । ಕಾಲಚಕ್ರಂ ಕಾಲಪ್ರವರ್ತಕಜ್ಯೋತಿಶ್ಚಕ್ರಮ್ । ಸ ವಾಯುಃ ॥೫೨॥

**ವಿವರಣೆ–** ಮೋಕ್ಷಮಾರ್ಗಗಳು ಭಾಷ್ಯೋದಾಹೃತ ಶ್ರುತಿಗಳಲ್ಲಿ ಹೀಗೆ ಹೇಳಲ್ಪಟ್ಟಿವೆ - ''ಉತ್ಕ್ರಾಂತಸ್ತು ಶರೀರಾತ್ ಸ್ವಾದ್ಗಚ್ಛತ್ಯರ್ಚಿಷಮೇವ ತು । ತತೋ ಹಿ ವಾಯೋಃ ಪುತ್ರಂ ಚ ಯೋಽಸೌ ನಾಮ್ನಾಽತಿವಾಹಿಕಃ । ತತೋಽಽಹಃ ಪೂರ್ವಪಕ್ಷಂ ಚಾಪ್ಯುದಕ್‌ಸಂವತ್ಸರಂ ತಥಾ । ತಟಿತಂ ವರುಣಂ ಚೈವ ಪ್ರಜಾಪಂ ಸೂರ್ಯಮೇವ ಚ । ಸೋಮಂ ವೈಶ್ವಾನರಂ ಚೇಂದ್ರಂ ಧ್ರುವಂ ದೇವೀಂ ದಿವಂ ತಥಾ । ತತೋ ವಾಯುಂ ಪರಂ ಪ್ರಾಪ್ಯ ತೇನೈತಿ ಪುರುಷೋತ್ತಮಮ್' ಎಂಬುದು ಬ್ರಹ್ಮತರ್ಕ ವಚನ. ಅದರಲ್ಲಿ ಅರ್ಚಿಸ್, ಆತಿವಾಹಿಕ, ಅಹಸ್, ಪೂರ್ವಪಕ್ಷ, ಉತ್ತರಾಯಣ, ತಟಿತ್, ವರುಣ, ಪ್ರಜಾಪತಿ, ಸೂರ್ಯ, ಸೋಮ, ವೈಶ್ವಾನರ, ಇಂದ್ರ, ಧ್ರುವ, ಭಾರತಿ ಹೀಗೆ ಹದಿನೈದು ಮಾರ್ಗಗಳು, ಅನಂತರ ವಾಯುದೇವರು ಹದಿನಾರನೆಯವರು ಎಂಬ ಬ್ರಹ್ಮತರ್ಕವಚನದಲ್ಲಿ ಸ್ಪಷ್ಟವಾಗಿದೆ.

ಏವಂ ಶ್ರುತ್ಯುಕ್ತಸದ್ರತ್ನಮಾಲಾಽಲಂಕುರುತೇ ಗುರುಮ್ ।
ಇತಿ ವಾ ವಾಕ್ಯಸಂದರ್ಭಸ್ಯಾರ್ಥೋ ಯೌಕ್ತೋ ಭವಿಷ್ಯತಿ ॥ ೫೨೮ ॥

**ಅರ್ಥ–** ಏವಂ = ಈ ರೀತಿಯಾಗಿ, ಶ್ರುತ್ಯುಕ್ತಸದ್ರತ್ನಮಾಲಾ = ಗುಣಗಳೆಂಬ ಶ್ರೇಷ್ಠವಾದ ರತ್ನಗಳ ಮಾಲೆಯು, ಗುರುಂ = ನಮ್ಮ ಗುರುಗಳಾದ ಮಧ್ವರನ್ನು, ಅಲಂಕುರುತೇ = ಅಲಂಕರಿಸುತ್ತದೆ. ಇತಿ ವಾ = ಎಂದು ಈ ರೀತಿಯಾಗಲೀ, ವಾಕ್ಯಸಂದರ್ಭಸ್ಯ = ಈ ವಾಕ್ಯಸಂದರ್ಭಕ್ಕೆ, ಯೌಕ್ತಃ = ಯುಕ್ತಿಯುಕ್ತವಾದ, ಅರ್ಥಃ = ಅರ್ಥವು, ಭವಿಷ್ಯತಿ = ಉಂಟಾಗುವುದು.

**ಅನುವಾದ–** ಈ ರೀತಿಯಾಗಿ ಶ್ರುತಿಯಲ್ಲಿ ಹೇಳಲ್ಪಟ್ಟ ಗುಣಗಳೆಂಬ ಸದ್ರತ್ನಗಳ ಮಾಲೆಯು ನಮ್ಮ ಗುರುಗಳಾದ ಮಧ್ವರನ್ನು ಅಲಂಕರಿಸುತ್ತದೆ ಎಂದು ಈ ರೀತಿಯಾಗಿ ಆಗಲೀ ಈ ವಾಕ್ಯಸಂದರ್ಭಕ್ಕೆ ಯುಕ್ತಿಯುಕ್ತವಾದ ಅರ್ಥವು ಉಂಟಾಗುತ್ತದೆ.

**ಭಾವವಿಲಾಸಿನೀ–** ಶ್ರುತ್ಯುಕ್ತಸದ್ರತ್ನಮಾಲಾ ಶ್ರುತ್ಯುಕ್ತಮಹಿಮಾಖ್ಯಸದ್ರತ್ನಮಾಲಾ ॥ ೫೨೮ ॥

**ಪವಮಾನಃ ಪೂಯಮಾನೋ ವಾಯುಃ ಸರ್ವಸ್ಯ ಸಮ್ಮತಃ ।**
**ತತ್ ಸೂಕ್ತೇ ಸಹ ತೇನೋಕ್ತಃ ಸೋಮೋಽನ್ಯೋ ನ ಪದೇಪದೇ ।**
**ಸಮಾನಾಧಿಕೃತತ್ವಂ ಯದ್ ವಸ್ತ್ವೈಕ್ಯಸ್ಯ ಪ್ರಮಾಪಕಂ ॥ ೫೨೯ ॥**

**ಅರ್ಥ–** ಪವಮಾನಃ = ಪವಮಾನ ಶಬ್ದವಾಚ್ಯನಾದವನು, ಪೂಯಮಾನಃ = ಪೂಯಮಾನ ಶಬ್ದವಾಚ್ಯನಾದವನು, ವಾಯುಃ = ವಾಯುದೇವರೆಂದು, ಸರ್ವಸ್ಯ = ಎಲ್ಲರಿಗೂ, ಸಮ್ಮತಃ = ಸಮ್ಮತವಾಗಿದೆ. ತತ್ಸೂಕ್ತೇ = ಆ ಪವಮಾನ ಸೂಕ್ತ ಮತ್ತು ಪೂಯಮಾನ ಸೂಕ್ತಗಳಲ್ಲಿ, ಪದೇ ಪದೇ = ಹೆಜ್ಜೆ ಹೆಜ್ಜೆಗೆ (ಪ್ರತಿಯೊಂದು ಮಂತ್ರದಲ್ಲಿ) ತೇನ ಸಹೋಕ್ತಃ = ಆ ಪವಮಾನ ಮತ್ತು ಪೂಯಮಾನಗಳ ಜೊತೆಯಲ್ಲಿ ಹೇಳಲ್ಪಟ್ಟ, ಸೋಮಃ = ಸೋಮನು, ಅನ್ಯಃ = ವಾಯುದೇವರಿಗಿಂತ ಭಿನ್ನನಾದವನು, ನ = ಅಲ್ಲ. ಯತ್ = ಏಕೆಂದರೆ, ಸಮಾನಾಧಿಕೃತತ್ವಂ = ಸಮಾನ ವಿಭಕ್ತಿಯುಳ್ಳ ಪದಗಳಿಂದ ಪ್ರತಿಪಾದ್ಯತ್ವವು, ವಸ್ತ್ವೈಕ್ಯಸ್ಯ = ಆ ವಸ್ತುವು ಒಂದೇ ಎಂಬುದಕ್ಕೆ, ಪ್ರಮಾಪಕಂ = ಸಾಧಕವಾಗಿರುತ್ತದೆ.

**ಅನುವಾದ–** ಪವಮಾನ ಮತ್ತು ಪೂಯಮಾನ ಎಂಬ ಶಬ್ದವಾಚ್ಯರಾದವರು ವಾಯುದೇವರು ಎಂಬುದು ಎಲ್ಲರಿಗೂ ಸಮ್ಮತವಾದುದು. ಪವಮಾನ ಸೂಕ್ತ ಮತ್ತು ಪೂಯಮಾನ ಸೂಕ್ತಗಳಲ್ಲಿ, ಪವಮಾನ ಮತ್ತು ಪೂಯಮಾನರ ಜೊತೆಯಲ್ಲಿ ಹೆಜ್ಜೆಹೆಜ್ಜೆಗೆ ಹೇಳಲ್ಪಟ್ಟ ಸೋಮನು ವಾಯುದೇವರಿಗಿಂತ ಭಿನ್ನನಾಗಿರಲು ಸಾಧ್ಯವಿಲ್ಲ. ಏಕೆಂದರೆ ಸಮಾನವಿಭಕ್ತಿಕಪದೋಪಸ್ಥಾಪಿಪ್ಯತ್ವವು ವಸ್ತುವಿನ ಅಭೇದವನ್ನು ಸಾಧಿಸಿ ಕೊಡುತ್ತದೆ.

**ಭಾವವಿಲಾಸಿನೀ–** ತತ್ಸೂಕ್ತೇ ಪವಮಾನಪೂಯಮಾನ ಸೂಕ್ತೇ । ತೇನ ಪವಮಾನಾದಿ ನಾಮ್ನಾ । ಅನ್ಯೋ ವಾಯೋರನ್ಯಃ । ಯದ್ಯಸ್ಮಾತ್ ॥ ೫೨೯ ॥

**ವಿವರಣೆ–** ಈ ಸೂಕ್ತಗಳಲ್ಲಿ ಪ್ರಥಮಾಂತವಾದ ಪವಮಾನ ಮತ್ತು ಪೂಯಮಾನ ಶಬ್ದಗಳಿರುವಂತೆ ಪ್ರಥಮಾಂತವಾದ ಸೋಮಶಬ್ದವೂ ಇದೆ. ಆದ್ದರಿಂದ ಪವಮಾನ, ಪೂಯಮಾನ ಮತ್ತು ಸೋಮಶಬ್ದಗಳಿಂದ ಒಂದೇ ವಸ್ತುವು ಹೇಳಲ್ಪಡಬೇಕು. ಆ ವಸ್ತುವು ವಾಯುದೇವರು ಎಂದು ಅಭಿಪ್ರಾಯ.

**ಪ್ರಾವೀವಿಪದಿತಿ ಶ್ರುತ್ಯಾಪ್ಯೇಷೋऽರ್ಥ ಸ್ಪಷ್ಟಮೀರ್ಯತೇ ।**
**ಗಿರಃ ಸಿಂಧುಃ ಸ ಮಧ್ವಾಖ್ಯೋ ಮನೀಷಾಶ್ಚ ಮನೋರಮಾಃ॥ ೫೩೦ ॥**

**ಅರ್ಥ–** ಪ್ರಾವೀವಿಪತ್ ಇತಿ ಶ್ರುತ್ಯಾ = ಪಾವೀವಿಪತ್ ಎಂಬ ಶ್ರುತಿಯಿಂದಲೂ, ಏಷೋಽರ್ಥಃ = ಈ ಅರ್ಥವು, ಸ್ಪಷ್ಟಂ = ಸ್ಪಷ್ಟವಾಗಿ, ಈರ್ಯತೇ = ಹೇಳಲ್ಪಡುತ್ತದೆ. ಗಿರಃ ಸಿಂಧುಃ = ಗಿರಃ ಸಿಂಧು ಎಂಬ ಪದವು ಆ ಮಧ್ವರನ್ನು ಹೇಳುತ್ತದೆ. ಮನೀಷಾಶ್ಚ = ಮನೀಷಾಃ ಎಂಬ ಪದಕ್ಕೆ, ಮನೋರಮಾಃ = ಮನೋರಮಗಳು ಎಂದು ಅರ್ಥ.

**ಅನುವಾದ– 'ಪ್ರಾವೀವಿಪತ್' ಎಂಬ ಶ್ರುತಿಯು ಈ ಅರ್ಥವನ್ನು ಸ್ಪಷ್ಟವಾಗಿ ಹೇಳುತ್ತದೆ. ಮಂತ್ರದಲ್ಲಿರುವ 'ಗಿರಃ ಸಿಂಧುಃ' ಎಂಬ ಪದವು ಮಧ್ವರನ್ನು ಹೇಳುತ್ತದೆ. 'ಮನೀಷಾಃ' ಎಂದರೆ ಮನೋಹರಗಳಾದ ಎಂದು ಅರ್ಥ.**

**ವಿವರಣೆ–** ಇಲ್ಲಿ ಅದೇ ವರ್ಗದಲ್ಲಿರುವ ಪ್ರಾವೀವಿಪತ್ ಇತ್ಯಾದಿಯಾದ ಮಂತ್ರಗಳನ್ನು ಸಂಗ್ರಹಿಸುತ್ತಿದ್ದಾರೆ. ಪೂರ್ಣಮಂತ್ರವು ಹೀಗಿದೆ - "ಪ್ರಾವೀವಿಪದ್ವಾ ಚ ಊರ್ಮಿಂ ನ ಸಿಂಧುರ್ಗಿರಃ ಸೋಮಃ ಪವಮಾನೋ ಮನೀಷಾಃ । ಅಂತಃ ಪಶ್ಯನ್ ವೃಜನೇ ಮಾ ವರಾಣ್ಯಾ ತಿಷ್ಠತಿ ವೃಷಭೋ ಗೋಷು ಜಾನನ್ ॥" (7-96-6-7) ಮಂತ್ರದ ಅರ್ಥವು ಹೀಗಿದೆ - ಗಿರಃ = ಕ್ಷಣ ಕ್ಷಣದಲ್ಲಿಯೂ ತಮ್ಮ ಮುಖದಿಂದ ಅಲೆಗಳಂತೆ ಹೊರಹೊಮ್ಮುವ ವಾಕ್ಯಸಮುದಾಯಕ್ಕೆ, ಗಿರಃ ಎಂಬುದು ಜಾತ್ಯೇಕವಚನವಾದ್ದರಿಂದ ಸಮುದಾಯ ಎಂಬರ್ಥವು ಕೂಡುತ್ತದೆ. ಇಲ್ಲದಿದ್ದರೆ ಇಲ್ಲಿ ಹೇಳಿದ ಸಿಂಧು ಎಂದರೆ ಸಮುದ್ರದ ಹೋಲಿಕೆಯು ಅಸಂಗತವಾಗುತ್ತದೆ. ಸಿಂಧುಃ = ಸಮುದ್ರದಂತೆ ಇರುವ, 'ಸದ್ಯೋಽರಚನಪಟುಮಥಾಪಾದ್ಯವಿದ್ಯಾಸಮುದ್ರ' ಎಂಬ ವಚನದಿಂದ ಈ ಅರ್ಥವು ದೊರೆಯುತ್ತದೆ. ಹೇಗೆ ಎಲ್ಲಾ ಕಡೆಯಲ್ಲಿಯೂ ಅಲೆಗಳಿಗೆ ಸಮುದ್ರವೇ ಆಧಾರವೋ, ಅದರಂತೆ ಅನಂತ ವೇದವಾಕ್ಯಗಳಲ್ಲಿರುವ ಸಕಲವಿದ್ಯೆಗಳನ್ನು ಉಪದೇಶಿಸುವುದರಿಂದ ಎಲ್ಲ ವಾಕ್ಯಗಳಿಗೂ ಶ್ರೀ ಮಧ್ವರೇ ಆಧಾರ ಎಂದು ಅರ್ಥ. ಸೋಮಃ = ಸೋಮನಾಮಕರಾದ ಪವಮಾನಃ = ಮಧ್ವರೂಪರಾದ ವಾಯುದೇವರು, ಮನೀಷಾಃ = ಮನಸ್ಸಿಗೆ ಇಷ್ಟವಾದ, ವಾಚಃ = ವೇದ ಬ್ರಹ್ಮಸೂತ್ರಾದಿ ವಾಕ್ಯಗಳನ್ನು ಊರ್ಮಿಮ್ ನಃ = ತರಂಗಗಳಂತೆ, ಪ್ರಾವೀವಿಪತ್ = ಸಕಲ ಸಜ್ಜನರಲ್ಲಿ ಪ್ರವರ್ತಿಸಿದರು. ವಿಪ ಪರಿವರ್ತನೇ ಎಂಬ ಧಾತುವಿನಿಂದ ಈ ಅರ್ಥವು ಲಭಿಸುತ್ತದೆ.

ಮಧ್ವ ಎಂಬ ಸಮುದ್ರದಲ್ಲಿ ವಾಕ್ಯದ ಅಲೆಗಳನ್ನು ಉದ್ಬೋಧನೆಮಾಡಲು ಸೋಮರಸಜನಕನಾದ ಸೋಮಶಬ್ದವಾಚ್ಯನಾದ ಚಂದ್ರನಿಗೆ ಸಾಮರ್ಥ್ಯ ವಿಲ್ಲದಿರುವುದರಿಂದ ಸಕಲಸಚ್ಛಾಸ್ತ್ರಗಳನ್ನು ಪ್ರಸವಿಸುವುದರಿಂದ ಮಧ್ವರೇ ಸೋಮಶಬ್ದವಾಚ್ಯರೆಂಬ ಅಭಿಪ್ರಾಯದಿಂದ ಮಂತ್ರವು ಸೋಮ ಎಂದು ಹೇಳಿದೆ. ಪರಮಾತ್ಮನು ಕೊಟ್ಟ ಸಾಮರ್ಥ್ಯದಿಂದಲೇ ವೇದವಾಕ್ಯಗಳಿಗೆ ಉದ್ಬೋಧಕರಾದವರು ಎಂದು ಅಭಿಪ್ರಾಯ.

ದುಶ್ಶಾಸ್ತ್ರರೂಪ ವಾಕ್ಯಗಳನ್ನು ನಿರಾಸ ಮಾಡಲು 'ಮನೀಷಾ' ಎಂಬ ವಿಶೇಷಣವು ಕೊಡಲ್ಪಟ್ಟಿದೆ. ದುಶ್ಶಾಸ್ತ್ರಗಳ ವಾಕ್ಯಗಳು ಮನಸ್ಸಿಗೆ ಇಷ್ಟವಾದವುಗಳಲ್ಲ. "ತ್ವದ್ವ್ಯಾಖ್ಯಾಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಃ", "ವೈದಿಕಾದ್ಯಾ ಹಿ ವಿದ್ಯಾಃ ಸೇವಂತೇ" ಇತ್ಯಾದಿ ವಚನಗಳಿಂದ ಈ ಅರ್ಥವು ಸ್ಪಷ್ಟವಾಗುತ್ತದೆ. ಈ ಗುಣವೂ ಸಹ ಬ್ರಹ್ಮಸೂತ್ರಗಳಿಗೆ ಮತ್ತು ಉಪನಿಷತ್ತುಗಳಿಗೆ ಭಾಷ್ಯಗಳನ್ನು ರಚಿಸಿದ ವೈಷ್ಣವಮತ ಪ್ರವರ್ತಕರಾದ ಮಧ್ವರೂಪರಾದ ವಾಯುದೇವರಲ್ಲೇ ಯುಕ್ತ ವಾಗುವುದಿಂದ ಮೊದಲು 'ಸ ಮಧ್ವ' ಎಂದು ಪ್ರಸ್ತಾಪವನ್ನು ಮಾಡಿ ಇಲ್ಲಿಯೂ ಅವರೇ ಸ್ತೋತ್ರಮಾಡಲ್ಪಡುತ್ತಾರೆ ಎಂದು ಅಭಿಪ್ರಾಯ.

ಗೋಷು = ವಿದ್ಯೆಗಳಲ್ಲಿ, ವೃಜನಾ = ವೃಜನಾನಿ = ಯಾವ ಯಾವುದೋ ಜನರಿಂದ ಸ್ವೀಕರಿಸಲ್ಪಟ್ಟ ಎಂದರೆ ಸಜ್ಜನರಿಂದ ಸ್ವೀಕರಿಸಲ್ಪಡದಿದ್ದ ಇಮಾ = ಇಮಾನಿ = ಈ ಅವರಾಣಿ = ಶ್ರೇಷ್ಠವಲ್ಲದ ಎಂದರೆ ಮಧ್ಯಮವಾದ ಮತ್ತು ಅಧಮವಾದ ಪುರಾಣ ಶಾಸ್ತ್ರ ಮೊದಲಾದವುಗಳನ್ನು, ಗೋಷು ಎಂಬಲ್ಲಿರುವ ನಿರ್ಧಾರಣ ಸಪ್ತಮೀಬಲದಿಂದ ಇಲ್ಲಿಯೂ ಸಹ ಆ ಶಾಸ್ತ್ರಗಳಲ್ಲಿರುವ ವಿದ್ಯೆಗಳನ್ನೇ ತೆಗೆದುಕೊಳ್ಳಬೇಕು. ಅವರಾಣಿ ಎಂದು ಹೇಳಿರುವುದರಿಂದ ಅವು ದುರ್ವಿದ್ಯೆಯೆಂದೇ ತಿಳಿಯಬೇಕು. ಜಾನನ್ = ಮಧ್ಯಮವೆಂದು ಸ್ವೀಕರಿಸಬೇಕು ಎಂದು ತಿಳಿಯುತ್ತಾ ಅಂತಃ ಪಶ್ಯನ್ = ಆ ಶಾಸ್ತ್ರಗಳ ಒಳಗೆ ಎಂದರೆ ಪೂರ್ವೋತ್ತರ ವಿರೋಧಾದಿಗಳನ್ನು, ಪಶ್ಯನ್ = ನೋಡುವವರಾಗಿ, ಅಥವಾ ಅಂತಃ = ತಮ್ಮ ಹೃದಯದೊಳಗೆ, ಪಶ್ಯನ್ = ಪರಮಾತ್ಮನನ್ನು ನೋಡುತ್ತಾ ವೃಷಭಃ = ಸಕಲ ಅಧಿಕಾರಿವರ್ಗಗಳಲ್ಲಿ ಶ್ರೇಷ್ಠರಾದ, ಪವಮಾನಃ = ಮಧ್ವರು, ಆತಿಷ್ಠತಿ = ಎಲ್ಲ ಕಡೆಯಲ್ಲಿಯೂ ಸಕಲ ಹೃದಯದಲ್ಲಿ ಆ ಜೀವರಿಗೆ ಸದ್ಬುದ್ಧಿ ಪ್ರೇರಕರಾಗಿ ಇದ್ದಾರೆ. ಆದ್ದರಿಂದಲೇ ಪೂರ್ವಾರ್ಧದಲ್ಲಿ 'ಮನೀಷಾ' ಎಂಬ ಪದದಿಂದ ಉತ್ತಮ ವಿದ್ಯೆಗಳನ್ನೇ ತೆಗೆದುಕೊಳ್ಳಬೇಕು ಎಂದು ಸೂಚಿಸಲು 'ಮನೀಷಾ' ಎಂಬ ವಿಶೇಷಣವು ಕೊಡಲ್ಪಟ್ಟಿದೆ. ಪೂರ್ವೋತ್ತರ ವಿರೋಧವಿಲ್ಲದ ವಿದ್ಯೆಯು ವಿದ್ವಾಂಸರ ಮನಸ್ಸಿಗೆ ಇಷ್ಟವಷ್ಟೇ. ಆದ್ದರಿಂದ 'ಮನೀಷಾ' ಪದವು ಸದ್ವಿದ್ಯೆಗಳನ್ನೇ ಹೇಳುತ್ತದೆ. 'ಊರ್ಮಿಂ ನ್' ಎಂದರೆ ಸಮುದ್ರದ ತರಂಗಗಳಂತೆ ಎಂದು ಅರ್ಥ. ಸೋಮ ಎಂದರೆ ಸೋಮಾಭಿಮಾನವುಳ್ಳವನು, ಸೋಮಲತಾಭಿಮಾನವುಳ್ಳವನು ಎಂದು ಅರ್ಥ.

ಅಭಿಮನ್ಯಮಾನವಾದ ಶಬ್ದವು ಅಭಿಮಾನಿಯಲ್ಲಿಯೇ ಮುಖ್ಯವಾದುದರಿಂದ ಇಲ್ಲಿ ಮಧ್ವರನ್ನು ಸೋಮರೆಂದೇ ಹೇಳಿದ್ದಾರೆ. ಅಲ್ಲದೆ ಸೋಮಪದವನ್ನು ಪ್ರಯೋಗ ಮಾಡುವುದರಿಂದ ಮಧ್ವರು ಕರ್ಮಮೀಮಾಂಸೆಯನ್ನು ಮಾಡುವ ವಾಕ್ಯಗಳಿಗೂ ಪ್ರವರ್ತಕರೆಂದು ಸೂಚಿಸುತ್ತಾರೆ.

**ವಾಚಶ್ಚೋರ್ಮಿಂ ನೋರ್ಮಿಮಿವ ಸೋಮಃ ಸೋಮಾಭಿಮಾನವಾನ್ ।**
**ಪವಮಾನೋ ಮುಖ್ಯವಾಯುರವತೀರ್ಣೋ ಮಹೀತಲೇ ॥ ೫೩೧ ॥**

**ಪ್ರಾವೀವಿಪದ್ವಿಶೇಷೇಣ ಪ್ರಾವರ್ತಯದಿತಿ ಸ್ಫುಟಂ ।**
**ಅರ್ಥಃ ಪ್ರತೀಯತೇ ಸರ್ವೈಃ ಪ್ರವೃತ್ತ್ಯರ್ಥೋ ಯತೋ ವಿಪಿಃ ॥ ೫೩೨ ॥**

**ಅರ್ಥ–** ವಾಚಶ್ಚ = ವಾಕ್ಯಗಳ, ಊರ್ಮಿಂನ = ತರಂಗಗಳಂತೆ, ಸೋಮಃ = ಸೋಮ ಎಂದರೆ, ಸೋಮಾಭಿಮಾನವಾನ್ = ಸೋಮಲತೆಯ ಅಭಿಮಾನವುಳ್ಳವರು ಎಂದು ಅರ್ಥ. ಪವಮಾನಃ = ಪವಮಾನ ಎಂದರೆ, ಮುಖ್ಯವಾಯುಃ = ಮುಖ್ಯಪ್ರಾಣದೇವರು, ಮಹೀತಲೇ = ಭೂಮಿಯಲ್ಲಿ, ಅವತೀರ್ಣಃ = ಅವತಾರವನ್ನು ಮಾಡಿ, ಪ್ರಾವೀವಿಪತ್ = ವಿಶೇಷವಾಗಿ ಪ್ರವರ್ತನೆಯನ್ನು ಮಾಡಿದರು, ಇತಿ = ಎಂಬುದಾಗಿ, ಸ್ಫುಟಂ = ಸ್ಪಷ್ಟವಾಗಿ, ಸರ್ವೈಃ = ಎಲ್ಲರಿಂದಲೂ, ಅರ್ಥಃ = ಅರ್ಥವು, ಪ್ರತೀಯತೇ = ತಿಳಿಯಲ್ಪಡುತ್ತದೆ, ಯಥಾ = ಏಕೆಂದರೆ, ವಿಪಿಃ = ವಿಪಿಧಾತುವು, ಪ್ರವೃತ್ತ್ಯರ್ಥಃ = ಪ್ರವರ್ತನ ಎಂಬರ್ಥವನ್ನು ಹೇಳುತ್ತದೆ.

**ಅನುವಾದ–** ಪವಮಾನ ಎಂದರೆ ಮುಖ್ಯಪ್ರಾಣದೇವರು ಭೂಮಿಯಲ್ಲಿ ಅವತಾರವನ್ನು ಮಾಡಿ ಸೋಮಾಭಿಮಾನವುಳ್ಳ ಅವರು ವಾಕ್ಯದ ತರಂಗಗಳನ್ನೋ ಎಂಬಂತೆ ವೇದವಿದ್ಯೆಗಳನ್ನು ಸಜ್ಜನರಲ್ಲಿ ವಿಶೇಷವಾಗಿ ಪ್ರವರ್ತಿಸಿದರು ಎಂಬ ಅರ್ಥವು ಸ್ಪಷ್ಟವಾಗಿ ಎಲ್ಲ ಪದಗಳಿಂದಲೂ ತಿಳಿಯುತ್ತದೆ. ಏಕೆಂದರೆ 'ವಿಪಿ' ಧಾತುವು ಪ್ರವರ್ತನ ಎಂಬ ಅರ್ಥವನ್ನು ಹೇಳುತ್ತದೆ.

**ಭಾವವಿಲಾಸಿನೀ–** ವಾಯೋಸ್ತೃತೀಯಾವಾತರೇ ವಾದಿವಿವಾದಪರಿಹಾರಾಯ ತಮೇವಾ-ವಾತರಂ ಪುನರಪಿ ಶ್ರುತಿಃ ಸ್ತೌತೀತ್ಯಾಹ–**ಪ್ರಾವೀವಿಪತಿದಿ ಶ್ರುತ್ಯೇತಿ** ॥ ಅನೇನ "ಪ್ರಾವೀವಿಪದ್ವಾಚ ಊರ್ಮಿಂ ನ ಸಿಂಧುರ್ಗಿರಃ ಸೋಮಃ ಪವಮಾನೋ ಮನೀಷಾಃ । ಅಂತಃ ಪಶ್ಯನ್ ವೃಜನೇ ಮಾ ವರಣ್ಯಾऽತಿಷ್ಠತಿ ವೃಷಭೋ ಗೋಷು ಜಾನನ್ನ"ತಿ ಶ್ರುತಿಃ ಸಂಗೃಹ್ಣಾತಿ ॥ ಅಯಮರ್ಥಃ । ಗಿರಃ ಕ್ಷಣೇ ಕ್ಷಣೇ ಸ್ವಮುಖಾನ್ನಿಃ ಸರತ್ತರಂಗೋಪಮವಾಕ್ಯ ಸಮುದಾಯಸ್ಯ । ಜಾತ್ಯೇಕವಚನತ್ವಾದಯಮರ್ಥೋऽಲಭ್ಯತೇ । ಅನ್ಯಥಾ ಸಿಂಧುತ್ವಸ್ಯಾಸಂಬದ್ಧತ್ವಪ್ರಸಂಗಾತ್ । ಸಿಂಧುಃ ಸಮುದ್ರ ಇವ ವಿದ್ಯಮಾನಃ । ಸದ್ಯೋऽರಚನಪಟುಮಥಾಪಾದ್ಯವಿದ್ಯಾಸಮುದ್ರೇತಿ ವಚನಾತ್ । ಯಥಾ ಪರಿಸರತ್ತರಂಗಾಣಾಂ ಸಮುದ್ರ ಆಧಾರ ಏವಮನಂತವೇದವಾಕ್ಯಾನಾಂ

ಸಕಲವಿದ್ಯೋಪದೇಷ್ಟುತ್ವಾದಯಮಪ್ಯಾಧಾರ ಇತ್ಯರ್ಥಃ । ಸೋಮಃ ಸೋಮನಾಮಕಃ ಪವಮಾನೋ ಮಧ್ವರೂಪೀ ವಾಯುಃ ಮನೀಷಾ ಮನಸಾಮಿಷ್ಟ್ಯಾ ವಾಚೋ ವೇದಬ್ರಹ್ಮಸೂತ್ರಾದಿವಾಚಃ ಊರ್ಮಿನೋರ್ಮಿಮಿವ ಪ್ರಾವೀವಿಪತ್ ಸಕಲ ಸಜ್ಜನೇಷು ಅತಿಶಯೇನ- ವರ್ತಯತ್ । ವಿಪಪರಿವರ್ತನ ಇತಿ ಧಾತೋಃ । ಮಧ್ವಾಖ್ಯಸಮುದ್ರೇ ವಾಕ್ಯ ತರಂಗೋದ್ಬೋಧನಾಯ ಸೋಮರಸ ಪ್ರಸವಿತೃತ್ವೇನ ಸೋಮಶಬ್ದವಾಚ್ಯಚಂದ್ರಸ್ಯಾ-ಸಮರ್ಥತ್ವಾತ್ ಸಕಲಸಚ್ಛಾಸ್ತ್ರಪ್ರಸವಿತೃತ್ವಾತ್ ಸೋಮೋಽಪ್ಯಯಮಿತಿ ಭಾವೇನ ಸೋಮ ಇತ್ಯುಕ್ತಮ್ । ಭಗವದ್ದತ್ತಸಾಮರ್ಥ್ಯೇನೈವ ಗಿರಾಮುದ್ಬೋಧಕ ಇತಿ ಭಾವಃ ।

ದುಶ್ಶಾಸ್ತ್ರರೂಪವಾಚಂ ವ್ಯುದಾಸಾಯ ಮನೀಷಾ ಇತಿ ವಿಶೇಷಣಮ್ । "ತ್ವದ್ವ್ಯಾಖ್ಯಾ-ಸಿಂಹನಾದೇ ಸಪದಿ ದದೃಶಿರೇ ಮಾಯಿಗೋಮಾಯವಃ" । "ವೈದಿಕಾದ್ಯಾ ಹಿ ವಿದ್ಯಾಃ ಸೇವಂತೆ" ಇತ್ಯಾದಿ ವಚನಾತ್ । ಅಸ್ಯ ಚ ಬ್ರಹ್ಮಸೂತ್ರೋಪನಿಷದಾಂ ಭಾಷ್ಯಕರ್ತರಿ ವೈಷ್ಣವಮತ ಪ್ರವರ್ತಕೇ ಮಧ್ವರೂಪೇವಾಯಾವೇವ ಸಂಭವಾತ್ ಸಮಧ್ವ ಇತಿ ಪ್ರಾಕ್‌ಪ್ರಸ್ತಾವಿತೋ ಮಧ್ವ ಏವಾತ್ರಾಪಿ ಸ್ತೂಯತ ಇತಿ ಭಾವಃ ।

ಗೋಷು ವಿದ್ಯಾಸು । ವೃಜನಾ ಯಾದೃಶತಾದೃಶಜನೈರ್ವೃತಾನಿ ನ ತು ಸಜ್ಜನವೃತಾನಿ । ಇಮಾನಿ "ಸುಪಾಂ ಸುಲುಗ್" ಇತಿ ಸೂತ್ರೇಣೇಡಾದೇಶಃ । ಅವರಾಣ್ಯನುತ್ತಮಾನಿ ಮಧ್ಯಮಾನ್ಯ-ಧಮಾನಿ ಪುರಾಣಶಾಸ್ತ್ರಾದೀನಿ । ಗೋಷ್ವಿತಿ ನಿರ್ಧಾರಣಸಪ್ತಮೀಬಲಾದತ್ರಾಪಿ ವಿದ್ಯಾನಾಮೇವ ಸಂಗ್ರಹಃ । ಅವರತ್ವೋಕ್ತ್ಯಾ ಚ ದುರ್ವಿದ್ಯಾತ್ವಮಪಿ ಜ್ಞಾತವ್ಯಮ್ ಅವರಾಣಿ ಅನ್ಯೋನ್ಯ-ವರಣರಹಿತಾನಿ ಇತ್ಯರ್ಥಃ । ಇಮಾನಿ ತಾಮಸ ಶಾಸ್ತ್ರಾಣಿ ಅವರಾಣಿ ವರಾಣಯೋಗ್ಯಾನಿ ಇತ್ಯರ್ಥಃ । ಜಾನನ್ ಮಧ್ಯಮತಯಾ ಅಧಮತಯಾ ಚ ಸಂಗ್ರಾಹ್ಯಾಣೀತಿ ಜಾನನ್ । ಅತ-ಸ್ತೇಷಾಂ ಶಾಸ್ತ್ರಾಣಾಮಂತಃ ಪಶ್ಯನ್ ಪೂರ್ವೋತ್ತರ ವಿರೋಧಾದಿದೋಷಂ ಪಶ್ಯಯನ್ । ವೃಷಭಃ ಸಕಲಾಧಿಕಾರಿವರ್ಗಾಣಾಂ ಶ್ರೇಷ್ಠೋ ಮಧ್ವಾಖ್ಯಃ ಪವಮಾನ ಆತಿಷ್ಠತಿ ಸಮಂತಾತ್ ಸಕಲ ಸಜ್‌ಜ್ಞಾನಹೃದಯೇಷು ತತ್ತಚ್ಛುಭಬುದ್ಧಿಪ್ರೇರಕತಯಾ ಚ ದುಃಶಾಸ್ತ್ರ ದೂಷಕ ಶಕ್ತಿದಾಯಕತಯಾ ತಿಷ್ಠತಿ । ಅತ ಏವ ಪೂರ್ವಾರ್ಧೇಽಪಿ ಮನೀಷಾ ಇತ್ಯುತ್ತಮವಿದ್ಯಾನಾಮೇವ ಸಂಗ್ರಹಾರ್ಥಂ ವಿಶೇಷಣಮ್ । ಪೂರ್ವೋತ್ತರಾವಿರುದ್ಧೈವ ಹಿ ವಿದ್ಯಾ ವಿದ್ವನ್ಮನಸಾಮಿಷ್ಟಾ ನ ತು ವಿರುದ್ಧಾ । ಏವಂ ಚ ಮನೀಷಾಪದಂ ಸದ್ವಿದ್ಯಾನಾಮೇವ ಪ್ರಾಪಕಮ್ । ಇಮಮೇವಾರ್ಥ-ಮಭಿಪ್ರೇತ್ಯಾಹ – ಗಿರ ಇತ್ಯಾದಿನಾ ॥ ಊರ್ಮಿಂನೇತ್ಯಸ್ಯಾರ್ಥ ಕಥನಮೂರ್ಮಿಮಿವೇತಿ । ಸೋಮಾಭಿಮಾನವಾನ್ ಸೋಮಲತಾಭಿಮಾನವಾನ್ । ಅಭಿಮನ್ಯಮಾನಶಬ್ದಸ್ಯಾ-ಭಿಮಾನಿನ್ಯೇವ ಮುಖ್ಯತ್ವಾತ್ ಸೋಮ ಇತ್ಯುಕ್ತಮಿತಿ ಭಾವಃ । ಅನೇನ ಕರ್ಮಮೀಮಾಂಸಾತ್ಮಕ-ವಾಚಾಮಪಿ ಪ್ರವರ್ತಕ ಇತಿ ಸೂಚಯತಿ ॥ ೫೩೦-೫೩೪ ॥

ಗೋಷು ವಿದ್ಯಾಸು ಸರ್ವಾಸು ಯಾನೀಮಾನ್ಯವರಾಣಿ ಚ ।
ಜನ್ಯೈಃ ಸರ್ವೈಃ ಸ ಬಹುಶೋ ವೃತಾತ್ವಾದ್ ವೃಜನಾನಿ ಚ ॥ ೫೩೫ ॥

ರಾಜಸಾನಿ ಕುಶಾಸ್ತ್ರಾಣಿ ತಾಮಸಾನ್ಯಪಿ ಸರ್ವಶಃ ।
ಜಾನಂಸ್ತದರ್ಥದೋಷಂ ಚ ಪಶ್ಯನ್ ಸುಜನಚೇತಸಾಂ ॥ ೫೩೪ ॥

ಅಂತರಾತಿಷ್ಠತಿ ಹರಿಂ ಪಶ್ಯಂಶ್ಚ ವೃಷಭಃ ಕಿಲ ।
ವಾಗೂರ್ಮಿತಾ ವಾಕ್‌ಪ್ರದತ್ವಂ ಬುದ್ಧಿದತ್ವಾದಯೋ ಗುಣಾಃ ॥ ೫೩೫ ॥

ಸಾರಾಸಾರವಿವೇಕಶ್ಚ ಯತ್ ಗುರುತ್ವಪ್ರಮಾಪಕಾಃ ।
ಅತಃ ಪ್ರಾಗುಕ್ತಮಧ್ವಾಖ್ಯರೂಪವಾಗೇವ ವಾಗಿಯಮ್ ॥ ೫೩೬ ॥

**ಅರ್ಥ–** ಗೋಷು = ಗೋಷು ಎಂದರೆ, ವಿದ್ಯಾಸು ಸರ್ವಾಸು = ಎಲ್ಲಾ ವಿದ್ಯೆಗಳಲ್ಲಿ, ಯಾನಿ ಇಮಾನಿ ಅವರಾಣಿ ಚ = ಯಾವ ಈ ವಿದ್ಯೆಗಳು ಅಧಮವಾಗಿದೆಯೋ, ಸರ್ವೈಃ ಜನ್ಯೈಃ = ಎಲ್ಲ ಜನರಿಂದಲೂ, ಬಹುಶಃ = ಪ್ರಾಯಿಕವಾಗಿ, ವೃತತ್ವಾತ್ = ಸ್ವೀಕರಿಸಲ್ಪಡುವುದರಿಂದ, ವೃಜನಾನಿ = ವೃಜನ ಶಬ್ದದಿಂದ ಹೇಳಲ್ಪಡುವಂತಹ, ರಾಜಸಾನಿ = ರಾಜಸವಾದ, ಅಪಿ = ಮತ್ತು, ತಾಮಸಾನಿ = ತಾಮಸವಾದ, ಕುಶಾಸ್ತ್ರಾಣಿ = ದುಶ್ಶಾಸ್ತ್ರಗಳನ್ನು, ಸರ್ವಶಃ = ಸಂಪೂರ್ಣವಾಗಿ, ಜಾನನ್ = ತಿಳಿದವರಾಗಿ ಎಂದರೆ ಅರ್ಥದೋಷಗಳನ್ನು ನೋಡುವವರಾಗಿ, ಸುಜನಚೇತಸಾಂ = ಸಜ್ಜನರ ಹೃದಯಗಳ, ಅಂತರಃ = ಒಳಗೆ, ಹರಿಂ = ಹರಿಯನ್ನು, ಪಶ್ಯಂಶ್ಚ = ನೋಡುತ್ತಲೇ, ಆ ತಿಷ್ಠತಿ = ಇದ್ದಾರೆ. ಅವರು ವೃಷಭಃ ಕಿಲ = ಶ್ರೇಷ್ಠರಷ್ಟೇ. ವಾಗೂರ್ಮಿತಾ = ವಾಕ್‌ತರಂಗಗಳನ್ನು ಹೊಂದಿರುವುದು, ವಾಕ್‌ಪ್ರದತ್ವಂ = ವಾಕ್‌ಪ್ರದತ್ವವು, ಬುದ್ಧಿದತ್ವಾದಯಃ ಗುಣಾಃ = ಬುದ್ಧಿಪ್ರೇರಕತ್ವಾದಿಗುಣಗಳು, ಸಾರಾಸಾರವಿವೇಕಶ್ಚ = ಮತ್ತು ಸಾರಾಸಾರ ವಿವೇಕವು, ಯತ್ = ಯಾವಕಾರಣದಿಂದ, ಗುರುತ್ವಪ್ರಮಾಪಕಾಃ = ಗುರುತ್ವವನ್ನು ತಿಳಿಸಿಕೊಡುತ್ತವೆಯೋ, ಅತಃ = ಆ ಕಾರಣದಿಂದ, ಇಯಂ ವಾಕ್ = ಈ ಮಂತ್ರವು, ಪ್ರಾಗುಕ್ತಮಧ್ವಾಖ್ಯರೂಪವಾಗೇವ = ಮೊದಲು ಹೇಳಿದ ಮಧ್ವ ಎಂಬ ವಾಯುದೇವರ ರೂಪವನ್ನು ಸ್ತೋತ್ರ ಮಾಡುವ ವಾಕ್ಯವೇ ಆಗಿದೆ.

**ಅನುವಾದ–** ಎಲ್ಲಾ ವಿದ್ಯೆಗಳಲ್ಲಿ ಯಾವ ವಿದ್ಯೆಗಳು ಮಧ್ಯಮವಾಗಿವೆಯೋ ಮತ್ತು ಅಧಮವಾಗಿವೆಯೋ, ಸಾಮಾನ್ಯಜನರಿಂದ ಬಹಳವಾಗಿ ಸ್ವೀಕರಿಸಲ್ಪಟ್ಟಿರುವುದರಿಂದ, ವೃಜನಾನಿ ಎಂದು ಹೇಳಲ್ಪಡುವ ಅಂತಹ ರಾಜಸ, ತಾಮಸ ಶಾಸ್ತ್ರಗಳನ್ನು ನೋಡುತ್ತಾ ಎಂದರೆ ಅದರಲ್ಲಿರುವ ಅರ್ಥದೋಷಗಳನ್ನು ಗಮನಿಸುತ್ತಾ ಶ್ರೇಷ್ಠರಾದ ಮಧ್ವರು ಸಜ್ಜನರ ಹೃದಯದಲ್ಲಿ ಹರಿಯನ್ನು ನೋಡುತ್ತಾ ಇರುತ್ತಾರಷ್ಟೇ. ಯಾವಕಾರಣದಿಂದ ವಾಗೂರ್ಮಿತ್ವ, ವಾಕ್‌ಪ್ರದತ್ವ, ಬುದ್ಧಿದತ್ವ, ಸಾರಾಸಾರ ವಿವೇಕ ಮೊದಲಾದ ಗುಣಗಳು ಗುರುತ್ವವನ್ನೇ ಸಾಧಿಸಿಕೊಡುತ್ತವೆಯೋ, ಆ ಕಾರಣದಿಂದ ಈ ಮಂತ್ರವೂ ಸಹ ಮೊದಲು ಸ ಮಧ್ವ ಎಂದು ಹೇಳಿದ ವಾಯುದೇವರ ಮೂರನೆಯ ರೂಪವನ್ನೇ ಸ್ತೋತ್ರ ಮಾಡುತ್ತದೆ.

**ಭಾವವಿಲಾಸಿನೀ– ಅಂತಃ ಆತಿಷ್ಠತೀತಿ ಪದಚ್ಛೇದಃ ॥ ೫೩೫ ॥ ಯದ್ಯಸ್ಮಾದ್ರೂಪವಾಗ್ರೂಪ-ಪ್ರತಿಪಾದಕವಾಕ್ ॥ ೫೩೬ ॥**

**ಹೃದಂತಃ ಪ್ರಾಣರೂಪಸ್ಯ ಬಹಿಶ್ಚ ಗುರುರೂಪಿಣಃ ।**
**ಪವಮಾನಸ್ಯ ಚರಿತಂ ಶ್ರುತಿರಿತ್ಥಮಬೋಧಯತ್ ॥ ೫೩೭ ॥**

**ಅರ್ಥ–** ಹೃದಂತಃ = ಹೃದಯದ ಒಳಗೆ, ಪ್ರಾಣರೂಪಸ್ಯ = ಮುಖ್ಯಪ್ರಾಣ-ರೂಪದಿಂದಿರುವ, ಬಹಿಶ್ಚ = ಮತ್ತು ಹೊರಗಡೆ, ಗುರುರೂಪಿಣಃ = ಗುರುರೂಪದಿಂದಿರುವ, ಪವಮಾನಸ್ಯ = ಪವಮಾನನ, ಚರಿತಂ = ಚರಿತ್ರೆಯನ್ನು, ಶ್ರುತಿಃ = ಶ್ರುತಿಯು, ಇತ್ಥಮ್ = ಈ ರೀತಿಯಾಗಿ, ಅಬೋಧಯತ್ = ಬೋಧಿಸಿತು.

**ಅನುವಾದ–** **ಹೃದಯದ ಒಳಗೆ ಪ್ರಾಣರೂಪದಿಂದಿರುವ ಮತ್ತು ಹೊರಗೆ ಗುರುರೂಪದಿಂದಿರುವ ಪವಮಾನನ ಚರಿತ್ರೆಯನ್ನು ಶ್ರುತಿಯು ಈ ರೀತಿ ಬೋಧಿಸಿತು.**

**ಭಾವವಿಲಾಸಿನೀ– ಅಂತರತಿಷ್ಠತೀತ್ಯಸ್ಯ ಭಾವಕಥನಾಯೋಕ್ತಮ್ ॥ ಹೃದಂತರಿತಿ ॥ ಪ್ರಾಣರೂಪಸ್ಯ ನಿಯಾಮಕರೂಪಸ್ಯ ॥ ೫೩೭ ॥**

**ವಿವರಣೆ–** ಮಂತ್ರದಲ್ಲಿ ಇರುವ ಅಂತಃ ಆ ತಿಷ್ಠತಿ ಎಂಬ ಪದಗಳ ಭಾವಗಳನ್ನು ಇಲ್ಲಿ ಸ್ಪಷ್ಟಪಡಿಸುತ್ತಾರೆ.

**ಉನ್ಮಧ್ವ ಇತಿ ಚಾನ್ಯಾ ವಾಕ್ ಸೂಕ್ತೇಸ್ಮಿನ್ ಸ್ತೌತಿ ಮದ್ಗುರುಮ್ ।**
**ವಸಾನೋ ಭೂತಲೇ ಮಧ್ವೋ ಮಹಿಷಃ ಸರ್ವತೋ ಮಹಾನ್ ।**
**ಊರ್ಮಿರುತ್ಕೃಷ್ಟಮತಿಮಾನೂರ್ಮಿವದ್ವಾ ಸದೋನ್ನದನ್ ॥ ೫೩೮ ॥**

**ಅರ್ಥ–** ಉನ್ಮಧ್ವ ಇತಿ = ಉನ್ಮಧ್ವ ಎಂಬ, ಅನ್ಯಾ ವಾಕ್ ಚ = ಇನ್ನೊಂದು ಮಂತ್ರವೂ ಸಹ, ಅಸ್ಮಿನ್ ಸೂಕ್ತೇ = ಈ ಸೂಕ್ತದಲ್ಲಿ, ಮದ್ಗುರುಂ = ನಮ್ಮ ಗುರುಗಳಾದ ಮಧ್ವರನ್ನು, ಸ್ತೌತಿ = ಸ್ತೋತ್ರ ಮಾಡುತ್ತದೆ. ಭೂತಲೇ = ಭೂಮಿಯಲ್ಲಿ, ವಸಾನಃ = ವಾಸ ಮಾಡುವವರು ಎಂದು ಅರ್ಥ. ಮಹಿಷಃ = ಮಹಿಷ ಎಂದರೆ, ಸರ್ವಥಾ = ಎಲ್ಲರಿಗಿಂತಲೂ, ಮಹಾನ್ = ಶ್ರೇಷ್ಠರಾದ, ಮಧ್ವಃ = ಮಧ್ವ ಎಂದು ಅರ್ಥ. ಊರ್ಮಿಃ = ಊರ್ಮಿ ಎಂದರೆ, ಉತ್ಕೃಷ್ಟಮತಿಮಾನ್ = ಉತ್ಕೃಷ್ಟಬುದ್ಧಿಯುಳ್ಳವರು ಎಂದಾಗಲೀ, ಊರ್ಮಿವದ್ = ಸಮುದ್ರತರಂಗಗಳಂತೆ, ಸದಾ = ಯಾವಾಗಲೂ, ಉನ್ನದನ್ = ಗರ್ಜಿಸುವವರು ಎಂದಾಗಲೀ ಅರ್ಥ.

**ಅನುವಾದ– 'ಉನ್ಮಧ್ವ' ಎಂದು ಪ್ರಾರಂಭವಾಗುವ ಇನ್ನೊಂದು ಮಂತ್ರವೂ ಕೂಡ ಈ ಸೂಕ್ತದಲ್ಲಿ ನಮ್ಮ ಗುರುಗಳಾದ ಮಧ್ವರನ್ನು ಸ್ತೋತ್ರ ಮಾಡುತ್ತದೆ. 'ವಸಾನಃ'**

ಎಂದರೆ ಭೂಮಿಯಲ್ಲಿ ವಾಸಮಾಡುವವರು ಎಂದು ಅರ್ಥ. 'ಮಹಿಷಃ' ಎಂದರೆ ಸರ್ವಜೀವರಿಗಿಂತಲೂ ಶ್ರೇಷ್ಠರಾದ ಮಧ್ವರು ಎಂದು ಅರ್ಥ. ಊರ್ಮಿಃ ಎಂದರೆ ಉತ್ಕೃಷ್ಟಬುದ್ಧಿಯುಳ್ಳವರು ಎಂದಾಗಲೀ, ಅಥವಾ ಸಮುದ್ರದ ಅಲೆಗಳಂತೆ ಯಾವಾಗಲೂ ಗರ್ಜಿಸುವವರು ಎಂದಾಗಲೀ ಅರ್ಥ.

**ಭಾವವಿಲಾಸಿನೀ–**"ಉನ್ಮಧ್ವ ಇತ್ಯನೇನ" ಉನ್ಮಧ್ವ ಊರ್ಮಿರ್ವನಾನಾ ಅತಿಷ್ಠದಪೋ ವಸಾನೋ ಮಹಿಷೋ ವಿಗಾಹತೇ । ರಾಜಾ ಪವಿತ್ರರಥೋ ವಾಜಮಾರುಹತ್ಸಹಸ್ರಭೃಷ್ಟಿರ್ಜಯತಿ ಶ್ರವೋಬೃಹದಿ"ತಿ ಶ್ರುತಿಂ ಸಂಗೃಹ್ಣಾತಿ। ಅಯಮರ್ಥಃ। ವಸಾನಃ ಸತ್ಯಲೋಕಾದಾಗತ್ಯ ಭೂಮೌ ನಿವಾಸಂ ಕುರ್ವನ್ । ಊರ್ಮಿಃ ಉ ಉತ್ಕರ್ಷೇಣೋರುರುರ್ವೀ ಮಿರ್ಮತಿರ್ಯಸ್ಯ ತಥೋಕ್ತಃ । ನಿರುಕ್ತತ್ವಾದುಕಾರನಾಶಃ । ಅಥವಾ ಸರ್ವೇಭ್ಯ ಊರ್ಧ್ವಂ ಮಿರ್ಮತಿರ್ಯಸ್ಯ ಸ ಊರ್ಮಿಃ । ಅಪ್ಯದಶ್ಚ ಸಾಮ್ಯಾನ್ನಿಬ್ರೂಯಾದಿತಿ ವಚನಾತ್ । ಇಯ ಇತ್ಯಸ್ಯೋರ್ಧ್ವಮಿತ್ಯ-ಪ್ಯರ್ಥಸಂಭವಾತ್ । ಮಹಿಷಃ ಸಕಲಾಧಿಕಾರಿವರ್ಗೇಷು ಶ್ರೇಷ್ಠಃ ಮಧ್ವಃ। ವನನಾ ವನನೀಯಾ ಭಜನೀಯಾ ಇತ್ಯರ್ಥಃ। ವನಸಂಭಕ್ತಾವಿತಿಧಾತೋಃ। "ಕೃತ್ಯಲುಟೋ ಬಹುಲಮಿ"ತಿ ವಚನಾ-ದರ್ಹಾರ್ಥೇ ಲ್ಯುಟ್ । ಅಥವಾ ವನ್ಯತೇ ಸೇವ್ಯತೇ ಭಗವಾನಾಭಿರಿತಿ ವನನಾಃ । ಅಪಃ ಆಪಯಂತಿ ಜ್ಞಾಪಯಂತಿ ಪರಮಾತ್ಮನಮಿತಿ ವ್ಯುತ್ಪತ್ತ್ಯಾಽಪ್ಪದವಾಚ್ಯಾ ಋಗಾದಿವಿದ್ಯಾಃ ಅಪ ಇವ ವಿಗಾಹತೇ । ಸಕಲವಿದ್ಯಾಸ್ವಪಿ ಸ್ವಮನಶ್ಚಾರಯಿತ್ವಾ ವಿಚಾರಯತೀತ್ಯರ್ಥಃ । ವಿಚಾರ್ಯ-ಪುನಸ್ತಾ ಏವ ವಿದ್ಯಾ ಉದತಿಷ್ಠಯತ್ ಉತ್ಥಾಪಯಾಮಾಸ। ಪರೈರಯೋಗ್ಯಾರ್ಥೇಷು ಬಲಾಗ್ನಿ-ಪಾತಿತಾಃ ಪುನಃ ಸ್ವಯೋಗ್ಯಾರ್ಥೇಷ್ವೇವ ಭಾಷ್ಯಾದಿ ಗ್ರಂಥೈಃ ಸ್ಥಾಪಯಾಮಾಸ ಇತ್ಯರ್ಥಃ । ಪವಿತ್ರರಥಃ । ಪವಿತ್ರನಾಮಾಕ ಸುದರ್ಶನ ಚಕ್ರಮೇವ ರಥೋ ರಥ ಇವ ಯಸ್ಯ ಸ ತಥೋಕ್ತಃ । ಚಕ್ರೋಪರಿ ಸ್ಥಿತ ಇತ್ಯರ್ಥಃ । ಚಕ್ರಸ್ಥಿತಂ ಚಕ್ರಿಣಮಷ್ಟಬಾಹುಮಿತಿ ವಚನಾತ್ । ಭ್ರಸ್ಜಪಾಕ ಇತಿ ಧಾತೋರ್ಭೃಷ್ಟಯಃ ಪರದಹನಸಮರ್ಥಕಿರಣಾಃ ಯಸ್ಯ ಸಃ। ಸಹಸ್ರಭೃಷ್ಟಿಶ್ಚಕ್ರಮಸಹಸ್ರದಲೇಷು ಸಹಸ್ರಧಾ ವ್ಯಾಪ್ತಸ್ವಕರಚರಣಶಿರೋರುಹಾದಿ ಜ್ವಾಲಾಮಾಲಾ ಇತ್ಯರ್ಥಃ । ಮಧ್ಯಾಹ್ನಸೂರ್ಯಪ್ರತಿಮಪ್ರಕಾಶಮಿತಿ ವಚನೇನ ಸುರ್ದಶನಾಖ್ಯಹರೇರಗ್ನಿವಜ್ಜಾಜ್ವಲ್ಯ-ಮಾನಸರ್ವಾವಯವತ್ವಾದಿತಿ ಭಾವಃ ।

ಯಸ್ಯ ರಾಜಾ। ಸರ್ವೇಷಾಂ ಸ್ವಾಮೀ ಸುದರ್ಶನರೂಪೀನಾರಾಯಣಃ। ದುಷ್ಟಸಂಹಾರಕರ್ತಾ ಭಕ್ತರಂಜಕತಾಂ ದರ್ಶಯಿತುಮಿದಂ ವಿಶೇಷಣದ್ವಯಮ್ । ಬೃಹತ್ಸರ್ವೇಭ್ಯ ಉತ್ಕೃಷ್ಟಂ ವಾಜಮನ್ನವತ್ ಅತಿಪ್ರಿಯಂ ಶ್ರವಃ ಮಧ್ವಾಚಾರ್ಯೈಃ ಸಾಕ್ಷಾದ್ಭಗವನ್ಮುಖಾಚ್ಛುತ್ ಶ್ರುತವೇದ-ಪಂಚರಾತ್ರಾದಿಶ್ರವಣಮಾರುಹತ್ ಸದಾ ವಿಷಯತಯಾ ತತ್ರ ಸಂನಿಹಿತೋಽಭವದಿತ್ಯರ್ಥಃ ।

ಜಯತ್ಯುತ್ಕೃಷ್ಟೋ ವರ್ತತೇ ಪರಾನಭಿಭಾವಯತಿ ಚ। ಸ್ವಕೃತಶ್ರವಣಪರಿತುಷ್ಟಸುದರ್ಶನಕೃಪಯಾ ಮಧ್ವಸ್ಯ ಪೂರ್ವಾರ್ಥ್ಯೋಕ್ತಸಕಲ ವಿದ್ಯೋದ್ಧಾರಣಸಾಮರ್ಥ್ಯಂ ವಿರೋಧಿಭೂತಸಕಲ-ದುರ್ಮತನಿವಾರಣ ಸಾಮರ್ಥ್ಯಂ ಚ ಭಗವನ್ಮುಖಾದೇವ ಶ್ರುತಶ್ರವಣಬಲಾತ್ ಶ್ರವಣಪರಿತುಷ್ಟ

**ದುಷ್ಟಸಂಹಾರಕ ಸುದರ್ಶನಾತ್ಮಕ ಅತಿತ್ಮುಗ್ರಭಗವತ್‌ಕೃಪಯಾ ಚೇತಿ ದರ್ಶಯಿತುಮುತ್ತರಾರ್ಧಂ ಪ್ರವೃತ್ತಮ್ । ದುರ್ಮತಪ್ರವರ್ತಕ ದೈತೇಯ ಮುಖಭಂಗಸ್ಯ ಸುದರ್ಶನಸ್ಥಹರಿಣೈವ ಕರ್ತವ್ಯತ್ವಾತ್ ।. ಅತ ಏವಾರುಹಜ್ಜಯತೀತಿ ಕ್ರಿಯಾದ್ವಯಂ ಚೇತಿ ಭಾವಃ । ಏತತ್ ಸರ್ವಮಭಿಪ್ರೇತ್ಯಾಹ – ವಸಾನ ಇತ್ಯಾದಿನಾ ॥ ೫೩೮-೫೩೯ ॥**

**ವಿವರಣೆ–** ಈ ಶ್ಲೋಕದಲ್ಲಿ "ಉನ್ಮಧ್ವ ಊರ್ಮಿರ್ವನನಾ ಅತಿಷ್ಠದಪೋ ವಸಾನೋ ಮಹಿಷೋ ವಿಗಾಹತೇ । ರಾಜಾ ಪವಿತ್ರರಥೋ ವಾಜಮಾರುಹತ್ ಸಹಸ್ರಭೃಷ್ಟಿರ್ಜಯತಿ ಶ್ರವೋ ಬೃಹತ್" (7-3-19-40) ಎಂಬ ಮಂತ್ರದ ಅರ್ಥವನ್ನು ಸಂಗ್ರಹಿಸುತ್ತಾರೆ. ಮಂತ್ರದ ಅರ್ಥವು ಹೀಗಿದೆ - ವಸಾನಃ = ಸತ್ಯಲೋಕದಿಂದ ಬಂದು ಭೂಮಿಯಲ್ಲಿ ವಾಸವನ್ನು ಮಾಡುವವರು. ಊರ್ಮಿಃ = ಉ ಉತ್ಕರ್ಷದಿಂದ ಕೂಡಿದ ಉರು = ವಿಸ್ತಾರವಾದ, ಮಿ = ಮತಿಯುಳ್ಳವರು ಎಂದು ಅರ್ಥ. ನಿರುಕ್ತವಾದ್ದರಿಂದ 'ಉರು' ಎಂಬಲ್ಲಿರುವ ಉಕಾರಕ್ಕೆ ನಾಶವುಂಟಾಗಿದೆ. ಅಥವಾ 'ಊರ್ಧ್ವ' ಎಂದರೆ ಎಲ್ಲರಿಗಿಂತಲೂ ಶ್ರೇಷ್ಠವಾದ ಮಿ = ಜ್ಞಾನವನ್ನುವುಳ್ಳವರು ಎಂದು ಅರ್ಥವನ್ನು ಮಾಡಬಹುದು. ಮಹಿಷಃ = ಸಕಲ ಅಧಿಕಾರಿವರ್ಗದಲ್ಲಿ ಶ್ರೇಷ್ಠರಾದ ಮಧ್ವರು. ವನನಾ = ವನನೀಯಾ ಭಜನೀಯವಾದ ಎಂದು ಅರ್ಥ. ವನ ಸಂಭಕ್ತೌ ಎಂಬ ಧಾತುವಿನಿಂದ ಅರ್ಹಾರ್ಥದಲ್ಲಿ ಲ್ಯುಟ್ ಪ್ರತ್ಯಯವು ಬಂದು ಈ ಶಬ್ದವು ನಿಷ್ಪನ್ನವಾಗಿದೆ. ಅಥವಾ ವನ್ಯತೇ ಎಂದರೆ ಭಗವಂತನು ಇವುಗಳಿಂದ ಸೇವಿಸಲ್ಪಡುತ್ತಾನೆ ಎಂಬ ಅರ್ಥದಲ್ಲಿ, ವನನಾಃ ಎಂದರೆ ಋಗಾದಿಶಬ್ದಗಳು ಎಂದು ಅರ್ಥವಾಗುತ್ತದೆ. ಅಪಃ = ಪರಮಾತ್ಮನ ಜ್ಞಾನವನ್ನು ಪ್ರಾಪಣ ಮಾಡುವುದರಿಂದ ಅಪ್‌ಶಬ್ದವಾಚ್ಯವಾದ ಋಗಾದಿವಿದ್ಯೆಗಳನ್ನು ನೀರನ್ನು ಪ್ರವೇಶ ಮಾಡಿದಂತೆ. ವಿಗಾಹತೇ = ಪ್ರವೇಶಿಸುತ್ತಾರೆ ಎಂದರೆ ಸಕಲವಿದ್ಯೆಗಳಲ್ಲೂ ತಮ್ಮ ಮನಸ್ಸಿನಿಂದ ಸಂಚರಿಸಿ ವಿಚಾರ ಮಾಡುತ್ತಾರೆ ಎಂದು ಅರ್ಥ. ಪವಿತ್ರರಥಃ = ಪವಿತ್ರನಾಮಕ ಸುದರ್ಶನ ಚಕ್ರವೇ ರಥವಾಗಿವುಳ್ಳ ಎಂದರೆ ಚಕ್ರದಲ್ಲಿ ಅಧಿಷ್ಠಿತನಾದ ಎಂದು ಅರ್ಥ. 'ಚಕ್ರಸ್ಥಿತಂ ಚಕ್ರಿಣಮಷ್ಟ ಬಾಹುಮ್' ಎಂಬ ವಚನದಿಂದ ಈ ಅರ್ಥವನ್ನು ಹೇಳಬಹುದು. ಸಹಸ್ರಭೃಷ್ಟಿಃ = ಚಕ್ರದ ಸಹಸ್ರದಲಗಳಲ್ಲಿ ಸಹಸ್ರರೂಪದಿಂದ ವ್ಯಾಪ್ತನಾದ ಭಗವಂತನ ಕರಚರಣ ಕೇಶಾದಿ ಜ್ವಾಲಾಮಾಲೆಯನ್ನು ಧರಿಸಿದವನು ಎಂದು ಅರ್ಥ. ಭ್ರಷ್ಜಪಾಕೇ ಎಂಬ ಧಾತುವಿನಿಂದ ಉಂಟಾದ ಭೃಷ್ಟಿಶಬ್ದವು ಶತ್ರುದಹನ ಸಮರ್ಥವಾದ ಕಿರಣಗಳುಳ್ಳವನು ಎಂಬ ಅರ್ಥವನ್ನು ಕೊಡುತ್ತದೆ. 'ಮಧ್ಯಾಹ್ನಸೂರ್ಯಪ್ರತಿಮಪ್ರಕಾಶಮ್' ಎಂಬ ವಚನದಿಂದ ಸುದರ್ಶನ ಚಕ್ರದಲ್ಲಿರುವ ಸುದರ್ಶನನಾಮಕಹರಿಯು ಅಗ್ನಿಯಂತೆ ಪ್ರಜ್ವಲಿಸುವ ಎಲ್ಲಾ ಅವಯವಗಳನ್ನು ಹೊಂದಿದ್ದಾನೆ ಎಂದು ಅಭಿಪ್ರಾಯ. ಅಂತಹ ಪರಮಾತ್ಮನು, ಯಸ್ಯ = ಯಾವ ಮಧ್ವರಿಗೆ, ರಾಜಾ = ರಾಜನಾಗಿದ್ದಾನೆಯೋ, ಎಲ್ಲರಿಗೂ ಸ್ವಾಮಿಯಾದ ಸುದರ್ಶನರೂಪಿಯಾದ ನಾರಾಯಣನು ಯಾರಿಗೆ ಸ್ವಾಮಿಯಾಗಿದ್ದಾನೆಯೋ ಅಂತಹ

ಮಧ್ವರು ಎಂದು ಅರ್ಥ. ದುಷ್ಟಸಂಹಾರಕರ್ತೃತ್ವವನ್ನು, ಭಕ್ತರಂಜಕತ್ವವನ್ನು ಉಪಪಾದನೆ ಮಾಡಲು 'ಸಹಸ್ರಭೃಷ್ಟಿ' ಎಂಬ ವಿಶೇಷಣವನ್ನೂ 'ರಾಜಾ 'ಎಂಬ ವಿಶೇಷಣವನ್ನೂ ಇಲ್ಲಿ ಕೊಡಲಾಗಿದೆ. ಬೃಹತ್ = ಎಲ್ಲದಕ್ಕಿಂತಲೂ ಉತ್ಕೃಷ್ಟವಾದ, ವಾಜಂ = ಅನ್ನದಂತೆ ಅತಿಪ್ರಿಯವಾದ, ಶ್ರವಃ = ಶ್ರವಣವನ್ನು ಎಂದರೆ ಮಧ್ವಾಚಾರ್ಯರು ದೇವರ ಮುಖದಿಂದ ಸಾಕ್ಷಾತ್ತಾಗಿ ಕೇಳಿದ ವೇದಪಂಚರಾತ್ರಾದಿಶ್ರವಣವನ್ನು, ಆರುಹತ್ = ಹತ್ತಿದನು ಎಂದರೆ ವಿಷಯಕ್ಕೆ ಸಂಬದ್ಧನಾಗಿ ನಾರಾಯಣನು ಯಾವಾಗಲೂ ಅಲ್ಲಿದ್ದಾನೆ ಎಂದು ಅರ್ಥ. ಅಂತಹ ನಾರಾಯಣನು ಜಯತಿ = ಉತ್ಕೃಷ್ಟನಾಗಿದ್ದಾನೆ ಮತ್ತು ಶತ್ರುಗಳನ್ನು ಪರಾಭವಗೊಳಿಸುತ್ತಾನೆ. ತಾವು ಮಾಡಿದ ಶ್ರವಣದಿಂದ ಪರಿತುಷ್ಟನಾದ ಸುದರ್ಶನನಾಮಕ ಪರಮಾತ್ಮನ ಕೃಪೆಯಿಂದ ಮಧ್ವರಿಗೆ ಮಂತ್ರದ ಪೂರ್ವಾರ್ಧದಲ್ಲಿ ಹೇಳಿದ ಸಕಲವಿದ್ಯೋದ್ಧಾರಣಸಾಮರ್ಥ್ಯವೂ ವಿರೋಧಿಗಳಾದ ಸಕಲದುರ್ಮತಗಳ ನಿವಾರಣಸಾಮರ್ಥ್ಯವೂ ಸಹ ಭಗವನ್ಮುಖದಿಂದಲೇ ಮಾಡಿದ ಶ್ರವಣದಿಂದ ಸಂತುಷ್ಟನಾದ ಸುದರ್ಶನನಾಮಕನಾದ ಅತ್ಯುಗ್ರ ಭಗವದ್ರೂಪದ ಕೃಪೆಯಿಂದ ಎಂದು ತಿಳಿಸಲು ಮಂತ್ರದ ಉತ್ತರಾರ್ಧವು ಪ್ರವೃತ್ತವಾಗಿದೆ. ದುರ್ಮತ ಪ್ರವರ್ತಕರಾದ ದೈತ್ಯರ ಮುಖಭಂಗವನ್ನು ಸುದರ್ಶನಸ್ಥಿತನಾದ ಹರಿಯೇ ಮಾಡಬೇಕಷ್ಟೇ. ಆದ್ದರಿಂದ ಆರುಹತ್ = ಸನ್ನಿಹಿತನಾಗಿದ್ದಾನೆ. ಜಯತಿ = ಶತ್ರುಗಳನ್ನು ಪರಾಭವಗೊಳಿಸುತ್ತಾನೆ ಎಂದು ಎರಡು ಕ್ರಿಯೆಗಳು ಹೇಳಲ್ಪಟ್ಟಿವೆ. ಇದು ಮಂತ್ರಾರ್ಥ. ಈ ಅಭಿಪ್ರಾಯವನ್ನೇ ಮುಂದಿನ ಐದಾರು ಶ್ಲೋಕಗಳಲ್ಲಿ ರಾಜರು ಸ್ಪಷ್ಟಪಡಿಸುತ್ತಾರೆ.

**ವನನಾ ಭಜನಾರ್ಹತ್ವಾದಪೋ ಜ್ಞಾನಪ್ರದತ್ವತಃ ।**
**ಋಗಾದಿವಿದ್ಯಾಃ ಸರಿತ ಇವ ವಿದ್ವಾನ್ ವಿಗಾಹತೇ ॥ ೫೩೯ ॥**

**ಅರ್ಥ–** ವನನಾಃ = ವನನ ಎಂದರೆ, ಭಜನಾರ್ಹತ್ವಾತ್ = ಭಜನೆಗೆ ಅರ್ಹವಾದಕಾರಣದಿಂದ, ಅಪಃ = ಅಪ ಎಂದರೆ ಜ್ಞಾನಪ್ರದವಾದ ಕಾರಣದಿಂದ, ಋಗಾದಿವಿದ್ಯಾಃ = ಋಗಾದಿವಿದ್ಯೆಗಳನ್ನು, ಸರಿತ ಇವ = ನದಿಗಳನ್ನೋ ಎಂಬಂತೆ, ವಿದ್ವಾನ್ = ಜ್ಞಾನಿಗಳಾದ ಮಧ್ವರು, ವಿಗಾಹತೇ = ಅವಗಾಹನೆ ಮಾಡುತ್ತಾರೆ.

**ಅನುವಾದ–** ಭಜನಕ್ಕೆ ಯೋಗ್ಯವಾದುದರಿಂದ 'ವನನ' ಎಂದು ಕರೆಸಲ್ಪಡುವ ಜ್ಞಾನಪ್ರದವಾದ ಕಾರಣದಿಂದ ಅಪ್ ಶಬ್ದದಿಂದ ಹೇಳಲ್ಪಡುವ ಋಗಾದಿ ವಿದ್ಯೆಗಳನ್ನು ಜ್ಞಾನಿಗಳಾದ ಮಧ್ವರು ನದಿಗಳನ್ನು ಪ್ರವೇಶಿಸಿದಂತೆ ಪ್ರವೇಶಿಸುತ್ತಾರೆ.

**ಯಸ್ಮಾದುದಸ್ಥಾಪಯತ್ ತಾಸ್ತಸ್ಮಾತ್ ಸೋಽತಿಷ್ಠಯತ್ ಪ್ರಭುಃ ।**
**ಅನ್ಯಾರ್ಥೇ ಪಾತನಂ ಪಾತಃ ಸ್ವಸ್ವಾರ್ಥೇ ಪ್ರಾಪ್ತಿರುತ್ಥಿತಿಃ ॥ ೫೪೦ ॥**

**ಅರ್ಥ–** ಯಸ್ಮಾತ್ = ಯಾವ ಕಾರಣದಿಂದ, ತಾಃ = ಆ ಋಗಾದಿ ವಿದ್ಯೆಗಳನ್ನು, ಉದಸ್ಥಾಪಯತ್ = ಪ್ರತಿಷ್ಠೆಗೊಳಿಸಿದರೋ, ತಸ್ಮಾತ್ = ಆ ಕಾರಣದಿಂದ, ಸ ಪ್ರಭುಃ = ಆ

ಪ್ರಭುಗಳಾದ ಮಧ್ವರು, ಅತಿಷ್ಠಯತ್ (ಅತಿಷ್ಠಪತ್) = ಅತಿಷ್ಠಯತ್ ಎಂದರೆ ಸ್ಥಾಪಿಸಿದರು ಎಂದು ಅರ್ಥ. ಅನ್ಯಾರ್ಥೇ = ಬೇರೆ ಅರ್ಥದಲ್ಲಿ, ಪಾತನಂ = ಅವುಗಳನ್ನು ಕೊಂಡೊಯ್ಯುವುದು, ಪಾತಃ = ಪತನವಾಗುತ್ತದೆ. ಸ್ವಸ್ವಾರ್ಥೇ = ತಮ್ಮ ತಮ್ಮ ಅರ್ಥಗಳಲ್ಲಿ, ಪ್ರಾಪ್ತಿಃ = ಅವುಗಳನ್ನು ಕೊಂಡೊಯ್ಯುವುದು, ಉತ್ಥಿತಿಃ = ಉತ್ಥಾನವಾಗುತ್ತದೆ.

**ಅನುವಾದ–** ಯಾವ ಕಾರಣದಿಂದ ಮಧ್ವರು ಆ ವಿದ್ಯೆಗಳನ್ನು ಉದ್ಧಾರ ಮಾಡಿದರೋ, ಆ ಕಾರಣದಿಂದ ಈ ಮಂತ್ರವು 'ಅತಿಷ್ಠಯತ್' ಎಂದು ಹೇಳಿದೆ. ಮಂತ್ರಗಳನ್ನು ಬೇರೆ ಅರ್ಥದಲ್ಲಿ ತೆಗೆದುಕೊಂಡು ಹೋದರೆ ಅವುಗಳ ಪಾತ. ಮಂತ್ರಗಳ ನಿಜವಾದ ಅರ್ಥದಲ್ಲಿ ಕೊಂಡೊಯ್ಯುವುದು ಅವುಗಳ ಉತ್ಥಾನ.

**ಭಾವವಿಲಾಸಿನೀ–** ಅತಿಷ್ಠಯದುದತಿಷ್ಠಯದಿತ್ಯುಚ್ಯತ ಇತ್ಯರ್ಥಃ ॥ ೫೪೦ ॥

ಯಸ್ಯ ರಾಜಾ ಪವಿತ್ರಾಖ್ಯಸುದರ್ಶನರಥೋ ಹರಿಃ ।
ಸಹಸ್ರಾರೇಷು ಯದ್ಭೃಷ್ಟಿರ್ಜ್ವಾಲಾ ಚಾಗ್ನೇಃ ಸಹಸ್ರಧಾ ॥ ೫೪೧ ॥

ಸಹಸ್ರಭೃಷ್ಟಿಃ ಸ ಬೃಹಚ್ಛ್ರವಃ ಶ್ರವಣಮಾತ್ಮನಃ ।
ಕೃತಂ ವಾಜಂ ಸ್ವೇಷ್ಟದತ್ವಾದನ್ನಮನ್ನಸಮಂ ಸದಾ ॥ ೫೪೨ ॥

ಅರುಹದ್ ವಿಷಯೀಭೂಯ ಸದಾ ತತ್ರೈವ ಸಂಸ್ಥಿತಃ ।
ಜಯತ್ಯಖಿಲದುರ್ವೃತ್ತಾಂಸ್ತಸ್ಯಾಸಾಧ್ಯಂ ನ ಕಿಂಚನ ॥ ೫೪೩ ॥

**ಅರ್ಥ–** ಯಸ್ಯ = ಯಾವ ಮಧ್ವರಿಗೆ, ಪವಿತ್ರಾಖ್ಯಸುದರ್ಶನ ರಥಃ = ಪವಿತ್ರವೆಂಬ ಸುದರ್ಶನರಥವುಳ್ಳ, ಹರಿಃ = ಹರಿಯು, ಸ್ವಾಮಿಯೋ = ರಂಜಕನೋ, ಸಹಸ್ರಾರೇಷು = ಆ ಸುದರ್ಶನ ಚಕ್ರದ ಸಹಸ್ರ ಅರಗಳಲ್ಲಿ, ಯತ್‌ಭೃಷ್ಟಿಃ = ಯಾರ ಜ್ವಾಲೆಗಳು, ಅಗ್ನೇಃ = ಅಗ್ನಿ ಜ್ವಾಲೆಗಳಂತೆ, ಸಹಸ್ರಧಾ = ಸಹಸ್ರಪ್ರಕಾರವಾಗಿವೆಯೋ, ಸಃ = ಅವನು (ಹರಿಯು) ಸಹಸ್ರಭೃಷ್ಟಿಃ = ಸಹಸ್ರಭೃಷ್ಟಿಃ ಎಂದು ಕರೆಯಲ್ಪಡುತ್ತಾನೆ. ಕೃತಂ = ಮಧ್ವರು ಮಾಡಿದ, ಬೃಹಚ್ಛ್ರವಃ = ತನ್ನ ವಿಷಯಕವಾದ ಶ್ರವಣವು, (ಸ್ವೇಷ್ಟ)ಶ್ರೇಷ್ಠದತ್ವಾತ್ = ತನಗೆ ಬಹಳ ಪ್ರಿಯವಾಗಿರುವುದರಿಂದ, ವಾಜಂ = ಅನ್ನವು, ಸದಾ ಅನ್ನ ಸಮಂ = ಯಾವಾಗಲೂ ಅನ್ನಕ್ಕೆ ಸಮಾನವಾಗಿರುತ್ತದೆ. ಅಂತಹ ಶ್ರವಣವನ್ನು ಆರುಹತ್ = ಆರುಹತ್ ಎಂದರೆ ಶ್ರವಣಕ್ಕೆ ವಿಷಯಕನಾಗಿ ಸದಾ ಅಲ್ಲಿಯೇ ಇರುವನು ಎಂದು ಅರ್ಥ. ಅಖಿಲದುರ್ವೃತ್ತಾನ್ = ಸಮಸ್ತ ದುರ್ಮತಗಳನ್ನು, ಮತ್ತು ದುರ್ನಡತೆಯುಳ್ಳವರನ್ನು ಜಯತಿ = ಪರಾಭವಗೊಳಿಸುತ್ತಾನೆ. ತಸ್ಯ = ಅವನಿಗೆ, ಅಸಾಧ್ಯಂ = ಅಸಾಧ್ಯವು, ಕಿಂಚನ ನ = ಯಾವುದೂ ಇಲ್ಲ.

**ಅನುವಾದ–** ಯಾವ ಮಧ್ವರಿಗೆ ಪವಿತ್ರನಾಮಕ ಸುದರ್ಶನವನ್ನು ರಥವಾಗಿ ಹೊಂದಿದ ಹರಿಯು ಸ್ವಾಮಿಯೂ ಮತ್ತು ರಂಜಕನೋ, ಯಾರ ಸುದರ್ಶನದ ಸಹಸ್ರದಲಗಳಲ್ಲಿ ಅಗ್ನಿಜ್ವಾಲೆಗಳಂತೆ ಜ್ವಾಲೆಗಳಿದೆಯೋ, ಆ ಸಹಸ್ರಭೃಷ್ಟಿಯಾದವನು ನಾರಾಯಣ. ಅವನು ಮಧ್ವರು ಮಾಡಿದ ತನಗೆ ಇಷ್ಟವಾದ ಕಾರಣದಿಂದ ಅನ್ನದಂತೆ ಅತಿಪ್ರಿಯವಾದ, ಅನ್ನಕ್ಕೆ ಸಮಾನವಾದ ಭಗವದ್ವಿಷಯಕಶ್ರವಣವನ್ನು ಅಥವಾ ತನ್ನ ವಿಷಯಕ ಶ್ರವಣವನ್ನು ವಿಷಯತಯಾ ಏರಿ ಎಂದರೆ ಅಲ್ಲಿ ಸಂಸ್ಥಿತನಾಗಿ ಸಕಲ ದುರ್ಮತಗಳನ್ನು ಮತ್ತು ದುರ್ನಡತೆಗಳುಳ್ಳವರನ್ನು ಪರಾಭವಗೊಳಿಸುತ್ತಾನೆ. ಅವನಿಗೆ ಅಸಾಧ್ಯಾವಾದುದು ಯಾವುದೂ ಇಲ್ಲ.

**ಭಾವವಿಲಾಸಿನೀ–** ಯಸ್ಯ ಮಧ್ವಸ್ಯ ಸಹಸ್ರಾರೇಷು ಸಹಸ್ರದಲೇಷು ಯದ್ಭೃಷ್ಟಿರ್ಯಸ್ಯ ಹರೇರ್ಭೃಷ್ಟಿಃ। ಭೃಷ್ಟಿಪದಾರ್ಥಮಾಹ–ಅಗ್ನೇರ್ಜ್ವಾಲೇತಿ॥ ಅಗ್ನೇರಗ್ನಿವಜ್ಜಾಜ್ವಲ್ಯಮಾನತಯಾಗ್ನಿ ಶಬ್ದವಾಚ್ಯಸ್ಯ ॥ ೫೪೧ ॥ ತಸ್ಯ ಮಧ್ವಸ್ಯ ॥ ೫೪೨– ೫೪೩ ॥

ಯಸ್ಯ ಶ್ರವಣಸಂಪತ್ತ್ಯಾ ವಿಷ್ಣುಃ ಪ್ರೀತೋಽಭವತ್ ಪ್ರಭುಃ ।
ನಾಪೂರ್ವೋ ನಿಗಮೋದ್ಧಾರಸ್ತಸ್ಯೇತಿ ಹೃದಯಂ ಶ್ರುತೇಃ ॥ ೫೪೪ ॥

**ಅರ್ಥ–** ಯಸ್ಯ = ಯಾವ ಮಧ್ವರ, ಶ್ರವಣ ಸಂಪತ್ತ್ಯಾ= ಶ್ರವಣ ಸಂಪತ್ತಿಯಿಂದ, ಪ್ರಭುಃ = ಪ್ರಭುವಾದ, ವಿಷ್ಣುಃ = ವಿಷ್ಣುವು, ಪ್ರೀತೋಭವತ್ = ಪ್ರೀತನಾದನೋ. ತಸ್ಯ = ಆ ಮಧ್ವರಿಗೆ, ನಿಗಮೋದ್ಧಾರಃ = ಸಮಸ್ತ ವೇದವಿದ್ಯೆಗಳ ಉದ್ಧಾರವು, ಅಪೂರ್ವಃ ನ = ಆಶ್ಚರ್ಯವಲ್ಲ, ಇತಿ = ಎಂದು ಶ್ರುತೇಃ = ಶ್ರುತಿಯ, ಹೃದಯಂ = ಅಭಿಪ್ರಾಯ.

**ಅನುವಾದ–** ಯಾವ ಮಧ್ವರು ಮಾಡಿದ ಶ್ರವಣದಿಂದ ಪ್ರಭುವಾದ ವಿಷ್ಣುವು ಪ್ರಸನ್ನನಾದನೋ, ಅಂತಹ ಮಧ್ವರು ಸಮಸ್ತ ವೇದವಿದ್ಯೆಗಳನ್ನು ಉದ್ಧಾರ ಮಾಡುವುದು ಆಶ್ಚರ್ಯವಲ್ಲ ಎಂದು ಶ್ರುತಿಯ ಅಭಿಪ್ರಾಯ.

**ಭಾವವಿಲಾಸಿನೀ–** ಯಸ್ಯ ಮಧ್ವಸ್ಯ ॥ ೫೪೪ ॥

ಸಪ್ತಸ್ವಸೃರಿತಿಶ್ರುತ್ಯಾ ಮಧ್ವಃ ಪ್ರಸ್ತೂಯತೇ ಸ್ಫುಟಮ್ ॥ ೫೪೫ ॥

**ಅರ್ಥ–** ಸಪ್ತಸ್ವಸೃಃ ಇತಿ ಶ್ರುತ್ಯಾಃ = 'ಸಪ್ತಸ್ವಸೃಃ' ಎಂಬ ಮಂತ್ರದಿಂದ, ಮಧ್ವಃ = ಶ್ರೀ ಮಧ್ವರು, ಸ್ಫುಟಂ = ಸ್ಫುಟವಾಗಿ, ಪ್ರಸ್ತೂಯತೇ = ಪ್ರಸ್ತಾವಿಸಲ್ಪಡುತ್ತಾರೆ.

**ಅನುವಾದ–** 'ಸಪ್ತಸ್ವಸೃಃ' ಎಂಬ ವೇದಮಂತ್ರವು ಮಧ್ವರನ್ನು ಸ್ಪಷ್ಟವಾಗಿ ಪ್ರತಿಪಾದಿಸುತ್ತದೆ.

**ಭಾವವಿಲಾಸಿನೀ–** ''ಸಪ್ತಸ್ವಸೃರಿತ್ಯನೇನ'' ಸಪ್ತಸ್ವಸೃರರುಷೀರ್ವಾವಶಾನೋ ವಿದ್ವಾನ್ ಮಧ್ವ ಉಜ್ಜಭಾರಾದೃಶೇಕವಮ್ । ಅಂತರ್ಯೇಮೇ ಅಂತರಿಕ್ಷೇ ಪುರಾಜಾ ಇಚ್ಛನ್ವವ್ರಿಮ-

ವಿದತ್‌ಪೂಷಣಸ್ಯೇ''ತಿ ಶ್ರುತಿಂ ಗೃಹ್ಣಾತಿ । ಅಯಮರ್ಥಃ । ವಾವಶಾನೋಽತಿಶಯೇನ ದೀಪ್ಯಮಾನಃ । ''ವಶಕಾಂತಾವಿ''ತಿ ಧಾತೋರ್ಯಙ್‌ಲುಗಂತಸ್ಯೇದಂ ರೂಪಮ್ । ''ದೀಪ್ತಾಂಗುಷ್ಠ'' ಇತ್ಯಣುಮಧ್ವವಿಜಯವಚನಾತ್ । ಕಮಾನಂದರೂಪಂ ಪರಮಾತ್ಮಾನಮ್ । ''ಕಂ ಬ್ರಹ್ಮ ಖಂ ಬ್ರಹ್ಮೇ''ತಿ ಶ್ರುತೇಃ । ''ಶ್ರುತೋಪನಿಷತ್ಕಗತ್ಯಭಿಧಾನಾದಿ''ತಿ ಸೂತ್ರಾಚ್ಚ । ವಿದ್ವಾನ್ ಸಾಕ್ಷಾತ್ ಪಶ್ಯನ್ ಸಕಲವೇದಾರ್ಥತಯಾ ಪಶ್ಯಂಶ್ಚ ಮಧ್ವಃ । ಅಋಷೀಃ ರೋಷವಿರೋಧಿಭೂತಾಃ ಶಾಂತ್ಯಾದಿ ಗುಣದಾಯಕಾ ಇತ್ಯರ್ಥಃ । ವರ್ಣವ್ಯತ್ಯಾಸೇನ ಪ್ರಲಯೇ ಭಗವತೋಽತಿರಿಕ್ತ ಋಷಿರಹಿತಾ ವಾ । ಅಕಾರವಾಚ್ಯಹಯಗ್ರೀವಾಖ್ಯಋಷಿಸಹಿತಾ ವಾ । ಸ್ವಸೃಃ ಸ್ವತ ಏವಾರ್ಥೋಪಲಬ್ಧಿಪೂರ್ವಕಕರ್ತಾರಂ ವಿನಾನಿತ್ಯತ್ವಾತ್ ಸ್ವಸಾಮರ್ಥ್ಯಾದೇವ ಸ್ವತಂತ್ರಭಗವತೋ ಮುಖಾತ್‌ಸೃಷ್ಯತಾ ನಿಸೃತಾ ಇತ್ಯರ್ಥಃ । ''ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ । ಸರ್ಗೇ ಸರ್ಗೇಽಮುನೈವೇತ ಉದ್ಗೀರ್ಯಂತೇ ತಥೈವ ಚೇ''ತಿ ವಚನಾತ್ । ಸ್ವತಂತ್ರಭಗವತೋ ಮುಖಾತ್ ಸೃಷ್ಟಾಶ್ಚ । ''ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ । ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀ ಸುತಃ । ಕೋ ಹ್ಯನ್ಯಃ ಪುಂಡರೀಕಾಕ್ಷಾನ್ ಮಹಾಭಾರತ ಕೃದ್ಭವೇದಿ''ತಿ ವಚನಾಚ್ಚ । ಸಪ್ತ ಋಗಾದಿಚತುಷ್ಟಯಪಂಚರಾತ್ರ-ಪುರಾಣಭಾರತಭೇದೇನ ಸಪ್ತಸಂಖ್ಯಾಕಾ ವಿದ್ಯಾಃ । ದೃಶೇ ಜ್ಞಾನಾಯೋಜ್ಜಭಾರೋರ್ಧ್ವಂ ಜಹಾರ । ''ಹ್ಯಗ್ರಹೋರ್ಭಶ್ಛಂದಸೀ''ತಿ ಸೂತ್ರಾದ್ಧಕಾರಸ್ಯ ಭಕಾರಾದೇಶಃ। ಅಪ್ರಮಾಣತ್ವಪೌರುಷೇಯತ್ವಮಿಥ್ಯಾತ್ವಾವೇದಕತ್ವಾದಿನಾಽಧಃಪತಿತಾಃ ಪ್ರಮಾಣತ್ವಾದಿ-ಸ್ಥಾಪನೇನೋದ್ಧೃತವಾನಿತ್ಯರ್ಥಃ । ಜ್ಞಾನಾರ್ಥಮುದ್ಧೃತತ್ವಾತ್ ''ಸಪ್ತಸ್ವಸಾರೋ ಅಭಿಸಂನವಂತೇ ಯತ್ರ ಗವಾಂ ನಿಹಿತಾ ಸಪ್ತನಾಮೇ''ತಿ ಶ್ರುತಿಸಮಾಖ್ಯಾಯಾ ಚ ವಿದ್ಯಾ ಏವ ಸಪ್ತಸ್ವಸಾರಃ ।

ಅಭಿ ಅಭಿತಃ ಸಂನವಂತೇ ಸ್ತುವಂತಿ । ಯತ್ರ ಯಾಸು ಸಪ್ತಸ್ವಸೃಷು ಗವಾಂ ವಿದ್ಯಾನಾಂ ಸಪ್ತನಾಮ ನಾಮಾನಿ ಸಂಜ್ಞಾಃ ನಿಹಿತಾ ನಿಹಿತಾನಿ ''ವ್ಯತ್ಯಯೋಬಹುಲಮಿ''ತಿ ವಚನಾತ್ ಬಹುವಚನಸ್ಥಾನ ಏಕವಚನಮ್ । ಏವಂ ಚಾತ್ರ ಸಪ್ತಸ್ವಸೃಣಾಂ ವಿದ್ಯಾತ್ವೇನ ಸ್ಪಷ್ಟಮುದಿತತ್ವಾದತ್ರಾಪಿ ವಿದಾ ಏವ ಸಪ್ತಸ್ವಸಾರಃ ।

ಕೇನ ಸಾಮರ್ಥ್ಯೇನ ಕಿಮರ್ಥಂ ಚೋದ್ಧೃತವಾನ್ ಉದ್ಧೃತ್ಯ ಚ ಕಿಂ ಕೃತವಾನಿತಿ ಶಂಕಾ-ಪರಿಹಾರಾಯೋತ್ತರಾರ್ಧಸ್ಯ ಪ್ರವೃತ್ತಿಃ । ಪೂಷಣಸ್ಯ ಪೂಪೂರ್ಣೌ ಷಣೌ ಬಲನಿಯಮನೇ ಬಲಾನಂದಾವಾ ಯಸ್ಯ ಸ ತಥೋಕ್ತಃ । ತಸ್ಯ ಪರಮಾತ್ಮನಃ ಅಪ್ಯಕ್ಷರಸಾಮ್ಯಾನ್ನಿ ಬ್ರೂಯಾತ್ ಷಕಾರೋ ಬಲಂ ಣಕಾರಃ ಪ್ರಾಣ ಆತ್ಮಾ ಣಶ್ಚ ನಿರ್ವೃತಿವಾಚಕ ಇತ್ಯಾದಿವಚನಾತ್ । ''ಉಣಾದಯೋ ಬಹುಲಮಿ''ತಿ ಸೂತ್ರಾತ್ ಪೃಪಾಲನಪೂರಣಯೋರಿತಿ ಧಾತೋಃ ಔಣಾಧಿಕ ಉಪ್ರತ್ಯಯಾಂತೋ ವಾ ಪೂಶಬ್ದಃ । ಅಸ್ಯಾಂ ವ್ಯುತ್ಪತ್ತೌ ಖಲಪ್ವಾದಿತಿವತ್ । ಪೌ ಪೂರ್ಣೌ ಷಣೌ ಯಸ್ಯೇತಿ ವಿಗ್ರಹಃ । ಪುಷ ಪುಷ್ಟಾವಿತಿ ಧಾತೋಃ ಪೂಷಾ ಪೂರ್ಣಃ ಆನಂದೋ ಯಸ್ಯೇತಿ ವಾ ।

ವವ್ರಿಃವರಣಮಂಗೀಕಾರಂ ಪ್ರಸಾದಮಿತ್ಯರ್ಥಃ । ವೃಜ್ ವರಣ ಇತಿ ಯುವರ್ಣಾಂತಾ-ದ್ಧಾತೋರಾದೃಗಮಹನಜನಃ ಕಿಕಿನೌ ಲಿಟ್ಚೇ''ತಿ ಸೂತ್ರಾತ್ ಕಿಪ್ರತ್ಯಯೇ ಲಿಟ್ ಭಾವೇ ಚ ಕೃತೇ ಸತಿ ಚ ಕ್ರಿಮಿತಿವತ್ ವವ್ರಿಮಿತಿ ಶಬ್ದೋ ದ್ರಷ್ಟವ್ಯಃ । ಇಚ್ಛನ್ಮಧ್ವಃ । ''ನಿಖಿಲಮುಖಭುಜಂ ತರ್ಪಯಾಮಾಸಿಥಾಸಾವಿ''ತಿ ವಚನಾತ್ । ಅಂತರಿಕ್ಷೇ ಪುರಾಜಾಃ ಜಗತ್‌ಸೃಷ್ಟೇಃ ಪೂರ್ವಂ ಜಾತಾಃ । ಅಪೌರುಷೇಯವಿದ್ಯಾತ್ವೇನ ಕರ್ತೃರಭಾವಾದಶರೀರವಾಣೀವಾದಾಕಾಶಜಾ ಇತ್ಯುಕ್ತಮ್ । ಆಕಾಶಾಭಿಮಾನಿನ್ಯಾಂ ದುರ್ಗಾಯಾಂ ವಾ ಪೂರ್ವಂ ಜಾತಾಃ । ಪ್ರಲಯಾ-ವಸಾನೇ ಪ್ರಾಕ್ ದುರ್ಗಯಾ ವೇದೈರ್ಭಗತವತಃ ಸ್ತೋತ್ರಕರಣಸ್ಯ ಪ್ರಮಾಣಸಿದ್ಧತ್ವಾತ್ । ಅಂತಃ ಈಕ್ಷತೇ ಸರ್ವಮಿತಿ ವ್ಯುತ್ಪತ್ತ್ಯಾ ಅಂತರಿಕ್ಷೇ ಪರಮಾತ್ಮನಿ ವಾ ಪೂರ್ವಂ ಜಾತಾಃ । ಪ್ರಾಗುಕ್ತವೇದಾದಿವಿದ್ಯಾಃ ಅವಿದತ್ ಸ್ವಯಂ ಜ್ಞಾತವಾನ್ ಉಪಕ್ರಮಾದಿಲಿಂಗಬಲೇನ ತತ್ತತ್ವಾರ್ಥಂ ಸಮ್ಯಗ್‌ಜ್ಞಾತವಾನಿತ್ಯರ್ಥಃ । ಅಂತಃ ಸಾಧೂನಾಂ ಹೃದಯಾಂತಃಸ್ಥಿತ್ವಾ ತಾ ಏವ ವಿದ್ಯಾ ಏವ ಯೇವೋ ನ್ಯಯಮುಯತ್ ಪ್ರೇರಯಾಮಾಸೇತ್ಯರ್ಥಃ । ''ಶ್ವಾಮಿನ್ ಸರ್ವಾಂತರಾತ್ಮನ್ನಿ''ತಿ ''ಶ್ರಾವಯಾಸ್ಮಾಂಶ್ಚ ಕಿಂಚಿದಿ''ತಿ ವಚನಾತ್ । ಸಕಲವೇದ-ಪುರಾಣಾದೀನಾಂ ತತ್ವಜ್ಞಾನವತ್ತ್ವಾತ್‌ವಿಷ್ಣುಪ್ರೀತ್ಯರ್ಥಂ ವೇದಾದಿನ್ ಸ್ವಭಾಷ್ಯಾದಾವುದ್ಧೃತ್ಯ ಸಕಲಸಜ್ಜನೇಷು ಉಪದಿದೇಶೇತಿ ಭಾವಃ । ಇಮಮೇವಾರ್ಥಮಭಿಪ್ರೇತ್ಯಾಹ – ವಾವಶಾನ ಇತ್ಯಾದಿನಾ ॥ ''ಕಂ ಬ್ರಹ್ಮ'' ಇತಿ ಶ್ರುತ್ಯನುಸಾರೇಣಾರ್ಥಃ ಸುಖಾತ್ಮಕಮಿತಿ ಪೂರ್ಣ-ಸುಖಮಿತ್ಯರ್ಥಃ । ದೃಶೇ ಜ್ಞಾನಾಯ ಸತಾಮಿತಿ ಯೋಗ್ಯತಯಾ ಸಂಬಂಧಃ ॥೫೪೫-೫೪೬॥

**ವಿವರಣೆ–** ''ಸಪ್ತ ಸ್ವಸ್ರುರರುಷೀರ್ವಾವಶಾನೋ ವಿದ್ವಾನ್ ಮಧ್ವ ಉಜ್ಜಭಾರಾ ದೃಶೇ ಕಮ್ । ಅಂತರ್ಯೇಮೇ ಅಂತರಿಕ್ಷೇ ಪುರಾಜಾ ಇಚ್ಛನ್ ವವ್ರಿಮವಿದತ್ ಪೂಷಣಸ್ಯ॥'' ಎಂಬ ಮಂತ್ರವನ್ನು ಉಲ್ಲೇಖಿಸುತ್ತಿದ್ದಾರೆ. ಮಂತ್ರಾರ್ಥವು ಹೀಗಿದೆ - ವಾವಶಾನಃ = ಅತಿಶಯದಿಂದ ದೀಪ್ಯಮಾನರಾಗಿ ಇದು ''ವಶ ಕಾಂತೌ'' ಎಂಬ ಧಾತುವಿನ ಯಙ್‌ಲುಗಂತ ರೂಪ. ''ದೀಪ್ತಾಂಗುಷ್ಠಃ ಶಿಲಾನೀ'' ಎಂಬ ಅಣುಮಧ್ವವಿಜಯದ ವಚನದಿಂದ ಈ ಅರ್ಥವು ದೊರೆಯುತ್ತದೆ. ಕಮ್ = ಆನಂದರೂಪನಾದ ಪರಮಾತ್ಮನನ್ನು, ''ಕಂ ಬ್ರಹ್ಮ ಖಂ ಬ್ರಹ್ಮ'' ಎಂಬ ಶ್ರುತಿಯಿಂದಲೂ, ''ಶ್ರುತೋಪನಿಷತ್ ಕಗತ್ಯಭಿಧಾನಾಚ್ಚ'' ಎಂಬ ಸೂತ್ರದಿಂದಲೂ ಈ ಅರ್ಥವು ಸಿದ್ಧವಾಗುತ್ತದೆ. ವಿದ್ವಾನ್ = ನೇರವಾಗಿ ನೋಡುತ್ತಾ ಮತ್ತು ಸಕಲವೇದಾರ್ಥವಾಗಿ ತಿಳಿಯುತ್ತಾ ಶ್ರೀ ಮಧ್ವರು ಅರುಷೀಃ = ರೋಷವಿರೋಧಿಯಾದ ಶಾಂತ್ಯಾದಿಗುಣದಾಯಕಗಳಾದ, ಅಥವಾ ಆರುಷೀ ಎಂಬ ಪದಕ್ಕೆ ವರ್ಣವ್ಯತ್ಯಾಸವನ್ನು ಮಾಡಿ ಆಋುಷಿ ಪ್ರಲಯದಲ್ಲಿ ಭಗವದತಿರಿಕ್ತವಾದ ಋುಷಿರಹಿತ ಎಂದು ಅರ್ಥವನ್ನು ಮಾಡಬಹುದು. ಅಥವಾ ಆ ಎಂದರೆ ಸರ್ವಭಿನ್ನನಾದ ಕಾರಣದಿಂದ ಅಕಾರಶಬ್ದವಾಚ್ಯನಾದವನು ಹಯಗ್ರೀವ ಎಂದು ಕೋಶದಿಂದ ತಿಳಿಯುತ್ತದೆ. ಹಯಗ್ರೀವರೂಪನಾದ ಪರಮಾತ್ಮನನ್ನು ಋುಷಿಯಾಗಿ ಹೊಂದಿದ ಎಂದು ಅರ್ಥವನ್ನು ಮಾಡಬಹುದು. ಸ್ವಸೄಃ = ಸ್ವ ಎಂದರೆ

ಸ್ವತ ಏವ ಎಂದರೆ ಅರ್ಥವನ್ನು ತಿಳಿದು ವಾಕ್ಯರಚನೆಯನ್ನು ಮಾಡುವ ಕರ್ತೃವಿಲ್ಲದೇ ಎಂದು ಅರ್ಥ. ವೇದಗಳು ನಿತ್ಯವಾದ್ದರಿಂದ ಅದಕ್ಕೆ ಬೇರೆ ಕರ್ತೃವಿಲ್ಲವಷ್ಟೇ. ಅಥವಾ ಸ್ವ ಎಂದರೆ ಸ್ವತಂತ್ರನಾದ ಭಗವಂತನ ಸಾಮರ್ಥ್ಯದಿಂದಲೇ, ಸ್ವಃ = ಎಂದರೆ ಸೃತ, ನಿಸೃತ ಎಂದರ್ಥ. "ನಿತ್ಯಾ ವೇದಾಃ ಸಮಸ್ತಾಶ್ಚ ಶಾಶ್ವತಾ ವಿಷ್ಣುಬುದ್ಧಿಗಾಃ । ಸರ್ಗೇ ಸರ್ಗೇಽಮುನೈವೇತ ಉದ್ಗೀರ್ಯಂತೇ ತಥೈವ ಚ" ಎಂಬ ವಚನದಿಂದ ಈ ಅರ್ಥವು ಲಭಿಸುತ್ತದೆ. 'ಸ್ವಸೃಃ' ಎಂಬುದಕ್ಕೆ ಸ್ವತಂತ್ರನಾದ ಭಗವಂತನಿಂದ ಸೃಷ್ಟವಾದವುಗಳು ಎಂದು ಅರ್ಥವನ್ನು ಮಾಡಬಹುದು. ಅವು ಪಂಚರಾತ್ರ, ಪುರಾಣ, ಭಾರತ ಈ ಪೌರುಷೇಯ ವಾಕ್ಯಗಳು. "ಪಂಚರಾತ್ರಸ್ಯ ಕೃತ್ಸ್ನಸ್ಯ ವಕ್ತಾ ನಾರಾಯಣಃ ಸ್ವಯಮ್ ।", "ಅಷ್ಟಾದಶಪುರಾಣಾನಾಂ ಕರ್ತಾ ಸತ್ಯವತೀ ಸುತಃ", "ಕೋ ಹ್ಯನ್ಯಃ ಪುಂಡರೀಕಾಕ್ಷಾನ್ ಮಹಾಭಾರತಕೃದ್ ಭವೇತ್" ಎಂಬ ವಚನಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. ಸಪ್ತಸ್ವಸೃಃ ಎಂದರೆ ಋಗಾದಿ ನಾಲ್ಕುವೇದಗಳು ಪಂಚರಾತ್ರ, ಪುರಾಣ ಮತ್ತು ಮಹಾಭಾರತ ಈ ಸಪ್ತವಿದ್ಯೆಗಳು ಎಂದು ಅರ್ಥ. ಇಂತಹ ಸಪ್ತವಿದ್ಯೆಗಳನ್ನು ದೃಶೇ = ಜ್ಞಾನಕ್ಕೋಸ್ಕರವಾಗಿ ಉಜ್ಜಭಾರ = ಮೇಲ್ಮುಖವಾಗಿ ಎತ್ತಿದರು. ಛಂದಸ್ಸಿನಲ್ಲಿ ಹಕಾರಕ್ಕೆ ಭಕಾರವು ಆದೇಶವಾಗಿ ಬರುವುದರಿಂದ 'ಉಜ್ಜಹಾರ' ಎಂಬ ಪದವು 'ಉಜ್ಜಭಾರ' ಎಂಬ ರೂಪವನ್ನು ಪಡೆಯುತ್ತದೆ. ಪರವಾದಿಗಳು ವೇದಕ್ಕೆ, ಅಪ್ರಾಮಾಣ್ಯ, ಪೌರುಷೇಯತ್ವ ಮತ್ತು ಮಿಥ್ಯಾತ್ವಬೋಧಕತ್ವ ಮೊದಲಾದ ಅಶುದ್ಧಧರ್ಮಗಳನ್ನು ಹೇಳಿ ಅವುಗಳನ್ನು ಕೆಳಗೆ ಬೀಳಿಸಿದಾಗ ಮಧ್ವರು ಪ್ರಾಮಾಣ್ಯಾದಿಗಳನ್ನು ವ್ಯವಸ್ಥಾಪನೆ ಮಾಡಿ ಅವನ್ನು ಉದ್ಧಾರ ಮಾಡಿದರು ಎಂದು ಅರ್ಥ. ಸಜ್ಜನರ ಜ್ಞಾನಪ್ರಾಪ್ತಿಯ ಸಲುವಾಗಿ ಅವನ್ನು ಉದ್ಧಾರ ಮಾಡಿದರು ಎಂದು ಅರ್ಥ. "ಸಪ್ತ ಸ್ವಸಾರೋ ಅಭಿ ಸಂನವಂತೇ ಯತ್ರ ಗವಾಂ ನಿಹಿತಾ ಸಪ್ತ ನಾಮ" ಎಂಬ ಶ್ರುತಿಸಮಾಖ್ಯೆಯಿಂದಲೂ 'ಸಪ್ತಸ್ವಸಾರಃ' ಎಂದರೆ ಸಪ್ತವಿದ್ಯೆಗಳೆಂದೇ ತಿಳಿಯುತ್ತದೆ. ಈ ಮಂತ್ರದ ಅರ್ಥ ಹೀಗಿದೆ - ಅಭಿ = ಅಭಿತಃ ಎಲ್ಲ ಕಡೆಗಳಲ್ಲಿಯೂ, ಸಂನವಂತೇ = ಸ್ತೋತ್ರಮಾಡುತ್ತವೆ. ಯತ್ರ = ಯಾವ ಸಪ್ತ ಸ್ವಸೃಗಳಲ್ಲಿ, ಗವಾಂ = ವಿದ್ಯೆಗಳ, ಸಪ್ತನಾಮ = ಸಪ್ತನಾಮಾನಿ = ಏಳು ಸಂಜ್ಞೆಗಳು, ನಿಹಿತಾ = ನಿಹಿತಾನಿ = ಇಡಲ್ಪಟ್ಟವೆಯೋ, "ವ್ಯತ್ಯಯೋಬಹುಲಮ್" ಎಂಬ ವಚನವಿರುವುದರಿಂದ ನಿಹಿತಾಃ ಎಂಬ ಬಹುವಚನಸ್ಥಾನದಲ್ಲಿ ಏಕವಚನದ ಪ್ರಯೋಗವಿದೆ. ಈ ಮಂತ್ರದಲ್ಲಿ ಸಪ್ತಸ್ವಸೃ ಗಳನ್ನು ವಿದ್ಯೆಯೆಂದು ಸ್ಪಷ್ಟವಾಗಿ ಹೇಳಿರುವುದರಿಂದ 'ಸಪ್ತಸ್ವಸೃಃ' ಎಂಬ ಮೊದಲು ಉಲ್ಲೇಖಿಸಿದ ಮಂತ್ರದಲ್ಲಿಯೂ ಸಪ್ತಸ್ವಸಾರರು ವಿದ್ಯೆಗಳೇ ಆಗಿವೆ. ಯಾವ ಸಾಮರ್ಥ್ಯದಿಂದ ಮತ್ತು ಯಾವ ಉದ್ದೇಶದಿಂದ ಉದ್ಧಾರ ಮಾಡಿದರು. ಉದ್ಧಾರವನ್ನು ಮಾಡಿದ ನಂತರ ಏನು ಮಾಡಿದರು ಎಂಬ ಶಂಕೆಯನ್ನು ಪರಿಹರಿಸುವುದಕ್ಕಾಗಿ ಅಂತರ್ಯಾಮೇ ಇತ್ಯಾದಿ ಉತ್ತರಾರ್ಧವು ಪ್ರವೃತ್ತವಾಗಿದೆ. ಪೂಷಣಸ್ಯ = ಪೂ = ಪೂರ್ಣವಾದ, ಷಣೌ = ಬಲ ಮತ್ತು ನಿಯಮನಗಳನ್ನು ಹೊಂದಿರುವ, ಅಥವಾ ಬಲ

ಮತ್ತು ಆನಂದಗಳನ್ನು ಹೊಂದಿರುವ ಆ ಪರಮಾತ್ಮನ ಎಂದು ಅರ್ಥ. ಅಷ್ಯಕ್ಷರಸಾಮ್ಯಾನ್ನಿರ್ಬ್ರೂಯಾತ್ ಎಂಬ ನಿರುಕ್ತವಚನದಿಂದಲೂ, 'ಷಕಾರೋಬಲಂ ಣಕಾರಃ ಪ್ರಾಣ ಆತ್ಮಾ' ಎಂಬ ಉಪನಿಷತ್‌ವಾಕ್ಯದ ಬಲದಿಂದಲೂ, 'ಣಶ್ಚ ನಿರ್ವೃತಿವಾಚಕಃ' ಎಂಬ ಸ್ಮೃತಿ ಬಲದಿಂದಲೂ ಈ ಅರ್ಥವು ಸಿದ್ಧವಾಗುತ್ತದೆ. ಅಥವಾ 'ಪೃಪಾಲನಪೂರಣಯೋಃ' ಎಂಬ ಧಾತುವಿನ ಮೇಲೆ ಔಣಾದಿಕವಾದ ಉ ಪ್ರತ್ಯಯವು ಬಂದರೆ ಪೂ ಎಂದು ರೂಪವಾಗುತ್ತದೆ. ಈಗ ಪೌ ಷಣೌ ಯಸ್ಯ ಎಂದು ವಿಗ್ರಹವನ್ನು ಮಾಡಬೇಕು. ಅಥವಾ 'ಪುಷ ಪುಷ್ಟೌ' ಎಂಬ ಧಾತುವಿನಿಂದ 'ಪೂಷಾ' ಎಂಬ ಶಬ್ದವು ನಿಷ್ಪನ್ನವಾಗುತ್ತದೆ. 'ಪೂರ್ಣ' ಎಂದು ಅದರ ಅರ್ಥ. ಪೂಷಾ ಎಂದರೆ ಪೂರ್ಣವಾದ ಣ ಎಂದರೆ ಆನಂದವುಳ್ಳವನು ಎಂದು ಅರ್ಥವನ್ನು ಮಾಡಬಹುದು. ಅಂತಹ ಪರಮಾತ್ಮನ ವವ್ರಿಃ = ವರಣವನ್ನು ಎಂದರೆ ಅಂಗೀಕಾರವನ್ನು ಎಂದರೆ ಪ್ರಸಾದವನ್ನು ಎಂದು ಅರ್ಥ. ಕೃ ಧಾತುವಿನಿಂದ ಚಕ್ರಿ ಎಂದು ರೂಪವಾದಂತೆ, ವೃಜ್ ಧಾತುವಿನಿಂದ ವವ್ರಿ ಎಂಬ ರೂಪವು ನಿಷ್ಪನ್ನವಾಗುತ್ತದೆ. ಇಚ್ಛನ್ = ಬಯಸುವವರಾದ ಮಧ್ವರು ''ನಿಖಿಲಮಖಭುಜಂ ತರ್ಪಯಾಮಾಸಿಥಾಸೌ' ಎಂಬ ವಚನದಿಂದ ಈ ಅರ್ಥವು ಸಿದ್ಧವಾಗುತ್ತದೆ. ಅಂತರಿಕ್ಷೇ ಪುರಾಜಾಃ = ಪುರಾ ಎಂದರೆ ಜಗತ್ ಸೃಷ್ಟಿಗಿಂತ ಮೊದಲು, ಜಾಃ = ಎಂದರೆ ಜಾತವಾದ, ಅಪೌರುಷೇಯ ವಿದ್ಯೆಗಳಾದ್ದರಿಂದ ಕರ್ತೃವಿಲ್ಲದೇ ಆಕಾಶದಲ್ಲಿ ಉಂಟಾದ ಅಶರೀರವಾಣಿಯಂತೆ ಅಭಿವ್ಯಕ್ತವಾದುದರಿಂದ ಅಂತರಿಕ್ಷೇ ಪುರಾಜಾಃ ಎಂದು ಹೇಳಿದ್ದಾರೆ. ಅಥವಾ ಆಕಾಶಾಭಿಮಾನಿನಿಯಾದ ದುರ್ಗಾದೇವಿಯಿಂದ ಮೊದಲು ಅಭಿವ್ಯಕ್ತವಾದವು ಎಂದು ಅರ್ಥವನ್ನು ಮಾಡಬಹುದು. ಏಕೆಂದರೆ ಪ್ರಲಯದ ಕೊನೆಯ ಕಾಲದಲ್ಲಿ ದುರ್ಗಾದೇವಿಯು ವೇದಗಳಿಂದ ಪರಮಾತ್ಮನನ್ನು ಸ್ತೋತ್ರಮಾಡುತ್ತಾಳೆಂದು ಪ್ರಮಾಣಸಿದ್ಧವಾಗಿದೆ. ಅಥವಾ 'ಅಂತರಿಕ್ಷೇ' ಎಂದರೆ ಒಳಗಿದ್ದೇ ಸರ್ವವನ್ನು ನೋಡುತ್ತಾನೆ ಎಂಬ ವ್ಯುತ್ಪತ್ತಿಯಿಂದ ಅಂತರಿಕ್ಷ ಎಂದರೆ ಪರಮಾತ್ಮನಿಂದ ಪೂರ್ವಜಾತವಾದ ಪ್ರಾಗುಕ್ತವೇದಾದಿವಿದ್ಯಾಃ ಅವುಗಳನ್ನು ಅವಿದತ್ = ಮಧ್ವರು ಸ್ವಯಂ ತಿಳಿದರು. ಉಪಕ್ರಮಾದಿತಾತ್ಪರ್ಯಲಿಂಗಗಳಿಂದ ವೇದಗಳ ತತ್ತ್ವಾರ್ಥವನ್ನು ಚೆನ್ನಾಗಿ ತಿಳಿದರು ಎಂದು ಅರ್ಥ. ಅಂತಃ = ಸಜ್ಜನರ ಹೃದಯದ ಒಳಗೆ ಇದ್ದು ಆ ವಿದ್ಯೆಗಳನ್ನೇ, ಯೇಮೇ = ನಿಯಮನವನ್ನು ಮಾಡಿದರು, ಪ್ರೇರಿಸಿದರು ಎಂದು ಅರ್ಥ. ''ಸ್ವಾಮಿನ್ ಸರ್ವಾಂತರಾತ್ಮನ್'' ''ಶ್ರಾವಯಾಸ್ಮಾಂಶ್ಚ ಕಿಂಚಿತ್'' ಇತ್ಯಾದಿ ವಚನಗಳಿಂದ ಈ ಅರ್ಥವು ಸಿದ್ಧವಾಗುತ್ತದೆ. ಸಕಲವೇದಪುರಾಣಗಳಲ್ಲಿ ತತ್ತ್ವಜ್ಞಾನವಿರುವುದರಿಂದ ವಿಷ್ಣುಪ್ರೀತ್ಯರ್ಥವಾಗಿ ವೇದಾದಿಗಳನ್ನು ತಮ್ಮ ಭಾಷ್ಯದಲ್ಲಿ ಉದ್ಧರಿಸಿ ಸಕಲ ಸಜ್ಜನರಿಗೆ ಉಪದೇಶವನ್ನು ಮಾಡಿದರು ಎಂದು ಅಭಿಪ್ರಾಯ. ಇದೇ ಅರ್ಥವನ್ನೇ ಮುಂದಿನ ಶ್ಲೋಕಗಳಲ್ಲಿ ಬಿಡಿಸುತ್ತಾರೆ.

ವಾವಶಾನೋಽತಿಶಯಿತಕಾಂತಿಯುಕ್ತಃ ಸುಖಾತ್ಮಕಮ್ ।
ಕಂ ಬ್ರಹ್ಮ ಪರಮಂ ವಿದ್ವಾನ್ ಮಧ್ವೋ ಜ್ಞಾನದೃಶೇ ಸತಾಂ ॥ ೫೪೬ ॥

ಋಗಾದ್ಯಾಃ ಸಪ್ತಸದ್ವಿದ್ಯಾಃ ಸ್ವತಂತ್ರೇಶಸೃತತ್ವತಃ ।
ಸ್ವಸ್ಯಃ ಸ್ವತಃ ಪೂರ್ವಜಾ ವಾ ಪರಮಾತ್ಮಽಮುಖಾಂಬುಜಾತ್ ॥ ೫೪೭ ॥

ಅರುಷೀಃ ಸರ್ವಭಿನ್ನಾಖ್ಯಹಯಗ್ರೀವರ್ಷಿಸಂಯುತಾಃ ।
ತದನ್ಯದ್ರಷ್ಟೃ ಶೂನ್ಯಾ ವಾ ಲಯೇಽಪ್ಯಚ್ಯುತಬುದ್ಧಿಗಾಃ ॥ ೫೪೮ ॥

ವರ್ಣವ್ಯತ್ಯಾಸತೋಽಪ್ಯಿತ್ಥಂ ನೋ ಚೇದಕ್ರೂರರೂಪಿಣಃ ।
ಉಜ್ಜಭಾರೋದ್ಧಧಾರಾತ್ಮಭಾಷ್ಯಾದಿಗ್ರಂಥವಿಸ್ತರೇ ॥ ೫೪೯ ॥

ಅಸದಾಸ್ಯಾಂಧಕೂಪೇಭ್ಯ ಉಜ್ಜಹ್ರೇ ವಾ ಬಲಾತ್ ಪ್ರಭುಃ ।
ಹಭೌ ನಿಭೌ ಹೃಞ್ ಛಂದೋಭಾಗೇ ಕ್ವಾಪೀತಿ ಶಾಬ್ದಿಕಾಃ ।
ಜ್ಞಾನಾಯ ಯಾಸಾಮುದ್ಧಾರಸ್ತಾ ವಿದ್ಯಾ ನಾತ್ರ ಸಂಶಯಃ ॥ ೫೫೦ ॥

**ಅರ್ಥ–** ವಾವಶಾನಃ = ವಾವಶಾನ ಎಂದರೆ, ಅತಿಶಯಿತಕಾಂತಿಯುಕ್ತಃ = ಅತಿಶಯಿತಕಾಂತಿಯುಕ್ತರಾದ ಮಧ್ವರು, ಕಂ = ಎಂದರೆ ಸುಖರೂಪನಾದ ಪರಬ್ರಹ್ಮನನ್ನು, ವಿದ್ವಾನ್ = ತಿಳಿದವರಾಗಿ, ಮಧ್ವಃ = ಮಧ್ವರು, ಸತಾಂ = ಸಜ್ಜನರಿಗೆ, ಜ್ಞಾನದೃಶೇ = ಜ್ಞಾನವನ್ನು ಉಂಟುಮಾಡಲು, ಋಗಾದ್ಯಾಃ = ಋಗ್ವೇದವೇ ಮೊದಲಾದ, ಸಪ್ತಸದ್ವಿದ್ಯಾಃ = ಏಳು ಸದ್ವಿದ್ಯೆಗಳು, ಸ್ವತಂತ್ರೇಶಸೃತತ್ವತಃ = ಸ್ವತಂತ್ರನಾದ ಪರಮಾತ್ಮನಿಂದ ಹೊರಬಂದ ಕಾರಣ, ಸ್ವಸ್ಯಃ = ಸ್ವಸ್ಯಃ ಶಬ್ದವಾಚ್ಯವಾದವುಗಳು. ಪರಮಾತ್ಮ ಮುಖಾಂಬುಜಾತ್ = ಪರಮಾತ್ಮನ ಮುಖಕಮಲದಿಂದ, ಸ್ವತಃ = ವಾಕ್ಯವನ್ನು ರಚಿಸುವ ಕರ್ತೃವಿನ ಅಪೇಕ್ಷೆಯಿಲ್ಲದೆ, ಪೂರ್ವಜಾ ವಾ = ಹೊರಗೆ ಬಂದಂತಹ, ಅರುಷೀಃ = ಸರ್ವಭಿನ್ನನಾದ ಹಯಗ್ರೀವರೂಪಿಯಾದ ಪರಮಾತ್ಮನನ್ನು ಋಷಿಯಾಗಿ ಹೊಂದಿದವುಗಳಾಗಿ, ವಾ = ಅಥವಾ, ತದನ್ಯದ್ರಷ್ಟೃಶೂನ್ಯಾಃ = ಪರಮಾತ್ಮನನ್ನು ಬಿಟ್ಟು ಬೇರೆ ಋಷಿಗಳನ್ನು ಹೊಂದದೇ ಇರುವವರಾಗಿ, ಪ್ರಲಯೇಽಪಿ = ಪ್ರಲಯಕಾಲದಲ್ಲಿಯೂ, ಅಚ್ಯುತಬುದ್ಧಿಗಾಃ = ವಿಷ್ಣುವಿನ ಬುದ್ಧಿಯಲ್ಲಿ ಇರುವುವುಗಳಾಗಿ ಎಂದು ಅರ್ಥ. ವರ್ಣವ್ಯತ್ಯಾಸಃ = ಅರುಷೀಃ ಎಂಬ ಶಬ್ದವನ್ನು ಅಋಷಿ ಎಂದು ವ್ಯತ್ಯಾಸ ಮಾಡಿದರೆ, ಇತ್ಥಂ = ಹೀಗೆ ಅರ್ಥವಾಗುತ್ತದೆ. ನೋಚೇತ್ = ಇಲ್ಲದಿದ್ದರೆ, ಅಕ್ರೂರರೂಪಿಣಃ = ಶಾಂತರೂಪಗಳಾದ ಇಂತಹ ವಿದ್ಯೆಗಳನ್ನು, ಆತ್ಮಭಾಷ್ಯಾದಿ ಗ್ರಂಥವಿಸ್ತರೇ = ತಾವು ರಚಿಸಿದ ಭಾಷ್ಯ ಮೊದಲಾದ ಗ್ರಂಥವಿಸ್ತಾರಗಳಲ್ಲಿ, ಉಜ್ಜಭಾರ = ಮೇಲಕ್ಕೆ ಎತ್ತಿದರು. ಅಸದಾಸ್ಯಾಂಧಕೂಪೇಭ್ಯಃ = ಅಸದ್‌ಜನರ ಮುಖ ಎಂಬ ಅಂಧಕೂಪಗಳಿಂದ ಪ್ರಭುಃ = ಸಮರ್ಥರಾದ ಮಧ್ವರು, ಬಲಾತ್ = ತಮ್ಮ

ಸಾಮರ್ಥ್ಯದಿಂದ, ಉಜ್ಜಹ್ರೇ ವಾ = ಉದ್ಧರಿಸಿದರು ಅಥವಾ ಮೇಲಕ್ಕೆತ್ತಿದರು ಎಂದು ಅರ್ಥವನ್ನು ಮಾಡಬಹುದು. ಛಂದೋಭಾಗೇ = ಛಂದಸ್ಸಿನ ವಿಷಯದಲ್ಲಿ, ಕ್ವಾಪಿ = ಕೆಲವು ಕಡೆ, ಹೃಞಿ= ಹೃಞ್ ಧಾತುವಿನಲ್ಲಿ, ಹಭೌ = ಹಕಾರ ಮತ್ತು ಭಕಾರಗಳು, ನಿಭೌ = ಸಮಾನವಾದವುಗಳು ಎಂದು, ಶಾಬ್ದಿಕಾಃ = ಶಬ್ದಶಾಸ್ತ್ರವನ್ನು ತಿಳಿದವರು ಹೇಳುತ್ತಾರೆ. ಜ್ಞಾನಾಯ = ಜ್ಞಾನ ಪ್ರಾಪ್ತಿಯ ಸಲುವಾಗಿ, ಯಾಸಾಂ = ಯಾವುಗಳಿಗೆ, ಉದ್ಧಾರಃ = ಉದ್ಧಾರವಿದೆಯೋ, ತಾಃ= ಅವುಗಳು, ವಿದ್ಯಾಃ= ವಿದ್ಯೆಗಳೇ ಆಗಬೇಕು. ನಾತ್ರ ಸಂಶಯಃ = ಈ ವಿಷಯದಲ್ಲಿ ಸಂಶಯವಿಲ್ಲ.

**ಅನುವಾದ–** 'ವಾವಶಾನಃ' ಎಂದರೆ ಅತಿಶಯಿತವಾದ ಕಾಂತಿಯುಳ್ಳವರು ಎಂದು ಅರ್ಥ. ಕಂ ಎಂದರೆ ಸುಖರೂಪನಾದ ಪರಬ್ರಹ್ಮನನ್ನು ಎಂದು ಅರ್ಥ. ಅಂತಹ ಬ್ರಹ್ಮನನ್ನು ನೋಡುತ್ತಾ ಮಧ್ವರು ಸಜ್ಜನರ ಜ್ಞಾನಲಾಭಕ್ಕೋಸ್ಕರ ಋಗಾದಿ ಸಪ್ತವಿದ್ಯೆಗಳನ್ನು ಉದ್ಧಾರ ಮಾಡಿದರು. ಸ್ವತಂತ್ರನಾದ ಪರಮಾತ್ಮನಿಂದ ಹೊರಬಂದುದರಿಂದ ವಿದ್ಯೆಗಳು ಸ್ವಸೃಃ ಎಂದು ಕರೆಯಲ್ಪಡುತ್ತವೆ. ಪುರಾಜಾ ಎಂದರೆ ಪರಮಾತ್ಮನ ಮುಖಕಮಲದಿಂದ ಮೊದಲು ಹೊರಹೊಮ್ಮಿದವು ಎಂದು ಅರ್ಥ. ಅರುಷೀಃ ಎಂದರೆ ಸರ್ವಭಿನ್ನನಾದ ಹಯಗ್ರೀವನನ್ನು ಋಷಿಯಾಗಿ ಹೊಂದಿರುವಂತವು ಎಂದು ಅರ್ಥ. ಹಯಗ್ರೀವನನ್ನು ಬಿಟ್ಟು ಬೇರೆ ಋಷಿಯನ್ನು ಹೊಂದದೇ ಇರುವುದು ಎಂದು ಅರ್ಥ. ಪ್ರಲಯಕಾಲದಲ್ಲಿಯೂ ಅಂತಹ ವೇದಗಳು ವಿಷ್ಣುಬುದ್ಧಿಯಲ್ಲಿಯೇ ಇರುತ್ತವೆ. 'ಅರುಷೀ' ಶಬ್ದಕ್ಕೆ ವರ್ಣವ್ಯತ್ಯಾಸವನ್ನು ಮಾಡಿ 'ಅಋುಷಿ' ಎಂದು ಮಾಡಿದರೆ ಮೊದಲು ಹೇಳಿದ ಅರ್ಥ. ಇಲ್ಲದಿದ್ದರೆ 'ಅರುಷೀಃ' ಎಂದರೆ ರೋಷವಿರೋಧಿಯಾದ ಶಾಂತರೂಪಗಳನ್ನುಳ್ಳ ಎಂದು ಅರ್ಥ. 'ಉಜ್ಜಭಾರ' ಎಂದರೆ ತಮ್ಮ ಭಾಷ್ಯಾದಿಗ್ರಂಥವಿಸ್ತಾರಗಳಲ್ಲಿ ಉದ್ಧರಿಸಿದರು ಎಂದು ಅರ್ಥ. ಅಥವಾ ಪ್ರಭುವಾದ ಮಧ್ವರು ಅಸಜ್ಜನರ ಮುಖವೆಂಬ ಅಂಧಕೂಪದಲ್ಲಿ ಬಿದ್ದಿದ್ದ ವೇದಗಳನ್ನು ಮೇಲಕ್ಕೆ ಎತ್ತಿದರು ಎಂದೂ ಅರ್ಥವನ್ನು ಮಾಡಬಹುದು. ವೇದಗಳಲ್ಲಿ ಹೃಧಾತುವಿನಲ್ಲಿ ಕೆಲವೊಮ್ಮೆ ಹಕಾರ ಭಕಾರಗಳು ಸಮಾನವೆಂದು ಶಾಬ್ದಿಕರು ಹೇಳುತ್ತಾರೆ. (ಆದ್ದರಿಂದ ಉಜ್ಜಹಾರ ಎಂಬುದು ಉಜ್ಜಭಾರ ಎಂದಾಗುತ್ತದೆ.) ಜ್ಞಾನದ ಸಲುವಾಗಿ ಯಾವುದನ್ನು ಉದ್ಧರಿಸಿದರೋ ಅವುಗಳ ವಿದ್ಯೆಗಳೇ ಆಗಬೇಕು ಎಂಬ ವಿಷಯದಲ್ಲಿ ಸಂಶಯವಿಲ್ಲ.

**ಭಾವವಿಲಾಸಿನೀ–** ಸ್ವತಃ ಬ್ರಹ್ಮಣಾ ಸಹ ಜಾತಾತ್ ಸ್ವಮೂಲರೂಪಾತ್ ಪೂರ್ವಜಾತಾಃ ಪೂರ್ವಂ ಜಾತಾಃ ಬ್ರಹ್ಮಸೃಷ್ಟಿತೋಽಪಿ ವೇದಸೃಷ್ಟೇಃ ಪೂರ್ವಕಾಲೀನತ್ವಾತ್ । ಸ್ವತಃಪೂರ್ವಂ ಸೃಷ್ಟತ್ವಾದ್ವಾ ಸ್ವಸೃಶಬ್ದವಾಚ್ಯಾ ಇತ್ಯರ್ಥಃ ॥ ೫೪೭ ॥

ಅಋಷೀರಿತ್ಯಸ್ಯಾರ್ಥಕಥನಂ ಸರ್ವಭಿನ್ನಾಖ್ಯಹಯಗ್ರೀವರ್ಷಿ ಸಂಯುತಾ ಇತಿ । ಸರ್ವಭಿನ್ನತ್ವಾತ್ ಅಃ ಇತಿ ಆಖ್ಯಾಯ ಽಸ್ಯ ಸರ್ವಭಿನ್ನಾಖ್ಯಃ । ಅ ಏವ ಋಷಿರ್ಯಾಸಾಂ ತಾಃ ಅರ್ಷಯಃ । ತಾಃ ಅರ್ಷೀಃ ॥ ೫೪೮ ॥.

ನೋ ಚೇತ್ ವರ್ಣವ್ಯತ್ಯಸೋ ನೋ ಚೇತ್ । ಅಕ್ರೂರರೂಪಿಣೀಃ "ರುಷದಾಹ" ಇತಿ ಧಾತೋಃ ನ ವಿದ್ಯತೇ ರುಷಿರ್ದಾಹೋ ಯಾಸಾಂ ಯಾಭ್ಯೋ ವಾ ತಾ ಅರರ್ಷಯ ಇತಿ ವ್ಯುತ್ಪತ್ತ್ಯಾ ನಿತ್ಯಾಃ ಶಾಂತಾಶ್ಚೇತ್ಯರ್ಥಃ ॥ ೫೪೯ ॥

ಅಸದಾಸ್ಯಾಂಧಕೂಪೇಭ್ಯಃ ಅಸತಾಂ ಮಾಯಾವಾದಿಪ್ರಭೃತೀನಾಮ್ ಆಸ್ಯಾಖ್ಯಾಂಧಕೂಪೇಭ್ಯಃ ಬಲಾತ್ ಯುಕ್ತಿಬಲಾತ್ । ಹಭೌ ಹಕಾರಭಕಾರ್ರೌ ನಿಭೌ ಸಮಾನೌ । ಹೃಞ್ ಹೃಞ್-ಧಾತೌ ॥೫೫೦ ॥

ಪೂಷಣಸ್ಯ ಹರೇಃ ಪೂರ್ಣಬಲಪ್ರೇರಣಕರ್ಮಣಃ ।
ವವ್ರಿಂ ವರಣಮಿಚ್ಛನ್ ಸ ಪ್ರಸಾದಾಭಿದಮುತ್ತಮಮ್ ॥ ೫೫೧ ॥

ಅಂತರಿಕ್ಷೇಽಂತರಿಕ್ಷಾಖ್ಯಾವ್ಯಾಕೃತಾಕಾಶಮಾನಿನಿ ।
ದುರ್ಗಾನನಾಂಬುಜೇ ಪೂರ್ವಂ ಸರ್ವಸ್ಯ ಜಗತಃ ಪುರಾ ।
ಜಾ ಜಾತಾಃ ಸಪ್ತವಿದ್ಯಾಸ್ತಾ ಅಂತಃ ಸುಜನಚೇತಸಾಮ್ ॥ ೫೫೨ ॥

ಮಧ್ವೇ ಯೇ ಮೇ ನ್ಯಯಮಯತ್ ಸ್ವಯಂ ಚಾವಿದದಂಜಸಾ ।
ಆಹಾಂತರಿಕ್ಷೇ ಜಾತತ್ವಮನಾದಿತ್ವಂ ಚ ಸೂಚಯನ್ ॥ ೫೫೩ ॥

**ಅರ್ಥ–** ಪೂಷಣಸ್ಯ = ಪೂಷಣಸ್ಯ ಎಂದರೆ, ಪೂರ್ಣಬಲ ಪ್ರೇರಣ ಕರ್ಮಣಃ = ಪೂರ್ಣವಾದ ಬಲ ಮತ್ತು ಪ್ರೇರಣ ಕಾರ್ಯವುಳ್ಳ ಎಂದು ಅರ್ಥ. ಅಂತಹ ಹರಿಯ, ವವ್ರಿಂ = ವರಣಮ್ ಎಂದರೆ, ಉತ್ತಮಂ ಪ್ರಸಾದಾಭಿದಮ್ = ಶ್ರೇಷ್ಠ ಪ್ರಸಾದರೂಪವಾದ ಅನುಗ್ರಹವನ್ನು ಇಚ್ಛನ್ = ಇಚ್ಛಿಸುವ ಎಂದು ಅರ್ಥ. ಅಂತರಿಕ್ಷೇ = ಅಂತರಿಕ್ಷೇ ಎಂದರೆ, ಅಂತರಿಕ್ಷಾಖ್ಯಾವ್ಯಾಕೃತಾಶಮಾನಿನಿ= ಅಂತರಿಕ್ಷ ಎಂಬ ಹೆಸರಿನ ಅವ್ಯಾಕೃತಾಕಾಶಾಭಿ-ಮಾನಿಯಾದ, ದುರ್ಗಾನನಾಂಬುಜೇ = ದುರ್ಗೆಯ ಮುಖಕಮಲದಲ್ಲಿ, ಪೂರ್ವಂ = ಪೂರ್ವ ಎಂದರೆ, ಸರ್ವಸ್ಯ ಜಗತಃ ಪುರಾ = ಎಲ್ಲ ಜಗತ್ತಿನ ಸೃಷ್ಟಿಗಿಂತ ಮೊದಲು, ಜಾಃ = ಜಾಃ ಎಂದರೆ ಜಾತಾಃ ಅಭಿವ್ಯಕ್ತವಾದ ಸಪ್ತವಿದ್ಯೆಗಳು. ಕಾಃ = ಆ ವಿದ್ಯೆಗಳನ್ನು, ಸುಜನಚೇತಸಾಂ = ಸಜ್ಜನರ ಹೃದಯದ ಅಂತ ಒಳಗೆ, ಮಧ್ವಃ = ಶ್ರೀಮಧ್ವರು, ಯೇಮೇ = ನಿಯಮನವನ್ನು ಮಾಡಿದರು. ಸ್ವಯಂಚ = ತಾವು, ಅಂಜಸಾ = ಚೆನ್ನಾಗಿ, ಅವಿದತ್ = ತಿಳಿದರು. ಅನಾದಿತ್ವಮ್ = ಅನಾದಿತ್ವವನ್ನು, ಸೂಚಯನ್ = ಸೂಚಿಸುತ್ತಾ (ಸೂಚಿಸಲು) ಅಂತರಿಕ್ಷೇ ಜಾತತ್ವಮ್ ಎಂದು ಆಹ ಶ್ರುತಿಯು ಹೇಳಿದೆ.

**ಅನುವಾದ–** ಪೂಷಣ ಎಂದರೆ ಪೂರ್ಣಬಲ ಪ್ರೇರಣ ಶಕ್ತಿಯುಳ್ಳ ಹರಿ. ಅವನ ವವ್ರಿಂ ಎಂದರೆ ವರಣ ಎಂದರೆ ಶ್ರೇಷ್ಠವಾದ ಅನುಗ್ರಹ. ಅದನ್ನು ಇಚ್ಛಿಸುತ್ತಾ ಅಂತರಿಕ್ಷ ಎಂದರೆ ಅವ್ಯಾಕೃತಾಶಾಭಿಮಾನಿಯಾದ ದುರ್ಗೆಯ ಮುಖಕಮಲದಲ್ಲಿ ಜಗತ್ತಿನ ಸೃಷ್ಟಿಗಿಂತಲೂ ಮೊದಲು ಅಭಿವ್ಯಕ್ತಗಳೂ, ಜಾತಗಳೂ ಆದ ಯಾವ ಸಪ್ತವಿದ್ಯೆಗಳಿವೆಯೋ, ಅವುಗಳನ್ನು ಸಜ್ಜನರ ಹೃದಯದೊಳಗೆ ಮಧ್ವರು ಪ್ರೇರಿಸಿದರು. ಮತ್ತು ತಾವು ಚೆನ್ನಾಗಿ ತಿಳಿದರು. ಅನಾದಿತ್ವವನ್ನು ಸೂಚಿಸಲು ಶ್ರುತಿಯು ಅಂತರಿಕ್ಷೇ ಜಾ ಅಂತರಿಕ್ಷದಲ್ಲಿ ಹುಟ್ಟಿದವು ಎಂದು ಹೇಳಿದೆ.

**ಭಾವವಿಲಾಸಿನೀ–** ವರಣಂ ಪ್ರಸಾದಾಭಿಧಮಿತಿ ಸಂಬಂಧಃ ॥ ೫೫೧ ॥

ಜಾ ಇತ್ಯನೂದ್ಯ ಜಾತಾ ಇತ್ಯರ್ಥ ಕಥನಮ್ । ವೇದದ್ರಷ್ಟ್ರು ಋಷಿಃ ॥ ೫೫೨–೫೫೩ ॥

ಇತ್ಯಸ್ತೌತ್ ಪವಮಾನಸ್ಯ ಸೂಕ್ತೇ ಯಂ ಸ್ಪಷ್ಟವಾಗಿಯಂ ।
ಸ ಮಧ್ವಃ ಪವಮಾನಾಂಶಃ ಸಿದ್ಧೋ ವಿದ್ವಚ್ಛಿರೋಮಣಿಃ ॥ ೫೫೪ ॥

**ಅರ್ಥ–** ಇತಿ = ಈ ರೀತಿಯಾಗಿ, ಪವಮಾನಸೂಕ್ತೇ = ಪವಮಾನ ಸೂಕ್ತದಲ್ಲಿ, ಇಯಂ = ಈ, ಸ್ಪಷ್ಟವಾಕ್= ಸ್ಪಷ್ಟವಚನವು ಯಂ = ಯಾರನ್ನು, ಅಸ್ತೌತ್ = ಸ್ತೋತ್ರಮಾಡಿತೋ, ಸಃ = ಆ, ವಿದ್ವಚ್ಛಿರೋಮಣಿಃ = ವಿದ್ವತ್‌ಶಿರೋಮಣಿಗಳಾದ, ಮಧ್ವಃ = ಮಧ್ವರು, ಪವಮಾನಾಂಶಃ = ಪವಮಾನನ ಅಂಶವೆಂದು, ಸಿದ್ಧಃ = ಸಿದ್ಧವಾಯಿತು.

**ಅನುವಾದ–** ಈ ರೀತಿಯಲ್ಲಿ ಪವಮಾನಸೂಕ್ತದಲ್ಲಿರುವ ಈ ವಚನವು ಯಾರನ್ನು ಸ್ಪಷ್ಟವಾಗಿ ಸ್ತೋತ್ರವನ್ನು ಮಾಡಿತೋ, ಆ ವಿದ್ವತ್‌ಶಿರೋಮಣಿಗಳಾದ ಮಧ್ವರು, ಪವಮಾನನ ಅಂಶವೆಂದು ಸ್ಪಷ್ಟವಾಯಿತು.

**ಭಾವವಿಲಾಸಿನೀ–** ಅಸ್ಯ ಸ್ಯಾಂ ಶ್ರುತೌ ಪ್ರತಿಪಾದಿತೋ ಮಧ್ವಃ ಆನಂದತೀರ್ಥಚಾರ್ಯಃ । ತಸ್ಯ ಪವಮಾನತ್ವಂ ಕಥಮಿತ್ಯತ ಆಹ – ಇತೀತಿ ॥ ೫೫೪ ॥

ವಿಷ್ಟಂಭೋದಿವ ಇತ್ಯತ್ರಾಪ್ಯುಕ್ತೋ ಮಧ್ವೋ ಗುರುರ್ಮಮ ॥ ೫೫೫ ॥

**ಅರ್ಥ–** ವಿಷ್ಟಂಭೋದಿವ ಇತ್ಯತ್ರಾಪಿ = 'ವಿಷ್ಟಂಭೋದಿವ' ಎನ್ನುವ ಮಂತ್ರದಲ್ಲಿಯೂ ಸಹ, ಮಮ ಗುರುವು = ನಮ್ಮ ಗುರುಗಳಾದ, ಮಧ್ವಃ = ಮಧ್ವರು, ಉಕ್ತಃ = ಹೇಳಲ್ಪಟ್ಟಿದ್ದಾರೆ.

**ಅನುವಾದ–** 'ವಿಷ್ಟಂಭೋದಿವ' ಎಂಬ ಮಂತ್ರದಲ್ಲಿಯೂ ನಮ್ಮ ಗುರುಗಳಾದ ಮಧ್ವರು, ಹೇಳಲ್ಪಟ್ಟಿದ್ದಾರೆ.

**ವಿವರಣೆ–** ವಿಷ್ಟಂಭೋ ದಿವ ಇತ್ಯನೇನ "ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ ವಿಶ್ವಾ ಉತ ಕ್ಷಿತಯೋ ಹಸ್ತೇ ಅಸ್ಯ । ಅಸತ್ ತ ಉತ್ಸೋ ಗೃಣತೇ ನಿಯುತ್ವಾನ್

ಅಋಷೀರಿತ್ಯಸ್ಯರ್ಥಕಥನಂ ಸರ್ವಭಿನ್ನಾಖ್ಯಹಯಗ್ರೀವರ್ಷಿ ಸಂಯುತಾ ಇತಿ । ಸರ್ವಭಿನ್ನತ್ವಾತ್ ಅಃ ಇತಿ ಆಖ್ಯಾಯ ಎಸ್ಯ ಸರ್ವಭಿನ್ನಾಖ್ಯಃ । ಅ ಏವ ಋಷಿರ್ಯಾಸಾಂ ತಾಃ ಅರ್ಷಯಃ । ತಾಃ ಅರ್ಷೀಃ ॥ ೫೪೮ ॥ .

ನೋ ಚೇತ್ ವರ್ಣವ್ಯತ್ಯಸೋ ನೋ ಚೇತ್ । ಅಕ್ರೂರರೂಪಿಣೇಃ ''ರುಷದಾಹ'' ಇತಿ ಧಾತೋಃ ನ ವಿದ್ಯತೇ ರುಷಿರ್ದಾಹೋ ಯಾಸಾಂ ಯಾಭ್ಯೋ ವಾ ತಾ ಅರರ್ಷಯ ಇತಿ ವ್ಯುತ್ಪತ್ತ್ಯಾ ನಿತ್ಯಾಃ ಶಾಂತಾಶ್ಚೇತ್ಯರ್ಥಃ ॥ ೫೪೯ ॥

ಅಸದಾಸ್ಯಾಂಧಕೂಪೇಭ್ಯಃ ಅಸತಾಂ ಮಾಯಾವಾದಿಪ್ರಭೃತೀನಾಮ್ ಆಸ್ಯಾಖ್ಯಾಂಧಕೂಪೇಭ್ಯಃ ಬಲಾತ್ ಯುಕ್ತಿಬಲಾತ್ । ಹಭೌ ಹಕಾರಭಕಾರ್ರೆ ನಿಭೌ ಸಮಾನೌ । ಹೃಞ್ ಹೃಞ್-ಧಾತೌ ॥೫೫೦ ॥

ಪೂಷಣಸ್ಯ ಹರೇಃ ಪೂರ್ಣಬಲಪ್ರೇರಣಕರ್ಮಣಃ ।
ವವ್ರಿಂ ವರಣಮಿಚ್ಛನ್ ಸ ಪ್ರಸಾದಾಭಿದಮುತ್ತಮಮ್ ॥ ೫೫೧ ॥

ಅಂತರಿಕ್ಷೇಽಂತರಿಕ್ಷಾಖ್ಯಾವ್ಯಾಕೃತಾಕಾಶಮಾನಿನಿ ।
ದುರ್ಗಾನನಾಂಬುಜೇ ಪೂರ್ವಂ ಸರ್ವಸ್ಯ ಜಗತಃ ಪುರಾ ।
ಜಾ ಜಾತಾಃ ಸಪ್ತವಿದ್ಯಾಸ್ತಾ ಅಂತಃ ಸುಜನಚೇತಸಾಮ್ ॥ ೫೫೨ ॥

ಮಧ್ವೇ ಯೇ ಮೇ ನ್ಯಯಮಯತ್ ಸ್ವಯಂ ಚಾವಿದದಂಜಸಾ ।
ಆಹಾಂತರಿಕ್ಷೇ ಜಾತತ್ವಮನಾದಿತ್ವಂ ಚ ಸೂಚಯನ್ ॥ ೫೫೩ ॥

**ಅರ್ಥ–** ಪೂಷಣಸ್ಯ = ಪೂಷಣಸ್ಯ ಎಂದರೆ, ಪೂರ್ಣಬಲ ಪ್ರೇರಣ ಕರ್ಮಣಃ = ಪೂರ್ಣವಾದ ಬಲ ಮತ್ತು ಪ್ರೇರಣ ಕಾರ್ಯವುಳ್ಳ ಎಂದು ಅರ್ಥ. ಅಂತಹ ಹರಿಯ, ವವ್ರಿಂ = ವರಣಮ್ ಎಂದರೆ, ಉತ್ತಮಂ ಪ್ರಸಾದಾಭಿದಮ್ = ಶ್ರೇಷ್ಠ ಪ್ರಸಾದರೂಪವಾದ ಅನುಗ್ರಹವನ್ನು ಇಚ್ಛನ್ = ಇಚ್ಛಿಸುವ ಎಂದು ಅರ್ಥ. ಅಂತರಿಕ್ಷೇ = ಅಂತರಿಕ್ಷೇ ಎಂದರೆ, ಅಂತರಿಕ್ಷಾಖ್ಯಾವ್ಯಾಕೃತಾಶಮಾನಿನಿ= ಅಂತರಿಕ್ಷ ಎಂಬ ಹೆಸರಿನ ಅವ್ಯಾಕೃತಾಕಾಶಾಭಿ-ಮಾನಿಯಾದ, ದುರ್ಗಾನನಾಂಬುಜೇ = ದುರ್ಗೆಯ ಮುಖಕಮಲದಲ್ಲಿ, ಪೂರ್ವಂ = ಪೂರ್ವ ಎಂದರೆ, ಸರ್ವಸ್ಯ ಜಗತಃ ಪುರಾ = ಎಲ್ಲ ಜಗತ್ತಿನ ಸೃಷ್ಟಿಗಿಂತ ಮೊದಲು, ಜಾಃ = ಜಾಃ ಎಂದರೆ ಜಾತಾಃ ಅಭಿವ್ಯಕ್ತವಾದ ಸಪ್ತವಿದ್ಯೆಗಳು. ಕಾಃ = ಆ ವಿದ್ಯೆಗಳನ್ನು, ಸುಜನಚೇತಸಾಂ = ಸಜ್ಜನರ ಹೃದಯದ ಅಂತ ಒಳಗೆ, ಮಧ್ವಃ = ಶ್ರೀಮಧ್ವರು, ಯೇಮೇ = ನಿಯಮನವನ್ನು ಮಾಡಿದರು. ಸ್ವಯಂಚ = ತಾವು, ಅಂಜಸಾ = ಚೆನ್ನಾಗಿ, ಅವಿದತ್ = ತಿಳಿದರು. ಅನಾದಿತ್ವಮ್ = ಅನಾದಿತ್ವವನ್ನು, ಸೂಚಯನ್ = ಸೂಚಿಸುತ್ತಾ (ಸೂಚಿಸಲು) ಅಂತರಿಕ್ಷೇ ಜಾತತ್ವಮ್ ಎಂದು ಆಹ ಶ್ರುತಿಯು ಹೇಳಿದೆ.

**ಅನುವಾದ–** ಪೂಷಣ ಎಂದರೆ ಪೂರ್ಣಬಲ ಪ್ರೇರಣ ಶಕ್ತಿಯುಳ್ಳ ಹರಿ. ಅವನ ವವ್ರಿಂ ಎಂದರೆ ವರಣ ಎಂದರೆ ಶ್ರೇಷ್ಠವಾದ ಅನುಗ್ರಹ. ಅದನ್ನು ಇಚ್ಛಿಸುತ್ತಾ ಅಂತರಿಕ್ಷ ಎಂದರೆ ಅವ್ಯಾಕೃತಾಕಾಶಾಭಿಮಾನಿಯಾದ ದುರ್ಗೆಯ ಮುಖಕಮಲದಲ್ಲಿ ಜಗತ್ತಿನ ಸೃಷ್ಟಿಗಿಂತಲೂ ಮೊದಲು ಅಭಿವ್ಯಕ್ತಗಳೂ, ಜಾತಗಳೂ ಆದ ಯಾವ ಸಪ್ತವಿದ್ಯೆಗಳಿವೆಯೋ, ಅವುಗಳನ್ನು ಸಜ್ಜನರ ಹೃದಯದೊಳಗೆ ಮಧ್ವರು ಪ್ರೇರಿಸಿದರು. ಮತ್ತು ತಾವು ಚೆನ್ನಾಗಿ ತಿಳಿದರು. ಅನಾದಿತ್ವವನ್ನು ಸೂಚಿಸಲು ಶ್ರುತಿಯು ಅಂತರಿಕ್ಷೇ ಜಾ ಅಂತರಿಕ್ಷದಲ್ಲಿ ಹುಟ್ಟಿದವು ಎಂದು ಹೇಳಿದೆ.

**ಭಾವವಿಲಾಸಿನೀ–** ವರಣಂ ಪ್ರಸಾದಾಭಿಧಮಿತಿ ಸಂಬಂಧಃ ॥ ೫೫೧ ॥

ಜಾ ಇತ್ಯನೂದ್ಯ ಜಾತಾ ಇತ್ಯರ್ಥ ಕಥನಮ್ । ವೇದದ್ರಷ್ಟ ಋಷಿಃ ॥ ೫೫೨–೫೫೩ ॥

ಇತ್ಯಸ್ತೌತ್ ಪವಮಾನಸ್ಯ ಸೂಕ್ತೇ ಯಂ ಸ್ಪಷ್ಟವಾಗಿಯಂ ।
ಸ ಮಧ್ವಃ ಪವಮಾನಾಂಶಃ ಸಿದ್ಧೋ ವಿದ್ವಚ್ಛಿರೋಮಣಿಃ ॥ ೫೫೪ ॥

**ಅರ್ಥ–** ಇತಿ = ಈ ರೀತಿಯಾಗಿ, ಪವಮಾನಸೂಕ್ತೇ = ಪವಮಾನ ಸೂಕ್ತದಲ್ಲಿ, ಇಯಂ = ಈ, ಸ್ಪಷ್ಟವಾಕ್= ಸ್ಪಷ್ಟವಚನವು ಯಂ = ಯಾರನ್ನು, ಅಸ್ತೌತ್ = ಸ್ತೋತ್ರಮಾಡಿತೋ, ಸಃ = ಆ, ವಿದ್ವಚ್ಛಿರೋಮಣಿಃ = ವಿದ್ವತ್‌ಶಿರೋಮಣಿಗಳಾದ, ಮಧ್ವಃ = ಮಧ್ವರು, ಪವಮಾನಾಂಶಃ = ಪವಮಾನನ ಅಂಶವೆಂದು, ಸಿದ್ಧಃ = ಸಿದ್ಧವಾಯಿತು.

**ಅನುವಾದ–** ಈ ರೀತಿಯಲ್ಲಿ ಪವಮಾನಸೂಕ್ತದಲ್ಲಿರುವ ಈ ವಚನವು ಯಾರನ್ನು ಸ್ಪಷ್ಟವಾಗಿ ಸ್ತೋತ್ರವನ್ನು ಮಾಡಿತೋ, ಆ ವಿದ್ವತ್‌ಶಿರೋಮಣಿಗಳಾದ ಮಧ್ವರು, ಪವಮಾನನ ಅಂಶವೆಂದು ಸ್ಪಷ್ಟವಾಯಿತು.

**ಭಾವವಿಲಾಸಿನೀ–** ಅಸ್ತ್ವಸ್ಯಾಂ ಶ್ರುತೌ ಪ್ರತಿಪಾದಿತೋ ಮಧ್ವಃ ಆನಂದತೀರ್ಥಾಚಾರ್ಯಃ । ತಸ್ಯ ಪವಮಾನತ್ವಂ ಕಥಮಿತ್ಯತ ಆಹ – ಇತೀತಿ ॥ ೫೫೪ ॥

ವಿಷ್ಟಂಭೋದಿವ ಇತ್ಯತ್ರಾಪ್ಯುಕ್ತೋ ಮಧ್ವೋ ಗುರುರ್ಮಮ ॥ ೫೫೫ ॥

**ಅರ್ಥ–** ವಿಷ್ಟಂಭೋದಿವ ಇತ್ಯತ್ರಾಪಿ = 'ವಿಷ್ಟಂಭೋದಿವ' ಎನ್ನುವ ಮಂತ್ರದಲ್ಲಿಯೂ ಸಹ, ಮಮ ಗುರುವು = ನಮ್ಮ ಗುರುಗಳಾದ, ಮಧ್ವಃ = ಮಧ್ವರು, ಉಕ್ತಃ = ಹೇಳಲ್ಪಟ್ಟಿದ್ದಾರೆ.

**ಅನುವಾದ–** 'ವಿಷ್ಟಂಭೋದಿವ' ಎಂಬ ಮಂತ್ರದಲ್ಲಿಯೂ ನಮ್ಮ ಗುರುಗಳಾದ ಮಧ್ವರು, ಹೇಳಲ್ಪಟ್ಟಿದ್ದಾರೆ.

**ವಿವರಣೆ–** ವಿಷ್ಟಂಭೋ ದಿವ ಇತ್ಯನೇನ "ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ ವಿಶ್ವಾ ಉತ ಕ್ಷಿತಯೋ ಹಸ್ತೇ ಅಸ್ಯ । ಅಸತ್ ತ ಉತ್ಸೋ ಗೃಣತೇ ನಿಯುತ್ವಾನ್

ಮಧ್ವೋ ಅಂಶುಃ ಪವತ ಇಂದ್ರಿಯಾಯ'' ಎಂಬುದು ಪೂರ್ಣವಾದ ಮಂತ್ರ. (7-3-25-6) ಈ ಮಂತ್ರದ ಅರ್ಥವು ಹೀಗಿದೆ - ಎಲೈ ಪವಮಾನನೇ, ದಿವಃ = ಸ್ವರ್ಗಲೋಕಕ್ಕೆ, ವಿಷ್ಟಂಭಃ = ಆಧಾರಭೂತನಾಗಿ, ಪೃಥಿವ್ಯಾಃ = ಭೂಲೋಕಕ್ಕೆ, ಧರುಣಃ = ಧಾರಣಶೀಲನಾಗಿ, ಎರಡುಲೋಕಗಳಿಗೂ ಮಿಥ್ಯಾತ್ವವನ್ನು ಪರಿಹರಿಸುವುದರಿಂದ ಲೋಕವನ್ನು ಉದ್ಧಾರಮಾಡುವುದರಿಂದಲೂ, ಲೋಕದ್ವಯಗಳಲ್ಲಿರುವ ಸಜ್ಜನರಿಗೆ ತತ್ತ್ವೋಪದೇಶವನ್ನು ಮಾಡಿ ಗುರುಗಳಾಗಿ ಉದ್ಧಾರಮಾಡುವುದರಿಂದಲೂ, ಉಭಯಲೋಕೋದ್ಧಾರಕತ್ವವು ಕೂಡುತ್ತದೆ. ''ಶ್ರೀಮದಾನಂದತೀರ್ಥ ತ್ರೈಲೋಕ್ಯಾಚಾರ್ಯಪಾದಃ'' ಎಂಬ ವಚನದಿಂದ ಈ ಅರ್ಥವು ಲಭಿಸುತ್ತದೆ. ಉತ್ಸಃ = ಹರಿಸ್ತೋತ್ರವನ್ನು ಮಾಡುವುದರಲ್ಲಿ, ಮತ್ತು ಕೇಳುವುದರಲ್ಲಿ ಯಾವಾಗಲೂ ಉತ್ಸುಕರಾದಂತಹ, ನಿಯುತ್ವಾನ್ = ಹರಿಯ ಜೊತೆಯಲ್ಲಿ ಯಾವಾಗಲೂ ಯೋಗವನ್ನುಳ್ಳಂತಹ, ತೇ = ಎಲೈ ವಾಯುದೇವರೇ, ನಿಮ್ಮ ಅಂಶುಃ = ಅಂಶವಾದ, ತಾಚ್ಛೀಲಿಕವಾದ ಉ ಪ್ರತ್ಯಯವು ಮಧ್ವರಿಗೆ ಮೂಲರೂಪಶೀಲಸಮಶೀಲವನ್ನು ಹೇಳುತ್ತದೆ. ಮಧ್ವಃ = ಮಧ್ವಾಚಾರ್ಯರು, ಅಸತ್ = ದುರ್ಜನರಿಗೆ ಅಜ್ಞೇಯನಾದ ಅಸಶಬ್ಧವಾಚ್ಯನಾದ ಬ್ರಹ್ಮನನ್ನು, ಸದ್ ಧಾತುವಿಗೆ ಗತ್ಯರ್ಥವಿರುವುದರಿಂದ, ಇಲ್ಲಿ ಕರ್ಮಣಿ ಪ್ರತ್ಯಯವನ್ನು ಮಾಡಿ, ಅಜ್ಞೇಯನಾದಬ್ರಹ್ಮನನ್ನು ಎಂಬರ್ಥವನ್ನು ಮಾಡಿದ್ದಾರೆ. ಗೃಣತೇ ಗೃಣೀತೇ = ಸ್ವಯಂ ಸ್ತೋತ್ರಮಾಡುತ್ತಾರೆ ಎಂದು ಅರ್ಥ. ಅನೇಕ ರೂಪಗಳಿಂದ ಸ್ತೋತ್ರಮಾಡುವುದರಿಂದ ಗೃಣತೇ ಎಂದು ಬಹುವಚನವಿದೆ. ಹರಿಯಸ್ತೋತ್ರವನ್ನು ಮಾಡು ಎಂದು, ಇಂದ್ರಿಯಾಯ = ಸಜ್ಜನರ ವಾಗಿಂದ್ರಿಯವನ್ನು ಕುರಿತು ಎಂದರೆ ಹರಿಸ್ತುತಿಯನ್ನು ಮಾಡುವ ವಾಗಿಂದ್ರಿಯವನ್ನು ಪ್ರೇರಣೆ ಮಾಡಲು, ಪವತೇ = ದೇಶದೇಶಗಳಲ್ಲಿ ಸಂಚಾರ ಮಾಡುತ್ತಾರೆ. ಹರಿಸ್ತೋತ್ರರೂಪವಾದ ಶ್ರುತಿಪುರಾಣ ತಾವು ಪಂಚರಾತ್ರಾದಿಗಳನ್ನು ಸ್ತೋತ್ರಮಾಡಿ, ಸಜ್ಜನರ ವಾಗಿಂದ್ರಿಯದಿಂದ ಹರಿಯನ್ನು ಸ್ತೋತ್ರಮಾಡಿಸಲು ಸರ್ವತ್ರ ಸಂಚಾರವನ್ನು ಮಾಡುತ್ತಾರೆ ಎಂದು ಅರ್ಥ. ಸ್ತಾವಯಿತುಂ ''ರಚನಪಟುಮಥಾಪಾದ್ಯವಿದ್ಯಾಸಮುದ್ರ, ವಾಗ್ದೇವೀ ಸಾ ಸುವಿದ್ಯಾದ್ರವಿಣದ'', ''ಕೇಶವಾನಂದತೀರ್ಥಶ್ರೀಮತ್ಪಾದಾಬ್ಜಭಕ್ತಃ ಸ್ತುತಿಮಕೃತ ಹರೇಃ'' ಎಂಬ ವಚನಗಳು ಈ ಅರ್ಥವನ್ನು ಪೋಷಿಸುತ್ತವೆ. ಆ ಕಾರಣದಿಂದಲೇ ಅಸ್ಯ = ಈ ಮಧ್ವರ, ಹಸ್ತೇ = ಹಸ್ತದಲ್ಲಿ, ಸಮಸ್ತಾಃ ಕ್ಷಿತಯಃ = ಎಲ್ಲ ಲೋಕಗಳು, ತಿಷ್ಠಂತಿ = ಇವೆ. ಸಕಲ ದೇಶದಲ್ಲಿರುವ ಸಜ್ಜನರಿಗೆ ಗುರುವಾದುದರಿಂದ, ಎಲ್ಲ ಲೋಕವೂ ಅವರ ಹಸ್ತವಶವಾಗಿದೆಯೆಂದು ಅಭಿಪ್ರಾಯ. 'ಜಗದುತವಶಗಮ್' ಎಂಬ ವಚನವು ಇದನ್ನು ಪೋಷಿಸುತ್ತದೆ ॥ 555-557 ॥

ವಿಷ್ಟಂಭೋ ಧಾರಕೋ ಯೋಽಸೌ ದಿವೋ ಧಾರಣಶೀಲವಾನ್
ಧರುಣೋಽಸ್ಯಾಃ ಪೃಥಿವ್ಯಾಶ್ಚ ವಿಶ್ವಾಶ್ಚ ಕ್ಷಿತಯೋಽಸ್ಯ ಹಿ ।
ಹಸ್ತೇ ಹಸ್ತವಶಾ ಮಿಥ್ಯಾತ್ವಾಖ್ಯಬಾಧವಿಮೋಚನಾತ್ ॥ ೫೫೮ ॥

ವಾಯೋ ತವಾಂಶುರಂಶೋಽಸೌ ಮಧ್ವಸ್ತಚ್ಛೀಲಶೀಲವಾನ್ ।
ನಿತರಾಂ ಯೋಗಯುಕ್ತಾತ್ವಾನ್ನಿಯುತ್ವಾನುತ್ಸ ಉತ್ಸುಕಃ ॥ ೫೫೭ ॥

ಹರಿಸ್ತುತಿಂ ಶ್ರೋತುಕಾಮಃ ಸರ್ವೈಶ್ಚಾದೃಶ್ಯರೂಪತಃ ।
ಅಸತ್ಸಂಜ್ಞಂ ಪರಂಬ್ರಹ್ಮ ಗೃಣತೇ ಸ್ತೋತ್ರಸಂಚಯೈಃ ॥ ೫೫೮ ॥

ವಾಗಿಂದ್ರಿಯಾಖ್ಯೇಂದ್ರಿಯಾಯ ಪವತೇ ಪ್ರೇರಣೇಚ್ಛಯಾ ।
ಸತ್ಸು ವಾಗ್ವೈಖರೀದಿತ್ಸುರೇವ ಸಂಚರತಿ ಕ್ಷಿತೌ ।
ಇತ್ಯರ್ಥೋಽತ್ರ ಯತಃ ಸಮ್ಯಗ್ ದೃಶ್ಯತೇ ಪದಸಂಪದಾ ॥ ೫೫೯ ॥

**ಅರ್ಥ**– ಯಃ ಅಸೌ= ಯಾವ ಈ ಮಧ್ವರು, ವಿಷ್ಟಂಭಃ = ವಿಷ್ಟಂಭ ಎಂದರೆ ಧಾರಕಃ = ಧಾರಕರು, ದಿವೋಧಾರಣಶೀಲವಾನ್= ದ್ಯುಯಿಕವನ್ನು ಧಾರಣಮಾಡುವ ಸ್ವಭಾವವುಳ್ಳವರು. ಅಸ್ಯಾಃ ಪೃಥಿವ್ಯಾಃ = ಈ ಪೃಥಿವಿಗೂ, ಧರುಣಃ= ಧಾರಕರು, ವಿಶ್ವಾಶ್ಚ ಕ್ಷಿತಯಃ = ಎಲ್ಲ ಲೋಕಗಳು, ಅಸ್ಯ = ಇವರ, ಹಸ್ತೇ = ಹಸ್ತೇ ಎಂದರೆ, ಹಸ್ತವಶಾಃ = ಹಸ್ತವಶವಾಗಿವೆ. ಮಿಥ್ಯಾತ್ವಾಖ್ಯಬಾಧಧಿಮೋಚನಾತ್ = ಮಿಥ್ಯಾತ್ವರೂಪವಾದ ಬಾಧದಿಂದ ನಿರ್ಮುಕ್ತಿಗೊಳಿಸಿರುವುದರಿಂದ, ಹಸ್ತವಶವಾಗಿವೆ. ವಾಯೋ = ಎಲೈ ವಾಯುವೇ, ತವ= ನಿಮ್ಮ ಅಂಶುಃ = ಅಂಶು ಎಂದರೆ, ಅಂಶಃ = ಅಂಶರಾದ, ಅಸೌ ಮಧ್ವಃ = ಈ ಮಧ್ವರು, ತಚ್ಛೀಲಶೀಲವಾನ್= ಮೂಲರೂಪದ ಶೀಲವನ್ನೇ ಉಳ್ಳವರು. ನಿತರಾಂ = ಬಹಳವಾದ, ಯೋಗಯುಕ್ತತ್ವಾತ್ = ಪರಮಾತ್ಮನ ಯೋಗದಿಂದ ಕೂಡಿದವರಾದ್ದರಿಂದ, ನಿಯುತ್ವಾನ್ = ನಿಯುತ್ವಾನ್ ಎಂದು ಕರೆಯಲ್ಪಡುತ್ತಾರೆ. ಉತ್ಸಃ = ಉತ್ಸ ಎಂದರೆ, ಉತ್ಸುಕಃ = ಉತ್ಸುಕರಾಗಿರುವವರು. ಹರಿಸ್ತುತಿಂ = ಹರಿಯಸ್ತುತಿಯನ್ನು, ಶ್ರೋತುಕಾಮಃ = ಕೇಳಲು ಇಚ್ಛಿಸಿ, ಸರ್ವೈಶ್ಚ= ಎಲ್ಲರಿಂದಲೂ, ಅದೃಶ್ಯತ್ವರೂಪತಃ = ಅದೃಶ್ಯನಾದ ಕಾರಣದಿಂದ, ಅಸತ್ = ಅಸತ್ ಎಂದರೆ, ಅಸತ್‌ಸಂಜ್ಞಂ = ಅಸತ್ ಎಂಬ ನಾಮವುಳ್ಳ ಪರಬ್ರಹ್ಮನನ್ನು, ಸ್ತೋತ್ರಸಂಚಯೈಃ = ಸ್ತೋತ್ರಸಂಚಯದಿಂದ, ಗೃಣತೇ = ಸ್ತೋತ್ರ ಮಾಡುತ್ತಾರೆ, ವಾಗಿಂದ್ರಿಯಾಖ್ಯೇಂದ್ರಿಯಾಯ = ವಾಗೇಂದ್ರಿಯದ ಕಡೆಗೆ, ಪ್ರೇರಣೇಚ್ಛಯಾ = ಪ್ರೇರಣೆಯನ್ನು ಮಾಡುವ ಇಚ್ಛೆಯಿಂದ, ಪವತೇ = ಸಂಚಾರ ಮಾಡುತ್ತಾರೆ. ಸತ್ಸು = ಸಜ್ಜನರಲ್ಲಿ, ವಾಗ್ವೈಖರೀದಿತ್ಸುಃ = ವಾಗ್ವೈಖರಿಯನ್ನು ಕೊಡಲು, ಏವಂ = ಈ ರೀತಿಯಾಗಿ, ಕ್ಷಿತೌ = ಭೂಮಿಯಲ್ಲಿ ಸಂಚರತಿ= ಸಂಚಾರ ಮಾಡುತ್ತಾರೆ. ಇತಿ = ಈ ರೀತಿಯಾದ, ಅರ್ಥ = ಅರ್ಥವು, ಪದಸಂಪದಾ = ಪದಗಳ ಮಹಿಮೆಯಿಂದ, ಅತ್ರ = ಈ ಮಂತ್ರದಲ್ಲಿ ಯತಃ = ಯಾವ ಕಾರಣದಿಂದ, ಸಮ್ಯಗ್ = ಚೆನ್ನಾಗಿ ತೋರುತ್ತದೆಯೋ, (ಆದ್ದರಿಂದ ಇದೇ ಅರ್ಥವೇ ಯುಕ್ತವಾದುದು.)

**ಅನುವಾದ–** ವಿಷ್ಟಂಭ ಎಂದರೆ ಧಾರಕರು ಎಂದು ಅರ್ಥ. ಈ ಮಧ್ವರು ದ್ಯುಲೋಕವನ್ನು ಧಾರಣಮಾಡುವ ಸ್ವಭಾವವುಳ್ಳವರು. ಅವರು ಈ ಪೃಥಿವಿಯನ್ನು ಧಾರಣಮಾಡುವವರು. ಎಲ್ಲ ಲೋಕಗಳು ಅವುಗಳಿಗೆ ಮಿಥ್ಯಾತ್ವರೂಪವಾದ ಬಾಧವನ್ನು ಪರಿಹಾರ ಮಾಡಿರುವುದರಿಂದ, ಅವರ ಹಸ್ತವಶವಾಗಿವೆ. ವಾಯುದೇವರೇ, ನಿಮ್ಮ ಅಂಶರಾದ ಈ ಮಧ್ವರು ನಿಮ್ಮ ಸ್ವಭಾವದಂತೆಯೇ ಸ್ವಭಾವವುಳ್ಳವರು. ಹರಿಯಲ್ಲಿ ನಿತರಾಂ ಯೋಗಯುಕ್ತರಾದ್ದರಿಂದ ನಿಯುತ್ವಾನ್ ಎಂದು ಕರೆಯಲ್ಪಡುತ್ತಾರೆ. ಉತ್ಸ ಎಂದರೆ ಹರಿಸೇವೆಯಲ್ಲಿ ಉತ್ಸುಕರಾದವರು ಎಂದು ಅರ್ಥ. ಹರಿಯಸ್ತುತಿಯನ್ನು ಕೇಳುವ ಇಚ್ಛೆಯಿಂದ, ಅಜ್ಞರಿಗೆ ಅದೃಶ್ಯನಾದ, ಅಸತ್‌ನಾಮಕನಾದ ಆ ಪರಬ್ರಹ್ಮನನ್ನು ಸ್ತೋತ್ರಸಮೂಹದಿಂದ ಸ್ತೋತ್ರ ಮಾಡುತ್ತಾರೆ. ಸಜ್ಜನರ ವಾಗಿಂದ್ರಿಯವನ್ನು ಪ್ರೇರಣೆ ಮಾಡಿ, ಅವರಿಗೆ ವಾಗ್ವೈಖರಿಯನ್ನು ಕರುಣಿಸಲು ಭೂಮಿಯಲ್ಲಿ ಹೀಗೆ ವಾಗಿಂದ್ರಿಯದ ಕಡೆಗೆ ಸಂಚಾರವನ್ನು ಮಾಡುತ್ತಾರೆ ಎಂಬ ಈ ಅರ್ಥವೇ ಈ ಮಂತ್ರದಲ್ಲಿ ಸ್ಪಷ್ಟವಾಗಿ ತೋರುವುದರಿಂದ ನಾವು ಮಂತ್ರಕ್ಕೆ ಹೇಳಿದ ಅರ್ಥವೇ ಯುಕ್ತವಾಗಿದೆ.

**ಭಾವವಿಲಾಸಿನೀ–** ವಿಷ್ಟಂಭೋ ದಿವ ಇತ್ಯನೇನ ''ವಿಷ್ಟಂಭೋ ದಿವೋ ಧರುಣಃ ಪೃಥಿವ್ಯಾ ವಿಶ್ವಾ ಉತ ಕ್ಷಿತಯೋ ಹಸ್ತೇ ಅಸ್ಯ । ಅಸತ್ತ ಉತ್ಸೋ ಗೃಣತೇ ನಿತ್ಯುತ್ವಾಂ ಮಧ್ವೋ ಅಂಶುಃ ಪವತ ಇಂದ್ರಿಯಾಯೇ''ತಿ ಶ್ರುತಿಂ ಗೃಹ್ಣಾತಿ । ಅಯಮರ್ಥಃ । ಹೇ ಪವಮಾನ ದಿವಃ ಸ್ವರ್ಗಲೋಕಸ್ಯ ವಿಷ್ಟಂಭಃ ಆಧಾರಭೂತಃ । ಪೃಥಿವ್ಯಾಃ ಭೂಲೋಕ್ಯ ಧರುಣಃ ಧಾರಣಶೀಲಃ । ಉಭಯೋರಪಿ ಮಿಥ್ಯಾತ್ವಾಖ್ಯಾನಾಶತ ಉದ್ಧಾರಾತ್ ಲೋಕದ್ವಯುಸ್ಥಸಾಧೂನಾಂ ಗುರುತ್ವೇನೋದ್ಧಾರಕತ್ವಾದ್ವಾ ''ಶ್ರೀಮದಾನಂದತೀರ್ಥ ತ್ರೈಲೋಕ್ಯಾಚಾರ್ಯೇ''ತಿ ವಚನಾತ್ । ಉತ್ಸಃ ಹರಿಸ್ತೋತ್ರಕರಣೇ ಹರಿಸ್ತೋತ್ರ ಶ್ರವಣೇ ಚ ಉತ್ಸುಕಃ । ನಿಯುತ್ವಾನ್ ನಿತರಾಂ ಹರಿವಿಷಯಕಯೋಗವಾನ್ । ಯುತ್ ಯೋಗಃ ತದ್ವಾನಿತ್ಯರ್ಥಃ । ಹೇ ವಾಯೋ ತೇ ತವ ಅಂಶುಃ ಅಂಶಃ । ಮೂಲರೂಪತಾಚ್ಛೇಲಿಕತ್ವ ಪ್ರದರ್ಶನಾಯ ಉಕಾರಃ । ಮಧ್ವಃ ಮಧ್ವಾಚಾರ್ಯಃ । ಅಸತ್ ದುರ್ಜನಾಜ್ಞೇಯತ್ವಾದಸಚ್ಛಬ್ದವಾಚ್ಯಂ ಪರಂ ಬ್ರಹ್ಮ । ಸದಿಧಾತೋರ್ಗತ್ಯರ್ಥಕತ್ವಾತ್ ಗತ್ಯರ್ಥಾನಾಂ ಚ ಜ್ಞಾನಾರ್ಥಕತ್ವಾತ್ । ಗುಣತೇ ಗೃಣೀತೇ ಸ್ವಯಂ ಸ್ತೌತೀತ್ಯರ್ಥಃ । ಬಹುರೂಪಾಪೇಕ್ಷಯಾ ಬಹುವಚನಮ್ । ಹರಿಸ್ತುತಿಂ ಕುರ್ವತಿ ಚ ಇಂದ್ರಿಯಾಯ ಸಜ್ಜನ-ವಾಗಿಂದ್ರಿಯಾಯ । ಹರಿಸ್ತುತಿಂ ಕುರ್ವತ್ ಸಜ್ಜನವಾಂಗಿದ್ರಿಯೋದ್ಬೋಧನಾಯೇತ್ಯರ್ಥಃ । ಪವತೇ ದೇಶೇ ದೇಶೇ ಪವನಂ ಕರೋತಿ । ಹರಿಸ್ತುತಿರೂಪಶ್ರುತಿಪುರಾಣಪಂಚ- ರಾತ್ರಾದಿ-ಕಮುಪದಿಶ್ಯ ಸಜ್ಜನವಾಂಗಿಂದ್ರಿಯೇಣ ಹರಿಂ ಸ್ತಾವಯಿತುಂ ಸರ್ವತ್ರ ಸಂಚರತೀತ್ಯರ್ಥಃ । ''ರಚನಪಟುಮಥಾಪಾದ್ಯವಿದ್ಯಾಸಮುದ್ರ ವಾಗ್ದೇವೀ ಸಾ ಸುವಿದ್ಯಾ ದ್ರವಿಣದೇ''ತಿ ''ಕೇಶವಾನಂದತೀರ್ಥಶ್ರೀಮತ್ಪಾದಾಬ್ಜ ಭಕ್ತಃಸ್ತುತಿಮಕೃತ ಹರೇರಿ''ತಿ ವಚನಾತ್ । ಏತ ಏವ ಅಸ್ಯ ಮಧ್ವಸ್ಯ ವಿಶ್ವಾಃ ಸಮಸ್ತಾಃ ಕ್ಷಿತಯ ಉತ ಕ್ಷಿತಯಶ್ಚ ಹಸ್ತೇ ತಿಷ್ಠಂತಿ ।

ಸಕಲದೇಶಸ್ಥಸಜ್ಜನಗುರುತ್ವಾತ್ ಸರ್ವಾಪಿ ಕ್ಷಿತಿರ್ಹಸ್ತವಶೈವೇತ್ಯರ್ಥಃ । ''ಜಗದುತವಶಗಮಿ''ತಿ ವಚನಾತ್ । ಇಮಮೇವಾರ್ಥಭಿಪ್ರೇತ್ಯಾಹ – ವಿಷ್ಟಂಭ ಇತ್ಯಾದಿನಾ ॥ ವಿಷ್ಟಂಭ ಇತ್ಯಸ್ಯಾರ್ಥಕಥನಂ ಧಾರಕ ಇತಿ । ಆಧಾರ ಇತ್ಯರ್ಥಃ । ಪೃಥಿವ್ಯಾಃ ಧರುಣ ಇತ್ಯಸ್ಯಾರ್ಥಕಥನಂ ಧಾರಣಶೀಲವಾನೀತಿ ॥ ೫೫೫–೫೫೭ ॥ ಗುಣತೇ ಸ್ತುತಿಂ ಕುರ್ವತೇ ॥ ೫೫೮ ॥

ಇಂದ್ರಿಯಾಯ ಪವತ ಇತ್ಯಸ್ಯಾಭಿಪ್ರಾಯಮಾಹ – ಸಸ್ತ್ವಿತಿ ॥ ಏವೇತ್ಯನೇನ ವಿರಕ್ತ-ಶಿರೋಮಣೇರ್ಮಧ್ವಸ್ಯ ಪ್ರಯೋಜನಾಂತರಂ ನಾಸ್ತೀತಿ ಸೂಚಯತಿ । ಯತ ಇತ್ಯಸ್ಯ ಅತೋಽತ್ರಾಪ್ಯುಕ್ತೋ ಮಮ ಗುರುರಿತಿ ಪೂರ್ವೇಣ ಸಂಬಂಧಃ ॥ ೫೫೯ ॥

ಸಿಂಹಂ ನಸಂಶೇತಿ ವಾಕ್ಚ ಮಧ್ವಸ್ಯ ಚರಿತಂ ಜಗೌ ॥ ೫೬೦ ॥

**ಅರ್ಥ–** ಸಿಂಹಂ ನಸಂಶೇತಿ ವಾಕ್ ಚ = ಸಿಂಹಂ ನಸಂಶ ಎಂಬ ಮಂತ್ರವೂ, ಮಧ್ವಸ್ಯ = ಮಧ್ವಾಚಾರ್ಯರ, ಚರಿತಂ = ಚರಿತ್ರೆಯನ್ನು, ಜಗೌ = ಹೇಳುತ್ತದೆ.

**ಅನುವಾದ–** ಸಿಂಹಂ ನಸಂ ಎಂಬಲ್ಲಿ ''ಸಿಂಹಂ ನಸಂತ ಮಧ್ವೋ ಆಯಾಸಂ ಹರಿಮರುಷಂ ದಿವೋ ಅಸ್ಯ ಪತಿಮ್ । ಶೂರೋ ಯುತ್ಸು ಪ್ರಥಮಃ ಪೃಚ್ಛತೇ ಗಾ ಅಸ್ಯ ಚಕ್ಷಸಾ ಪರಿಪಾತ್ಯುಕ್ಷ'' (೭-೩-೨೫-೩) ಇದು ಪೂರ್ಣಮಂತ್ರ. ಇದರ ಅರ್ಥವು ಹೀಗಿದೆ - ಯುತ್ಸು = ವಾಗ್ಯುದ್ಧಗಳಲ್ಲಿ, ಶೂರಃ = ಶೌರ್ಯವನ್ನು ಹೊಂದಿದ, ಪ್ರಥಮಃ = ನರಸಿಂಹದೇವರ ಶಿಷ್ಯರಲ್ಲಿ ಪ್ರಥಮರಾದ ಮಧ್ವಾಚಾರ್ಯರು, ಅಸ್ಯ = ಈ ಸಜ್ಜನವರ್ಗಕ್ಕೆ, ದಿವಃ ಪತಿಂ = ಜ್ಞಾನದ ಪತಿಯಾದ ಎಂದರೆ ಸಜ್ಜನವರ್ಗಕ್ಕೆ ಜ್ಞಾನವನ್ನು ಕೊಡುವ, ಅರುಷಂ = ಸಜ್ಜನರಲ್ಲಿ ಕೋಪರಹಿತನಾದ, ಅಯಾಸಂ = ಕಂಬದ ಮಧ್ಯದಿಂದ ಹೊರಬಂದಂತಹ, ಅಯಧಾತುವಿಗೆ ಕಸುನ್ ಪ್ರತ್ಯಯವು ಬಂದು ಅತ್ವಸಂತಸ್ಯ ಎಂಬ ಸೂತ್ರದಿಂದ ಪಧಾ ಉದೀರ್ಘವು ಬಂದರೆ ಅಯಾಸ ಎಂದು ರೂಪವಾಗುತ್ತದೆ. ಹರಿಂ = ದುರ್ಜನಸಂಹಾರಕನಾದ್ದರಿಂದ ಹರಿ ಎಂಬ ಹೆಸರನ್ನು ಹೊಂದಿದ, ನಸಂತ = ನಾಸಾಪುಟಗಳ ಮಧ್ಯೆ ಅಂತರವುಳ್ಳ ಎಂದರೆ ವಿಸ್ತಾರವಾದ ನಾಸಾ ಪ್ರದೇಶವುಳ್ಳ, ನಸಃ ಎಂಬಲ್ಲಿ ಸುಪಾಂ ಸುಲುಗ್ ಎಂಬ ಸೂತ್ರದಿಂದ ಸುಪ್ ಲೋಪವು ಬಂದು ನಸ್ ಎಂದಷ್ಟೇ ಉಳಿದಿದೆ. ಸಿಂಹಂ = ನರಸಿಂಹನನ್ನು, ಗಾಃ = ವಿದ್ಯೆಗಳನ್ನು ಪೃಚ್ಛತೇ = ಅವರ ಶಿಷ್ಯರಾಗಿ, ವೇದಾದಿ ಸಕಲಸಚ್ಛಾಸ್ತ್ರಗಳ ಅರ್ಥವನ್ನು ವಿಚಾರ ಮಾಡುತ್ತಾರೆ ಎಂದು ಅರ್ಥ. ''ನರಸಿಂಹೋಽಖಿಲಾಜ್ಞಾನಮತಧ್ವಾಂತದಿವಾಕರಃ'', ''ಜಯತ್ಯಾನಂದ-ತೀರ್ಥೇಷ್ಟದೇವತಾ ನರಕೇಸರೀ'', ''ಪಾಂತ್ವಸ್ಮಾನ್'' ''ದೂರಪ್ರಧ್ವಸ್ತಧ್ವಾಂತ-ಶಾಂತಪ್ರವಿತತಮಮನಸಾ ಭಾವಿತಾ ಭೂರಿಭಾಗ್ಯೈಃ'' ಇವೇ ಮುಂತಾದ ವಚನಗಳಿಂದ ಶ್ರೀಮಧ್ವರು ನರಸಿಂಹದೇವರ ಶಿಷ್ಯರೆಂದು ಪ್ರಸಿದ್ಧವಾಗುತ್ತವೆ. ಅಸ್ಯ

= ಈ ನರಂಹದೇವರ, ಚಕ್ಷಸಾ = ಜ್ಞಾನಚಕ್ಷುಸ್ಸಿನಿಂದ, ಎಂದರೆ ನರಸಿಂಹದೇವರು ಉಪದೇಶ ಮಾಡಿದ ಜ್ಞಾನದಿಂದ ಉಕ್ಷಾ = ಜ್ಞಾನಪ್ರೇಕ್ಷಣೆಯನ್ನು ಮಾಡುವ, ಮಧ್ವಃ = ಶ್ರೀಮಧ್ವರು, ಪರಿಪಾತಿ = ಎಲ್ಲ ಕಡೆಯಲ್ಲಿಯೂ ಇರುವ ಸಜ್ಜನರನ್ನು ರಕ್ಷಿಸುತ್ತಾರೆ. ಇದು ಮಂತ್ರದ ಅರ್ಥ. ಈ ಅರ್ಥವನ್ನೇ ಮುಂದಿನ ಕೆಲವು ಶ್ಲೋಕಗಳಿಂದ ಸ್ಪಷ್ಟಪಡಿಸುತ್ತಾರೆ.

**ಸಿಂಹಂ ನೃಸಿಂಹಂ ವಿವೃತನಸೋಂತೋ ಯಸ್ಯ ತಂ ಸುಪಃ ।**
**ಲೋಪೇ ನಸಂತೇತಿ ಪದಸ್ಯಾರ್ಥಂ ದುರ್ಜನಸಂಹೃತೇಃ ॥ ೫೬೧ ॥**

**ಅರ್ಥ–** ಸುಪಃ= ಸುಪ್‌ಪ್ರತ್ಯಯದ, ಲೋಪೇ ಸತಿ= ಲೋಪವಾಗಲು, ನ ಸಂತೇತಿ= ನ ಸಂ ಎಂಬ, ಪದಸ್ಯ= ಪದದ, ಅರ್ಥಂ= ಅರ್ಥಭೂತನಾದ, ವಿವೃತನಸಃ= ವಿವೃತ-ತೆರೆದ, ನಸಃ= ಮೂಗಿನ, ಅಂತಃ= ಒಳಭಾಗವು, ಯಸ್ಯ= ಯಾರದೋ, ತಂ= ಅಂತಹ, ಸಿಂಹಂ= ನೃಸಿಂಹಂ= ನರಸಿಂಹದೇವರನ್ನು.

**ಅನುವಾದ–** ಸಿಂಹ ಎಂದರೆ ನರಸಿಂಹದೇವರು ಅಗಲವಾದ ಮೂಗಿನ ಹೊಳ್ಳೆಯು ಯಾರದಿದೆಯೋ ಅಂತಹವರು. ಸುಪಾಂ ಸುಲುಕ್ ಎಂಬ ಸೂತ್ರದ ಪ್ರಕಾರ ನಸಂತಂ ಎಂಬುದು ನಸಂತ ಎಂದಾಗಿದೆ. ಆದ್ದರಿಂದ ನಸಂತ ಎಂದರೆ ನಸಂತಂ ವಿವೃತನಾಸಾಪುಟವುಳ್ಳವನು ಎಂದರ್ಥ. ಮುಂದಿನ ಹರಿ ಶಬ್ದದ ಅರ್ಥ- ದುರ್ಜನ ಸಂಹೃತೇಃ - ದುರ್ಜನರನ್ನು ಸಂಹಾರ ಮಾಡುವವನಾದ್ದರಿಂದ ಹರಿ ಎನ್ನಿಸಿಕೊಳ್ಳುವವನು.

**ವಿವರಣೆ–** ನೃಸಿಂಹದೇವರ ಮುಖದ ವರ್ಣನೆ ಇಲ್ಲಿದೆ. ಸಿಂಹದ ಮುಖವಾದ್ದರಿಂದ ಮೂಗಿನ ಹೊಳ್ಳೆಗಳು ಅಗಲವಾಗಿರುತ್ತವೆ.

**ಹರಿಂ ಭಕ್ತೇಷು ಶಾಂತತ್ವಾತ್ ಅರುಷಂ ದೋಷವರ್ಜಿತಮ್ ।**
**ಅಯಾಸಮಾಗತಂ ಸ್ತಂಭಾತ್ ಪ್ರಹ್ಲಾದಾರ್ಥಂ ಸಭಾಂತರೇ ।**
**ಅಸ್ಯ ಸಜ್ಜನವರ್ಗಸ್ಯ ದಿವೋ ಜ್ಞಾನದ್ಯುತೇಃ ಪತಿಮ್ ॥ ೫೬೨ ॥**

**ಅರ್ಥ–** ಹರಿಂ= ಹರಿಯನ್ನು (ಪೂರ್ವಶ್ಲೋಕೇ ದುರ್ಜನಸಂಹೃತೇಃ ಇತ್ಯತ್ರ ಅನ್ವಯ = ಹಿಂದಿನ ಶ್ಲೋಕದ ದುರ್ಜನಸಂಹೃತೇಃ ಎಂಬ ಶಬ್ದದ ಜೊತೆಗೆ ಅನ್ವಯ. ಅರ್ಥಾತ್ ದುರ್ಜನರನ್ನು ಸಂಹಾರಮಾಡುವವನಾದ್ದರಿಂದ ಹರಿ ಎನಿಸಿಕೊಳ್ಳುತ್ತಾನೆ.) ಭಕ್ತೇಷು = ಭಕ್ತರಲ್ಲಿ, ಶಾಂತತ್ವಾತ್ = ಅನುಗ್ರಹರೂಪನಾದ್ದರಿಂದ, ಅರುಷಂ - ರೋಷವರ್ಜಿತಂ = ಕೋಪರಹಿತನಾದ, ಅಯಾಸಂ - ಪ್ರಹ್ಲಾದಾರ್ಥಂ = ಪ್ರಹ್ಲಾದನಿಗಾಗಿ, ಸಭಾಂತರೇ =

ಸಭಾಮಧ್ಯದಲ್ಲಿ ಸ್ತಂಭಾತ್ = ಕಂಬದಿಂದ, ಆಗತಂ = ಬಂದಿರುವ, ಅಸ್ಯ - ಸಜ್ಜನವರ್ಗಸ್ಯ = ಸಜ್ಜನಸಮೂಹದ, ದಿವಃ - ಜ್ಞಾನದ್ಯುತೇಃ = ಜ್ಞಾನಪ್ರಕಾಶದ, ಪತಿಂ = ಒಡೆಯನಾದ.

**ಅನುವಾದ–** ನೃಸಿಂಹದೇವರು ದುರ್ಜನಸಂಹಾರಕರಾದ್ದರಿಂದ ಹರಿ ಎಂದೂ, ಭಕ್ತವರ್ಗದವರಲ್ಲಿ ಶಾಂತರಾಗಿರುವುದರಿಂದ ಅರುಷನೆಂದೂ, ಪ್ರಹ್ಲಾದನ ಸಲುವಾಗಿ ಸಭೆಯಲ್ಲಿ ಕಂಬದಿಂದ ಬಂದದ್ದರಿಂದ ಅಯಾಸಂ ಎಂದೂ ಕರೆಯಲ್ಪಡುತ್ತಾರೆ. ಮಂತ್ರದಲ್ಲಿರುವ ಅಸ್ಯ ಶಬ್ದವು ಸಜ್ಜನವರ್ಗದ ಎಂದೂ, ದಿವಃ ಎಂದರೆ ಜ್ಞಾನಪ್ರಕಾಶವೆಂದೂ, ಪತಿಂ ಎಂಬುದು ಒಡೆಯ ಎಂಬ ಅರ್ಥವನ್ನೂ ಹೇಳುತ್ತದೆ.

**ಭಾವವಿಲಾಸಿನೀ–** ಸಿಂಹಂ ನ ಸಂತೇತ್ಯನೇನ "ಸಿಂಹಂ ನಸಂತ ಮಧ್ವೋ ಅಯಾಸಂ ಹರಿಮರುಷಂ ದಿವೋ ಅಸ್ಯ ಪತಿಮ್ । ಶೂರೋ ಯುತ್ಸು ಪ್ರಥಮಃ ಪೃಚ್ಛತೇ ಗಾ ಅಸ್ಯ ಚಕ್ಷಸಾ ಪರಿಪಾತ್ಯುಕ್ಷೇ"ತಿ ಶ್ರುತಿಂ ಗೃಹ್ಣಾತಿ । ಅಯಮರ್ಥಃ । ಯುತ್ಸು ವಾಗ್ಯುದ್ಧೇಷು ಶೂರಃ ಶೌರ್ಯ- ವಾನ್ ಪ್ರಥಮಃ ನೃಹರಿಶಿಷ್ಯೇಷು ಆದ್ಯ ಮಧ್ವಾಚಾರ್ಯಃ ಅಸ್ಯ ಸಜ್ಜನವರ್ಗಸ್ಯ ದಿವಃ ಜ್ಞಾನಸ್ಯ ಪತಿಂ ಸಜ್ಜನವರ್ಗಜ್ಞಾನದಾತಾರಮಿತ್ಯರ್ಥಃ । ಅರುಷಂ ಸಜ್ಜನೇಷು ಕೋಪರಹಿತಮ್ । ಅಯಾಸಂ ಸ್ತಂಭಮಧ್ಯಾದಾಗತವಮ್ । ಅಯುತೇಃ ಕಸುಂ ಪ್ರತ್ಯಯಃ ಅತ್ವಸಂತಸ್ಯ ಚಾಧಾತೋರಿತ್ಯುಪಧಾಯಾ ದೀರ್ಘಃ । ಹರಿಂ ದುರ್ಜನಸಂಹಾರಕತ್ವಾದ್ಧರಿನಾಮಕಮ್ । ನಸಂತ ನಸಂತಂ ನಸೋ ನಾಸಾಪುಟಯೋಃ ಅಂತಃ ಅವಕಾಶೋ ಯಸ್ಯ ತಂ ವಿವೃತನಾಸಾ- ಪ್ರದೇಶಮಿತ್ಯರ್ಥಃ । ಸುಪಾಂ ಸುಲುಗಿತಿ ಸುಪೋಲೋಪಃ । ಸಿಂಹಂ ನೃಸಿಂಹಂ ಗಾಃ ವಿದ್ಯಾಃ ಪೃಚ್ಛತೇ ಶಿಷ್ಯೋ ಭೂತ್ವಾ ವೇದಾದಿಸಕಲಸಚ್ಛಾಸ್ತ್ರಾಣಾಮರ್ಥಂ ವಿಚಾರಯತೀತ್ಯರ್ಥಃ । "ನರಸಿಂಹೋಽಖಿಲಜ್ಞಾನಮತಧ್ವಾಂತದಿವಾಕರ" ಇತಿ "ಜಯತ್ಯಾನಂದತೀರ್ಥೇಷ್ಟದೇವತಾ ನರಕೇಸರೀ"ತಿ ವಚನಾತ್ "ಪಾಂತ್ವಸ್ಮಾನ್"ತಿ "ದೂರಪ್ರಧ್ವಸ್ತಧ್ವಾಂತಶಾಂತಪ್ರವಿತತಮಮನಸಾ ಭಾವಿತಾ ಭೂರಿಭಾಗೌರಿತಿ ವಚನಾಚ್ಚ ಮಧ್ವಸ್ಯ ನೃಸಿಂಹಶಿಷ್ಯತ್ವ ಪ್ರಸಿದ್ಧೇಃ । ಅಸ್ಯ ನೃಸಿಂಹಸ್ಯ ಚಕ್ಷಸಾ ಜ್ಞಾನಚಕ್ಷುಷಾ ನೃಸಿಂಹೋಪದಿಷ್ಟಜ್ಞಾನೇನೇತ್ಯರ್ಥಃ। ಉಕ್ಷಾ ಜ್ಞಾನಪ್ರೇಕ್ಷಣಂ ಕುರ್ವನ್ ಮಧ್ವಃ ಪರಿಪಾತಿ ಪರಿತಃ ಸಜ್ಜನವರ್ಗಂ ಪಾತೀತಿ । ಇಮಮೇವಾರ್ಥಭಿಪ್ರೇತ್ಯಾಹ – ಸಿಂಹಂ ನೃಸಿಂಹಮಿತ್ಯಾದಿನಾ ॥ ವಿವೃತನಸಃ ವಿವೃತನಾಸಾಪುಟಸ್ಯ ಅಂತಃಪರಂ ಪ್ರದೇಶಃ । ಅರ್ಥಂ ಅರ್ಥಭೂತಮ್ ॥ ೫೬೦-೫೬೨ ॥

**ವಿವರಣೆ–** "ಸಿಂಹಂ ನಸಂತಂ" ಎಂಬ ಋಙ್ಮಂತ್ರವು ಮಧ್ವಾಚಾರ್ಯರು ನೃಸಿಂಹದೇವರ ಶಿಷ್ಯೋತ್ತಮರಾಗಿ, ಅವರಿಂದ ಶಾಸ್ತ್ರಾರ್ಥಗಳನ್ನು ತಿಳಿದು ಸಜ್ಜನರಲ್ಲಿ ಅದನ್ನು ವಿತರಿಸಿ ಸಜ್ಜನರ ಉದ್ಧಾರಮಾಡುತ್ತಾರೆ ಎಂಬುದನ್ನು ಹೇಳುತ್ತಿದೆ. ಮಂತ್ರದಲ್ಲಿನ ಪದಗಳ ಅರ್ಥವಿವರಣೆಯು ಇಲ್ಲಿದೆ.

ಪದಗಳ ಅರ್ಥವಿವರಣೆ ಮುಂದಿನ ಶ್ಲೋಕಗಳಲ್ಲಿ ಮುಂದುವರಿಯುತ್ತದೆ-

**ಶೂರೋಽತಿಶೌರ್ಯವಾನ್ ಯುತ್ಸು ವಾಗ್ಯುದ್ಧೇಷು ಮಹೀತಲೇ ।**
**ಮಧ್ವೋ ಮಧ್ವಾಭಿಧೋ ಯೋಗೀ ಶ್ರೋತೃಷು ಪ್ರಥಮಃ ಸದಾ ।**
**ಗಾ ಗೋಪದೋಕ್ತಸದ್ವಿದ್ಯಾವ್ಯಕ್ತ್ಯುತ್ಕರ್ಷಾಯ ಪೃಚ್ಛತೇ ॥ ೫೬೩ ॥**

**ಅರ್ಥ–** ಮಹೀತಲೇ = ಭೂಮಂಡಲದಲ್ಲಿನ, ಯುತ್ಸು ವಾಗ್ಯುದ್ಧೇಷು = ಯುತ್ಸು ಎಂದರೆ ವಾಗ್ಯುದ್ಧಗಳಲ್ಲಿ ಶೂರಃ – ಅತಿಶೌರ್ಯವಾನ್ = ಬಹಳ ಶೌರ್ಯವುಳ್ಳ, ಮಧ್ವಃ – ಮಧ್ವಾಭಿಧೋ ಯೋಗೀ = ಮಧ್ವರೆಂಬ ಹೆಸರುಳ್ಳ ಯೋಗಿಗಳು (ಮಧ್ವಾಚಾರ್ಯರು) ಶ್ರೋತೃಷು = ಶ್ರೋತೃವೃಂದದಲ್ಲಿ, ಸದಾ = ಯಾವಾಗಲೂ, ಪ್ರಥಮಃ =ಪ್ರಥಮರು. ಗಾಃ – ಗೋಪದೋಕ್ತಸದ್ವಿದ್ಯಾಃ =ಗೋಶಬ್ದದಿಂದ ಹೇಳಲ್ಪಟ್ಟ ಸದ್ವಿದ್ಯೆಗಳನ್ನು, ವ್ಯಕ್ತ್ಯುತ್ಕರ್ಷಾಯ = (ಯದ್ಯಪಿ ಮಧ್ವರು ಸರ್ವಜ್ಞರಾದರೂ) ಜ್ಞಾನದ ಅಭಿವ್ಯಕ್ತಿ ವಿಶೇಷಕ್ಕಾಗಿ, ಪೃಚ್ಛತೇ =ನೃಸಿಂಹಾಭಿನ್ನರಾದ ವೇದವ್ಯಾಸರಿಂದ ಕೇಳುತ್ತಾರೆ.

**ಅನುವಾದ–** ಮೂಲರೂಪೀ ನಾರಾಯಣನು ಮೊದಲು ವೇದಗಳನ್ನು ಬ್ರಹ್ಮದೇವರಿಗೆ ಉಪದೇಶಿಸಿದಂತೆ, ವೇದವ್ಯಾಸರ ಅಚ್ಚುಮೆಚ್ಚಿನ ಪ್ರಥಮ ಶಿಷ್ಯರು ಮಧ್ವಾಚಾರ್ಯರು. ತತ್ತ್ವನಿರ್ಣಯಸ್ಥಾಪನೆಗಾಗಿ ವಾದಯುದ್ಧದಲ್ಲಿ ಇತರ ಕುಯುಕ್ತಿಜಾಲಗಳನ್ನು ಭೇದಿಸಿ ಪರಮತ ನಿರಾಕರಣೆ ಮಾಡಿದವರು. ಹೀಗಾಗಿ ಅವರು ತತ್ತ್ವಜ್ಞಾನಸಂಬಂಧಿಯಾದ ವಾದ ಯುದ್ಧದಲ್ಲಿ ಶೂರರು. ವ್ಯಾಸಶಿಷ್ಯೋ ಯತೀಶ್ವರಃ ಎಂಬಂತೆ ವೇದವ್ಯಾಸರ ಶಿಷ್ಯರಾಗಿ ವೇದಾದಿ ಸಕಲಸಚ್ಛಾಸ್ತ್ರಗಳ ಜಿಜ್ಞಾಸೆಯನ್ನು ಮಾಡುವರು.

**ವಿವರಣೆ–** ಗಾ ಎಂಬುದನ್ನು ಅನುವಾದಿಸಿ ಗೋ ಎಂಬ ಪದದಿಂದ ಹೇಳಲ್ಪಟ್ಟ ಸದ್ವಿದ್ಯೆ ಎಂಬ ಅರ್ಥವನ್ನು ಹೇಳಲಾಗಿದೆ. ವ್ಯಕ್ತಿಯ ಉತ್ಕರ್ಷಕ್ಕಾಗಿ ಅಂದರೆ ಜ್ಞಾನದ ಅಭಿವ್ಯಕ್ತಿಯ ಹೆಚ್ಚಳಕ್ಕಾಗಿ, ಏಕೆಂದರೆ ಋಜುಯೋಗಿಗಳ ಜ್ಞಾನವು ಅನಾದಿ. ಅವರು ಹೊಸದಾಗಿ ಜ್ಞಾನಪಡೆಯಬೇಕಾಗಿಲ್ಲ. ಅಂತೆಯೇ ಉತ್ಕರ್ಷಕ್ಕಾಗಿ ಎಂಬ ಪದವನ್ನು ರಾಜರು ಹೇಳಿರುವರು.

ಸ್ವತಃ ಅಪರೋಕ್ಷಜ್ಞಾನಿಗಳೂ, ಸರ್ವಜ್ಞರೂ ಆದ ಮಧ್ವಾಚಾರ್ಯರು ವೇದವ್ಯಾಸರ ಅಚ್ಚುಮೆಚ್ಚಿನ ಶಿಷ್ಯರಾಗಿ (ಪ್ರಥಮ ಶಿಷ್ಯರು) ತಮ್ಮಲ್ಲಿನ ಜ್ಞಾನದ ಉತ್ಕರ್ಷಕ್ಕಾಗಿ ಉಪದೇಶವನ್ನು ಪಡೆಯುವರು. ಆ ಜ್ಞಾನವನ್ನು ಮುಂದೆ ಸಜ್ಜನರಲ್ಲಿ ವಿತರಣೆಮಾಡಿ ಅವರನ್ನು ಸಂರಕ್ಷಿಸವರೆಂಬುದನ್ನು ಮುಂದೆ ಹೇಳುತ್ತಾರೆ.

**ಅಸ್ಯ ಪ್ರಸಾದಾಪ್ತೇನ ಚಕ್ಷಸಾ ಜ್ಞಾನಚಕ್ಷುಷಾ ।**
**ಸತ್ಸು ಬೋಧೋಕ್ಷಣಂ ಕುರ್ವನ್ನುಕ್ತಾ ಭಿಕ್ಷುಗಣಾಗ್ರಣೀಃ ।**
**ಪರಿಪಾತಿ ಸತಾಂ ವೃಂದಮಿತ್ಯರ್ಥೋಽತ್ರ ಸ್ಫುಟೋ ಯತಃ ॥ ೫೬೪ ॥**

**ಅರ್ಥ–** ಅಸ್ಯ = ಈ ನೃಸಿಂಹನ, ಪ್ರಸಾದಾತ್ = ಅನುಗ್ರಹದಿಂದ, ಆಪ್ತೇನ = ಪಡೆದಂತಹ, ಚಕ್ಷಸಾ - ಜ್ಞಾನಚಕ್ಷುಷಾ =ಜ್ಞಾನಚಕ್ಷುಸ್ಸಿನಿಂದ, ಸತ್ಸು = ಸಜ್ಜನರಲ್ಲಿ, ಉಕ್ತಾ ಬೋಧೋಕ್ಷಣಂ = ಉಪದೇಶವೆಂಬ ಸೂಚನೆಯನ್ನು, ಕುರ್ವನ್ = ಮಾಡುತ್ತಾ, ಭಿಕ್ಷುಗಣಾಗ್ರಣೀಃ = ಯತಿಗಳ ಗುಂಪಿನಲ್ಲಿ ಅಗ್ರಗಣ್ಯರಾದ ಮಧ್ವರು, ಸತಾಂ = ಸಜ್ಜನರ, ವೃಂದಂ = ಸಮೂಹವನ್ನು, ಪರಿಪಾತಿ = ರಕ್ಷಿಸುತ್ತಾರೆ, ಇತ್ಯರ್ಥಃ = ಎಂಬ ಈ ಅರ್ಥವು, ಯತಃ = ಯಾವ ಕಾರಣದಿಂದ, ಸ್ಫುಟಃ = ಸ್ಪಷ್ಟವಾಗಿದೆಯೋ, ಅತಃ (ಮಂತ್ರಾರ್ಥಃ ಯುಕ್ತಃ) = ಆದ್ದರಿಂದ ಮಂತ್ರಾರ್ಥವು ಸಮಂಜಸವಾಗಿದೆ.

**ಅನುವಾದ–** **ಈ ನೃಸಿಂಹನ ಪ್ರಸಾದದಿಂದ ಪಡೆದ ಜ್ಞಾನದೃಷ್ಟಿಯಿಂದ ಯತಿಶ್ರೇಷ್ಠರಾದ ಮಧ್ವರು ಸಜ್ಜನರ ಸಮೂಹದಲ್ಲಿ ಅದನ್ನು (ಆ ಜ್ಞಾನವನ್ನು) ಸೇಚನಮಾಡಿ ಅವರನ್ನು ರಕ್ಷಿಸುವರು ಎಂಬರ್ಥವು ಇಲ್ಲಿ ಸ್ಪಷ್ಟವಾಗಿದೆ.**

**ಭಾವವಿಲಾಸಿನೀ–** **ಗಾ ಇತ್ಯನೂದ್ಯಗೋಪದೋಕ್ತಸಿದ್ಧಿವ್ಯಾ ಇತ್ಯರ್ಥಕಥನಂ ವ್ಯಕ್ತ್ಯುತ್ಕರ್ಷಾಯ ಜ್ಞಾನಾಭಿವ್ಯಕ್ತೇಃ ಸ್ಪಷ್ಟತಾತಿಶಯಾಖ್ಯೋರುತ್ಕರ್ಷಾಯ ಋಜುಯೋಗಿ ಜ್ಞಾನಸ್ಯಾನಾದಿ-ತ್ವಾದುತ್ಕರ್ಷಾಯೇತ್ಯುಕ್ತಮ್ ॥ ೫೬೩, ೫೬೪ ॥**

**ವಿವರಣೆ–** ಮಧ್ವರು ಹಿರೇ ಬದರಿಯಲ್ಲಿ ವ್ಯಾಸಶಿಷ್ಯರಾಗಿ ವಿಶೇಷಜ್ಞಾನದ ಅಭಿವ್ಯಕ್ತಿಯನ್ನು ಪಡೆದು (ಅವರು ಋಜೂತ್ತಮರಾದ್ದರಿಂದ ಅವರ ಜ್ಞಾನವು ನಿತ್ಯ. ವಿಶೇಷ ಅಭಿವ್ಯಕ್ತಿಗಾಗಿ ಮಾತ್ರ ವ್ಯಾಸಶಿಷ್ಯತ್ವವು.) ಅಧಿಕಾರಿ ಸಜ್ಜನವೃಂದಕ್ಕೆ ಜ್ಞಾನೋಪದೇಶ ಮಾಡಿ ಅವರನ್ನು ರಕ್ಷಿಸುವರು. ಸಾಧನಮಾರ್ಗವನ್ನು ತೋರಿಸಿ ಮುಕ್ತಿಪಥಕ್ಕೆ ಕರೆದೊಯ್ಯುವರು.) ಹೀಗೆ ಸಿಂಹಂ ನಸಂತಂ ಮಧ್ವೋ ಎಂಬ ಋಜ್‌ಮಂತ್ರವನ್ನು ರಾಜರು ಮಧ್ವಪರವಾಗಿ ವ್ಯಾಖ್ಯಾನಿಸಿದ್ದಾರೆ.

**ಪ್ರಧಾರಾ ಮಧ್ವ ಇತ್ಯತ್ರಾಪಿ ಉಕ್ತೋ ಮಧ್ವಸ್ಯ ವಿಕ್ರಮಃ ॥ ೫೬೫ ॥**

**ಅರ್ಥ–** ಪ್ರಧಾರಾ ಮಧ್ವ ಇತ್ಯತ್ರ ಅಪಿ = ಪ್ರಧಾರಾ ಮಧ್ವ ಎಂಬ ಮಂತ್ರದಲ್ಲಿಯೂ, ಮಧ್ವಸ್ಯ = ಮಧ್ವರ, ವಿಕ್ರಮಃ = ವಿಶೇಷಕೃತಿಗಳು, ಉಕ್ತಃ= ಹೇಳಲ್ಪಟ್ಟಿವೆ.

**ಅನುವಾದ–** **ಪವಮಾನಸೂಕ್ತದಲ್ಲಿ ಮಧ್ವ ಎಂಬ ಪದವು ಇದ್ದ ಋಕ್ಕುಗಳು ಮಧ್ವರ ಮಹಿಮೆ, ಚರಿತ್ರೆಗಳನ್ನು ಹೇಳುತ್ತವೆ. ಉದಾಹರಣೆಗೆ ಪ್ರಧಾರಾ ಮಧ್ವ ಎಂಬ ಮಂತ್ರ.**

**ಭಾವವಿಲಾಸಿನೀ–** ಪ್ರಧಾರೇತ್ಯನೇನ "ಪ್ರಧಾರಾ ಮಧ್ವೋ ಅಗ್ರಿಯೋ ಮಹೀರಪೋ ವಿಗಾಹತೇ । ಹವಿರ್ಹವಿಷ್ಷುವಂದ್ಯ" ಇತಿ ಗೃಹ್ಣಾತಿ । ಅಯಮರ್ಥಃ । ಅಗ್ರಿಯಃ ಅಗ್ರ್ಯಾಯಃ ಶ್ರೇಷ್ಠಃ ಹವಿಃ ವಿಷ್ಣೋರ್ಹವಿರಿವ ಪ್ರಿಯಃ ಪ್ರಳಯಕಾಲೇ ಹವಿರ್ಭೂತೋ ವಾ । ಹವಿಷ್ಷು ಹವಿರ್ಭೂತೇಷು ದೇವೇಷು ವ್ಯಂದ್ಯಃ ಸ್ತುತ್ಯಃ ಹವಿಃ ಜ್ಞಾನಯಜ್ಞೇ ವಿಷ್ಣೋಃ ಪರಿವಾರತಯಾ ಧ್ಯಾನಾರ್ಥಮಾಹೂಯಮಾನಃ ಹವಿಷ್ಷುವಂದ್ಯಃ ತತ್ರೈವಾಹೂಯಮಾನದೇವೇಷು ಸ್ತುತ್ಯಃ ಹವಿಃ ಯಜ್ಞವೇದ್ಯಾಂ "ವಾಯವಾಯಾಹೀ"ತಿ ಮಂತ್ರೇಣಾ ಹೂಯಮಾನಃ। ಹವಿಷ್ಷುವಂದ್ಯಃ ತತ್ರೈವಾಹೂಯಮಾನ ದೇವೇಷು ಸ್ತುತ್ಯೋ ವಾ । ಮಧ್ವಃ ಮಧ್ವಾಚಾರ್ಯಃ । ಪ್ರಧಾರಾಃ ಪ್ರಕೃಷ್ಟಜ್ಞಾನಧಾರಾಸಹಿತಾಃ ಮಹೀಃ ಮಹತೀಃ । ಅಪಃ ಜ್ಞಾನಸಾಧನೀಭೂತಾ ಋಗಾದಿ ಸಪ್ತವಿದ್ಯಾಃ ವಿಗಾಹತೇ ಸ್ವಬುದ್ಧ್ಯಾ ಅವಗಾಹತೇ । ಸೂತ್ರಭಾಷ್ಯಕರಣಾರ್ಥಂ ವಿಚಾರಯತೀತ್ಯರ್ಥಃ ।

ಅಥವಾ ಬದರೀಕಾಶ್ರಮಗಮನಕಾಲೇ ಅಗ್ರಿಯಃ ಸ್ವಶಿಷ್ಯಾಣಾಮಗ್ರೀಭೂತ್ವಾ ಗಚ್ಛನ್ ಅಗ್ರತೋ ಗಚ್ಛನ್ನಿತ್ಯರ್ಥಃ । ಹವಿಃ ಅಪಾರಗಂಗಾಪಾರಗತತುರುಷ್ಕಭಟೈರ್ಮಾಽಽಯಾಹೀತ್ಯಾಹೂತಃ ಆಹೂತಸ್ವಶಿಷ್ಯೇಷು ಭಯಾತ್ ಸ್ತುತ್ಯಶ್ಚ ಮಧ್ವಃ ಪ್ರಧಾರಾ ಪ್ರಕೃಷ್ಟಧಾರಾರೂಪ ಪ್ರವಾಹ ಸಹಿತಾಃ ಮಹೀಃ ಕೂರ್ಮಪೃಷ್ಠವಾಹಿತ್ವಾನ್ಮಹತೀಃ ಅಪಃ ಬೃಹತರಗಂಗಾಜಲಾನಿ ವಿಗಾಹತೇ ಸ್ವಶಿಷ್ಯಾನ್ ಸ್ಕಂಧಭುಜಾದಿಷು ಬಭ್ರದ್ಬಲಾದ್ವಿಗಾಹತೇ । ಅಥವಾ ಪ್ರಧಾರಾಃ ಪ್ರಕೃಷ್ಟಸೂರ್ಯಧಾರಾದಿ ಸಹಿತಾಃಮಹೀಃ ಮಾರ್ಗಸ್ಥಪಾದಲಕ್ಷಪರ್ವತವಿಷಯಭೂಮೀಃ ಅಪಃ ಪರ್ವತೇ ತತ್ರ ತತ್ರ ಗಮನ ಪ್ರತಿಬಂಧಕೀಭೂತನದೀಪ್ರವಾಹಾಂಶ್ಚ ವಿಗಾಹತೇ । "ವಾರಯತ ವಾರಯತ ವೈರಿ ಸುಹೃದೋಽಮೂನ್ಮಾರಯತ ಮಾರಯತ ಪಾರಗಮಾನಾತ್ ಪ್ರಾಕ್ । ಆಪಾತತ ಆಲಪತ ಇತ್ಯವದದುಚ್ಚೈಃ ಸತ್ವರಕರಾಜಪುರುಷನುಚಿತವಾಚೇ"ತಿ ಮಧ್ವವಿಜಯವಚನಾತ್ ।

ಸಾಗಸ್ತ್ವಾದೀಶದೇವಂ ಪರವಶಖಿನನಂ ಯೋಽವ್ಯಥಾದಪ್ಲವಃ ಸ್ವೈರ್ಗಂಗತಾರೀ ಸ್ವನೀತ್ಯಾ ವಶಿತಯವನರಾಡ್ ವರ್ತ್ಮನಿ ಕ್ವಾಪಿ ಚೋರಾನ್ । ಹಂತುಂ ಯಾತಾನ್ಮಿಥೋಹನ್ ಕ್ವಚಿದಪಿ ನಿಜಶಿಷ್ಯೇಣ ಚಾದ್ರಾವ ಯದ್ವಾ ಗ್ಯೋ- ಗೇನಾಸೀಚ್ಛಲಾಭಃ ಕ್ವಚಿದಪಿ ಸಗಣಸ್ತಂ ಮಹೇಕ್ಷಂ ದಿದೃಕ್ಷೇ ॥ ಇತಿ ಅಣುಮಧ್ವವಿಜಯ ವಚನಾಚ್ಚ ॥ ೫೬೫ ॥

**ವಿವರಣೆ–** ಪ್ರಧಾರಾ ಮಧ್ವೋ ಅಗ್ರಿಯೋ ಮಹೀರಪೋ ವಿಗಾಹತೇ। ಹವಿರ್ಹವಿಷ್ಷು ವಂದ್ಯಃ॥ ಎಂಬ ಶ್ರುತಿಯನ್ನು ತೆಗೆದುಕೊಂಡಿರುವರು. ಅದರ ಅರ್ಥ ಹೀಗಿದೆ-

ಅಗ್ರಿಯಃ = ಶ್ರೇಷ್ಠನಾದ, ಹವಿಃ = ವಿಷ್ಣುವಿಗೆ ಹವಿಸ್ಸಿನಂತೆ ಪ್ರಿಯನಾದ ಅಥವಾ ಪ್ರಳಯಕಾಲದಲ್ಲಿ ವಿಷ್ಣುವಿಗೆ ಹವಿಸ್ಸಾಗುವ, ಹವಿಷ್ಷು = ಹವಿರ್ಭೂತರಾದ ದೇವತೆಗಳಲ್ಲಿ ವಂದ್ಯಃ = ಸ್ತುತ್ಯರಾದ, ಅಥವಾ ಹವಿಃ = ಜ್ಞಾನಯಜ್ಞದಲ್ಲಿ ವಿಷ್ಣುವಿಗೆ ಪರಿವಾರತಯಾ ಆಮಂತ್ರಿಸಲಾಗುವ. ಹವಿಷ್ಷು ವಂದ್ಯಃ = ಆ ಯಜ್ಞಕ್ಕೆ ಆಮಂತ್ರಿಸಲ್ಪಡುವ ದೇವತೆಗಳಲ್ಲಿ

ಸ್ತುತ್ಯರಾದ. ಅಥವಾ ಹವಿಃ = ಯಜ್ಞದ ವೇದಿಯಲ್ಲಿ ಆಹ್ವಾನಿಸಲ್ಪಡುವ (ವಾಯ ವಾಯಾಹಿ ದರ್ಶತ ಇತ್ಯಾದಿ ಮಂತ್ರಗಳಿಂದ) ಹವಿಷ್ಷು ವಂದ್ಯಃ = ಅಲ್ಲಿ ಆಹ್ವಾನಿಸಲ್ಪಡುವ ದೇವತೆಗಳಲ್ಲಿ ಸ್ತುತ್ಯರಾದ ಮಧ್ವಃ ಮಧ್ವಾಚಾರ್ಯರು, ಪ್ರಧಾರಾಃ ಪ್ರಕೃಷ್ಟಜ್ಞಾನಧಾರೆಯಿಂದ ಕೂಡಿದ, ಮಹೀಃ = ಮಹತ್ತರವಾದ, ಅಪಃ = ಜ್ಞಾನಕ್ಕೆ ಸಾಧನೀಭೂತವಾದ ಋಗಾದಿ ಸಪ್ತವಿದ್ಯೆಗಳನ್ನು ವಿಗಾಹತೇ = ತಮ್ಮ ಬುದ್ಧಿಯಲ್ಲಿ ವಿಚಾರಮಾಡುತ್ತಾರೆ. ಸೂತ್ರಭಾಷ್ಯವನ್ನು ರಚಿಸುವದಕ್ಕಾಗಿ ನಿಮರ್ಶೆ ಮಾಡುತ್ತಾರೆ.

ಅಥವಾ ಅಗ್ರಿಯಃ = ಬದರಿಕಾಶ್ರಮಕ್ಕೆ ಹೋಗುತ್ತಿರುವಾಗ ತಮ್ಮ ಶಿಷ್ಯವೃಂದದಲ್ಲಿ ಎಲ್ಲರಿಗೂ ಮುಂದೆ ಹೋಗುವವರಾಗಿ ಮುಂಚೂಣಿಯಲ್ಲಿರುವ, ಹವಿಃ = ಅಪಾರವಾದ ಗಂಗೆಯ ದಡದಲ್ಲಿದ್ದ ತುರುಷ್ಕಸೈನಿಕರಿಂದ ಇಲ್ಲಿ ಬರಬೇಡಿ ಎಂದು ಹೇಳಿಸಿಕೊಂಡವರಾಗಿ, ಆಹೂತರಾದ ಶಿಷ್ಯರುಗಳಲ್ಲಿ ಭಯದಿಂದ, ಮಧ್ವಃ ಮಧ್ವರು, ಪ್ರಧಾರಾಃ ಪ್ರಕೃಷ್ಟಧಾರಾರೂಪವಾದ ಪ್ರವಾಹದ ಸಮೇತವಾದ, ಭೂಮಿಯನ್ನು (ಅವರು ವಾಯುಕೂರ್ಮವಾಗಿ ಭೂಮಿಯನ್ನು ಹೊತ್ತವರು.) ಮಹೀಃ ಊರ್ಮಿಪುಷ್ಟವನ್ನು ಹೊರುವುದರಿಂದ ಮಹತ್ತರವಾದ, ಅಪಃ = ಬಹುತರವಾದ ಗಂಗಾಜಲ (ಪ್ರವಾಹಪೂರ್ಣವಾದ ನದಿ)ವನ್ನು ವಿಗಾಹತೇ = ತಮ್ಮ ಶಿಷ್ಯರನ್ನು ಭುಜಾದಿಗಳಲ್ಲಿ ಹಿಡಿದುಕೊಂಡು ತಮ್ಮ ಶಕ್ತಿಯಿಂದ ದಾಟುತ್ತಾರೆ. ಅಥವಾ ಪ್ರಧಾರಾಃ = ಪ್ರಕೃಷ್ಟಸೂರ್ಯನ ಧಾರೆಯ ಸಹಿತವಾದ (ರವಿಯ ಕಿರಣಗಳು ಬೀಳುತ್ತಿರುವ) ಮಹೀಃ ಮಾರ್ಗದಲ್ಲಿನ ಒಂದೂಕಾಲು ಲಕ್ಷ ಚಿಕ್ಕಪುಟ್ಟ ಪರ್ವತಾದಿಗಳಿಂದ ತಗ್ಗು-ದಿಣ್ಣೆಗಳ ವಿಷಮಭೂಮಿಗಳನ್ನು ಅಪಃ = ಅಲ್ಲಲ್ಲಿ ಪ್ರಯಾಣಕ್ಕೆ ಪ್ರತಿಬಂಧಕಗಳಾದ, ನದಿಗಳನ್ನು ವಿಗಾಹತೇ = ದಾಟುತ್ತಾರೆ.

ಮಧ್ವವಿಜಯದಲ್ಲಿ -

ವಾರಯತ ವಾರಯತ ವೈರಿಸುಹೃದೋಧಿಮೂನ್
ಮಾರಯತ ಮಾರಯತ ಪಾರಗಮನಾತ್ ಪ್ರಾಕ್ ।
ಆಪತತ ಆಲಪತ ಇತ್ಯವದದುಚ್ಚೈಃ
ಸ ತ್ವರಕರಾಜಪುರುಷಾನುಚಿತವಾಚಾ ॥ ಎಂಬ ವಚನವಿರುವುದರಿಂದ ಹಾಗೂ

ಸಾಗಸ್ತ್ವಾದೀಶದೇವಂ ಪರವಶಖನನಂ ಯೋ ವ್ಯಧಾದಪ್ಲವಃ ಸ್ವೈಃ
ಗಂಗಾತಾರೀ ಸ್ವನೀತ್ಯಾ ವಶಿತಯವನರಾಟ್ ವರ್ತ್ಮನಿ ಕ್ವಾಪಿ ಚೋರಾನ್ ।
ಹಂತುಂ ಯಾತಾನ್ನಿಘೋಽಹನ್ ಕ್ವಚಿದಪಿ ನಿಜಶಿಷ್ಯೇಣ ಚಾದ್ರಾವಯದ್ದ್ರಾಗ್
ಯೋಗೇನಾಸೀಚ್ಚಿಲಾಭಃ ಕ್ವಚಿದಪಿ ಸಗಣಸ್ತಂ ಮಹೇಕ್ಷಂ ದಿದೃಕ್ಷೇ ॥

ಎಂದು ಅಣುಮಧ್ವವಿಜಯದಲ್ಲಿರುವದರಿಂದ ಈ ರೀತಿಯ ಅರ್ಥವನ್ನು ಪ್ರಧಾರಾ ಮಧ್ವಃ ಎಂಬ ಋಕ್ಕಿಗೆ ಮಾಡಲಾಗುತ್ತಿದೆ.

ಪವಮಾನಸೂಕ್ತದಲ್ಲಿನ ಕಶ್ಯಪ ಅಸಿತ ಋಷಿಗಳಿಂದ ದೃಷ್ಟವಾದ ಸೋಮಪವಮಾನದೇವತಾಕವಾದ, ಗಾಯತ್ರೀ ಛಂದಸ್ಕವಾದ ಪ್ರಧಾರಾ ಎಂಬ ಮಂತ್ರವನ್ನು ಇಲ್ಲಿ ಮಧ್ವ ಎಂಬ ಪದವಿದ್ದುದರಿಂದ ಮಧ್ವಾಚಾರ್ಯರ ಪರವಾಗಿ ಅರ್ಥಮಾಡಲಾಗಿದೆ.

ಮೊದಲನೆಯ ಅರ್ಥ- ಶ್ರೇಷ್ಠರಾದವರೂ, ವಿಷ್ಣುವಿಗೆ ಹವಿಸ್ಸಿನಂತೆ ಪ್ರಿಯರಾದವರೂ, ಹವಿರ್ಭೂತರಾದ ದೇವತೆಗಳಿಂದ ಸ್ತುತ್ಯರೂ, ಯಜ್ಞವೇದಿಕೆಗೆ ಆಹ್ವಾನಿಸಲ್ಪಡುವ ದೇವತೆಗಳಲ್ಲಿ ಶ್ರೇಷ್ಠರೂ ಆದ ಮಧ್ವರು ಪ್ರಕೃಷ್ಟಜ್ಞಾನ ಧಾರೆಯುಳ್ಳವರಾಗಿ ಋಗಾದಿ ಸಪ್ತವಿದ್ಯೆಗಳನ್ನು ದಾಟುತ್ತಾರೆ. (ಸೂತ್ರಭಾಷ್ಯಾದಿ ಗ್ರಂಥರಚನೆಗಾಗಿ ಸಕಲಸಚ್ಛಾಸ್ತ್ರಗಳನ್ನು ವಿಚಾರ ಮಾಡುತ್ತಾರೆ.)

ಎರಡನೆಯ ಅರ್ಥ -ಬದರಿಯಾತ್ರಾ ಸಮಯದಲ್ಲಿ ಮುಂಚೂಣಿಯಲ್ಲಿದ್ದು ಶಿಷ್ಯವೃಂದವನ್ನು ಪ್ರವಾಹಪೂರ್ಣವಾದ ಗಂಗೆಯನ್ನು ದಾಟಿಸುತ್ತಾರೆ.

ಮೂರನೆಯ ಅರ್ಥ - ತಗ್ಗು - ದಿಣ್ಣೆಗಳಿಂದ ಕೂಡಿದ ವಿಷಮಭೂಪ್ರದೇಶವನ್ನು ಪ್ರತಿಬಂಧಕಗಳಾದ ಈಶ್ವರದೇವ, ತುರುಷ್ಕರಾಜ, ಕಳ್ಳರು ಇತ್ಯಾದಿಗಳನ್ನು ಪರಿಹರಿಸಿ ಮುಂದೆ ಸಾಗುತ್ತಾರೆ.

ಈ ಎಲ್ಲಾ ಅಭಿಪ್ರಾಯದಿಂದ ರಾಜರು ಉಕ್ತೋ ಮಧ್ವಸ್ಯ ವಿಕ್ರಮಃ ಎಂದಿದ್ದಾರೆ.

**ಅಗ್ರ್ಯೋ ಮಧ್ವೋ ಮಧ್ವಮುನಿಃ ಪ್ರಕೃಷ್ಟಜ್ಞಾನಧಾರಯಾ ।**
**ಸಹಿತಾ ಸಪ್ತವಿದ್ಯಾಖ್ಯಾ ಮಹೀಃ ಸಮಹತೀರಪಃ ॥ ೫೭೬ ॥**

**ಅರ್ಥ–** ಅಗ್ರ್ಯಃ = ಶ್ರೇಷ್ಠರಾದ, ಮಧ್ವೋ-ಮಧ್ವಮುನಿಃ= ಮಧ್ವಾಚಾರ್ಯರು, ಪ್ರಕೃಷ್ಟಜ್ಞಾನಧಾರಯಾ = ಶ್ರೇಷ್ಠವಾದ ಜ್ಞಾನಧಾರೆಯಿಂದ (ಸುರಿಮಳೆಯಿಂದ), ಸಹಿತಾಃ= ಕೂಡಿದ, ಸಪ್ತವಿದ್ಯಾಖ್ಯಾಃ= ಏಳುವಿದ್ಯೆಗಳೆಂಬ (ನಾಲ್ಕು ವೇದಗಳು, ರಾಮಾಯಣ, ಮಹಾಭಾರತ, ಪಂಚರಾತ್ರಗಳು) ಮಹೀಃ ಮಹತೀಃ= ಮಹತ್ತರವಾದ, ಅಪಃ= ನೀರುಗಳನ್ನು (ವಿಗಾಹತೇ= ಸುಲಭವಾಗಿ ದಾಟುತ್ತಾರೆ.)

**ಅನುವಾದ–** ಸಪ್ತವಿದ್ಯೆಗಳೆಂಬ ತತ್ವಜ್ಞಾನದ ನದಿಯನ್ನು ಶ್ರೇಷ್ಠರಾದ ಮಧ್ವಾಚಾರ್ಯರು, ತಮ್ಮ ನಿಶಿತವಾದ ಜ್ಞಾನಸಂಪತ್ತಿನಿಂದ ಸುಲಭವಾಗಿ ದಾಟುತ್ತಾರೆ. ಈ ಭೂಮಂಡಲವು ನಾನಾ ರೀತಿಯಾಗಿ ತಗ್ಗು ದಿಣ್ಣೆಗಳಿಂದ ಕೂಡಿ ಸುಲಭವಾಗಿ ದಾಟಲು (ಪ್ರಯಾಣಿಸಲು) ಹೇಗೆ ಕಠಿಣವಿದೆಯೋ, ಅದರಂತೆ ಬಹ್ವರ್ಥಗರ್ಭಿತವಾದ ವೇದಶಾಸ್ತ್ರಾದಿಗಳು ದುರ್ಜ್ಞೇಯಗಳು. ಆದರೆ ಆಚಾರ್ಯಮಧ್ವರು ತಮ್ಮ ಉತ್ಕೃಷ್ಟಜ್ಞಾನದಿಂದ ಅವುಗಳನ್ನು ಸುಲಭವಾಗಿ ದಾಟುತ್ತಾರೆ. ಅವುಗಳ ನಿಜವಾದ ಅರ್ಥವನ್ನು ತಿಳಿಯುತ್ತಾರೆ.

**ವಿವರಣೆ–** ಇದೇ ಅರ್ಥವನ್ನು (ವಾಯುಸ್ತುತಿ, ಅಣುಮಧ್ವವಿಜಯ, ಮಧ್ವವಿಜಯ ಇತ್ಯಾದಿಗಳಿಂದ ಮಧ್ವರ ಚರಿತ್ರೆಯನ್ನು) ಮನಸ್ಸಿನಲ್ಲಿಟ್ಟುಕೊಂಡು, ಅಗ್ರ್ಯೋ ಮಧ್ವಃ, ಹವಿರ್ವಂದ್ಯಃ ಇತ್ಯಾದಿ ಶ್ಲೋಕಗಳಿಂದ ಹೇಳುತ್ತಾರೆ.

ಪ್ರಧಾರಾ ಎಂಬ ಮಂತ್ರದಲ್ಲಿನ ಪದಗಳ ಅರ್ಥಗಳನ್ನು ಇಲ್ಲಿ ರಾಜರು ವಿವರಿಸುತ್ತಾರೆ. ಮಧ್ವಮುನಿಗಳು ತಮ್ಮ ಬುದ್ಧಿಶಕ್ತಿಯಿಂದ ವೇದಾದಿಸಕಲಸಚ್ಛಾಸ್ತ್ರಗಳ ಅರ್ಥವನ್ನು ತಿಳಿಯುತ್ತಾರೆ. ಪವಮಾನಸೂಕ್ತದಲ್ಲಿ ಮಧ್ವ ಎಂಬ ಪದಗಳು ಎಲ್ಲೆಲ್ಲಿ ಕಂಠತಃ ಉಕ್ತವಾಗಿವೆಯೋ ಅವುಗಳನ್ನು ಮಧ್ವರ ಪರವಾಗಿ ವ್ಯಾಖ್ಯಾನಿಸಲಾಗಿದೆ.

**ಹವಿರ್ವಂದ್ಯಃ ಸ್ವಯಂ ವಿಷ್ಣೋರ್ಹವಿಃ ಪ್ರಿಯತಮತ್ವತಃ ।**
**ಧ್ಯಾತೃಭಿಃ ಜ್ಞಾನಯಜ್ಞೇಷು ಹೂಯಮಾನತ್ವತೋಽಪಿ ವಾ ॥ ೫೬೭ ॥**

**ಅರ್ಥ–** ಹವಿಃ = ಮಧ್ವರು, ವಂದ್ಯಃ = ಸ್ತುತ್ಯರು, ಸ್ವಯಂ = ತಾವು, ವಿಷ್ಣೋಃ = ವಿಷ್ಣುವಿಗೆ, ಪ್ರಿಯತಮತ್ವತಃ = ಅತ್ಯಂತ ಪ್ರಿಯರಾದ್ದರಿಂದ, ಹವಿಃ = ಹವಿಃ ಎಂದೆನಿಸಿದ್ದಾರೆ. ಜ್ಞಾನಯಜ್ಞೇಷು = ಜ್ಞಾನಯಜ್ಞಗಳಲ್ಲಿ. ಧ್ಯಾತೃಭಿಃ = ಆ ಯಜ್ಞದಲ್ಲಿ ಪಾಲುಗೊಂಡಉಪಾಸಕರಿಂದ, ಹೂಯಮಾನತ್ವತಃ ಅಪಿ = ಕರೆಯಲ್ಪಡುವುದರಿಂದಲೂ, ಹವಿಃ = ಹವಿಃ ಎಂದೆನಿಸಿಕೊಂಡಿದ್ದಾರೆ.

**ಅನುವಾದ–** ಹವಿಃ ಎಂಬ ಪದದ ಅರ್ಥವನ್ನು ಇಲ್ಲಿ ಹೇಳುತ್ತಾರೆ. ಹವಿಃ ಎಂದರೆ ಮಧ್ವರು. ಹವಿಃ ಎಂದರೆ ವಿಷ್ಣುವಿಗೆ ಹವಿಸ್ಸಿನಂತೆ ಪ್ರೀತ್ಯಾಸ್ಪದವರಾದ್ದರಿಂದ ಹವಿಸ್‌ಶಬ್ದವಾಚ್ಯರು. ಜ್ಞಾನಯಜ್ಞದಲ್ಲಿ ಉಪಾಸಕರಿಂದ ಆಮಂತ್ರಿಸಲ್ಪಡುವವರಾದ್ದರಿಂದ ಅವರು ಹವಿಃ ಎಂದೆನಿಸಿಕೊಳ್ಳುತ್ತಾರೆ.

**ಭಾವವಿಲಾಸಿನೀ–** ಇಮಮೇವಾರ್ಥಂ ಮನಸಿ ನಿಧಾಯಾಹ – **ಅಗ್ರ್ಯ ಇತ್ಯಾ-ದಿನಾ** ॥ ॥ ೫೬೬–೫೬೭ ॥

**ವಿವರಣೆ–** ಇಲ್ಲಿ ಹವಿಃ ಎಂಬ ಶಬ್ದಕ್ಕೆ ಮೂರು ಅರ್ಥಗಳನ್ನು ವಿವರಿಸಿದ್ದಾರೆ. ಸಾಕ್ಷಾತ್ ವಾಯ್ವವತಾರಿಗಳಾದ ಮಧ್ವರು ಪರಮಾತ್ಮನಿಗೆ ಸಚಿವಸ್ಥಾನೀಯರು. ಅನಾದಿಕಾಲದಿಂದ ಸತ್ಸಂಪ್ರದಾಯದ ಮೂಲಕ ಹರಿದು ಬಂದ ಶ್ರೀಮದ್ವೈಷ್ಣವಸಿದ್ಧಾಂತದ ಪ್ರತಿಷ್ಠಾಪಕ-ರಾದ್ದರಿಂದ ಭಗವಂತನ ಪರಮಾನುಗ್ರಹಕ್ಕೆ ಪಾತ್ರರಾದವರು. ಜ್ಞಾನಯಜ್ಞದಲ್ಲಿ ವೇದಾಧ್ಯನಾದಿಗಳಲ್ಲಿ ನಮಸ್ತೇ ವಾಯೋ ಇತ್ಯಾದಿಯಾಗಿ ಆಹ್ವಾನಿಸಲ್ಪಡುವವರು. ಆದ್ದರಿಂದ ಅವರು ಹವಿಃಶಬ್ದವಾಚ್ಯರಾಗಿರುವರು.

**ಹವಿರ್ಜ್ಞಾನಘೃತಸ್ರಾವೀ ತೇಷು ತತ್ ಪ್ರತಿಮಾತ್ವತಃ ।**
**ಸ್ತುತ್ಯೋ ವಾ ತಾಃ ಸ್ಫುಟೀಕರ್ತುಂ ಸ್ವಬುದ್ಧ್ಯೇತ್ಥಂ ವಿಗಾಹತೇ ॥ ೫೬೮ ॥**

**ಅರ್ಥ–** ತೇಷು = ಆ ಜ್ಞಾನಯಜ್ಞದಲ್ಲಿ ಆಮಂತ್ರಿಸಲ್ಪಡುವ ದೇವತೆಗಳಲ್ಲಿ ತತ್ಪ್ರತಿಮಾತ್ವತಃ = ಆ ವಿಷ್ಣುವಿನ ಪ್ರತಿಮಸ್ಥಾನೀಯರಾದ್ದರಿಂದ, ಜ್ಞಾನಘೃತಸ್ರಾವೀ =ಜ್ಞಾನವೆಂಬ ಘೃತವನ್ನು ಸುರಿಸುವವರಾದ್ದರಿಂದ ಅವರು(ಮಧ್ವರು) ಹವಿಃ = ಹವಿಃಶಬ್ದವಾಚ್ಯರು. ವಾ = ಅಥವಾ, ಸ್ತುತ್ಯಃ = ಸುತ್ಯರಾದ್ದರಿಂದ ಹವಿಃ ಶಬ್ದವಾಚ್ಯರಾದ ಮಧ್ವರು, ತಾಃ = ಆ ವೇದಾದ್ಯರ್ಥವನ್ನು, ಸ್ಫುಟೀಕರ್ತುಂ = ಸ್ಪಷ್ಟಮಾಡುವುದಕ್ಕಾಗಿ, ಸ್ವಬುದ್ಧ್ಯಾ= ತಮ್ಮಬುದ್ಧಿಯಿಂದ, ಇತ್ಥಂ = ಈ ಪ್ರಕಾರವಾಗಿ, ವಿಗಾಹತೇ =ವಿಚಾರಮಾಡುತ್ತಾರೆ.

**ಅನುವಾದ–** ಇಲ್ಲಿಯೂ ಹವಿಃಶಬ್ದಾರ್ಥವಿವರಣೆಯು ಮುಂದುವರಿಯುತ್ತಿದೆ. ಯಾವ ರೀತಿ ಯಜ್ಞವೇದಿಯಲ್ಲಿ ಸ್ವಾಹಾಕಾರಪೂರ್ವಕ ಆಜ್ಯಾಹುತಿಯು ಅಗ್ನಿಯನ್ನು ಪುಷ್ಟೀಕರಿಸುತ್ತದೆಯೋ ಅದರಂತೆ ಜ್ಞಾನಯಜ್ಞದಲ್ಲಿ ಆಹ್ವಾನಿಸಲ್ಪಟ್ಟ ವಾಯುದೇವರು ಜ್ಞಾನವೆಂಬ ಘೃತವನ್ನು ಸುರಿಸಿ ಸಪ್ತವಿದ್ಯೆಗಳ ಅರ್ಥವನ್ನು ಸ್ಪಷ್ಟೀಕರಿಸುತ್ತಾರೆ. ಇದಕ್ಕಾಗಿ ಅವರು ತಮ್ಮ ಮನಸ್ಸಿನಲ್ಲಿ ಆ ವಿದ್ಯೆಗಳ ತಾತ್ಪರ್ಯಗಳ ಪರ್ಯಾಲೋಚನೆಯನ್ನು ಮಾಡುತ್ತಿರುತ್ತಾರೆ. ಆದ್ದರಿಂದ ಮಧ್ವರು ವಂದ್ಯರು.

**ವಿವರಣೆ–** ತೇಷು ಎಂದರೆ ಧ್ಯಾನಕ್ಕಾಗಿ ಆಹ್ವಾನಿಸಲ್ಪಡುವ ದೇವತೆಗಳಲ್ಲಿ ತತ್ಪ್ರತಿಮಾತ್ವತಃ ಎಂದರೆ ಧ್ಯೇಯನಾದ ವಿಷ್ಣುವಿನ ಪ್ರತಿಮಾಸ್ಥಾನೀಯರಾದ್ದರಿಂದ. ಮಧ್ವಾಚಾರ್ಯಾಣಾಂ ಹೃತ್ಕಮಲಮಧ್ಯನಿವಾಸಿ ಎಂದೇ ಸಜ್ಜನರು ವಿಷ್ಣುವಿನ ಧ್ಯಾನವನ್ನು ಮಾಡುವುದರಿಂದ ಎಂದು ಅಭಿಪ್ರಾಯ. ತಾಃ ಸ್ಫುಟೀಕರ್ತುಂ ಎಂಬಲ್ಲಿ ತಾಃ ಎಂದರೆ ಸಪ್ತವಿದ್ಯೆಗಳು ಎಂದರ್ಥ.

ಪ್ರಧಾರಾ ಮಧ್ವೋ ಎಂಬ ಋಕ್ಕಿನಲ್ಲಿನ ಪದಗಳ ವಿವರಣೆ ಈ ಶ್ಲೋಕದಲ್ಲೂ ಮುಂದುವರಿದಿದೆ. ವಾಯ್ವವತಾರಿಗಳಾದ ಮಧ್ವರು ಭಗವಂತನ ಪ್ರತಿಮಾಸ್ಥಾನೀಯರು. ಆದ್ದರಿಂದ ಅವರು ಇತರದೇವತೆಗಳಿಂದ ವಂದ್ಯರು. ಜ್ಞಾನಯಜ್ಞದಲ್ಲಿ ಆಜ್ಯದಂತೆ ಜ್ಞಾನದಮಳೆಯನ್ನು ಸಜ್ಜನರಲ್ಲಿ ಸುರಿಸಲು ಅವರು ತಮ್ಮ ಬುದ್ಧಿಯಿಂದ ಋಗಾದಿಸಪ್ತವಿದ್ಯೆಗಳಲ್ಲಿ ಈಜಾಡುವರು. (ಅವುಗಳ ಯಥಾರ್ಥವಿಷಯಗಳನ್ನು ತಿಳಿದು ಸಜ್ಜನರಿಗೆ ಉಪದೇಶಿಸುವರು.)

ಋಙ್ಮಂತ್ರದಲ್ಲಿ ಪ್ರಧಾರಾ ಎಂಬ ಶಬ್ದಾರ್ಥವನ್ನು ವಿವರಿಸುತ್ತಾರೆ –

ಪ್ರಕೃಷ್ಟಸೂರ್ಯಧಾರಾದಿಧಾರಾ ವಿಷಮಭೂಮಯಃ ।
ಯಾಸು ತಾಃ ಪರ್ವತಮಹೀಃ ಸರ್ವಾ ಪಥಿ ಪಥಿ ಪ್ರಭುಃ ।
ಪ್ರಕೃಷ್ಟೋಗ್ರಪ್ರವಾಹಾಖ್ಯಧಾರಾಶ್ಚ ಸರಿತಾಮಪಃ ॥ ೫೬ ॥

**ಅರ್ಥ–** ಪ್ರಕೃಷ್ಟಸೂರ್ಯಧಾರಾದಿಧಾರಾಃ= ಉತ್ಕೃಷ್ಟವಾದ ಸೂರ್ಯಕಿರಣಗಳ ಧಾರೆಯನ್ನು ನೀರಿನ ಪ್ರವಾಹದ ಧಾರೆಯನ್ನು ಧರಿಸುವ, ವಿಷಮಭೂಮಯಃ= ತಗ್ಗು ದಿಣ್ಣೆ ಮಾಡು ಪ್ರದೇಶಗಳು ಯಾಸು ತಾಃ= ಯಾವ ಪ್ರದೇಶಗಳಲ್ಲಿ ಇವೆಯೋ ಅಂಥಾ ಸರ್ವಾಃ= ಎಲ್ಲಾ, ಪರ್ವತಮಹೀಃ= ಪರ್ವತಪ್ರದೇಶಗಳನ್ನು, ಪಥಿ ಪಥಿ= ದಾರಿಯುದ್ದಕ್ಕೂ, ಪ್ರಭುಃ= ಸಮರ್ಥರಾದ ಮಧ್ವರು, ಪ್ರಕೃಷ್ಟೋಗ್ರಪ್ರವಾಹಾಖ್ಯಧಾರಾಶ್ಚ= ಉಕ್ಕಿದ ಉಗ್ರಪ್ರವಾಹಗಳೆಂಬ ಧಾರೆಗಳುಳ್ಳ, ಸರಿತಾಮಪಃ= ನದಿಗಳ ನೀರುಗಳನ್ನು (ವಿಗಾಹತೇ= ದಾಟುತ್ತಾರೆ).

**ಅನುವಾದ– ಹಿಮವತ್ಪ್ರದೇಶದ ಸಂಚಾರದಲ್ಲಿ ಸಮರ್ಥರಾದ ಮಧ್ವರು ಪರ್ವತಪ್ರದೇಶಗಳ ಗಿರಿಕಂದರಗಳನ್ನು, ಉಕ್ಕೇರುವ ನದೀ ಪ್ರವಾಹಗಳನ್ನು, ಸೂರ್ಯಕಿರಣಗಳ ಸಂತಾಪವನ್ನೂ, ಹೆಜ್ಜೆ ಹೆಜ್ಜೆಗೆ ಬರುವ ವಿಘ್ನಗಳನ್ನು ಲೀಲೆಯಿಂದ ಎದುರಿಸುತ್ತಿದ್ದರು.**

**ಭಾವವಿಲಾಸಿನೀ– ತೇಷು ಧ್ಯಾನಾಯಾಹೂಯಮಾನ ದೇವೇಷು । ತತ್ ಪ್ರತಿಮಾತ್ವತಃ ದೇವಾನಾಂ ಮಧ್ಯೇ ಧ್ಯೇಯಸ್ಯ ವಿಷ್ಣೋಃ ಪ್ರತಿಮಾತ್ವತಃ ಮಧ್ವಾಚಾರ್ಯಹೃತ್ಕಮಲ ಏವ ಸಿದ್ಧಿರ್ವಿಷ್ಣೋರ್ಧ್ಯಾನಾದಿತಿ ಭಾವಃ । ತಾಃ ಸಪ್ತವಿದ್ಯಾಃ ॥ ೫೬೮-೫೭೯ ॥**

**ವಿವರಣೆ–** ಪ್ರಧಾರಾ ಋಕ್ಕಿನಲ್ಲಿರುವ ಪ್ರಧಾರಾ ಎಂಬ ಪದವು ಮಧ್ವಮುನಿಗಳ ಬದರಿಕಾಶ್ರಮಯಾತ್ರೆಯ ವಿಚಾರವನ್ನು ಸೂಚಿಸುತ್ತದೆ. ಅಲ್ಲಿನ ಸಂಚಾರವು ದುರ್ಗಮವಾದ ಬೆಟ್ಟ-ಕಣಿವೆಗಳಿಂದಲೂ, ರಭಸದಿಂದ ಹರಿಯುತ್ತಿರುವ ನದಿಗಳಂದಿಲೂ, ಬಿಸಿಲಿನ ತಾಪದಿಂದಲೂ ಕೂಡಿದ್ದಾಗಿ ಮಾಡಿದರು.

**ಅಗ್ರ್ಯೋ ಮಧ್ವೋ ಮಧ್ವಮುನಿರ್ಗಚ್ಛನ್ ಬದರಿಕಾಶ್ರಮಂ ।**
**ಅಗ್ರೀಭೂತ್ವಾ ವ್ರಜನ್ ವಾಽಸೌ ಅಗ್ರಿಯೋಽಗ್ರೇಸರಸ್ಸ(ಸ್ತ)ದಾ ॥ ೫೭೦ ॥**

**ಅರ್ಥ–** ಅಗ್ರ್ಯೋ ಮಧ್ವಃ = ಶ್ರೇಷ್ಠರಾದ ಮಧ್ವ ಎಂಬ ಹೆಸರುಳ್ಳ, ಮಧ್ವಮುನಿಃ = ಮಧ್ವಾಚಾರ್ಯರು, ಬದರಿಕಾಶ್ರಮಂ ಗಚ್ಛನ್ = ಬದರೀಯಾತ್ರೆಗೆ ಹೊರಟವರಾಗಿ, ಅಗ್ರೀಭೂತ್ವಾ ವ್ರಜನ್ = ಎಲ್ಲರಿಗಿಂತ ಮುಂದಾಗಿ ಹೋಗುವವರು, ವಾ = ಅಥವಾ, ಅಸೌ= ಇವರು, ಅಗ್ರಿಯಃ – ಸದಾ ಅಗ್ರೇಸರಃ = ಯಾವಾಗಲೂ ಶ್ರೇಷ್ಠ ನಾಯಕರು. (ತದಾ ಎಂಬ ಪಾಠದಲ್ಲಿ ಆ ಯಾತ್ರಾ ಸಂದರ್ಭದಲ್ಲಿ ಅವರು ಮುಂಚೂಣಿಯಲ್ಲಿದ್ದ ಶ್ರೇಷ್ಠರು ಎಂದರ್ಥ.)

**ಅನುವಾದ– ಆಚಾರ್ಯಮಧ್ವರು ಬದರಿಕಾಶ್ರಮಕ್ಕೆ ಹೊರಟಾಗ ತಮ್ಮ ಸಂಗಡ ಬಂದ ಸಹಯಾತ್ರಿಕರಲ್ಲಿ ಮೊದಲಿಗರಾಗಿದ್ದರು. ಎಲ್ಲರಿಗಿಂತ ಮುಂದೆ ಪ್ರಯಾಣಿಸುತ್ತಾ**

ಇತರರಿಗೆ ಮಾರ್ಗದರ್ಶಕರಾಗುತ್ತಿದ್ದರು. ಹೀಗೆ ಅವರ ಶ್ರೇಷ್ಠನಾಯಕತ್ವದಲ್ಲಿ ಬದರೀಯಾತ್ರೆಯು ಜರುಗಿತು.

**ವಿವರಣೆ–** ಮಂತ್ರದಲ್ಲಿನ ಅಗ್ರಿಯ ಪದವು ಆಚಾರ್ಯರ ಬದರಿಕಾಶ್ರಮದ ಯಾತ್ರೆಯ ಮೇಲೆ ಬೆಳಕು ಚೆಲ್ಲುತ್ತದೆ. ಪ್ರಯಾಣದುದ್ದಕ್ಕೂ ಅವರು ಎಲ್ಲರಿಗಿಂತ ಮುಂಚೂಣಿಯಲ್ಲಿದ್ದು ಮಾರ್ಗದರ್ಶಕರಾಗಿರುತ್ತಿದ್ದರು.

**ನೇತ್ಯಾಹೂತೋ ಮ್ಲೇಚ್ಛಭಟೈಃ ತೈರಾಹೂತಸ್ವಸೇವಿಷು ।**
**ವಂದ್ಯಃ ಸ್ತುತ್ಯಚರಿತ್ರಶ್ಚ ಲೀಲಯೈವ ವಿಗಾಹತೇ ॥ ೫೭೧ ॥**

**ಅರ್ಥ–** ಮ್ಲೇಚ್ಛಭಟೈಃ= ಮ್ಲೇಚ್ಛಭಟರಿಂದ, ನೇತಿ ಆಹೂತಃ= ಬೇಡವೆಂದು ತಡೆಯಲ್ಪಟ್ಟು, ಆಹೂತಸ್ವಸೇವಿಷು= ತಮ್ಮಿಂದ ಆಹೂತರಾದ ತಮ್ಮ ಶಿಷ್ಯರಲ್ಲಿ (ಶಿಷ್ಯರಿಂದ) ಸ್ತುತ್ಯಚರಿತ್ರಃ= ಸ್ತೋತ್ರಮಾಡಲ್ಪಟ್ಟ ಚರಿತ್ರೆಯುಳ್ಳವರಾಗಿ ಮಧ್ವರು, ಲೀಲಯೈವ= ಅನಾಯಾಸವಾಗಿ, ವಿಗಾಹತೇ= ಗಂಗಾಪ್ರವಾಹವನ್ನು ದಾಟುತ್ತಾರೆ.

**ಅನುವಾದ–** ಆಚಾರ್ಯರು ಗಂಗಾನದಿಯನ್ನು ದಾಟಿ ಉತ್ತರಕ್ಕೆ ಬದರಿಯ ಕಡೆಗೆ ಹೋಗುವಾಗ ಗಂಗಾ ನದೀತೀರದ ಮುಸ್ಲಿಂ ರಾಜನು ಅಲ್ಲಿರುವ ದೋಣಿಗಳನ್ನು ತೆಗೆದುಹಾಕಿದ್ದಲ್ಲದೇ ನದಿಯನ್ನು ದಾಟಕೂಡದೆಂದೂ ಆಜ್ಞೆಮಾಡಿದ್ದನು. ಅಲ್ಲಿನ ತುರುಷ್ಕಸೈನಿಕರು ಇವರನ್ನು ನಿರ್ಬಂಧಿಸಿದರು. ಮಧ್ವರು ತಮ್ಮ ಶಿಷ್ಯರುಗಳ ಕೈಯನ್ನು ಹಿಡಿದುಕೊಂಡು ತಾವು ಮುಂದಾಳಾಗಿ ನದಿಯನ್ನು ಸುಲಭವಾಗಿ ದಾಟಿದರು. ಒಬ್ಬರನ್ನೊಬ್ಬರು ಪರಸ್ಪರಕೈಹಿಡಿದು ಶಿಷ್ಯರೆಲ್ಲ ದಾಟಿ ಬಂದರು. ಕೌತುಕಪಟ್ಟ ರಾಜನೊಂದಿಗೆ ತುರುಷ್ಕ ಭಾಷೆಯಲ್ಲೇ ವ್ಯವಹರಿಸಿ ಅವನ ಗೌರವಕ್ಕೆ ಪಾತ್ರರಾಗಿ ಮುಂದೆ ಪ್ರಯಾಣ ಬೆಳೆಸಿದರು. ಹೀಗೆ ಅವರು ಸ್ತೋತ್ರಾರ್ಹ-ಚರಿತ್ರೆಯುಳ್ಳವರಾದರು.

**ವಿವರಣೆ–** ಮಧ್ವವಿಜಯದಲ್ಲಿ ಈ ಪ್ರಸಂಗವು ಬರುತ್ತದೆ. ಮಂತ್ರದಲ್ಲಿನ ಅಪೋ ವಿಗಾಹತೇ ಎಂಬ ಪದವು ಇದನ್ನು ಸೂಚಿಸುತ್ತದೆ.

**ಇದಂ ಚ ನಾದ್ಭುತಂ ತಸ್ಯ ಯೋ ಹವಿರ್ವಾಯುರೂಪತಃ ।**
**ಆಹೂಯತೇ ಯಜ್ಞವೇದ್ಯಾಂ ತತ್ರಾಹೂತ ಸುರೇಷು ಚ ॥ ೫೭೨ ॥**

**ಅರ್ಥ–** ತಸ್ಯ= ಮಧ್ವರಿಗೆ,ಇದಂ ಚ= ಇದಾದರೋ, ನ ಅದ್ಭುತಂ= ಆಶ್ಚರ್ಯಕರವೇನಲ್ಲ, ಯಃ= ಯಾರು, ವಾಯುರೂಪತಃ= ವಾಯುರೂಪದಿಂದ

(ಪವಮಾನರೂಪದಿಂದ), ಯಜ್ಞವೇದ್ಯಾಂ= ಯಜ್ಞವೇದಿಕೆಯಲ್ಲಿ, ಆಹೂಯತೇ= ಆಮಂತ್ರಿಸಲ್ಪಡುವವರು, ತತ್ರ ಆಹೂತ ಸುರೇಷು ಚ = ಆ ಯಜ್ಞಕ್ಕೆ ಆಹ್ವಾನಿಸಲಾಗುವ ದೇವತೆಗಳಲ್ಲೂ, ವಂದ್ಯಃ= ಸ್ತುತ್ಯರು.

**ಅನುವಾದ–** **ಹಿಂದಿನ ಶ್ಲೋಕದಲ್ಲಿ ಸೂಚಿತವಾದ ಮಧ್ವರ ಚರಿತ್ರೆಯು (ಗಂಗಾತರಣ, ಮ್ಲೇಚ್ಛರಾಜನ ಶರಣಾಗತಿ ಇತ್ಯಾದಿ) ಅಷ್ಟೇನೂ ಆಶ್ಚರ್ಯಕರವಲ್ಲ. ಕಾರಣ ಮಧ್ವರು ವಾಯುರೂಪಿಯಾಗಿ ಯಜ್ಞವೇದಿಕೆಗೆ ಆಹ್ವಾನಿಸಲ್ಪಡುವವರು. ಅಲ್ಲಿರುವ ದೇವತೆಗಳಿಂದ ವಂದ್ಯರಾದವರು.**

**ಭಾವವಿಲಾಸಿನೀ–** **ಆಹೂತಸ್ಸವೇವಿಷು ಆಹೂತೇಷು ಸ್ವಶಿಷ್ಯೇಷು ॥ ೫೭೦-೫೭೨ ॥**

**ವಿವರಣೆ–** ಜೀವೋತ್ತಮರಾದ ವಾಯುದೇವರ ತೃತೀಯಾವತಾರವೇ ಮಧ್ವರೂಪ. ವಾಯುದೇವರು ಸಕಲ ದೇವತೆಗಳಿಂದ ವಂದ್ಯರು. ಯಜ್ಞವೇದಿಗೆ ವಾಯ ವಾಯಾಹಿ ದರ್ಶತ ಎಂದು ಮೊಟ್ಟ ಮೊದಲು ಆಮಂತ್ರಿಸಲ್ಪಡುವವರು. ಯಜ್ಞಕ್ಕೆ ಬಂದ, ತಾರತಮ್ಯದಲ್ಲಿ ಅದಮ ದೇವತೆಗಳಿಂದ ವಂದ್ಯರು. ಮಂತ್ರದಲ್ಲಿನ ಹವಿಃ ಶಬ್ದವಾಚ್ಯರು - ಭಗವಂತನಿಗೆ ಅತ್ಯಂತ ಪ್ರೀತಿಪಾತ್ರರು. ಅಂತಹ ಮಧ್ವರು ಶಿಷ್ಯರ ಸಂಸಾರಸಾಗರವನ್ನೇ ದಾಟಿಸಲು ಸಮರ್ಥರು. ಕೇವಲ ಗಂಗೆಯನ್ನು ದಾಟಿಸುವುದು ಅದೇನು ಆಶ್ಚರ್ಯ?

**ಹವಿಷ್ಷು ವಂದ್ಯಸ್ತಸ್ಯೇದೃಕ್ ಮಾಹಾತ್ಮ್ಯಂ ಯುಕ್ತಮೇವ ಹಿ ।**
**ಇ ತಿ ವಾ ಸಾ ಶ್ರುತಿಃ ಸತ್ಸು ಪ್ರಸಿದ್ಧಾಂ ತತ್ಕಥಾಂ ಜಗೌ ॥ ೫೭೩ ॥**

**ಅರ್ಥ–** ಈ ಮಧ್ವಾಚಾರ್ಯರು ಹವಿಷ್ಷು= ಆಹೂತರಾದ ದೇವತೆಗಳಲ್ಲಿ, ವಂದ್ಯಃ= ವಂದ್ಯರಾದವರು. ತಸ್ಯ= ಮಧ್ವರ, ಈದೃಕ್= ಈ ತರಹದ, ಮಾಹಾತ್ಮ್ಯಂ= ಮಾಹಾತ್ಮ್ಯೆಯು, ಯುಕ್ತಮೇವ ಹಿ= ಯೋಗ್ಯವೇ ಆಗಿದೆ ಎಂಬುದು ಪ್ರಸಿದ್ಧವೇ ಇದೆ. ಇತಿ ವಾ= ಹೀಗೆಂದೇ, ಸಾ ಶ್ರುತಿಃ= ಪ್ರಧಾರಾ ಎಂಬ ಶ್ರುತಿಯು, ಸತ್ಸು= ಸಜ್ಜನರಲ್ಲಿ, ಪ್ರಸಿದ್ಧಾಂ= ಪ್ರಸಿದ್ಧವಾದ (ಮಧ್ವವಿಜಯದಲ್ಲಿ) ತತ್ಕಥಾಂ = ಮಧ್ವರ ಕಥೆಯನ್ನು, ಜಗೌ= ಗಾನಮಾಡಿದೆ (ಕೀರ್ತಿಸಿದೆ).

**ಅನುವಾದ–** **ವಂದ್ಯರಲ್ಲಿ ವಂದ್ಯರಾದ ಮಧ್ವರ ಈ ರೀತಿಯ ಮಾಹಾತ್ಮ್ಯೆಯು ಯೋಗ್ಯವೇ ಆಗಿದೆ. ಆದ್ದರಿಂದಲೇ ಪ್ರಧಾರಾ ಶ್ರುತಿಯು ಮಧ್ವವಿಜಯಾದಿಗಳಿಂದ ಸಜ್ಜನರಲ್ಲಿ ಪ್ರಸಿದ್ಧವಾದ ಅವರ ಕಥೆಯನ್ನೇ ಹಾಡಿದೆ.**

**ಭಾವವಿಲಾಸಿನೀ–** **ತಸ್ಯ ಮಧ್ವಸ್ಯ । ಪ್ರಸಿದ್ಧಂ ಮಧ್ವವಿಜಯಾದಿವಾಕ್ಯೇಷು ಪ್ರಸಿದ್ಧಾಮ್ ॥ ೫೭೩ ॥**

**ವಿವರಣೆ–** ಈ ಹಿಂದೆ ನೋಡಿದಂತೆ ಪ್ರಧಾರಾ ಶ್ರುತಿಯನ್ನೂ ಮಧ್ವಪರವಾಗಿ ವ್ಯಾಖ್ಯಾನಿಸಬಹುದೆಂದು ರಾಜರು ತಿಳಿಸಿದ್ದಾರೆ. ಅದರಲ್ಲಿನ ಒಂದೊಂದು ಪದಗಳೂ

ಸಹಿತ ಮಧ್ವಾಚಾರ್ಯರ ಜೀವನಚರಿತ್ರೆಯಲ್ಲಿನ ಒಂದೊಂದು ಘಟನೆಗಳನ್ನು ಸೂಚಿಸುತ್ತವೆ ಎಂಬುದನ್ನು ವಿವರಿಸಿದ್ದಾರೆ. ಆದ್ದರಿಂದ ನಮ್ಮ ಆದಿಗುರುಗಳಾದ ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರು ವೇದಪ್ರತಿಪಾದ್ಯರು ಎಂಬುದರಲ್ಲಿ ಸಂಶಯವಿಲ್ಲ.

**ಅಸ್ಮಭ್ಯಮಿಂದವಿತ್ಯತ್ರಾಪಿ ಅಸ್ಮದ್ಗುರುರಭಿಷ್ಟುತಃ ॥ ೫೭೪ ॥**

**ಅರ್ಥ–** ಅಸ್ಮಭ್ಯಮಿಂದವಿತ್ಯತ್ರಾಪಿ = ಅಸ್ಮಭ್ಯಮಿಂದ ವಿಂದ್ರಯುಃ ಎಂಬಲ್ಲಿಯೂ, ಅಸ್ಮದ್ಗುರುಃ = ನಮ್ಮ ಗುರುಗಳಾದ ಮಧ್ವಾಚಾರ್ಯರು, ಅಭಿಷ್ಟುತಃ = ಸ್ತುತಿಸಲ್ಪಟ್ಟಿರುವರು.

**ಅನುವಾದ–** ಪವಮಾನಸೂಕ್ತದಲ್ಲಿನ, ಕಣ್ವ ಪುತ್ರ ಮೇಧಾತಿಥಿಋಷಿಗಳಿಂದ ದೃಷ್ಟವಾದ, ಸೋಮಪವಮಾನದೇವತಾಕವಾದ, ಗಾಯತ್ರೀ ಛಂದಸ್ಸಿನ ಅಸ್ಮಭ್ಯ-ಮಿಂದವಿಂದ್ರಯುಃ ಎಂಬ ಋಕ್ಕೂ ಸಹ ಆಚಾರ್ಯಮಧ್ವರನ್ನೇ ಸ್ತುತಿಸುತ್ತದೆ.

**ಭಾವವಿಲಾಸಿನೀ–** ಅಸ್ಮಭ್ಯಮಿದಂವಿತ್ಯನೇನ ''ಅಸ್ಮಭ್ಯಮಿಂದವಿಂದ್ರಯುರ್ಮಧ್ವಃ ಪರಸ್ವ ಧಾರಯಾ । ಪರ್ಜನ್ಯೋವೃಷ್ಟಿಮಾಂ ಇವೇ'' ತಿ ಶ್ರುತಿಂ ಗೃಹ್ಣಾತಿ । ಅಯಮರ್ಥಃ । ಹೇ ಇಂದೋ ಇಷ್ಟದಾನಶೀಲತ್ವಾದಿಂದುನಾಮಕ ಪವಮಾನ ಇಂದ್ರಯುಃ ಪರಮೈಶ್ವರ್ಯಸಂಪನ್ನಂ ಪರಮಾತ್ಮಾನಂ ಸದಾ ಯುನಕ್ತೀತಿ ಇಂದ್ರಯುಶಬ್ದವಾಚ್ಯಃ ಯೋ ಮಧ್ವಃ ಮಧ್ವಾಖ್ಯಃ ತೇಽವತಾರಃ । ತೇನ ವೃಷ್ಟಿಮಾನ್ ಪರ್ಜನ್ಯ ಇವ ಅಸ್ಮಭ್ಯಮ್ ಅಸ್ಮಾನುದ್ದಿಶ್ಯ ಧಾರಯಾ ಜ್ಞಾನಧಾರಯಾ ಸಹ ಪವಸ್ವ ಪವನಂ ಕುರು । ತ್ವಂ ಪವಸ್ವೇತಿ ವಾ । ಮಧ್ವರೂಪೇಣ ಜ್ಞಾನೋಪದೇಶಂ ಕುರ್ವನ್ ಅಸ್ಮಲ್ಲೋಕಂ ಪ್ರತ್ಯಾಗಚ್ಛೇತ್ಯರ್ಥಃ ॥ ೫೭೪ ॥

**ವಿವರಣೆ–** ಅಸ್ಮಭ್ಯಮಿಂದ್ರೋ ಎಂಬುದರಿಂದ ಅಸ್ಮಭ್ಯಮಿಂದವಿಂದ್ರಯುಃ ಮಧ್ವಃ ಪವಸ್ಯ ಧಾರಯಾ। ಪರ್ಜನ್ಯೋ ವೃಷ್ಟಿಮಾನ್ ಇವ ॥ ಎಂಬ ಶ್ರುತಿಯನ್ನು ಸ್ವೀಕರಿಸಿದ್ದಾರೆ.

ಅದರ ಅರ್ಥವು ಹೀಗಿದೆ -

ಹೇ ಇಂದೋಃ= ಇಷ್ಟದಾನಶೀಲನಾದ್ದರಿಂದ ಇಂದು ಎಂಬ ಹೆಸರುಳ್ಳ ಪವಮಾನನೇ, ಇಂದ್ರಯುಃ= ಪರಮೈಶ್ವರ್ಯಸಂಪನ್ನಪರಮಾತ್ಮನನ್ನು ಯಾವಾಗಲೂ ಹೊಂದಿಯೇ ಇರುವವನಾದ್ದರಿಂದ (ಕೂಡಿಯೇ ಇರುವವನಾದ್ದರಿಂದ) ಇಂದ್ರಯು ಶಬ್ದವಾಚ್ಯನಾದ ಯಾವ ಮಧ್ವಃ= ಮಧ್ವನೆಂಬ ನಿನ್ನ ಅವತಾರವಿದೆಯೋ, ಅವರಿಂದ ವೃಷ್ಟಿಮಾನ್ ಪರ್ಜನ್ಯಃ= ಇವ ಮಳೆಗರೆಯುವ ಮೇಘದಂತೆ, ಧಾರಯಾ= ಜ್ಞಾನಧಾರೆಯಿಂದ, ಅಸ್ಮಭ್ಯಂ = ನಮ್ಮನ್ನು ಕುರಿತು, ಪವಸ್ವ= ಪವಿತ್ರೀಕರಿಸು. ಧಾರಯಾ= ಜ್ಞಾನಧಾರೆಯಿಂದ ಪವಸ್ವ= ಪವಿತ್ರೀಕರಿಸು. ಮಧ್ವರೂಪದಿಂದ ಜ್ಞಾನೋಪದೇಶವನ್ನು ಮಾಡುವವನಾಗಿ ನಮ್ಮ ಲೋಕಕ್ಕೆ ಬರುವಂತಹನಾಗು ಎಂದರ್ಥ.

ಪವಮಾನರೂಪೀ ವಾಯುದೇವರನ್ನು ಕುರಿತು ಮಾಡುವ ಪ್ರಾರ್ಥನೆ ಇದು. ವಾಯುದೇವರು ಮಧ್ವರೂಪಿಗಳಾಗಿ ಬಂದು ಧಾರಾಕಾರವಾಗಿ ಮಳೆಯನ್ನು ಸುರಿಸುವ ಮೇಘದಂತೆ ಜ್ಞಾನಧಾರೆಯಿಂದ ನಮ್ಮನ್ನು ಪವಿತ್ರೀಕರಿಸಲಿ ಎಂಬ ಆಶಯ ಇಲ್ಲಿದೆ. ವಾಯುದೇವರು ಭಗವಂತನಿಗೆ ಅತ್ಯಂತ ಪ್ರೀತ್ಯಾಸ್ಪದರೆಂಬುದನ್ನು ಶ್ರುತಿಯು ಇಂದ್ರಯುಃ ಎಂಬುದರಿಂದ ತಿಳಿಸುತ್ತದೆ.. ಇದಿ ಪರಮೈಶ್ವರ್ಯೇ ಎಂಬ ಧಾತುವಿನಿಂದ ಪರಮೈಶ್ವರ್ಯಶಾಲಿಯಾದ ಭಗವಂತನ ಜೊತೆಗೇ ಇರುವವರು ವಾಯುದೇವರು. ಅಂಥಹವರು ಭೂಲೋಕಕ್ಕೆ ಮಧ್ವರೂಪದಿಂದ ಅವತರಿಸಿ ಬಂದು ನಮ್ಮನ್ನು ಅಜ್ಞಾನದ ಅಂಧಕೂಪದಿಂದ ಉದ್ಧರಿಸಿ ಸಮೀಚೀನ ಜ್ಞಾನವನ್ನು ಕೊಟ್ಟು ರಕ್ಷಿಸಲೆಂಬುದು ಋಷಿಗಳ ಆಶಯ. ಇದರಿಂದ ಅವತಾರತ್ರಯೋಪೇತವಾಯುದೇವರು ಮಧ್ವರೂಪಿಯಾಗಿ ಏಕವಿಂಶತಿಕುಭಾಷ್ಯದೂಷಕರಾಗಿ, ವೇದಾದಿ ಸಪ್ತವಿದ್ಯೆಗಳ ರಹಸ್ಯವನ್ನು ತಿಳಿಸಿ ಸಜ್ಜನರನ್ನು ಉದ್ಧರಿಸುವರೆಂಬುದು ವೇದೋಕ್ತವಾದ ಮಹಿಮೆ ಎಂದು ತಿಳಿದುಬರುತ್ತದೆ.. ಇಲ್ಲಿ ಅಪ್ರಾಮಾಣ್ಯಶಂಕೆಗೆ ಅವಕಾಶವೇ ಇಲ್ಲ.

**ಅಭೀಷ್ಟದಾನಶೀಲತ್ವಾತ್ ಇಂದೋ ಹೇ ಪವಮಾನ ತೇ ।**
**ಯೋಽವತಾರೋ ಮಹೈಶ್ವರ್ಯವಂತಂ ನಾರಾಯಣಂ ಸದಾ ।**
**ಯುನಕ್ತೀತೀಂದ್ರಯುರ್ನಾಮಾ ಮಧ್ವೋ ಮಧ್ವ ಇತೀರಿತಃ ॥ ೫೭೫ ॥**

**ಅರ್ಥ–** ಅಭೀಷ್ಟದಾನಶೀಲತ್ವಾತ್=ಭಕ್ತರ ಅಭಿಲಾಷೆಗಳನ್ನು ಪೂರೈಸುವ ಸ್ವಭಾವವುಳ್ಳವನಾದ್ದರಿಂದ, ಇಂದೋ= ಇಂದು ಎಂದು ಕರೆಯಲ್ಪಡುವ, ಹೇ ಪವಮಾನ= ಎಲೈ ಪವಮಾನನೇ, ತೇ= ನಿನ್ನ ಯಃ ಅವತಾರಃ= ಯಾವ ಅವತಾರವು, ಮಹೈಶ್ವರ್ಯವಂತಂ= ಮಹಾ ಐಶ್ವರ್ಯಶಾಲಿಯಾದ, ನಾರಾಯಣಂ= ನಾರಾಯಣನನ್ನು, ಸದಾ= ಯಾವಾಗಲೂ, ಯುನಕ್ತಿ ಇತಿ= ಹೊಂದಿಕೊಂಡೇ ಇರುವುದರಿಂದ, ಇಂದ್ರಯುರ್ನಾಮಾ = ಇಂದ್ರಯು ಎಂದು ಕರೆಯಲ್ಪಡುತ್ತದೆಯೋ, ಅದು, ಮಧ್ವಃ= ಮಧ್ವ ಎಂದರೆ, ಮಧ್ವ ಇತೀರಿತಃ= ಮಧ್ವ ಎಂಬ ಹೆಸರುಳ್ಳದ್ದಾಗಿದೆ.

**ಅನುವಾದ–** ಭಕ್ತಾಭೀಷ್ಟಪ್ರದನಾದ್ದರಿಂದ ಇಂದು ಎಂಬು ಹೆಸರುಳ್ಳ ಪವಮಾನನಿಗೆ ಐಶ್ವರ್ಯಪೂರ್ಣನಾದ ಶ್ರೀಹರಿಯೊಡನೆ ಸದಾ ಇರುವವನಾದ್ದರಿಂದ ಇಂದ್ರಯು ಎಂಬ ಹೆಸರೂ ಇದೆ. ಆ ಪವಮಾನನೇ ಆನಂದಕರವಾದ ಶಾಸ್ತ್ರಗಳನ್ನು ಬರೆದುದರಿಂದ ಮಧ್ವ ಎಂಬ ವೈದಿಕ ಹೆಸರುಳ್ಳವರು. ಅವರೇ ಮಧ್ವಾಚಾರ್ಯರೆಂದು ಕರೆಯಲ್ಪಡುವವರು.

**ವಿವರಣೆ–** ಅಸ್ಮಭ್ಯಂ ಎಂಬ ಋಕ್ಕಿನಲ್ಲಿರುವ ಪದಗಳ ಅರ್ಥವನ್ನು ಇಲ್ಲಿ ರಾಜರು ತಿಳಿಸುತ್ತಾರೆ. ಅವುಗಳಲ್ಲಿ ಇಂದು ಹಾಗೂ ಇಂದ್ರಯು ಪದಗಳು ಇಲ್ಲಿ ವ್ಯಾಖ್ಯಾತವಾಗಿವೆ.

ಮಧ್ವ ಎಂಬ ಪದವು ಮಧ್ವಾಚಾರ್ಯರನ್ನು ಹೇಳುತ್ತದೆ. ಮಂತ್ರಾಲಯಪ್ರಭುಗಳು ತಿಳಿಸುವಂತೆ ವಾಯುದೇವರು ಅಥವಾ ಶ್ರೀಮದನಾಂದತೀರ್ಥಭಗವತ್ಪಾದರು ಸರ್ವದಾ ಭಗವದಾಜ್ಞಯಾ ಭಗವತ್‌ಸನ್ನಿಧೌ. ಪೂಜ್ಯಾನಾಂ - ಎಂದರೆ ಶ್ರೀಹರಿಯೊಡನೆ ಸರ್ವದಾ ಇರುವವನು ಅಥವಾ ಇಂದ್ರಯುಶಬ್ದವಾಚ್ಯನು. ಆದರಂತೆ ಮಧ್ವರಾಯರ ಭಕ್ತಾಭೀಷ್ಟಪ್ರದತ್ವವೂ ಇಲ್ಲಿನ ಇಂದು ಪದದ ಅರ್ಥವಾಗಿದೆ.

**ತೇನ ರೂಪೇಣ ವಿಜ್ಞಾನಧಾರಯಾ ಸಹ ಸರ್ವದಾ ।**
**ಅಸ್ಮಭ್ಯಮಸ್ಮಾನುದ್ದಿಶ್ಯ ಪರ್ಜನ್ಯ ಇವ ವೃಷ್ಟಿಮಾನ್ ।**
**ಪವಸ್ವೇತಿ ಯತಃ ಸ್ಪಷ್ಟಂ ಅರ್ಥೋಽತ್ರಾಪಿ ಪ್ರತೀಯತೇ ॥ ೫೭೬ ॥**

**ಅರ್ಥ–** ತೇನ ರೂಪೇಣ = ಆ ಮಧ್ವರೂಪದಿಂದ, ವಿಜ್ಞಾನಧಾರಯಾ ಸಹ = ಸಮೀಚೀನವಾದ ಜ್ಞಾನೋಪದೇಶದ ಧಾರೆಯಿಂದ ಸಹಿತವಾಗಿ, ಸರ್ವದಾ = ಯಾವಾಗಲೂ, ಅಸ್ಮಭ್ಯಂ= ಅಸ್ಮಾನುದ್ದಿಶ್ಯ = ನಮಗಾಗಿ, ಪರ್ಜನ್ಯ ಇವ ವೃಷ್ಟಿಮಾನ್ = ಮಳೆಗರೆಯುವ ಮೇಘದಂತೆ, ಪವಸ್ವ ಇತಿ = ಪವಿತ್ರೀಕರಿಸು ಎಂಬುದಾಗಿ, ಯತಃ = ಯಾವಕಾರಣದಿಂದ, ಅರ್ಥಃ = ಅರ್ಥವು, ಅತ್ರಾಪಿ = ಇಲ್ಲಿಯೂ ಕೂಡ, ಸ್ಪಷ್ಟಂ = ಸ್ಪಷ್ಟವಾಗಿ, ಪ್ರತೀಯತೇ = ಕಂಡುಬರುತ್ತದೆಯೋ.

**ಅನುವಾದ–** ಈ ಋಕ್ಕಿನಲ್ಲಿ ಇಂದು, ಇಂದ್ರಯು ನಾಮಕರಾದ ಮಧ್ವರಿಗೆ ಮಾಡುವ ಪ್ರಾರ್ಥನೆ ಇದೆ. ಹೇ ಮಧ್ವರೇ, ತಾವು ಮಳೆಗೆರೆಯುವ ಮೇಘದಂತೆ ನಮ್ಮ ಮೇಲೆ ಜ್ಞಾನವೃಷ್ಟಿಯನ್ನು ಸುರಿಸಿ ನಮ್ಮನ್ನು ಪವಿತ್ರರನ್ನಾಗಿ ಮಾಡಿರಿ. ಈ ಅರ್ಥವು ಇಲ್ಲಿಯ ಮಂತ್ರದಲ್ಲಿ ಸ್ಪಷ್ಟವಾಗಿ ತೋರುತ್ತದೆ.

**ವಿವರಣೆ–** ಈ ಮಂತ್ರವನ್ನು ಮಧ್ವಪರವಾಗಿ ಅರ್ಥೈಸಲು ಕಷ್ಟಪಡಬೇಕಿಲ್ಲ ಎಂದು ರಾಜರು ಈ ಅರ್ಥವು ಇಲ್ಲಿ ಸ್ಪಷ್ಟವಾಗಿ ತೋರುತ್ತದೆ ಎಂದಿದ್ದಾರೆ. ಕಾರಣ ಮಧ್ವವೆಂಬ ಪದವನ್ನು ಶ್ರುತಿಯು ಕಂಠತಃ ಹೇಳಿದೆ. ಮಳೆಗರೆಯುವ ಮೋಡದಂತೆ ನಮ್ಮ ಮೇಲೆ ಜ್ಞಾನಧಾರೆಯನ್ನು ಸುರಿಸಿ ಪವಿತ್ರರನ್ನಾಗಿ ಮಾಡು ಎಂಬ ಪ್ರಾರ್ಥನೆ ಹಾಗೂ ಆದರಂತೆ ಮಧ್ವರು ಸರ್ವಮೂಲಗ್ರಂಥಗಳನ್ನು ರಚಿಸಿ ಸಜ್ಜನರುಗಳಿಗೆ ಜ್ಞಾನೋಪದೇಶ ಮಾಡಿರುವುದು ಸ್ಪಷ್ಟವೇ ಇದೆ.

**ಮಧ್ವಃ ಸತ್ವಂ ಪವಸ್ವೇತಿ ವಾಽಽಶಾಸ್ತೇ ಮುನಿಮಂಡಲೀ ।**
**ಇತ್ಯರ್ಥೋ ಯತಃ ಸ್ಪಷ್ಟಂ ದೃಶ್ಯತೇ ಪದಸಂಪದಾ ॥ ೫೭೭ ॥**

**ಅರ್ಥ–** ಸ ತ್ವಂ ಮಧ್ವಃ= ಅಂಥಾ ಮಧ್ವಾಚಾರ್ಯರಾದ ತಾವು, ಪವಸ್ವ ವಾ ಇತಿ = ಪವಿತ್ರೀಕರಿಸಿ ಎಂದೇ, ಮುನಿಮಂಡಲೀ = ಮಂತ್ರದ್ರಷ್ಟಾರರಾದ ಋಷಿಗಳ ಸಮೂಹವು,

ಆಶಾಸ್ತೇ = ಪ್ರಾರ್ಥಿಸುತ್ತದೆ, ಇತ್ಯರ್ಥಃ = ಎಂಬ ಅರ್ಥವು, ಯತಃ = ಯಾವಕಾರಣದಿಂದ, ಪದಸಂಪದಾ = ಮಂತ್ರದಲ್ಲಿನ ಪದಗಳ ಸಂಪತ್ತಿನಿಂದಲೇ (ವೈಭವದಿಂದ), ಸ್ಪಷ್ಟಂ ದೃಶ್ಯತೇ = ಸ್ಪಷ್ಟವಾಗಿ ಕಂಡುಬರುತ್ತದೆಯೋ, (ಆಕಾರಣದಿಂದ ನಾವು ಹೇಳಿದ ಈ ಅರ್ಥವು ಸಮಂಜಸವಾಗಿದೆ).

**ಅನುವಾದ– ಈ ಮಂತ್ರದಲ್ಲಿ ಪದಗಳ ವಿನ್ಯಾಸದಿಂದ, ಆ ಮಧ್ವರನ್ನು ಕುರಿತು ನಮ್ಮನ್ನು ಜ್ಞಾನಧಾರೆಯಿಂದ ಪವಿತ್ರಗೊಳಿಸಿರೆಂಬ ಋಷಿಗಳ ಪ್ರಾರ್ಥನೆಯು ಇಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ.**

**ಭಾವವಿಲಾಸಿನೀ – ಏತ ದೇವಾಭಿಪ್ರೇತ್ಯಾಹ – ಅಭೀಷ್ಟದಾನಶೀಲತ್ವಾದಿತ್ಯಾದಿನಾ ॥ ॥ ೫೭೭॥**

**ವಿವರಣೆ–** ಪವಮಾನಸೂಕ್ತದ ಅಸ್ಮಭ್ಯಂ ಎಂಬ ಮಂತ್ರವನ್ನು ವ್ಯಾಖ್ಯಾನಿಸುತ್ತಾ ರಾಜರು ಯಾವರೀತಿ ಈ ಸೂಕ್ತದ್ರಷ್ಟಾರರಾದ ಕಾಣ್ವಮೇಧಾತಿಥಿಗಳು ಮಧ್ವರನ್ನು ಜ್ಞಾನೋಪದೇಶಕ್ಕಾಗಿ ಪ್ರಾರ್ಥಿಸುವರೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ಪವಮಾನ ಪೂಯಮಾನಸೂಕ್ತಗಳಿಗೆ ಮಧ್ವಮಹಿಮಾಪ್ರತಿಪಾದಕತ್ವಕಥನವು ಅವರ ಋಜುತ್ವವನ್ನು ಎತ್ತಿತೋರಿಸುತ್ತದೆ. ಸಮಧ್ವ ಆಯುವತೇ, ಉನ್ಮಧ್ವ ಊರ್ಮಿ, ವಿದ್ವಾನ್ ಮಧ್ವಃ ಮಧ್ವೋ ಅಂಶುಃ ಸಿಂಹಂ ನಸಂತಂ ಮಧ್ವೋ, ಪ್ರಧಾರಾ ಮಧ್ವಃ ಅಸ್ಮಭ್ಯಮಿಂದವಿಂದ್ರಯುರ್ಮಧ್ವಃ ಎಂಬ ಏಳು ಋಕ್ಕುಗಳಂತೂ ಮಧ್ವಪದವನ್ನು ಕಂಠತಃ ಹೇಳುವವು. ಮಧ್ವಾಖ್ಯಂ ಮಂತ್ರಸಿದ್ಧಂ ಎಂಬ ವಾಯುಸ್ತುತಿಕಾರರೂ ಮಧ್ವ ಎಂಬ ಪದವು ವೇದಗಳೆಲ್ಲಾ ವರ್ಣಿತವಾಗಿ ಎಂದಿರುವರಷ್ಟೇ! ಪ್ರಸೇನಾನೀ ಇತ್ಯಾದಿ ಋಚೆಗಳಲ್ಲಿ ಮಧ್ವರ ಚರಿತ್ರೆಯನ್ನು ಬಣ್ಣಿಸಲಾಗಿದೆ. ಹಾಗೆ ನೋಡಿದರೆ ಸಕಲ ವೇದಗಳನ್ನೂ ವಾಯುಪರವಾಗಿಯೂ ಅರ್ಥೈಸಬಹುದೆಂದು ಮಂತ್ರಾಲಯಪ್ರಭುಗಳ ರಮಾವ್ಯತಿರಿಕ್ತಅನಂತ ವೇದಪ್ರತಿಪಾದ್ಯಮುಖ್ಯತಮ ಎಂಬ ವಾಕ್ಯದಿಂದ ತಿಳಿಯಬಹುದಾಗಿದೆ. ಅಂತಹ ಪ್ರತಿಪಾದನಕೌಶಲವನ್ನು ನಾವು ಭಾವೀಸಮೀರ ವಾದಿರಾಜಗುರುಗಳ ಗ್ರಂಥಗಳ ಮೂಲಕವೇ ತಿಳಿಯಲು ಶಕ್ಯ. ಅಂತಹ ಉಚ್ಚಮಟ್ಟದ ಜ್ಞಾನ ಋಜುದೇವತೆಗಳಲ್ಲಿ ಮಾತ್ರ ಇರುವಂತಹದು.

—o—



## ರಾಜಸುಭಾಷಿತ

**ಬೀಜಾವಾಪಃ ಪ್ರರೋಹಶ್ಚ ಪಲ್ಲವಃ ಪ್ರಸವಾನಿ ಚ ।**
**ಯತ್ಪ್ರಬಂಧಃ ಪ್ರಚಾರಶ್ಚ ವಿದ್ವನ್ಮಧ್ವಸ್ಯ ಶಕ್ತಿತಃ ॥**

ಯುಕ್ತಿಮಲ್ಲಿಕೆಯ ಬೀಜವನ್ನು ನೆಡುವುದು, ಆ ಬೀಜವು ಮೊಳಕೆ ಒಡೆಯುವುದು, ಚಿಗುರೊಡೆಯುವುದು, ಪುಷ್ಪಗಳನ್ನು ಕೊಡುವುದು, ಆ ಪುಷ್ಪವನ್ನು ಕಟ್ಟುವುದು ಮತ್ತು ಆ ಕಟ್ಟಿದ ಮಾಲೆಗಳನ್ನು ಎಲ್ಲ ಕಡೆಗಳಲ್ಲಿಯೂ ತೆಗೆದುಕೊಂಡು ಹೋಗುವುದು. ಇವೆಲ್ಲವೂ ವಿದ್ವಾಂಸರಾದ ಮಧ್ವರ ಶಕ್ತಿಯಿಂದಲೇ ಆಗಿದೆ.

